ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತ

# ಶ್ರೀಮನ್ಮಹಾಭಾರತ

## ತಾತ್ಪರ್ಯ ನಿರ್ಣಯ

### ಸಂಪುಟ-4



ಪ್ರಕಾಶಕರು:

ಶ್ರೀ ಗುರುರಾಜ ಅಸೋಸಿಯೇಷನ್ (ರಿ.)

ಬಸವನಗುಡಿ, ಬೆಂಗಳೂರು - 560 004

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಃ

# ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ

(ಇಪ್ಪತ್ತೈದನೆಯ ಅಧ್ಯಾಯದಿಂದ ಮೂವತ್ತೆರಡನೆಯ ಅಧ್ಯಾಯದವರೆಗೆ)

ಕನ್ನಡಾನುವಾದ

ಶ್ರೀ ಶ್ರೀ ೧೦೦೮ ಶ್ರೀ ಸುವಿದ್ಯೇಂದ್ರ ತೀರ್ಥರು

(೨೫,೨೬,೨೮,೩೧ ಅಧ್ಯಾಯಗಳು)

ಮ|| ಶಾ|| ಸಂ|| ಡಾ|| ಶ್ರೀ ವ್ಯಾಸನಕೆರೆ ಪ್ರಭಂಜನಾಚಾರ್ಯ

(೨೭,೨೯,೩೦,೩೨ ಅಧ್ಯಾಯಗಳು)

ಪ್ರಕಾಶಕರು

## ಶ್ರೀ ಗುರುರಾಜ ಅಸೋಸಿಯೇಷನ್

ಮಾಡೆಲ್ ಹೌಸ್ ಬೀದಿ, ಬಸವನಗುಡಿ, ಬೆಂಗಳೂರು.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಃ

**ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ**

(ಇಪ್ಪತ್ತೈದನೆಯ ಅಧ್ಯಾಯುದಿಂದ ಮೂವತ್ತೆರಡನೆಯ ಅಧ್ಯಾಯದವರೆಗೆ)

ಪ್ರಕಾಶಕರು **ಶ್ರೀ ಗುರುರಾಜ ಅಸೋಸಿಯೇಷನ್**, ಮಾಡೆಲ್ ಹೌಸ್ ಬೀದಿ,
ಬಸವನಗುಡಿ, ಬೆಂಗಳೂರು - ೫೬೦ ೦೦೪. ದೂರವಾಣಿ : ೨೬೬೨೫೬೫೮/೯



ಪ್ರತಿಗಳು : 1000

ಪುಟಗಳು : 16+784

ಪ್ರಕಟಿತ ವರ್ಷ : 2017

ಬೆಲೆ : ರೂ.೫೦೦/- (ಐದು ನೂರು ರೂಪಾಯಿ)

ಮುದ್ರಣ:
ವಾಗರ್ಥ, ನರಸಿಂಹರಾಜಾ ಕಾಲೋನಿ, ಬೆಂಗಳೂರು-560 019. vagartha@yahoo.com

H.H. SRI VISHVESHA TIRTHA SWAMIJI
SRI PEJAVARA ADHOKSHAJA MATHAA
Jagadguru Sri Madhwacharya Maha Samsthana
Udupi-576 101, Karnataka
Phone : 0820-2524198, 2526598



श्री श्री विश्वेशतीर्थश्रीपादाः
श्री पेजावराधोक्षज मठः
जगद्गुरु श्रीमध्वाचार्यमहासंस्थानम्
उडुपि - ५७६ १०१, कर्णाटक.

# ಆಶೀರ್ವಚನ

ಬೆಂಗಳೂರಿನ ಶ್ರೀ ಗುರುರಾಜ ಅಸೋಸಿಯೇಷನ್ ಸಂಸ್ಥೆಯ ಮೂಲಕ ಪ್ರತಿವರ್ಷ ದ್ರವ್ಯಯಜ್ಞ ಜ್ಞಾನಯಜ್ಞಗಳು ನಿರಂತರವಾಗಿ ನಡೆಯುತ್ತದೆ. ವೈಭವದ ಆರಾಧನಾ ಮಹೋತ್ಸವ, ದೈನಂದಿನ ಪೂಜಾ ಉತ್ಸವಗಳು ಸಂಭ್ರಮದಿಂದ ನಡೆಯುತ್ತಿದ್ದರೆ ಶಾಸ್ತ್ರಗ್ರಂಥಗಳ ಪ್ರಕಾಶನ ಕಾರ್ಯವೂ ಜೊತೆಗೆ ನಡೆಯುತ್ತಿದೆ. ಇದೀಗ ಶ್ರೀ ಸುವಿದ್ಯೇಂದ್ರ ತೀರ್ಥರು ಮತ್ತು ಪ್ರಭಂಜನಾಚಾರ್ಯರು ಮಾಡಿದ ಅನುವಾದದೊಂದಿಗೆ ಮಹಾಭಾರತ ತಾತ್ಪರ್ಯ ನಿರ್ಣಯದ ನಾಲ್ಕನೇ ಸಂಪುಟದ ಬಿಡುಗಡೆಯಾಗುತ್ತಿರುವುದನ್ನು, ತಿಳಿದು ನಮಗೆ ಅತ್ಯಂತ ಸಂತೋಷವಾಗಿದೆ. ಶ್ರೀ ಸುವಿದ್ಯೇಂದ್ರತೀರ್ಥರು ಶ್ರೀಸುಧಾ-ವ್ಯಾಸತ್ರಯಗಳನ್ನು ಪಾಠಹೇಳಬಲ್ಲವರು. ಪ್ರಮೇಯಗ್ರಂಥಗಳ ನಿಷ್ಕೃಷ್ಟ ಜ್ಞಾನವುಳ್ಳವರು. ವಿದ್ವಾನ್ ಪ್ರಭಂಜನಾಚಾರ್ಯರು ಸರ್ವಮೂಲಪಾಠ-ಪ್ರವಚನಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಜನತೆಯಲ್ಲಿ ಧಾರ್ಮಿಕ ಜಾಗೃತಿ ಉಂಟು ಮಾಡುತ್ತಿದ್ದಾರೆ. ಇವರೀರ್ವರ ಅನುವಾದವು ಸುಜನರಿಗೆ, ಜ್ಞಾನ-ಮೋದಗಳನ್ನು ನೀಡುವುದರಲ್ಲಿ ಸಂಶಯವಿಲ್ಲ.

ಮಹಾಭಾರತ ತಾತ್ಪರ್ಯನಿರ್ಣಯವು ಶ್ರೀಮದಾಚಾರ್ಯರು ರಚಿಸಿದ ಶ್ರೇಷ್ಠ ಸಂಶೋಧನಾ ಗ್ರಂಥವಾಗಿದೆ. ಮಹಾಭಾರತ, ರಾಮಾಯಣಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಇದೊಂದೆ ನಮಗೆ ಸಹಾಯಕವಾಗಿದೆ. ಈ ಗ್ರಂಥದಿಂದಲೇ ಮಧ್ವಸಿದ್ಧಾಂತದ ಪರಿಚಯವೂ ನಮಗೆ ಆಗುತ್ತದೆ. ಇಂತಹ ಮಹಾನ್ ಗ್ರಂಥದ ಪ್ರಕಾಶನ ಕಾರ್ಯಕ್ಕಾಗಿ ಶ್ರೀ ಗುರುರಾಜ ಅಸೋಸಿಯೇಷನ್ ಸಂಸ್ಥೆಯ ಎಲ್ಲ ಧರ್ಮದರ್ಶಿಗಳನ್ನು ನಾವು ಅಭಿನಂದಿಸುತ್ತೇವೆ.

ಇತಿ ನಾರಾಯಣ ಸ್ಮರಣೆಗಳು

|| ಶ್ರೀಮೂಲಗೋಪಾಲಕೃಷ್ಣೋ ವಿಜಯತೇ || || ಶ್ರೀಮೂಲಪಟ್ಟಾಭಿರಾಮೋ ವಿಜಯತೇ ||
|| ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯೋ ವಿಜಯತೇ ||
|| ಶ್ರೀಮಜ್ಜಯತೀರ್ಥಪೂಜ್ಯಚರಣೋ ವಿಜಯತೇ ||
|| ಶ್ರೀಮದ್‌ರಾಜೇಂದ್ರತೀರ್ಥ ಪೂಜ್ಯಚರಣೋ ವಿಜಯತೇ ||

## ಜಗದ್ಗುರು ಶ್ರೀಮನ್‌ಮಧ್ವಾಚಾರ್ಯ ಮೂಲಮಹಾಸಂಸ್ಥಾನಮ್

ಶ್ರೀಮದ್‌ರಾಜೇಂದ್ರತೀರ್ಥೀಯ ಪೂರ್ವಾದಿ ಮಠಃ
ಶ್ರೀವ್ಯಾಸರಾಜ ಮಠ (ಸೋಸಲೆ)

# ಅನುಗ್ರಹ ಸಂದೇಶ

ಮಹಾಭಾರತ ತಾತ್ಪರ್ಯನಿರ್ಣಯವು ಸಕಲ ಶಾಸ್ತ್ರಗಳ ಪ್ರಮೇಯಗಳನ್ನು ನಿರ್ಣಯಿಸುವ ಶ್ರೇಷ್ಠವಾದ ಕೃತಿಯಾಗಿದೆ - 'ಸಮಸ್ತ ಶಾಸ್ತ್ರಾರ್ಥ-ವಿನಿರ್ಣಯೋಯಮ್'. ಈ ಮಹೋನ್ನತ ಕೃತಿಯಲ್ಲಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ಸತ್ಸಿದ್ಧಾಂತದ ಎಲ್ಲ ಪ್ರಮೇಯಗಳನ್ನು ಮೊದಲ ಮೂರು ಅಧ್ಯಾಯಗಳಲ್ಲಿ ಸಂಗ್ರಹಿಸಿ ನಾಲ್ಕರಿಂದ ಒಂಬತ್ತನೆಯ ಅಧ್ಯಾಯದವರೆಗೆ ರಾಮಾಯಣದ ಕಥೆಯನ್ನು ಸಂಗ್ರಹಿಸಿದ್ದಾರೆ. ಹತ್ತನೆಯ ಅಧ್ಯಾಯದಲ್ಲಿ ವ್ಯಾಸಾವತಾರದ ಮಹಿಮೆಯ ವರ್ಣನೆ ಇದೆ. ಹನ್ನೊಂದರಿಂದ 32ನೇ ಅಧ್ಯಾಯದವರೆಗೆ ಮಹಾಭಾರತ ಹಾಗೂ ಹರಿವಂಶಗಳ ಕಥೆಯ ಹೃದ್ಯವಾದ ನಿರೂಪಣೆ ಇದೆ. ಕಥೆಯ ನಿರೂಪಣೆಯಲ್ಲಿ ತತ್ತ್ವದ ರಹಸ್ಯಗಳನ್ನು ಅಡಕಗೊಳಿಸಿರುವುದು ಈ ಕೃತಿಯ ಅಸಾಧಾರಣ ವೈಶಿಷ್ಟ್ಯವಾಗಿದೆ.

ತಾತ್ಪರ್ಯನಿರ್ಣಯದ ಶ್ಲೋಕಗಳ ಪ್ರತಿಪದಾರ್ಥದ ಜೊತೆಗೆ ಶ್ರೀವಾದಿರಾಜ ಗುರುಸಾರ್ವಭೌಮರ ವ್ಯಾಖ್ಯಾನದ ವಿಶೇಷಾಂಶಗಳ ಬಗ್ಗೆ ಬೆಳಕು ಚಲ್ಲುವ ಅನುವಾದವನ್ನು ನಾಡಿನ ಶ್ರೇಷ್ಠ ವಿದ್ವಾಂಸರಿಂದ ಮೂರು ಸಂಪುಟಗಳಲ್ಲಿ ಹೊರತಂದ ಹಿರಿಮೆ ಗುರುರಾಜ ಅಸೋಸಿಯೇಷನ್‌ನ ಪದಾಧಿಕಾರಿಗಳಿಗಿದೆ. ಇದೀಗ ಕೊನೆಯ ಸಂಪುಟವು ಸುಜನರ ಕೈಸೇರುತ್ತಿದೆ. ಈ ಸಂಪುಟದಲ್ಲಿ ಈರ್ವರು ತಮ್ಮ ಜ್ಞಾನ

ಧಾರೆಯನ್ನು ಹರಿಸಿದ್ದಾರೆ. ಶ್ರೀ ಶ್ರೀ ಸುವಿದ್ಯೇಂದ್ರತೀರ್ಥ ಶ್ರೀಪಾದರು ನ್ಯಾಯ ಸುಧಾದಿಗ್ರಂಥಗಳ ಪಾಠಪ್ರವಚನದಲ್ಲಿ ನಿರತರಾದ ಪ್ರಮೇಯ ಸ್ವರೂಪದ ಬಗ್ಗೆಯೂ ಆಳವಾದ ಜ್ಞಾನವುಳ್ಳ ಶ್ರೇಷ್ಠಯತಿಗಳು. ತಮ್ಮ ಅಸಾಧಾರಣವಾದ ಪ್ರವಚನ ಸಾಮರ್ಥ್ಯದಿಂದ ಶ್ರೀಮದಾಚಾರ್ಯರ ಸಿದ್ಧಾಂತವನ್ನು ಎಲ್ಲೆಡೆ ಪ್ರಸಾರ ಮಾಡುತ್ತಿರುವರು.

ವಿದ್ವಾನ್ ಪ್ರಭಂಜನಾಚಾರ್ಯರು ಗ್ರಂಥಪ್ರಕಾಶನ ಹಾಗೂ ಶಾಸ್ತ್ರಗ್ರಂಥಗಳ ಪಾಠಪ್ರವಚನಗಳ ಮೂಲಕ ನಾಡಿನಲ್ಲಿ ಖ್ಯಾತರಾದವರು. ಇವರೀರ್ವರ ಅನುವಾದವನ್ನು ಒಳಗೊಂಡ ನಾಲ್ಕನೆಯ ಸಂಪುಟವು ಸುಜನರಿಗೆಲ್ಲ ಅರಿವಿನ ಮಹಾಪೂರವನ್ನು ಹರಿಸುವುದರಲ್ಲಿ ಸಂದೇಹವಿಲ್ಲ.

ನಿರಂತರ ಪಾಠ-ಪ್ರವಚನ ಹಾಗು ಅನ್ನದಾನಗಳ ಜೊತೆಗೆ ಶಾಸ್ತ್ರಗ್ರಂಥಗಳ ಅನುವಾದವನ್ನು ಸಮರ್ಥ ವಿದ್ವಾಂಸರಿಂದ ಮಾಡಿಸಿ ಜಿಜ್ಞಾಸುಗಳಿಗೆ ನೀಡುತ್ತಿರುವ ಶ್ರೀ ಗುರುರಾಜ ಅಸೋಸಿಯೇಷನ್ ಧರ್ಮದರ್ಶಿಗಳನ್ನು ಈ ಸಂದರ್ಭದಲ್ಲಿ ನಾವು ವಿಶೇಷವಾಗಿ ಅಭಿನಂದಿಸುತ್ತೇವೆ. ಇಂತಹ ಶಾಸ್ತ್ರಸೇವೆ ಎಲ್ಲ ಮಠಗಳಲ್ಲೂ ಆದರ್ಶವಾಗಿ ನಡೆಯಲಿ ಎಂದು ನಮ್ಮ ಆರಾಧ್ಯಮೂರ್ತಿಯಾದ ಶ್ರೀಮೂಲಗೋಪಾಲಕೃಷ್ಣ ಹಾಗೂ ಶ್ರೀಮೂಲಪಟ್ಟಾಭಿರಾಮದೇವರನ್ನು ಪ್ರಾರ್ಥಿಸುತ್ತೇವೆ.

ಶ್ರೀ ಶ್ರೀವಿದ್ಯಾಶ್ರೀಶತೀರ್ಥ ಶ್ರೀಪಾದಂಗಳವರು
ಶ್ರೀವ್ಯಾಸರಾಜ ಮಠ (ಸೋಸಲೆ)

# ಮುನ್ನುಡಿ

ಶ್ರೀಮನ್ಮಧ್ವಾಚಾರ್ಯರು ವಿಶ್ವಗುರುಗಳು. ಹನುಮಂತನಾಗಿ ಶ್ರೀರಾಮ ದೇವರನ್ನು, ಭೀಮಸೇನನಾಗಿ ಶ್ರೀಕೃಷ್ಣದೇವರನ್ನು ಅನುಪಮವಾಗಿ ಆರಾಧಿಸಿದ ಶ್ರೀವಾಯುದೇವರೇ ಶ್ರೀಮಧ್ವಾಚಾರ್ಯರಾಗಿ ಶ್ರೀವೇದ ವ್ಯಾಸರ ಸೇವೆಯನ್ನು ಅದ್ವಿತೀಯವಾಗಿ ಮಾಡಿದ ಮಹನೀಯರು. ಅವರ ಜೀವನ ಅತ್ಯಂತ ರೋಚಕ. ಅವರ ಸ್ಮರಣೆ ಅತ್ಯಂತ ತಾರಕ; ಅವರ ಆಕೃತಿ ದ್ವಾತ್ರಿಂಶಲ್ಲಕ್ಷಣೋಪೇತವಾದ ಪರಮಸುಂದರಮೂರ್ತಿ. ಅವರ ಕೃತಿಗಳು ಲೋಕೋತ್ತರವಾದ ಮಹತ್ಕೃತಿಗಳು. ಅವರ ಶಿಷ್ಯವರ್ಗ ದೇವಗಣದವರು. ಅವರ ಪರಂಪರೆ ಜಗತ್ತು ಕಂಡ ಅತ್ಯಪೂರ್ವವಾದ ಪರಂಪರೆ. ಅವರ ಜೀವನದಂತೆ ಅವರ ಕೃತಿಗಳೂ ಅತ್ಯಂತ ಪಾವನ. ಪವನನ ಅವತಾರವಾದ ಅವರಿಗೆ ಸಂಬಂಧಿಸಿದೆಲ್ಲವೂ ಪಾವನವೇ. ಶ್ರುತಿಪ್ರಸ್ಥಾನದಿಂದ ಸ್ತೋತ್ರ ಪ್ರಸ್ಥಾನದವರೆಗೆ ಅವರ ಕೃತಿಗಳ ವ್ಯಾಪ್ತಿ ಹರಡಿದೆ. ಋಗ್ವೇದಕ್ಕೆ ಭಾಷ್ಯ ಬರೆದ ಏಕಮಾತ್ರ ಮತಾಚಾರ್ಯರು ಅವರು. ವೇದಗಳಿಗೆ ಶ್ಲೋಕರೂಪದ ವ್ಯಾಖ್ಯಾನ ಬರೆದ ಒಬ್ಬರೇ ಆಚಾರ್ಯರೂ ಅವರೇ. ಬ್ರಹ್ಮಸೂತ್ರ, ಭಗವದ್ಗೀತೆ ಹಾಗೂ ಉಪನಿಷತ್ತುಗಳ ಮೇಲೆ ಅವರು ರಚಿಸಿರುವ ಭಾಷ್ಯಗಳು ವೈದಿಕ ತತ್ತ್ವಶಾಸ್ತ್ರವನ್ನು ಅನಾವರಣಗೊಳಿಸಿದ ರೀತಿ ಅನ್ಯಾದೃಶವಾದುದು.

ಇತಿಹಾಸ ಪುರಾಣಗಳ ಬಗ್ಗೆ ಭಾಷ್ಯ ನೀಡಿದ ಅನುಪಮವಾದ ಹಿರಿಮೆ ಅವರದು. ಇತಿಹಾಸ ಪುರಾಣಗಳನ್ನು ಐದನೆಯ ವೇದ ಎಂಬುದಾಗಿ ಉಪನಿಷತ್ತುಗಳು ಸಾರಿವೆ. ಇತಿಹಾಸ ಪುರಾಣಗಳ ಬೆಳಕಿನಲ್ಲಿ ವೈದಿಕ ಸಾಹಿತ್ಯವನ್ನು ಅರ್ಥಮಾಡಿಕೊಳ್ಳಬೇಕು ಎಂಬ ಮಾತು ಸುಪ್ರಸಿದ್ಧ. ಆದರೆ, ಆ ಮಾತು ಮಾತಾಗಿಯೇ ಉಳಿದಿತ್ತು. ಅದನ್ನು ಕಾರ್ಯರೂಪಕ್ಕೆ ತಂದವರು ಆಚಾರ್ಯ ಶ್ರೀಮಧ್ವರು. ಅವರ ಮಹಾಭಾರತತಾತ್ಪರ್ಯನಿರ್ಣಯ ಸಮಗ್ರ ಇತಿಹಾಸ ಪುರಾಣಗಳ ಸಾರಸರ್ವಸ್ವವಾದರೆ, ಶ್ರೀಮದ್ಭಾಗವತ

ತಾತ್ಪರ್ಯನಿರ್ಣಯ ಪುರಾಣಪ್ರಪಂಚವನ್ನು ಬೆಳಗಿದ ಅನನ್ಯವೆನ್ನಿಸುವ ಕೃತಿ. ಯಮಕಭಾರತ ಮಹಾಭಾರತತಾತ್ಪರ್ಯನಿರ್ಣಯದ ಸಾರಸಂಗ್ರಹ ವಾಗಿದ್ದು, ಅಣುತಾತ್ಪರ್ಯನಿರ್ಣಯವೆನ್ನಿಸಿದೆ.

ಮಹಾಭಾರತತಾತ್ಪರ್ಯನಿರ್ಣಯವು ಅವರೇ ತಿಳಿಸಿರುವಂತೆ ಸಮಸ್ತ ಶಾಸ್ತ್ರಾರ್ಥನಿರ್ಣಯ; ಅದಕ್ಕೆ ಮಿಗಿಲಾಗಿ ಮತ್ತೊಂದು ನಿರ್ಣಯವೇ ಇಲ್ಲ ಎಂಬ ಮಾತು ಅವರ ಕೃತಿಯಲ್ಲಿಯೇ ಬಂದಿದೆ. ಆದರ ಅಧ್ಯಯನ ಸಮಸ್ತಶಾಸ್ತ್ರಾರ್ಥಪ್ರವೇಶಿಕೆ; ಅದನ್ನು ಜಿಜ್ಞಾಸುಗಳಿಗೆ ಮೊದಲ ಗ್ರಂಥವಾಗಿಯೇ ಅಧ್ಯಯನ ಮಾಡಿಸಬೇಕು ಎಂಬ ಮಾತು ಶ್ರೀನಾರಾಯಣ ಪಂಡಿತಾಚಾರ್ಯರ ಯೋಗದೀಪಿಕೆಯಲ್ಲಿ ಬಂದಿದೆ. ಅದನ್ನು ಅಧ್ಯಯನ ಮಾಡದವರಿಗೆ ಇತಿಹಾಸಪುರಾಣದ ಆಂತರ್ಯ ನಿಲುಕಲು ಸಾಧ್ಯವೇ ಇಲ್ಲ.

ಹೆಸರಿಗೆ ಮಹಾಭಾರತತಾತ್ಪರ್ಯನಿರ್ಣಯವಾದರೂ, ಅದರಲ್ಲಿ ರಾಮಾಯಣ, ಹರಿವಂಶ, ಶ್ರೀಮದ್ಭಾಗವತ, ವಿಷ್ಣುಪುರಾಣ ಮೊದಲಾದ ಸಕಲ ಪುರಾಣಗಳು, ಮತ್ತು ಅವುಗಳ ನಿರ್ಣಯ ಸೇರಿವೆ. ಮಹಾಭಾರತವು ಸಹ ಸಮಸ್ತ ಶಾಸ್ತ್ರಗಳ ಸಾರವೆಂದೇ ಪ್ರಸಿದ್ಧವಾಗಿರುವ ಕೃತಿ. ಅದಕ್ಕೆ ತಕ್ಕಂತೆಯೇ ಮಹಾಭಾರತತಾತ್ಪರ್ಯನಿರ್ಣಯವು ರಚಿತವಾಗಿದೆ. ಇಡೀ ವಾಙ್ಮಯ ಪ್ರಪಂಚದಲ್ಲಿ ಇತಿಹಾಸಪುರಾಣಗಳ ಬಗ್ಗೆ ಸಂಶೋಧನೆ, ವಿವರಣೆ, ನಿರ್ಣಯ ಮೊದಲಾದ ಸಕಲ ಬಗೆಯ ಒಳನೋಟ ಇದರಲ್ಲಿ ತುಂಬಿದೆ. ಅಧಿಕೃತವಾದ ಕಥಾಸರಣಿ, ಅದ್ವಿತೀಯವೆನ್ನಿಸುವ ಸಂಶೋಧನೆ, ಅತ್ಯಂತ ಪ್ರಾಮಾಣಿಕವಾದ ನಿರ್ಣಯ ಇವುಗಳನ್ನು ಒಳಗೊಂಡಿರುವ ಈ ಕೃತಿ ಒಟ್ಟು ೩೨ ಅಧ್ಯಾಯಗಳನ್ನು ಹೊಂದಿದೆ. ದ್ವಾತ್ರಿಂಶಲ್ಲಕ್ಷಣೋಪೇತವಾದ ಆಕೃತಿಯ ಶ್ರೀಮಧ್ವಾಚಾರ್ಯರ ಈ ಕೃತಿ ದ್ವಾತ್ರಿಂಶದಧ್ಯಾಯಾತ್ಮಕವಾಗಿದ್ದು, ಅವರಂತೆಯೇ ನಿರ್ಣಯಗಳನ್ನು ನೀಡುವ ಆಚಾರ್ಯ ಕೃತಿಯಾಗಿದೆ.

ಬ್ರಹ್ಮಸೂತ್ರ, ಭಾಷ್ಯಾದಿಗಳು ವೇದಾಧಿಕಾರಿಗಳಿಗೆ ಮಾತ್ರ ನಿಲುಕುವ ಕೃತಿಗಳಾದರೆ, ಮಹಾಭಾರತತಾತ್ಪರ್ಯನಿರ್ಣಯ ಸಕಲ ವರ್ಣದವರೂ ಸಹ ಶ್ರವಣ ಮಾಡಬಹುದಾದ ಪೌರುಷೇಯ ವೇದ, ವಿಷ್ಣುವೇದವೆನ್ನಿಸಿದೆ. ಶ್ರೀವೇದವ್ಯಾಸರ ಸಕಲ ಕೃತಿಗಳಿಗೂ ಈ ಮಾತು ಅನ್ವಯಿಸುವುದಾದರೂ, ವಿಶೇಷವಾಗಿ ಅವರ ಮಹಾಭಾರತಕ್ಕೂ ಇದು ಅನ್ವಯಿಸುವುದು. ಸಕಲವರ್ಣದವರಿಗೂ ಪಠ್ಯವೆನ್ನಿಸುವ ಕೃತಿಯೂ ಆಗಿ ಶ್ರೀವೇದವ್ಯಾಸರ ಮಹಾಭಾರತವಿದ್ದರೆ, ಅಂತಹುದೇ ಕೃತಿಯಾಗಿ ಶ್ರೀಮದಾಚಾರ್ಯರ ಶ್ರೀಮಹಾಭಾರತತಾತ್ಪರ್ಯನಿರ್ಣಯ ಕೃತಿ ಇದೆ.

ಇದರ ಮೊದಲ ಅಧ್ಯಾಯ ಸರ್ವಶಾಸ್ತ್ರಾರ್ಥಸಂಗ್ರಹವಾಗಿದ್ದು, ಅದೇ ಹೆಸರಿನ ಅಣುಭಾಷ್ಯದ ವಿಸ್ತೃತರೂಪದಂತಿದೆ; ಎರಡನೆಯ ಅಧ್ಯಾಯ ಮಹಾಭಾರತದ ಮಾತುಗಳಲ್ಲಿ ಸಮಸ್ತಶಾಸ್ತ್ರಾರ್ಥಸಂಕಲವಾಗಿದೆ; ಮೂರನೆಯ ಅಧ್ಯಾಯದಲ್ಲಿ ಸೃಷ್ಟಿಯವರ್ಣನೆ ಬಂದಿದ್ದು, ವರಾಹಾದಿ ಅವತಾರಗಳ ವರ್ಣನೆ ಹಾಗೂ ಶ್ರೀರಾಮಾವತಾರದ ಪೀಠಿಕೆ ಬಂದಿದೆ; ನಾಲ್ಕರಿಂದ ಒಂಭತ್ತನೆಯ ಅಧ್ಯಾಯದವರೆಗಿನ ಒಟ್ಟು ಆರು ಅಧ್ಯಾಯಗಳಲ್ಲಿ ರಾಮಾಯಣತಾತ್ಪರ್ಯನಿರ್ಣಯ ಕಂಡುಬರುವುದು; ಹತ್ತನೆಯ ಅಧ್ಯಾಯ ಶ್ರೀವೇದವ್ಯಾಸಾವತಾರ ನಿರೂಪಣೆಗೆ ಮೀಸಲು; ಹನ್ನೊಂದರಿಂದ ೩೨ರವರೆಗಿನ ಅಧ್ಯಾಯದಲ್ಲಿ ಮಹಾಭಾರತತಾತ್ಪರ್ಯನಿರ್ಣಯ ನಿರೂಪಿತ ವಾಗಿದೆ. ಪಾಂಡವರ ಕಥೆಯೊಂದಿಗೆ ಶ್ರೀಮದ್ಭಾಗವತಾದಿಗಳಲ್ಲಿ ಬಂದಿರುವ ಶ್ರೀಕೃಷ್ಣಕಥೆಯೂ ಇದರಲ್ಲಿ ನಿರೂಪಿತವಾಗಿರುವುದು ವಿಶೇಷ. ಬೇರಾವ ಕೃತಿಗಳಲ್ಲೂ ಸಹ ಶ್ರೀಕೃಷ್ಣಕಥೆ ಹಾಗೂ ಪಾಂಡವರ ಕಥೆಗಳು ಹೀಗೆ ಜೊತೆಜೊತೆಯಾಗಿ ನಿರೂಪಿತವಾಗಿಲ್ಲ. ಹೀಗೆ ಅದ್ಭುತಗಳ ಸರಮಾಲೆಯಾಗಿ ಮಹಾಭಾರತತಾತ್ಪರ್ಯನಿರ್ಣಯ ವಿಶ್ವಮಾನ್ಯವಾದ ಕೃತಿಯಾಗಿದೆ.

ಬೆಂಗಳೂರಿನ ಶ್ರೀ ಗುರುರಾಜ ಅಸೋಸಿಯೇಷನ್ ಅಖಂಡ ಜ್ಞಾನಕಾರ್ಯದ ಮೂಲಕ ತುಂಬಾ ಹೆಸರು ಮಾಡಿರುವ ಸಂಸ್ಥೆ. ನಿತ್ಯ ಪ್ರವಚನಕಾರ್ಯಕ್ರಮದೊಂದಿಗೆ, ವಾರ್ಷಿಕ ಗ್ರಂಥಪ್ರಕಾಶನ ಕಾರ್ಯವನ್ನೂ ಸಹ ಹಮ್ಮಿಕೊಂಡಿರುವುದು ಈ ಸಂಸ್ಥೆಯ ವಿಶೇಷ. ಪ್ರಸ್ತುತ ಮಹಾಭಾರತ ತಾತ್ಪರ್ಯನಿರ್ಣಯ ಕೃತಿಯನ್ನು ಅನುವಾದ ಸಮೇತವಾಗಿ ಪ್ರಕಾಶನ ಮಾಡುವ ಮಹತ್ಕಾರ್ಯವನ್ನು ಆ ಸಂಸ್ಥೆ ಕೈಗೆತ್ತಿಕೊಂಡಿದ್ದು, ಈ ಸಂಪುಟ ಆ ಮಾಲೆಯಲ್ಲಿ ಕೊನೆಯದಾಗಿದೆ. ಇಂತಹ ಉತ್ತಮ ಕಾರ್ಯವನ್ನು ಮಾಡಿರುವ ಈ ಸಂಸ್ಥೆಯ ಪದಾಧಿಕಾರಿಗಳು, ವಿಶೇಷವಾಗಿ ಅಭಿನಂದನೀಯರಾಗಿರುವರು.

ಹೆಸರಿಗೆ ತಕ್ಕಂತೆ ಶ್ರೀಗುರುರಾಜರಿಗೆ ಪ್ರಿಯವಾದ ಕಾರ್ಯಗಳನ್ನು ಸರಮಾಲೆಯಾಗಿ ಮಾಡುತ್ತಿರುವ ಈ ಸಂಸ್ಥೆ ಇತರ ಸಕಲ ಮಾಧ್ವಸಂಸ್ಥೆಗಳಿಗೂ ಸಹ ಆದರ್ಶಪ್ರಾಯವಾಗಿದ್ದು, ಇದರಿಂದ ಇಂತಹ ಇನ್ನಷ್ಟು ಕಾರ್ಯಗಳು ನಡೆಯಲಿ ಎಂದು ಶ್ರೀಹರಿವಾಯುಗುರುಗಳಲ್ಲಿ ಪ್ರಾರ್ಥಿಸುತ್ತೇನೆ.

ಶ್ರೀರಾಘವೇಂದ್ರಸ್ವಾಮಿಗಳ ಆರಾಧನೆ **ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯ**

೦೯.೦೮.೨೦೧೭

# ಪ್ರಕಾಶಕರ ನುಡಿ

ವೇದಾದಪಿ ಪರಮ್ ಚಕ್ರೆ, ಮಹಾಭಾರತಮುತ್ತಮಂ ಎಂಬುದು ಇತಿಹಾಸ ಗ್ರಂಥವಾದ ಮಹಾಭಾರತದ ಪ್ರಶಸ್ತಿ. ಈ ಮೇರುಕೃತಿಯು ಭಗವಾನ್ ವೇದವ್ಯಾಸರ ಪ್ರತಿಕೃತಿ. ಸಮಗ್ರವೇದ – ವೇದಾಂತ ಉಪನಿಷತ್ತು ಗಳು ಸಾರ ಸರ್ವಸ್ವವೇ ಶ್ರೀಮನ್ ಮಹಾಭಾರತ. ಈ ಮೇರುಕೃತಿಯಲ್ಲಿ ನಿರೂಪಿತವಾಗದಿರುವ ಯಾವ ವಿಷಯವು ಮತ್ತೆ ನಮಗೆಲ್ಲು ಕಾಣ ಸಿಗುವುದಿಲ್ಲ. ಒಂದು ರೀತಿಯಿಂದ ಭಾರತೀಯ ವೈದಿಕ ವಾಙ್ಮಯದ ಸಮಗ್ರ ಇತಿಹಾಸ ಇಲ್ಲಿ ಕಾಣಸಿಗುತ್ತದೆ.

ಶ್ರೀ ಭಗವಾನ್ ಬಾದರಾಯಣರ ಈ ಕೃತಿಗೆ ಅವರ ಆದೇಶಾನುಸಾರ ವಾಗಿ ಜಗದ್ಗುರು ಮಧ್ವಾಚಾರ್ಯರು ೫೦೦೦ ಸಾವಿರಕ್ಕೂ ಮಿಕ್ಕ ಶ್ಲೋಕಗಳಿಂದ ಕೂಡಿದ ತಾತ್ಪರ್ಯನಿರ್ಣಯ ಎಂಬ ಗ್ರಂಥವನ್ನು ರಚಿಸಿ ಮಹಾದುಪಕಾರ ಮಾಡಿರುತ್ತಾರೆ. ಸಂಸ್ಕೃತ ಸಾಹಿತ್ಯದಲ್ಲಿ ಅತಿ ಅಪರೂಪವಾದ ಗ್ರಂಥರತ್ನ ಇದಾಗಿದೆ. ಮಹಾಭಾರತ ತಾತ್ಪರ್ಯನಿರ್ಣಯ ಕೇವಲ ಮಹಾಭಾರತ ಕೃತಿಯ ವಿಮರ್ಶೆಯಲ್ಲದೇ ಅದು ಸಮಗ್ರ ವ್ಯಾಸಸಾಹಿತ್ಯದ ವಿಮರ್ಶೆ, ಸಂಗ್ರಹ, ನಿರ್ಣಯ ಇದಾಗಿದೆ. ಅಂತೆಯೇ ಇದನ್ನು 'ನಿರ್ಣಯಂ ಸರ್ವ ಶಾಸ್ತ್ರಾಣಾಂ' ಎಂದಿದ್ದಾರೆ.

ಇಂತಹ ಕೃತಿರತ್ನದ ಪ್ರಕಾಶನವನ್ನು ಮಂತ್ರಾಲಯ ಮಹಾಪ್ರಭುಗಳಾದ ಶ್ರೀ ಗುರುರಾಜರ ಅನುಗ್ರಹ ವಿಶೇಷದಿಂದ ನಮ್ಮ ಶ್ರೀ ಗುರುರಾಜಾ ಅಸೋಷಿಯೇಸನ್ (ರಿ.) ಇಲ್ಲಿನ ಆಡಳಿತ ಮಂಡಲಿಯವರು ಕೈಗೆತ್ತಿಕೊಂಡು ಈಗಾಗಲೇ ೮ ಅಧ್ಯಾಯಗಳ ಮೂರು ಸಂಪುಟಗಳನ್ನು ಕಳೆದ ಆರಾಧನೆಯ ಸುಸಂದರ್ಭದಲ್ಲಿ ಗುರುರಾಜರಿಗೆ ಅರ್ಪಿಸಿ ಕೃತಕೃತ್ಯರಾಗಿದ್ದಾರೆ. ಅಂತೆಯೇ ಈ ಬಾರಿಯ 346ನೇ ಆರಾಧನಾ ಅಂಗವಾಗಿ ಶ್ರೀ ಗುರು ರಾಜರಿಗೆ 25 ರಿಂದ 32ರ 8 ಅಧ್ಯಾಯಗಳ ಶ್ರೀಮನ್ ಮಹಾಭಾರತ ತಾತ್ಪರ್ಯನಿರ್ಣಯದ ನಾಲ್ಕನೆಯ ಸಂಪುಟವನ್ನು ಪ್ರಕಾಶನಗೊಳಿಸಲು ಸಂತೋಷವಾಗುತ್ತಿದೆ. ಇದು ಗುರುರಾಜರಿಗೆ ಅತ್ಯಂತ ಪ್ರಿಯವಾದ ಕಾರ್ಯವಾಗಿದೆ.

ಈ ನಾಲ್ಕನೆಯ ಸಂಪುಟಕ್ಕೆ ತಮ್ಮ ಅತ್ಯಮೂಲ್ಯವಾದ ಆಶೀರ್ವಚನವನ್ನು ನೀಡಿ ಅನುಗ್ರಹಿಸಿದ ಪರ್ಯಾಯ ಉಡುಪಿಯ ಶ್ರೀಕೃಷ್ಣನ ಪೂಜಾ, ಕೈಂಕರ್ಯ ನೇರವೇರಿಸಲು ೫ನೇ ಐತಿಹಾಸಿಕ ಸರ್ವಜ್ಞಪೀಠವನ್ನು ಅಲಂಕರಿಸಿರುವ ವಾಮನರೂಪಿ, ತ್ರಿವಿಕ್ರಮಪರಾಕ್ರಮಿಗಳಾದ, ಪರಮಪೂಜ್ಯ ಶ್ರೀ ಶ್ರೀ ೧೦೦೮ ಶ್ರೀ ಪೇಜಾವರ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರ ಅಡಿದಾವರೆಗಳಲ್ಲಿ ಸಂಸ್ಥೆಯ ಎಲ್ಲಾ ಆಡಳಿತ ಮಂಡಲಿಯ ಸದ್ಯಸರು ಶಿರಸಾಷ್ಟಾಂಗ ನಮಸ್ಕಾರಗಳನ್ನು ಸಲ್ಲಿಸುತ್ತೇವೆ.

ಈ ನಾಲ್ಕನೆಯ ಸಂಪುಟಕ್ಕೆ ತಮ್ಮ ಅತ್ಯಮೂಲ್ಯವಾದ ಆಶೀರ್ವಚನವನ್ನು ನೀಡಿ ಅನುಗ್ರಹಿಸಿದ ಶ್ರೀ ಸೋಸಲೆ ವ್ಯಾಸರಾಜಮಠಾಧೀಶರಾದ ಪರಮಪೂಜ್ಯ ಶ್ರೀ ಶ್ರೀ ೧೦೦೮ ಶ್ರೀ ವಿದ್ಯಾಶ್ರೀಶತೀರ್ಥ ಶ್ರೀಪಾದಂಗಳವರ ಪಾದಪದ್ಮಗಳಿಗೆ ಸಂಸ್ಥೆಯ ಎಲ್ಲಾ ಆಡಳಿತ ಮಂಡಲಿಯ ಸದ್ಯಸರು ಶಿರಸಾಷ್ಟಾಂಗ ನಮಸ್ಕಾರಗಳನ್ನು ಸಲ್ಲಿಸುತ್ತೇವೆ.

ಈ ಗ್ರಂಥ ಹೊರಬರಬೇಕಾದರೆ ಅದರ ಗುರುತರ ಜವಾಬ್ದಾರಿಯನ್ನು ಹೊತ್ತು ನಿಂತ ಪರಮಪೂಜ್ಯ ಶ್ರೀ ಶ್ರೀ ೧೦೦೮ ಶ್ರೀ ಸುವಿದ್ಯೇಂದ್ರ ತೀರ್ಥರ ಚರಣಕಮಲಗಳಿಗೆ ಸಾಷ್ಟಾಂಗ ನಮಸ್ಕಾರಗಳು.

ಈ ಸಂಪುಟದ ನಾಲ್ಕು ಅಧ್ಯಾಯಗಳಿಗೆ ಅರ್ಥ ತಾತ್ಪರ್ಯಗಳನ್ನು ಮಾಡಿಕೊಟ್ಟ ಮ.ಶಾ.ಸಂ. ಶ್ರೀ ಡಾ|| ವ್ಯಾಸನಕೆರೆ ಪ್ರಭಂಜನಾಚಾರ್ಯರಿಗೆ ನಮ್ಮ ನಮಸ್ಕಾರಗಳು.

ಅಂತೆಯೆ ಮುದ್ರಣಕಾರ್ಯದಲ್ಲಿ ನಮ್ಮೊಂದಿಗೆ ಸದಾ ಇದ್ದು ಸಕಾಲದಲ್ಲಿ ಮುದ್ರಿಸಿ ಕೊಟ್ಟ ವಾಗರ್ಥ ಮುದ್ರಣಾಲಯದ ಎಲ್ಲಾ ಬಾಂಧವರಿಗೂ ಸಂಸ್ಥೆಯು ಚಿರಋಣಿಯಾಗಿದೆ.

ಇತಿ
ಆಡಳಿತ ಮಂಡಳಿಯ ಪರವಾಗಿ
ಗೌರವ ಕಾರ್ಯದರ್ಶಿ

**ಈ ಗ್ರಂಥಕ್ಕೆ ಪ್ರತಿಪದಾರ್ಥ, ಅರ್ಥ, ತಾತ್ಪರ್ಯವನ್ನು ಕನ್ನಡ ಭಾಷೆಯಲ್ಲಿ ಒದಗಿಸಿದ ಮಹನೀಯರು**

★★★

ಶ್ರೀ ಶ್ರೀ ೧೦೦೮ ಶ್ರೀ ಸುವಿದ್ಯೇಂದ್ರ ತೀರ್ಥರು

(೨೫,೨೬,೨೮,೩೧ ಅಧ್ಯಾಯಗಳು)

ಮ|| ಶಾ|| ಸಂ|| ಡಾ|| ಶ್ರೀ ವ್ಯಾಸನಕೆರೆ ಪ್ರಭಂಜನಾಚಾರ್ಯ

(೨೭,೨೯,೩೦,೩೨ ಅಧ್ಯಾಯಗಳು)

# ವಿಷಯಾನುಕ್ರಮಣಿಕೆ

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಃ

# ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ

## ಅಧ್ಯಾಯ - 25

ಭೀಷ್ಮಪಾತಃ

**ಓಂ ॥ ತೇ ಸೇನೇ ಸಮರಾರಂಭೇ ಸಮೇತೇ ಸಾಗರೋಪಮೇ**
**ಭೀಮಭೀಷ್ಮಮುಖೇ ವೀಕ್ಷ್ಯ ಪ್ರಾಹ ವಾಸವಿರಚ್ಯುತಮ್ ॥ ೧ ॥**

**ಅರ್ಥ :- ಸಮರಾರಂಭೇ** = ಯುದ್ಧದ ಆರಂಭದ ಸಮಯದಲ್ಲಿ, **ಸಮೇತೇ** = ಸೇರಿದ, **ಭೀಮಭೀಷ್ಮಮುಖೇ** = ಭೀಮಭೀಷ್ಮರೇ ಪ್ರಮುಖರಾಗಿದ್ದ, **ಸಾಗರೋಪಮೇ** = ಸಮುದ್ರದಂತಹ, **ತೇ ಸೇನೇ** = ಆ ಎರಡು ಸೈನ್ಯಗಳನ್ನು, **ವೀಕ್ಷ್ಯ** = ನೋಡಿ, **ವಾಸವಿಃ** = ಅರ್ಜುನನು, **ಅಚ್ಯುತಂ** = ಶ್ರೀ ಕೃಷ್ಣನನ್ನು ಕುರಿತು, **ಪ್ರಾಹ** = ಹೇಳಿದನು.

**ತಾತ್ಪರ್ಯ :-** ಯುದ್ಧ ಪ್ರಾರಂಭವಾಗುವ ಸಮಯದಲ್ಲಿ ಭೀಮ ಭೀಷ್ಮರೇ ಪ್ರಮುಖರಾಗಿದ್ದ ಸಮುದ್ರದಂತಹ ಆ ಎರಡು ಸೇನೆಗಳನ್ನು ನೋಡಿ ಅರ್ಜುನ ಶ್ರೀಕೃಷ್ಣನಿಗೆ ಹೇಳಿದ.

**ಸೇನಯೋರುಭಯೋರ್ಮಧ್ಯೇ ರಥಂ**
**ಸ್ಥಾಪಯ ಮೇಽಚ್ಯುತ ।**
**ಇತ್ಯುಕ್ತಃ ಸ ತಥಾ ಚಕ್ರೇ**
**ಪಾರ್ಥಃ ಪಶ್ಯಂಶ್ಚ ಬಾಂಧವಾನ್ ॥ ೨ ॥**

**ಅರ್ಥ :- ಅಚ್ಯುತ** = ಶ್ರೀ ಕೃಷ್ಣನೇ!, **ಉಭಯೋಃ** = ಎರಡು, **ಸೇನಯೋಃ** = ಸೈನ್ಯಗಳ, **ಮಧ್ಯೇ** = ಮಧ್ಯದಲ್ಲಿ, **ಮೇ** = ನನ್ನ, **ರಥಂ** = ರಥವನ್ನು, **ಸ್ಥಾಪಯ** = ನಿಲ್ಲಿಸು, **ಇತಿ** = ಈ ರೀತಿಯಾಗಿ, **ಉಕ್ತಃ** = ಹೇಳಲ್ಪಟ್ಟ, **ಸಃ** = ಆ ಕೃಷ್ಣನು, **ತಥಾ** = ಹಾಗೆಯೇ, **ಚಕ್ರೇ** = ಮಾಡಿದನು, **ಚ** = ಮತ್ತು, **ಪಾರ್ಥಃ** = ಅರ್ಜುನನು, **ಬಾಂಧವಾನ್** = ಬಾಂಧವರನ್ನು, **ಅಪಶ್ಯತ್** = ನೋಡಿದನು.

**ತಾತ್ಪರ್ಯ** :- ಹೇ ಕೃಷ್ಣ! ಎರಡು ಸೈನ್ಯಗಳ ಮಧ್ಯದಲ್ಲಿ ನನ್ನ ರಥವನ್ನು ನಿಲ್ಲಿಸು. ಅರ್ಜುನ ಹೀಗೆ ಹೇಳಿದಾಗ ಕೃಷ್ಣ ಹಾಗೇ ಮಾಡಿದ. ಅರ್ಜುನ ಆ ಎರಡು ಸೈನ್ಯಗಳಲ್ಲಿದ್ದ ಬಾಂಧವರನ್ನು ನೋಡಿದ.

**ವಿಸಸರ್ಜ ಧನುಃ ಪಾಪಾಶಂಕೀ ತತ್ರಾऽಹ ಮಾಧವಃ ।**
**ಸ್ವಧರ್ಮೋ ದುಷ್ಟದಮನಂ ಧರ್ಮಜ್ಞಾನಾನುಪಾಲನಮ್ ।**
**ಕ್ಷತ್ರಿಯಸ್ಯ ತಮುತ್ಸೃಜ್ಯ ನಿಂದಿತೋ ಯಾತ್ಯಧೋ ಧ್ರುವಮ್ ॥ ೩ ॥**

**ಅರ್ಥ** :- **ಪಾಪಾಶಂಕೀ** = ಪಾಪವನ್ನು ಶಂಕಿಸಿದ ಅರ್ಜುನನು, **ಧನುಃ** = ಬಿಲ್ಲನ್ನು, **ವಿಸಸರ್ಜ** = ತ್ಯಜಿಸಿದನು, **ತತ್ರ** = ಆವಾಗ, **ಮಾಧವಃ** = ಶ್ರೀ ಕೃಷ್ಣನು, **ದುಷ್ಟದಮನಂ** = ದುಷ್ಟರನ್ನು ಸಂಹರಿಸುವುದು, **ಧರ್ಮಜ್ಞಾನಾನುಪಾಲನಂ** = ಧರ್ಮಜ್ಞಾನಗಳ ಸಂರಕ್ಷಣೆಯು, **ಕ್ಷತ್ರಿಯಸ್ಯ** = ಕ್ಷತ್ರಿಯನಿಗೆ, **ಸ್ವಧರ್ಮಃ** = ವಿಹಿತವಾದ ಧರ್ಮವು, **ತಂ** = ಆ ಸ್ವಧರ್ಮವನ್ನು, **ಉತ್ಸೃಜ್ಯ** = ಬಿಟ್ಟು, **ನಿಂದಿತಃ** = ನಿಂದಿತನಾಗಿ, **ಧ್ರುವಂ** = ನಿಶ್ಚಯವಾಗಿ, **ಅಧೋ ಯಾತಿ** = ಅಧೋಗತಿಯನ್ನು ಹೊಂದುತ್ತಾನೆ ಎಂದು, **ಆಹ** = ಹೇಳಿದನು.

**ತಾತ್ಪರ್ಯ** :- ಯುದ್ಧ ಮಾಡುವುದರಿಂದ ಪಾಪ ಉಂಟಾಗುವುದೆಂದು ಶಂಕಿಸಿ ಅರ್ಜುನ ಬಿಲ್ಲನ್ನು ತ್ಯಜಿಸಿದ. ಆವಾಗ ಕೃಷ್ಣ ಅರ್ಜುನನಿಗೆ ಹೇಳಿದ. ದುಷ್ಟರನ್ನು ಕೊಲ್ಲುವುದು ಮತ್ತು ದುಷ್ಟರನ್ನು ಕೊಲ್ಲುವುದರ ಮೂಲಕ ಧರ್ಮಜ್ಞಾನಗಳನ್ನು ಸಂರಕ್ಷಿಸುವುದು ಕ್ಷತ್ರಿಯನಾದವನಿಗೆ ಉಚಿತವಾದ ಧರ್ಮ. ಆ ಸ್ವಧರ್ಮವನ್ನು ತ್ಯಜಿಸಿದವನು. ನಿಂದಿತನಾಗಿ ಅಧೋಗತಿಯನ್ನು ಪಡೆಯುತ್ತಾನೆ.

**ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ ।**
**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥ ೪ ॥**

**ಅರ್ಥ** :- **ಯತಃ** = ಯಾರಿಂದ, **ಭೂತಾನಾಂ** = ಪ್ರಾಣಿಗಳ, **ಪ್ರವೃತ್ತಿಃ** = ಪ್ರವೃತ್ತಿಯಾಗುವುದೋ, **ಯೇನ** = ಯಾರಿಂದ, **ಇದಂ ಸರ್ವಂ** = ಈ ಜಗತ್ತೆಲ್ಲಾ, **ತತಂ** = ವ್ಯಾಪ್ತವಾಗಿದೆಯೋ, **ತಂ** = ಆ ಪರಮಾತ್ಮನನ್ನು, **ಸ್ವಕರ್ಮಣಾ** = ತಮಗೆ ವಿಹಿತವಾದ ಕರ್ಮದಿಂದ, **ಅಭ್ಯರ್ಚ್ಯ** =

ಆರಾಧಿಸಿ, **ಮಾನವಃ** = ಮನುಷ್ಯನು, **ಸಿದ್ಧಿಂ** = ಸಿದ್ಧಿಯನ್ನು, **ವಿಂದತಿ** = ಹೊಂದುತ್ತಾನೆ.

**ತಾತ್ಪರ್ಯ** :- ಯಾರಿಂದ ಸಕಲ ಪ್ರಾಣಿಗಳ ಪ್ರವೃತ್ತಿ ಉಂಟಾಗುವುದೋ ಯಾರಿಂದ ಎಲ್ಲಾ ಜಗತ್ತು ವ್ಯಾಪ್ತವಾಗಿದೆಯೋ ಅಂತಹ ಭಗವಂತನನ್ನು ತಮಗೆ ವಿಹಿತವಾದ ಕರ್ಮಾನುಷ್ಠಾನದಿಂದ ಆರಾಧಿಸಿ ಮನುಷ್ಯ ಸಿದ್ಧಿಯನ್ನು ಹೊಂದುತ್ತಾನೆ.

**ನಚ ಶೋಕಸ್ತ್ವಯಾ ಕಾರ್ಯೋ ಬಂಧೂನಾಂ ನಿಧನೇಕ್ಷಯಾ ।**
**ದೇಹಸ್ಯ ಸರ್ವಥಾ ನಾಶಾದನಾಶಾಚ್ಚೇತನಸ್ಯ ಚ ॥ ೫ ॥**

**ಅರ್ಥ** :- **ದೇಹಸ್ಯ** = ದೇಹಕ್ಕೆ, **ಸರ್ವಥಾ ನಾಶಾತ್** = ಸರ್ವಥಾ ನಾಶವಿರುವುದರಿಂದ, **ಚೇತನಸ್ಯ ಚ** = ಚೇತನನಿಗಾದರೂ, **ಅನಾಶಾತ್** = ನಾಶವಿಲ್ಲದೆ ಇರುವುದರಿಂದ, **ಬಂಧೂನಾಂ** = ಬಂಧುಗಳ, **ನಿಧನೇಕ್ಷಯಾ** = ನಿಧನದ ವಿಚಾರದಿಂದ, **ಶೋಕಃ** = ಶೋಕವು, **ತ್ವಯಾ** = ನಿನ್ನಿಂದ, **ನ ಚ ಕಾರ್ಯಃ** = ಮಾಡಲ್ಪಡಬಾರದು.

**ತಾತ್ಪರ್ಯ** :- ದೇಹಕ್ಕೆ ಸರ್ವಥಾ ನಾಶವಿದೆ. ಚೇತನನಿಗಾದರೂ ನಾಶವೇ ಇಲ್ಲ. ಆದ್ದರಿಂದ ಯುದ್ಧೇಚ್ಛೆ ಬಂಧುಗಳ ನಾಶಕ್ಕೆ ಕಾರಣ ವಾಗುವುದೆಂದು ನೀನು ಶೋಕಪಡಬೇಡ.

**ಸೃಷ್ಟಿಸ್ಥಿತ್ಯಪ್ಯಯಾಜ್ಞಾನಬಂಧಮೋಕ್ಷಪ್ರವೃತ್ತಯಃ ।**
**ಪ್ರಕಾಶನಿಯಮೌ ಚೈವ ಬ್ರಹ್ಮೇಶಾದಿಕ್ಷರಸ್ಯ ಚ ॥ ೬ ॥**

**ಅಕ್ಷರಪ್ರಕೃತೇಃ ಸಂತೋ ಮತ್ತ ಏವ ನಚಾನ್ಯತಃ ॥ ೭ ॥**

**ಅರ್ಥ** :- **ಸೃಷ್ಟಿಸ್ಥಿತ್ಯಪ್ಯಯಾಜ್ಞಾನ ಬಂಧಮೋಕ್ಷ ಪ್ರವೃತ್ತಯಃ** = ಸೃಷ್ಟಿ ಸ್ಥಿತಿ ಲಯ ಅಜ್ಞಾನ ಬಂಧ ಮೋಕ್ಷ ಮತ್ತು ಪ್ರವೃತ್ತಿಗಳು, **ಪ್ರಕಾಶನಿಯಮೌ ಚ** = ಪ್ರಕಾಶ ನಿಯಮಗಳೂ, **ಬ್ರಹ್ಮೇಶಾದಿಕ್ಷರಸ್ಯ ಚ** = ಬ್ರಹ್ಮರುದ್ರ ಮೊದಲಾದ ಕ್ಷರಪುರುಷರಿಗೂ, **ಅಕ್ಷರಪ್ರಕೃತೇಃ ಏವ** = ಅಕ್ಷರ ಪುರುಷಳಾದ ಲಕ್ಷ್ಮಿಗೂ, **ಮತ್ತ ಏವ** = ನನ್ನಿಂದಲೇನೇ, **ಸಂತಃ** = ಉಂಟಾಗುವುದು, **ನ ಚಾನ್ಯತಃ** = ಬೇರೆಯವರಿಂದಲ್ಲ.

**ತಾತ್ಪರ್ಯ** :- ಕ್ಷರ ಪುರುಷರಾದ ಬ್ರಹ್ಮ ರುದ್ರಾದಿಗಳಿಗೆ ಮತ್ತೂ ಅಕ್ಷರ ಪುರುಷಳಾದ ಲಕ್ಷ್ಮೀಗೂ ಸೃಷ್ಟಿ ಸ್ಥಿತಿ ಲಯ ಅಜ್ಞಾನ ಬಂಧ ಮೋಕ್ಷ ಪ್ರವೃತ್ತಿಯು ಪ್ರಕಾಶ ನಿಯಮಗಳು ಯಥಾಯೋಗ್ಯ ನನ್ನಿಂದಲೇ ಉಂಟಾಗುವವು. ಬೇರೆ ಯಾರಿಂದಲೂ ಆಗುವುದಿಲ್ಲ.

**ನ ಮೇ ಕುತಶ್ಚಿತ್ ಸರ್ಗಾದ್ಯಾಃ ಸ್ವಾತಂತ್ರ್ಯಾದ್ ಗುಣಪೂರ್ತಿತಃ ।**
**ಅತಃ ಸಮಾಧಿಕಾಭಾವಾನ್ಮಮ ಮದ್ವಶಮೇವ ಚ ॥ ೮ ॥**

**ಅರ್ಥ** :- **ಸ್ವಾತಂತ್ರ್ಯಾತ್** = ಸ್ವಾತಂತ್ರ್ಯವಿರುವುದರಿಂದ, **ಗುಣಪೂರ್ತಿತಶ್ಚ** = ಗುಣಪೂರ್ಣತ್ವವಿರುವುದರಿಂದಲೂ, **ಮೇ** = ನನಗೆ, **ಕುತಶ್ಚಿತ್** = ಯಾರಿಂದಲೂ, **ಸರ್ಗಾದ್ಯಾಃ** = ಸೃಷ್ಟ್ಯಾದಿಗಳು, ನ = ಇಲ್ಲ, **ಅತಃ** = ಆದ್ದರಿಂದ, **ಮೇ** = ನನಗೆ, **ಸಮಾಧಿಕಾಭಾವಾತ್** = ಸಮಾನರಾದವರು ಮತ್ತು ಅಧಿಕರಾದವರು ಇಲ್ಲವಾದ್ದರಿಂದ, **ಸರ್ವಂ** = ಎಲ್ಲವೂ, **ಮದ್ವಶಮೇವ** = ನನ್ನ ವಶವೇ (**ಭವತಿ** = ಆಗಿರುತ್ತದೆ).

**ತಾತ್ಪರ್ಯ** :- ಸ್ವಾತಂತ್ರ್ಯ ಮತ್ತು ಗುಣಪೂರ್ಣತ್ವವಿರುವುದರಿಂದ ನನಗೆ ಯಾರಿಂದಲೂ ಸೃಷ್ಟ್ಯಾದಿಗಳಿಲ್ಲ. ಆದುದರಿಂದ ನನಗೆ ಸಮಾನರಾಗಲೀ ಉತ್ತಮರಾಗಲೀ ಇಲ್ಲವಾದ್ದರಿಂದ ಎಲ್ಲವೂ ನನ್ನ ವಶದಲ್ಲಿಯೇ ಇರುತ್ತದೆ.

**ಜ್ಞಾತ್ವೈಷಾಂ ನಿಧನಾದ್ಯಂ ಚ ಜೀವಾದೇರಸ್ವತಂತ್ರತಾಮ್ ।**
**ಅಸ್ವಾತಂತ್ರ್ಯಾನ್ನಿವೃತ್ತೌ ಚ ಮಾಮನುಸ್ಮರ ಯುಧ್ಯ ಚ ॥ ೯ ॥**

**ಅರ್ಥ** :- **ಏಷಾಂ** = ಈ ಬಾಂಧವರ, **ನಿಧನಾದ್ಯಂ** = ಮರಣ ಮೊದಲಾದದ್ದು, **ಮದ್ವಶಂ** = ನನ್ನ ವಶದಲ್ಲಿರುವುದನ್ನಾಗಿ, **ಜ್ಞಾತ್ವಾ** = ತಿಳಿದು, **ಜೀವಾದೇಃ** = ಜೀವ ಜಡಗಳ, **ಅಸ್ವತಂತ್ರತಾಂ ಚ** = ಅಸ್ವಾತಂತ್ರ್ಯವನ್ನೂ, **ಜ್ಞಾತ್ವಾ** = ತಿಳಿದು, **ನಿವೃತ್ತೌ** = ಯುದ್ಧದಿಂದ ನಿವೃತ್ತಿ ಹೊಂದುವ ವಿಷಯದಲ್ಲೂ, **ಅಸ್ವಾತಂತ್ರ್ಯಾತ್** = ಸ್ವಾತಂತ್ರ್ಯವಿಲ್ಲದೆ ಇರುವುದರಿಂದ, **ಯುಧ್ಯ** = ಯುದ್ಧ ಮಾಡು, **ಚ** = ಮತ್ತು, **ಮಾಂ ಅನುಸ್ಮರ** = ನನ್ನನ್ನು ಸ್ಮರಿಸು.

**ತಾತ್ಪರ್ಯ** :- ಬಾಂಧವರ ಮರಣ ಮುಂತಾದವುಗಳು ನನ್ನ ವಶವೆಂದು ತಿಳಿದು ಜೀವ ಜಡಗಳ ಸ್ವಾತಂತ್ರ್ಯ ರಾಹಿತ್ಯವನ್ನೂ ತಿಳಿದು ಮತ್ತೂ

ಯುದ್ಧದಿಂದ ಹಿಂತಿರುಗುವ ವಿಷಯದಲ್ಲೂ ನಿನಗೆ ಸ್ವಾತಂತ್ರ್ಯವಿಲ್ಲದ ಕಾರಣ ಯುದ್ಧ ಮಾಡು ನನ್ನನ್ನು ಸ್ಮರಿಸು.

**ಯೇ ತು ಸರ್ವಾಣಿ ಕರ್ಮಾಣಿ ಮಯಿ ಸನ್ನ್ಯಸ್ಯ ಮತ್ಪರಾಃ ।**
**ಅನನ್ಯೇನೈವ ಯೋಗೇನ ಮಾಂ ಧ್ಯಾಯಂತ ಉಪಾಸತೇ ॥ ೧೦ ॥**

**ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।**
**ಭವಾಮಿ ನಚಿರಾತ್ ಪಾರ್ಥ ಮಯ್ಯಾವೇಶಿತಚೇತಸಾಮ್ ॥ ೧೧ ॥**

**ಅರ್ಥ :-** **ಪಾರ್ಥ** = ಅರ್ಜುನನೇ, **ಯೇ** = ಯಾರು, **ಸರ್ವಾಣಿ** = ಎಲ್ಲಾ, **ಕರ್ಮಾಣಿ** = ಕರ್ಮಗಳನ್ನು, **ಮಯಿ** = ನನ್ನಲ್ಲಿ, **ಸನ್ನ್ಯಸ್ಯ** = ಸಮರ್ಪಿಸಿ, **ಮತ್ಪರಾಃ** = ಮತ್ಪರರಾಗಿ, **ಅನನ್ಯೇನ ಯೋಗೇನ ಏವ** = ಅನನ್ಯವಾದ ಯೋಗದಿಂದಲೇನೇ, **ಮಾಂ** = ನನ್ನನ್ನು, **ಧ್ಯಾಯಂತಃ** = ಧ್ಯಾನಿಸುತ್ತಾ, **ಉಪಾಸತೇ** = ಉಪಾಸನೆ ಮಾಡುವರೋ, **ಮಯಿ** = ನನ್ನಲ್ಲಿ, **ಆವೇಶಿತಚೇತಸಾಂ** = ನೆಟ್ಟ ಮನಸ್ಸಿನವರಾದ, **ತೇಷಾಂ** = ಅವರಿಗೆ, **ಅಹಂ** = ನಾನು, **ನ ಚಿರಾತ್** = ಬೇಗನೇ, **ಮೃತ್ಯು ಸಂಸಾರ ಸಾಗರಾತ್** = ಮರಣದಿಂದ ಮತ್ತು ಸಂಸಾರ ಸಾಗರದಿಂದ, **ಸಮುದ್ಧರ್ತಾ** = ಉದ್ಧಾರಕನು, **ಭವಾಮಿ** = ಆಗುತ್ತೇನೆ.

**ತಾತ್ಪರ್ಯ :-** ಯಾರು ಎಲ್ಲಾ ಕರ್ಮಗಳನ್ನು ನನ್ನಲ್ಲಿ ಸಮರ್ಪಿಸಿ ನನ್ನನ್ನು ಬೇರೆ ದೇವತೆಗಳಿಗಿಂತ ವಿಶಿಷ್ಟನನ್ನಾಗಿ ಅನನ್ಯ ಯೋಗದಿಂದ ಧ್ಯಾನಿಸುತ್ತಾ ನನ್ನಲ್ಲೇ ಮನಸ್ಸಿಟ್ಟು ಉಪಾಸನೆ ಮಾಡುತ್ತಾರೋ ಅವರನ್ನು ನಾನು ಸಂಸಾರ ಸಾಗರದಿಂದ ಮತ್ತೂ ಮರಣದಿಂದ ಉದ್ಧರಿಸುತ್ತೇನೆ.

**ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ ।**
**ಮತ್‌ಸ್ಥಾನಿ ಸರ್ವಭೂತಾನಿ ನಚಾಹಂ ತೇಷ್ವವಸ್ಥಿತಃ ॥ ೧೨ ॥**

**ಅರ್ಥ :-** **ಅವ್ಯಕ್ತಮೂರ್ತಿನಾ** = ಅವ್ಯಕ್ತರೂಪನಾದ, **ಮಯಾ** = ನನ್ನಿಂದ, **ಇದಂ ಸರ್ವಂ ಜಗತ್** = ಈ ಎಲ್ಲಾ ಜಗತ್ತೂ, **ತತಂ** = ವ್ಯಾಪ್ತವಾಗಿದೆ, **ಸರ್ವಭೂತಾನಿ** = ಎಲ್ಲಾ ಚೇತನರು, **ಮತ್ಸ್ಥಾನಿ** = ನನ್ನನ್ನೇ ಆಶ್ರಯವಾಗಿ ಉಳ್ಳವರು, **ಅಹಂ ಚ** = ನಾನೂ, **ತೇಷು** = ಅವರಲ್ಲಿ, **ನ ಅವಸ್ಥಿತಃ** = ಅವಲಂಬಿಸಿಲ್ಲ.

**ತಾತ್ಪರ್ಯ** :- ಅವ್ಯಕ್ತರೂಪನಾದ ನನ್ನಿಂದ ಈ ಜಗತ್ತೆಲ್ಲವೂ ವ್ಯಾಪ್ತವಾಗಿದೆ. ಎಲ್ಲಾ ಚೇತನರು ನನ್ನನ್ನು ಆಶ್ರಯಿಸಿದ್ದಾರೆ.

**ಸುಪೂರ್ಣಸತ್ಸರ್ವಗುಣದೇಹೋಽಹಂ ಸರ್ವದಾ ಪ್ರಭುಃ ।**
**ಅಸ್ಪೃಷ್ಟಾಖಿಲದೋಷೈಕನಿತ್ಯಸತ್ತನುರವ್ಯಯಃ ॥ ೧೩ ॥**

**ಇತ್ಯುಕ್ತೋ ವಾಸವಿಃ ಪ್ರಾಹ ವ್ಯಾಪ್ತಂ ತೇ ದರ್ಶಯೇಶ ಮೇ ॥ ೧೪ ॥**

**ಅರ್ಥ** :- **ಸುಪೂರ್ಣ ಸತ್ಸರ್ವ ಗುಣದೇಹಃ** = ಪರಿಪೂರ್ಣವಾದ ಎಲ್ಲಾ ಸದ್ಗುಣಗಳೇ ದೇಹವಾಗಿವುಳ್ಳವನು, **ಅಹಂ** = ನಾನು, **ಸರ್ವದಾ** = ಯಾವಾಗಲೂ, **ಪ್ರಭುಃ** = ಸರ್ವಶಕ್ತ, **ಅಸ್ಪೃಷ್ಟಾಖಿಲ ದೋಷೈಕನಿತ್ಯಸತ್ತನುಃ** = ಎಲ್ಲಾ ದೋಷಗಳಿಂದ ದೂರವಾದ ನಿತ್ಯವಾದ ಉತ್ತಮ ಶರೀರ ಉಳ್ಳವನು, **ಅವ್ಯಯಃ** = ನಾಶರಹಿತನು, **ಇತಿ** = ಈ ರೀತಿಯಾಗಿ, **ಉಕ್ತಃ** = ಹೇಳಲ್ಪಟ್ಟ, **ವಾಸವಿಃ** = ಅರ್ಜುನನು, **ಈಶ** = ಸ್ವಾಮಿ!, **ಮೇ** = ನನಗೆ, **ತೇ** = ನಿನ್ನ, **ವ್ಯಾಪ್ತಿಂ** = ವ್ಯಾಪ್ತಿಯನ್ನು, **ದರ್ಶಯ** = ತೋರಿಸು ಎಂದು, **ಪ್ರಾಹ** = ಹೇಳಿದನು.

**ತಾತ್ಪರ್ಯ** :- ಸಂಪೂರ್ಣ ಸದ್ಗುಣಗಳೇ ದೇಹವಾಗಿ ಉಳ್ಳವನು. ನಾನು ಸರ್ವಶಕ್ತ. ಅಖಿಲ ದೋಷಗಳಿಂದ ದೂರವಾದ ಉತ್ತಮ ಶರೀರ ಉಳ್ಳವನು. ನಾಶರಹಿತ, ಹೀಗೆ ಕೃಷ್ಣ ಹೇಳಿದಾಗ ಅರ್ಜುನ ಹೇಳಿದ. ಪ್ರಭು, ನೀನು ನಿನ್ನ ವ್ಯಾಪ್ತಿಯನ್ನು ನನಗೆ ತೋರಿಸು.

**ಅಥ ದಿವ್ಯದೃಶಂ ತಸ್ಯ ದತ್ವಾ ವ್ಯಾಪ್ತಂ ನಿಜಂ ವಪುಃ ।**
**ದೇಶತಃ ಕಾಲತಶ್ಚೈವ ಪೂರ್ಣಂ ಸರ್ವಗುಣೈಃ ಸದಾ ।**
**ದರ್ಶಯಾಮಾಸ ಭಗವಾನ್ ಯಾವತ್ಯರ್ಜುನಯೋಗ್ಯತಾ ॥ ೧೫ ॥**

**ಅರ್ಥ** :- **ಅಥ** = ಆವಾಗ, **ಭಗವಾನ್** = ಭಗವಂತನಾದ ಶ್ರೀಕೃಷ್ಣನು, **ತಸ್ಯ** = ಆ ಅರ್ಜುನನಿಗೆ, **ದಿವ್ಯದೃಶಂ** = ದಿವ್ಯದೃಷ್ಟಿಯನ್ನು, **ದತ್ವಾ** = ಕೊಟ್ಟು, **ವ್ಯಾಪ್ತಂ** = ವ್ಯಾಪ್ತವಾದ, **ದೇಶತಃ** = ದೇಶದಿಂದ, **ಕಾಲತಶ್ಚೈವ** = ಕಾಲದಿಂದಲೂ, **ಸರ್ವಗುಣೈಃ** = ಎಲ್ಲಾ ಗುಣಗಳಿಂದ, **ಸದಾ** = ಯಾವಾಗಲೂ, **ಪೂರ್ಣಂ** = ಪೂರ್ಣವಾದ, **ನಿಜಂ ವಪುಃ** = ತನ್ನ

ಶರೀರವನ್ನು, **ಯಾವತೀ ಅರ್ಜುನ ಯೋಗ್ಯತಾ** = ಅರ್ಜುನನ ಯೋಗ್ಯತೆ ಎಷ್ಟೋ ಅಷ್ಟನ್ನು, **ದರ್ಶಯಾಮಾಸ** = ತೋರಿಸಿದ.

**ತಾತ್ಪರ್ಯ** :- ಆವಾಗ ಶ್ರೀಕೃಷ್ಣ ಅರ್ಜುನನಿಗೆ ದಿವ್ಯದೃಷ್ಟಿಯನ್ನು ಕೊಟ್ಟು ವ್ಯಾಪ್ತವಾದ ದೇಶಕಾಲದಿಂದಲೂ ಎಲ್ಲಾ ಗುಣಗಳಿಂದಲೂ ಸದಾ ಪೂರ್ಣವಾದ ತನ್ನ ಶರೀರವನ್ನು ಯೋಗ್ಯತಾನುಸಾರ ಅರ್ಜುನನಿಗೆ ತೋರಿಸಿದ.

**ತತ್ಪ್ರಾರ್ಥಿತಃ ಪುನಃ ಕೃಷ್ಣಸ್ತದ್ ರೂಪಂ ಲೋಕಮಾನತಃ ।**
**ಪೂರ್ವವದ್ ದರ್ಶಯಾಮಾಸ ಪುನಶ್ಚೈನಮಶಿಕ್ಷಯತ್ ॥ ೧೬ ॥**

**ಜ್ಞಾನಜ್ಞೇಯಪ್ರಕೃತ್ಯಾದಿ ಜ್ಞಾಪಯನ್ ಪುರುಷೋತ್ತಮಃ ।**
**ತೇನಾನುಶಿಷ್ಟಃ ಪಾರ್ಥಸ್ತು ಸಶರಂ ಧನುರಾದದೇ ॥ ೧೭ ॥**

**ಅರ್ಥ** :- **ತತ್ಪ್ರಾರ್ಥಿತಃ** = ಅರ್ಜುನನಿಂದ ಪ್ರಾರ್ಥಿತನಾದ, **ಪುರುಷೋತ್ತಮಃ** = ಪುರುಷೋತ್ತಮನಾದ, **ಕೃಷ್ಣಃ** = ಕೃಷ್ಣನು, **ತದ್ರೂಪಂ** = ಅವನ ರೂಪವನ್ನು, **ಲೋಕಮಾನತಃ** = ಲೋಕದೃಷ್ಟಿಗನುಸಾರವಾಗಿ, **ಪೂರ್ವವತ್** = ಮೊದಲಿನಂತೆಯೇ, **ದರ್ಶಯಾಮಾಸ** = ತೋರಿಸಿದನು, **ಪುನಃ** = ಮತ್ತೆ, **ಜ್ಞಾನಜ್ಞೇಯ ಪ್ರಕೃತ್ಯಾದಿ** = ಜ್ಞಾನ ಜ್ಞೇಯ ಸ್ವಭಾವ ಯೋಗ್ಯತಾದಿಗಳನ್ನು, **ಜ್ಞಾಪಯನ್** = ತಿಳಿಸುತ್ತಾ, **ಪುನಃ** = ಮತ್ತೆ, **ಏನಂ** = ಈ ಅರ್ಜುನನಿಗೆ, **ಅಶಿಕ್ಷಯತ್** = ಉಪದೇಶಿಸಿದ, **ತೇನ** = ಆ ಕೃಷ್ಣನಿಂದ, **ಅನುಶಿಷ್ಟಃ** = ಉಪದಿಷ್ಟನಾದ, **ಪಾರ್ಥಸ್ತು** = ಅರ್ಜುನನಾದರೂ, **ಸಶರಂ** = ಬಾಣಗಳಿಂದ ಕೂಡಿದ, **ಧನುಃ** = ಧನುಸ್ಸನ್ನು, **ಆದದೇ** = ಎತ್ತಿಕೊಂಡ.

**ತಾತ್ಪರ್ಯ** :- ಅರ್ಜುನನಿಂದ ಪ್ರಾರ್ಥಿತನಾದ ಪುರುಷೋತ್ತಮ ಕೃಷ್ಣ ಅವನ ರೂಪವನ್ನು ಲೋಕದೃಷ್ಟಿಗನುಸಾರವಾಗಿ ಮೊದಲಿನಂತೆಯೇ ಮಾಡಿ ತೋರಿಸಿದ. ಜ್ಞಾನ ಜ್ಞೇಯ ಸ್ವಭಾವಯೋಗ್ಯತಾದಿಗಳನ್ನು ತಿಳಿಸುತ್ತಾ ಮತ್ತೆ ಉಪದೇಶ ಮಾಡಿದ. ಕೃಷ್ಣನಿಂದ ಉಪದೇಶ ಹೊಂದಿದ ಅರ್ಜುನ ಬಿಲ್ಲು ಬಾಣಗಳನ್ನು ಹಿಡಿದುಕೊಂಡನು.

**ಅಥ ವ್ಯೂಢೇಷ್ವನೀಕೇಷು ನದನ್**
**ವಾಯುಸುತೋಽಭ್ಯಯಾತ್ ।**
**ಸಮಿತಿಂ ಧಾರ್ತರಾಷ್ಟ್ರಾಣಾಂ ತೇ ತಂ**
**ಸರ್ವೇ ನ್ಯವಾರಯನ್ ॥ ೧೮ ॥**

**ಅರ್ಥ** :- **ಅಥ** = ಅನಂತರ, **ಅನೀಕೇಷು** = ಸೈನ್ಯಗಳು, **ವ್ಯೂಢೇಷು** = ಯುದ್ಧಕ್ಕೆ ತೊಡಗುತ್ತಿರಲು, **ವಾಯುಸುತಃ** = ಭೀಮನು, **ನದನ್** = ಗರ್ಜಿಸುತ್ತಾ ಧಾರ್ತರಾಷ್ಟ್ರಾಣಾಂ ಕೌರವರ, **ಸಮಿತಿಂ** = ಸೈನ್ಯವನ್ನು ಕುರಿತು, **ಅಭ್ಯಯಾತ್** = ಹೋದನು, **ತೇ ಸರ್ವೇ** = ಅವರೆಲ್ಲರೂ, **ತಂ** = ಅವನನ್ನು, **ನ್ಯವಾರಯನ್** = ತಡೆದರು.

**ತಾತ್ಪರ್ಯ** :- ಅನಂತರ ಸೈನ್ಯಗಳು ಯುದ್ಧಕ್ಕೆ ತೊಡಗಿದಾಗ ಭೀಮ ಕೌರವರ ಸೈನ್ಯವನ್ನು ಆಕ್ರಮಿಸಿದ. ಅವರೆಲ್ಲರೂ ಭೀಮನನ್ನು ತಡೆದರು.

**ಸಸೃಜುಃ ಶರವೃಷ್ಟಿಂ ಚ ಭೀಮಸೇನಸ್ಯ ಮೂರ್ಧನಿ ।**
**ಕ್ಷಿಪ್ರಂ ನೈವ ಪ್ರಹರ್ತವ್ಯಂ ಜ್ಞಾತಿಷು ಪ್ರಹರತ್ಸ್ವಪಿ ।**
**ಇತ್ಯೇವಾಪ್ರಹರತ್ಯಸ್ಮಿನ್ ಶತ್ರುಭಿಃ ಶರವಿಕ್ಷತೇ ॥ ೧೯ ॥**

**ಅಮುಚನ್ ಧಾರ್ತರಾಷ್ಟ್ರೇಷು ಶಸ್ತ್ರವೃಷ್ಟಿಂ ದುರಾಸದಾಮ್ ।**
**ಸೌಭದ್ರಪ್ರಮುಖಾ ವೀರಾಃ ಸರ್ವೇ ಪಾಂಡುಸುತಾತ್ಮಜಾಃ ॥ ೨೦ ॥**

**ಅರ್ಥ** :- **ಭೀಮಸೇನಸ್ಯ** = ಭೀಮನ, **ಮೂರ್ಧನಿ** = ತಲೆಯ ಮೇಲೆ, **ಶರವೃಷ್ಟಿಂ ಸಸೃಜುಃ** = ಬಾಣಗಳ ಮಳೆಯನ್ನುಸುರಿಸಿದರು, **ಜ್ಞಾತಿಷು** = ಬಂಧುಗಳು, **ಪ್ರಹರತ್ಸ್ವಪಿ** = ಹೊಡೆಯುತ್ತಿದ್ದರೂ, **ಕ್ಷಿಪ್ರಂ** = ಕೂಡಲೇ, **ನೈವ ಪ್ರಹರ್ತವ್ಯಂ** = ಹೊಡೆಯಬಾರದು, **ಇತ್ಯೇವ** = ಈ ಕಾರಣದಿಂದಲೇ, **ಅಸ್ಮಿನ್** = ಈ ಭೀಮನು, **ಅಪ್ರಹರತಿ** = ಹೊಡೆಯದೆ ಇರುತ್ತಿರಲು, **ಶತ್ರುಭಿಃ ಶರವಿಕ್ಷತೇ** = ಶತ್ರುಗಳ ಬಾಣಗಳಿಂದ ಜರ್ಜರಿತನಾಗದೇ ಇರುತ್ತಿರಲು, **ಸೌಭದ್ರಪ್ರಮುಖಾಃ** = ಅಭಿಮನ್ಯು ಮೊದಲಾದ, **ವೀರಾಃ** = ವೀರರಾದ, **ಸರ್ವೇ** = ಎಲ್ಲಾ, **ಪಾಂಡುಸುತಾತ್ಮಜಾಃ** = ಪಾಂಡವರ ಮಕ್ಕಳು, **ಧಾರ್ತರಾಷ್ಟ್ರೇಷು** = ಕೌರವರ ಮೇಲೆ, **ದುರಾಸದಾಂ** = ಸಹಿಸಲಸಾಧ್ಯವಾದ, **ಶಸ್ತ್ರವೃಷ್ಟಿಂ** = ಬಾಣಗಳ ಮಳೆಯನ್ನು, **ಅಮುಚನ್** = ಸುರಿಸಿದರು.

**ತಾತ್ಪರ್ಯ** :- ಕೌರವರು ಭೀಮನ ತಲೆಯ ಮೇಲೆ ಬಾಣಗಳ ಮಳೆಯನ್ನು ಸುರಿಸಿದರು. ಆದರೆ ಭೀಮ ಬಂಧುಗಳು ಹೊಡೆದರೂ ಪ್ರತಿಯಾಗಿ ಹೊಡೆಯಬಾರದೆಂದು ಹೊಡೆಯದೆ ನಿಂತು ಶತ್ರುಗಳ ಬಾಣಗಳಿಂದ ಜರ್ಜರಿತನಾಗದೇ ಇದ್ದ. ಹೀಗೆ ಭೀಮ ಇದ್ದಾಗ ಅಭಿಮನ್ಯು ಮೊದಲಾದ ವೀರರಾದ ಪಾಂಡವರ ಮಕ್ಕಳೆಲ್ಲರೂ ಕೌರವರ ಮೇಲೆ ಸಹಿಸಲಸಾಧ್ಯವಾದ ಬಾಣಗಳ ಮಳೆಯನ್ನು ಸುರಿಸಿದರು.

**ಅಪೀಡಯಂಸ್ತಾನ್ ಶಸೌಘೈರ್ಧಾರ್ತರಾಷ್ಟ್ರಾಃ ಸಮಂತತಃ ।**
**ರರಕ್ಷ ತಾನ್ ವಾಯುಸುತೋ ವಿಸೃಜನ್ ಶರಸಂಚಯಾನ್ ॥ ೨೦ ॥**

**ತತ್ರ ಭೀಮಶರೈರ್ನುನ್ನಾ ಧಾರ್ತರಾಷ್ಟ್ರಾಃ ಸಮಂತತಃ ।**
**ಭಗ್ನಾಸ್ತಾನಥ ಗಾಂಗೇಯೋ ದಿವ್ಯಾಸ್ತ್ರವಿದಧಾರಯತ್ ॥ ೨೨ ॥**

**ಅಥ ದ್ವಂದ್ವಾನಿ ಯುದ್ಧಾನಿ ಭಭೂವುರ್ವಿಜಿಗೀಷತಾಮ್ ।**
**ದ್ರೋಣಪಾರ್ಷತಯೋಶ್ಚೈವ ಶೈನೇಯಕೃತವರ್ಮಣೋಃ ॥ ೨೩ ॥**

**ಅರ್ಥ** :- **ಧಾರ್ತರಾಷ್ಟ್ರಾಃ** = ಕೌರವರು, **ತಾನ್** = ಆ ಅಭಿಮನ್ಯು ಮೊದಲಾದವರನ್ನು, **ಶಸೌಘೈಃ** = ಬಾಣಗಳ ಸಮೂಹಗಳಿಂದ, **ಸಮಂತತಃ** = ಎಲ್ಲಾ ಕಡೆಯಿಂದ, **ಅಪೀಡಯನ್** = ಪೀಡಿಸಿದರು, **ವಾಯುಸುತಃ** = ಭೀಮನು, **ಶರಸಂಚಯಾನ್** = ಬಾಣಗಳ ಸಮೂಹಗಳನ್ನು, **ವಿಸೃಜನ್** = ಬಿಡುತ್ತಾ, **ತಾನ್** = ಅವರನ್ನು, **ರರಕ್ಷ** = ರಕ್ಷಿಸಿದನು, **ತತ್ರ** = ಆವಾಗ, **ಭೀಮಶರೈಃ** = ಭೀಮನ ಬಾಣಗಳಿಂದ, **ನುನ್ನಾಃ** = ಪೀಡಿತರಾದ, **ಧಾರ್ತರಾಷ್ಟ್ರಾಃ** = ಕೌರವರು, **ಸಮಂತತಃ** = ಎಲ್ಲರೂ, **ಭಗ್ನಾಃ** = ಓಡಿದರು, **ಅಥ** = ಅನಂತರ, **ದಿವ್ಯಾಸ್ತ್ರವಿತ್** = ದಿವ್ಯಾಸ್ತ್ರಜ್ಞಾನಿಯಾದ, **ಗಾಂಗೇಯಃ** = ಭೀಷ್ಮನು, **ತಾನ್** = ಆ ಕೌರವರನ್ನು, **ಅಧಾರಯತ್** = ನಿಲ್ಲಿಸಿದನು, **ಅಥ** = ಅನಂತರ, **ವಿಜಿಗೀಷತಾಂ** = ಜಯೇಚ್ಛುಗಳಾದ, **ದ್ರೋಣ ಪಾರ್ಷತಯೋಃ** = ದ್ರೋಣದ್ರುಪದರಿಗೆ, **ಶೈನೇಯಕೃತಮರ್ವಣೋಶ್ಚೈವ** = ಸಾತ್ಯಕಿ ಕೃತವರ್ಮರಿಗೂ, **ದ್ವಂದ್ವಾನಿ ಯುದ್ಧಾನಿ** = ದ್ವಂದ್ವ ಯುದ್ಧಗಳು, **ಬಭೂವುಃ** = ನಡೆದವು.

**ತಾತ್ಪರ್ಯ** :- ಕೌರವರು ಬಾಣ ಸಮೂಹಗಳಿಂದ ಅಭಿಮನ್ಯು ಮೊದಲಾದವರನ್ನು ಪೀಡಿಸಿದರು. ಭೀಮ ಕೌರವರ ಮೇಲೆ ಬಾಣ ಸಮೂಹಗಳನ್ನೆಸೆಯುತ್ತಾ ಅಭಿಮನ್ಯು ಮೊದಲಾದವರನ್ನು ಸಂರಕ್ಷಿಸಿದ. ಆವಾಗ ಭೀಮನ ಬಾಣಗಳ ಹೊಡೆತದಿಂದ ಕೌರವರು ಎಲ್ಲೆಡೆ ಪಲಾಯನ ಮಾಡಿದರು. ಸೋತುಹೋದ ಆ ಕೌರವರನ್ನು ದಿವ್ಯಾಸ್ತ್ರವೇತ್ತನಾದ ಭೀಷ್ಮ ನಿಲ್ಲಿಸಿದನು. ಅನಂತರ ಜಯೇಚ್ಛುಗಳಾದ ದ್ರೋಣ ದ್ರುಪದರಿಗೆ ಮತ್ತು ಸಾತ್ಯಕಿ ಕೃತವರ್ಮರಿಗೆ ದ್ವಂದ್ವ ಯುದ್ಧಗಳು ನಡೆದವು.

**ದುಃಶಾಸನೇನ ವೀರಸ್ಯ ಮಾದ್ರೇಯಸ್ಯ ಯವೀಯಸಃ ।**
**ನಕುಲಸ್ಯ ವಿಕರ್ಣಸ್ಯ ಕಾರ್ಷ್ಣೇಯೈರ್ದುರ್ಮುಖಾದಿನಾಮ್ ॥ ೨೪ ॥**

**ವೃತ್ತೇ ದ್ವಂದ್ವಮಹಾಯುದ್ಧೇ ತತ್ರ ಧರ್ಮಜಪಕ್ಷಗಾಃ ।**
**ಜಿತಾ ವಿನೈವ ಶೈನೇಯಂ ಸೋಽಜಯದ್ಧೃದಿಕಾತ್ಮಜಮ್ ॥ ೨೫ ॥**

**ಅಥ ಭೀಷ್ಮದ್ರೋಣಮುಖ್ಯೈರ್ಭಗದತ್ತಾದಿಭಿಸ್ತಥಾ ।**
**ವಿದ್ರಾವ್ಯಮಾಣಂ ಸ್ವಬಲಂ ಸ್ಥಾಪಯಾಮಾಸ ಮಾರುತಿಃ ॥ ೨೬ ॥**

**ದ್ರೋಣಂ ಚ ಭಗದತ್ತಂ ಚ ಕೃಪಂ ದುರ್ಯೋಧನಂ ತಥಾ ।**
**ಕೇವಲಂ ಬಾಹುವೀರ್ಯೇಣ ವ್ಯಜಯದ್ ಭೀಮವಿಕ್ರಮಃ ॥ ೨೭ ॥**

**ಅರ್ಥ** :- **ಯವೀಯಸಃ** = ಚಿಕ್ಕವನಾದ, **ವೀರಸ್ಯ** = ವೀರನಾದ, **ಮಾದ್ರೇಯಸ್ಯ** = ನಕುಲನಿಗೆ, **ದುಃಶಾಸನೇನ** = ದುಃಶಾಸನನ ಜೊತೆಗೆ, **ನಕುಲಸ್ಯ** = ನಕುಲನಿಗೆ, **ವಿಕರ್ಣಸ್ಯ** = ವಿಕರ್ಣನಿಗೆ, **ದುರ್ಮುಖಾದಿನಾಂ** = ದುರ್ಮುಖ ಮೊದಲಾದವರಿಗೆ, **ಕಾರ್ಷ್ಣೇಯೈಃ** = ದ್ರೌಪದೀಪುತ್ರರಿಂದ, **ದ್ವಂದ್ವ ಮಹಾಯುದ್ಧೇ** = ದ್ವಂದ್ವ ಮಹಾಯುದ್ಧವು, **ವೃತ್ತೇ** = ನಡೆಯುತ್ತಿರಲು, **ಧರ್ಮಜಪಕ್ಷಗಾಃ** = ಧರ್ಮರಾಜನ ಪಕ್ಷದವರು, **ಶೈನೇಯಂ ವಿನಾ** = ಸಾತ್ಯಕಿಯನ್ನು ಹೊರತುಪಡಿಸಿ ಉಳಿದವರೆಲ್ಲರೂ, **ಜಿತಾಃ** = ಪರಾಜಿತರಾದರು, **ಸಃ** = ಆ ಸಾತ್ಯಕಿಯು, **ಹೃದಿಕಾತ್ಮಜಂ** = ಕೃತವರ್ಮನನ್ನು, **ಅಜಯತ್** = ಗೆದ್ದನು, **ಅಥ** = ಅನಂತರ, **ಭೀಮ ವಿಕ್ರಮಃ** = ಭಯಂಕರವಾದ ಪರಾಕ್ರಮವುಳ್ಳ, **ಮಾರುತಿಃ** = ಭೀಮನು, **ಭೀಷ್ಮದ್ರೋಣ ಮುಖ್ಯೈಃ** = ಭೀಷ್ಮದ್ರೋಣಾದಿಗಳಿಂದ, **ತಥಾ** = ಹಾಗೆಯೇ,

**ಭಗದತ್ತಾದಿಭಿಃ** = ಭಗದತ್ತ ಮೊದಲಾದವರಿಂದ, **ವಿದ್ರಾವ್ಯಮಾಣಂ** = ಓಡಿಸಲ್ಪಡುತ್ತಿದ್ದ, **ಸ್ವಬಲಂ** = ತನ್ನ ಸೈನ್ಯವನ್ನು, **ಸ್ಥಾಪಯಾಮಾಸ** = ನಿಲ್ಲಿಸಿದನು, **ದ್ರೋಣಂ** = ದ್ರೋಣನನ್ನು, **ಭಗದತ್ತಂ ಚ** = ಭಗದತ್ತನನ್ನೂ, **ಕೃಪಂ ಚ** = ಕೃಪನನ್ನೂ, **ತಥಾ** = ಹಾಗೆಯೇ, **ದುರ್ಯೋಧನಂ** = ದುರ್ಯೋಧನನನ್ನು, **ಕೇವಲಂ** = ಕೇವಲ, **ಬಾಹುವೀರ್ಯೇಣ** = ಬಾಹುಬಲದಿಂದ, **ವ್ಯಜಯತ್** = ಜಯಿಸಿದ.

**ತಾತ್ಪರ್ಯ** :- ದುಃಶಾಸನ ಸಹದೇವರಿಗೆ, ನಕುಲ ವಿಕರ್ಣರಿಗೆ ಮತ್ತೂ ದ್ರೌಪದೀಪುತ್ರರೂ ದುರ್ಮುಖ ಮೊದಲಾದವರಿಗೂ ದ್ವಂದ್ವ ಯುದ್ಧ ನಡೆಯುತ್ತಿರಲು ಸಾತ್ಯಕಿಯನ್ನು ಹೊರತುಪಡಿಸಿ ಧರ್ಮರಾಜನ ಪಕ್ಷದವರೆಲ್ಲರೂ ಪರಾಜಿತರಾದರು. ಸಾತ್ಯಕಿ ಕೃತವರ್ಮನನ್ನು ಗೆದ್ದ. ಅದ್ಭುತ ಪರಾಕ್ರಮಿಯಾದ ಭೀಮ ತನ್ನ ಸೈನ್ಯ ದ್ರೋಣಾದಿಗಳಿಂದ ಹೋಗುತ್ತಿದ್ದದ್ದನ್ನು ಕಂಡು ತಡೆದನು. ತಡೆದು ಅವನೇ ದ್ರೋಣ ಭಗದತ್ತ ಕೃಪ ದುರ್ಯೋಧನರನ್ನು ಕೇವಲ ಬಾಹುಬಲದಿಂದ ಗೆದ್ದ.

**ಹತ್ವೋತ್ತರಂ ಮದ್ರರಾಜೋ ವ್ಯದ್ರಾವಯದನೀಕಿನೀಮ್ ॥ ೨೮ ॥**

**ಅಥ ಭೀಷ್ಮಮುದೀರ್ಣಾಸ್ತ್ರಂ ದ್ರಾವಯಂತಂ ವರೂಥಿನೀಮ್ ।**
**ಸಸೌಮದತ್ತಿಂ ಸೌಭದ್ರಸಹಾಯೋಽರ್ಜುನ ಆಸದತ್ ॥ ೨೯ ॥**

**ಸೌಭದ್ರಂ ತತ್ರ ವಿಕ್ರಾಂತಮತೀತ್ಯ ದ್ಯುಸರಿತ್ಸುತಃ ।**
**ದ್ರಾವಯಾಮಾಸ ಪಾಂಚಾಲಾನ್ ಪಶ್ಯತಃ ಸವ್ಯಸಾಚಿನಃ ॥ ೩೦ ॥**

**ಅರ್ಥ** :- **ಮದ್ರರಾಜಃ** = ಶಲ್ಯನು, **ಉತ್ತರಂ** = ಉತ್ತರ ಕುಮಾರನನ್ನು, **ಹತ್ವಾ** = ಕೊಂದು, **ಅನೀಕಿನೀಂ** = ಸೈನ್ಯವನ್ನು, **ವ್ಯದ್ರಾವಯತ್** = ಓಡಿಸಿದ, **ಅಥ** = ಅನಂತರ, **ಉದೀರ್ಣಾಸ್ತ್ರಂ** = ಉತ್ತಮ ಅಸ್ತ್ರಗಳುಳ್ಳ, **ವರೂಥಿನೀಂ** = ಸೈನ್ಯವನ್ನು, **ದ್ರಾವಯಂತಂ** = ಓಡಿಸುತ್ತಿದ್ದ, **ಸಸೌಮದತ್ತಿಂ** = ಸೌಮದತ್ತಿಯಿಂದ ಕೂಡಿದ, **ಭೀಷ್ಮಂ** = ಭೀಷ್ಮನನ್ನು, **ಸೌಭದ್ರ ಸಹಾಯಃ** = ಅಭಿಮನ್ಯು ಸಹಿತನಾದ, **ಅರ್ಜುನಃ** = ಅರ್ಜುನನು, **ಆಸದತ್** = ಎದುರಿಸಿದ, **ವಿಕ್ರಾಂತಂ** = ಪರಾಕ್ರಮಿಯಾದ, **ಸೌಭದ್ರಂ ಅತೀತ್ಯ** = ಅಭಿಮನ್ಯುವನ್ನು ಬಿಟ್ಟು, **ದ್ಯುಸರಿತ್ಸುತಃ** = ಭೀಷ್ಮನು, **ಸವ್ಯಸಾಚಿನಃ ಪಶ್ಯತಃ**

= ಅರ್ಜುನ ನೋಡುತ್ತಿದ್ದಂತೆಯೇ, **ಪಾಂಚಾಲಾನ್** = ಪಾಂಚಾಲರನ್ನು, **ದ್ರಾವಯಾಮಾಸ** = ಓಡಿಸಿದನು.

**ತಾತ್ಪರ್ಯ :-** ಶಲ್ಯರಾಜ ಉತ್ತರ ಕುಮಾರನನ್ನು ಕೊಂದು ಸೇನೆಯನ್ನು ಓಡಿಸಿದ. ಅನಂತರ ಅಸ್ತ್ರಗಳನ್ನು ಬಿಟ್ಟು ಸೇನೆಯನ್ನು ಓಡಿಸುತ್ತಿದ್ದ ಭೀಷ್ಮನನ್ನೂ ಸೌಮದತ್ತಿಯನ್ನೂ ಅಭಿಮನ್ಯು ಅರ್ಜುನರು ಎದುರಿಸಿದರು. ಪರಾಕ್ರಮಶಾಲಿಯಾದ ಅಭಿಮನ್ಯುವನ್ನು ಬಿಟ್ಟು ಭೀಷ್ಮನು ಅರ್ಜುನನ ಮುಂದೆಯೇ ಪಾಂಚಾಲರನ್ನು ಓಡಿಸಿದ.

**ತಸ್ಯ ವಿಕ್ರಮಮಾಲಕ್ಷ್ಯ ಪಾರ್ಥಂ ತದ್ಗೌರವಾನುಗಮ್ ।**
**ದೃಷ್ಟ್ವಾ ಯುಧಿಷ್ಠಿರೋ ರಾಜಾ ಕ್ರುದ್ಧಃ ಸೇನಾಮಪಾಹರತ್ ॥ ೩೧ ॥**

**ಅರ್ಥ :- ರಾಜಾ** = ರಾಜನಾದ, **ಯುಧಿಷ್ಠಿರಃ** = ಯುಧಿಷ್ಠಿರನು, **ತಸ್ಯ** = ಆ ಭೀಷ್ಮನ, **ವಿಕ್ರಮಂ** = ಪರಾಕ್ರಮವನ್ನು, **ಆಲಕ್ಷ್ಯ** = ನೋಡಿ, **ತದ್ಗೌರವಾನುಗಂ** = ಆ ಭೀಷ್ಮನ ಮೇಲಿದ್ದ ಗೌರವವನ್ನು ಅನುಸರಿಸುತ್ತಿದ್ದ, **ಪಾರ್ಥಂ** = ಅರ್ಜುನನನ್ನು, **ದೃಷ್ಟ್ವಾ** = ನೋಡಿ, **ಕ್ರುದ್ಧಃ** = ಕೋಪಗೊಂಡವನಾಗಿ, **ಸೇನಾಂ** = ಸೈನ್ಯವನ್ನು, **ಅಪಾಹರತ್** = ಹಿಂದೆ ಕರೆಸಿದ.

**ತಾತ್ಪರ್ಯ :-** ಧರ್ಮರಾಜ ಭೀಷ್ಮನ ಪರಾಕ್ರಮವನ್ನು ಮತ್ತು ಭೀಷ್ಮನ ಮೇಲೆ ಅರ್ಜುನನಿಗಿದ್ದ ಗೌರವವನ್ನು ನೋಡಿ ಕೋಪಗೊಂಡು ತನ್ನ ಸೈನ್ಯವನ್ನು ಹಿಂದೆ ಕರೆಸಿದ.

**ರಾತ್ರೌ ಯುಧಿಷ್ಠಿರಶ್ಚಿಂತಾಮಾಪ್ಯ ಪಾರ್ಥಂ ವ್ಯಗರ್ಹಯತ್ ।**
**ಸ ಕೃಷ್ಣಾದ್ಯೈಃ ಸಾಂತ್ವಿತಶ್ಚ ಪುನರ್ಯುದ್ಧಾಯ ನಿರ್ಯಯೌ ॥ ೩೨ ॥**

**ಅರ್ಥ :- ರಾತ್ರೌ** = ರಾತ್ರಿಯಲ್ಲಿ, **ಯುಧಿಷ್ಠಿರಃ** = ಯುಧಿಷ್ಠಿರನು, **ಚಿಂತಾಮಾಪ್ಯ** = ಚಿಂತೆಯನ್ನು ಹೊಂದಿ, **ಪಾರ್ಥಂ** = ಅರ್ಜುನನನ್ನು, **ವ್ಯಗರ್ಹಯತ್** = ತೆಗಳಿದ, **ಕೃಷ್ಣಾದ್ಯೈಃ** = ಕೃಷ್ಣ ಮೊದಲಾದವರಿಂದ, **ಸಾಂತ್ವಿತಃ** = ಸಾಂತ್ವನ ಮಾಡಿಸಿಕೊಂಡ, **ಸಃ** = ಆ ಅರ್ಜುನನು, **ಪುನಃ** = ಮತ್ತೆ, **ಯುದ್ಧಾಯ** = ಯುದ್ಧಕ್ಕೆ, **ನಿರ್ಯಯೌ** = ಹೊರಟನು.

**ತಾತ್ಪರ್ಯ** :- ರಾತ್ರಿ ಯುಧಿಷ್ಠಿರ ಅರ್ಜುನನನ್ನು ನಿಂದಿಸಿದ. ಕೃಷ್ಣ ಮೊದಲಾದವರು ಸಾಂತ್ವನ ಮಾಡಿದರು. ನಂತರ ಮತ್ತೆ ಯುದ್ಧಕ್ಕೆ ಹೊರಟನು.

**ಏವಂ ಭೀಷ್ಮೋ ದಶಾಹಾನಿ ಸೇನಾಪತ್ಯಂ ಚಕಾರ ಹ ।**
**ಕೃತ್ವಾऽಪಿ ಪಾಂಡವೈರ್ಯುದ್ಧಂ ತತ್ ಕರ್ತುಮಕೃತೋಪಮಮ್ ॥ ೩೩ ॥**

**ಕರ್ಣೋऽರ್ಧರಥ ಇತ್ಯುಕ್ತ್ವಾ ತಾವದ್ ಯುದ್ಧಾತ್ ಪ್ರಯಾಪಿತಃ ।**
**ಯಾವತ್ ತ್ವಂ ಯೋತ್ಸ್ಯಸೇ ತಾವನ್ನ ಯೋತ್ಸ್ಯಾಮೀತಿ ನಿರ್ಗತೇ ॥೩೪॥**

**ಕರ್ಣೇऽಯುತರಥಾನಾಂ ಸ ನಿತ್ಯಶೋ ವಧಮಾಹವೇ ।**
**ಪ್ರತಿಜಜ್ಞೇऽಕರೋತ್ ತಚ್ಚ ಪುನಶ್ಚಾಸ್ತ್ರವಿದಾಂ ವರಃ ॥ ೩೫ ॥**

**ಅರ್ಥ** :- **ಏವಂ** = ಈ ರೀತಿಯಾಗಿ, **ಅಸ್ತ್ರವಿದಾಂವರಃ** = ಅಸ್ತ್ರಜ್ಞರಲ್ಲಿ ಶ್ರೇಷ್ಠನಾದ, **ಭೀಷ್ಮಃ** = ಭೀಷ್ಮನು, **ದಶಾಹಾನಿ** = ಹತ್ತು ದಿನಗಳ ಕಾಲ, **ಸೈನಾಪತ್ಯಂ** = ಸೇನಾಧಿಪತ್ಯವನ್ನು, **ಚಕಾರ ಹ** = ಮಾಡಿದನಷ್ಟೇ, **ಪಾಂಡವೈಃ** = ಪಾಂಡವರೊಡನೆ, **ಯುದ್ಧಂ** = ಯುದ್ಧವನ್ನು, **ಕೃತ್ವಾ** = ಮಾಡಿ, **ತತ್** = ಆ ಯುದ್ಧವನ್ನು, **ಅಕೃತೋಪಮಂ ಕರ್ತುಂ** = ಅನುಪಮವನ್ನಾಗಿ ಮಾಡಲು, **ಕರ್ಣಃ** = ಕರ್ಣನು, **ಅರ್ಧರಥಃ** = ಅರ್ಧರಥನು, **ಇತಿ** = ಎಂದು, **ಉಕ್ತ್ವಾ** = ಹೇಳಿ, **ಯುದ್ಧಾತ್** = ಯುದ್ಧದಿಂದ, **ಪ್ರಯಾಪಿತಸ್ತಾವತ್** = ಹೊರ ಹಾಕಲ್ಪಟ್ಟನಷ್ಟೆ, **ಯಾವತ್** = ಎಷ್ಟು ಸಮಯ, **ತ್ವಂ** = ನೀನು, **ಯೋತ್ಸ್ಯಸೇ** = ಯುದ್ಧ ಮಾಡುತ್ತೀಯೋ, **ತಾವತ್** = ಅಷ್ಟು ಕಾಲ, **ನ ಯೋತ್ಸ್ಯಾಮಿ** = ಯುದ್ಧ ಮಾಡುವುದಿಲ್ಲ, **ಇತಿ** = ಎಂದು, **ಕರ್ಣೇ** = ಕರ್ಣನು, **ನಿರ್ಗತೇ** = ಹೋಗುತ್ತಿರಲು, **ಸಃ** = ಆ ಭೀಷ್ಮನು, **ನಿತ್ಯಶಃ** = ಪ್ರತಿದಿನವೂ, **ಆಹವೇ** = ಯುದ್ಧದಲ್ಲಿ, **ಅಯುತರಥಾನಾಂ** = ಹತ್ತು ಸಾವಿರ ರಥಿಕರ, **ವಧಂ** = ವಧೆಯನ್ನು, **ಪ್ರತಿಜಜ್ಞೇ** = ಪ್ರತಿಜ್ಞೆಗೈದನು, **ಪುನಃ** = ಮತ್ತು, **ತಚ್ಚ** = ವಧೆಯನ್ನು, **ಅಕರೋತ್** = ಮಾಡಿದನು.

**ತಾತ್ಪರ್ಯ** :- ಈ ರೀತಿ ಭೀಷ್ಮ ಹತ್ತು ದಿನ ಸೇನಾಧಿಪತಿಯಾಗಿದ್ದ. ಪಾಂಡವರೊಡನೆ ಯುದ್ಧ ಮಾಡಿ ಆ ಯುದ್ಧವನ್ನು ಅನುಪಮವನ್ನಾಗಿ ಮಾಡಲು ಕರ್ಣನನ್ನು ಅರ್ಧರಥನೆಂದು ಕರೆದು ಯುದ್ಧಭೂಮಿಯಿಂದ ಹೊರಗೆ ಓಡಿಸಿದ. ಕರ್ಣನು 'ನೀನು ಯುದ್ಧ ಮಾಡುವಷ್ಟು ಕಾಲ ನಾನು

ಯುದ್ಧ ಮಾಡುವುದಿಲ್ಲ' ಎಂದು ಹೊರಟು ಹೋದಾಗ ಭೀಷ್ಮ ನಾನು ಪ್ರತಿದಿನ ಹತ್ತು ಸಾವಿರ ರಥಿಕರನ್ನು ಕೊಲ್ಲುವೆ ಎಂದು ಪ್ರತಿಜ್ಞೆ ಮಾಡಿದ. ಆ ಪ್ರತಿಜ್ಞೆಯನ್ನು ನಡೆಸಿದನು.

**ಸುಸಮರ್ಥಾವಪಿ ವಧೇ ತಸ್ಯ ಭೀಮಧನಂಜಯೌ ।**
**ಸ್ನೇಹೇನ ಯಂತ್ರಿತೌ ತಸ್ಯ ಗೌರವಾಚ್ಚಾನ್ವವರ್ತತಾಮ್ ॥ ೩೬ ॥**

**ಅರ್ಥ** :- **ಭೀಮಧನಂಜಯೌ** = ಭೀಮಾರ್ಜುನರು, **ತಸ್ಯ** = ಆ ಭೀಷ್ಮನ, **ವಧೇ** = ವಧೆಯಲ್ಲಿ, **ಸುಸಮರ್ಥಾವಪಿ** = ಸಮರ್ಥರಾದರೂ ಕೂಡ, **ತಸ್ಯ** = ಅವನ ಮೇಲಿನ, **ಸ್ನೇಹೇನ** = ಪ್ರೀತಿಯಿಂದ, **ಗೌರವಾಚ್ಚ** = ಗೌರವದಿಂದಲೂ, **ಯಂತ್ರಿತೌ** = ಬದ್ಧರಾಗಿ, **ಅನ್ವವರ್ತತಾಂ** = ಅನುಕೂಲವಾಗಿ ವರ್ತಿಸಿದರು.

**ತಾತ್ಪರ್ಯ** :- ಭೀಮಾರ್ಜುನರು ಭೀಷ್ಮನನ್ನು ಕೊಲ್ಲಲು ಸಮರ್ಥರೇ ಆದರೂ ಆ ಭೀಷ್ಮನ ಮೇಲಿದ್ದ ಪ್ರೀತಿ ಮತ್ತು ಗೌರವ ಭಾವನೆಗೆ ಬದ್ಧರಾಗಿ ಅವನಿಗೆ ಅನುಕೂಲವಾಗುವಂತೆ ವರ್ತಿಸಿದರು.

**ಬಭೂವುಸ್ತತ್ರ ಯುದ್ಧಾನಿ ಚಿತ್ರಾಣಿ ಸುಬಹೂನಿ ಚ ।**
**ತಾನ್ಯಂಬರೇ ವಿಮಾನಸ್ಥಾ ಬ್ರಹ್ಮರುದ್ರಪುರಸ್ಸರಾಃ ॥ ೩೭ ॥**

**ಅಪಶ್ಯನ್ ದೇವತಾಃ ಸರ್ವಾ ಗಂಧರ್ವಾಪ್ಸರಸೋಽಸುರಾಃ ॥ ೩೮ ॥**

**ಅರ್ಥ** :- **ತತ್ರ** = ಅಲ್ಲಿ, **ಚಿತ್ರಾಣಿ** = ಆಶ್ಚರ್ಯಕರವಾದ, **ಸುಬಹೂನಿ** = ಬಹಳ, **ಯುದ್ಧಾನಿ** = ಯುದ್ಧಗಳು, **ಬಭೂವುಃ** = ನಡೆದವು, **ಸರ್ವಾಃ** = ಎಲ್ಲಾ, **ಬ್ರಹ್ಮರುದ್ರ ಪುರಸ್ಸರಾಃ** = ಬ್ರಹ್ಮರುದ್ರ ಮೊದಲಾದ, **ದೇವತಾಃ** = ದೇವತೆಗಳು, **ಗಂಧರ್ವಾಪ್ಸರಸಃ** = ಗಂಧರ್ವರೂ ಅಪ್ಸರೆಯರೂ, **ಅಸುರಾಶ್ಚ** = ಅಸುರರೂ, **ಅಂಬರೇ** = ಆಕಾಶದಲ್ಲಿ, **ವಿಮಾನಸ್ಥಾಃ** = ವಿಮಾನದಲ್ಲಿ ಕುಳಿತವರಾಗಿ, **ತಾನಿ** = ಆ ಯುದ್ಧಗಳನ್ನು, **ಅಪಶ್ಯನ್** = ನೋಡಿದರು.

**ತಾತ್ಪರ್ಯ** :- ಆವಾಗ ಅದ್ಭುತವಾದ ಬಹಳ ಯುದ್ಧಗಳು ನಡೆದವು. ಬ್ರಹ್ಮರುದ್ರ ಮೊದಲಾದ ದೇವತೆಗಳೆಲ್ಲರೂ ಮತ್ತೂ ಗಂಧರ್ವರೂ,

ಅಪ್ಸರೆಯರೂ, ಅಸುರರೂ ಆಕಾಶದಲ್ಲಿ ವಿಮಾನದಲ್ಲಿ ಕುಳಿತು ಯುದ್ಧಗಳನ್ನು ಸಂದರ್ಶಿಸಿದರು.

**ಧೃಷ್ಟದ್ಯುಮ್ನೋ ಮಹೇಷ್ವಾಸಃ ಪ್ರತಿವ್ಯೂಹ್ಯಾಽಪಗಾಸುತಮ್ ।**
**ಚಕ್ರೇ ಯುದ್ಧಾನಿ ಸುಬಹೂನ್ಯಜೇಯಃ ಶತ್ರುಭೀ ರಣೇ ॥ ೩೯ ॥**

**ಅರ್ಥ :-** **ರಣೇ** = ಯುದ್ಧದಲ್ಲಿ, **ಶತ್ರುಭಿಃ** = ಶತ್ರುಗಳಿಂದ, **ಅಜೇಯಃ** = ಗೆಲ್ಲಲಸಾಧ್ಯನಾದ, **ಮಹೇಷ್ವಾಸಃ** = ಮಹಾಧನುರ್ಧಾರಿಯಾದ, **ದೃಷ್ಟದ್ಯುಮ್ನಃ** = ದೃಷ್ಟದ್ಯುಮ್ನನು, **ಅಪಗಾಸುತಂ** = ಭೀಷ್ಮನನ್ನು, **ಪ್ರತಿವ್ಯೂಹ್ಯ** = ಎದುರಿಸಿ, **ಸುಬಹೂನಿ** = ಬಹಳ, **ಯುದ್ಧಾನಿ** = ಯುದ್ಧಗಳನ್ನು, **ಚಕ್ರೇ** = ಮಾಡಿದ.

**ತಾತ್ಪರ್ಯ :-** ಯುದ್ಧದಲ್ಲಿ ಶತ್ರುಗಳಿಂದ ಗೆಲ್ಲಲಸಾಧ್ಯನಾದ ಧನುರ್ಧಾರಿಯಾದ ದೃಷ್ಟದ್ಯುಮ್ನ ಭೀಷ್ಮರನ್ನು ಎದುರಿಸಿ ಅನೇಕ ಯುದ್ಧಗಳನ್ನು ಮಾಡಿದ.

**ತತ್ರೋದ್ದಧಾರ ಕೃಷ್ಣೋಽಪಿ ಫಲ್ಗುನಂ ಮೃದುಯೋಧಿನಮ್ ।**
**ದೃಷ್ಟ್ವಾ ಚಕ್ರಂ ತಥೋದ್ಯಮ್ಯ ಬಾಹುಂ ಭೀಷ್ಮಾಯ ಜಗ್ಮಿವಾನ್ ॥ ೪೦ ॥**

**ಅರ್ಥ :-** **ಕೃಷ್ಣೋಽಪಿ** = ಕೃಷ್ಣನಾದರೂ, **ಫಲ್ಗುನಂ** = ಅರ್ಜುನನನ್ನು, **ಮೃದುಯೋಧಿನಂ** = ಮೃದುವಾಗಿ ಯುದ್ಧ ಮಾಡುತ್ತಿದ್ದವನನ್ನಾಗಿ, **ದೃಷ್ಟ್ವಾ** = ನೋಡಿ, **ತತ್ರ** = ಆವಾಗ, **ಚಕ್ರಂ** = ಚಕ್ರವನ್ನು, **ಉದ್ದಧಾರ** = ಹಿಡಿದನು, **ತಥಾ** = ಹಾಗೆ, **ಬಾಹುಂ** = ತೋಳನ್ನು, **ಉದ್ಯಮ್ಯ** = ಎತ್ತಿ, **ಭೀಷ್ಮಾಯ ಜಗ್ಮಿವಾನ್** = ಭೀಷ್ಮನ ಬಳಿಗೆ ನಡೆದ.

**ತಾತ್ಪರ್ಯ :-** ಅನಂತರ ಅರ್ಜುನ ಮೃದುವಾಗಿ ಯುದ್ಧ ಮಾಡುತ್ತಿದ್ದದ್ದನ್ನು ನೋಡಿ ಕೃಷ್ಣ ಚಕ್ರವನ್ನೆತ್ತಿದ್ದ. ಎತ್ತಿ ಭೀಷ್ಮನ ಕಡೆಗೆ ನಡೆದ.

**ತೇನ ಸ್ತುತೋ ಗೃಹೀತಶ್ಚ ಫಲ್ಗುನೇನ ಪ್ರಣಮ್ಯ ಚ ।**
**ಪ್ರಾರ್ಥಿತೋ ರಥಮಾರೂಢಃ ಪುನಃ ಶಂಖಮಪೂರಯತ್ ॥ ೪೧ ॥**

**ಅರ್ಥ :-** **ತೇನ** = ಆ ಭೀಷ್ಮನಿಂದ, **ಸ್ತುತಃ** = ಸ್ತುತನಾದವನಾಗಿ, **ಫಲ್ಗುನೇನ** = ಅರ್ಜುನನಿಂದ, **ಪ್ರಣಮ್ಯ** = ನಮಸ್ಕಾರ ಮಾಡಿ, **ಗೃಹೀತಶ್ಚ**

= ಕೈ ಹಿಡಿಯಲ್ಪಟ್ಟವನಾಗಿ, **ಪ್ರಾರ್ಥಿತಶ್ಚ** = ಪ್ರಾರ್ಥಿತನೂ ಆಗಿ, **ಪುನಃ** = ಮತ್ತೆ , **ರಥಂ** = ರಥವನ್ನು , **ಆರೂಢಃ** = ಏರಿದವನಾಗಿ, **ಶಂಖಂ ಅಪೂರಯತ್** = ಶಂಖನಾದ ಮಾಡಿದನು.

**ತಾತ್ಪರ್ಯ** :- ಭೀಷ್ಮ ಸ್ತೋತ್ರ ಮಾಡಿದ. ಆಗಲೇ ಅರ್ಜುನ ಕೈಹಿಡಿದು ನಮಸ್ಕರಿಸಿ ಕೃಷ್ಣನನ್ನು ಬೇಡಿಕೊಂಡ. ನಂತರ ಕೃಷ್ಣ ಮತ್ತೆ ರಥವನ್ನು ಏರಿ ಶಂಖನಾದ ಮಾಡಿದ.

**ತತೋ ಭೀಷ್ಮೋಽರ್ಜುನಶ್ಚೈವ ಶಸ್ತ್ರಾಸ್ತ್ರೈರಭ್ಯವರ್ಷತಾಮ್ ।**
**ಅಯತ್ನೇನ ಜಿತಶ್ಚೈವ ಫಲ್ಗುನೇನಾಽಪಗಾಸುತಃ ॥ ೪೨ ॥**

**ಅಯುತಾನಿ ಬಹೂನ್ಯಾಜೌ ರಥಾನಾಂ ನಿಜಘಾನ ಚ ।**
**ಜಿತಾಃ ಸೇನಾಪಹಾರಂ ಚ ಚಕ್ರುರ್ಭೀಷ್ಮಮುಖಾಸ್ತತಃ ॥ ೪೩ ॥**

**ಅರ್ಥ** :- **ತತಃ** = ಅನಂತರ, **ಭೀಷ್ಮಃ** = ಭೀಷ್ಮನು, **ಅರ್ಜುನಶ್ಚೈವ** = ಅರ್ಜುನನೂ, **ಶಸ್ತ್ರಾಸ್ತ್ರೈಃ** = ಶಸ್ತ್ರಾಸ್ತ್ರಗಳಿಂದ, **ಅಭ್ಯವರ್ಷತಾಂ** = ಮಳೆ ಸುರಿಸಿದರು, **ಫಲ್ಗುನೇನ** = ಅರ್ಜುನನಿಂದ, **ಅಯತ್ನೇನ** = ಅನಾಯಾಸವಾಗಿ, **ಜಿತಃ** = ಪರಾಜಿತನಾದ, **ಅಪಗಾಸುತಶ್ಚ** = ಭೀಷ್ಮನೂ, **ಆಜೌ** = ಯುದ್ಧದಲ್ಲಿ, **ಬಹೂನಿ** = ಬಹಳ, **ರಥಾನಾಂ ಅಯುತಾನಿ** = ರಥಿಕರ ಹತ್ತು ಸಾವಿರಗಳನ್ನು, **ನಿಜಘಾನ** = ಕೊಂದನು, **ತತಃ** = ಅನಂತರ, **ಜಿತಾಃ** = ಪರಾಜಿತರಾದ, **ಭೀಷ್ಮಮುಖಾಃ** = ಭೀಷ್ಮ ಮೊದಲಾದವರು, **ಸೇನಾಪಹಾರಂ ಚ ಚಕ್ರುಃ** = ಸೇನೆಯನ್ನು ಕರೆಸಿಕೊಂಡರು.

**ತಾತ್ಪರ್ಯ** :- ಅನಂತರ ಭೀಷ್ಮಾರ್ಜುನರು ಬಾಣಗಳ ಮಳೆಗರೆದರು. ಅರ್ಜುನ ಅನಾಯಾಸವಾಗಿ ಭೀಷ್ಮನನ್ನು ಸೋಲಿಸಿದ. ಭೀಷ್ಮ ಸೋತರೂ ಕೂಡ ಹತ್ತು ಸಾವಿರಕ್ಕಿಂತಲೂ ಹೆಚ್ಚಾದ ರಥಿಕರನ್ನು ಕೊಂದ. ಭೀಷ್ಮ ಮೊದಲಾದವರು ಸೋತು ಸೈನ್ಯವನ್ನು ಶಿಬಿರದ ಬಳಿಗೆ ಕರೆಸಿಕೊಂಡರು.

**ಕದಾಚಿದಗ್ರಗೋ ಭೀಮೋ ಭೀಷ್ಮದ್ರೋಣೌ ವಿಸಾರಥೀ ।**
**ಕೃತ್ವಾ ವಿದ್ರಾಪ್ಯ ತಾನಶ್ವಾನ್ ಭಿತ್ವಾ ವ್ಯೂಹಂ ವಿವೇಶ ಹ ॥ ೪೪ ॥**

**ಅರ್ಥ** :- **ಕದಾಚಿತ್** = ಒಮ್ಮೆ, **ಅಗ್ರಗಃ** = ಮುಂದಿದ್ದ, **ಭೀಮಃ** = ಭೀಮನು, **ಭೀಷ್ಮದ್ರೋಣೌ** = ಭೀಷ್ಮದ್ರೋಣರನ್ನು, **ವಿಸಾರಥೀ** = ಸಾರಥಿ ರಹಿತರನ್ನಾಗಿ, **ಕೃತ್ವಾ** = ಮಾಡಿ, **ತಾನ್ ಅಶ್ವಾನ್** = ಆ ಕುದುರೆಗಳನ್ನು, **ವಿದ್ರಾವ್ಯ** = ಓಡಿಸಿ, **ವ್ಯೂಹಂ** = ವ್ಯೂಹವನ್ನು, **ಭಿತ್ವಾ** = ಭೇದಿಸಿ, **ವಿವೇಶಹ** = ಪ್ರವೇಶಿಸಿದನಷ್ಟೆ.

**ತಾತ್ಪರ್ಯ** :- ಒಮ್ಮೆ ಭೀಮ ಯುದ್ಧ ನಡೆಯುವ ಸಮಯದಲ್ಲಿ ಮುಂದೆ ಬಂದು ಭೀಷ್ಮ ದ್ರೋಣರ ಸಾರಥಿಯರನ್ನು ಕೊಂದು ಅವರ ರಥದ ಕುದುರೆಗಳನ್ನು ಓಡಿಸಿ ವ್ಯೂಹವನ್ನು ಭೇದಿಸಿ ಪ್ರವೇಶಿಸಿದ.

**ಪುನಃ ಸಂಸ್ಥಾಪಿತರಥೌ ವಿಜಿತ್ಯಾಯತ್ನತೋ ಬಲೀ ।**
**ಯತಮಾನೌ ಮಹೇಷ್ವಾಸೌ ಧಾರ್ತರಾಷ್ಟ್ರಾನ್ ಜಘಾನ ಹ ॥ ೪೫ ॥**

**ಅರ್ಥ** :- **ಬಲೀ** = ಬಲಿಷ್ಠನಾದ ಭೀಮನು, **ಮಹೇಷ್ವಾಸೌ** = ಮಹಾಧನುರ್ಧಾರಿಗಳಾದ, **ಪುನಃ** = ಮತ್ತೆ, **ಸಂಸ್ಥಾಪಿತರಥೌ** = ಅಧಿರೂಢವಾದ ರಥವುಳ್ಳ, **ಯತಮಾನೌ** = ಯತ್ನಿಸುತ್ತಿದ್ದ ಅವರನ್ನು, **ಅಯತ್ನತಃ** = ಅನಾಯಾಸವಾಗಿ, **ವಿಜಿತ್ಯ** = ಗೆದ್ದು, **ಧಾರ್ತರಾಷ್ಟ್ರಾನ್** = ಕೌರವರನ್ನು, **ಜಘಾನ ಹ** = ಕೊಂದನಷ್ಟೇ.

**ತಾತ್ಪರ್ಯ** :- ಭೀಮ ಮಹಾಧನುರ್ಧಾರಿಗಳಾದ ಪುನಃ ರಥವನ್ನೇರಿದ ಯತ್ನಿಸುತ್ತಿದ್ದ ಭೀಷ್ಮ ದ್ರೋಣರನ್ನು ಅನಾಯಾಸವಾಗಿ ಸೋಲಿಸಿ ಕೌರವರನ್ನು ಕೊಂದನು.

**ಪಂಚವಿಂಶದ್ಧತಾಸ್ತತ್ರ ಧಾರ್ತರಾಷ್ಟ್ರಾ ಮಹಾಬಲಾಃ ।**
**ಭಗದತ್ತದ್ರೌಣಿಕೃಪಶಲ್ಯದುರ್ಯೋಧನಾದಯಃ ॥ ೪೬ ॥**

**ಸರ್ವೇ ಜಿತಾ ದ್ರಾವಿತಾಶ್ಚ ಸೇನಾ ಚ ಬಹುಲಾ ಹತಾ ।**
**ವಿರಥೋ ವ್ಯಾಯುಧಶ್ಚೈವ ದೃಢವೇಧವಿಮೂರ್ಛಿತಃ ॥ ೪೭ ॥**

**ಕೃತೋ ದುರ್ಯೋಧನಃ ಸರ್ವರಾಜ್ಞಾಂ ಭೀಮೇನ ಪಶ್ಯತಾಮ್ ।**
**ತತೋಽಪಹಾರಂ ಸೈನ್ಯಸ್ಯ ಜಿತಾಶ್ಚಕ್ರುಶ್ಚ ಕೌರವಾಃ ॥ ೪೮ ॥**

**ಅರ್ಥ** :- **ಸರ್ವರಾಜ್ಞಾಂ ಪಶ್ಯತಾಂ** = ಎಲ್ಲಾ ರಾಜರೂ ನೋಡುವಾಗಲೇ, **ಪಂಚವಿಂಶತ್** = ಇಪ್ಪತ್ತೈದು ಮಂದಿ, **ಮಹಾಬಲಾಃ** = ಮಹಾಬಲಿಷ್ಠರಾದ, **ಧಾರ್ತರಾಷ್ಟ್ರಾಃ** = ಕೌರವರು, **ಭೀಮೇನ** = ಭೀಮನಿಂದ, **ಹತಾಃ** = ಹತರಾದರು, **ಭಗದತ್ತ ದ್ರೌಣಿ ಕೃಪಶಲ್ಯದುರ್ಯೋಧನಾದಯಃ** = ಭಗದತ್ತ ಅಶ್ವತ್ಥಾಮ ಕೃಪ ಶಲ್ಯ ದುರ್ಯೋಧನ ಮೊದಲಾದವರು, **ಸರ್ವೇ** = ಎಲ್ಲರೂ, **ಜಿತಾಃ** = ಪರಾಜಿತರಾಗಿ, **ದ್ರಾವಿತಾಃ** = ಓಡಿಸಲ್ಪಟ್ಟರು, **ಬಹುಲಾ** = ಬಹಳವಾದ, **ಸೇನಾ ಚ** = ಸೈನ್ಯವೂ, **ಹತಾ** = ಹತವಾಯಿತು, **ದುರ್ಯೋಧನಃ** = ದುರ್ಯೋಧನನು, **ವಿರಥಃ** = ರಥರಹಿತನಾಗಿ, **ವ್ಯಾಯುಧಶ್ಚ** = ಆಯುಧರಹಿತನೂ ಆಗಿ, **ದೃಢವೇಧವಿಮೂರ್ಛಿತಃ** = ತೀವ್ರವಾದ ಗಾಯಗಳಿಂದ ಮೂರ್ಛಿತನಾಗಿ, **ಕೃತಃ** = ಮಾಡಲ್ಪಟ್ಟನು, **ತತಃ** = ಅನಂತರ, **ಜಿತಾಃ** = ಪರಾಜಿತರಾದ, **ಕೌರವಾಃ** = ಕೌರವರು, **ಸೈನ್ಯಸ್ಯ ಅಪಹಾರಂ ಚಕ್ರುಃ** = ಸೈನ್ಯವನ್ನು ಕರೆಸಿಕೊಂಡರು.

**ತಾತ್ಪರ್ಯ** :- ಎಲ್ಲ ರಾಜರ ಮುಂದೆಯೇ ಭೀಮ ಬಲಿಷ್ಠರಾದ ಇಪ್ಪತ್ತೈದು ಕೌರವರನ್ನು ಕೊಂದನು. ಭಗದತ್ತ ಅಶ್ವತ್ಥಾಮ ಕೃಪ ಶಲ್ಯ ದುರ್ಯೋಧನ ಮೊದಲಾದವರನ್ನು ಸೋಲಿಸಿ ಓಡಿಸಿದ. ಬಹಳ ಸೈನ್ಯವನ್ನು ನಾಶಪಡಿಸಿದ. ದುರ್ಯೋಧನ ರಥ ಆಯುಧ ರಹಿತನಾಗಿ ತೀವ್ರ ಗಾಯಗಳಿಂದ ಬಳಲಿದವನಾಗಿ ಮೂರ್ಛಿತನಾದ. ಅನಂತರ ಪರಾಜಿತರಾದ ಕೌರವರು ತಮ್ಮ ಸೈನ್ಯವನ್ನು ಹಿಂದೆ ಶಿಬಿರಕ್ಕೆ ಕರೆಸಿಕೊಂಡರು.

**ದುರ್ಯೋಧನೋ ನಿಶಾಯಾಂ ಚ ಯಯೌ ಯತ್ರ ನದೀಸುತಃ ।**
**ಪೀಡಿತೋ ಭೀಮಬಾಣೈಶ್ಚ ಕ್ಷರದ್‌ಗಾತ್ರೋ ನನಾಮ ತಮ್ ।**
**ಉವಾಚ ಹೇತುನಾ ಕೇನ ವಯಂ ಕ್ಷೀಯಾಮ ಸರ್ವದಾ ॥ ೪೯ ॥**

**ಅರ್ಥ** :- **ಭೀಮಬಾಣೈಃ** = ಭೀಮನ ಬಾಣಗಳಿಂದ, **ಪೀಡಿತಃ** = ಪೀಡಿತನಾದ, **ಕ್ಷರದ್ಗಾತ್ರಃ** = ಗಾಯಗೊಂಡ ದೇಹವುಳ್ಳ, **ದುರ್ಯೋಧನಃ** = ದುರ್ಯೋಧನನು, **ನಿಶಾಯಾಂ** = ರಾತ್ರಿಯಲ್ಲಿ, **ಯತ್ರ** = ಎಲ್ಲಿ, **ನದೀಸುತಃ** = ಭೀಷ್ಮನು, (**ಆಸೀತ್** = ಇದ್ದನೋ, **ತತ್ರ** = ಅಲ್ಲಿಗೆ) **ಯಯೌ** = ಹೋದನು, **ತಂ** = ಆ ಭೀಷ್ಮನನ್ನು, **ನನಾಮ** = ನಮಿಸಿದ, **ವಯಂ** = ನಾವು, **ಸರ್ವದಾ** = ಯಾವಾಗಲೂ, **ಕೇನ ಹೇತುನಾ** = ಯಾವ

ಉಪಾಯದಿಂದ, **ಕ್ಷೀಯಾಮ** = ಸೋಲುತ್ತೇವೆ ?, (**ಇತಿ** = ಎಂದು) **ಉವಾಚ** = ಹೇಳಿದನು.

**ತಾತ್ಪರ್ಯ** :- ಭೀಮನ ಬಾಣಗಳಿಂದ ಪೀಡಿತನಾಗಿ ಗಾಯಗೊಂಡ ದುರ್ಯೋಧನ ರಾತ್ರಿ ಭೀಷ್ಮರಿದ್ದಲ್ಲಿಗೆ ಹೋದ. ಅವರಿಗೆ ನಮಸ್ಕರಿಸಿ ಕೇಳಿದ. ನಾವು ಯಾವಾಗಲೂ ಯಾವ ಕಾರಣದಿಂದ ಸೋಲುತ್ತೇವೆ ?

**ಪಾಂಡವಾಶ್ಚ ಜಯಂ ನಿತ್ಯಂ ಲಬ್ಧ್ವಾ ಹರ್ಷಮವಾಪ್ನುವನ್ ।**
**ತಮಾಹ ಭೀಷ್ಮಸ್ತೇಽಜೇಯಾ ದೇವಾಸ್ತೇ ಧರಣೀಂ ಗತಾಃ ।**
**ವಿಶೇಷತಃ ಕೇಶವೇನ ಪಾಲಿತಾಸ್ತತ್ ಪ್ರಿಯಾಃ ಸದಾ ॥ ೫೦ ॥**

**ಅರ್ಥ** :- **ಪಾಂಡವಾಶ್ಚ** = ಪಾಂಡವರೂ, **ನಿತ್ಯಂ** = ಯಾವಾಗಲೂ, **ಜಯಂ** = ಜಯವನ್ನು, **ಲಬ್ಧ್ವಾ** = ಹೊಂದಿ, **ಹರ್ಷಂ** = ಸಂತೋಷವನ್ನು, **ಅವಾಪ್ನುವನ್** ? = ಹೇಗೆ ಹೊಂದಿದ್ದಾರೆ, **ಭೀಷ್ಮಃ** = ಭೀಷ್ಮನು, **ತೇ** = ಆ ಪಾಂಡವರು, **ಅಜೇಯಾಃ** = ಅಜೇಯರು, **ತೇ** = ಅವರು, **ಧರಣೀಂ** = ಭೂಮಿಯನ್ನು, **ಗತಾಃ** = ಹೊಂದಿದ, **ದೇವಾಃ** = ದೇವತೆಗಳು, **ವಿಶೇಷತಃ** = ವಿಶೇಷವಾಗಿ, **ಕೇಶವೇನ** = ಕೃಷ್ಣನಿಂದ, **ಪಾಲಿತಾಃ** = ರಕ್ಷಿತರಾದವರು, **ಸದಾ** = ಯಾವಾಗಲೂ, **ತತ್ಪ್ರಿಯಾಃ** = ಆ ಕೃಷ್ಣನಿಗೆ ಪ್ರಿಯರಾದವರು ಎಂದು, **ತಂ** = ಆ ದುರ್ಯೋಧನನನ್ನು ಕುರಿತು, **ಆಹ** = ಹೇಳಿದನು.

**ತಾತ್ಪರ್ಯ** :- ''ಪಾಂಡವರು ಏಕೆ ಯಾವಾಗಲೂ ಜಯಶಾಲಿಗಳಾಗಿ ಸಂತೋಷವಾಗಿ ಇದ್ದಾರೆ'' ಎಂದು ದುರ್ಯೋಧನ ಭೀಷ್ಮರಿಗೆ ಹೇಳಿದಾಗ ಭೀಷ್ಮ ಹೇಳಿದ ಅವರು ಬೇರೆಯವರಿಂದ ಗೆಲ್ಲಲಸಾಧ್ಯರು ಭೂಮಿಗೆ ಇಳಿದ ದೇವತೆಗಳು ಮತ್ತು ವಿಶೇಷವಾಗಿ ಕೃಷ್ಣನಿಂದ ಸಂರಕ್ಷಿತರಾದವರು. ಅಷ್ಟೇ ಅಲ್ಲದೇ ಸದಾ ಕೃಷ್ಣನಿಗೆ ಅತ್ಯಂತ ಪ್ರಿಯರಾದವರು ಎಂದು.

**ಮಾನಸೋತ್ತರಶೈಲೇ ಹಿ ಪುರಾ ಬ್ರಹ್ಮಪುರಸ್ಸರಾಃ ।**
**ಸ್ಥಿತಾ ದೇವಾಸ್ತದಾಽಪಶ್ಯದ್ ಬ್ರಹ್ಮೈಕೋ ಹರಿಮಂಬರೇ ॥ ೫೧ ॥**

**ಅರ್ಥ** :- **ಪುರಾ** = ಹಿಂದೆ, **ಮಾನಸೋತ್ತರಶೈಲೇ** = ಮಾನಸೋತ್ತರ ಪರ್ವತದಲ್ಲಿ, **ಬ್ರಹ್ಮಪುರಸ್ಸರಾಃ** = ಬ್ರಹ್ಮ ಮೊದಲಾದ, **ದೇವಾಃ** =

ದೇವತೆಗಳು, **ಸ್ಥಿತಾಃ** = ಇದ್ದರು, **ತದಾ** = ಆಗ, **ಬ್ರಹ್ಮಾ ಏಕಃ** = ಬ್ರಹ್ಮನೊಬ್ಬನೆ, **ಅಂಬರೇ** = ಆಕಾಶದಲ್ಲಿ, **ಹರಿಂ** = ಹರಿಯನ್ನು, **ಅಪಶ್ಯತ್** = ನೋಡಿದ.

**ತಾತ್ಪರ್ಯ :-** ಹಿಂದೆ ಬ್ರಹ್ಮ ಮೊದಲಾದ ದೇವತೆಗಳು ಮಾನಸೋತ್ತರ ಪರ್ವತದಲ್ಲಿ ಇದ್ದರು. ಆವಾಗ ಬ್ರಹ್ಮನೊಬ್ಬ ಆಕಾಶದಲ್ಲಿ ಹರಿಯನ್ನು ನೋಡಿದ.

**ಸ್ತುತ್ವಾ ಸಂಪೂಜ್ಯ ಭೂಮೇಃ ಸ ಭಾರಾವತರಣಾಯ ತಮ್ ।**
**ಪ್ರಾರ್ಥಯಾಮಾಸ ತೇನೋಕ್ತಂ ದೇವಾನಾಮವದದ್ ವಿಭುಃ ॥ ೫೨ ॥**

**ಅರ್ಥ :- ಸಃ** = ಆ ಬ್ರಹ್ಮನು, **ಭೂಮೇಃ ಭಾರಾವತರಣಾಯ** = ಭೂಭಾರ ಹರಣಕ್ಕಾಗಿ, **ತಂ** = ಆ ಪರಮಾತ್ಮನನ್ನು, **ಸ್ತುತ್ವಾ** = ಸ್ತೋತ್ರಮಾಡಿ, **ಸಂಪೂಜ್ಯ** = ಪೂಜಿಸಿ, **ಪ್ರಾರ್ಥಯಾಮಾಸ** = ಪ್ರಾರ್ಥಿಸಿದ, **ವಿಭುಃ** = ಬ್ರಹ್ಮನು, **ತೇನ** = ಆ ಪರಮಾತ್ಮನಿಂದ, **ಉಕ್ತಂ** = ಹೇಳಲ್ಪಟ್ಟದ್ದನ್ನು, **ದೇವಾನಾಂ** = ದೇವತೆಗಳಿಗೆ, **ಅವದತ್** = ಹೇಳಿದನು.

**ತಾತ್ಪರ್ಯ :-** ಬ್ರಹ್ಮ ಪರಮಾತ್ಮನನ್ನು ಪೂಜಿಸಿ ಸ್ತೋತ್ರ ಮಾಡಿ ಭೂಭಾರ ಹರಣಕ್ಕಾಗಿ ಪ್ರಾರ್ಥಿಸಿದ. ಆಗ ಪರಮಾತ್ಮ ಹೇಳಿದ ಮಾತನ್ನು ಬ್ರಹ್ಮದೇವರು ದೇವತೆಗಳಿಗೆ ಹೇಳಿದರು.

**ಅಯಂ ನಾರಾಯಣೋ ದೇವಃ ಪೂರ್ಣಾನಂತಗುಣಾರ್ಣವಃ ।**
**ಆಜ್ಞಾಪಯತಿ ವಃ ಸರ್ವಾನ್ ಪ್ರಾದುರ್ಭಾವಾಯ ಭೂತಳೇ ॥ ೫೩ ॥**

**ಸ್ವಯಂ ಚ ದೇವಕೀಪುತ್ರೋ ಭವಿಷ್ಯತಿ ಜಗತ್ಪತಿಃ ॥ ೫೪ ॥**

**ಅರ್ಥ :- ಪೂರ್ಣಾನಂತಗುಣಾರ್ಣವಃ** = ಪೂರ್ಣವಾದ ಅನಂತ ಗುಣಗಳಿಗೆ ಸಮುದ್ರದಂತೆ ಇರುವ, **ಅಯಂ** = ಈ, **ನಾರಾಯಣೋ ದೇವಃ** = ನಾರಾಯಣ ದೇವರು, **ವಃ ಸರ್ವಾನ್** = ನಿಮ್ಮೆಲ್ಲರನ್ನೂ, **ಭೂತಲೇ** = ಭೂಮಿಯಲ್ಲಿ, **ಪ್ರಾದುರ್ಭಾವಾಯ** = ಅವತಾರ ಮಾಡಲು, **ಆಜ್ಞಾಪಯತಿ** = ಅಪ್ಪಣೆ ಮಾಡುತ್ತಿದ್ದಾನೆ, **ಜಗತ್ಪತಿಃ** = ಜಗದೊಡೆಯನಾದ ಪರಮಾತ್ಮ,

**ಸ್ವಯಂ ಚ** = ತಾನೂ, **ದೇವಕೀಪುತಃ ಭವಿಷ್ಯತಿ** = ದೇವಕಿಯ ಮಗನಾಗುವನು.

**ತಾತ್ಪರ್ಯ** :- ಪೂರ್ಣವಾದ ಅಪರಿಮಿತ ಗುಣಗಳಿಗೆ ಸಮುದ್ರದಂತೆ ಇರುವ ಶ್ರೀ ನಾರಾಯಣ ಭೂಮಿಯಲ್ಲಿ ಅವತರಿಸಲು ನಿಮಗೆ ಅಪ್ಪಣೆ ನೀಡುತ್ತಿದ್ದಾನೆ. ಜಗತ್ಪತಿಯಾದ ಶ್ರೀಹರಿ ತಾನೂ ಕೂಡ ದೇವಕಿಯ ಮಗನಾಗಿ ಅವತರಿಸುತ್ತಾನೆ.

**ಏವಂ ತೇನ ಸಮಾದಿಷ್ಟಾ ಧರ್ಮವಾಯ್ವಾದಯೋಽಖಿಲಾಃ ।**
**ಅಭವನ್ ಪಾಂಡವಾದ್ಯಾಸ್ತೇ ಸೇಂದ್ರಾಃ ಸಹಮರುದ್‌ಗಣಾಃ ॥ ೫೫ ॥**

**ಅರ್ಥ** :- **ಏವಂ** = ಈ ರೀತಿಯಾಗಿ, **ತೇನ** = ಆ ಹರಿಯಿಂದ, **ಸಮಾದಿಷ್ಟಾಃ** = ಆದಿಷ್ಟರಾದ, **ಧರ್ಮವಾಯ್ವಾದಯಃ ಅಖಿಲಾಃ** = ಯಮಧರ್ಮ ವಾಯು ಮೊದಲಾದವರೆಲ್ಲರೂ, **ಸೇಂದ್ರಾಃ** = ಇಂದ್ರ ಸಮೇತರಾಗಿ, **ಸಹಮರುದ್ಗಣಾಃ** = ಮರುದ್ಗಣಸಹಿತರಾಗಿ, **ಪಾಂಡವಾದ್ಯಾಃ** = ಪಾಂಡವರು ಮೊದಲಾದವರಾಗಿ, **ತೇ** = ಅವರು, **ಅಭವನ್** = ಹುಟ್ಟಿದರು.

**ತಾತ್ಪರ್ಯ** :- ಹೀಗೆ ಪರಮಾತ್ಮನಿಂದ ಆದಿಷ್ಟರಾದ ಯಮಧರ್ಮ, ವಾಯು ಮೊದಲಾದವರೆಲ್ಲರೂ ಇಂದ್ರ ಮತ್ತು ಮರುದ್ಗಣ ಸಮೇತರಾಗಿ ಪಾಂಡವರು ಮತ್ತು ಇನ್ನಿತರರಾಗಿ ಅವತರಿಸಿದರು.

**ಸ ಚ ನಾರಾಯಣೋ ದೇವೋ ದೇವಕೀನಂದನೋಽಭವತ್ ।**
**ತೇನೈತೇ ಪಾಲಿತಾಃ ಪಾರ್ಥಾ ಅಜೇಯಾ ದೇವಸರ್ಗಿಣಃ ।**
**ತಸ್ಮಾತ್ ತೈಃ ಸಂಧಿಮನ್ವಿಚ್ಛ ಯದೀಚ್ಛಸ್ಯಪರಾಭವಮ್ ॥ ೫೬ ॥**

**ಅರ್ಥ** :- **ಸ ನಾರಾಯಣೋ ದೇವಃ** = ಆ ನಾರಾಯಣದೇವ, **ದೇವಕೀನಂದನಃ ಅಭವತ್** = ದೇವಕಿಯ ಮಗನಾದ, **ತೇನ** = ಅವನಿಂದ, **ಪಾಲಿತಾಃ** = ಪಾಲಿತರಾದ, **ದೇವಸರ್ಗಿಣಃ** = ದೇವಾಂಶ ಸಂಭೂತರಾದ, **ಏತೇ** = ಈ, **ಪಾರ್ಥಾಃ** = ಪಾಂಡವರು, **ಅಜೇಯಾಃ** = ಅಜೇಯರಾಗಿದ್ದಾರೆ, **ತಸ್ಮಾತ್** = ಆದ್ದರಿಂದ, **ಯದಿ** = ಒಂದುವೇಳೆ,

**ಅಪರಾಭವಂ** = ಸೋಲಾಗದಿರುವಿಕೆಯನ್ನು, **ಇಚ್ಛಸಿ** = ಇಚ್ಛಿಸುವಿಯಾದರೆ, (**ತರ್ಹಿ** = ಆವಾಗ) **ತೈಃ** = ಅವರೊಡನೆ, **ಸಂಧಿಮನ್ವಿಚ್ಛ** = ಸಂಧಾನವನ್ನು ಒಪ್ಪಿಕೋ.

**ತಾತ್ಪರ್ಯ** :- ಆ ನಾರಾಯಣ ದೇವಕಿಯ ಮಗನಾಗಿ ಅವತರಿಸಿದ್ದಾನೆ. ಅವನಿಂದ ರಕ್ಷಿತರಾದ ದೇವಾಂಶ ಸಂಭೂತರಾದ ಪಾಂಡವರು ಅಜೇಯರಾಗಿದ್ದಾನೆ. ಆದ್ದರಿಂದ ನಿನಗೆ ಸೋಲಾಗಬಾರದೆಂದರೆ ಅವರೊಡನೆ ಸಂಧಾನ ಮಾಡಿಕೋ.

**ಇತ್ಯುಕ್ತೋ ಡಂಭಬುದ್ಧ್ಯೈವ ನತ್ವಾ ವಿಷ್ಣುಂ ತತೋ ಯಯೌ ।**
**ಪ್ರಾತರ್ನಿರ್ಯಾತಯಾಮಾಸ ಸೇನಾಂ ಯುದ್ಧಾಯ ದುರ್ಮತಿಃ ॥ ೫೭ ॥**

**ಅರ್ಥ** :- **ಇತಿ** = ಈ ರೀತಿಯಾಗಿ, **ಉಕ್ತಃ** = ಹೇಳಲ್ಪಟ್ಟ, **ದುರ್ಮತಿಃ** = ದುರ್ಬುದ್ಧಿಯವನಾದ ದುರ್ಯೋಧನ, **ಡಂಭಬುದ್ಧ್ಯಾ ಏವ** = ಡಾಂಭಿಕ ಭಾವನೆಯಿಂದಲೇನೇ, **ವಿಷ್ಣುಂ** = ವಿಷ್ಣುವನ್ನು, **ನತ್ವಾ** = ನಮಸ್ಕರಿಸಿ, **ತತಃ** = ಅನಂತರ, **ಯಯೌ** = ಹೊರಟುಹೋದ, **ಪ್ರಾತಃ** = ಬೆಳಗ್ಗೆ, **ಸೇನಾಂ** = ಸೈನ್ಯವನ್ನು, **ಯುದ್ಧಾಯ** = ಯುದ್ಧಕ್ಕೆ, **ನಿರ್ಯಾತಯಾಮಾಸ** = ಹೊರಡಿಸಿದ.

**ತಾತ್ಪರ್ಯ** :- ಭೀಷ್ಮ ಹೀಗೆ ಹೇಳಿದಾಗ ದುರ್ಬುದ್ಧಿಯವನಾದ ದುರ್ಯೋಧನ ಡಾಂಭಿಕತನದಿಂದ ವಿಷ್ಣುವನ್ನು ನಮಸ್ಕರಿಸಿ ಅಲ್ಲಿಂದ ಹೊರಟು ಹೋದ. ನಂತರ ಬೆಳಗ್ಗೆ ಸೈನ್ಯವನ್ನು ಯುದ್ಧಕ್ಕೆ ಪ್ರೇರಿಸಿದ.

**ದಿವ್ಯೌಷಧೇನ ಭೀಷ್ಮಸ್ಯ ಭೂತ್ವಾ ಚ ನಿರುಜಸ್ತತಃ ।**
**ಭೀಷ್ಮಮಗ್ರೇ ನಿಧಾಯ್ಯೆವ ಯಯೌ ಯುದ್ಧಾಯ ದಂಸಿತಃ ॥ ೫೮ ॥**

**ಅರ್ಥ** :- **ಭೀಷ್ಮಸ್ಯ** = ಭೀಷ್ಮನ, **ದಿವ್ಯೌಷಧೇನ** = ದಿವ್ಯ ಔಷಧದಿಂದ, **ಸಃ** = ಆ ದುರ್ಯೋಧನನು, **ನಿರುಜಃ ಭೂತ್ವಾ** = ನೋವಿಲ್ಲದವನಾಗಿ, **ದಂಶಿತಃ** = ಕವಚ ಧರಿಸಿದವನಾಗಿ, **ಭೀಷ್ಮಂ** = ಭೀಷ್ಮನನ್ನು, **ಅಗ್ರೇ ಏವ ನಿಧಾಯ** = ಮುಂದೇ ಮಾಡಿಕೊಂಡು, **ಯುದ್ಧಾಯ** = ಯುದ್ಧಕ್ಕಾಗಿ, **ಯಯೌ** = ಹೊರಟನು.

**ತಾತ್ಪರ್ಯ** :- ಭೀಷ್ಮನ ದಿವ್ಯೌಷಧದಿಂದ ದುರ್ಯೋಧನ ನೋವಿಲ್ಲದವನಾಗಿ ಕವಚವನ್ನು ಧರಿಸಿ ಭೀಷ್ಮನನ್ನು ಮುಂದೆ ಮಾಡಿ ಯುದ್ಧಕ್ಕೆ ಹೊರಟ.

**ತತ್ರಾऽಸೀದ್ ಯುದ್ಧಮತುಲಂ ಭೀಮಭೀಷ್ಮಾನುಯಾಯಿನಾಮ್ ।**
**ಪಾಂಡವಾನಾಂ ಕುರೂಣಾಂ ಚ ಶೂರಾಣಾಮನಿವರ್ತಿನಾಮ್ ॥ ೫೯ ॥**

**ಅರ್ಥ** :- **ತತ್ರ** = ಆವಾಗ, **ಭೀಮಭೀಷ್ಮಾನುಯಾಯಿನಾಂ** = ಭೀಮ ಭೀಷ್ಮರ ಅನುಯಾಯಿಗಳಾದ, **ಅನಿವರ್ತಿನಾಂ** = ಯುದ್ಧಕ್ಕೆ ಬೆನ್ನುಹಾಕದವರಾದ, **ಶೂರಾಣಾಂ** = ಶೂರರಾದ, **ಪಾಂಡವಾನಾಂ** = ಪಾಂಡವರಿಗೆ, **ಕುರೂಣಾಂ ಚ** = ಕೌರವರಿಗೂ, **ಸುಮಹತ್** = ಬಹಳ ದೊಡ್ಡದಾದ, **ಯುದ್ಧಂ** = ಯುದ್ಧವು, **ಆಸೀತ್** = ಆಯಿತು.

**ತಾತ್ಪರ್ಯ** :- ಆವಾಗ ಭೀಷ್ಮ ಮತ್ತು ಭೀಮಾನುಯಾಯಿಗಳಾದ ಯುದ್ಧದಿಂದ ಓಡಿಹೋಗದ ಶೂರರಾದ ಕೌರವರಿಗೆ ಮತ್ತು ಪಾಂಡವರಿಗೆ ಬಹಳ ದೊಡ್ಡ ಯುದ್ಧ ನಡೆಯಿತು.

**ಧೃಷ್ಟದ್ಯುಮ್ನಸ್ತತ್ರ ಭೀಮಾನುಯಾಯೀ**
**ದುರ್ಯೋಧನಸ್ಯಾವರಜೈಃ ಪ್ರಯುಧ್ಯನ್ ।**
**ಸಮ್ಮೋಹನಾಸ್ತ್ರೇಣ ವಿಮೋಹಯಿತ್ವಾ**
**ವಿಕರ್ಣಪೂರ್ವಾನಹನಚ್ಚ ಸೇನಾಮ್ ॥ ೬೦ ॥**

**ಅರ್ಥ** :- **ತತ್ರ** = ಆವಾಗ, **ಭೀಮಾನುಯಾಯೀ** = ಭೀಮಾನುಯಾಯಿಯಾದ, **ಧೃಷ್ಟದ್ಯುಮ್ನಃ** = ಧೃಷ್ಟದ್ಯುಮ್ನನು, **ದುರ್ಯೋಧನಸ್ಯ** = ದುರ್ಯೋಧನನ, **ಅವರಜೈಃ** = ತಮ್ಮಂದಿರೊಡನೆ, **ಪ್ರಯುಧ್ಯನ್** = ಯುದ್ಧ ಮಾಡುತ್ತಾ, **ಸಮ್ಮೋಹನಾಸ್ತ್ರೇಣ** = ಸಮ್ಮೋಹನಾಸ್ತ್ರದಿಂದ, **ವಿಮೋಹಯಿತ್ವಾ** = ಮೂರ್ಛೆಗೊಳಿಸಿ, **ವಿಕರ್ಣಪೂರ್ವಾನ್** = ವಿಕರ್ಣ ಮೊದಲಾದವರನ್ನು, **ಸೇನಾಂ ಚ** = ಸೈನ್ಯವನ್ನೂ, **ಅಹನತ್** = ಕೊಂದನು.

**ತಾತ್ಪರ್ಯ** :- ಆಗ ಭೀಮನ ಅನುಯಾಯಿಯಾದ ಧೃಷ್ಟದ್ಯುಮ್ನ ದುರ್ಯೋಧನನ ತಮ್ಮಂದಿರ ಜೊತೆ ಯುದ್ಧ ಮಾಡುತ್ತಾ

ಸಂಮೋಹನಾಸ್ತ್ರದಿಂದ ಅವರನ್ನು ಮೂರ್ಛೆಗೊಳಿಸಿ ವಿಕರ್ಣ ಮೊದಲಾವರನ್ನು ಕೊಂದು ಸೈನ್ಯವನ್ನು ಕೊಲ್ಲಲಾರಂಭಿಸಿದ.

**ತತೋ ದ್ರೋಣಸ್ತಾನ್ ಸಮುತ್ಥಾಪ್ಯ ಸರ್ವಾನ್**
**ವಿಜ್ಞಾನಾಸ್ತ್ರೇಣಾಽಸದತ್ ಪಾರ್ಷತಂ ಚ ।**
**ತಂ ಭೀಮಸೇನಃ ಸೂತಹೀನಂ ವಿಧಾಯ**
**ವ್ಯದ್ರಾವಯಚ್ಛತ್ರುಗಣಾನ್ ಶರೌಘೈಃ ॥ ೬೧ ॥**

**ಅರ್ಥ** :- **ತತಃ** = ಅನಂತರ, **ದ್ರೋಣಃ** = ದ್ರೋಣನು, **ವಿಜ್ಞಾನಾಸ್ತ್ರೇಣ** = ವಿಜ್ಞಾನಾಸ್ತ್ರದಿಂದ, **ತಾನ್ ಸರ್ವಾನ್** = ಅವರೆಲ್ಲರನ್ನೂ, **ಸಮುತ್ಥಾಪ್ಯ** = ಎಬ್ಬಿಸಿ, **ಪಾರ್ಷತಂ** = ದೃಷ್ಟದ್ಯುಮ್ನನನ್ನು, **ಆಸದತ್** = ಆಕ್ರಮಿಸಿದ, **ಭೀಮಃ** = ಭೀಮನು, **ತಂ** = ಆ ದ್ರೋಣನನ್ನು, **ಸೂತಹೀನಂ** = ಸಾರಥಿ ರಹಿತನನ್ನಾಗಿ, **ವಿಧಾಯ** = ಮಾಡಿ, **ಶರೌಘೈಃ** = ಬಾಣಗಳ ಸಮೂಹಗಳಿಂದ, **ಶತ್ರುಗಣಾನ್** = ಶತ್ರುಗಳ ಸಮೂಹಗಳನ್ನು, **ವ್ಯದ್ರಾವಯತ್** = ಓಡಿಸಿದ.

**ತಾತ್ಪರ್ಯ** :- ದ್ರೋಣ ವಿಜ್ಞಾನಾಸ್ತ್ರದಿಂದ ಅವರೆಲ್ಲರನ್ನೂ ಎಚ್ಚರಗೊಳಿಸಿ ದೃಷ್ಟದ್ಯುಮ್ನನ ಮೇಲೇರಿ ಬಂದ. ಆವಾಗ ಭೀಮಸೇನ ದ್ರೋಣನ ಸಾರಥಿಯನ್ನು ಕೊಂದು ಬಾಣಸಮೂಹಗಳಿಂದ ಶತ್ರು ವೃಂದ್ರಗಳನ್ನು ಓಡಿಸಿದ.

**ಅಥಾಽಸದತ್ ಕೃತವರ್ಮಾ ರಥೇನ**
**ಧೃಷ್ಟದ್ಯುಮ್ನಂ ಸೋಽಭ್ಯಯಾತ್ ತಾವುಭೌ ಚ ।**
**ವವರ್ಷತುಃ ಶರವರ್ಷೈರಥೋಗ್ರೈ-**
**ಸ್ತತ್ರಾಕರೋದ್ ವಿರಥಂ ದ್ರೌಪದಿಸ್ತಮ್ ॥ ೬೨ ॥**

**ಅರ್ಥ** :- **ಅಥ** = ಅನಂತರ, **ಕೃತವರ್ಮಾ** = ಕೃತವರ್ಮನು, **ರಥೇನ** = ರಥದಿಂದ, **ಧೃಷ್ಟದ್ಯುಮ್ನಂ** = ದೃಷ್ಟದ್ಯುಮ್ನನನ್ನು, **ಆಸದತ್** = ಎದುರಿಸಿದ, **ಅಥ** = ಅನಂತರ, **ಸ ಚ** = ಆ ದೃಷ್ಟದ್ಯುಮ್ನನೂ, **ಅಭ್ಯಯಾತ್** = ಎದುರಿಸಿದ, **ತಾವುಭೌ** = ಅವರಿಬ್ಬರು, **ಉಗ್ರೈಃ ಶರವರ್ಷೈಃ ವವರ್ಷತುಃ** = ಭಯಂಕರವಾದ ಬಾಣಗಳ ಮಳೆ ಸುರಿಸಿದರು, **ತತ್ರ** = ಆವಾಗ, **ದ್ರೌಪದಿಃ** = ದೃಷ್ಟದ್ಯುಮ್ನನು, **ತಂ** = ಆ ಕೃತವರ್ಮನನ್ನು, **ವಿರಥಂ** = ರಥರಹಿತನನ್ನಾಗಿ, **ಅಕರೋತ್** = ಮಾಡಿದನು.

**ತಾತ್ಪರ್ಯ** :- ಅನಂತರ ಕೃತವರ್ಮ ರಥದಲ್ಲಿ ದೃಷ್ಟದ್ಯುಮ್ನನಿಗೆ ಎದುರಾದನು. ದೃಷ್ಟದ್ಯುಮ್ನನೂ ಎದುರಿಸಿದ ಅವರಿಬ್ಬರು ಉಗ್ರವಾದ ಬಾಣಗಳ ಮಳೆ ಸುರಿಸಿದರು. ದೃಷ್ಟದ್ಯುಮ್ನನು ಕೃತವರ್ಮನ ರಥವನ್ನು ನಾಶಪಡಿಸಿದ.

**ತಸ್ಮಿನ್ ಜಿತೇ ರಥವೀರೇ ಸ್ವಯಂ ತಂ**
**ದುರ್ಯೋಧನಃ ಪಾರ್ಷತಮಾಸಸಾದ ।**
**ತಂ ಭೀಮಸೇನೋ ವಿರಥಾಯುಧಂ ಚ**
**ಕೃತ್ವಾ ಬಾಣೇನಾಹನಜ್ಜತ್ರುದೇಶೇ ॥ ೬೩ ॥**

**ಅರ್ಥ** :- **ರಥವೀರೇ** = ರಥಿಕರಲ್ಲಿ ವೀರನಾದ, **ತಸ್ಮಿನ್** = ಆ ಕೃತವರ್ಮನು, **ಜಿತೇ** = ಪರಾಜಿತನಾದಾಗ, **ದುರ್ಯೋಧನಃ** = ದುರ್ಯೋಧನನು, **ಸ್ವಯಂ** = ತಾನೇ, **ಪಾರ್ಷತಂ** = ದೃಷ್ಟದ್ಯುಮ್ನನನ್ನು, **ಆಸಸಾದ** = ಎದುರಿಸಿದ, **ಭೀಮಸೇನಃ** = ಭೀಮನು, **ತಂ** = ಆ ದುರ್ಯೋಧನನನ್ನು, **ವಿರಥಾಯುಧಂ ಕೃತ್ವಾ** = ರಥ ಮತ್ತು ಆಯುಧ ರಹಿತನನ್ನಾಗಿ ಮಾಡಿ, **ಬಾಣೇನ** = ಬಾಣದಿಂದ, **ಜತ್ರುದೇಶೇ** = ಕುತ್ತಿಗೆ ಮತ್ತು ಎದೆಯ ಮಧ್ಯದಲ್ಲಿ, **ಅಹನತ್** = ಹೊಡೆದನು.

**ತಾತ್ಪರ್ಯ** :- ರಥಿಕ ಶ್ರೇಷ್ಠನಾದ ಕೃತವರ್ಮ ಸೋತಾದ ದುರ್ಯೋಧನ ತಾನೇ ದೃಷ್ಟದ್ಯುಮ್ನನನ್ನು ಎದುರಿಸಿದ. ಆಗ ಭೀಮ ದುರ್ಯೋಧನನ ರಥ ಮತ್ತು ಆಯುಧಗಳನ್ನು ನಾಶಗೊಳಿಸಿ ಅವನ ಕುತ್ತಿಗೆ ಮತ್ತು ಎದೆಗಳ ಮಧ್ಯದಲ್ಲಿ ಬಾಣದಿಂದ ಹೊಡೆದ.

**ವಿಮೂರ್ಚ್ಛಿತಂ ತಂ ರುಧಿರೌಘಮುಚ್ಚೈ-**
**ರ್ವಮಂತಮಾಶು ಸ್ವರಥೇ ನಿಧಾಯ ।**
**ಕೃಪೋ ಯಯೌ ಮಾರುತಿರ್ಧಾರ್ತರಾಷ್ಟ್ರಿಂ**
**ವ್ಯದ್ರಾವಯತ್ ಪೃತನಾಂ ಬಾಣಪೂಗೈಃ ॥ ೬೪ ॥**

**ಅರ್ಥ** :- **ವಿಮೂರ್ಚ್ಛಿತಂ** = ಮೂರ್ಛಿತನಾದ, **ಉಚ್ಚೈಃ** = ಬಹಳ, **ರುಧಿರೌಘಂ** = ರಕ್ತ ಪ್ರವಾಹವನ್ನು, **ವಮಂತಂ** = ವಮನ ಮಾಡುತ್ತಿದ್ದ, **ತಂ** = ದುರ್ಯೋಧನನನ್ನು, **ಕೃಪಃ** = ಕೃಪನು, **ಆಶು** = ಬೇಗನೇ, **ಸ್ವರಥೇ**

= ತನ್ನ ರಥದಲ್ಲಿ, **ನಿಧಾಯ** = ಏರಿಸಿಕೊಂಡು, **ಯಯೌ** = ಹೋದನು, **ಮಾರುತಿಃ** = ಭೀಮನು, **ಧಾರ್ತರಾಷ್ಟ್ರೀಂ** = ಕೌರವರಿಗೆ ಸಂಬಂಧಿಸಿದ, **ಪೃತನಾಂ** = ಸೈನ್ಯವನ್ನು, **ಬಾಣಪೂಗೈಃ** = ಬಾಣ ಸಮೂಹಗಳಿಂದ, **ವ್ಯದ್ರಾವಯತ್** = ಓಡಿಸಿದ.

**ತಾತ್ಪರ್ಯ** :- ಮೂರ್ಛೆಗೊಂಡು ರಕ್ತವಾಂತಿಯನ್ನು ಮಾಡುತ್ತಿದ್ದ ದುರ್ಯೋಧನನನ್ನು ಕೃಪ ತನ್ನ ರಥದಲ್ಲಿ ಏರಿಸಿಕೊಂಡು ಕರೆದೊಯ್ದ. ಭೀಮ ತನ್ನ ಬಾಣದ ಸಮೂಹಗಳಿಂದ ಕೌರವರ ಸೈನ್ಯವನ್ನು ಓಡಿಸಿದ.

**ಅಥೇಂದ್ರಸೂನುಃ ಕೇಶವಪ್ರೇರಿತೇನ**
**ರಥೇನ ಶತ್ರೂನ್ ವಿಧಮನ್ ಶರೌಘೈಃ ।**
**ರಥಾನ್ ರಣೇ ಪಂಚವಿಂಶತ್ಸಹಸ್ರಾನ್**
**ನಿನಾಯ ವೈವಸ್ವತಸಾದನಾಯ ॥ ೬೫ ॥**

**ಅರ್ಥ** :- **ಅಥ** = ಅನಂತರ, **ಇಂದ್ರಸೂನುಃ** = ಅರ್ಜುನನು, **ಕೇಶವ ಪ್ರೇರಿತೇನ** = ಕೃಷ್ಣನಿಂದ ಪ್ರೇರಿತವಾದ, **ರಥೇನ** = ರಥದಿಂದ, **ರಣೇ** = ಯುದ್ಧದಲ್ಲಿ, **ಶತ್ರೂನ್** = ಶತ್ರುಗಳನ್ನು, **ಶರೌಘೈಃ** = ಬಾಣ ಸಮೂಹಗಳಿಂದ, **ವಿಧಮನ್** = ಹೊಡೆಯುತ್ತಾ, **ಪಂಚವಿಂಶತ್ಸಹಸ್ರಾನ್** = ಇಪ್ಪತ್ತೈದು ಸಾವಿರ, **ರಥಾನ್** = ರಥಿಕರನ್ನು, **ವೈವಸ್ವತಸಾದನಾಯ** = ಯಮನ ಮನೆಗೆ, **ನಿನಾಯ** = ಕಳಿಸಿದ.

**ತಾತ್ಪರ್ಯ** :- ಅನಂತರ ಅರ್ಜುನ ಕೃಷ್ಣ ನಡೆಸುತ್ತಿದ್ದ ರಥದಿಂದ ಯುದ್ಧದಲ್ಲಿ ಬಾಣ ಸಮೂಹಗಳಿಂದ ಶತ್ರುಗಳನ್ನು ಹೊಡೆಯುತ್ತಾ ಇಪ್ಪತ್ತೈದು ಸಾವಿರ ರಥಿಕರನ್ನು ಯಮಲೋಕಕ್ಕೆ ಕಳಿಸಿದ.

**ತಮನ್ವಯಾದ್ ಯುಯುಧಾನಃ ಸುಧನ್ವಾ**
**ವಿದ್ರಾವಯನ್ ಧಾರ್ತರಾಷ್ಟ್ರಸ್ಯ ಸೇನಾಮ್ ।**
**ತಮಭ್ಯಯಾತ್ ಸೌಮದತ್ತಿಸ್ತಯೋಶ್ಚ**
**ಸುಯುದ್ಧಮಾಸೀದತಿಭೈರವಾಸ್ತ್ರಮ್ ॥ ೬೬ ॥**

**ಅರ್ಥ** :- **ಸುಧನ್ವಾ** = ಒಳ್ಳೆಯ ಧನುಸ್ಸುಳ್ಳ, **ಯುಯುಧಾನಃ** = ಸಾತ್ಯಕಿಯು, **ಧಾರ್ತರಾಷ್ಟ್ರಸ್ಯ** = ದುರ್ಯೋಧನನ, **ಸೇನಾಂ** = ಸೈನ್ಯವನ್ನು,

**ವಿದ್ರಾವಯನ್** = ಓಡಿಸುತ್ತಾ, **ತಂ** = ಆ ಅರ್ಜುನನನ್ನು, **ಅನ್ವಯಾತ್** = ಅನುಸರಿಸಿದ, **ಸೌಮದತ್ತಿಃ** = ಭೂರಿಶ್ರವನು, **ತಂ** = ಆ ಸಾತ್ಯಕಿಯನ್ನು, **ಅಭ್ಯಯಾತ್** = ಎದುರಿಸಿದ, **ತಯೋಶ್ಚ** = ಅವರಿಬ್ಬರಿಗೆ, **ಅತಿಭೈರವಾಸ್ತ್ರಂ** = ಅತ್ಯಂತ ಭಯಂಕರ ಅಸ್ತ್ರವುಳ್ಳ, **ಸುಯುದ್ಧಂ** = ಒಳ್ಳೆಯ ಯುದ್ಧವು, **ಆಸೀತ್** = ನಡೆಯಿತು.

**ತಾತ್ಪರ್ಯ** :- ಒಳ್ಳೆಯ ಧನುಸ್ಸನ್ನು ಧರಿಸಿ ಸಾತ್ಯಕಿ ದುರ್ಯೋಧನನ ಸೈನ್ಯವನ್ನು ಓಡಿಸುತ್ತಾ ಹಾಗೆ ಅರ್ಜುನನನ್ನು ಹಿಂಬಾಲಿಸಿದ. ಭೂರಿಶ್ರವ ಸಾತ್ಯಕಿಯನ್ನು ಎದುರಿಸಿದ. ಅವರಿಬ್ಬರೊಳಗೆ ಅತ್ಯಂತ ಭಯಂಕರವಾದ ಯುದ್ಧ ನಡೆಯಿತು.

**ಪುತ್ರಾನ್ ದಶಾಸ್ಯಾऽಶು ನಿಹತ್ಯ ವೀರಃ**
**ಸ ಸಾತ್ಯಕೇಃ ಸೌಮದತ್ತಿಃ ಸಕಾಶೇ ।**
**ಸಮರ್ಪಯಾಮಾಸ ಶರೀರದಾರಣೈಃ**
**ಶರೈರುಭೌ ತೌ ವಿರಥೌ ಚ ಚಕ್ರತುಃ ।। ೬೭ ।।**

**ಅರ್ಥ** :- **ವೀರಃ** = ವೀರನಾದ, **ಸಃ ಸೌಮದತ್ತಿಃ** = ಆ ಭೂರಿಶ್ರವನು, **ಸಾತ್ಯಕೇಃ ಸಕಾಶೇ** = ಸಾತ್ಯಕಿಯ ಮುಂದೆ, **ಅಸ್ಯ** = ಇವನ, **ದಶ** = ಹತ್ತು, **ಪುತ್ರಾನ್** = ಮಕ್ಕಳನ್ನು, **ನಿಹತ್ಯ** = ಕೊಂದು, **ಶರೀರದಾರಣೈಃ** = ಶರೀರವನ್ನು ಸೀಳಿಹಾಕುವ, **ಶರೈಃ** = ಬಾಣಗಳಿಂದ, **ಸಮರ್ದಯಾಮಾಸ** = ಹೊಡೆದನು, **ತೌ ಉಭೌ ಚ** = ಅವರಿಬ್ಬರೂ, **ವಿರಥೌ ಚಕ್ರತುಃ** = ರಥರಹಿತರನ್ನಾಗಿ ಮಾಡಿದರು.

**ತಾತ್ಪರ್ಯ** :- ಸಾತ್ಯಕಿಯ ಮುಂದೆಯೇ ವೀರನಾದ ಭೂರಿಶ್ರವ ಅವನ ಹತ್ತು ಮಕ್ಕಳನ್ನು ಕೊಂದು ಶರೀರ ನಾಶಪಡಿಸುವ ಬಾಣಗಳಿಂದ ಸಾತ್ಯಕಿಯನ್ನು ಪೀಡಿಸಿದ. ಅವರಿಬ್ಬರೂ ಪರಸ್ಪರ ರಥಗಳನ್ನು ನಾಶ ಮಾಡಿದರು.

**ಅಥಾಸಿಪಾಣಿಂ ಯುಯುಧಾನಮಾಶು**
**ಮಹಾಸಿಹಸ್ತೇನ ಚ ಸೌಮದತ್ತಿನಾ ।**
**ಆಸಾದಿತಂ ವೀಕ್ಷ್ಯ ರಥಂ ಸ್ವಕೀಯ-**
**ಮಾರೋಪಯಾಮಾಸ ಸುತೋऽನಿಲಸ್ಯ ।। ೬೮ ।।**

**ಅರ್ಥ :- ಅಥ** = ಅನಂತರ, **ಮಹಾಸಿಹಸ್ತೇನ** = ಮಹಾ ಖಡ್ಗ ಕೈಯಲ್ಲುಳ್ಳ, **ಸೌಮದತ್ತಿನಾ** = ಭೂರಿಶ್ರವನಿಂದ, **ಆಸಾದಿತಂ** = ಆಕ್ರಮಿಸಲ್ಪಡುತ್ತಿದ್ದ, **ಅಸಿಪಾಣಿಂ** = ಖಡ್ಗ ಪಾಣಿಯಾದ, **ಯುಯುಧಾನಂ** = ಸಾತ್ಯಕಿಯನ್ನು, **ವೀಕ್ಷ್ಯ** = ನೋಡಿ, **ಅನಿಲಸ್ಯ ಸುತಃ** = ಭೀಮನು, **ಸ್ವಕೀಯಂ** = ತನ್ನದಾದ, **ರಥಂ** = ರಥಕ್ಕೆ, **ಆರೋಪಯಾಮಾಸ** = ಏರಿಸಿಕೊಂಡನು.

**ತಾತ್ಪರ್ಯ** :- ಅನಂತರ ಮಹಾಖಡ್ಗಧಾರಿಯಾದ ಭೂರಿಶ್ರವ ಖಡ್ಗಧಾರಿಯಾದ ಸಾತ್ಯಕಿಯನ್ನು ಆಕ್ರಮಿಸುತ್ತಿದ್ದದ್ದನ್ನು ನೋಡಿ ಭೀಮ ಸಾತ್ಯಕಿಯನ್ನು ತನ್ನ ರಥಕ್ಕೆ ಏರಿಸಿಕೊಂಡ.

**ಸುಯೋಧನಃ ಸೌಮದತ್ತಿಂ ಸ್ವಕೀಯ-**
**ರಥೇ ವ್ಯವಸ್ಥಾಪ್ಯ ಚ ಭೀಮಸೇನಾತ್ ।**
**ಅಪಾದ್ರವದ್ ವಾಸವಿರ್ಭೀಷ್ಮಮಾಜೌ**
**ಸಮಾಸಸಾದಾಽಽಶು ಮಹೇಂದ್ರಕಲ್ಪಃ ॥ ೬೯ ॥**

**ಅರ್ಥ :- ಸುಯೋಧನಃ** = ದುರ್ಯೋಧನನು, **ಸೌಮದತ್ತಿಂ** = ಭೂರಿಶ್ರವನನ್ನು, **ಸ್ವಕೀಯರಥೇ** = ತನ್ನ ರಥದಲ್ಲಿ, **ವ್ಯವಸ್ಥಾಪ್ಯ** = ಕೂಡಿಸಿಕೊಂಡು, **ಭೀಮಸೇನಾತ್ ಅಪಾದ್ರವಚ್ಚ** = ಭೀಮನಿಗೆ ಹೆದರಿ ಓಡಿಹೋದ, **ಮಹೇಂದ್ರಕಲ್ಪಃ** = ಇಂದ್ರನಿಗೆ ಸಮಾನನಾದ, **ವಾಸವಿಃ** = ಅರ್ಜುನನು, **ಆಜೌ** = ಯುದ್ಧದಲ್ಲಿ, **ಆಶು** = ಬೇಗನೇ, **ಭೀಷ್ಮಂ** = ಭೀಷ್ಮನನ್ನು, **ಸಮಾಸಸಾದ** = ಹೊಂದಿದನು.

**ತಾತ್ಪರ್ಯ** :- ದುರ್ಯೋಧನ ಭೂರಿಶ್ರವನನ್ನು ತನ್ನ ರಥದಲ್ಲಿ ಕೂಡಿಸಿಕೊಂಡು ಭೀಮನಿಗೆ ಹೆದರಿ ಓಡಿಹೋದ. ದೇವೇಂದ್ರನಿಗೆ ಸಮಾನನಾದ ಅರ್ಜುನ ಯುದ್ಧದಲ್ಲಿ ಭೀಷ್ಮನ ಬಳಿಗೆ ಬಂದ.

**ಉಭೌ ಚ ತಾವಸ್ತ್ರವಿದಾಂ ಪ್ರಬರ್ಹೌ**
**ಶರೈರ್ಮಹಾಶೀವಿಷಸನ್ನಿಕಾಶೈಃ ।**
**ತತಕ್ಷತುರ್ನಾಕಸದಾಂ ಸಮಕ್ಷಂ**
**ಮಹಾಬಲೌ ಸಂಯತಿ ಜಾತದರ್ಪೌ ॥ ೭೦ ॥**

**ಅರ್ಥ** :- **ಸಂಯತಿ** = ಯುದ್ಧದಲ್ಲಿ, **ಜಾತದರ್ಪೌ** = ಉಂಟಾದ ದರ್ಪವುಳ್ಳ, **ಅಸ್ತ್ರವಿದಾಂ ಪ್ರಬರ್ಹೌ** = ಅಸ್ತ್ರಜ್ಞಾನಿಗಳಲ್ಲಿ ಶ್ರೇಷ್ಠರಾದ, **ಮಹಾಬಲೌ** = ಬಲಶಾಲಿಗಳಾದ, **ತೌ ಉಭೌ** = ಆ ಭೀಮಾರ್ಜುನರಿಬ್ಬರು, **ನಾಕಸದಾಂ ಸಮಕ್ಷಂ** = ದೇವತೆಗಳ ಸಮಕ್ಷಮದಲ್ಲಿ, **ಮಹಾಶೀವಿಷಸನ್ನಿಕಾಶೈಃ** = ಮಹಾಸರ್ಪ ಸದೃಶವಾದ, **ಶರೈಃ** = ಬಾಣಗಳಿಂದ, **ತತಕ್ಷತುಃ** = ಗಾಯಗೊಳಿಸಿದರು.

**ತಾತ್ಪರ್ಯ** :- ಯುದ್ಧದಲ್ಲಿ ತಮ್ಮ ಸಾಮರ್ಥ್ಯವನ್ನು ನೋಡಿ ಹೆಮ್ಮೆ ಪಡುವ ಅಸ್ತ್ರಜ್ಞಾನಿಗಳಲ್ಲಿ ಶ್ರೇಷ್ಠರಾದ ಬಲಿಷ್ಠರಾದ ಭೀಮಾರ್ಜುನರು ದೇವತೆಗಳ ಸಮಕ್ಷಮದಲ್ಲೇ ಮಹಾಸರ್ಪ ಸದೃಶವಾದ ಬಾಣಗಳಿಂದ ಹೊಡೆದುಕೊಂದು ಒಬ್ಬರನ್ನೊಬ್ಬರು ಗಾಯಗೊಳಿಸಿದರು.

**ಸ್ವಬಾಹುವೀರ್ಯೇಣ ಜಿತಃ ಸ ಭೀಷ್ಮಃ**
**ಕಿರೀಟಿನಾ ಲೋಕಮಹಾರಥೇನ ।**
**ಸೇನಾಮಪಾಹೃತ್ಯ ಯಯೌ ನಿಶಾಯಾ-**
**ಮಾಸಾದಿತಾಯಾಮಥ ಪಾಂಡವಾಶ್ಚ ॥ ೭೧ ॥**

**ಅರ್ಥ** :- **ಲೋಕಮಹಾರಥೇನ** = ಲೋಕದಲ್ಲಿ ಮಹಾರಥಿಕನಾದ, **ಕಿರೀಟಿನಾ** = ಅರ್ಜುನನಿಂದ, **ಸ್ವಬಾಹುವೀರ್ಯೇಣ** = ಅವನ ಬಾಹುಬಲದಿಂದ, **ಜಿತಃ** = ಪರಾಜಿತನಾದ, **ಸ ಭೀಷ್ಮಃ** = ಆ ಭೀಷ್ಮನು, **ಸೇನಾಂ** = ಸೈನ್ಯವನ್ನು, **ಅಪಾಹೃತ್ಯ** = ತೆಗೆದುಕೊಂಡು, **ಯಯೌ** = ಹೊರಟು ಹೋದನು, **ನಿಶಾಯಾಂ ಆಸಾದಿತಾಯಾಂ** = ರಾತ್ರಿಯಾದಾಗ, **ಪಾಂಡವಾಶ್ಚ** = ಪಾಂಡವರೂ, **ತಥೈವ ಚಕ್ರುಃ** = ಹಾಗೇ ಮಾಡಿದರು.

**ತಾತ್ಪರ್ಯ** :- ಲೋಕದಲ್ಲಿ ಮಹಾರಥನಾದ ಅರ್ಜುನ ತನ್ನ ಬಾಹುಬಲದಿಂದ ಭೀಷ್ಮನನ್ನು ಸೋಲಿಸಿದ. ಸೋತ ಭೀಷ್ಮ ತನ್ನ ಸೇನೆಯ ಜೊತೆಗೆ ಹೊರಟು ಹೋದ. ರಾತ್ರಿ ಕತ್ತರಾಗಿದ್ದರಿಂದ ಪಾಂಡವರೂ ಹಾಗೇ ಹೊರಟು ಹೋದರು.

**ತತಃ ಪರೇದ್ಯುಃ ಪುನರೇವ ಭೀಮ-**
**ಭೀಷ್ಮೌ ಪುರಸ್ಕೃತ್ಯ ಸಮೀಯತುಸ್ತೇ ।**

**ಸೇನೇ ತದಾ ಸಾರಥಿಹೀನಮಾಶು**
**ಭೀಷ್ಮಂ ಕೃತ್ವಾ ಮಾರುತಿರಭ್ಯಗಾತ್ ಪರಾನ್ ॥ ೭೨ ॥**

**ಅರ್ಥ** :- **ತತಃ** = ಅನಂತರ, **ಪರೇದ್ಯುಃ** = ಮರುದಿನ, **ಪುನರೇವ** = ಮತ್ತೆ, **ತೇ ಸೇನೇ** = ಆ ಎರಡು ಸೇನೆಗಳು, **ಭೀಮಭೀಷ್ಮೌ** = ಭೀಮಭೀಷ್ಮರನ್ನು, **ಪುರಸ್ಕೃತ್ಯ** = ಮುಂದೆ ಮಾಡಿಕೊಂಡು, **ಸಮೀಯತುಃ** = ಬಂದವು, **ತದಾ** = ಆವಾಗ, **ಮಾರುತಿಃ** = ಭೀಮನು, **ಭೀಷ್ಮಂ** = ಭೀಷ್ಮನನ್ನು, **ಆಶು** = ಬೇಗನೇ, **ಸಾರಥಿಹೀನಂ** = ಸಾರಥಿರಹಿತನನ್ನಾಗಿ, **ಕೃತ್ವಾ** = ಮಾಡಿ, **ಪರಾನ್** = ಶತ್ರುಗಳನ್ನು, **ಅಭ್ಯಯಾತ್** = ಎದುರಿಸಿದ.

**ತಾತ್ಪರ್ಯ** :- ಅನಂತರ ಮರುದಿನ ಎರಡು ಸೈನ್ಯದವರು ಮತ್ತೆ ಭೀಮ ಭೀಷ್ಮರನ್ನು ಮುಂದೆ ಮಾಡಿಕೊಂಡು ಎದುರಾದರು. ಆವಾಗ ಭೀಮನು ಭೀಷ್ಮನನ್ನು ಸಾರಥಿ ರಹಿತನನ್ನಾಗಿ ಮಾಡಿ ಶತ್ರುಗಳನ್ನು ಎದುರಿಸಿದ.

**ನಿಪಾತಿತಾಸ್ತೇನ ರಥೇಭವಾಜಿನಃ**
**ಪ್ರದುದ್ರುವುಶ್ಚಾವಶಿಷ್ಟಾಃ ಸಮಸ್ತಾಃ ।**
**ದುರ್ಯೋಧನಾದ್ಯೇಷು ಪರಾಜಿತೇಷು**
**ಭೀಷ್ಮದ್ರೋಣದ್ರೌಣಿಪುರಸ್ಸರೇಷು ॥ ೭೩ ॥**

**ಅರ್ಥ** :- **ರಥೇಭವಾಜಿನಃ** = ರಥ ಆನೆ ಕುದುರೆಗಳು, **ತೇನ** = ಆ ಭೀಮನಿಂದ, **ನಿಪಾತಿತಾಃ** = ಹತವಾದವು, **ಭೀಷ್ಮದ್ರೋಣ ದ್ರೌಣಿ ಪುರಸ್ಸರೇಷು** = ಭೀಷ್ಮ ದ್ರೋಣ ಅಶ್ವತ್ಥಾಮ ಮೊದಲಾದವರೂ, **ದುರ್ಯೋಧನಾದ್ಯೇಷು ಚ** = ದುರ್ಯೋಧನ ಮೊದಲಾದವರೂ, **ಪರಾಜಿತೇಷು** = ಸೋತಾಗ, **ಅವಶಿಷ್ಟಾಃ ಸಮಸ್ತಾಃ** = ಉಳಿದವರೆಲ್ಲರೂ, **ಪ್ರದುದ್ರುವುಃ** = ಓಡಿಹೋದರು.

**ತಾತ್ಪರ್ಯ** :- ಭೀಮ ರಥಕುದುರೆ ಆನೆ ಏರಿ ಬಂದ ವೀರರನ್ನು ಕೊಂದ ನಂತರ ಭೀಷ್ಮದ್ರೋಣ ಅಶ್ವತ್ಥಾಮ ಮೊದಲಾದವರನ್ನೂ ದುರ್ಯೋಧನ ಮೊದಲಾದವರನ್ನೂ ಸೋಲಿಸಿದ. ಅವರು ಪಲಾಯನ ಮಾಡಿದರು.

**ಮಹಾಗಜಸ್ಥೋ ಭಗದತ್ತ ಆಗಾ-**
**ದಾಯನ್ ಬಾಣಂ ಭೀಮಸೇನೇಽಮುಚಚ್ಚ ।**

**ತೇನಾತಿವಿದ್ಧೇ ಭೀಮಸೇನೇಽಸ್ಯ ಪುತ್ರ**
**ಉದ್ಯಚ್ಛಮಾನಂ ಪಿತರಂ ನಿವಾರ್ಯ ।**
**ಘಟೋತ್ಕಚೋಽಭ್ಯದ್ರವದಾಶು ವೀರಃ**
**ಸ್ವಮಾಯಯಾ ಹಸ್ತಿಚತುಷ್ಟಯಸ್ಥಃ ॥ ೭೪ ॥**

**ಅರ್ಥ** :- **ಮಹಾಗಜಸ್ಥಃ** = ಮಹಾ ಗಜವನ್ನೇರಿದ್ದ, **ಭಗದತ್ತಃ** = ಭಗದತ್ತನು, **ಆಗಾತ್** = ಬಂದನು, **ಆಯನ್** = ಬರುತ್ತಾ, **ಭೀಮಸೇನೇ** = ಭೀಮನ ಮೇಲೆ, **ಬಾಣಾನ್ ಚ** = ಬಾಣಗಳನ್ನೂ, **ಅಮುಚತ್** = ಬಿಟ್ಟನು, **ತೇನ** = ಅದರಿಂದ, **ಭೀಮಸೇನೇ** = ಭೀಮನು, **ಅತಿವಿದ್ಧೇ** = ಅತಿಯಾಗಿ ಹೊಡೆಸಿಕೊಳ್ಳುತ್ತಿರಲು, **ಸ್ವಮಾಯಯಾ** = ತನ್ನ ಮಾಯೆಯಿಂದ, **ಹಸ್ತಿಚತುಷ್ಟಯಸ್ಥಃ** = ನಾಲ್ಕು ಆನೆಗಳ ಮೇಲೆ ಕುಳಿತವನಾಗಿ, **ವೀರಃ** = ವೀರನಾದ, **ಅಸ್ಯ ಪುತ್ರಃ** = ಈ ಭೀಮನ ಮಗನಾದ, **ಘಟೋತ್ಕಚಃ** = ಘಟೋತ್ಕಚನು, **ಉದ್ಯಚ್ಛಮಾನಂ** = ಯುದ್ಧದಲ್ಲಿ ಉದ್ಯತನಾದ, **ಪಿತರಂ** = ತಂದೆಯಾದ ಭೀಮನನ್ನು, **ನಿವಾರ್ಯ** = ತಡೆದು, **ಆಶು** = ಬೇಗನೇ, **ಅಭ್ಯದ್ರವತ್** = ಎದುರಿಸಿದನು.

**ತಾತ್ಪರ್ಯ** :- ದೊಡ್ಡ ಆನೆಯನ್ನೇರಿ ಭಗದತ್ತ ಬಂದ. ಬಂದು ಭೀಮನ ಮೇಲೆ ಬಾಣ ಬಿಟ್ಟ. ಅದರಿಂದ ಭೀಮ ಹೊಡೆಸಿಕೊಳ್ಳುತ್ತಿರಲು ಇವನ ಮಗನಾದ ವೀರ ಘಟೋತ್ಕಚ ತನ್ನ ಮಾಯಾ ಶಕ್ತಿಯಿಂದ ನಾಲ್ಕು ಆನೆಗಳ ಮೇಲೆ ನಾಲ್ಕು ರೂಪದಿಂದ ಕುಳಿತು ಬಂದು ಯುದ್ಧದಲ್ಲಿ ಉದ್ಯುಕ್ತನಾದ ತಂದೆಯಾದ ಭೀಮನನ್ನು ತಡೆದು ಬೇಗನೇ ತಾನೇ ಭಗದತ್ತನಿಗೆ ಎದುರಾದ.

**ಸ ವೈಷ್ಣವಾಸ್ತ್ರಂ ಭಗದತ್ತಸಂಸ್ಥಂ**
**ವಿಜ್ಞಾಯ ವಿಷ್ಣೋರ್ವರತೋ ವಿಶೇಷತಃ ।**
**ಅಮೋಘಮನ್ಯತ್ರ ಹರೇರ್ಮರುತ್ಸುತಃ**
**ಪುತ್ರೇ ಯಾತೇ ನ ಸ್ವಯಮಭ್ಯಧಾವತ್ ॥ ೭೫ ॥**

**ಅರ್ಥ** :- **ಭಗದತ್ತ ಸಂಸ್ಥಂ** = ಭಗದತ್ತನಲ್ಲಿರುವ, **ವೈಷ್ಣವಾಸ್ತ್ರಂ** = ವೈಷ್ಣವಾಸ್ತ್ರವನ್ನು, **ವಿಷ್ಣೋಃ** = ವರಾಹನ, **ವಿಶೇಷತಃ** = ವಿಶೇಷವಾದ, **ವರತಃ** = ವರದಿಂದ, **ಹರೇಃ ಅನ್ಯತ್ರ** = ಹರಿಗಿಂತಲೂ ಬೇರೆಯವರಲ್ಲಿ,

**ಅಮೋಘಂ** = ಅಮೋಘವನ್ನಾಗಿ, **ವಿಜ್ಞಾಯ** = ತಿಳಿದು, **ಮರುತ್ಸುತಃ** = ಭೀಮನು, **ಪುತ್ರೇ** = ಮಗನಾದ ಘಟೋತ್ಕಚನು, **ಯಾತೇ** = ಹೋಗುತ್ತಿರಲು, **ಸ್ವಯಂ** = ತಾನು, **ನ ಅಭ್ಯಯಾತ್** = ಹೋಗಲಿಲ್ಲ.

**ತಾತ್ಪರ್ಯ** :- ಭಗದತ್ತನಲ್ಲಿರುವ ವೈಷ್ಣವಾಸ್ತ್ರದ ಮೇಲೆ ವರಾಹರೂಪಿ ಪರಮಾತ್ಮನ ವಿಶೇಷವಾದ ವರವಿದೆ ಪರಮಾತ್ಮನನ್ನು ಹೊರತುಪಡಿಸಿ ಬೇರೆ ಯಾರ ಮೇಲೆ ಪ್ರಯೋಗಿಸಿದರೂ ವ್ಯರ್ಥವಾಗದೆಂದು ತಿಳಿದು ಭೀಮ, ತನ್ನ ಮಗನಾದ ಘಟೋತ್ಕಚ ಹೋದಾಗ ತಾನು ಮುಂದೆ ಹೋಗಲಿಲ್ಲ.

**ಅನುಗ್ರಹಾದಭ್ಯಧಿಕಾದವಧ್ಯಂ**
**ಜಾನನ್ನಪಿ ಸ್ವಂ ವಾಸುದೇವಸ್ಯ ನಿತ್ಯಮ್ ।**
**ತದ್‌ಭಕ್ತಿವೈಶೇಷ್ಯತ ಏವ ತಸ್ಯ**
**ಸತ್ಯಂ ವಾಕ್ಯಂ ಕರ್ತುಮರಿಂ ನ ಚಾಗಾತ್ ॥ ೭೬ ॥**

**ಅರ್ಥ** :- (**ಮರುತ್ಸುತಃ** = ಭೀಮನು), **ವಾಸುದೇವಸ್ಯ** = ಪರಮಾತ್ಮನ, **ಅನುಗ್ರಹಾತ್** = ಅನುಗ್ರಹದಿಂದ, **ಸ್ವಂ** = ತನ್ನನ್ನು, **ನಿತ್ಯಂ** = ಯಾವಾಗಲೂ, **ಅವಧ್ಯಂ** = ಅವಧ್ಯನನ್ನಾಗಿ, **ಜಾನನ್ನಪಿ** = ತಿಳಿದವನಾದರೂ ಕೂಡ, **ತದ್ಭಕ್ತಿವೈಶೇಷ್ಯತಃ ಏವ** = ಆ ಪರಮಾತ್ಮನಲ್ಲಿ ಭಕ್ತ್ಯತಿಶಯದಿಂದಲೇನೇ, **ತಸ್ಯ** = ಆ ವರಾಹನ, **ವಾಕ್ಯಂ** = ಮಾತನ್ನು, **ಸತ್ಯಂ** = ಸತ್ಯವನ್ನಾಗಿ, **ಕರ್ತುಂ ಚ** = ಮಾಡಲೂ, **ಅರಿಂ** = ಶತ್ರುವನ್ನು ಕುರಿತು, **ನ ಅಗಾತ್** = ಹೋಗಲಿಲ್ಲ.

**ತಾತ್ಪರ್ಯ** :- ಪರಮಾತ್ಮನ ಅನುಗ್ರಹದಿಂದ ಯಾವಾಗಲೂ ಅವಧ್ಯನೆಂದು ತಿಳಿದರೂ ಕೂಡ ಭೀಮ, ಪರಮಾತ್ಮನಲ್ಲಿದ್ದ ಭಕ್ತ್ಯತಿಶಯದಿಂದ ಮತ್ತು ವರಾಹ ರೂಪಿ ಪರಮಾತ್ಮನ ಮಾತನ್ನು ಸತ್ಯವನ್ನಾಗಿ ಮಾಡಲು ಶತ್ರುವಾದ ಭಗದತ್ತನ ಎದುರಿಗೆ ಹೋಗಲಿಲ್ಲ.

**ಯದಾ ಸ್ವಪುತ್ರೇಣ ಜಿತೋ ಭವೇತ್ ಸ**
**ಕಿಮ್ವಾತ್ಮನೇತ್ಯೇವ ತದಾ ಪ್ರವೇತ್ತುಮ್ ।**
**ಸ ವಿಸ್ಮೃತಾಸ್ತ್ರಸ್ತು ಯದಾ ಭವೇತ**
**ತದಾ ಭೀಮೋ ಭಗದತ್ತಂ ಪ್ರಯಾತಿ ॥ ೭೭ ॥**

**ಅರ್ಥ** :- **ಯದಾ** = ಯಾವಾಗ, **ಸ್ವಪುತ್ರೇಣ** = ತನ್ನ ಮಗನಾದ ಘಟೋತ್ಕಚನಿಂದ, **ಸಃ** = ಆ ಭಗದತ್ತನು, **ಜಿತಃ ಭವೇತ್** = ಪರಾಜಿತನಾಗುವನೋ, **ತದಾ** = ಆವಾಗ, **ಸ್ವಾತ್ಮನಾ** = ತನ್ನಿಂದ, **ಜಿತಃ ಭವೇತ್** = ಪರಾಜಿತನಾಗುವನು ಎಂದು, **ಕಿಂ** = ಏನು ಹೇಳಬೇಕು ?, **ಇತ್ಯೇವ ಪ್ರವೇತ್ತುಂ** = ಎಂದು ಹೀಗೆ ತಿಳಿಸಲು, (**ಅರಿಂ** = ಭಗದತ್ತನನ್ನು ಕುರಿತು, **ನ ಅಗಾತ್** = ಹೋಗಲಿಲ್ಲ) **ಯದಾ** = ಯಾವಾಗ, **ಸಃ** = ಆ ಭಗದತ್ತನು, **ವಿಸ್ಮೃತಾಸ್ತ್ರಸ್ತು ಭವೇತ್** = ಮರೆತು ಹೋದ ಅಸ್ತ್ರವುಳ್ಳವನಾಗುವನೋ, **ತದಾ** = ಆವಾಗ, **ಭೀಮಃ** = ಭೀಮನು, **ಭಗದತ್ತಂ** = ಭಗದತ್ತನನ್ನು ಕುರಿತು, **ಪ್ರಯಾತಿ** = ಹೋಗುತ್ತಾನೆ.

**ತಾತ್ಪರ್ಯ** :- ಯಾವಾಗ ಭಗದತ್ತ ನನ್ನ ಮಗನಾದ ಘಟೋತ್ಕಚ ನಿಂದ ಸೋಲುವನೋ ಆಗ ನನ್ನಿಂದ ಸೋಲುವನು ಎಂಬುದನ್ನು ಏನು ಹೇಳಬೇಕು ? ಎಂದು ತಿಳಿಸುವುದಕ್ಕೋಸ್ಕರ ಭೀಮ ಭಗದತ್ತನನ್ನು ಎದುರಿಸಲಿಲ್ಲ. ಯಾವಾಗ ಭಗದತ್ತ ಅಸ್ತ್ರಮಂತ್ರಗಳನ್ನು ಮರೆಯುವನೋ ಆವಾಗ ಭೀಮ ಅವನನ್ನು ಎದಿರಿಸುತ್ತಾನೆ.

**ಋತೇ ಭೀಮಂ ವಾಽರ್ಜುನಂ ನಾಸ್ತ್ರಮೇಷ**
**ಪ್ರಮುಂಚತೀತ್ಯೇವ ಹಿ ವೇದ ಭೀಮಃ ॥ ೭೮ ॥**

**ಅರ್ಥ** :- **ಏಷಃ** = ಈ ಭಗದತ್ತನು, **ಭೀಮಂ** = ಭೀಮನನ್ನು, **ಅರ್ಜುನಂ ಚ** = ಅರ್ಜುನನನ್ನೂ, **ಋತೇ** = ಹೊರತುಪಡಿಸಿ, **ಅಸ್ತ್ರಂ** = ವೈಷ್ಣವಾಸ್ತ್ರವನ್ನು, **ನೈವ ಪ್ರಮುಂಚತಿ** = ಬಿಡುವುದೇ ಇಲ್ಲ, **ಇತಿ** = ಎಂದು, **ಭೀಮಃ** = ಭೀಮನು, **ವೇದ ಹಿ** = ತಿಳಿದಿದ್ದಾನಷ್ಟೇ.

**ತಾತ್ಪರ್ಯ** :- ಭಗದತ್ತ ಆ ವೈಷ್ಣವಾಸ್ತ್ರವನ್ನು ಭೀಮನನ್ನೂ ಮತ್ತು ಅರ್ಜುನನನ್ನೂ ಹೊರತುಪಡಿಸಿ ಅನ್ಯರಲ್ಲಿ ಬಿಡುವುದಿಲ್ಲ ಎಂದು ಭೀಮ ತಿಳಿದಿದ್ದ.

**ಚತುರ್ಗಜಾತ್ಮೋಪರಿಗಾತ್ಮಕಶ್ಚ**
**ಘಟೋತ್ಕಚಃ ಸುಪ್ರತೀಕಂ ಚ ತಂ ಚ ।**
**ನಾನಾಪ್ರಹಾರೈರ್ವಿತುದಂಶ್ಚಕಾರ**
**ಸಂದಿಗ್ಧಜೀವೌ ಜಗತಾಂ ಸಮಕ್ಷಮ್ ॥ ೭೯ ॥**

**ಅರ್ಥ** :- **ಘಟೋತ್ಕಚಃ** = ಘಟೋತ್ಕಚನು, **ಚತುರ್ಗಜಾತ್ಮ** = ನಾಲ್ಕು ಆನೆಗಳ ರೂಪವುಳ್ಳ ತನ್ನ, **ಉಪರಿಗಾತ್ಮಕಃ** = ಮೇಲೆ ಸಂಚರಿಸುವ ತನ್ನ ರೂಪ ಉಳ್ಳವನಾಗಿ, **ಸುಪ್ರತೀಕಂ** = ಸುಪ್ರತೀಕ ಆನೆಯನ್ನು, **ತಂ ಚ** = ಆ ಭಗದತ್ತನನ್ನೂ, **ನಾನಾ ಪ್ರಹಾರೈಃ** = ನಾನಾ ಪ್ರಹಾರಗಳಿಂದ, **ವಿತುದನ್** = ಪೀಡಿಸುತ್ತಾ, **ಜಗತಃ ಸಮಕ್ಷಂ** = ಜಗತ್ತಿನ ಸಮಕ್ಷಮದಲ್ಲಿ, **ಸಂದಿಗ್ಧಜೀವೌ ಚಕಾರ** = ಸಂದಿಗ್ಧಜೀವರನ್ನಾಗಿ ಮಾಡಿದನು.

**ತಾತ್ಪರ್ಯ** :- ಘಟೋತ್ಕಚ ನಾಲ್ಕು ಆನೆಗಳ ರೂಪವನ್ನು ಧರಿಸಿ ಅದರ ಮೇಲೆ ನಾಲ್ಕು ರೂಪಗಳಿಂದ ಅವನೇ ಕುಳಿತುಕೊಂಡು ಸುಪ್ರತೀಕ ಆನೆಯನ್ನು ಮತ್ತು ಭಗದತ್ತನನ್ನು ಅನೇಕ ವಿಧವಾದ ಪ್ರಹಾರಗಳಿಂದ ಪೀಡಿಸುತ್ತಾ ಎಲ್ಲಾ ಜನರ ಸಮಕ್ಷಮದಲ್ಲಿ ಅವರಿಬ್ಬರ ಉಳಿವನ್ನು ಸಂದಿಗ್ಧವನ್ನಾಗಿ ಮಾಡಿದ.

**ಗಜಾರ್ತನಾದಂ ತು ನಿಶಮ್ಯ ಭೀಷ್ಮ-**
**ಮುಖಾಃ ಸಮಾಪೇತುರಮುಂ ಚ ದೃಷ್ಟ್ವಾ ।**
**ಮಹಾಕಾಯಂ ಭೀಮಮಮುಷ್ಯ ಪೃಷ್ಠ-**
**ಗೋಪಂ ಚ ವಾಯ್ವಾತ್ಮಜಮತ್ರಸನ್ ಭೃಶಮ್ ॥ ೮೦ ॥**

**ಅರ್ಥ** :-**ಗಜಾರ್ತನಾದಂ ತು** = ವಿಶೇಷವಾದ ಸುಪ್ರತೀಕ ಆನೆಯ ಆರ್ತನಾದವನ್ನು, **ನಿಶಮ್ಯ** = ಕೇಳಿ, **ಭೀಷ್ಮಮುಖ್ಯಾಃ** = ಭೀಷ್ಮ ಮೊದಲಾದವರು, **ಸಮಾಪೇತುಃ** = ಬಂದರು, **ಭೃಶಂ** = ಬಹಳ, **ಭೀಮಂ** = ಭೀಕರನಾದ, **ಮಹಾಕಾಯಂ** = ಮಹಾಕಾಯನಾದ, **ಅಮುಂ** = ಈ ಘಟೋತ್ಕಚನನ್ನು, **ಚ** = ಮತ್ತು, **ಅಮುಷ್ಯ** = ಇವನ, **ಪೃಷ್ಠಗೋಪಂ** = ಹಿಂದೆ ರಕ್ಷಕನಾಗಿದ್ದ, **ವಾಯ್ವಾತ್ಮಜಂ ಚ** = ಭೀಮನನ್ನೂ, **ದೃಷ್ಟ್ವಾ** = ನೋಡಿ, **ಅತ್ರಸನ್** = ಭೀತರಾದರು.

**ತಾತ್ಪರ್ಯ** :- ಸುಪ್ರತೀಕ ಆನೆಯ ಆರ್ತನಾದವನ್ನು ಕೇಳಿಸಿಕೊಂಡು ಭೀಷ್ಮ ಮೊದಲಾದವರು ಓಡಿ ಬಂದರು. ಮಹಾದೇಹದವನಾದ ಘಟೋತ್ಕಚನನ್ನು ಮತ್ತು ಅವನ ಹಿಂದೆ ನಿಂತು ಅವನನ್ನು ರಕ್ಷಿಸುತ್ತಿದ್ದ ಭೀಮನನ್ನು ನೋಡಿ ಬಹಳ ಭಯಗ್ರಸ್ತರಾದರು.

**ತೇ ಭೀತಭೀತಾಃ ಪೃತನಾಪಹಾರಂ**
**ಕೃತ್ವಾಽಪಜಗ್ಮುಃ ಶಿಬಿರಾಯ ಶೀಘ್ರಮ್ ॥ ೮೧ ॥**

**ಅರ್ಥ** :- **ತೇ** = ಆ ಭೀಷ್ಮ ಮೊದಲಾದವರು, **ಭೀತಭೀತಾಃ** = ಬಹಳ ಭೀತರಾಗಿ, **ಶೀಘ್ರಂ** = ಬೇಗನೇ, **ಪೃತನಾಪಹಾರಂ ಕೃತ್ವಾ** = ಸೈನ್ಯವನ್ನು ಕರೆಸಿಕೊಂಡು, **ಶಿಬಿರಾಯ** = ಶಿಬಿರಕ್ಕೆ, **ಅಪಜಗ್ಮುಃ** = ಹೊರಟರು.

**ತಾತ್ಪರ್ಯ** :- ಭೀಷ್ಮ ಮೊದಲಾದವರು ಬಹಳ ಭಯಗ್ರಸ್ತರಾಗಿ ಸೈನ್ಯವನ್ನು ಹಿಂದೆ ಕರೆಸಿಕೊಂಡು ಶಿಬಿರಕ್ಕೆ ನಡೆದರು.

**ದಿನೇ ಪರೇ ಚೈವ ಪುನಃ ಸಮೇತಾಃ**
**ಪರಸ್ಪರಂ ಪಾಂಡವಕೌರವಾಸ್ತೇ ।**
**ತತ್ರಾऽಸದನ್ನಾಗಸುತಾಸಮುದ್ಭವಃ**
**ಪಾರ್ಥಾತ್ಮಜಃ ಶಾಕುನೇಯಾನ್ ಷಡೇಕಃ ॥ ೮೨ ॥**

**ಅರ್ಥ** :- **ಪರೇ ದಿನೇ** = ಮರುದಿನ, **ಪುನಃ** = ಮತ್ತೆ, **ತೇ ಪಾಂಡವ ಕೌರವಾಃ** = ಆ ಪಾಂಡವರು ಕೌರವರು, **ಪರಸ್ಪರಂ ಸಮೇತಾಃ** = ಪರಸ್ಪರ ಸೇರಿದರು, **ತತ್ರ** = ಆವಾಗ, **ನಾಗಸುತಾಸಮುದ್ಭವಃ** = ನಾಗನ ಮಗಳಾದ ಉಲೂಪಿಯಲ್ಲಿ ಹುಟ್ಟಿದ, **ಪಾರ್ಥಾತ್ಮಜಃ** = ಅರ್ಜುನನ ಮಗನಾದ ಇರಾವಂತನು, **ಏಕಃ** = ಒಬ್ಬನೇ, **ಷಟ್ ಶಾಕುನೇಯಾನ್** = ಆರು ಮಂದಿ ಶಕುನಿಯ ಸಹೋದರರನ್ನು, **ಆಸದತ್** = ಎದುರಿಸಿದನು.

**ತಾತ್ಪರ್ಯ** :- ಮರುದಿನ ಮತ್ತೆ ಪಾಂಡವರು ಕೌರವರು ಸೇರಿದರು. ಆವಾಗಲೇ ನಾಗಕನ್ಯೆಯಾದ ಉಲೂಪಿಗೆ ಅರ್ಜುನನಿಂದ ಜನಿಸಿದ ಇರಾವಂತ ಆರು ಶಕುನಿಯ ಸಹೋದರರನ್ನು ಎದುರಿಸಿದ.

**ತೈಃ ಪ್ರಾಸಹಸ್ತೈಃ ಕ್ಷತಕಾಯೋऽತಿರೂಢ-**
**ಕೋಪಃ ಸ ಖಡ್ಗೇನ ಚಕರ್ತ ತೇಷಾಮ್ ।**
**ಶಿರಾಂಸಿ ವೀರೋ ಬಲವಾನಿರಾವಾನ್**
**ಭಯಂ ದಧದ್ ಧಾರ್ತರಾಷ್ಟ್ರೇಷು ಚೋಗ್ರಮ್ ॥ ೮೩ ॥**

**ಅರ್ಥ** :- **ಪ್ರಾಸಹಸ್ತೈಃ** = ಪ್ರಾಸವೆಂಬ ಆಯುಧವುಳ್ಳ ಕೈಯುಳ್ಳ, **ತೈಃ** = ಆ ಶಕುನಿಯ ಸೋದರರಿಂದ, **ಕ್ಷತಕಾಯಃ** = ಗಾಯಗೊಂಡ ದೇಹವುಳ್ಳ, **ಅತಿರೂಢಕೋಪಃ** = ಹೆಚ್ಚಾದ ಕೋಪವುಳ್ಳ, **ಬಲವಾನ್** = ಬಲಿಷ್ಠನಾದ,

**ವೀರಃ** = ವೀರನಾದ, **ಇರಾವಾನ್** = ಇರಾವಂತನು, **ಧಾರ್ತರಾಷ್ಟ್ರೇಷು** = ಧೃತರಾಷ್ಟ್ರನ ಮಕ್ಕಳಲ್ಲಿ, **ಉಗ್ರಂ ಭಯಂ** = ಉಗ್ರವಾದ ಭಯವನ್ನು, **ದಧತ್** = ಇಡುತ್ತಾ, **ತೇಷಾಂ** = ಆ ಶಕುನಿ ಸೋದರರ, **ಶಿರಾಂಸಿ** = ತಲೆಗಳನ್ನು, **ಖಡ್ಗೇನ** = ಖಡ್ಗದಿಂದ, **ಚಕರ್ತ** = ಕತ್ತರಿಸಿದ.

**ತಾತ್ಪರ್ಯ** :- ಪ್ರಾಸವೆಂಬಂತಹ ಆಯುಧ ಹಿಡಿದುಕೊಂಡಿದ್ದ ಶಕುನಿಯ ಸೋದರರು ಇರಾವಂತನ ದೇಹವನ್ನು ಗಾಯಗೊಳಿಸಿದರು. ಆವಾಗ ಅವನ ಕೋಪದ ವೃದ್ಧಿಯಾಯಿತು. ಬಲವಂತ ವೀರನಾದ ಅವನು ಕೌರವರಿಗೆ ಮಹಾಭಯವನ್ನು ಉಂಟುಮಾಡುತ್ತಾ ಶಕುನಿಯ ಸಹೋದರರ ಶಿರಸ್ಸುಗಳನ್ನು ಕತ್ತರಿಸಿದ.

**ದೃಷ್ಟ್ವಾ ತಮುಗ್ರಂ ಧೃತರಾಷ್ಟ್ರಪುತ್ರೋ**
**ದಿದೇಶ ರಕ್ಷೋಽಲಂಬುಸನಾಮಧೇಯಮ್ ।**
**ಜಹ್ಯಾರ್ಜುನಿಂ ಕ್ಷಿಪ್ರಮಿತಿ ಸ್ಮ ತಚ್ಚ**
**ಸಮಾಸದನ್ನಾಗಸುತಾತನೂಜಮ್ ॥ ೮೪ ॥**

**ಅರ್ಥ** :- **ಉಗ್ರಂ** = ಭಯಂಕರನಾದ, **ತಂ** = ಆ ಇರಾವಂತನನ್ನು, **ದೃಷ್ಟ್ವಾ** = ನೋಡಿ, **ಧೃತರಾಷ್ಟ್ರಪುತ್ರಃ** = ಧೃತರಾಷ್ಟ್ರನ ಮಗನಾದ ದುರ್ಯೋಧನನು, **ಅಲಂಬುಸನಾಮಧೇಯಂ** = ಅಲಂಬುಸನೆಂಬ ಹೆಸರುಳ್ಳ, **ರಕ್ಷಃ** = ರಾಕ್ಷಸನನ್ನು, **ಆರ್ಜುನಿಂ** = ಆ ಇರಾವಂತನನ್ನು, **ಕ್ಷಿಪ್ರಂ** = ಬೇಗನೇ, **ಜಹಿ** = ಕೊಲ್ಲು, **ಇತಿ** = ಎಂದು, **ದಿದೇಶ** = ಆದೇಶಿಸಿದನು, **ತಚ್ಚ** = ಆ ರಾಕ್ಷಸನೂ, **ನಾಗಸುತಾತನೂಜಂ** = ನಾಗನ ಮಗಳಾದ ಉಲೂಪಿಯ ಮಗಳಾದ ಇರಾವಂತನನ್ನು, **ಸಮಾಸದತ್** = ಎದುರಿಸಿದ.

**ತಾತ್ಪರ್ಯ** :- ದುರ್ಯೋಧನ ಭಯಂಕರನಾದ ಇರಾವಂತನನ್ನು ನೋಡಿ ಅಲಂಬುಸ ಎಂಬ ರಾಕ್ಷಸನಿಗೆ, ನೀನು ಇರಾವಂತನನ್ನು ಕೊಲ್ಲು ಎಂದು ಆಜ್ಞಾಪಿಸಿದ. ಆ ಅಲಂಬುಸ ಇರಾವಂತನನ್ನು ಎದುರಿಸಿದ.

**ತಯೋರಭೂದ್ ಯುದ್ಧಮತೀವ ದಾರುಣಂ**
**ಮಾಯಾಯುಜೋರ್ವೀರ್ಯವತೋರ್ಮಹಾದ್ಭುತಮ್ ।**
**ಸಸಾದಿನೋಽಶ್ವಾನ್ ಸ ತು ರಾಕ್ಷಸೋಽಸೃಜತ್**
**ತೇ ಪಾರ್ಥಪುತ್ರಸ್ಯ ಚ ಸಾದಿನೋಽಹನನ್ ।**

**ತತಸ್ತ್ವನಂತಾಕೃತಿಮಾಪ್ತಮಾರ್ಜುನಿಂ**
**ಸುಪರ್ಣರೂಪೋऽಹನದಾಶು ರಾಕ್ಷಸಃ ॥ ೮೫ ॥**

**ಅರ್ಥ :- ಮಾಯಾಯುಜೋಃ** = ಮಾಯಾವಿಗಳಾದ, **ವೀರ್ಯವತೋಃ** = ಪರಾಕ್ರಮಶಾಲಿಗಳಾದ, **ತಯೋಃ** = ಆ ಅಲಂಬುಸ ಇರಾವಂತರಿಗೆ, **ಅತೀವ ದಾರುಣಂ** = ಅತ್ಯಂತ ಭಯಂಕರವಾದ, **ಮಹಾದ್ಭುತಂ** = ಮಹಾದ್ಭುತವಾದ, **ಯುದ್ಧಂ** = ಯುದ್ಧವು, **ಅಭೂತ್** = ಆಯಿತು, **ಸಃ ರಾಕ್ಷಸಃ** = ಆ ಅಲಂಬುಸನು, **ಸಸಾದಿನಃ** = ಸವಾರರಿಂದ ಕೂಡಿದ, **ಅಶ್ವಾನ್** = ಕುದುರೆಗಳನ್ನು, **ಅಸೃಜತ್** = ಸೃಷ್ಟಿಸಿದನು, **ತೇ** = ಅವರು, **ಪಾರ್ಥಪುತ್ರಸ್ಯ ಸಾದಿನಃ** = ಇರಾವಂತನ ಸವಾರರನ್ನು, **ಅಹನನ್** = ಕೊಂದರು, **ತತಃ** = ಅನಂತರ, **ಸುಪರ್ಣರೂಪಃ** = ಗರುಡ ರೂಪನಾದ, **ರಾಕ್ಷಸಃ** = ರಾಕ್ಷಸನು, **ಅನಂತಾಕೃತಿಂ** = ಹಾವಿನ ಆಕಾರವನ್ನು, **ಆಪ್ತಂ** = ಹೊಂದಿರುವ, **ಆರ್ಜುನಿಂ** = ಅರ್ಜುನನ ಮಗನಾದ ಇರಾವಂತನನ್ನು, **ಆಶು** = ಬೇಗನೇ, **ಅಹನತ್** = ಕೊಂದನು.

**ತಾತ್ಪರ್ಯ** :- ಮಾಯಾವಿಗಳೂ ಪರಾಕ್ರಮಿಗಳೂ ಆದ ಅಲಂಬುಸ ಇರಾವಂತರಿಗೆ ಭಯಂಕರ ಮತ್ತು ಅದ್ಭುತವಾದ ಯುದ್ಧವು ನಡೆಯಿತು. ಅಲಂಬುಸ ತನ್ನ ಮಾಯಾಶಕ್ತಿಯಿಂದ ಕುದುರೆಗಳನ್ನು ಮತ್ತು ಸವಾರರನ್ನೂ ಸೃಷ್ಟಿಸಿದನು. ಅವರು ಇರಾವಂತನ ಕುದುರೆ ಸವಾರರನ್ನು ನಾಶಗೊಳಿಸಿದರು. ಆವಾಗಲೇ ಗರುಡ ರೂಪವುಳ್ಳ ರಾಕ್ಷಸ ಇರಾವಂತನನ್ನು ಕೊಂದ.

**ಹತಂ ನಿಶಮ್ಯಾऽರ್ಜುನಿಮುಗ್ರಪೌರುಷೋ**
**ನನಾದ ಕೋಪೇನ ವೃಕೋದರಾತ್ಮಜಃ ।**
**ಚಚಾಲ ಭೂರ್ನಾನದತೋऽಸ್ಯ ರಾವತಃ**
**ಸಸಾಗರಾಗೇಂದ್ರನಗಾ ಭೃಶಂ ಮುದಾ ॥ ೮೬ ॥**

**ಅರ್ಥ :- ಉಗ್ರಪೌರುಷಃ** = ಭಯಂಕರ ಪೌರುಷವುಳ್ಳ, **ವೃಕೋದರಾತ್ಮಜಃ** = ಭೀಮನ ಮಗನಾದ ಘಟೋತ್ಕಚನು, **ಆರ್ಜುನಿಂ** = ಅರ್ಜುನನ ಮಗನಾದ ಇರಾವಂತನನ್ನು, **ಹತಂ** = ಹತನಾದವನನ್ನಾಗಿ, **ನಿಶಮ್ಯ** = ಕೇಳಿ, **ಕೋಪೇನ** = ಕೋಪದಿಂದ, **ನನಾದ** = ಗರ್ಜಿಸಿದನು,

**ನಾನದತಃ** = ಗರ್ಜಿಸುತ್ತಿರುವ, **ಅಸ್ಯ** = ಈ ಘಟೋತ್ಕಚನ, **ರಾವತಃ** = ಶಬ್ದದಿಂದ, **ತದಾ** = ಆಗ, **ಸಸಾಗರಾಗೇಂದ್ರನಗಾ** = ಸಾಗರಗಳು, ಶ್ರೇಷ್ಠ ಪರ್ವತಗಳು ಹಾಗೂ ಮರಗಳಿಂದ ಕೂಡಿದ, **ಭೂಃ** = ಭೂಮಿಯು, **ಭೃಶಂ** = ಬಹಳವಾಗಿ, **ತದಾ** = ಆಗ, **ಚಚಾಲ** = ಕಂಪಿಸಿತು.

**ತಾತ್ಪರ್ಯ** :- ಮಹಾಪೌರುಷಶಾಲಿಯಾದ ಘಟೋತ್ಕಚ ಇರಾವಂತ ಹತನಾದ ವಿಷಯವನ್ನು ಕೇಳಿ ಕೋಪದಿಂದ ಗರ್ಜಿಸಿದ. ಆಗ ಆ ಶಬ್ದದಿಂದ ಸಾಗರ ವೃಕ್ಷ ಬೆಟ್ಟಗಳಿಂದ ಕೂಡಿದ ಭೂಮಿಯು ಕಂಪಿಸಿತು.

**ಅಲಂಬುಸಸ್ತಂ ಪ್ರಸಮೀಕ್ಷ್ಯ ಮಾರುತೇಃ**
**ಸುತಂ ಬಲಾಢ್ಯಂ ಭಯತಃ ಪರಾದ್ರವತ್ ।**
**ಪರಾದ್ರವನ್ ಧಾರ್ತರಾಷ್ಟ್ರಸ್ಯ ಸೇನಾಃ**
**ಸರ್ವಾಸ್ತಮಾರಾಥ ಸುಯೋಧನೋ ನೃಪಃ ॥ ೮೭ ॥**

**ಅರ್ಥ** :- **ಅಲಂಬುಸಃ** = ಅಲಂಬುಸನು, **ಬಲಾಢ್ಯಂ** = ಬಲಾಢ್ಯನಾದ, **ತಂ** = ಆ, **ಮಾರುತೇಃ ಸುತಂ** = ಘಟೋತ್ಕಚನನ್ನು, **ಪ್ರಸಮೀಕ್ಷ್ಯ** = ನೋಡಿ, **ಭಯತಃ** = ಭಯದಿಂದ, **ಪರಾದ್ರವತ್** = ಓಡಿಹೋದನು, **ಧಾರ್ತರಾಷ್ಟ್ರಸ್ಯ** = ದುರ್ಯೋಧನನ, **ಸರ್ವಾಃ** = ಎಲ್ಲಾ, **ಸೇನಾಃ** = ಸೈನ್ಯಗಳು, **ಪರಾದ್ರವನ್** = ಓಡಿಹೋದವು, **ನೃಪಃ** = ರಾಜನಾದ, **ಸುಯೋಧನಃ** = ದುರ್ಯೋಧನನು, **ತಂ** = ಆ ಘಟೋತ್ಕಚನನ್ನು, **ಆರ** = ಎದುರಿಸಿದ.

**ತಾತ್ಪರ್ಯ** :- ಅಲಂಬುಸ ಬಲಶಾಲಿಯಾದ ಘಟೋತ್ಕಚನನ್ನು ನೋಡಿ ಭಯದಿಂದ ಓಡಿಹೋದ. ದುರ್ಯೋಧನನ ಸೈನ್ಯವೆಲ್ಲಾ ಓಡಿಹೋಯಿತು. ಆವಾಗ ದುರ್ಯೋಧನ ಘಟೋತ್ಕಚನ ಜೊತೆಗೆ ಯುದ್ಧ ಮಾಡಿದ.

**ಸ ಭೀಮಪುತ್ರಸ್ಯ ಜಘಾನ ಮಂತ್ರಿಣೋ**
**ಮಹಾಬಲಾಂಶ್ಚತುರೋಽನ್ಯಾಂಸ್ತಥೈವ ।**
**ಹತಾವಶೇಷೇಷು ಚ ವಿದ್ರವತ್ಸು**
**ಘಟೋತ್ಕಚೋಽಭ್ಯಾಹನದಾಶು ತಂ ನೃಪಮ್ ॥ ೮೮ ॥**

**ಅರ್ಥ** :- **ಸಃ** = ಆ ದುರ್ಯೋಧನನು, **ಭೀಮಪುತ್ರಸ್ಯ** = ಘಟೋತ್ಕಚನ, **ಚತುರಃ** = ನಾಲ್ಕು ಮಂದಿ, **ಮಹಾಬಲಾನ್** = ಮಹಾ ಬಲಿಷ್ಠರಾದ, **ಮಂತ್ರಿಣಃ** = ಮಂತ್ರಿಗಳನ್ನು, **ತಥಾ** = ಹಾಗೆಯೇ, **ಅನ್ಯಾನ್ ಚ** = ಬೇರೆಯವರನ್ನೂ, **ಜಘಾನ** = ಕೊಂದನು, **ಹತಾವಶೇಷೇಷು** = ಸತ್ತು ಉಳಿದವರು, **ವಿದ್ರವತ್ಸು** = ಓಡಿಹೋಗುತ್ತಿರಲು, **ಘಟೋತ್ಕಚಃ** = ಘಟೋತ್ಕಚನು, **ಆಶು** = ಬೇಗನೇ, **ತಂ ನೃಪಂ** = ಆ ದುರ್ಯೋಧನನನ್ನು ಕುರಿತು, **ಅಭ್ಯಯಾತ್** = ಹೋದನು.

**ತಾತ್ಪರ್ಯ** :- ದುರ್ಯೋಧನ ಬಲಿಷ್ಠರಾದ ಘಟೋತ್ಕಚನ ನಾಲ್ಕು ಮಂತ್ರಿಗಳನ್ನು ಮತ್ತು ಇನ್ನಿತರರನ್ನೂ ಕೊಂದ. ಇನ್ನುಳಿದವರು ಓಡಿಹೋದಾಗ ಘಟೋತ್ಕಚ ದುರ್ಯೋಧನನನ್ನು ಎದುರಿಸಿದ.

**ಸ ಪೀಡ್ಯಮಾನೋ ಯುಧಿ ತೇನ ರಕ್ಷಸಾ**
**ಪ್ರವೇಶಯಾಮಾಸ ಶರಂ ಘಟೋತ್ಕಚೇ ।**
**ದೃಢಾಹತಸ್ತೇನ ತದಾ ಬಲೀಯಸಾ**
**ಘಟೋತ್ಕಚಃ ಪ್ರವ್ಯಥಿತೇಂದ್ರಿಯೋ ಭೃಶಮ್ ।**
**ತಸ್ಥೌ ಕಥಂಚಿದ್ ಭುವಿ ಪಾತ್ಯಮಾನಃ**
**ಪುನಃ ಶರಾನಪ್ಯಸೃಜತ್ ಸುಯೋಧನೇ ॥ ೮೯ ॥**

**ಅರ್ಥ** :- **ರಕ್ಷಸಾ** = ರಾಕ್ಷಸನಾದ, **ತೇನ** = ಆ ಘಟೋತ್ಕಚನಿಂದ, **ಸಃ** = ಆ ದುರ್ಯೋಧನನು, **ಪೀಡ್ಯಮಾನಃ** = ಪೀಡಿತನಾಗಿ, **ಘಟೋತ್ಕಚೇ** = ಘಟೋತ್ಕಚನ ದೇಹದೊಳಗೆ, **ಶರಂ** = ಬಾಣವನ್ನು, **ಪ್ರವೇಶಯಾಮಾಸ** = ಪ್ರವೇಶ ಮಾಡಿಸಿದ, **ಬಲೀಯಸಾ** = ಬಲಿಷ್ಠನಾದ, **ತೇನ** = ಆ ದುರ್ಯೋಧನನಿಂದ, **ದೃಢಾಹತಃ** = ಬಹಳ ಹೊಡೆಸಿಕೊಂಡ, **ಪ್ರವ್ಯಥಿತೇಂದ್ರಿಯಃ** = ಬಹಳ ಗಾಯಗೊಂಡ ಇಂದ್ರಿಯವುಳ್ಳ, **ಘಟೋತ್ಕಚಃ** = ಘಟೋತ್ಕಚನು, **ಭುವಿ** = ನೆಲದ ಮೇಲೆ, **ಪಾತ್ಯಮಾನಃ** = ಬೀಳಿಸಲ್ಪಟ್ಟವನಾಗಿ, **ಕಥಂಚಿತ್** = ಕಷ್ಟದಿಂದ, **ತಸ್ಥೌ** = ನಿಂತನು, **ಪುನಃ** = ಮತ್ತೆ, **ಸುಯೋಧನೇ** = ದುರ್ಯೋಧನನ ಮೇಲೆ, **ಶರಾನಪಿ** = ಬಾಣಗಳನ್ನೂ, **ಅಸೃಜತ್** = ಎಸೆದನು.

**ತಾತ್ಪರ್ಯ** :- ಘಟೋತ್ಕಚನಿಂದ ಯುದ್ಧದಲ್ಲಿ ಪೀಡಿತನಾದ ದುರ್ಯೋಧನ ಘಟೋತ್ಕಚನ ಮೇಲೆ ಬಾಣಗಳನ್ನು ಬಿಟ್ಟ. ದುರ್ಯೋಧನನಿಂದ ಬಹಳ ಹೊಡೆಸಿಕೊಂಡ ಘಟೋತ್ಕಚನ ಇಂದ್ರಿಯಗಳು ಗಾಯಗೊಂಡವು. ನೆಲದ ಮೇಲೆ ದುರ್ಯೋಧನನಿಂದ ಬೀಳಿಸಲ್ಪಟ್ಟರೂ ಹೇಗೋ ಕಷ್ಟದಿಂದ ಎದ್ದು ನಿಂತ. ಪುನಃ ದುರ್ಯೋಧನನ ಮೇಲೆ ಬಾಣಗಳನ್ನು ಬಿಟ್ಟ.

**ಚಿರಂ ಪ್ರಯುದ್ಧೌ ನೃಪರಾಕ್ಷಸಾಧಿಪೌ**
**ಪರಸ್ಪರಾಜೇಯತಮೌ ರಣಾಜಿರೇ ।**
**ದ್ರೋಣಾದಯೋ ವೀಕ್ಷ್ಯ ರಿರಕ್ಷಿಷಂತಃ**
**ಸುಯೋಧನಂ ಪ್ರಾಪುರಮಿತ್ರಸಾಹಾಃ ॥ ೯೦ ॥**

**ಅರ್ಥ** :- **ನೃಪರಾಕ್ಷಸಾಧಿಪೌ** = ದುರ್ಯೋಧನ ಘಟೋತ್ಕಚರು, **ರಣಾಜಿರೇ** = ರಣರಂಗದಲ್ಲಿ, **ಪರಸ್ಪರಾಜೇಯತನೂ** = ಪರಸ್ಪರ ಅಜೇಯವಾದ ಶರೀರವುಳ್ಳವರಾಗಿ, **ಚಿರಂ** = ಬಹಳ ಕಾಲ, **ಪ್ರಯುದ್ಧೌ** = ಯುದ್ಧ ಮಾಡಿದರು, **ಅಮಿತ್ರಸಾಹಾಃ** = ಶತ್ರುಗಳನ್ನು ಗೆಲ್ಲಲು ಸಮರ್ಥರಾದ, **ದ್ರೋಣಾದಯಃ** = ದ್ರೋಣ ಮೊದಲಾದವರು, **ವೀಕ್ಷ್ಯ** = ನೋಡಿ, **ರಿರಕ್ಷಿಷಂತಃ** = ರಕ್ಷಿಸಲು ಬಯಸಿದವರಾಗಿ, **ಸುಯೋಧನಂ** = ದುರ್ಯೋಧನನನ್ನು, **ಪ್ರಾಪುಃ** = ಹೊಂದಿದರು.

**ತಾತ್ಪರ್ಯ** :- ದುರ್ಯೋಧನ ಘಟೋತ್ಕಚರು ರಣರಂಗದಲ್ಲಿ ಬಹಳ ಸಮಯ ಪರಸ್ಪರ ಸೋಲದೆ ಯುದ್ಧ ಮಾಡಿದರು. ಶತ್ರುಗಳನ್ನು ಗೆಲ್ಲುವ ಸಾಮರ್ಥ್ಯವುಳ್ಳ ದ್ರೋಣ ಮೊದಲಾದವರು ನೋಡಿ ದುರ್ಯೋಧನನನ್ನು ರಕ್ಷಿಸಲು ಬಯಸಿ ದುರ್ಯೋಧನನ ಕಡೆಗೆ ಬಂದರು.

**ಸ ದ್ರೋಣಶಲ್ಯೌ ಗುರುಪುತ್ರಗೌತಮೌ**
**ಭೂರಿಶ್ರವಃಕೃತವರ್ಮಾದಿಕಾಂಶ್ಚ ।**
**ವವರ್ಷ ಬಾಣೈರ್ಗಗನಂ ಸಮಾಶ್ರಿತೋ**
**ಘಟೋತ್ಕಚಃ ಸ್ಥೂಲತಮೈಃ ಸುವೇಗೈಃ ॥ ೯೧ ॥**

**ಅರ್ಥ** :- **ಗಗನಂ ಸಮಾಶ್ರಿತಃ** = ಆಕಾಶವನ್ನು ಆಶ್ರಯಿಸಿದ, **ಸಃ** = ಆ, **ಘಟೋತ್ಕಚಃ** = ಘಟೋತ್ಕಚನು, **ದ್ರೋಣಶಲ್ಯೌ** = ದ್ರೋಣ ಶಲ್ಯರನ್ನು,

**ಗುರುಪುತ್ರಗೌತಮೌ** = ಅಶ್ವತ್ಥಾಮ ಕೃಪರನ್ನು, **ಭೂರಿಶ್ರವಃ ಕೃತವರ್ಮಾದಿಕಾಂಶ್ಚ** = ಭೂರಿಶ್ರವ ಕೃತವರ್ಮ ಮೊದಲಾದವರನ್ನು, **ಸ್ಥೂಲತಮೈಃ** = ಬಹಳ ದೊಡ್ಡದಾದ, **ಸುವೇಗೈಃ** = ಬಹಳ ವೇಗವುಳ್ಳ, **ಬಾಣೈಃ** = ಬಾಣಗಳಿಂದ, **ವವರ್ಷ** = ಮಳೆಗರೆದ.

**ತಾತ್ಪರ್ಯ** :- ಆಕಾಶದಲ್ಲಿ ನಿಂತಿದ್ದ ಘಟೋತ್ಕಚ ದ್ರೋಣ ಶಲ್ಯ ಅಶ್ವತ್ಥಾಮ ಕೃಪ ಭೂರಿಶ್ರವ ಕೃತವರ್ಮ ಮೊದಲಾದವರ ಮೇಲೆ ಬಹಳ ದೊಡ್ಡದಾದ ವೇಗವುಳ್ಳ ಬಾಣಗಳ ಮಳೆ ಸುರಿಸಿದ.

**ತಮೇಕಮಗ್ರ್ಯೈ ರಥಿಭಿಃ ಪರಿಷ್ಕೃತಂ**
**ನಿರೀಕ್ಷ್ಯ ಭೀಮೋಽಭ್ಯಗಮತ್ ಸಮಸ್ತಾನ್ ।**
**ದ್ರೋಣೋಽತ್ರ ಭೀಮಪ್ರಹಿತೈಃ ಶರೋತ್ತಮೈಃ**
**ಸುಪೀಡಿತಃ ಪ್ರಾಪ್ತಮೂರ್ಛಃ ಪಪಾತ ॥ ೯೨ ॥**

**ಅರ್ಥ** :- **ಅಗ್ರ್ಯೈಃ** = ಶ್ರೇಷ್ಠರಾದ, **ರಥಿಭಿಃ** = ರಥಿಕರಿಂದ, **ಪರಿಷ್ಕೃತಂ** = ಸುತ್ತುವರೆಯಲ್ಪಟ್ಟ, **ತಂ ಏಕಂ** = ಘಟೋತ್ಕಚನೊಬ್ಬನನ್ನು, **ನಿರೀಕ್ಷ್ಯ** = ನೋಡಿ, **ಭೀಮಃ** = ಭೀಮನು, **ಸಮಸ್ತಾನ್** = ಎಲ್ಲರನ್ನೂ, **ಅಭ್ಯಯಾತ್** = ಎದುರಿಸಿದ, **ಅತ್ರ** = ಈ ಸಂದರ್ಭದಲ್ಲಿ, **ಭೀಮಪ್ರಹಿತೈಃ** = ಭೀಮನಿಂದ ಬಿಡಲ್ಪಟ್ಟ, **ಶರೋತ್ತಮೈಃ** = ಉತ್ತಮ ಬಾಣಗಳಿಂದ, **ಸುಪೀಡಿತಃ** = ಬಹಳ ಪೀಡಿತನಾದ, **ದ್ರೋಣಃ** = ದ್ರೋಣನು, **ಪ್ರಾಪ್ತಮೂರ್ಛಃ** = ಹೊಂದಲ್ಪಟ್ಟ, ಮೂರ್ಛೆಯುಳ್ಳವನಾಗಿ, **ಪಪಾತ** = ಬಿದ್ದನು.

**ತಾತ್ಪರ್ಯ** :- ಘಟೋತ್ಕಚನೊಬ್ಬನನ್ನು ಅನೇಕ ರಥಿಕರು ಸುತ್ತುವರೆದದ್ದನ್ನು ನೋಡಿ ಭೀಮ ಎಲ್ಲರನ್ನೂ ಆಕ್ರಮಿಸಿದ. ಆವಾಗ ಭೀಮ ಬಿಟ್ಟ ಬಾಣಗಳಿಂದ ದ್ರೋಣ ಮೂರ್ಛೆ ಬಿದ್ದ.

**ದ್ರೌಣಿಂ ಕೃಪಾದ್ಯಾನ್ ಸಸುಯೋಧನಾಂಶ್ಚ**
**ಚಕಾರ ಭೀಮೋ ವಿರಥಾನ್ ಕ್ಷಣೇನ ।**
**ನಿವಾರ್ಯಮಾಣಾಂಸ್ತು ವೃಕೋದರೇಣ**
**ಘಟೋತ್ಕಚಸ್ತಾನ್ ಪ್ರವವರ್ಷ ಸಾಯಕೈಃ ॥ ೯೩ ॥**

**ಅರ್ಥ** :- **ಭೀಮಃ** = ಭೀಮನು, **ಸಸುಯೋಧನಾನ್** = ದುರ್ಯೋಧನನಿಂದ ಕೂಡಿದ, **ಕೃಪಾದ್ಯಾನ್** = ಕೃಪಮೊದಲಾದವರನ್ನು, **ದ್ರೌಣಿಂ ಚ** = ಅಶ್ವತ್ಥಾಮನನ್ನೂ, **ಕ್ಷಣೇನ** = ಕ್ಷಣದಲ್ಲಿ, **ವಿರಥಾನ್** = ರಥರಹಿತರನ್ನಾಗಿ, **ಚಕಾರ** = ಮಾಡಿದನು, **ವೃಕೋದರೇಣ** = ಭೀಮನಿಂದ, **ನಿವಾರ್ಯ ಮಾಣಾನ್** = ತಡೆಯಲ್ಪಡುತ್ತಿದ್ದ, **ತಾನ್** = ಅವರನ್ನು, **ಘಟೋತ್ಕಚಃ** = ಘಟೋತ್ಕಚನು, **ಸಾಯಕೈಃ** = ಬಾಣಗಳಿಂದ, **ಪ್ರವವರ್ಷ** = ಮಳೆಗರೆದ.

**ತಾತ್ಪರ್ಯ** :- ಭೀಮ, ದುರ್ಯೋಧನ ಅಶ್ವತ್ಥಾಮ ಕೃಪ ಮೊದಲಾದವರ ರಥಗಳನ್ನು ನಾಶಪಡಿಸಿದ. ಭೀಮನಿಂದ ತಡೆಯಲ್ಪಡುತ್ತಿದ್ದ ಅವರ ಮೇಲೆ ಘಟೋತ್ಕಚ ಬಾಣಗಳ ಮಳೆ ಸುರಿಸಿದ.

**ತೇನಾಂಬರಸ್ಥೇನ ತರುಪ್ರಮಾಣೈ-**
**ರಭ್ಯರ್ದಿತಾಃ ಕುರವಃ ಸಾಯಕೌಘೈಃ ।**
**ಭೂಮೌ ಚ ಭೀಮೇನ ಶರೌಘಪೀಡಿತಾಃ**
**ಪೇತುರ್ನೇದುಃ ಪ್ರಾದ್ರವಂಶ್ಚಾತಿಭೀತಾಃ ॥ ೯೪ ॥**

**ಅರ್ಥ** :- **ಅಂಬರಸ್ಥೇನ** = ಆಕಾಶದಲ್ಲಿ ನಿಂತಿದ್ದ, **ತೇನ** = ಆ ಘಟೋತ್ಕಚನಿಂದ, **ತರುಪ್ರಮಾಣೈಃ** = ಮರಗಳ ಗಾತ್ರವುಳ್ಳ, **ಸಾಯಕೌಘೈಃ** = ಬಾಣಗಳ ಸಮೂಹಗಳಿಂದ, **ಅಭ್ಯರ್ದಿತಾಃ** = ಪೀಡಿತರಾದ, **ಕುರವಃ** = ಕೌರವರು, **ಭೂಮೌ** = ಭೂಮಿಯಲ್ಲಿ, **ಭೀಮೇನ ಚ** = ಭೀಮನಿಂದಲೂ, **ಶರೌಘಪೀಡಿತಾಃ** = ಬಾಣಸಮೂಹಗಳಿಂದ ಪೀಡಿತರಾಗಿ, **ಪೇತುಃ** = ಬಿದ್ದರು, **ನೇದುಃ** = ಕೂಗಿದರು, **ಚ** = ಮತ್ತು, **ಅತಿಭೀತಾಃ** = ಬಹಳ ಭೀತರಾಗಿ, **ಪ್ರಾದ್ರವನ್** = ಓಡಿಹೋದರು.

**ತಾತ್ಪರ್ಯ** :- ಆಕಾಶದಲ್ಲಿ ನಿಂತಿದ್ದ ಘಟೋತ್ಕಚನ ಮರಗಳ ಗಾತ್ರದ ಬಾಣಸಮೂಹಗಳಿಂದ ಮತ್ತೂ ನೆಲದ ಮೇಲೆ ನಿಂತಿದ್ದ ಭೀಮನ ಬಾಣ ಸಮೂಹಗಳಿಂದ ಪೀಡಿತರಾದ ಕೌರವರು ನೆಲದ ಮೇಲೆ ಬಿದ್ದರು. ಕೂಗಿದರು ಬಹಳ ಭಯಗ್ರಸ್ತರಾಗಿ ಓಡಿಹೋದರು.

**ಸರ್ವಾಂಶ್ಚ ತಾನ್ ಶಿಬಿರಂ ಪ್ರಾಪಯಿತ್ವಾ**
**ವಿನಾ ಭೀಷ್ಮಂ ಕೌರವಾನ್ ಭೀಮಸೇನಃ ।**

**ಘಟೋತ್ಕಚಶ್ಚಾನದತಾಂ ಮಹಾಸ್ವನೌ**
**ನಾದೇನ ಲೋಕಾನಭಿಪೂರಯಂತೌ ॥ ೯೫ ॥**

**ಅರ್ಥ :- ಭೀಮಸೇನಃ** = ಭೀಮನು, **ಘಟೋತ್ಕಚಶ್ಚ** = ಘಟೋತ್ಕಚನೂ, **ಭೀಷ್ಮಂ ವಿನಾ** = ಭೀಷ್ಮನನ್ನು ಹೊರತುಪಡಿಸಿ, **ತಾನ್ ಸರ್ವಾನ್** = ಅವರೆಲ್ಲರನ್ನೂ, **ಶಿಬಿರಂ** = ಶಿಬಿರಕ್ಕೆ, **ಪ್ರಾಪಯಿತ್ವಾ** = ಕಳುಹಿಸಿ, **ನಾದೇನ** = ಗರ್ಜನೆಯಿಂದ, **ಲೋಕಾನ್** = ಲೋಕಗಳನ್ನು, **ಅಭಿಪೂರಯಂತೌ** = ತುಂಬಿಸುತ್ತಾ, **ಮಹಾಸ್ವನೌ ಅನದತಾಂ** = ಮಹಾಧ್ವನಿಯುಳ್ಳವರಾಗಿ ಗರ್ಜಿಸಿದರು.

**ತಾತ್ಪರ್ಯ :-** ಭೀಮ ಘಟೋತ್ಕಚರು ಭೀಷ್ಮನನ್ನು ಹೊರತುಪಡಿಸಿ ಉಳಿದವರೆಲ್ಲರನ್ನೂ ಶಿಬಿರಕ್ಕೆ ಓಡಿಸಿ ಗಟ್ಟಿಯಾದ ಧ್ವನಿಯಿಂದ ಗರ್ಜಿಸಿದರು. ಆ ಗರ್ಜನೆಯ ಧ್ವನಿಯಿಂದ ಲೋಕಗಳೆಲ್ಲಾ ತುಂಬಿದವು.

**ದುರ್ಯೋಧನೋಽಥ ಸ್ವಜನೈಃ ಸಮೇತಃ**
**ಪುನಃ ಪ್ರಾಯಾದ್ ರಣಭೂಮಿಂ ಸ ಭೀಷ್ಮಮ್ ।**
**ಜಯೋಪಾಯಂ ಭೈಮಸೇನೇರಪೃಚ್ಛತ್**
**ಸ್ವಸ್ಯೈವ ಸ ಪ್ರಾಹ ನ ತಂ ವ್ರಜೇತಿ ॥ ೯೬ ॥**

**ಅರ್ಥ :- ಅಥ** = ಅನಂತರ, **ಸಃ ದುರ್ಯೋಧನಃ** = ಆ ದುರ್ಯೋಧನನು, **ಸ್ವಜನೈಃ** = ತಮ್ಮವರಿಂದ, **ಸಮೇತಃ** = ಕೂಡಿದವನಾಗಿ, **ಪುನಃ** = ಮತ್ತೆ, **ರಣಭೂಮಿಂ** = ಯುದ್ಧ ಭೂಮಿಯನ್ನು ಕುರಿತು, **ಪ್ರಾಯಾತ್** = ಹೋದನು, **ಭೀಷ್ಮಂ** = ಭೀಷ್ಮರನ್ನು, **ಸ್ವಾಸ್ಯೈವ** = ತನಗೇ, **ಭೈಮಸೇನೇಃ** = ಘಟೋತ್ಕಚನ, **ಜಯೋಪಾಯಂ** = ಗೆಲ್ಲುವ ಉಪಾಯವನ್ನು, **ಅಪೃಚ್ಛತ್** = ಕೇಳಿದನು, **ಸಃ** = ಆ ಭೀಷ್ಮನು, **ತಂ** = ಆ ಘಟೋತ್ಕಚನನ್ನು ಕುರಿತು, **ನ ವ್ರಜ** = ಹೋಗಬೇಡ, **ಇತಿ** = ಎಂದು, **ಪ್ರಾಹ** = ಹೇಳಿದನು.

**ತಾತ್ಪರ್ಯ :-** ಅನಂತರ ದುರ್ಯೋಧನ ತಮ್ಮವರೊಡನೆ ರಣರಂಗಕ್ಕೆ ಆಗಮಿಸಿದ. ಅಲ್ಲಿ ಭೀಷ್ಮರಿಗೆ ಘಟೋತ್ಕಚನನ್ನು ಗೆಲ್ಲುವ ಉಪಾಯವನ್ನು ಕೇಳಿದ. ಭೀಷ್ಮರು, ಅವನ ಬಳಿ ನೀನು ಹೋಗಬೇಡ ಎಂದ.

**ಪ್ರಾಗ್ಜ್ಯೋತಿಷಂ ಚೈವ ಘಟೋತ್ಕಚಾಯ**
**ಸಂಪ್ರೇಷಯಾಮಾಸ ಸುರಾಪಗಾಸುತಃ ।**
**ಸ ಪ್ರಾಪ್ಯ ಹೈಡಿಂಬಮಯೋಧಯದ್ ಬಲೀ**
**ಸ ಚಾರ್ದಯಾಮಾಸ ಸಕುಂಜರಂ ತಮ್ ॥ ೯೭ ॥**

**ಅರ್ಥ** :- **ಸುರಾಪಗಾಸುತಃ** = ಗಂಗಾಸುತನಾದ ಭೀಷ್ಮನು, **ಘಟೋತ್ಕಚಾಯ** = ಘಟೋತ್ಕಚನ ಕಡೆಗೆ, **ಪ್ರಾಗ್ಜ್ಯೋತಿಷಂ** = ಭಗದತ್ತನನ್ನು, **ಸಂಪ್ರೇಷಯಾಮಾಸ** = ಕಳುಹಿಸಿದನು, **ಬಲೀ** = ಬಲಿಷ್ಠನಾದ, **ಸಃ** = ಆ ಭಗದತ್ತನು, **ಹೈಡಿಂಬಂ** = ಘಟೋತ್ಕಚನನ್ನು, **ಪ್ರಾಪ್ಯ** = ಹೊಂದಿ, **ಅಯೋಧಯತ್** = ಯುದ್ಧ ಮಾಡಿದ, **ಸಚ** = ಆ ಘಟೋತ್ಕಚನಾದರೂ, **ಸಕುಂಜರಂ** = ಆನೆಯಿಂದ ಕೂಡಿದ, **ತಂ** = ಆ ಭಗದತ್ತನನ್ನು, **ಅರ್ದಯಾಮಾಸ** = ಪೀಡಿಸಿದನು.

**ತಾತ್ಪರ್ಯ** :- ಭೀಷ್ಮ ಘಟೋತ್ಕಚನ ಜೊತೆಗೆ ಹೋರಾಡಲು ಭಗದತ್ತನನ್ನು ಕಳುಹಿಸಿದ. ಬಲಶಾಲಿಯಾದ ಭಗದತ್ತ ಘಟೋತ್ಕಚನ ಹತ್ತಿರ ಬಂದು ಯುದ್ಧ ಮಾಡಿದ. ಘಟೋತ್ಕಚ ಆ ಭಗದತ್ತನನ್ನೂ ಅವನ ಆನೆಯನ್ನೂ ಪೀಡಿಸಿದ.

**ತೇನಾರ್ದಿತಃ ಪ್ರಾಹಿಣೋಚ್ಛೂಲಮಸ್ಮೈ**
**ವಿಯತ್ಯಭಿಪ್ಲುತ್ಯ ತದಾ ಘಟೋತ್ಕಚಃ ।**
**ಪ್ರಗೃಹ್ಯ ಶೂಲಂ ಪ್ರಬಭಂಜ ಜಾನು-**
**ಮಾರೋಪ್ಯ ದೇವಾ ಜಹೃಷುಸ್ತದೀಕ್ಷ್ಯ ॥ ೯೮ ॥**

**ಅರ್ಥ** :- **ತೇನ** = ಆ ಘಟೋತ್ಕಚನಿಂದ, **ಅರ್ದಿತಃ** = ಪೀಡಿತನಾದ ಭಗದತ್ತ, **ಅಸ್ಮೈ** = ಈ ಘಟೋತ್ಕಚನಿಗೆ, **ಶೂಲಂ** = ಶೂಲವನ್ನು, **ಪ್ರಾಹಿಣೋತ್** = ಎಸೆದ, **ತದಾ** = ಆವಾಗ, **ಘಟೋತ್ಕಚಃ** = ಘಟೋತ್ಕಚನು, **ಶೂಲಂ** = ಶೂಲವನ್ನು, **ಪ್ರಗೃಹ್ಯ** = ಹಿಡಿದುಕೊಂಡು, **ವಿಯತಿ** = ಆಕಾಶದಲ್ಲಿ, **ಅವಪ್ಲುತ್ಯ** = ಹಾರಿ, **ಜಾನುನಿ ಆರೋಪ್ಯ** = ಮೊಣಕಾಲ ಮೇಲೆ ಏರಿಸಿ, **ಪ್ರಬಭಂಜ** = ಮುರಿದನು, **ದೇವಾಃ** = ದೇವತೆಗಳು, **ತತ್** = ಅದನ್ನು, **ಈಕ್ಷ್ಯ** = ನೋಡಿ, **ಜಹೃಷುಃ** = ಸಂತೋಷಪಟ್ಟರು.

**ತಾತ್ಪರ್ಯ** :- ಘಟೋತ್ಕಚನಿಂದ ಪೀಡೆಗೊಳಗಾದ ಭಗದತ್ತ ಅವನ ಮೇಲೆ ಶೂಲವನ್ನು ಎಸೆದ. ಆವಾಗ ಘಟೋತ್ಕಚ ಶೂಲವನ್ನು ಹಿಡಿದು ಆಕಾಶಕ್ಕೆ ಹಾರಿದ. ಅಲ್ಲಿ ಮೊಣಕಾಲಿನ ಮೇಲೆ ಶೂಲವನ್ನಿಟ್ಟುಕೊಂಡು ಮುರಿದ. ಅದನ್ನು ನೋಡಿ ದೇವತೆಗಳು ಸಂತೋಷಪಟ್ಟರು.

**ತದಾ ಸ ತಸ್ಯೈವ ಪದಾನುಗಾನ್ ನೃಪೋ**
**ಜಘಾನ ತಂ ಮಾರುತಿರಭ್ಯಯಾದ್ ರಣೇ ।**
**ಸ ಪ್ರಾಹಿಣೋದ್ ಭೀಮಸೇನಾಯ ವೀರೋ**
**ಗಜಂ ತಮಸ್ತಂಭಯದಾಶು ಸಾಯಕೈಃ ।। ೯೯ ।।**

**ಅರ್ಥ** :- **ತದಾ** = ಆವಾಗ, **ಸಃ ನೃಪಃ** = ಆ ಭಗದತ್ತನು, **ತಸ್ಯೈವ** = ಆ ಘಟೋತ್ಕಚನ, **ಪದಾನುಗಾನ್** = ಪರಿವಾರದವರನ್ನು, **ಜಘಾನ** = ಕೊಂದನು, **ಮಾರುತಿಃ** = ಭೀಮನು, **ರಣೇ** = ಯುದ್ಧದಲ್ಲಿ, **ತಂ** = ಆ ಭಗದತ್ತನನ್ನು, **ಅಭ್ಯಯಾತ್** = ಎದುರಿಸಿದನು, **ವೀರಃ** = ವೀರನಾದ ಭಗದತ್ತನು, **ಭೀಮಸೇನಾಯ** = ಭೀಮನನ್ನು ಪೀಡಿಸಲು, **ಗಜಂ** = ಆನೆಯನ್ನು, **ಪ್ರಾಹಿಣೋತ್** = ಕಳುಹಿಸಿದ, **ಆಶು** = ಬೇಗನೇ, **ಸಃ** = ಆ ಭೀಮನು, **ಸಾಯಕೈಃ** = ಬಾಣಗಳಿಂದ, **ತಂ** = ಆ ಆನೆಯನ್ನು, **ಅಸ್ತಂಭಯತ್** = ಸ್ತಂಭನಗೊಳಿಸಿದ.

**ತಾತ್ಪರ್ಯ** :- ಆವಾಗ ಭಗದತ್ತ ಘಟೋತ್ಕಚನ ಅನುಚರರನ್ನು ಕೊಂದ. ಭೀಮ ಯುದ್ಧದಲ್ಲಿ ಭಗದತ್ತನನ್ನು ಎದುರಿಸಿದ. ಭಗದತ್ತ ಭೀಮನ ಕಡೆಗೆ ಆನೆಯನ್ನು ಕರೆದು ಒಯ್ದ. ಕೂಡಲೇ ಭೀಮ ಬಾಣಗಳಿಂದ ಆನೆಯನ್ನು ಸ್ತಂಭನಗೊಳಿಸಿದ.

**ಸಂಸ್ತಂಭಿತೇ ಬಾಣವರೈಸ್ತು ನಾಗೇ**
**ಭೀಮಸ್ಯಾಶ್ವಾನ್ ಸಾಯಕೈರಾರ್ದಯತ್ ಸಃ ।**
**ಸೋಽಭ್ಯರ್ದಿತಾಶ್ವೋಽಥ ಗದಾಂ ಪ್ರಗೃಹ್ಯ**
**ಹಂತುಂ ನೃಪಂ ತಂ ಸಗಜಂ ಸಮಾಸದತ್ ।। ೧೦೦ ।।**

**ಅರ್ಥ** :- **ಬಾಣವರೈಃ** = ಶ್ರೇಷ್ಠವಾದ ಬಾಣಗಳಿಂದ, **ನಾಗೇ** = ಆನೆಯೂ, **ಸಂಸ್ತಂಭಿತೇ** = ತಡೆಯಲ್ಪಟ್ಟಾಗ, **ಸಃ** = ಆ ಭಗದತ್ತ, **ಭೀಮಸ್ಯ**

= ಭೀಮನ, **ಅಶ್ವಾನ್** = ಕುದುರೆಗಳನ್ನು, **ಸಾಯಕೈಃ** = ಬಾಣಗಳಿಂದ, **ಆರ್ದಯತ್** = ಪೀಡಿಸಿದ, **ಅಥ** = ಅನಂತರ, **ಅಭ್ಯರ್ದಿತಾಶ್ವಃ** = ಪೀಡಿತವಾದ ಕುದುರೆಗಳುಳ್ಳ, **ಸಃ** = ಆ ಭೀಮನು, **ಗದಾಂ** = ಗದೆಯನ್ನು, **ಪ್ರಗೃಹ್ಯ** = ಹಿಡಿದುಕೊಂಡು, **ಸಗಜಂ** = ಆನೆಯಿಂದ ಕೂಡದ, **ತಂ** = ಆ, **ನೃಪಂ** = ಭಗದತ್ತನನ್ನು, **ಹಂತುಂ** = ಕೊಲ್ಲಲು, **ಸಮಾಸದತ್** = ಸಮೀಪಿಸಿದನು.

**ತಾತ್ಪರ್ಯ** :- ಶ್ರೇಷವಾದ ಬಾಣಗಳಿಂದ ಭೀಮ ಭಗದತ್ತನ ಸುಪ್ರತೀಕ ಆನೆಯನ್ನು ಹೊಡೆದು ತಡೆದಾಗ ಭಗದತ್ತ ಭೀಮನ ಕುದುರೆಗಳನ್ನು ಬಾಣಗಳಿಂದ ಪೀಡಿಸಿದ. ತನ್ನ ಕುದುರೆಗಳಿಗೆ ಪೀಡೆ ಉಂಟಾದದ್ದನ್ನು ನೋಡಿ ಭೀಮ ಗದೆಯನ್ನು ಹಿಡಿದುಕೊಂಡು ಭಗದತ್ತನನ್ನು ಮತ್ತು ಸುಪ್ರತೀಕ ಆನೆಯನ್ನು ಕೊಲ್ಲಲು ಹೊರಟ.

**ಸ ಹಂತುಕಾಮೇನ ರುಷಾऽಭಿಪನ್ನೋ**
**ಭೀಮೇನ ರಾಜಾ ಪುರತಃ ಪೃಷ್ಠತಶ್ಚ ।**
**ಕೃಷ್ಣೇನಾಸ್ತ್ರಂ ವೈಷ್ಣವಂ ತದ್ ಗೃಹೀತುಂ**
**ಸಹಾರ್ಜುನೇನಾಪಯಯೌ ಸುಭೀತಃ ॥ ೧೦೧ ॥**

**ಅರ್ಥ** :- **ಪುರತಃ** = ಎದುರುಗಡೆಯಿಂದ, **ಹಂತುಕಾಮೇನ** = ಕೊಲ್ಲಲು ಇಚ್ಛೆಯುಳ್ಳ, **ಭೀಮೇನ** = ಭೀಮನಿಂದ, **ಚ** = ಮತ್ತು, **ಪೃಷ್ಠತಃ** = ಹಿಂಭಾಗದಿಂದ, **ತತ್** = ಆ, **ವೈಷ್ಣವಂ ಅಸ್ತ್ರಂ** = ವೈಷ್ಣವಾಸ್ತ್ರವನ್ನು, **ಗ್ರಹೀತುಂ** = ಅಪಹರಿಸಲು, **ಸಹಾರ್ಜುನೇನ** = ಅರ್ಜುನನಿಂದ ಕೂಡಿದ, **ಕೃಷ್ಣೇನ** = ಕೃಷ್ಣನಿಂದ, **ರುಷಾ** = ಕೋಪದಿಂದ, **ಅಭಿಪನ್ನಃ** = ಹೊಂದಲ್ಪಟ್ಟ, **ಸಃ** = ಆ ಭಗದತ್ತನು, **ಸುಭೀತಃ** = ಬಹಳ ಭಯಗೊಂಡವನಾಗಿ, **ಅಪಯಯೌ** = ಓಡಿಹೋದನು.

**ತಾತ್ಪರ್ಯ** :- ಮುಂದಿನಿಂದ ತನ್ನನ್ನು ಕೊಲ್ಲಲು ಬರುತ್ತಿದ್ದ ಭೀಮನನ್ನು ಮತ್ತು ಹಿಂಭಾಗದಿಂದ ವೈಷ್ಣವಾಸ್ತ್ರವನ್ನು ಅಪಹರಿಸಲು ಬರುತ್ತಿದ್ದ ಕೃಷ್ಣಾರ್ಜುನರನ್ನು ನೋಡಿ ಭಗದತ್ತ ಭೀತನಾಗಿ ಓಡಿಹೋದ.

**ತಸ್ಮಿನ್ ಗತೇ ಭೀಮಸೇನಾರ್ಜುನಾಭ್ಯಾಂ**
**ವಿದ್ರಾವಿತೇ ರಾಜಸಂಘೇ ಸಮಸ್ತೇ ।**
**ಭೀಷ್ಮಃ ಸೇನಾಮಪಹೃತ್ಯಾಪಯಾತೋ**
**ದುರ್ಯೋಧನಸ್ತಂ ನಿಶಿ ಚೋಪಜಗ್ಮಿವಾನ್ ॥ ೧೦೨ ॥**

**ಅರ್ಥ :- ತಸ್ಮಿನ್** = ಆ ಭಗದತ್ತನು, **ಗತೇ** = ಓಡಿಹೋಗುತ್ತಿರಲು, **ಭೀಮಾರ್ಜುನಾಭ್ಯಾಂ** = ಭೀಮಾರ್ಜುನರಿಂದ, **ಸಮಸ್ತೇ ರಾಜಸಂಘೇ** = ಸಮಸ್ತ ರಾಜಸಮೂಹವು, **ವಿದ್ರಾವಿತೇ** = ಓಡಿಸಲ್ಪಡುತ್ತಿರಲು, **ಭೀಷ್ಮಃ** = ಭೀಷ್ಮನು, **ಸೇನಾಂ** = ಸೈನ್ಯವನ್ನು, **ಅಪಹೃತ್ಯ** = ಅಪಹರಿಸಿ (ಹಿಂದೆ ಕರೆಸಿಕೊಂಡು), **ಅಪಯಾತಃ** = ಹೊರಟು ಹೋದನು, **ದುರ್ಯೋಧನಃ** = ದುರ್ಯೋಧನನು, **ನಿಶಿ** = ರಾತ್ರಿಯಲ್ಲಿ, **ತಂ ಉಪಜಗ್ಮಿವಾನ್ ಚ** = ಅವನನ್ನು ಕುರಿತು, ಹೋದ.

**ತಾತ್ಪರ್ಯ :-** ಭಗದತ್ತ ಓಡಿಹೋದಾಗ, ಭೀಮಾರ್ಜುನರು ಸಮಸ್ತರಾಜರಾಜ ಸಮೂಹನ್ನು ಓಡಿಸಿದಾಗ ಭೀಷ್ಮ ಸೇನೆಯನ್ನು ಕರೆದುಕೊಂಡು ಹೊರಟುಹೋದ. ದುರ್ಯೋಧನ ರಾತ್ರಿಯಲ್ಲಿ ಭೀಷ್ಮನ ಬಳಿಗೆ ಬಂದನು.

**ಸಂಶ್ರಾವಿತಃ ಕ್ರೂರವಚಃ ಸ ತೇನ**
**ಚಕ್ರೇ ಸತ್ಯಂ ಮೃತ್ಯುಭಯಂ ವಿಹಾಯ ।**
**ಶಕ್ತ್ಯಾ ಹನಿಷ್ಯಾಮಿ ಪರಾನಿತಿ ಸ್ಮ**
**ಚಕ್ರೇ ಚ ತತ್ ಕರ್ಮ ತಥಾ ಪರೇದ್ಯುಃ ॥ ೧೦೩ ॥**

**ಅರ್ಥ :- ತೇನ** = ಆ ದುರ್ಯೋಧನನಿಂದ, **ಕ್ರೂರವಚಃ** = ಕಠೋರ ಮಾತುಗಳನ್ನು, **ಸಂಶ್ರಾವಿತಃ** = ಕೇಳಿಸಿಕೊಳ್ಳಲ್ಪಟ್ಟ, **ಸಃ** = ಆ ಭೀಷ್ಮನು, **ಮೃತ್ಯುಭಯಂ** = ಮರಣದ ಭಯವನ್ನು, **ವಿಹಾಯ** = ತ್ಯಜಿಸಿ, **ಶಕ್ತ್ಯಾ** = ಶಕ್ತಿಯಿಂದ, **ಪರಾನ್** = ಶತ್ರುಗಳನ್ನು, **ಹನಿಷ್ಯಾಮಿ** = ಕೊಲ್ಲುತ್ತೇನೆ, **ಇತಿ** = ಎಂದು, **ಪ್ರತಿಜ್ಞಾಂ** = ಪ್ರಮಾಣವನ್ನು, **ಚಕ್ರೇ** = ಮಾಡಿದನು, **ಪರೇದ್ಯುಃ** = ಮರುದಿನ, **ತಥಾ** = ಹಾಗೆಯೇ, **ತತ್ ಕರ್ಮ ಚ** = ಆ ಕಾರ್ಯವನ್ನೂ, **ಚಕ್ರೇ** = ಮಾಡಿದನು.

**ತಾತ್ಪರ್ಯ** :- ದುರ್ಯೋಧನನಾಡಿದ ಕಠೋರ ನುಡಿಗಳನ್ನು ಕೇಳಿಸಿಕೊಂಡ ಭೀಷ್ಮ ಪೂರ್ಣಶಕ್ತಿಯಿಂದ ಶತ್ರುಗಳನ್ನು ಕೊಲ್ಲುವೆ ಎಂದು ಪ್ರತಿಜ್ಞೆ ಮಾಡಿದ. ಮರುದಿನ ಭೀಷ್ಮ ಹಾಗೆಯೇ ಆ ಕಾರ್ಯವನ್ನು ನಿರ್ವಹಿಸಿದ.

**ತಂ ಶಕ್ತಿತೋ ಜುಗುಪುರ್ಧಾರ್ತರಾಷ್ಟ್ರಾಃ**
**ತೇನಾರ್ದಿತಾಶ್ಚೇದಿಪಾಂಚಾಲಮತ್ಸ್ಯಾಃ ।**
**ಪರಾದ್ರವನ್ ಭೀಷ್ಮಬಾಣೋರುಭೀತಾ**
**ಸಿಂಹಾರ್ದಿತಾಃ ಕ್ಷುದ್ರಮೃಗಾ ಇವಾಽಽರ್ತಾಃ ॥ ೧೦೪ ॥**

**ಅರ್ಥ** :- **ಧಾರ್ತರಾಷ್ಟ್ರಾಃ** = ಕೌರವರು, **ಶಕ್ತಿತಃ** = ಶಕ್ತಿಯಿಂದ, **ತಂ** = ಆ ಭೀಷ್ಮನನ್ನು, **ಜುಗುಪುಃ** = ರಕ್ಷಿಸಿದರು, **ತೇನ** = ಆ ಭೀಷ್ಮನಿಂದ, **ಅರ್ದಿತಾಃ** = ಪೀಡಿತರಾದ, **ಚೇದಿಪಾಂಚಾಲಮತ್ಸ್ಯಾಃ** = ಚೇದಿ ಪಾಂಚಾಲ ಮತ್ಸ್ಯದೇಶಗಳ ಜನರು, **ಭೀಷ್ಮಬಾಣೋರುಭೀತಾಃ** = ಭೀಷ್ಮನ ಬಾಣಗಳಿಂದ ಬಹಳ ಭಯಪಟ್ಟವರಾಗಿ, **ಸಿಂಹಾರ್ದಿತಾಃ** = ಸಿಂಹದಿಂದ ಪೀಡಿತವಾದ, **ಕ್ಷುದ್ರಮೃಗಾ ಇವ** = ಕ್ಷುದ್ರ ಮೃಗಗಳಂತೆ, **ಆರ್ತಾಃ** = ಪೀಡಿತರಾಗಿ, **ಪರಾದ್ರವನ್** = ಓಡಿಹೋದರು.

**ತಾತ್ಪರ್ಯ** :- ಕೌರವರು ತಮ್ಮ ಪೂರ್ಣ ಶಕ್ತಿಯಿಂದ ಭೀಷ್ಮನನ್ನು ಸಂರಕ್ಷಿಸಿದರು. ಭೀಷ್ಮನ ಬಾಣಗಳಿಂದ ಪೀಡಿತರಾದ ಚೇದಿ ಮತ್ಸ್ಯ ಪಾಂಚಾಲ ದೇಶಗಳ ರಾಜರು ಅವನ ಬಾಣಗಳಿಂದ ಬಹಳ ಭೀತರಾಗಿ ಸಿಂಹಗಳಿಂದ ಪೀಡಿತವಾದ ಕ್ಷುದ್ರಮೃಗಗಳು ಆರ್ತವಾಗಿ ಓಡಿಹೋಗುವಂತೆ ಆರ್ತರಾಗಿ ಓಡಿಹೋದರು.

**ಸಂಸ್ಥಾಪ್ಯ ತಾನ್ ಭೀಷ್ಮಮಭಿಪ್ರಯಾಂತ-**
**ಮಲಂಬುಸೋಽವಾರಯತ್ ಪಾರ್ಥಸೂನುಮ್ ।**
**ವಿಜಿತ್ಯ ತಂ ಕೇಶವಭಾಗಿನೇಯೋ**
**ಯಯೌ ಭೀಷ್ಮಂ ಧಾರ್ತರಾಷ್ಟ್ರೋಽಸಮುಮಾರ ॥ ೧೦೫ ॥**

**ಅರ್ಥ** :- **ಅಲಂಬುಸಃ** = ಅಲಂಬುಸ ರಾಕ್ಷಸ, **ತಾನ್** = ಅವರನ್ನು, **ಸಂಸ್ಥಾಪ್ಯ** = ತಡೆದು, **ಭೀಷ್ಮಂ** = ಭೀಷ್ಮನನ್ನು ಕುರಿತು, **ಅಭಿಪ್ರಯಾಂತಂ** =

ಹೋಗುತ್ತಿದ್ದ, **ಪಾರ್ಥಸೂನುಂ** = ಅರ್ಜುನನ ಮಗನಾದ ಅಭಿಮನ್ಯುವನ್ನು, **ಅವಾರಯತ್** = ತಡೆದನು, **ಕೇಶವಭಾಗಿನೇಯಃ** = ಕೃಷ್ಣನ ತಂಗಿಯಾದ ಸುಭದ್ರೆಯ ಮಗನಾದ ಅಭಿಮನ್ಯುವು, **ತಂ** = ಆ ಅಲಂಬುಸನನ್ನು, **ವಿಜಿತ್ಯ** = ಗೆದ್ದು, **ಭೀಷ್ಮಂ** = ಭೀಷ್ಮನನ್ನು ಕುರಿತು, **ಯಯೌ** = ಹೋದನು, **ಧಾರ್ತರಾಷ್ಟ್ರಃ** = ಧೃತರಾಷ್ಟ್ರನ ಮಗನಾದ ದುರ್ಯೋಧನನು, **ಅಮುಂ** = ಈ ಅಭಿಮನ್ಯುವನ್ನು, **ಆರ** = ಎದುರಿಸಿದ.

**ತಾತ್ಪರ್ಯ** :- ಅಲಂಬುಸನು ಓಡಿಹೋಗುತ್ತಿದ್ದ ಚೇದಿ ಪಾಂಚಾಲ ಮತ್ಸ್ಯದೇಶದ ಜನರನ್ನು ತಡೆದು ಭೀಷ್ಮನ ಕಡೆಗೆ ಹೋಗುತ್ತಿದ್ದ ಅಭಿಮನ್ಯುವನ್ನು ತಡೆದ. ಅಭಿಮನ್ಯು ಅಲಂಬುಸನನ್ನು ಸೋಲಿಸಿ ಭೀಷ್ಮನ ಕಡೆಗೆ ಹೋದ. ಆವಾಗ ದುರ್ಯೋಧನ ಅವನನ್ನು ಎದುರಿಸಿದ.

**ತದ್ ಯುದ್ಧಮಾಸೀನ್ನೃಪಪಾರ್ಥಪುತ್ರಯೋ-**
**ರ್ವಿಚಿತ್ರಮತ್ಯದ್ಭುತಮುಗ್ರರೂಪಮ್ ।**
**ಸಮಂ ಚಿರಂ ತತ್ರ ಧನುಶ್ಚಕರ್ತ**
**ಧ್ವಜಂ ಚ ರಾಜಾ ಸಹಸಾಽಭಿಮನ್ಯೋಃ ॥ ೧೦೬ ॥**

**ಅರ್ಥ** :- **ನೃಪಪಾರ್ಥ ಪುತ್ರಯೋಃ** = ದುರ್ಯೋಧನ ಮತ್ತು ಅರ್ಜುನನ ಮಗನಾದ ಅಭಿಮನ್ಯುಗಳಿಗೆ, **ವಿಚಿತ್ರಂ** = ವಿಚಿತ್ರವಾದ, **ಅತ್ಯದ್ಭುತಂ** = ಬಹಳ ಅದ್ಭುತವಾದ, **ಉಗ್ರಂ** = ಭಯಂಕರವಾದ, **ತತ್** = ಆ, **ಯುದ್ಧಂ** = ಯುದ್ಧವು, **ಚಿರಂ** = ಬಹಳ ಕಾಲದವರೆಗೆ, **ಸಮಂ** = ಸಮಾನವಾಗಿ, **ಆಸೀತ್** = ಇತ್ತು, **ತತ್ರ** = ಆ ಯುದ್ಧದಲ್ಲಿ, **ರಾಜಾ** = ರಾಜನಾದ ದುರ್ಯೋಧನನು, **ಸಹಸಾ** = ಬಹಳ ಪ್ರಯಾಸದಿಂದ, **ಅಭಿಮನ್ಯೋಃ** = ಅಭಿಮನ್ಯುವಿನ, **ಧ್ವಜಂ ಚ** = ಧ್ವಜವನ್ನೂ, **ಧನುಶ್ಚ** = ಬಿಲ್ಲನ್ನೂ, **ಚಕರ್ತ** = ಕತ್ತರಿಸಿದ.

**ತಾತ್ಪರ್ಯ** :- ದುರ್ಯೋಧನ ಅಭಿಮನ್ಯುಗಳಿಗೆ ವಿಚಿತ್ರವಾದ ಅತ್ಯದ್ಭುತವಾದ ಭಯಂಕರವಾದ ಯುದ್ಧವು ಬಹಳ ಕಾಲದವರೆಗೆ ಸಮಾನವಾಗಿಯೇ ನಡೆಯಿತು. ಅನಂತರ ದುರ್ಯೋಧನ ಅಭಿಮನ್ಯುವಿನ ಧ್ವಜವನ್ನೂ ಧನುಸ್ಸನ್ನೂ ಬಹಳ ಪ್ರಯಾಸದಿಂದ ಕತ್ತರಿಸಿದ.

**ಅಥೈನಮುಗ್ರೈಶ್ಚ ಶರೈರ್ವವರ್ಷ**
**ಸೂತಂ ಚ ತಸ್ಯಾಽಶು ಜಘಾನ ವೀರಃ ।**
**ತದಾಽಽಸದದ್ ಭೀಮಸೇನೋ ನೃಪಂ ತಂ**
**ಜಘಾನ ಚಾಶ್ವಾನ್ ಧೃತರಾಷ್ಟ್ರಜಸ್ಯ ॥ ೧೦೭ ॥**

**ಅರ್ಥ** :- **ಅಥ** = ಅನಂತರ, **ವೀರಃ** = ವೀರನಾದ ದುರ್ಯೋಧನನು, **ಏನಂ** = ಈ ಅಭಿಮನ್ಯುವನ್ನು, **ಉಗ್ರೈಃ** = ಭಯಂಕರವಾದ, **ಶರೈಃ** = ಬಾಣಗಳಿಂದ, **ವವರ್ಷ** = ಮಳೆಗರೆದನು, **ತಸ್ಯ** = ಆ ಅಭಿಮನ್ಯುವಿನ, **ಸೂತಂ ಚ** = ಸಾರಥಿಯನ್ನೂ, **ಆಶು** = ಬೇಗನೇ, **ಜಘಾನ** = ಕೊಂದನು, **ತದಾ** = ಆವಾಗ, **ಭೀಮಸೇನಃ** = ಭೀಮನು, **ತಂ** = ಆ, **ನೃಪಂ** = ರಾಜನಾದ ದುರ್ಯೋಧನನನ್ನು, **ಆಸದತ್** = ಹೊಂದಿದನು, **ಚ** = ಮತ್ತು, **ಧೃತರಾಷ್ಟ್ರಜಸ್ಯ** = ಧೃತರಾಷ್ಟ್ರನ ಮಗನಾದ ದುರ್ಯೋಧನನ, **ಅಶ್ವಾನ್** = ಕುದುರೆಗಳನ್ನು, **ಜಘಾನ** = ಕೊಂದನು.

**ತಾತ್ಪರ್ಯ** :- ಅನಂತರ ದುರ್ಯೋಧನ ಉಗ್ರವಾದ ಬಾಣಗಳ ಮಳೆಯನ್ನು ಅಭಿಮನ್ಯುವಿನ ಮೇಲೆ ಸುರಿಸಿದ ಮತ್ತೂ ಅಭಿಮನ್ಯುವಿನ ಸಾರಥಿಯನ್ನೂ ಕೊಂದ. ಆವಾಗ ಭೀಮ ದುರ್ಯೋಧನನನ್ನು ಎದುರಿಸಿದ ಮತ್ತು ಅವನ ಕುದುರೆಗಳನ್ನೂ ಕೊಂದ.

**ದ್ರೋಣೋ ದ್ರೌಣಿರ್ಭಗದತ್ತಃ ಕೃಪಶ್ಚ**
**ಸಚಿತ್ರಸೇನಾ ಅಭ್ಯಯುರ್ಭೀಮಸೇನಮ್ ।**
**ಸರ್ವಾಂಶ್ಚ ತಾನ್ ವಿಮುಖೀಕೃತ್ಯ ಭೀಮಃ**
**ಸ ಚಿತ್ರಸೇನಾಯ ಗದಾಂ ಸಮಾದದೇ ॥ ೧೦೮ ॥**

**ಅರ್ಥ** :- **ದ್ರೋಣಃ** = ದ್ರೋಣನು, **ದ್ರೌಣಿಃ** = ದ್ರೋಣನ ಮಗನಾದ ಅಶ್ವತ್ಥಾಮನು, **ಭಗದತ್ತಃ** = ಭಗದತ್ತನೂ, **ಕೃಪಶ್ಚ** = ಕೃಪನೂ ಇವರೆಲ್ಲರೂ, **ಸಚಿತ್ರಸೇನಾಃ** = ಚಿತ್ರಸೇನನಿಂದ ಕೂಡಿದವರಾಗಿ, **ಭೀಮಂ** = ಭೀಮನನ್ನು, **ಅಭ್ಯಯುಃ** = ಆಕ್ರಮಿಸಿದರು, **ಸಃ ಭೀಮಃ** = ಆ ಭೀಮನು, **ತಾನ್ ಸರ್ವಾನ್** = ಅವರೆಲ್ಲರನ್ನೂ, **ವಿಮುಖೀಕೃತ್ಯ** = ಹಿಂತಿರುಗಿಸಿ, **ಚಿತ್ರಸೇನಾಯ** = ಚಿತ್ರಸೇನನನ್ನು ಕೊಲ್ಲಲು, **ಗದಾಂ ಚ** = ಗದೆಯನ್ನೂ, **ಸಮಾದದೇ** = ಎಸೆದನು.

**ತಾತ್ಪರ್ಯ** :- ದ್ರೋಣ ಅಶ್ವತ್ಥಾಮ ಭಗದತ್ತ ಕೃಪ ಮತ್ತು ಚಿತ್ರಸೇನ ಭೀಮನನ್ನು ಎದುರಿಸಿದರು. ಅವರೆಲ್ಲರನ್ನೂ ಓಡಿಸಿ ಭೀಮ ಚಿತ್ರಸೇನನ ಮೇಲೆ ಗದೆಯನ್ನು ಎಸೆದ.

**ತಾಮುದ್ಯತಾಂ ವೀಕ್ಷ್ಯ ಪರಾದ್ರವಂಸ್ತೇ**
**ಸ ಚಿತ್ರಸೇನಶ್ಚ ರಥಾದವಪ್ಲುತಃ ।**
**ಸಂಚೂರ್ಣಿತೋ ಗದಯಾ ತದ್ರಥಶ್ಚ**
**ತಜ್ಜೀವನೇನೋದ್ಧೃಷಿತಾಶ್ಚ ಕೌರವಾಃ ॥ ೧೦೯ ॥**

**ಅರ್ಥ** :- **ತೇ** = ಅವರು, **ಉದ್ಯತಾಂ** = ಬರುತ್ತಿದ್ದ, **ತಾಂ** = ಆ ಗದೆಯನ್ನು, **ವೀಕ್ಷ್ಯ** = ನೋಡಿ, **ಪರಾದ್ರವನ್** = ಓಡಿ ಹೋದರು, **ಸಃ** = ಆ, **ಚಿತ್ರಸೇನಃ** = ಚಿತ್ರಸೇನನು, **ರಥಾತ್** = ರಥದಿಂದ, **ಅವಪ್ಲುತಃ** = ಹಾರಿದನು, **ತದ್ರಥಃ** = ಆ ಚಿತ್ರಸೇನನ ರಥವು, **ಗದಯಾ** = ಗದೆಯಿಂದ, **ಸಂಚೂರ್ಣಿತಶ್ಚ** = ಪುಡಿಮಾಡಲ್ಪಟ್ಟಿತು, **ತಜ್ಜೀವನೇನ** = ಆ ಚಿತ್ರಸೇನ ಬದುಕಿಕೊಂಡದ್ದರಿಂದ, **ಕೌರವಾಶ್ಚ** = ಕೌರವರೂ, **ಉದ್ಧೃಷಿತಾಃ** = ಸಂತೋಷಪಟ್ಟರು.

**ತಾತ್ಪರ್ಯ** :- ದ್ರೋಣ ಮೊದಲಾದವರು ಆಕಾಶದಲ್ಲಿ ಬರುತ್ತಿದ್ದ ಗದೆಯನ್ನು ನೋಡಿ ಓಡಿಹೋದರು. ಚಿತ್ರಸೇನ ತನ್ನ ರಥದಿಂದ ಕೆಳಗೆ ಹಾರಿದ. ಆ ಗದೆಯಿಂದ ರಥ ಪುಡಿಯಾಯಿತು. ಕೌರವರು ಚಿತ್ರಸೇನ ಬದುಕಿದನೆಂದು ಆನಂದ ಭರಿತರಾದರು.

**ಭೀಷ್ಮಸ್ತು ಪಾಂಚಾಲಕರೂಶಚೇದಿ-**
**ಷ್ವಹನ್ ಸಹಸ್ರಾಣಿ ಚತುರ್ದಶೋಗ್ರಃ ।**
**ರಥಪ್ರಬರ್ಹಾನತಿತಿಗ್ಮತೇಜಾ**
**ವಿದ್ರಾವಯಾಮಾಸ ಪರಾನವೀನಿವ ॥ ೧೧೦ ॥**

**ಅರ್ಥ** :- **ಉಗ್ರಃ** = ಭಯಂಕರನಾದ, **ಅತಿತಿಗ್ಮತೇಜಾಃ** = ಬಹಳ ಪ್ರಖರ ತೇಜಸ್ಸುಳ್ಳ, **ಭೀಷ್ಮಸ್ತು** = ಭೀಷ್ಮನಾದರೂ, **ಪಾಂಚಾಲಕರೂಶಚೇದಿಷು** = ಪಾಂಚಾಲ ಕರೂಶ ಚೇದಿ ದೇಶದವರ ಮಧ್ಯದಲ್ಲಿ, **ಚತುರ್ದಶ** = ಹದಿನಾಲ್ಕು, **ಸಹಸ್ರಾಣಿ** = ಸಾವಿರ, **ರಥ ಪ್ರಬರ್ಹಾನ್** = ರಥಿಕ ಶ್ರೇಷ್ಠರನ್ನು,

**ಅಹನ್** = ಕೊಂದನು, (**ವೃಕಃ** = ತೋಳವು) **ಅವೀನಿವ** = ಕುರಿಗಳನ್ನೆಂಬಂತೆ, **ಅನ್ಯಾನ್** = ಬೇರೆಯವರನ್ನು, **ವಿದ್ರಾವಯಾಮಾಸ** = ಓಡಿಸಿದನು.

**ತಾತ್ಪರ್ಯ** :- ಭೀಷ್ಮನು ಪಾಂಚಾಲ ಕರೂಶ ಚೇದಿ ದೇಶಗಳ ಹದಿನಾಲ್ಕು ಸಾವಿರ ರಥಿಕರನ್ನು ಕೊಂದ ಮತ್ತು ಉಳಿದವರನ್ನು ತೋಳ ಕುರಿಗಳನ್ನು ಓಡಿಸುವಂತೆ ಓಡಿಸಿದ.

**ವಿದ್ರಾವ್ಯ ಸರ್ವಾಮಪಿ ಪಾಂಡುಸೇನಾಂ**
**ವಿಶ್ರಾವ್ಯ ಲೋಕೇಷು ಚ ಕೀರ್ತಿಮಾತ್ಮನಃ ।**
**ಸೇನಾಂ ಸಮಾಹೃತ್ಯ ಯಯೌ ನಿಶಾಗಮೇ**
**ಸಂಪೂಜ್ಯಮಾನೋ ಧೃತರಾಷ್ಟ್ರಪುತ್ರೈಃ ॥ ೧೧೧ ॥**

**ಅರ್ಥ** :- (**ಭೀಷ್ಮಃ** = ಭೀಷ್ಮನು), **ಸರ್ವಾಂ** = ಸಮಸ್ತವಾದ, **ಪಾಂಡುಸೇನಾಂ ಅಪಿ** = ಪಾಂಡವರ ಸೈನ್ಯವನ್ನೂ ಕೂಡ, **ವಿದ್ರಾವ್ಯ** = ಓಡಿಸಿ, **ಲೋಕೇಷು** = ಲೋಕಗಳಲ್ಲಿ, **ಆತ್ಮನಃ** = ತನ್ನ, **ಕೀರ್ತಿಂ** = ಕೀರ್ತಿಯನ್ನು, **ವಿಶ್ರಾವ್ಯ** = ಶ್ರುತ ಪಡಿಸಿ, **ನಿಶಾಗಮೇ** = ರಾತ್ರಿ ಕಾಲ ಬರುತ್ತಿರಲು, **ಸೇನಾಂ** = ಸೈನ್ಯವನ್ನು, **ಅಪಹೃತ್ಯ** = ಹಿಂದೆ ಕರೆಸಿಕೊಂಡು, **ಧೃತರಾಷ್ಟ್ರಪುತ್ರೈಃ** = ಧೃತರಾಷ್ಟ್ರನ ಮಕ್ಕಳಾದ ದುರ್ಯೋಧನಾದಿಗಳಿಂದ, **ಸಂಸ್ತೂಯಮಾನಃ** = ಹೊಗಳಿಸಿಕೊಳ್ಳಲ್ಪಟ್ಟವನಾಗಿ, **ಯಯೌ** = ಹೋದನು.

**ತಾತ್ಪರ್ಯ** :- ಸಮಸ್ತ ಪಾಂಡವರ ಸೈನ್ಯವನ್ನೂ ಓಡಿಸಿ ಭೀಷ್ಮ ಲೋಕದಲ್ಲಿ ತನ್ನ ಕೀರ್ತಿಯನ್ನು ವ್ಯಕ್ತಪಡಿಸಿ ರಾತ್ರಿಯಾದಾಗ ಸೈನ್ಯವನ್ನು ಹಿಂದೆ ಕರೆಸಿಕೊಂಡು ಕೌರವರಿಂದ ಶ್ಲಾಘಿತನಾಗುತ್ತಾ ಶಿಬಿರಕ್ಕೆ ಹೋದನು.

**ದ್ರೋಣೋ ವಿರಾಟಸ್ಯ ಪುರೋ ನಿಹತ್ಯ**
**ಶಂಖಂ ಸುತಂ ತಸ್ಯ ವಿಜಿತ್ಯ ತಂ ಚ ।**
**ವಿದ್ರಾವ್ಯ ಸೇನಾಮಪಿ ಪಾಂಡವಾನಾಂ**
**ಯಯೌ ನದೀಜೇನ ಸಹೈವ ಹೃಷ್ಟಃ ॥ ೧೧೨ ॥**

**ಅರ್ಥ** :- **ದ್ರೋಣಃ** = ದ್ರೋಣನು, **ವಿರಾಟಸ್ಯ** = ವಿರಾಟನ, **ಪುರಃ** = ಮುಂದೆ, **ತಸ್ಯ** = ಅವನ, **ಸುತಂ** = ಮಗನಾದ, **ಶಂಖಂ** = ಶಂಖನನ್ನು,

**ನಿಹತ್ಯ** = ಕೊಂದು, **ತಂ ಚ** = ಆ ವಿರಾಟನನ್ನೂ, **ವಿಜಿತ್ಯ** = ಗೆದ್ದು, **ಪಾಂಡವಾನಾಂ** = ಪಾಂಡವರ, **ಸೇನಾಮಪಿ** = ಸೈನ್ಯವನ್ನೂ ಕೂಡ, **ವಿದ್ರಾವ್ಯ** = ಓಡಿಸಿ, **ಹೃಷ್ಟಃ** = ಹರ್ಷಿತನಾಗಿ, **ನದೀಜೇನ ಸಹೈವ** = ಗಂಗಾನದಿಯ ಮಗನಾದ ಭೀಷ್ಮನಿಂದ ಕೂಡಿಕೊಂಡೇ, **ಯಯೌ** = ಹೋದನು.

**ತಾತ್ಪರ್ಯ** :- ವಿರಾಟನ ಮುಂದೆಯೇ ಅವನ ಮಗನನ್ನು ಕೊಂದು ಮತ್ತೂ ಅವನನ್ನೂ ಸೋಲಿಸಿ ದ್ರೋಣ ಪಾಂಡವರ ಸೈನ್ಯವನ್ನು ಓಡಿಸಿ ಸಂತೋಷಗೊಂಡು ಭೀಷ್ಮನೊಡನೆ ಹೋದ.

**ಭೀಮಾರ್ಜುನಾವಪಿ ಶತ್ರೂನ್ ನಿಹತ್ಯ**
**ವಿದ್ರಾಪ್ಯ ಸರ್ವಾಂಶ್ಚ ಯುಧಿ ಪ್ರವೀರಾನ್ ।**
**ಯುಧಿಷ್ಠಿರೇಣಾಪಹೃತೇ ಸ್ವಸೈನ್ಯೇ**
**ಭೀತೇನ ಭೀಷ್ಮಾಚ್ಛಿಬಿರಂ ಪ್ರಜಗ್ಮತುಃ ॥ ೧೧೩ ॥**

**ಅರ್ಥ** :- **ಭೀಮಾರ್ಜುನಾವಪಿ** = ಭೀಮಾರ್ಜುನರೂ ಕೂಡ, **ಶತ್ರೂನ್** = ಶತ್ರುಗಳನ್ನು, **ನಿಹತ್ಯ** = ಕೊಂದು, **ಯುಧಿ** = ಯುದ್ಧದಲ್ಲಿ, **ಪ್ರವೀರಾನ್** = ವೀರರಾದ, **ಸರ್ವಾಂಶ್ಚ** = ಎಲ್ಲರನ್ನೂ, **ವಿದ್ರಾವ್ಯ** = ಓಡಿಸಿ, **ಭೀಷ್ಮಾತ್** = ಭೀಷ್ಮನ ದೆಸೆಯಿಂದ, **ಭೀತೇನ** = ಭಯಗೊಂಡ, **ಯುಧಿಷ್ಠಿರೇಣ** = ಯುಧಿಷ್ಠಿರನಿಂದ, **ಸ್ವಸೈನ್ಯೇ** = ತನ್ನ ಸೈನ್ಯವು, **ಅಪಹೃತೇ (ಸತಿ)** = ಹಿಂದೆ ಕರೆಸಿಕೊಳ್ಳಲ್ಪಡುತ್ತಿರಲು, **ಶಿಬಿರಂ** = ಶಿಬಿರವನ್ನು ಕುರಿತು, **ಪ್ರಜಗ್ಮತುಃ** = ಹೋದರು.

**ತಾತ್ಪರ್ಯ** :- ಭೀಮಾರ್ಜುನರು ಶತ್ರುಗಳನ್ನು ಸಂಹರಿಸಿ ವೀರರಾದವರೆಲ್ಲರನ್ನೂ ಓಡಿಸಿ ಭೀಷ್ಮನಿಂದ ಭಯಗೊಂಡ ಧರ್ಮರಾಜ ತನ್ನ ಸೈನ್ಯವನ್ನು ಹಿಂದೆ ಕರೆಸಿಕೊಂಡಾಗ ಶಿಬಿರಕ್ಕೆ ಹೊರಟುಹೋದರು.

**ಯುಧಿಷ್ಠಿರೋ ಭೀಷ್ಮಪರಾಕ್ರಮೇಣ**
**ಭೀತೋ ಭೀಷ್ಮಂ ಸ್ವವಧೋಪಾಯಮೇವ ।**
**ಪ್ರಷ್ಟುಂ ಯಯೌ ನಿಶಿ ಕೃಷ್ಣೋಽನುಜಾಶ್ಚ**
**ತಸ್ಯಾನ್ವಯುಸ್ತಂ ಸ ಪಿತಾಮಹೋ ಯತ್ ॥ ೧೧೪ ॥**

**ಅಹನ್** = ಕೊಂದನು, (**ವೃಕಃ** = ತೋಳವು) **ಅವೀನಿವ** = ಕುರಿಗಳನ್ನೆಂಬಂತೆ, **ಅನ್ಯಾನ್** = ಬೇರೆಯವರನ್ನು, **ವಿದ್ರಾವಯಾಮಾಸ** = ಓಡಿಸಿದನು.

**ತಾತ್ಪರ್ಯ** :- ಭೀಷ್ಮನು ಪಾಂಚಾಲ ಕರೂಶ ಚೇದಿ ದೇಶಗಳ ಹದಿನಾಲ್ಕು ಸಾವಿರ ರಥಿಕರನ್ನು ಕೊಂದ ಮತ್ತು ಉಳಿದವರನ್ನು ತೋಳ ಕುರಿಗಳನ್ನು ಓಡಿಸುವಂತೆ ಓಡಿಸಿದ.

**ವಿದ್ರಾವ್ಯ ಸರ್ವಾಮಪಿ ಪಾಂಡುಸೇನಾಂ**
**ವಿಶ್ರಾವ್ಯ ಲೋಕೇಷು ಚ ಕೀರ್ತಿಮಾತ್ಮನಃ ।**
**ಸೇನಾಂ ಸಮಾಹೃತ್ಯ ಯಯೌ ನಿಶಾಗಮೇ**
**ಸಂಪೂಜ್ಯಮಾನೋ ಧೃತರಾಷ್ಟ್ರಪುತ್ರೈಃ ॥ ೧೧೧ ॥**

**ಅರ್ಥ** :- (**ಭೀಷ್ಮಃ** = ಭೀಷ್ಮನು), **ಸರ್ವಾಂ** = ಸಮಸ್ತವಾದ, **ಪಾಂಡುಸೇನಾಂ ಅಪಿ** = ಪಾಂಡವರ ಸೈನ್ಯವನ್ನೂ ಕೂಡ, **ವಿದ್ರಾವ್ಯ** = ಓಡಿಸಿ, **ಲೋಕೇಷು** = ಲೋಕಗಳಲ್ಲಿ, **ಆತ್ಮನಃ** = ತನ್ನ, **ಕೀರ್ತಿಂ** = ಕೀರ್ತಿಯನ್ನು, **ವಿಶ್ರಾವ್ಯ** = ಶ್ರುತ ಪಡಿಸಿ, **ನಿಶಾಗಮೇ** = ರಾತ್ರಿ ಕಾಲ ಬರುತ್ತಿರಲು, **ಸೇನಾಂ** = ಸೈನ್ಯವನ್ನು, **ಅಪಹೃತ್ಯ** = ಹಿಂದೆ ಕರೆಸಿಕೊಂಡು, **ಧೃತರಾಷ್ಟ್ರಪುತ್ರೈಃ** = ಧೃತರಾಷ್ಟ್ರನ ಮಕ್ಕಳಾದ ದುರ್ಯೋಧನಾದಿಗಳಿಂದ, **ಸಂಸ್ತೂಯಮಾನಃ** = ಹೊಗಳಿಸಿಕೊಳ್ಳಲ್ಪಟ್ಟವನಾಗಿ, **ಯಯೌ** = ಹೋದನು.

**ತಾತ್ಪರ್ಯ** :- ಸಮಸ್ತ ಪಾಂಡವರ ಸೈನ್ಯವನ್ನೂ ಓಡಿಸಿ ಭೀಷ್ಮ ಲೋಕದಲ್ಲಿ ತನ್ನ ಕೀರ್ತಿಯನ್ನು ವ್ಯಕ್ತಪಡಿಸಿ ರಾತ್ರಿಯಾದಾಗ ಸೈನ್ಯವನ್ನು ಹಿಂದೆ ಕರೆಸಿಕೊಂಡು ಕೌರವರಿಂದ ಶ್ಲಾಘಿತನಾಗುತ್ತಾ ಶಿಬಿರಕ್ಕೆ ಹೋದನು.

**ದ್ರೋಣೋ ವಿರಾಟಸ್ಯ ಪುರೋ ನಿಹತ್ಯ**
**ಶಂಖಂ ಸುತಂ ತಸ್ಯ ವಿಜಿತ್ಯ ತಂ ಚ ।**
**ವಿದ್ರಾವ್ಯ ಸೇನಾಮಪಿ ಪಾಂಡವಾನಾಂ**
**ಯಯೌ ನದೀಜೇನ ಸಹೈವ ಹೃಷ್ಟಃ ॥ ೧೧೨ ॥**

**ಅರ್ಥ** :- **ದ್ರೋಣಃ** = ದ್ರೋಣನು, **ವಿರಾಟಸ್ಯ** = ವಿರಾಟನ, **ಪುರಃ** = ಮುಂದೆ, **ತಸ್ಯ** = ಅವನ, **ಸುತಂ** = ಮಗನಾದ, **ಶಂಖಂ** = ಶಂಖನನ್ನು,

**ನಿಹತ್ಯ** = ಕೊಂದು, **ತಂ ಚ** = ಆ ವಿರಾಟನನ್ನೂ, **ವಿಜಿತ್ಯ** = ಗೆದ್ದು, **ಪಾಂಡವಾನಾಂ** = ಪಾಂಡವರ, **ಸೇನಾಮಪಿ** = ಸೈನ್ಯವನ್ನೂ ಕೂಡ, **ವಿದ್ರಾವ್ಯ** = ಓಡಿಸಿ, **ಹೃಷ್ಟಃ** = ಹರ್ಷಿತನಾಗಿ, **ನದೀಜೇನ ಸಹೈವ** = ಗಂಗಾನದಿಯ ಮಗನಾದ ಭೀಷ್ಮನಿಂದ ಕೂಡಿಕೊಂಡೇ, **ಯಯೌ** = ಹೋದನು.

**ತಾತ್ಪರ್ಯ** :- ವಿರಾಟನ ಮುಂದೆಯೇ ಅವನ ಮಗನನ್ನು ಕೊಂದು ಮತ್ತೂ ಅವನನ್ನೂ ಸೋಲಿಸಿ ದ್ರೋಣ ಪಾಂಡವರ ಸೈನ್ಯವನ್ನು ಓಡಿಸಿ ಸಂತೋಷಗೊಂಡು ಭೀಷ್ಮನೊಡನೆ ಹೋದ.

**ಭೀಮಾರ್ಜುನಾವಪಿ ಶತ್ರೂನ್ ನಿಹತ್ಯ**
**ವಿದ್ರಾಪ್ಯ ಸರ್ವಾಂಶ್ಚ ಯುಧಿ ಪ್ರವೀರಾನ್ ।**
**ಯುಧಿಷ್ಠಿರೇಣಾಪಹೃತೇ ಸ್ವಸೈನ್ಯೇ**
**ಭೀತೇನ ಭೀಷ್ಮಾಚ್ಛಿಬಿರಂ ಪ್ರಜಗ್ಮತುಃ ॥ ೧೧೩ ॥**

**ಅರ್ಥ** :- **ಭೀಮಾರ್ಜುನಾವಪಿ** = ಭೀಮಾರ್ಜುನರೂ ಕೂಡ, **ಶತ್ರೂನ್** = ಶತ್ರುಗಳನ್ನು, **ನಿಹತ್ಯ** = ಕೊಂದು, **ಯುಧಿ** = ಯದ್ಧದಲ್ಲಿ, **ಪ್ರವೀರಾನ್** = ವೀರರಾದ, **ಸರ್ವಾಂಶ್ಚ** = ಎಲ್ಲರನ್ನೂ, **ವಿದ್ರಾವ್ಯ** = ಓಡಿಸಿ, **ಭೀಷ್ಮಾತ್** = ಭೀಷ್ಮನ ದೆಸೆಯಿಂದ, **ಭೀತೇನ** = ಭಯಗೊಂಡ, **ಯುಧಿಷ್ಠಿರೇಣ** = ಯುಧಿಷ್ಠಿರನಿಂದ, **ಸ್ವಸೈನ್ಯೇ** = ತನ್ನ ಸೈನ್ಯವು, **ಅಪಹೃತೇ (ಸತಿ)** = ಹಿಂದೆ ಕರೆಸಿಕೊಳ್ಳಲ್ಪಡುತ್ತಿರಲು, **ಶಿಬಿರಂ** = ಶಿಬಿರವನ್ನು ಕುರಿತು, **ಪ್ರಜಗ್ಮತುಃ** = ಹೋದರು.

**ತಾತ್ಪರ್ಯ** :- ಭೀಮಾರ್ಜುನರು ಶತ್ರುಗಳನ್ನು ಸಂಹರಿಸಿ ವೀರರಾದವರೆಲ್ಲರನ್ನೂ ಓಡಿಸಿ ಭೀಷ್ಮನಿಂದ ಭಯಗೊಂಡ ಧರ್ಮರಾಜ ತನ್ನ ಸೈನ್ಯವನ್ನು ಹಿಂದೆ ಕರೆಸಿಕೊಂಡಾಗ ಶಿಬಿರಕ್ಕೆ ಹೊರಟುಹೋದರು.

**ಯುಧಿಷ್ಠಿರೋ ಭೀಷ್ಮಪರಾಕ್ರಮೇಣ**
**ಭೀತೋ ಭೀಷ್ಮಂ ಸ್ವವಧೋಪಾಯಮೇವ ।**
**ಪ್ರಷ್ಟುಂ ಯಯೌ ನಿಶಿ ಕೃಷ್ಣೋಽನುಜಾಶ್ಚ**
**ತಸ್ಯಾನ್ವಯುಸ್ತಂ ಸ ಪಿತಾಮಹೋ ಯತ್ ॥ ೧೧೪ ॥**

**ಅರ್ಥ** :- **ಭೀಷ್ಮಪರಾಕ್ರಮೇಣ** = ಭೀಷ್ಮನ ಪರಾಕ್ರಮದಿಂದ, **ಭೀತಃ** = ಭಯಗೊಂಡ, **ಯುಧಿಷ್ಠಿರಃ** = ಯುಧಿಷ್ಠಿರನು, **ಭೀಷ್ಮಂ** = ಭೀಷ್ಮನನ್ನು ಕುರಿತು, **ಯತ್** = ಯಾವ ಕಾರಣದಿಂದ, **ಸಃ** = ಅವನು, **ಪಿತಾಮಹಃ** = ಪಿತಾಮಹನೋ, **ತತ್** = ಆ ಕಾರಣದಿಂದ, **ಸ್ವವಧೋಪಾಯಮೇವ** = ಅವನ ವಧೆಯ ಉಪಾಯವನ್ನೇ, **ಪ್ರಷ್ಟುಂ** = ಕೇಳಲು, **ನಿಶಿ** = ರಾತ್ರಿಯಲ್ಲಿ, **ಯಯೌ** = ಹೋದನು, **ತಸ್ಯ** = ಆ ಯುಧಿಷ್ಠಿರನ, **ಅನುಜಾಃ** = ತಮ್ಮಂದಿರು, **ಕೃಷ್ಣಶ್ಚ** = ಕೃಷ್ಣನೂ, **ತಂ** = ಅವನನ್ನು, **ಅನ್ವಯುಃ** = ಅನುಸರಿಸಿ ಹೋದರು.

**ತಾತ್ಪರ್ಯ** :- ಭೀಷ್ಮನ ಪರಾಕ್ರಮದಿಂದ ಭಯಗೊಂಡ ಯುಧಿಷ್ಠಿರ ಶತ್ರುಪಕ್ಷದವನಾದರೂ ಭೀಷ್ಮ ಪಾಂಡವರಿಗೆ ಪಿತಾಮಹನಾದ್ದರಿಂದ ಅವನನ್ನು ಕೊಲ್ಲುವ ಉಪಾಯವನ್ನು ಅವನಲ್ಲಿಯೇ ಕೇಳಲು ರಾತ್ರಿ ಅವನ ಶಿಬಿರಕ್ಕೆ ಹೋದ. ಅವನನ್ನು ಅವನ ತಮ್ಮಂದಿರೂ ಮತ್ತು ಕೃಷ್ಣ ಅನುಸರಿಸಿ ನಡೆದರು.

**ಭೀಮಾರ್ಜುನೌ ಶಕ್ನುವಂತಾವಪಿ ಸ್ಮ**
**ನರ್ತೇಽನುಜ್ಞಾಂ ಹಂತುಮಿಮಂ ತದೈಚ್ಛತಾಮ್ ।**
**ಪೂಜ್ಯೋ ಯತೋ ಭೀಷ್ಮ ಉದಾರಕರ್ಮಾ**
**ಕೃಷ್ಣೋಽಪ್ಯಯಾತ್ ತೇನ ಹಿ ಪಾಂಡವಾರ್ಥೇ ॥ ೧೧೫ ॥**

**ಅರ್ಥ** :- **ಭೀಮಾರ್ಜುನೌ** = ಭೀಮಾರ್ಜುನರು, **ಶಕ್ನುವಂತಾವಪಿ** = ಸಾಮರ್ಥ್ಯವುಳ್ಳವರಾಗಿದ್ದರೂ ಕೂಡ, **ಅನುಜ್ಞಾಂ ಋತೇ** = ಅನುಜ್ಞೆಯನ್ನ ಇಲ್ಲದೇ, **ಇಮಂ** = ಈ ಭೀಷ್ಮನನ್ನು, **ಹಂತುಂ** = ಕೊಲ್ಲಲು, **ನ ಸಮೈಚ್ಛತಾಂ ಸ್ಮ** = ಇಚ್ಛಿಸುತ್ತಿರಲಿಲ್ಲ, **ಯತಃ** = ಏಕೆಂದರೆ, **ಉದಾರಕರ್ಮಾ** = ಉತ್ಕೃಷ್ಟವಾದ ಕರ್ಮವುಳ್ಳ, **ಭೀಷ್ಮಃ** = ಭೀಷ್ಮನು, **ಪೂಜ್ಯಃ** = ಪೂಜ್ಯನಾಗಿದ್ದ, **ತೇನ ಹಿ** = ಆದ್ದರಿಂದಲೇನೇ, **ಪಾಂಡವಾರ್ಥೇ** = ಪಾಂಡವರಿಗೋಸ್ಕರ, **ಕೃಷ್ಣೋಽಪಿ** = ಕೃಷ್ಣನೂ ಕೂಡ, **ಅಯಾತ್** = ಹೋದನು.

**ತಾತ್ಪರ್ಯ** :- ಭೀಷ್ಮನನ್ನು ಕೊಲ್ಲಲು ಭೀಮಾರ್ಜುನರು ಸಮರ್ಥ ರಾಗಿದ್ದರೂ ಕೂಡ ಅವನ ಅಪ್ಪಣೆ ಇಲ್ಲದೆ ಅವನನ್ನು ಕೊಲ್ಲಲು ಅವರು

ಬಯಿಸಲಿಲ್ಲ. ಏಕೆಂದರೆ ಉತ್ಕೃಷ್ಟವಾದ ಕರ್ಮನಿರತನಾದ ಭೀಷ್ಮ ಪಿತಾಮಹನಾದ್ದರಿಂದ ಅವರಿಗೆ ಪೂಜ್ಯನಾಗಿದ್ದ. ಅದೇ ಕಾರಣದಿಂದಲೇನೇ ಪಾಂಡವರಿಗೋಸ್ಕರ ಕೃಷ್ಣನೂ ಹೋದ.

**ಪ್ರಾಪ್ಯಾನುಜ್ಞಾಂ ಭೀಷ್ಮತಸ್ತೇ ವಧಾಯ**
**ಶಿಖಂಡಿನಂ ತದ್ವಚಸಾಽಗ್ರಯಾಯಿನಮ್ ।**
**ಕೃತ್ವಾ ಪರೇದ್ಯುರ್ಯುಧಯೇ ವಿನಿರ್ಗತಾ**
**ಭೀಷ್ಮಂ ಪುರಸ್ಕೃತ್ಯ ತಥಾ ಪರೇಽಪಿ ॥ ೧೧೬ ॥**

**ಅರ್ಥ** :- **ತೇ** = ಆ ಪಾಂಡವರು, **ಭೀಷ್ಮತಃ** = ಭೀಷ್ಮನ ದೆಸೆಯಿಂದ, **ವಧಾಯ** = ವಧೆಗಾಗಿ, **ಅನುಜ್ಞಾಂ** = ಅನುಜ್ಞೆಯನ್ನು, **ಪ್ರಾಪ್ಯ** = ಹೊಂದಿ, **ಪರೇದ್ಯುಃ** = ಮರುದಿನ, **ತದ್ವಚಸಾ** = ಆ ಭೀಷ್ಮನ ಮಾತಿನಿಂದ, **ಶಿಖಂಡಿನಂ** = ಶಿಖಂಡಿಯನ್ನು, **ಅಗ್ರಯಾಯಿನಂ** = ಮುಂದೆ ಹೋಗುವವನನ್ನಾಗಿ, **ಕೃತ್ವಾ** = ಮಾಡಿ, **ಯುಧಯೇ** = ಯುದ್ಧಕ್ಕಾಗಿ, **ವಿನಿರ್ಗತಾಃ** = ಹೊರಟರು, **ತಥಾ** = ಹಾಗೆಯೇ, **ಪರೇಽಪಿ** = ಬೇರೆಯವರಾದ ಕೌರವರೂ ಕೂಡ, **ಭೀಷ್ಮಂ** = ಭೀಷ್ಮನನ್ನು, **ಪುರಸ್ಕೃತ್ಯ** = ಮುಂದೆ ಮಾಡಿಕೊಂಡು, **ಯುಧಯೇ** = ಯುದ್ಧಕ್ಕಾಗಿ, **ವಿನಿರ್ಗತಾಃ** = ಹೊರಟರು.

**ತಾತ್ಪರ್ಯ** :- ಭೀಷ್ಮನಿಂದ ಅವನ ವಧೆಗಾಗಿ ಅನುಮತಿ ಪಡೆದ ಪಾಂಡವರು ಮರುದಿನ ಅವನ ಮಾತಿನಂತೆ ಶಿಖಂಡಿಯನ್ನು ಮುಂದೆ ಮಾಡಿಕೊಂಡು ಯುದ್ಧಕ್ಕೆ ಹೊರಟರು ಹಾಗೆಯೇ ಕೌರವರೂ ಕೂಡ ಭೀಷ್ಮನನ್ನು ಮುಂದೆ ಮಾಡಿಕೊಂಡು ಯುದ್ಧಕ್ಕೆ ಹೊರಟರು.

**ಶಿಖಂಡಿನೋ ರಕ್ಷಕಃ ಫಲ್ಗುನೋಽಭೂದ್**
**ಭೀಷ್ಮಸ್ಯ ದುಃಶಾಸನ ಆಸ ಚಾಗ್ರೇ ।**
**ಅನ್ಯೇ ಚ ಸರ್ವೇ ಜುಗುಪುರ್ಭೀಷ್ಮಮೇವ**
**ನ್ಯವಾರಯನ್ ಭೀಮಸೇನಾದಯಸ್ತಾನ್ ॥ ೧೧೭ ॥**

**ಅರ್ಥ** :- **ಶಿಖಂಡಿನಃ** = ಶಿಖಂಡಿಗೆ, **ಫಲ್ಗುನಃ** = ಅರ್ಜುನನು, **ರಕ್ಷಕಃ** = ರಕ್ಷಕನು, **ಅಭೂತ್** = ಆದನು, **ದುಃಶಾಸನಃ** = ದುಃಶಾಸನನು, **ಭೀಷ್ಮಸ್ಯ** = ಭೀಷ್ಮನ (**ರಕ್ಷಕಃ** = ರಕ್ಷಕನಾಗಿ), **ಅಗ್ರೇ** = ಮುಂದೆ, **ಆಸ** = ಇದ್ದನು,

**ಅನ್ಯೇ ಸರ್ವೇ ಚ** = ಬೇರೆಯವರೆಲ್ಲರೂ, **ಭೀಷ್ಮಮೇವ** = ಭೀಷ್ಮನನ್ನೇ, **ಜುಗುಪುಃ** = ರಕ್ಷಿಸಿದರು, **ಭೀಮಾದಯಃ** = ಭೀಮ ಮೊದಲಾದವರು, **ತಾನ್** = ಅವರನ್ನು, **ನ್ಯವಾರಯನ್** = ತಡೆದರು.

**ತಾತ್ಪರ್ಯ** :- ಅರ್ಜುನ ಶಿಖಂಡಿಗೆ ರಕ್ಷಕನಾಗಿ ನಿಂತ. ದುಃಶಾಸನ ಭೀಷ್ಮನ ರಕ್ಷಕನಾಗಿ ಮುಂದೆ ನಿಂತ. ಕೌರವರ ಪಕ್ಷದ ಬೇರೆ ಸೈನಿಕರೆಲ್ಲರೂ ಭೀಷ್ಮನನ್ನು ರಕ್ಷಿಸಿದರು. ಭೀಮ ಮೊದಲಾದವರು ಅವರನ್ನು ಎದುರಿಸಿದರು.

**ಭೀಷ್ಮಾಯ ಯಾಂತಂ ಯುಯುಧಾನಮಾಜೌ**
**ನ್ಯವಾರಯದ್ ರಾಕ್ಷಸೋಽಲಂಬುಸೋಽಥ ।**
**ತಂ ವಜ್ರಕಲ್ಪೈರತುದದ್ ವೃಷ್ಣಿವೀರಃ**
**ಶರೈಃ ಸ ಮಾಯಾಮಸೃಜತ್ ತದೋಗ್ರಾಮ್ ॥ ೧೧೮ ॥**

**ಅರ್ಥ** :- **ಆಜೌ** = ಯುದ್ಧದಲ್ಲಿ, **ಭೀಷ್ಮಾಯ ಯಾಂತಂ** = ಭೀಷ್ಮನನ್ನು ಕುರಿತು ಹೋಗುತ್ತಿದ್ದ, **ಯುಯುಧಾನಂ** = ಸಾತ್ಯಕಿಯನ್ನು, **ರಾಕ್ಷಸಃ** = ರಾಕ್ಷಸನಾದ, **ಅಲಂಬುಸಃ** = ಅಲಂಬುಸನು, **ನ್ಯವಾರಯತ್** = ತಡೆದನು, **ಅಥ** = ಅನಂತರ, **ವೃಷ್ಣಿವೀರಃ** = ಯಾದವ ವೀರನಾದ ಸಾತ್ಯಕಿಯು, **ವಜ್ರಕಲ್ಪೈಃ** = ವಜ್ರಾಯುಧದಂತಹ, **ಶರೈಃ** = ಬಾಣಗಳಿಂದ, **ತಂ** = ಆ ಅಲಂಬುಸನನ್ನು, **ಅತುದತ್** = ಗಾಯಗೊಳಿಸಿದ, **ತದಾ** = ಆವಾಗ, **ಸಃ** = ಆ ಅಲಂಬುಸನು, **ಉಗ್ರಾಂ** = ಭಯಂಕರವಾದ, **ಮಾಯಾಂ** = ಮಾಯೆಯನ್ನು, **ಅಸೃಜತ್** = ಸೃಷ್ಟಿಸಿದನು.

**ತಾತ್ಪರ್ಯ** :- ಅಲಂಬುಸ ರಾಕ್ಷಸ ಯುದ್ಧದಲ್ಲಿ ಭೀಷ್ಮನ ಕಡೆಗೆ ಹೋಗುತ್ತಿದ್ದ ಸಾತ್ಯಕಿಯನ್ನು ತಡೆದ. ವೀರನಾದ ಸಾತ್ಯಕಿ ವಜ್ರಾಯುಧ ದಂತಹ ಬಾಣಗಳಿಂದ ಅವನನ್ನು ಗಾಯಗೊಳಿಸಿದ. ಆವಾಗ ಅಲಂಬುಸ ಭಯಂಕರವಾದ ಮಾಯೆಯನ್ನು ಸೃಷ್ಟಿಮಾಡಿದ.

**ಅಸ್ತ್ರೇಣ ಮಾಯಾಮಪನುದ್ಯ ವೀರೋ**
**ವ್ಯದ್ರಾವಯದ್ ರಾಕ್ಷಸಂ ಸಾತ್ಯಕಿಸ್ತಮ್ ।**
**ತಸ್ಮಿನ್ ಗತೇ ಯುಯುಧಾನೋ ರಥೇನ**
**ಯಯೌ ಭೀಷ್ಮಂ ಪಾರ್ಥಮನ್ವೇವ ಧನ್ವೀ ॥ ೧೧೯ ॥**

**ಅರ್ಥ** :- **ವೀರಃ** = ವೀರನಾದ, **ಸಾತ್ಯಕಿಃ** = ಸಾತ್ಯಕಿಯು, **ಅಸ್ತ್ರೇಣ** = ಅಸ್ತ್ರದಿಂದ, **ಮಾಯಾಂ** = ಮಾಯೆಯನ್ನು, **ಅಪನುದ್ಯ** = ನಾಶಪಡಿಸಿ, **ರಾಕ್ಷಸಂ** = ರಾಕ್ಷಸನಾದ, **ತಂ** = ಆ ಅಲಂಬುಸನನ್ನು, **ವ್ಯದ್ರಾವಯತ್** = ಓಡಿಸಿದನು, **ತಸ್ಮಿನ್** = ಆ ಅಲಂಬುಸನು, **ಗತೇ** = ಹೋಗುತ್ತಿರಲು, **ಧನ್ವೀ** = ಧನುಸ್ಸುಳ್ಳ, **ಯುಯುಧಾನಃ** = ಸಾತ್ಯಕಿಯು, **ಪಾರ್ಥಂ ಅನ್ವೇವ** = ಅರ್ಜುನನನ್ನು ಅನುಸರಿಸಿಯೇ, **ರಥೇನ** = ರಥದಿಂದ, **ಭೀಷ್ಮಂ** = ಭೀಷ್ಮನನ್ನು ಕುರಿತು, **ಯಯೌ** = ಹೋದನು.

**ತಾತ್ಪರ್ಯ** :- ಸಾತ್ಯಕಿ ಅಸ್ತ್ರದಿಂದ ಮಾಯೆಯನ್ನು ನಾಶಪಡಿಸಿ ರಾಕ್ಷಸನಾದ ಅಲಂಬುಸನನ್ನು ಓಡಿಸಿದ. ಅಲಂಬುಸ ಓಡಿಹೋದಾಗ ಸಾತ್ಯಕಿ ಅರ್ಜುನನಿಗೆ ಸಹಾಯಕನಾಗಿ ರಥದಿಂದ ಭೀಷ್ಮನ ಬಳಿಗೆ ಹೋದ.

**ದ್ರೋಣೋ ದ್ರೌಣಿರ್ಧಾರ್ತರಾಷ್ಟ್ರಶ್ಚ ರಾಜಾ**
**ಭೂರಿಶ್ರವಾ ಭಗದತ್ತಃ ಕೃಪಶ್ಚ ।**
**ಶಲ್ಯೋ ಬಾಹ್ಲೀಕಃ ಕೃತವರ್ಮಾ ಸುಶರ್ಮಾ**
**ಸರ್ವಾಶ್ಚ ಸೇನಾ ವಾರಿತಾ ವಾಯುಜೇನ ॥ ೧೨೦ ॥**

**ಅರ್ಥ** :- **ವಾಯುಜೇನ** = ವಾಯು ಪುತ್ರನಾದ ಭೀಮನಿಂದ, **ದ್ರೋಣಃ** = ದ್ರೋಣನು, **ದ್ರೌಣಿಃ** = ದ್ರೋಣನ ಮಗನಾದ ಅಶ್ವತ್ಥಾಮನು, **ರಾಜಾ** = ರಾಜನಾದ, **ಧಾರ್ತರಾಷ್ಟ್ರಶ್ಚ** = ಧೃತರಾಷ್ಟ್ರನ ಮಗನಾದ ದುರ್ಯೋಧನನೂ, **ಭೂರಿಶ್ರವಾಃ** = ಭೂರಿಶ್ರವನು, **ಭಗದತ್ತಃ** = ಭಗದತ್ತನು, **ಕೃಪಶ್ಚ** = ಕೃಪನೂ, **ಶಲ್ಯಃ** = ಶಲ್ಯನು, **ಬಾಹ್ಲೀಕಃ** = ಬಾಹ್ಲೀಕನು, **ಕೃತವರ್ಮಾ** = ಕೃತವರ್ಮನು, **ಸುಶರ್ಮಾ** = ಸುಶರ್ಮನು, **ಚ** = ಮತ್ತು, **ಸರ್ವಾಃ** = ಎಲ್ಲಾ, **ಸೇನಾಃ** = ಸೈನ್ಯಗಳು, **ವಾರಿತಾಃ** = ತಡೆಯಲ್ಪಟ್ಟವು.

**ತಾತ್ಪರ್ಯ** :- ಭೀಮನು, ದ್ರೋಣ ಅಶ್ವತ್ಥಾಮ ದುರ್ಯೋಧನ ಭಗದತ್ತ ಭೂರಿಶ್ರವ ಶಲ್ಯ ಕೃಪ ಬಾಹ್ಲೀಕ ಕೃತವರ್ಮ ಸುಶರ್ಮರನ್ನೂ ಮತ್ತು ಎಲ್ಲಾ ಸೈನ್ಯಗಳನ್ನೂ ತಡೆದ.

**ಸ ತಾನ್ ಮುಹುರ್ವಿರಥೀಕೃತ್ಯ ವೀರಃ**
**ಪ್ರಾಗ್ಜ್ಯೋತಿಷಂ ಸಗಜಂ ದ್ರಾವಯಿತ್ವಾ ।**

**ನ್ಯವಾರಯತ್ ಫಲ್ಗುನಂ ರೋದ್ಧುಕಾಮಂ**
**ಪಾರ್ಥಶ್ಚ ದೇವವ್ರತಮಾಸಸಾದ ॥ ೧೨೧ ॥**

**ಅರ್ಥ** :- **ವೀರಃ** = ವೀರನಾದ, **ಸಃ** = ಆ ಭೀಮನು, **ತಾನ್** = ಅವರನ್ನು, **ಮುಹುಃ** = ಮತ್ತೆ ಮತ್ತೆ, **ವಿರಥೀಕೃತ್ಯ** = ವಿರಥರನ್ನಾಗಿ ಮಾಡಿ, **ಚ** = ಮತ್ತು, **ದ್ರಾವಯಿತ್ವಾ** = ಓಡಿಸಿ, **ಫಲ್ಗುನಂ** = ಅರ್ಜುನನ್ನು ಕುರಿತು, **ಯೋದ್ಧುಕಾಮಂ** = ಯುದ್ಧ ಮಾಡಲು ಬಯಸಿದ, **ಸಗಜಂ** = ಆನೆಯಿಂದ ಕೂಡಿದ, **ಪ್ರಾಗ್ಜ್ಯೋತಿಷಂ** = ಭಗದತ್ತನನ್ನು, **ನ್ಯವಾರಯತ್** = ತಡೆದನು, **ಪಾರ್ಥಃ** = ಪೃಥೆಯ ಮಗನಾದ ಅರ್ಜುನನು, **ದೇವವ್ರತಂ** = ಭೀಷ್ಮನನ್ನು, **ಆಸಸಾದ** = ಎದುರಿಸಿದ.

**ತಾತ್ಪರ್ಯ** :- ಭೀಮ ಅವರನ್ನು ಮತ್ತೆ ಮತ್ತೆ ರಥರಹಿತರನ್ನಾಗಿ ಮಾಡಿ ಓಡಿಸಿ ಅರ್ಜುನನ ಜೊತೆ ಯುದ್ಧ ಮಾಡಲು ಬಯಸಿದ್ದ ಗಜಸಹಿತನಾದ ಭಗದತ್ತನನ್ನು ತಡೆದ. ಆದ್ದರಿಂದ ಅರ್ಜುನನೂ ನಿರಾತಂಕವಾಗಿ ಭೀಷ್ಮನೊಡನೆ ಯುದ್ಧ ಮಾಡಿದ.

**ಯುಧಿಷ್ಠಿರಂ ಭೀಷ್ಮಮಭಿಪ್ರಯಾಂತಂ**
**ಮಾದ್ರೀಸುತಾಭ್ಯಾಂ ಸಹಿತಂ ನೃವೀರಮ್ ।**
**ನ್ಯವಾರಯಚ್ಛಕುನಿಃ ಸಾದಿನಾಂ ಚ**
**ಯುತೋಽಯುತೇನೈವ ವರಾಶ್ವಗೇನ ॥ ೧೨೨ ॥**

**ಅರ್ಥ** :- **ಭೀಷ್ಮಂ** = ಭೀಷ್ಮನನ್ನು ಕುರಿತು, **ಅಭಿಪ್ರಯಾಂತಂ** = ಹೋಗುತ್ತಿದ್ದ, **ಮಾದ್ರೀಸುತಾಭ್ಯಾಂ ಸಹಿತಂ** = ನಕುಲ ಸಹದೇವರಿಂದ ಕೂಡಿದ, **ನೃವೀರಂ** = ರಾಜನಾದ, **ಯುಧಿಷ್ಠಿರಂ** = ಯುಧಿಷ್ಠಿರನನ್ನು, **ವರಾಶ್ವಗೇನ** = ಕುದುರೆ ಏರಿದ, **ಸಾದಿನಾಂ ಅಯುತೇನ** = ಹತ್ತು ಸಾವಿರ ಸೈನ್ಯದಿಂದ, **ಯುತಃ** = ಕೂಡಿದ, **ಶಕುನಿಃ** = ಶಕುನಿಯು, **ನ್ಯವಾರಯತ್** = ತಡೆದನು.

**ತಾತ್ಪರ್ಯ** :- ಹತ್ತು ಸಾವಿರ ಅಶ್ವಸೈನಿಕರಿಂದ ಕೂಡಿದ ಶಕುನಿ, ನಕುಲ ಸಹದೇವರಿಂದ ಕೂಡಿಕೊಂಡು ಭೀಷ್ಮನ ಕಡೆಗೆ ಹೋಗುತ್ತಿದ್ದ ಯುಧಿಷ್ಠಿರನನ್ನು ತಡೆದ.

**ತಾನ್ ಸಾದಿನೋಽಶ್ವಾಂಶ್ಚ ನಿಹತ್ಯ ಸರ್ವಾನ್**
**ವಿಜಿತ್ಯ ತಂ ಶಕುನಿಂ ಪಾಂಡವಾಸ್ತೇ ।**
**ಪ್ರಾಪುರ್ಭೀಷ್ಮಂ ದ್ರೌಪದೇಯಾಶ್ಚ ಸರ್ವೇ**
**ತಥಾ ವಿರಾಟದ್ರುಪದೌ ಕುಂತಿಭೋಜಃ ॥ ೧೨೩ ॥**

**ಅರ್ಥ** :- **ಪಾಂಡವಾಃ** = ಪಾಂಡುರಾಜನ ಮಕ್ಕಳಾದ, **ತೇ** = ಆ ಯುಧಿಷ್ಠಿರ ನಕುಲ ಸಹದೇವರು, **ತಾನ್** = ಆ, **ಸರ್ವಾನ್** = ಎಲ್ಲಾ, **ಸಾದಿನಃ** = ಅಶ್ವಸೈನಿಕರನ್ನು, **ಅಶ್ವಾಂಶ್ಚ** = ಕುದುರೆಗಳನ್ನೂ, **ನಿಹತ್ಯ** = ಕೊಂದು, **ತಂ** = ಆ, **ಶಕುನಿಂ** = ಶಕುನಿಯನ್ನು, **ವಿಜಿತ್ಯ** = ಗೆದ್ದು, **ಭೀಷ್ಮಂ** = ಭೀಷ್ಮನನ್ನು, **ಪ್ರಾಪುಃ** = ಹೊಂದಿದರು, **ತಥಾ** = ಹಾಗೆಯೇ, **ದ್ರೌಪದೇಯಾಃ** = ದ್ರೌಪದಿಯ ಮಕ್ಕಳು, **ವಿರಾಟದ್ರುಪದೌ** = ವಿರಾಟದ್ರುಪದರು, **ಕುಂತಿಭೋಜಃ** = ಕುಂತಿಭೋಜನು, **ಸರ್ವೇ ಚ** = ಎಲ್ಲರೂ, **ಪ್ರಾಪುಃ** = ಹೊಂದಿದರು.

**ತಾತ್ಪರ್ಯ** :- ಯುಧಿಷ್ಠಿರ ನಕುಲ ಸಹದೇವರು ಆ ಸೈನಿಕರನ್ನೂ ಕುದುರೆಗಳನ್ನೂ ಕೊಂದು ಶಕುನಿಯನ್ನು ಸೋಲಿಸಿ ಭೀಷ್ಮನ ಕಡೆಗೆ ಆಗಮಿಸಿದರು. ಹಾಗೆಯೇ ದ್ರೌಪದಿಯ ಮಕ್ಕಳು ವಿರಾಟ ದ್ರುಪದರು ಕುಂತಿಭೋಜ ಮತ್ತು ಎಲ್ಲರೂ ಆಗಮಿಸಿದರು.

**ಧೃಷ್ಟದ್ಯುಮ್ನಂ ಭೀಷ್ಮಮಭಿಪ್ರಯಾಂತಂ**
**ನ್ಯವಾರಯತ್ ಸೈಂಧವಸ್ತಂ ಸ ಬಾಣೈಃ ।**
**ಹತಾಶ್ವಸೂತಂ ಸಗಣಂ ದ್ರಾವಯಿತ್ವಾ**
**ಸಮಾಸದದ್ ಭೀಷ್ಮಮೇವಾಽಶು ವೀರಃ ॥ ೧೨೪ ॥**

**ಅರ್ಥ** :- **ಭೀಷ್ಮಂ** = ಭೀಷ್ಮನನ್ನು ಕುರಿತು, **ಅಭಿಪ್ರಯಾಂತಂ** = ಹೋಗುತ್ತಿದ್ದ, **ಧೃಷ್ಟದ್ಯುಮ್ನಂ** = ಧೃಷ್ಟದ್ಯುಮ್ನನನ್ನು, **ಸೈಂಧವಃ** = ಜಯದ್ರಥನು, **ನ್ಯವಾರಯತ್** = ತಡೆದನು, **ವೀರಃ** = ವೀರನಾದ, **ಸಃ** = ಆ ಧೃಷ್ಟದ್ಯುಮ್ನನು, **ಬಾಣೈಃ** = ಬಾಣಗಳಿಂದ, **ಅಶ್ವಸೂತಂ** = ಕುದುರೆ ಸಾರಥಿಗಳನ್ನು, **ಹತ್ವಾ** = ಕೊಂದು, **ಸಗಣಂ** = ಪರಿವಾರ ಸಮೇತನಾದ, **ತಂ** = ಆ ಸೈಂಧವನನ್ನು, **ದ್ರಾವಯಿತ್ವಾ** = ಓಡಿಸಿ, **ಆಶು** = ಬೇಗನೇ, **ಭೀಷ್ಮಂ ಏವ** = ಭೀಷ್ಮನನ್ನೇ, **ಸಮಾಸದತ್** = ಹೊಂದಿದನು.

**ತಾತ್ಪರ್ಯ** :- ಭೀಷ್ಮನ ಕಡೆಗೆ ಹೋಗುತ್ತಿದ್ದ ದೃಷ್ಟದ್ಯುಮ್ನನನ್ನು ಸೈಂಧವ ತಡೆದ. ಆವಾಗ ದೃಷ್ಟದ್ಯುಮ್ನ ಅವನ ಸಾರಥಿಯನ್ನೂ ಕುದುರೆಗಳನ್ನೂ ಬಾಣಗಳಿಂದ ಕೊಂದು ಪರಿವಾರ ಸಮೇತವಾಗಿ ಆ ಸೈಂಧವನನ್ನು ಓಡಿಸಿ ಕೂಡಲೇ ಭೀಷ್ಮನ ಕಡೆಗೆ ಹೋದ.

**ಗುಪ್ತೋಽಥ ಪಾರ್ಥೇನ ರಣೇ ಶಿಖಂಡೀ**
**ಭೀಷ್ಮಂ ಸಮಾಸಾದ್ಯ ಶರೈರತಾಡಯತ್ ।**
**ಭೀಷ್ಮಃ ಸ್ತ್ರೀತ್ವಂ ತಸ್ಯ ಜಾನನ್ ನ ತಸ್ಮೈ**
**ಮುಮೋಚ ಬಾಣಾನ್ ಸ ತು ತಂ ತುತೋದ ॥ ೧೨೫ ॥**

**ಅರ್ಥ** :- **ಅಥ** = ಅನಂತರ, **ರಣೇ** = ಯುದ್ಧದಲ್ಲಿ, **ಪಾರ್ಥೇನ** = ಅರ್ಜುನನಿಂದ, **ಗುಪ್ತಃ** = ರಕ್ಷಿತನಾದ, **ಶಿಖಂಡೀ** = ಶಿಖಂಡಿಯು, **ಭೀಷ್ಮಂ** = ಭೀಷ್ಮನನ್ನು, **ಸಮಾಸಾದ್ಯ** = ಹೊಂದಿ, **ಶರೈಃ** = ಬಾಣಗಳಿಂದ, **ಅತಾಡಯತ್** = ಹೊಡೆದನು, **ತಸ್ಯ** = ಆ ಶಿಖಂಡಿಯ, **ಸ್ತ್ರೀತ್ವಂ** = ಸ್ತ್ರೀತ್ವವನ್ನು, **ಜಾನನ್** = ತಿಳಿದಿದ್ದ, **ಭೀಷ್ಮಃ** = ಭೀಷ್ಮನು, **ತಸ್ಮೈ** = ಅವನಿಗೆ, **ಬಾಣಾನ್** = ಬಾಣಗಳನ್ನು, **ನ ಮುಮೋಚ** = ಬಿಡಲಿಲ್ಲ, **ಸ ತು** = ಆ ಶಿಖಂಡಿಯಾದರು, **ತಂ** = ಆ ಭೀಷ್ಮನನ್ನು, **ತುತೋದ** = ಪೀಡಿಸಿದನು.

**ತಾತ್ಪರ್ಯ** :- ಅನಂತರ ಅರ್ಜುನನಿಂದ ರಕ್ಷಿತನಾದ ಶಿಖಂಡಿ ಭೀಷ್ಮನ ಮುಂದೆ ಹೋಗಿ ಬಾಣಗಳಿಂದ ಹೊಡೆದ. ಆದರೆ ಶಿಖಂಡಿಯ ಸ್ತ್ರೀತ್ವವನ್ನು ತಿಳಿದಿದ್ದ ಭೀಷ್ಮ ಅವನ ಮೇಲೆ ಬಾಣಗಳನ್ನು ಬಿಡಲಿಲ್ಲ. ಆದರೆ ಶಿಖಂಡಿ ಮಾತ್ರ ಭೀಷ್ಮನನ್ನು ಪೀಡಿಸಿದ.

**ಶಿಖಂಡಿನಂ ವಾರಯಾಮಾಸ ಬಾಣೈ-**
**ರ್ದುರ್ಮರ್ಷಣೋಽಮರ್ಷಣವಿಹ್ವಲೇಕ್ಷಣಃ ।**
**ನಾತ್ಯೇತುಮೇನಮಶಕಚ್ಛಿಖಂಡೀ**
**ದುಃಶಾಸನಃ ಪಾರ್ಥಮವಾರಯತ್ ತದಾ ॥ ೧೨೬ ॥**

**ಅರ್ಥ** :- **ಅಮರ್ಷಣವಿಹ್ವಲೇಕ್ಷಣಃ** = ಕೋಪದಿಂದ ಚಂಚಲವಾದ ಕಣ್ಣುಗಳುಳ್ಳ, **ದುರ್ಮರ್ಷಣಃ** = ದುರ್ಮರ್ಷಣನು, **ಬಾಣೈಃ** = ಬಾಣಗಳಿಂದ, **ಶಿಖಂಡಿನಂ** = ಶಿಖಂಡಿಯನ್ನು, **ವಾರಯಾಮಾಸ** =

ತಡೆದನು, ಏನಂ = ಈ ದುರ್ಮರ್ಷಣನನ್ನು, **ಅತ್ಯೇತುಂ** = ದಾಟಲು, **ಶಿಖಂಡೀ** = ಶಿಖಂಡಿಯು, **ನ ಅಶಕತ್** = ಸಮರ್ಥನಾಗಲಿಲ್ಲ, **ತದಾ** = ಆವಾಗ, **ದುಃಶಾಸನಃ** = ದುಃಶಾಸನನು, **ಪಾರ್ಥಂ** = ಅರ್ಜುನನನ್ನು, **ಅವಾರಯತ್** = ತಡೆದನು.

**ತಾತ್ಪರ್ಯ** :- ಕೋಪದಿಂದ ಕಣ್ಣುಗಳನ್ನು ತಿರುಗಿಸುತ್ತಾ ದುರ್ಮರ್ಷಣ ಶಿಖಂಡಿಯನ್ನು ಬಾಣಗಳಿಂದ ತಡೆದ. ಶಿಖಂಡಿಯು ಅವನನ್ನು ದಾಟಲು ಸಮರ್ಥನಾಗಲಿಲ್ಲ. ಆವಾಗಲೇ ದುಃಶಾಸನ ಅರ್ಜುನನನ್ನು ತಡೆದ.

**ಸ ಲೋಕವೀರೋಽಪಿ ದುರಾತ್ಮನಾಽಮುನಾ**
**ರುದ್ಧೋಽಶಕನ್ನೈನಮತೀತ್ಯ ಯಾತುಮ್ ।**
**ಭೀಷ್ಮಂ ಪಾರ್ಥಃ ಸಾಯಕಾಶ್ಚಾಸ್ಯ ತಸ್ಮಿನ್**
**ಸಸಜ್ಜಿರೇ ಪರ್ವತೇಷ್ವಪ್ಯಸಕ್ತಾಃ ॥ ೧೨೭ ॥**

**ಅರ್ಥ** :- **ದುರಾತ್ಮನಾ** = ದುರಾತ್ಮನಾದ, **ಅಮುನಾ** = ಈ ದುಃಶಾಸನನಿಂದ, **ರುದ್ಧಃ** = ತಡೆಯಲ್ಪಟ್ಟ, **ಲೋಕವೀರಃ** = ಲೋಕವೀರನಾದ, **ಸ ಪಾರ್ಥೋಽಪಿ** = ಆ ಅರ್ಜುನನಾದರೂ ಕೂಡ, **ಏನಂ** = ಇವನನ್ನು, **ಅತೀತ್ಯ** = ದಾಟಿ, **ಭೀಷ್ಮಂ** = ಭೀಷ್ಮನನ್ನು ಕುರಿತು, **ಯಾತುಂ** = ಹೋಗಲು, **ನೈವ ಅಶಕತ್** = ಸಮರ್ಥನಾಗಲೇ ಇಲ್ಲ, **ಪರ್ವತೇಷ್ವಪಿ ಅಸಕ್ತಾಃ** = ಪರ್ವತ ಭೇದಿಸಿಕೊಂಡು ಹೋಗಬಲ್ಲ, **ಅಸ್ಯ** = ಈ ಅರ್ಜುನನ, **ಸಾಯಕಾಃ** = ಬಾಣಗಳು, **ತಸ್ಮಿನ್** = ಆ ದುಃಶಾಸನನಲ್ಲಿ, **ಸಸಜ್ಜಿರೇ** = ಸ್ಥಗಿತವಾಗಿ ನಿಂತುಬಿಟ್ಟವು.

**ತಾತ್ಪರ್ಯ** :- ದುಃಶಾಸನ ಅರ್ಜುನನನ್ನು ತಡೆದಾಗ ಅವನನ್ನು ದಾಟಿ ಹೋಗಲು ಲೋಕಪ್ರವೀರನಾದ ಅರ್ಜುನ ಸಮರ್ಥನಾಗಲಿಲ್ಲ. ಪರ್ವತಗಳನ್ನೂ ಭೇದಿಸಿಕೊಂಡು ಹೋಗಬಲ್ಲ ಅವನ ಬಾಣಗಳು ದುಃಶಾಸನದಲ್ಲಿ ವ್ಯರ್ಥವಾದವು.

**ಅಮರ್ಷಯುಕ್ತೌ ಚಿರಮೇವ ವೀರೌ**
**ಅಯುದ್ಧ್ಯತಾಮರ್ಜುನಧಾರ್ತರಾಷ್ಟ್ರೌ ।**
**ಸಮಂ ತದಾಸೀನ್ಮಹದದ್ಭುತಂ ಚ**
**ದಿವೌಕಸಾಂ ಪಶ್ಯತಾಂ ಭೂಭೃತಾಂ ಚ ॥ ೧೨೮ ॥**

**ಅರ್ಥ** :- **ವೀರೌ** = ವೀರರಾದ, **ಅರ್ಜುನಧಾರ್ತರಾಷ್ಟ್ರೌ** = ಅರ್ಜುನ ಮತ್ತು ಧೃತರಾಷ್ಟ್ರನ ಮಗನಾದ ದುಃಶಾಸನರು, **ಅಮರ್ಷಯುಕ್ತೌ** = ಕೋಪದಿಂದ ಕೂಡಿದವರಾಗಿ, **ಚಿರಂ** = ಬಹಳ ಕಾಲ, **ಸಮಮೇವ** = ಸಮವಾಗಿಯೇ, **ಅಯುದ್ಧ್ಯತಾಂ** = ಯುದ್ಧ ಮಾಡಿದರು, **ಚ** = ಮತ್ತು, **ತತ್** = ಆ ಯುದ್ಧವು, **ಪಶ್ಯತಾಂ** = ನೋಡುತ್ತಿದ್ದ, **ದಿವೌಕಸಾಂ** = ದೇವತೆಗಳಿಗೆ, **ಚ** = ಮತ್ತು, **ಭೂಭೃತಾಂ** = ರಾಜರಿಗೆ, **ಮಹದದ್ಭುತಂ ಆಸೀತ್** = ಮಹಾ ಅದ್ಭುತವೆನಿಸಿತು.

**ತಾತ್ಪರ್ಯ** :- ಅರ್ಜುನ ದುಃಶಾಸನರಿಬ್ಬರೂ ಕೋಪಗೊಂಡು ಬಹಳ ಕಾಲ ಯುದ್ಧ ಮಾಡಿದರು. ಆ ಯುದ್ಧ ಸಮಾನವಾಗಿಯೇ ನಡೆಯಿತು. ಆ ಯುದ್ಧವನ್ನು ನೋಡುತ್ತಿದ್ದ ದೇವತೆಗಳಿಗೂ ರಾಜರಿಗೂ ಅದು ಮಹಾ ಅದ್ಭುತವೇನಿಸಿತು.

**ತದಾ ವಿರಾಟದ್ರುಪದೌ ಕುಂತಿಭೋಜಂ**
**ಕೃಷ್ಣಾಸುತಾನ್ ಕೇಕಯಾಂಶ್ಚೇಕಿತಾನಮ್ ।**
**ಭೂರಿಃ ಶಲಃ ಸೋಮದತ್ತೋ ವಿಕರ್ಣಃ**
**ಸಕೇಕಯಾ ವಾರಯಾಮಾಸುರುಚ್ಚೈಃ ॥ ೧೨೯ ॥**

**ಅರ್ಥ** :- **ತದಾ** = ಆವಾಗ, **ಭೂರಿಃ** = ಭೂರಿಯು, **ಶಲಃ** = ಶಲನು, **ಸೋಮದತ್ತಃ** = ಸೋಮದತ್ತನು, **ವಿಕರ್ಣಃ** = ವಿಕರ್ಣನು, **ಸಕೈಕಯಾಃ** = ಕೈಕಯರಿಂದ ಕೂಡಿದವರಾಗಿ, **ವಿರಾಟದ್ರುಪದೌ** = ವಿರಾಟ ದ್ರುಪದರನ್ನು, **ಕುಂತಿಭೋಜಂ** = ಕುಂತಿಭೋಜನನ್ನು, **ಕೃಷ್ಣಾಸುತಾನ್** = ದ್ರೌಪದಿಯ ಮಕ್ಕಳನ್ನು, **ಕೈಕಯಾನ್** = ಕೈಕಯರನ್ನು, **ಚೇಕಿತಾನಂ** = ಚೇಕಿತಾನನ್ನು, **ಉಚ್ಚೈಃ** = ಬಲವಾಗಿ, **ವಾರಯಾಮಾಸು** = ತಡೆದರು.

**ತಾತ್ಪರ್ಯ** :- ಆವಾಗಲೇ ಭೂರಿ ಶಲ ಸೋಮದತ್ತ ವಿಕರ್ಣರು ಕೈಕಯರು ಇವರು ವಿರಾಟ ದ್ರುಪದ ಕುಂತಿಭೋಜ ಮತ್ತೂ ದ್ರೌಪದಿಯ ಮಕ್ಕಳು ಬೇರೆ ಕೈಕಯರು ಚೇಕಿತಾನ ಇವರನ್ನು ಬಲವಾಗಿ ತಡೆದರು.

**ಜಿತ್ವೈವ ತಾಂಸ್ತೇಽಭಿಯಯುಶ್ಚ ಭೀಷ್ಮಂ**
**ತತೋಽರ್ಜುನೋಽತೀತ್ಯ ದುಃಶಾಸನಂ ಚ ।**

**ಭೀಷ್ಮಂ ಶರೈರಾರ್ಚ್ಛದರಿಪ್ರಮಾಥಿಭಿಃ**
**ಶಿಖಂಡಿನಂ ಧಾರ್ತರಾಷ್ಟ್ರಾದ್ ವಿಮುಚ್ಯ ।। ೧೩೦ ।।**

**ಅರ್ಥ** :- **ತೇ** = ಆ ವಿರಾಟದ್ರುಪದ ಮೊದಲಾದವರು, **ತಾನ್** = ಆ ಭೂರಿಶಲ ಮುಂತಾದವರನ್ನು, **ಜಿತ್ವಾ** = ಗೆದ್ದು, **ಭೀಷ್ಮಂ** = ಭೀಷ್ಮನನ್ನು, **ಅಭಿಯಯುಃ** = ಎದುರಿಸಿದರು, **ತದೈವ** = ಆಗಲೇನೇ, **ಅರ್ಜುನಶ್ಚ** = ಅರ್ಜುನನೂ, **ದುಃಶಾಸನಂ** = ದುಃಶಾಸನನನ್ನು, **ಅತೀತ್ಯ** = ದಾಟಿ, **ಶಿಖಂಡಿನಂ** = ಶಿಖಂಡಿಯನ್ನು, **ಧಾರ್ತರಾಷ್ಟ್ರಾತ್** = ಧೃತರಾಷ್ಟ್ರನ ಮಗನಾದ ದುರ್ಮರ್ಷಣನಿಂದ, **ವಿಮುಚ್ಯ** = ಬಿಡಿಸಿ, **ಅರಿಪ್ರಮಾಥಿಭಿಃ** = ಶತ್ರುನಾಶಕವಾದ, **ಶರೈಃ** = ಬಾಣಗಳಿಂದ, **ಭೀಷ್ಮಂ** = ಭೀಷ್ಮನನ್ನು, **ಆರ್ಚ್ಛತ್** = ಪೀಡಿಸಿದನು.

**ತಾತ್ಪರ್ಯ** :- ವಿರಾಟ ಮೊದಲಾದವರು ಅವರೆಲ್ಲರನ್ನೂ ಸೋಲಿಸಿ ಭೀಷ್ಮನ ಬಳಿಗೆ ಹೋದರು. ಆವಾಗಲೇ ಅರ್ಜುನ ದುಃಶಾಸನನನ್ನು ದಾಟಿ ಬಂದು ದುರ್ಮರ್ಷಣನಿಂದ ಶಿಖಂಡಿಯನ್ನು ಬಿಡಿಸಿ ಶತ್ರುನಾಶಕವಾದ ಬಾಣಗಳಿಂದ ಭೀಷ್ಮನನ್ನು ಹೊಡೆದ.

**ಸ ತೈಃ ಸಮಸ್ತೈರ್ಬಹುಶಸ್ತ್ರಪೂಗೈ-**
**ರ್ಭೃಶಂ ಮರ್ಮಸ್ವರ್ದಿತಶ್ಚಾಪಮುಕ್ತೈಃ ।**
**ಶರೈಃ ಸಮಸ್ತಾನ್ ವಿರಥಾಂಶ್ಚಕಾರ**
**ಶೈನೇಯಪಾಂಚಾಲ್ಯಯುಧಿಷ್ಠಿರಾದ್ಯಾನ್ ।। ೧೩೧ ।।**

**ಅರ್ಥ** :- **ಸಃ** = ಆ ಭೀಷ್ಮನು, **ತೈಃ ಸಮಸ್ತೈಃ** = ಆ ಯುಧಿಷ್ಠಿರ ಮೊದಲಾದವರೆಲ್ಲರಿಂದ, **ಬಹುಶಸ್ತ್ರಪೂಗೈಃ** = ಬಹಳ ಶಸ್ತ್ರ ಸಮೂಹಗಳಿಂದ, **ಮರ್ಮಸು** = ಮರ್ಮಸ್ಥಾನಗಳಲ್ಲಿ, **ಭೃಶಂ** = ಬಹಳ, **ಅರ್ದಿತಃ** = ಪೀಡಿತನಾಗಿ, **ಚಾಪಮುಕ್ತೈಃ** = ಬಿಲ್ಲಿನಿಂದ ಬಿಡಲ್ಪಟ್ಟ, **ಶರೈಃ** = ಬಾಣಗಳಿಂದ, **ಶೈನೇಯ ಪಾಂಚಾಲ್ಯ ಯುಧಿಷ್ಠಿರಾದ್ಯಾನ್ ಸರ್ವಾನ್** = ಸಾತ್ಯಕಿ ದ್ರುಪದ ಯುಧಿಷ್ಠಿರ ಮೊದಲಾದವರೆಲ್ಲರನ್ನೂ, **ವಿರಥಾನ್** = ರಥರಹಿತರನ್ನಾಗಿ, **ಚಕಾರ** = ಮಾಡಿದನು.

**ತಾತ್ಪರ್ಯ** :- ಯುಧಿಷ್ಠಿರ ಮೊದಲಾದವರ ಬಾಣಸಮೂಹಗಳಿಂದ ಭೀಷ್ಮ ಮರ್ಮಸ್ಥಳಗಳಲ್ಲಿ ಹೊಡೆಯಲ್ಪಟ್ಟವನಾಗಿ ತಾನು ಬಾಣಗಳನ್ನು ಬಿಟ್ಟು ಸಾತ್ಯಕಿ ದ್ರುಪದ ಯುಧಿಷ್ಠಿರ ಮೊದಲಾದವರೆಲ್ಲರ ರಥಗಳನ್ನು ನಾಶಪಡಿಸಿದ.

**ಸ ಚೇದಿಪಾಂಚಾಲಕರೂಶಮುಖ್ಯಾನ್**
**ರಥೋತ್ತಮಾನ್ ಪಂಚವಿಂಶತ್ಸಹಸ್ರಾನ್ ।**
**ಸಂಪ್ರೇಷಯಾಮಾಸ ಯಮಾಯ ಬಾಣೈ-**
**ರ್ಯುಗಾಂತಕಾಲೇಽಗ್ನಿರಿವ ಪ್ರವೃದ್ಧಃ ॥ ೧೩೨ ॥**

**ಅರ್ಥ** :- **ಸಃ** = ಆ ಭೀಷ್ಮನು, **ಪ್ರವೃದ್ಧಃ** = ಪ್ರವೃದ್ಧವಾದ, **ಯುಗಾಂತಕಾಲಾಗ್ನಿರಿವ** = ಪ್ರಳಯ ಕಾಲದ ಅಗ್ನಿಯಂತೆ, **ಚೇದಿಪಾಂಚಾಲಕರೂಶಮುಖ್ಯಾನ್** = ಚೇದಿ ಪಾಂಚಾಲ ಕರೂಶರಲ್ಲಿ ಮುಖ್ಯರಾದ, **ಪಂಚವಿಂಶತ್ಸಹಸ್ರಾನ್** = ಇಪ್ಪತ್ತೈದು ಸಾವಿರ, **ರಥೋತ್ತಮಾನ್** = ರಥಿಕಶ್ರೇಷ್ಠರನ್ನು, **ಬಾಣೈಃ** = ಬಾಣಗಳಿಂದ, **ಯಮಾಯ** = ಯಮನ ಬಳಿಗೆ, **ಸಂಪ್ರೇಷಯಾಮಾಸ** = ಕಳುಹಿಸಿದ.

**ತಾತ್ಪರ್ಯ** :- ಭೀಷ್ಮ ಪ್ರಳಯಕಾಲದ ಅಗ್ನಿಯಂತೆ ಬಾಣಗಳಿಂದ ಚೇದಿ ಪಾಂಚಾಲ ಕರೂಶರ ಪೈಕಿ ಮುಖ್ಯರಾದ ಇಪ್ಪತ್ತೈದು ಸಾವಿರ ಶ್ರೇಷ್ಠ ರಥಿಕರನ್ನು ಯಮನ ಬಳಿಗೆ ಕಳುಹಿಸಿಕೊಟ್ಟ.

**ನಿರೀಕ್ಷ್ಯ ತಂ ಸೂರ್ಯಮಿವಾಽತಪಂತಂ**
**ಸಂಚೋದಿತೋ ವಾಸುದೇವೇನ ಪಾರ್ಥಃ ।**
**ಚಿಚ್ಛೇದ ತತ್ಕಾರ್ಮುಕಂ ಲೋಕವೀರೋ**
**ರಣೇಽರ್ಧಚಂದ್ರೇಣ ಸ ಚಾನ್ಯದಾದದೇ ॥ ೧೩೩ ॥**

**ಅರ್ಥ** :- **ರಣೇ** = ಯುದ್ಧದಲ್ಲಿ, **ಸೂರ್ಯಮಿವ** = ಸೂರ್ಯನಂತೆ, **ಆತಪಂತಂ** = ತಾಪ ನೀಡುತ್ತಿದ್ದ, **ತಂ** = ಆ ಭೀಷ್ಮನನ್ನು, **ನಿರೀಕ್ಷ್ಯ** = ನೋಡಿ, **ವಾಸುದೇವೇನ** = ವಸುದೇವನ ಮಗನಾದ ಶ್ರೀಕೃಷ್ಣನಿಂದ, **ಸಂಚೋದಿತಃ** = ಪ್ರೇರಿಸಲ್ಪಟ್ಟ, **ಲೋಕವೀರಃ** = ಲೋಕವೀರನಾದ, **ಪಾರ್ಥಃ** = ಪೃಥೆಯ ಮಗನಾದ ಅರ್ಜುನನು, **ಅರ್ಧಚಂದ್ರೇಣ** = ಅರ್ಧ ಚಂದ್ರಾಕಾರವಾದ ಬಾಣದಿಂದ, **ತತ್ಕಾರ್ಮುಕಂ** = ಆ ಭೀಷ್ಮನ ಬಿಲ್ಲನ್ನು,

**ಚಿಚ್ಛೇದ** = ಕತ್ತರಿಸಿದ, **ಸ ಚ** = ಆ ಭೀಷ್ಮನೂ, **ಅನ್ಯತ್** = ಬೇರೆ ಒಂದು ಬಿಲ್ಲನ್ನು, **ಆದದೇ** = ತೆಗೆದುಕೊಂಡನು.

**ತಾತ್ಪರ್ಯ** :- ರಣರಂಗದಲ್ಲಿ ಸೂರ್ಯನಂತೆ ತಾಪ ನೀಡುತ್ತಿದ್ದ ಭೀಷ್ಮನನ್ನು ನೋಡಿ ಕೃಷ್ಣನಿಂದ ಚೋದಿತನಾದ ಲೋಕಪ್ರವೀರನಾದ ಅರ್ಜುನನು ಆ ಭೀಷ್ಮನ ಬಿಲ್ಲನ್ನು ಅರ್ಧಚಂದ್ರಾಕಾರ ಬಾಣದಿಂದ ಕತ್ತರಿಸಿದ. ಭೀಷ್ಮನು ಇನ್ನೊಂದು ಬಿಲ್ಲನ್ನು ಎತ್ತಿಕೊಂಡ.

**ಚಿಚ್ಛೇದ ತಚ್ಚೈವಮಷ್ಟೌ ಧನೂಂಷಿ**
**ಶಕ್ತಿಂ ಚ ಚರ್ಮಾಸಿವರಂ ಪರಾಣಿ ಚ ।**
**ಧನೂಂಷಿ ದತ್ತಾನಿ ನೃಭಿರ್ನೃಪಸ್ಯ**
**ಸರ್ವಾಣಿ ಚಿಚ್ಛೇದ ಸ ಪಾಕಶಾಸನಿಃ ॥ ೧೩೪ ॥**

**ಅರ್ಥ** :- **ಸಃ** = ಆ, **ಪಾಕಶಾಸನಿಃ** = ಇಂದ್ರಪುತ್ರನಾದ ಅರ್ಜುನನು, **ತಚ್ಚ** = ಆ ಬಿಲ್ಲನ್ನೂ, **ಚಿಚ್ಛೇದ** = ಕತ್ತರಿಸಿದ, **ಏವಂ** = ಇದೇ ರೀತಿಯಾಗಿ, **ಅಷ್ಟೌ** = ಎಂಟು, **ಧನೂಂಷಿ** = ಬಿಲ್ಲುಗಳನ್ನು, **ಶಕ್ತಿಂ** = ಶಕ್ತ್ಯಾಯುಧವನ್ನು, **ಚರ್ಮಾಸಿವರಂ ಚ** = ಚರ್ಮ ಶ್ರೇಷ್ಠ ಖಡ್ಗವನ್ನೂ, **ಚಿಚ್ಛೇದ** = ಕತ್ತರಿಸಿದ, **ನೃಪಸ್ಯ** = ರಾಜನಾದ ದುರ್ಯೋಧನನ, **ನೃಭಿಃ** = ಭಟರಿಂದ, **ದತ್ತಾನಿ** = ಕೊಡಲ್ಪಟ್ಟ, **ಪರಾಣಿ** = ಬೇರೆ, **ಸರ್ವಾಣಿ** = ಎಲ್ಲಾ, **ಧನೂಂಷಿ** = ಬಿಲ್ಲುಗಳನ್ನು, **ಚಿಚ್ಛೇದ** = ಕತ್ತರಿಸಿದ.

**ತಾತ್ಪರ್ಯ** :- ಅರ್ಜುನ ಆ ಬಿಲ್ಲನ್ನೂ ಕತ್ತರಿಸಿದ. ಇದೇ ರೀತಿಯಾಗಿ ಎಂಟು ಬಿಲ್ಲುಗಳನ್ನು ಶಕ್ತ್ಯಾಯುಧವನ್ನೂ ಶ್ರೇಷ್ಠವಾದ ಖಡ್ಗ ಚರ್ಮಗಳನ್ನೂ ಕತ್ತರಿಸಿದ ಮತ್ತು ದುರ್ಯೋಧನನ ಭಟರು ನೀಡಿದ ಬೇರೆ ಎಲ್ಲಾ ಬಿಲ್ಲುಗಳನ್ನೂ ಕತ್ತರಿಸಿದ.

**ತತಃ ಶರೈಃ ಸೂರ್ಯಕರಪ್ರಕಾಶೈ-**
**ರ್ವಿವ್ಯಾಧ ಸರ್ವೇ ಚ ಯುಧಿಷ್ಠಿರಾದ್ಯಾಃ ।**
**ತೈರರ್ದಿತೋ ನೃಪತದ್ ಭೂತಳೇ ಸ**
**ಪ್ರಾಣಾನ್ ದಧಾರಾಪಿ ತಥೋತ್ತರಾಯಣಾತ್ ॥ ೧೩೫ ॥**

**ಅರ್ಥ** :- **ತತಃ** = ಅನಂತರ (**ಸಃ** = ಆ, **ಪಾಕಶಾಸನಿಃ** = ಇಂದ್ರ ಪುತ್ರನಾದ ಅರ್ಜುನನು), **ಸೂರ್ಯಕರಪ್ರಕಾಶೈಃ** = ಸೂರ್ಯನ ಕಿರಣಗಳಂತೆ ಪ್ರಕಾಶವುಳ್ಳ, **ಶರೈಃ** = ಬಾಣಗಳಿಂದ, **ವಿವ್ಯಾಧ** = ಹೊಡೆದನು, **ಯುಧಿಷ್ಠಿರಾದ್ಯಾಃ** = ಯುಧಿಷ್ಠಿರ ಮೊದಲಾದವರೂ, (ಹೊಡೆದರು) **ತೈಃ** = ಅವರಿಂದ, **ಅರ್ದಿತಃ** = ಪೀಡಿತನಾದ, **ಸಃ** = ಆ ಭೀಷ್ಮನು, **ಭೂತಲೇ** = ನೆಲದ ಮೇಲೆ, **ನ್ಯಪತತ್** = ಬಿದ್ದನು, **ತಥಾಽಪಿ** = ಹಾಗೆ ಬಿದ್ದರೂ ಕೂಡ, **ಆ ಉತ್ತರಾಯಣಾತ್** = ಉತ್ತರಾಯಣದ ಪರ್ಯಂತ, **ಪ್ರಾಣಾನ್ ದಧಾರ** = ಪ್ರಾಣಧಾರಣೆ ಮಾಡಿದ.

**ತಾತ್ಪರ್ಯ** :- ಅನಂತರ ಅರ್ಜುನ ಸೂರ್ಯನ ಕಿರಣಗಳಂತೆ ಹೊಳೆಯುವ ಬಾಣಗಳಿಂದ ಭೀಷ್ಮನನ್ನು ಹೊಡೆದ. ಯುಧಿಷ್ಠಿರ ಮೊದಲಾದವರೂ ಹೊಡೆದರು. ಅರ್ಜುನ ಮೊದಲಾದವರಿಂದ ಪೀಡಿತನಾದ ಭೀಷ್ಮ ನೆಲದ ಮೇಲೆ ಬಿದ್ದ. ಉತ್ತರಾಯಣದ ತನಕ ಪ್ರಾಣಧಾರಣೆ ಮಾಡಿದ.

**ನಿಪಾತಿತೇಽಸ್ಮಿನ್ ಮಾರುತಿರ್ದ್ರೋಣಮುಖ್ಯಾನ್**
**ವಿದ್ರಾವ್ಯ ತತ್ರಾಽಗಮದಾಶು ತೇಽಪಿ ।**
**ತದಾಯುಧಾನಿ ಪ್ರಣಿಧಾಯ ವೀರಾಃ**
**ಪಾರ್ಥಾಃ ಪರೇ ಚೈನಮುಪಾಸದನ್ ಸ್ಮ ॥ ೧೩೬ ॥**

**ಅರ್ಥ** :- **ಅಸ್ಮಿನ್** = ಈ ಭೀಷ್ಮನು, **ನಿಪಾತಿತೇ** = ಬೀಳಿಸಲ್ಪಡುತ್ತಿರಲು, **ಮಾರುತಿಃ** = ಭೀಮನು, **ದ್ರೋಣಮುಖ್ಯಾನ್** = ದ್ರೋಣ ಮೊದಲಾದವರನ್ನು, **ವಿದ್ರಾವ್ಯ** = ಓಡಿಸಿ, **ತತ್ರ** = ಆ ಭೀಷ್ಮನಿದ್ದ ಸ್ಥಳಕ್ಕೆ, **ಆಗಮತ್** = ಬಂದನು, **ತೇಽಪಿ** = ಆ ದ್ರೋಣ ಮೊದಲಾದವರೂ ಕೂಡ, **ಆಯುಧಾನಿ** = ಆಯುಧಗಳನ್ನು, **ಪ್ರಣಿಧಾಯ** = ಇಟ್ಟು, **ತತ್ರ** = ಅಲ್ಲಿಗೆ, **ಅಗಮನ್** = ಬಂದರು, **ವೀರಾಃ** = ವೀರರಾದ, **ಪಾರ್ಥಾಃ** = ಪಾಂಡವರು, **ಪರೇ ಚ** = ಬೇರೆ ಪಕ್ಷದವರಾದ ಕೌರವರೂ, **ಏನಂ** = ಈ ಭೀಷ್ಮನನ್ನು, **ಉಪಾಸದನ್ ಸ್ಮ** = ಹೊಂದಿದರು.

**ತಾತ್ಪರ್ಯ** :- ಭೀಷ್ಮ ನೆಲದ ಮೇಲೆ ಬಿದ್ದಾಗ ಭೀಮನು ದ್ರೋಣ ಮೊದಲಾದವರನ್ನು ಓಡಿಸಿ ಭೀಷ್ಮನಿದ್ದ ಸ್ಥಳಕ್ಕೆ ಬಂದನು. ಅವರೂ ಕೂಡ

ಆಯುಧಗಳನ್ನು ಕೆಳಗಿಟ್ಟು ಆ ಸ್ಥಳಕ್ಕೆ ಬಂದರು. ಹಾಗೆ ವೀರರಾದ ಪಾಂಡವರು ಕೌರವರು ಭೀಷ್ಮನಿದ್ದಲ್ಲಿಗೆ ಆಗಮಿಸಿದರು.

**ಪ್ರಣಮ್ಯ ತಂ ತದ್ವಚನಾತ್ ಸಮೀಯು-**
**ಸ್ತಸ್ಮಿನ್ ದಿನೇ ಶಿಬಿರಾಣ್ಯೇವ ಸರ್ವೇ ।**
**ಪರೇ ದಿನೇ ಸರ್ವ ಏವೋಪತಸ್ಥು-**
**ರ್ಭೀಷ್ಮಂ ಯದೂನಾಂ ಪತಿನಾ ಸಹೈವ ॥ ೧೩೭ ॥**

**ಅರ್ಥ :-** **ಸರ್ವೇ** = ಎಲ್ಲರೂ, **ತಂ** = ಆ ಭೀಷ್ಮನನ್ನು, **ಪ್ರಣಮ್ಯ** = ನಮಸ್ಕರಿಸಿ, **ತದ್ವಚನಾತ್** = ಆ ಭೀಷ್ಮನ ಮಾತಿನಿಂದ, **ತಸ್ಮಿನ್** = ಆ, **ದಿನೇ** = ದಿವಸದಲ್ಲಿ, **ಶಿಬಿರಾಣ್ಯೇವ** = ಶಿಬಿರವನ್ನು ಕುರಿತೇ, **ಸಮೀಯುಃ** = ಹೋದರು, **ಪರೇ ದಿನೇ** = ಮಾರನೆಯ ದಿನ, **ಸರ್ವೇ ಏವ** = ಎಲ್ಲರೂ, **ಯದೂನಾಂ** = ಯಾದವರ, **ಪತಿನಾ ಸಹೈವ** = ಪತಿಯಾದ ಶ್ರೀಕೃಷ್ಣನ ಜೊತೆಗೆ, **ಭೀಷ್ಮಂ** = ಭೀಷ್ಮನನ್ನು ಕುರಿತು, **ಉಪತಸ್ಥುಃ** = ಬಂದರು.

**ತಾತ್ಪರ್ಯ :-** ಅವರೆಲ್ಲರೂ ಭೀಷ್ಮರನ್ನು ವಂದಿಸಿ ಅವನ ಮಾತಿನಂತೆ ಶಿಬಿರಕ್ಕೆ ಹೋದರು. ಮಾರನೆಯ ದಿನ ಕೃಷ್ಣನ ಜೊತೆಗೆ ಎಲ್ಲರೂ ಭೀಷ್ಮನಿದ್ದಲ್ಲಿಗೆ ಬಂದರು.

**ಸ ಪೂರ್ವದಿವಸೇ ಪಾರ್ಥದತ್ತಬಾಣೋಪಬರ್ಹಣಃ ।**
**ತದಾಽಪಿ ತೃಟ್‌ಪರೀತಾತ್ಮಾ ಯೋಗ್ಯಂ ಪೇಯಮಯಾಚತ ॥ ೧೩೮ ॥**

**ಅರ್ಥ :-** **ಪೂರ್ವದಿವಸೇ** = ಹಿಂದಿನ ದಿವಸ, **ಪಾರ್ಥದತ್ತಬಾಣೋಪ ಬರ್ಹಣಃ** = ಪೃಥೆಯ ಮಗನಾದ ಅರ್ಜುನನಿಂದ ಕೊಡಲ್ಪಟ್ಟ ಬಾಣಗಳ ತಲೆದಿಂಬುಳ್ಳ, **ಸಃ** = ಆ ಭೀಷ್ಮನು, **ತದಾಽಪಿ** = ಎರಡನೆಯ ದಿವಸದಲ್ಲೂ ಕೂಡ, **ತೃಟ್ಪರೀತಾತ್ಮಾ** = ಬಾಯಾರಿಕೆಯಿಂದ ತುಂಬಿದ ಜೀವವುಳ್ಳವನಾಗಿ, **ಯೋಗ್ಯಂ** = ಯೋಗ್ಯವಾದ, **ಪೇಯಂ** = ನೀರನ್ನು, **ಅಯಾಚತ** = ಬೇಡಿದನು.

**ತಾತ್ಪರ್ಯ :-** ಹಿಂದಿನ ದಿನ ಅರ್ಜುನ ನೀಡಿದ ಬಾಣಗಳ ತಲೆದಿಂಬಿನಿಂದ ಕೂಡಿದ ಭೀಷ್ಮ ಅವತ್ತಿನ ಬಾಯಾರಿಕೆಯಿಂದ ಬಳಲಿದವನಾಗಿ ನೀರನ್ನು ಯಾಚಿಸಿದ.

**ಧಾರ್ತರಾಷ್ಟ್ರೈರವಿಜ್ಞಾತಂ ತದಭಿಜ್ಞಾಯ ವಾಸವಿಃ ।**
**ವಾರುಣಾಸ್ತ್ರೇಣ ಭಿತ್ತ್ವಾ ಸ ಭೂಮಿಂ ವಾರಿ ಸುಗಂಧಿ ಚ ।**
**ಊರ್ಧ್ವಧಾರಮದಾದಾಸ್ಯೇ ತರ್ಪಿತೋಽನೇನ ಸೋಽವದತ್ ॥ ೧೩೯ ॥**

**ಅರ್ಥ :- ಧಾರ್ತರಾಷ್ಟ್ರೈಃ** = ಧೃತರಾಷ್ಟ್ರನ ಮಕ್ಕಳಾದ ದುರ್ಯೋಧನಾದಿಗಳಿಂದ, **ಅವಿಜ್ಞಾತಂ** = ತಿಳಿಯಲ್ಪಡದ, **ತತ್** = ಅದನ್ನು, **ಸ ವಾಸವಿಃ** = ಆ ಅರ್ಜುನನು, **ಅಭಿಜ್ಞಾಯ** = ತಿಳಿದು, **ವಾರುಣಾಸ್ತ್ರೇಣ** = ವಾರುಣಾಸ್ತ್ರದಿಂದ, **ಭೂಮಿಂ** = ಭೂಮಿಯನ್ನು, **ಭಿತ್ತ್ವಾ** = ಭೇದಿಸಿ, **ಸುಗಂಧಿ** = ಪರಿಮಳ ಯುಕ್ತವಾದ, **ಊರ್ಧ್ವಧಾರಂ** = ಮೇಲ್ಮುಖವಾದ ಧಾರೆಯುಳ್ಳ, **ವಾರಿ** = ನೀರನ್ನು, **ಆಸ್ಯೇ** = ಬಾಯಿಯಲ್ಲಿ, **ಅದಾತ್** = ಇಟ್ಟನು, **ಅನೇನ** = ಈ ಅರ್ಜುನನಿಂದ, **ತರ್ಪಿತಃ** = ತೃಪ್ತನಾದ, **ಸಃ** = ಆ ಭೀಷ್ಮನು, **ಅವದತ್** = ಹೇಳಿದನು.

**ತಾತ್ಪರ್ಯ :-** ದುರ್ಯೋಧನಾದಿಗಳಿಗೆ ಭೀಷ್ಮನಿಗೆ ಯೋಗ್ಯವಾದ ನೀರು ಯಾವುದೆಂದು ತಿಳಿಯಲಿಲ್ಲ. ಆವಾಗ ಅರ್ಜುನ ತಿಳಿದು ವಾರುಣಾಸ್ತ್ರದಿಂದ ಭೂಮಿಯನ್ನು ಭೇದಿಸಿ ನಿರ್ಮಲವಾದ ಸುಗಂಧಯುಕ್ತವಾದ ಮೇಲ್ಮುಖವಾಗಿ ಧಾರೆಯುಳ್ಳ ನೀರನ್ನು ಭೀಷ್ಮನ ಬಾಯಿಯಲ್ಲಿ ಸುರಿಸಿದ. ಅದರಿಂದ ತೃಪ್ತನಾದ ಭೀಷ್ಮ ಹೇಳಿದ.

**ಯಾದೃಶ್ಯಸ್ತ್ರಜ್ಞತಾ ಪಾರ್ಥೇ ದೃಷ್ಟಾಽತ್ರ ಕುರುನಂದನಾಃ ।**
**ಯಾದೃಗ್ ಬಾಹ್ವೋರ್ಬಲಂ ಭೀಮೇ ಸಂಯುಗೇಷು ಪುನಃಪುನಃ ॥೧೪೦॥**

**ಯಾದೃಶಂ ಚೈವ ಮಾಹಾತ್ಮ್ಯಮನಂತಮಜರಂ ಹರೇಃ ।**
**ವಿಜ್ಞಾತಂ ಸರ್ವಲೋಕಸ್ಯ ಸಭಾಯಾಂ ದೃಷ್ಟಮೇವ ಚ ॥ ೧೪೧ ॥**

**ಅರ್ಥ :- ಕುರುನಂದನಾಃ** = ಹೇ ಕೌರವರೇ!, **ಪಾರ್ಥೇ** = ಪೃಥೆಯ ಮಗನಾದ ಅರ್ಜುನನಲ್ಲಿ, **ಯಾದೃಶೀ** = ಎಂತಹ, **ಅಸ್ತ್ರಜ್ಞತಾ** = ಅಸ್ತ್ರದ ಜ್ಞಾನವು, (**ಅಸ್ತಿ** = ಇದೆಯೋ) **ಸಾ** = ಅದು, **ಅತ್ರ** = ಈ ಜಲದಾನದ ವಿಷಯದಲ್ಲಿ, **ದೃಷ್ಟಾ** = ನೋಡಲ್ಪಟ್ಟಿತು, **ಭೀಮೇ** = ಭೀಮನಲ್ಲಿ, **ಯಾದೃಕ್** = ಯಾವ ತರಹದ, **ಬಾಹ್ವೋಃ** = ಬಾಹುಗಳ, **ಬಲಂ** = ಬಲವು, (**ಅಸ್ತಿ** = ಇದೆಯೋ) **ತತ್** = ಅದು, **ಪುನಃ ಪುನಃ** = ಮತ್ತೆ ಮತ್ತೆ, **ಸಂಯುಗೇಷು** =

ಯುದ್ಧಗಳಲ್ಲಿ, **ದೃಷ್ಟಂ** = ನೋಡಲ್ಪಟ್ಟಿದೆ, **ಯಾದೃಶಂ** = ಯಾವ ತರಹದ, **ಅನಂತಂ** = ಅಪರಿಮಿತವಾದ, **ಅಜರಂ** = ಹ್ರಾಸವಿಲ್ಲದ, **ಮಾಹಾತ್ಮ್ಯಂ** = ಮಾಹಾತ್ಮ್ಯವು, **ಹರೇಃ** = ಶ್ರೀ ಕೃಷ್ಣನಿಗೆ, (**ಅಸ್ತಿ** = ಇದೆಯೋ) **ತತ್** = ಅದು, **ಸರ್ವಲೋಕಸ್ಯ ಚ** = ಎಲ್ಲಾ ಜನರಿಗೂ, **ವಿಜ್ಞಾತಂ** = ತಿಳಿಯಲ್ಪಟ್ಟಿದೆ, **ಸಭಾಯಾಂ** = ಸಭೆಯಲ್ಲಿ, **ದೃಷ್ಟಮೇವ ಚ** = ನಿಮ್ಮಿಂದಲೂ ನೋಡಲ್ಪಟ್ಟೇ ಇದೆ.

**ತಾತ್ಪರ್ಯ** :- ಕೌರವರೆ, ಅರ್ಜುನನಿಗೆ ಎಂಥ ಅಸ್ತ್ರಜ್ಞಾನವಿದೆ ಎಂದು ಈಗ ನೋಡಿದಿರಿ. ಭೀಮನಿಗೆ ಎಷ್ಟು ಬಲ ಇದೆ ಎನ್ನುವುದನ್ನು ಯುದ್ಧಗಳಲ್ಲಿ ಮತ್ತೆ ಮತ್ತೆ ನೋಡಿದ್ದೀರಿ. ಇನ್ನು ಅಪರಿಮಿತವಾದ ಹ್ರಾಸರಹಿತವಾದ ಶ್ರೀಕೃಷ್ಣನ ಮಹಿಮೆಯನ್ನಂತೂ ಸಭೆಯಲ್ಲಿ ಎಲ್ಲಾ ಜನರ ಮುಂದೆ ಕಂಡಿದ್ದೀರಿ.

**ಉಪಾರಮತ ತದ್ ಯುದ್ಧಂ ಸುಖಿನಃ ಸಂತು ಭೂಮಿಪಾಃ ।**
**ಯಥೋಚಿತವಿಭಕ್ತಾಂ ಚ ಭುಂಗ್ಧ್ವಂ ಭೂಪಾಃ ಸದಾ ಭುವಮ್ ॥ ೧೪೨ ॥**

**ಅರ್ಥ** :- **ತತ್** = ಆದ್ದರಿಂದ, **ಯುದ್ಧಂ** = ಯುದ್ಧವನ್ನು, **ಉಪಾರಮತ** = ನಿಲ್ಲಿಸಿರಿ, **ಭೂಮಿಪಾಃ** = ರಾಜರು, **ಸುಖಿನಃ** = ಸುಖವುಳ್ಳವರು, **ಸಂತು** = ಆಗಲಿ, **ಯಥೋಚಿತವಿಭಕ್ತಾಂ** = ಯಥೋಚಿತವಾಗಿ ಭಾಗಮಾಡಲ್ಪಟ್ಟ, **ಭುವಂ** = ಭೂಮಿಯನ್ನು, **ಭೂಪಾಃ** = ರಾಜರಾದ ನೀವು, **ಸದಾ** = ನಿತ್ಯವೂ, **ಭುಜ್ಧ್ವಂ** = ಭೋಗಿಸಿರಿ.

**ತಾತ್ಪರ್ಯ** :- ಕೌರವರೇ! ಆದ್ದರಿಂದ ಯುದ್ಧವನ್ನು ನಿಲ್ಲಿಸಿರಿ ನಿಮ್ಮ ಸಹಾಯಕ್ಕಾಗಿ ಬಂದವರೆಲ್ಲರೂ ತಮ್ಮ ಸ್ಥಾನಗಳಿಗೆ ಹೋಗಿ ಸುಖಿಗಳಾಗಿರಲಿ. ಭೂಮಿಯನ್ನು ಯಥೋಚಿತವಾಗಿ ಭಾಗ ಮಾಡಿ ನಿಮಗೆ ಸೇರಿದ್ದನ್ನು ನೀವು ಅನುಭವಿಸಿರಿ.

**ಇತ್ಯುಕ್ತಃ ಪ್ರಯಯೌ ತೂಷ್ಣೀಂ ಧಾರ್ತರಾಷ್ಟ್ರಃ ಸ್ವಕಂ ಗೃಹಮ್ ॥ ೧೪೩ ॥**

**ಅರ್ಥ** :- **ಇತಿ** = ಈ ರೀತಿಯಾಗಿ, **ಉಕ್ತಃ** = ಹೇಳಲ್ಪಟ್ಟ, **ಸಃ** = ಆ, **ಧಾರ್ತರಾಷ್ಟ್ರಃ** = ಧೃತರಾಷ್ಟ್ರನ ಮಗನಾದ ದುರ್ಯೋಧನನು, **ತೂಷ್ಣೀಂ** =

ಸುಮ್ಮನೆ, **ಸ್ವಕಂ** = ತನ್ನದಾದ, **ಗೃಹಂ** = ಮನೆಯನ್ನು ಕುರಿತು, **ಯಯೌ** = ಹೋದನು.

**ತಾತ್ಪರ್ಯ** :- ಹೀಗೆ ಭೀಷ್ಮ ಹೇಳಿದಾಗ ದುರ್ಯೋಧನ ಏನೂ ಹೇಳದೆ ತನ್ನ ಮನೆಗೆ ಹೊರಟು ಹೋದ.

**ವ್ಯಾಸದತ್ತೋರುವಿಜ್ಞಾನಾತ್ ಸಂಜಯಾದಖಿಲಂ ಪಿತಾ ।**
**ಶ್ರುತ್ವಾ ತದಾ ಪರ್ಯತಪ್ಯತ್ ಪಾಂಡವಾಃ ಕೃಷ್ಣದೇವತಾಃ ।**
**ಮುಮುದುಃ ಶಿಬಿರಂ ಪ್ರಾಪ್ಯ ಸರ್ವೇ ಕೃಷ್ಣಾನುಮೋದಿತಾಃ ॥ ೧೪೪ ॥**

**ಅರ್ಥ :- ವ್ಯಾಸದತ್ತೋರುವಿಜ್ಞಾನಾತ್** = ವೇದವ್ಯಾಸರಿಂದ ಕೊಡಲ್ಪಟ್ಟ ಉತ್ಕೃಷ್ಟವಾದ ಜ್ಞಾನವುಳ್ಳ, **ಸಂಜಯಾತ್** = ಸಂಜಯನಿಂದ, **ಅಖಿಲಂ** = ಎಲ್ಲವನ್ನೂ, **ಶ್ರುತ್ವಾ** = ಕೇಳಿ, **ಪಿತಾ** = ತಂದೆಯಾದ ಧೃತರಾಷ್ಟ್ರನು, **ಪರ್ಯತಪ್ಯತ್** = ಪರಿತಪಿಸಿದ, **ಕೃಷ್ಣದೇವತಾಃ** = ಕೃಷ್ಣನೇ ದೇವತೆಯಾಗಿ ಉಳ್ಳ, **ಕೃಷ್ಣಾನುಮೋದಿತಾಃ** = ಕೃಷ್ಣನಿಂದಲೇ ಶಿಕ್ಷಿತರಾದ, **ಸರ್ವೇ** = ಎಲ್ಲಾ, **ಪಾಂಡವಾಃ** = ಪಾಂಡವರು, **ಶಿಬಿರಂ** = ಶಿಬಿರವನ್ನು, **ಪ್ರಾಪ್ಯ** = ಹೊಂದಿ, **ಮುಮುದುಃ** = ಸಂತೋಷಪಟ್ಟರು.

**ತಾತ್ಪರ್ಯ** :- ವೇದವ್ಯಾಸರಿಂದ ಕೊಡಲ್ಪಟ್ಟ ದಿವಯ ಜ್ಞಾನವುಳ್ಳ ಸಂಜಯ ಧೃತರಾಷ್ಟ್ರನಿಗೆ ಎಲ್ಲವನ್ನೂ ಹೇಳಿದ. ಅವನು ಕೇಳಿ ಪರಿತಪಿಸಿದ. ಪಾಂಡವರು ಕೃಷ್ಣನನ್ನೇ ದೇವತೆ ಎಂದು ತಿಳಿದವರಾಗಿ ಶಿಬಿರಕ್ಕೆ ಹೋಗಿ ಸಂತೋಷಪಟ್ಟರು.

ಇತಿ ಶ್ರೀಮದಾನಂದತೀರ್ಥಭಗವತ್ಪಾದವಿರಚಿತೇ
ಶ್ರೀಮಹಾಭಾರತತಾತ್ಪರ್ಯನಿರ್ಣಯೇ ಭೀಷ್ಮಪಾತೋ ನಾಮ
ಪಂಚವಿಂಶೋಽಧ್ಯಾಯಃ

# ಅಧ್ಯಾಯ - 26

ನಾರಾಯಣಾಸ್ತ್ರೋಪಶಮನಮ್

**ಓಂ ॥ ಅಥಾಖಿಲಾನಾಂ ಪೃಥಿವೀಪತೀನಾ-**
**ಮಾಚಾರ್ಯಮಗ್ರ್ಯಂ ರಥಿನಾಂ ಸುವಿದ್ಯಮ್ ।**
**ರಾಮಸ್ಯ ವಿಶ್ವಾಧಿಪತೇಃ ಸುಶಿಷ್ಯಂ**
**ಚಕ್ರೇ ಚಮೂಪಂ ಧೃತರಾಷ್ಟ್ರಪುತ್ರಃ ॥ ೧ ॥**

**ಅರ್ಥ** :- **ಅಥ** = ಭೀಷ್ಮರ ಪಾತವಾದ ಅನಂತರ, **ಅಖಿಲಾನಾಂ** = ಎಲ್ಲಾ, **ಪೃಥಿವೀಪತೀನಾಂ** = ರಾಜರಿಗೆ, **ಆಚಾರ್ಯಂ** = ಅಸ್ತ್ರವಿದ್ಯೆಯ ಆಚಾರ್ಯರಾದ, **ರಥಿನಾಂ** = ರಥಿಕರ ಪೈಕಿ, **ಅಗ್ರ್ಯಂ** = ಶ್ರೇಷ್ಠರಾದ, **ಸುವಿದ್ಯಮ್** = ಒಳ್ಳೆಯ ವಿದ್ಯೆಯುಳ್ಳ, **ವಿಶ್ವಾಧಿಪತೇಃ** = ಜಗದೀಶ್ವರನಾದ, **ರಾಮಸ್ಯ** = ಪರಶುರಾಮನ, **ಸುಶಿಷ್ಯಂ** = ಶಿಷ್ಯಶ್ರೇಷ್ಠನಾದ ದ್ರೋಣನನ್ನು, **ಧೃತರಾಷ್ಟ್ರಪುತ್ರಃ** = ಧೃತರಾಷ್ಟ್ರನ ಮಗನಾದ ದುರ್ಯೋಧನನು, **ಚಮೂಪಂ** = ಸೇನಾನಾಯಕರನ್ನಾಗಿ, **ಚಕ್ರೇ** = ಮಾಡಿದನು.

**ತಾತ್ಪರ್ಯ** :- ಭೀಷ್ಮರ ಪಾತವಾದ ಮೇಲೆ ದುರ್ಯೋಧನ ಎಲ್ಲ ರಾಜರಿಗೂ ಅಸ್ತ್ರವಿದ್ಯಾಗುರುಗಳೂ ರಥಿಕರಲ್ಲಿ ಶ್ರೇಷ್ಠರೂ, ಒಳ್ಳೆಯ ವಿದ್ಯಾಸಂಪನ್ನರೂ ಆದ, ಜಗದೀಶ್ವರನಾದ ಪರಶುರಾಮನದೇವರ ಶಿಷ್ಯಶ್ರೇಷ್ಠರಾದ ದ್ರೋಣರನ್ನು ಸೇನಾಧಿಪತಿಯನ್ನು ಮಾಡಿದ.

**ಕರ್ಣೋಽಪಿ ಭೀಷ್ಮಾನುಮತೋ ಧನುಷ್ಮಾನ್**
**ಯುದ್ಧೋದ್ಯತೋಽಭೂತ್ ತದಸತ್ಕೃತಃ ಪುರಾ ।**
**ತಸ್ಮಿನ್ ಸ್ಥಿತೇಽನಾತ್ತಧನುಸ್ತದೈವ**
**ರಥಂ ಸಮಾಸ್ಥಾಯ ಗುರುಂ ಸಮನ್ವಯಾತ್ ॥ ೨ ॥**

**ಅರ್ಥ** :- **ಪುರಾ** = ಹಿಂದೆ, **ತಸ್ಮಿನ್** = ಆ ಭೀಷ್ಮರು, **ಸ್ಥಿತೇ** = ಸೇನಾಧಿಪತಿಯಾಗಿ ಇದ್ದಾಗ, **ತದಸತ್ಕೃತಃ** = ಭೀಷ್ಮರಿಂದ ಅವಮಾನಿತನಾಗಿ, **ತದಾ** = ಆವಾಗ, **ಅನಾತ್ತಧನುಃ** = ಬಿಲ್ಲನ್ನು ಎತ್ತದಿದ್ದ, **ಕರ್ಣೋಽಪಿ** = ಕರ್ಣನಾದರೂ, **ಭೀಷ್ಮಾನುಮತಃ** = ಈಗ ಭೀಷ್ಮರ ಅನುಮತಿ ಪಡೆದವನಾಗಿ, **ಯುದ್ಧೋದ್ಯತಃ** = ಯುದ್ಧಕ್ಕೆ ಉದ್ಯತನಾಗಿ, **ಧನುಷ್ಮಾನ್** = ಬಿಲ್ಲನ್ನು ಧರಿಸಿದವನಾಗಿ, **ರಥಂ** = ರಥವನ್ನು, **ಸಮಸ್ಥಾಯ** = ಏರಿ, **ಗುರುಂ** = ಗುರುಗಳಾದ ದ್ರೋಣರನ್ನು, **ಸಮನ್ವಯಾತ್** = ಹಿಂಬಾಲಿಸಿದ.

**ತಾತ್ಪರ್ಯ** :- ಹಿಂದೆ ಭೀಷ್ಮರು ಸೇನಾಧಿಪತಿಯಾಗಿದ್ದಾಗ ಕರ್ಣನನ್ನು ನಿಂದಿಸಿರುತ್ತಾರೆ. ನಿಂದಿತನಾದ ಕರ್ಣ ಬಿಲ್ಲನ್ನು ತೆಗೆದುಕೊಂಡಿರುವುದಿಲ್ಲ. ಈಗ ಭೀಷ್ಮಪಾತವಾದ ಮೇಲೆ ಭೀಷ್ಮರ ಅನುಮತಿ ಪಡೆದು ಯುದ್ಧಕ್ಕೆ ಉದ್ಯತನಾಗಿ ಬಿಲ್ಲನ್ನು ಧರಿಸಿದ. ರಥ ಏರಿ ದ್ರೋಣನನ್ನು ಹಿಂಬಾಲಿಸಿದ.

**ದ್ರೋಣೋ ವೃತೋ ಧಾರ್ತರಾಷ್ಟ್ರೇಣ ಧರ್ಮ-**
**ಸುತಗ್ರಹೇ ತೇನ ಕೃತೇ ಪ್ರತಿಶ್ರವೇ ।**
**ಜ್ಞಾತ್ವಾ ಯತ್ತಾಃ ಪಾಂಡವಾಸ್ತಂ ಸಮೀಯು-**
**ರ್ಯುದ್ಧಾಯ ತತ್ರಾಭವದುಗ್ರಯುದ್ಧಮ್ ॥ ೩ ॥**

**ಅರ್ಥ** :- **ಧಾರ್ತರಾಷ್ಟ್ರೇಣ** = ದುರ್ಯೋಧನನಿಂದ, **ಧರ್ಮಸುತ ಗ್ರಹೇ** = ಧರ್ಮರಾಜನನ್ನು ಸೆರೆಹಿಡಿಯುವ ವಿಷಯದಲ್ಲಿ, **ದ್ರೋಣಃ** = ದ್ರೋಣರು, **ವೃತಃ** = ಪ್ರಾರ್ಥಿಸಲ್ಪಟ್ಟರು, **ತೇನ** = ಆ ದ್ರೋಣರಿಂದ, **ಪ್ರತಿಶ್ರವೇ** = ಧರ್ಮರಾಜನ ಹಿಡಿಯುವ ಪ್ರತಿಜ್ಞೆಯು, **ಕೃತೇ** = ಮಾಡಲ್ಪಡುತ್ತಿರಲು, **ಪಾಂಡವಾಃ** = ಪಾಂಡವರು, **ತಂ** = ಆ ವಿಷಯವನ್ನು, **ಜ್ಞಾತ್ವಾ** = ತಿಳಿದು, **ಆಯತ್ತಾಃ** = ಯುಧಿಷ್ಠಿರನ ರಕ್ಷಣೆಗೆ ಸಿದ್ಧರಾಗಿ, **ಯುದ್ಧಾಯ** = ಯುದ್ಧಕ್ಕೆ, **ಸಮೀಯುಃ** = ಹೊರಟರು, **ತತ್ರ** = ಅಲ್ಲಿ, **ಉಗ್ರಯುದ್ಧಂ** = ಘೋರವಾದ ಯುದ್ಧವು, **ಅಭವತ್** = ನಡೆಯಿತು.

**ತಾತ್ಪರ್ಯ** :- ದುರ್ಯೋಧನನು ಧರ್ಮರಾಜನನ್ನು ಸೆರೆ ಹಿಡಿಯುವಂತೆ ಬೇಡಿದ. ಅವರು ಪ್ರತಿಜ್ಞೆ ಮಾಡಿದರು. ಈ ವಿಷಯ ತಿಳಿದು ಪಾಂಡವರು ಯುಧಿಷ್ಠಿರನ ರಕ್ಷಣೆಗೆ ಸಿದ್ಧರಾಗಿ ಬಂದರು. ಅಲ್ಲಿ ಘೋರವಾದ ಯುದ್ಧ ನಡೆಯಿತು.

**ಪತತ್ರಿಭಿಸ್ತತ್ರ ದುಧಾವ ಶಾತ್ರವಾನ್**
**ದ್ರೋಣೋ ಧನುರ್ಮಂಡಲಮಂತ್ರನಿಸ್ಸೃತೈಃ ।**
**ತಮಾಸಸಾದಾಽಶು ವೃಕೋದರೋ ನದಂ-**
**ಸ್ತಮಾಸದನ್ ದ್ರೌಣಿಕೃಪೌ ಚ ಮದ್ರರಾಟ್ ॥ ೪ ॥**

**ಅರ್ಥ** :- **ದ್ರೋಣಃ** = ದ್ರೋಣನು, **ಧನುರ್ಮಂಡಲನಿಸ್ಸೃತೈಃ** = ಮಂಡಲಾಕಾರವಾಗಿ ಇರುವ ಧನುಸ್ಸಿನಿಂದ ಮಂತ್ರಪೂರ್ವಕವಾಗಿ ಹೊರಹೊಮ್ಮಿದ, **ಪತತ್ರಿಭಿಃ** = ಬಾಣಗಳಿಂದ, **ಶಾತ್ರವಾನ್** = ಶತ್ರುಗಳನ್ನು, **ದುಧಾವ** = ನಡುಗಿಸಿದನು, **ತತ್ರ** = ಆವಾಗ, **ಆಶು** = ಬೇಗನೇ, **ವೃಕೋದರಃ** = ಭೀಮನು, **ನದನ್** = ಸಿಂಹನಾದ ಮಾಡುತ್ತಾ, **ತಮ್** = ಆ ದ್ರೋಣರನ್ನು, **ಆಸಸಾದ** = ಸಮೀಪಿಸಿದನು, **ದ್ರೌಣಿಕೃಪೌ** = ಅಶ್ವತ್ಥಾಮ ಮತ್ತು ಕೃಪರು, **ಮದ್ರರಾಟ್ ಚ** = ಶಲ್ಯನೂ, **ತಮ್** = ಆ ಭೀಮನನ್ನು, **ಆಸದನ್** = ಆಕ್ರಮಿಸಿದರು.

**ತಾತ್ಪರ್ಯ** :- ದ್ರೋಣರು ಬಿಲ್ಲನ್ನು ವೃತ್ತಾಕಾರವಾಗಿ ಬಗ್ಗಿಸಿ ಮಂತ್ರಪೂರ್ವಕವಾಗಿ ಬಾಣಪ್ರಯೋಗಮಾಡಿ ಶತ್ರುಗಳನ್ನು ನಡುಗಿಸಿದರು. ಆಗ ಭೀಮ ಬೇಗನೇ ಬಂದು ಸಿಂಹನಾದ ಮಾಡುತ್ತಾ ಅವನನ್ನು ಸಮೀಪಿಸಿದ. ಅಶ್ವತ್ಥಾಮ ಕೃಪ ಶಲ್ಯ ಇವರೆಲ್ಲರು ಭೀಮನ ಮೇಲೆ ಆಕ್ರಮಿಸಿದರು.

**ಸ ತಾನ್ ವಿಧೂಯಾಭ್ಯಪತದ್ ರಣೇಽಗ್ರಣೀ-**
**ರ್ದ್ರೋಣಂ ತಮನ್ವಾರ್ಜುನಿರಭ್ಯಯಾತ್ ಪರಾನ್ ।**
**ವವಾರ ತಂ ಮದ್ರಪತಿಸ್ತಯೋರಭೂದ್**
**ರಣೋ ಮಹಾಂಸ್ತತ್ರ ಗದಾಂ ಸಮಾದದೇ ।**
**ಶಲ್ಯೋಽಥ ಭೀಮೋಽಭಿಯಯೌ ಗದಾಧರ-**
**ಸ್ತಮೇತಯೋರತ್ರ ಬಭೂವ ಸಂಗರಃ ॥ ೫ ॥**

**ಅರ್ಥ** :- **ರಣೇ** = ಯುದ್ಧದಲ್ಲಿ, **ಅಗ್ರಣೀಃ** = ಅಗ್ರೇಸರನಾದ, **ಸಃ** = ಭೀಮನು, **ತಾನ್** = ಅವರನ್ನು, **ವಿಧೂಯ** = ದೂರ ಸರಿಸಿ, **ದ್ರೋಣಂ** = ದ್ರೋಣರನ್ನು, **ಅಭ್ಯಪತತ್** = ಆಕ್ರಮಿಸಿದನು, **ತಂ ಅನು** = ಆ ಭೀಮನನ್ನು ಅನುಸರಿಸಿ, **ಆರ್ಜುನಿಃ** = ಅಭಿಮನ್ಯುವು, **ಪರಾನ್** = ಬೇರೆ ಶತ್ರುಗಳನ್ನು,

**ಅಭ್ಯಯಾತ್** = ಆಕ್ರಮಿಸಿದ, **ತಂ** = ಆ ಅಭಿಮನ್ಯುವನ್ನು, **ಮದ್ರಪತಿಃ** = ಶಲ್ಯನು, **ವವಾರ** = ಎದುರಿಸಿದ, **ತಯೋಃ** = ಆ ಅಭಿಮನ್ಯು ಶಲ್ಯರಿಗೆ, **ಮಹಾನ್** = ದೊಡ್ಡದಾದ, **ರಣಃ** = ಯುದ್ಧವು, **ಅಭೂತ್** = ನಡೆಯಿತು, **ತತ್ರ** = ಆವಾಗ, **ಶಲ್ಯಃ** = ಶಲ್ಯನು, **ಗದಾಂ** = ಗದೆಯನ್ನು, **ಸಮಾದದೇ** = ತೆಗೆದುಕೊಂಡನು, **ಅಥ** = ಅನಂತರ, **ಭೀಮಃ** = ಭೀಮನು, **ಗದಾಧರಃ** = ಗದಾಧಾರಿಯಾಗಿ, **ತವ್** = ಆ ಶಲ್ಯನನ್ನು, **ಅಭಿಯಯೌ** = ಎದುರಿಸಿದನು, **ಅತ್ರ** = ಇಲ್ಲಿ, **ತಯೋಃ** = ಅವರಿಬ್ಬರಿಗೆ, **ಸಂಗರಃ** = ಯುದ್ಧವು, **ಬಭೂವ** = ಆಯಿತು.

**ತಾತ್ಪರ್ಯ :-** ಯುದ್ಧದಲ್ಲಿ ಅಗ್ರೇಸರನಾದ ಭೀಮನು ಅಶ್ವತ್ಥಾಮ ಕೃಪ ಶಲ್ಯರನ್ನು ದೂರ ಸರಿಸಿ ದ್ರೋಣರೊಡನೆ ಯುದ್ಧ ಪ್ರಾರಂಭಿಸಿದ. ಭೀಮನನ್ನು ಅನುಸರಿಸಿ ಅಭಿಮನ್ಯು ಶತ್ರುಗಳನ್ನು ಆಕ್ರಮಿಸಿದ. ಅಭಿಮನ್ಯುವನ್ನು ಶಲ್ಯ ಎದುರಿಸಿದ. ಅಭಿಮನ್ಯು ಶಲ್ಯರಿಗೆ ಯುದ್ಧ ನಡೆಯಿತು. ಶಲ್ಯ ಗದೆ ತೆಗೆದುಕೊಂಡ. ಆಗ ಭೀಮ ಗದಾಧಾರಿಯಾಗಿ ಬಂದು ಶಲ್ಯನನ್ನು ಎದುರಿಸಿದ. ಅವರಿಬ್ಬರಿಗೆ ದೊಡ್ಡ ಯುದ್ಧ ನಡೆಯಿತು.

**ಉಭಾವಜೇಯೌ ಗದಿನಾಮನುತ್ತಮಾ-**
**ವತುಲ್ಯವೀರ್ಯೌ ಪ್ರವರೌ ಬಲೀಯಸಾಮ್ ।**
**ವಿಚೇರತುಶ್ಚಿತ್ರತಮಂ ಪ್ರಪಶ್ಯತಾಂ**
**ಮನೋಹರಂ ತಾವಭಿನರ್ದಮಾನೌ ॥ ೬ ॥**

**ಅರ್ಥ :- ಅಜೇಯೌ** = ಬೇರೆಯವರಿಂದ ಅಜೇಯರೂ, **ಗದಿನಾಂ** = ಗದಾಧಾರಿಗಳಲ್ಲಿ, **ಅನುತ್ತಮೌ** = ಉತ್ತಮ ರಹಿತರೂ, **ಅತುಲ್ಯವೀರ್ಯೌ** = ಸಮಾನ ವೀರ್ಯ ರಹಿತರೂ, **ಬಲೀಯಸಾಮ್** = ಬಲಿಷ್ಠರಲ್ಲಿ, **ಪ್ರವರೌ** = ಉತ್ತಮರೂ ಆದ, **ಉಭೌ ತಾ** = ಅವರಿಬ್ಬರು, **ಅಭಿನರ್ದಮಾನೌ** = ಸಿಂಹನಾದ ಮಾಡುವವರಾಗಿ, **ಪ್ರಪಶ್ಯತಾಂ** = ನೋಡುವವರಿಗೆ, **ಮನೋಹರಂ** = ಮನಸ್ಸನ್ನು ಆಕರ್ಷಿಸುವಂತೆ, **ಚಿತ್ರತಮಂ** = ಅತ್ಯಾಶ್ಚರ್ಯವಾಗುವಂತೆ, **ವಿಚೇರತುಃ** = ಹೋರಾಡಿದರು.

**ತಾತ್ಪರ್ಯ :-** ಭೀಮ ಶಲ್ಯರಿಬ್ಬರು ಅಜೇಯರು, ಗದಾಧಾರಿಗಳಲ್ಲಿ ಅವರನ್ನು ಮೀರಿಸುವವರಿಲ್ಲ. ಅವರಿಗೆ ಸಮಾನ ವೀರ್ಯಶಾಲಿಗಳೂ ಇಲ್ಲ.

ಬಲಿಷ್ಠರಲ್ಲಿ ಅತ್ಯುತ್ತಮರು. ಅವರು ಸಿಂಹನಾದ ಮಾಡುತ್ತಾ ಮನೋಹರವಾಗಿ ಅತ್ಯಾಶ್ಚರ್ಯಕರವಾಗಿ ಹೋರಾಡಿದರು.

**ಗದಾಪ್ರಪಾತಾಂಕಿತವಜ್ರಗಾತ್ರೌ**
**ದದರ್ಶ ಲೋಕೋಽಖಿಲ ಏವ ತೌ ರಣೇ**
**ಗದಾಭಿಘಾತೇನ ವೃಕೋದರಸ್ಯ**
**ವಿಚೇತನಃ ಪ್ರಾಪತದತ್ರ ಮದ್ರರಾಟ್ ॥ ೭ ॥**

**ಭೀಮೋಽಪಿ ಕೋಪಾತ್ ಪ್ರಚಲತ್ಪದಃ ಕ್ಷಿತೌ**
**ನಿಧಾಯ ಜಾನುಂ ಸಹಸೋತ್ಥಿತಃ ಕ್ಷಣಾತ್ ॥ ೮ ॥**

**ಅರ್ಥ :- ಗದಾಪ್ರಪಾತಾಂಕಿತವಜ್ರಗಾತ್ರೌ** = ಗದಾಘಾತದ ಚಿಹ್ನೆಯಿಂದ ಕೂಡಿದ ವಜ್ರದಂತೆ ಶರೀರವುಳ್ಳ, **ತೌ** = ಅವರಿಬ್ಬರನ್ನು, **ಅಖಿಲಃ ಲೋಕ ಏವ** = ಸಮಸ್ತ ಲೋಕವೇ, **ರಣೇ** = ಯುದ್ಧದಲ್ಲಿ, **ದದರ್ಶ** = ನೋಡಿತು, **ವೃಕೋದರಸ್ಯ** = ಭೀಮನ, **ಗದಾಭಿಘಾತೇನ** = ಗದೆಯ ಏಟಿನಿಂದ, **ಮದ್ರರಾಟ್** = ಶಲ್ಯನು, **ವಿಚೇತನಃ ಪ್ರಾಪತತ್** = ಮೂರ್ಛೆ ಹೊಂದಿಬಿದ್ದನು, **ಭೀಮೋಽಪಿ** = ಭೀಮನಾದರೂ, **ಕೋಪಾತ್** = ಕೋಪದಿಂದ, **ಪ್ರಚಲತ್ಪದಃ** = ನಡುಗಿದ ಕಾಲುಳ್ಳವನಾಗಿ, **ಕ್ಷಿತೌ** = ಭೂಮಿಯಲ್ಲಿ, **ಜಾನುಂ ನಿಧಾಯ** = ಮೊಣಕಾಲೂರಿ, **ಕ್ಷಣಾತ್** = ಒಂದು ಕ್ಷಣದಲ್ಲಿ, **ಸಹಸಾ** = ಕೂಡಲೆ, **ಉತ್ಥಿತಃ** = ಮೇಲೆದ್ದನು.

**ತಾತ್ಪರ್ಯ :-** ಗದೆಯ ಹೊಡೆತದ ಚಿಹ್ನೆಯಿಂದ ಕೂಡಿದ ವಜ್ರಸದೃಶವಾದ ಶರೀರವುಳ್ಳ ಅವರಿಬ್ಬರನ್ನು ಲೋಕದ ಜನರೆಲ್ಲರೂ ನೋಡಿದರು.ಭೀಮನ ಗದೆಯ ಏಟಿನಿಂದ ಶಲ್ಯ ಮೂರ್ಛೆ ಹೊಂದಿ ಬಿದ್ದನು. ಭೀಮನ ಕಾಲುಗಳು ಕೋಪದಿಂದ ನಡುಗಿದವು. ಒಂದು ಕ್ಷಣ ಕಾಲ ನೆಲಕ್ಕೆ ಮೊಣಕಾಲೂರಿ ಕೂಡಲೆ ಮೇಲೆದ್ದ.

**ವಿಚೇತನಂ ಪತಿತಂ ಮದ್ರರಾಜಂ**
**ವಿಲೋಕ್ಯ ಭೀಮಂ ಚ ತಮಾಹ್ವಯಂತಮ್ ।**
**ರಥಂ ಸಮಾರೋಪ್ಯ ಜನಸ್ಯ ಪಶ್ಯತಃ**
**ಪುರಶ್ಚ ಭೀಮಸ್ಯ ಕೃಪೋಽಪಜಗ್ಮಿವಾನ್ ॥ ೯ ॥**

**ಅರ್ಥ** :- **ವಿಚೇತನಂ** = ಮೂರ್ಛಿತನಾದ, **ಪತಿತಂ** = ಬಿದ್ದಂತಹ, **ಮದ್ರರಾಜಂ** = ಶಲ್ಯನನ್ನು, **ಆಹ್ವಯಂತಮ್** = ಕರೆಯುತ್ತಿರುವ, **ಭೀಮಂ** = ಭೀಮನನ್ನು, **ವಿಲೋಕ್ಯ** = ನೋಡಿ, **ಕೃಪಃ** = ಕೃಪಾಚಾರ್ಯರು, **ಪಶ್ಯತಃ** = ನೋಡುತ್ತಿದ್ದ, **ಜನಸ್ಯ** = ಜನರ, **ಭೀಮಸ್ಯ** = ಭೀಮನ, **ಪುರಶ್ಚ** = ಎದುರಿನಲ್ಲಿಯೇ, **ತಂ** = ಆ ಶಲ್ಯನನ್ನು, **ರಥಂ** = ರಥಕ್ಕೆ, **ಸಮಾರೋಪ್ಯ** = ಏರಿಸಿಕೊಂಡು, **ಅಪಜಗ್ಮಿವಾನ್** = ಹೊರಟುಹೋದ.

**ತಾತ್ಪರ್ಯ** :- ಶಲ್ಯ ಮೂರ್ಛೆಗೊಂಡು ಬಿದ್ದುದನ್ನು ಭೀಮ ಅವನನ್ನು ಕರೆಯುತ್ತಿದ್ದದ್ದನ್ನು ನೋಡಿ ಕೃಪಾಚಾರ್ಯರು ಎಲ್ಲರ ಎದುರಿನಲ್ಲಿಯೇ ಶಲ್ಯನನ್ನು ತಮ್ಮ ರಥಕ್ಕೆ ಏರಿಸಿಕೊಂಡು ಹೊರಟುಹೋದರು.

**ವಿಜಿತ್ಯ ಮದ್ರಾಧಿಪಮೋಜಸಾಽರಿಹಾ**
**ನದನ್ ರಥಂ ಪ್ರಾಪ್ಯ ನಿಜಂ ಸ ಮಾರುತಿಃ ।**
**ವ್ಯದ್ರಾವಯದ್ ಬಾಣಗಣೈಃ ಪರೇಷಾ-**
**ಮನೀಕಿನೀಂ ದ್ರೋಣಸಮಕ್ಷಮೇವ ॥ ೧೦ ॥**

**ಅರ್ಥ** :- **ಅರಿಹಾ** = ಶತ್ರುಸಂಹಾರಕನಾದ ಭೀಮನು, **ಓಜಸಾ** = ಬಲದಿಂದ, **ಮದ್ರಾಧಿಪಮ್** = ಶಲ್ಯನನ್ನು, **ವಿಜಿತ್ಯ** = ಗೆದ್ದು, **ನದನ್** = ಸಿಂಹನಾದ ಮಾಡುತ್ತಾ, **ನಿಜಂ** = ತನ್ನದಾದ, **ರಥಂ** = ರಥವನ್ನು, **ಪ್ರಾಪ್ಯ** = ಹೊಂದಿ, **ದ್ರೋಣಸಮಕ್ಷಮೇವ** = ದ್ರೋಣರ ಸಮಕ್ಷಮದಲ್ಲಿಯೇ, **ಪರೇಷಾಂ** = ಶತ್ರುಗಳ, **ಅನೀಕಿನೀಂ** = ಸೈನ್ಯವನ್ನು, **ಬಾಣಗಣೈಃ** = ಬಾಣಸಮೂಹಗಳಿಂದ, **ವ್ಯದ್ರಾವಯತ್** = ಓಡಿಸಿದನು.

**ತಾತ್ಪರ್ಯ** :- ಶತ್ರು ಸಂಹಾರಕನಾದ ಭೀಮನು ಬಲದಿಂದ ಸೈನ್ಯವನ್ನು ಗೆದ್ದು, ಸಿಂಹನಾದ ಮಾಡುತ್ತಾ, ಸ್ವಕೀಯ ರಥವನ್ನೇರಿ ದ್ರೋಣರ ಸಮಕ್ಷಮದಲ್ಲಿಯೇ. ಬಾಣ ಸಮೂಹಗಳಿಂದ ಶತ್ರುಸೈನ್ಯವನ್ನು ಓಡಿಸಿದ.

**ವಿದ್ರಾವಯತ್ಯಾಶು ಕುರೂನ್ ವೃಕೋದರೇ**
**ವಿಧೂಯ ಸೌಭದ್ರಮುಖಾನ್ ಸಸಾತ್ಯಕೀನ್ ।**
**ದ್ರೋಣೋಽಭಿಪೇದೇ ನೃಪತಿಂ ಗ್ರಹೀತುಂ**
**ತಮಾಸಸಾದಾಽಽಶು ಧನಂಜಯೋ ರಥೀ ॥ ೧೧ ॥**

**ಅರ್ಥ :- ವೃಕೋದರೇ** = ಭೀಮನು, **ಕುರೂನ್** = ಕೌರವರನ್ನು, **ಆಶು** = ಬೇಗನೇ, **ವಿದ್ರಾವಯತಿ** = ಓಡಿಸುತ್ತಿರಲು, **ದ್ರೋಣಃ** = ದ್ರೋಣನು, **ಸಸಾತ್ಯಕೀನ್** = ಸಾತ್ಯಕಿಯಿಂದ ಕೂಡಿದ, **ಸೌಭದ್ರಮುಖಾನ್** = ಅಭಿಮನ್ಯು ಮೊದಲಾದವರನ್ನು, **ವಿಧೂಯ** = ಓಡಿಸಿ, **ನೃಪತಿಂ** = ಧರ್ಮರಾಜನನ್ನು, **ಗ್ರಹೀತುಂ** = ಹಿಡಿಯಲು, **ಅಭಿಪೇದೇ** = ಎದುರಾದನು, **ರಥೀ** = ರಥಿಕನಾದ, **ಧನಂಜಯಃ** = ಅರ್ಜುನನು, **ಆಶು** = ಕೂಡಲೇ, **ತಮ್** = ಆ ದ್ರೋಣರನ್ನು, **ಆಸಸಾದ** = ಎದುರಿಸಿದನು.

**ತಾತ್ಪರ್ಯ :-** ಭೀಮ ಕೌರವರನ್ನು ಬೇಗನೇ ಓಡಿಸುತ್ತಿದ್ದಾಗ ದ್ರೋಣ ಸಾತ್ಯಕಿ ಅಭಿಮನ್ಯು ಮುಂತಾದವರನ್ನು ಓಡಿಸಿ ಧರ್ಮರಾಜನನ್ನು ಬಂಧಿಸಲು ಎದುರಾಗಿ ಬಂದ. ಆ ದ್ರೋಣರನ್ನು ರಥಿಕನಾದ ಅರ್ಜುನನು ಬೇಗನೇ ಎದುರಿಸಿದ.

**ಸ ವಾಸುದೇವಪ್ರಯತೇ ರಥೇ ಸ್ಥಿತಃ**
**ಶರೈಃ ಶರೀರಾಂತಕರೈಃ ಸಮಂತತಃ ।**
**ನಿಹತ್ಯ ನಾಗಾಶ್ವನರಾನ್ ಪ್ರವರ್ತಯ-**
**ನ್ನದೃಶ್ಯತಾಽಶ್ವೇವ ಚ ಶೋಣಿತಾಪಗಾಃ ॥ ೧೨ ॥**

**ಅರ್ಥ :- ವಾಸುದೇವಪ್ರಯತೇ** = ಕೃಷ್ಣ ನಡೆಸುತ್ತಿದ್ದ, **ರಥೇ** = ರಥದಲ್ಲಿ, **ಸ್ಥಿತಃ** = ಇದ್ದಂತಹ, **ಸಃ** = ಆ ಅರ್ಜುನನು, **ಶರೀರಾಂತಕರೈಃ** = ಶರೀರವನ್ನು ನಾಶಪಡಿಸುವ, **ಶರೈಃ** = ಬಾಣಗಳಿಂದ, **ಸಮಂತತಃ** = ಸುತ್ತಲೂ, **ನಾಗಾಶ್ವರಥಾನ್** = ಆನೆ ಕುದುರೆ ರಥಗಳನ್ನು, **ನಿಹತ್ಯ** = ನಾಶಮಾಡಿ, **ಶೋಣಿತಾಪಗಾಶ್ಚ** = ರಕ್ತದ ಹೊಳೆಗಳನ್ನು, **ಪ್ರವರ್ತಯನ್** = ಹರಿಸುವವನಾಗಿ, **ಆಶು ಏವ** = ಕೂಡಲೇನೇ, **ಅದೃಶ್ಯತ** = ನೋಡಲ್ಪಟ್ಟನು.

**ತಾತ್ಪರ್ಯ :-** ಕೃಷ್ಣ ನಡೆಸುತ್ತಿದ್ದ ರಥದಲ್ಲಿ ನಿಂತು ಅರ್ಜುನ ಶರೀರನಾಶಪಡಿಸುವ ಬಾಣಗಳಿಂದ ಸುತ್ತಲೂ ಆನೆ ಕುದುರೆ ರಥಗಳನ್ನು ನಾಶಪಡಿಸಿ ರಕ್ತದ ಹೊಳೆಗಳನ್ನು ಹರಿಸುತ್ತಾ ಕಾಣಿಸಿಕೊಂಡನು.

**ನಿಹನ್ಯಮಾನಾಸು ಕಿರೀಟಿನಾ ಚಮೂ-**
**ಷ್ವಾರಕ್ಷಿತೇ ಧರ್ಮಸುತೇ ತಥಾಽಽಪದಃ ।**

**ಚಮೂಂ ಚ ಭೀಮಾರ್ಜುನಬಾಣಭಗ್ನಾಂ**
**ದ್ರೋಣೋऽಪಹೃತ್ಯಾಪಯಯೌ ನಿಶಾಗಮೇ ॥ ೧೩ ॥**

**ಅರ್ಥ :- ಕಿರೀಟಿನಾ** = ಅರ್ಜುನನಿಂದ, **ಚಮೂಷು** = ಸೇನೆಗಳು, **ನಿಹನ್ಯಮಾನಾಸು** = ಹತವಾಗುತ್ತಿರಲು, **ತಥಾ** = ಹಾಗೆ, **ಧರ್ಮಸುತೇ** = ಯುಧಿಷ್ಠಿರನು, **ಆಪದಃ** = ಆಪತ್ತಿನಿಂದ, **ಆರಕ್ಷಿತೇ** = ರಕ್ಷಿತವಾಗುತ್ತಿರಲು, **ಭೀಮಾರ್ಜುನ ಬಾಣಭಗ್ನಾಂ** = ಭೀಮಾರ್ಜುನರ ಬಾಣಗಳಿಂದ ಭಗ್ನವಾದ, **ಚಮೂಂ** = ಸೈನ್ಯವನ್ನು, **ದ್ರೋಣಃ** = ದ್ರೋಣಾಚಾರ್ಯರು, **ನಿಶಾಗಮೇ** = ರಾತ್ರಿ ಆಗುತ್ತಿರಲು, **ಅಪಹೃತ್ಯ** = ಕರೆದುಕೊಂಡು, **ಅಪಯಯೌ** = ಹೊರಟುಹೋದರು.

**ತಾತ್ಪರ್ಯ :-** ಅರ್ಜುನನಿಂದ ಸೇನೆಗಳು ನಾಶವಾಗುತ್ತಿದ್ದಾಗ ಯುಧಿಷ್ಠಿರನೂ ಆಪತ್ತಿನಿಂದ ರಕ್ಷಿತನಾದ. ಆವಾಗ ಭೀಮಾರ್ಜುನರ ಬಾಣಗಳಿಂದ ಭಗ್ನವಾದ ಸೈನ್ಯವನ್ನು ತೆಗೆದುಕೊಂಡು ದ್ರೋಣರು ರಾತ್ರಿಯಾಗುತ್ತಿರಲು ಹೊರಟುಹೋದರು.

**ಸ ಧಾರ್ತರಾಷ್ಟ್ರೇಣ ಯುಧಿಷ್ಠಿರಾಗ್ರಹಾತ್**
**ಸಂಶ್ರಾವಿತಃ ಕ್ರೂರವಚೋ ನಿಶಾಯಾಮ್ ।**
**ಜಗಾದ ದೂರಂ ಸಮರಾದ್ ವಿನೀಯತಾಂ**
**ಪಾರ್ಥಸ್ತತೋ ಧರ್ಮಸುತಂ ಗ್ರಹೀಷ್ಯೇ ॥ ೧೪ ॥**

**ಅರ್ಥ :- ನಿಶಾಯಾಮ್** = ರಾತ್ರಿಯಲ್ಲಿ, **ಧಾರ್ತರಾಷ್ಟ್ರೇಣ** = ದುರ್ಯೋಧನನಿಂದ, **ಸಃ** = ಆ ದ್ರೋಣರು **ಯುಧಿಷ್ಠಿರಾಗ್ರಹಾತ್** = ಯುಧಿಷ್ಠಿರನನ್ನು ಸೆರೆ ಹಿಡಿಯದಿರುವದರಿಂದ, **ಕ್ರೂರವಚಃ** = ಕ್ರೂರವಾದ ಮಾತನ್ನು, **ಸಂಶ್ರಾವಿತಃ** = ಕೇಳಿಸಲ್ಪಟ್ಟವರಾಗಿ, **ಜಗಾದ** = ಹೇಳಿದರು, **ಪಾರ್ಥಃ** = ಅರ್ಜುನನು, **ಸಮರಾತ್** = ಯುದ್ಧದಿಂದ, **ದೂರಂ** = ದೂರಕ್ಕೆ, **ವಿನೀಯತಾಂ** = ಒಯ್ಯಲ್ಪಡಲಿ, **ತತಃ** = ಅನಂತರ, **ಧರ್ಮಸುತಂ** = ಧರ್ಮರಾಜನನ್ನು, **ಗ್ರಹೀಷ್ಯೇ** = ಹಿಡಿಯುತ್ತೇನೆ.

**ತಾತ್ಪರ್ಯ :-** ರಾತ್ರಿ ದುರ್ಯೋಧನ ದ್ರೋಣರಿಗೆ ಯುಧಿಷ್ಠಿರನನ್ನು ಸೆರೆ ಹಿಡಿಯದೇ ಇದ್ದದ್ದರಿಂದ ಬಹಳ ಆಕ್ಷೇಪಿಸಿದ. ಆಗ ದ್ರೋಣರು

ಹೇಳಿದರು. ಅರ್ಜುನನನ್ನು ಯುದ್ಧದಿಂದ ದೂರಕ್ಕೆ ಒಯ್ಯಿ. ಆಗ ಯುಧಿಷ್ಠಿರನನ್ನು ಸೆರೆ ಹಿಡಿಯುತ್ತೇನೆ.

**ತತಃ ಸುಶರ್ಮಾ ಸಹಿತೋ ಮಹಾರಥೈಃ**
**ಸಂಶಪ್ತಕೈರ್ದೂರತರಂ ಪ್ರಣೇತುಮ್ ।**
**ಯುದ್ಧಾಯ ಭೀಮಾನುಜಮಾಶು ಕ್ಲೃಪ್ತೋ**
**ದುರ್ಯೋಧನೇನೋಮಿತಿ ಸೋಽಪ್ಯವಾದೀತ್ ॥ ೧೫ ॥**

**ಅರ್ಥ :- ತತಃ** = ಅನಂತರ, **ಭೀಮಾನುಜಂ** = ಅರ್ಜುನನ್ನು, **ಆಶು** = ಕೂಡಲೇ, **ಯುದ್ಧಾಯ** = ಯುದ್ಧಕ್ಕೆ, **ದೂರತರಂ** = ಬಹಳ ದೂರ, **ಪ್ರಣೇತುಂ** = ಒಯ್ಯಲು, **ಮಹಾರಥೈಃ** = ಮಹಾರಥರಾದ, **ಸಂಶಪ್ತಕೈಃ ಸಹಿತಃ** = ಸಂಶಪ್ತಕರರಿಂದ ಕೂಡಿದ, **ಸುಶರ್ಮಾ** = ಸುಶರ್ಮನು, **ದುರ್ಯೋಧನೇನ** = ದುರ್ಯೋಧನನಿಂದ, **ಕ್ಲೃಪ್ತಃ** = ಆದೇಶಿಸಲ್ಪಟ್ಟನು, **ಸಃ ಅಪಿ** = ಆ ಸುಶರ್ಮನಾದರೂ, **ಓಂ ಇತಿ** = ಆಗಲಿ ಎಂದು, **ಅವಾದೀತ್** = ಹೇಳಿದನು.

**ತಾತ್ಪರ್ಯ :-** ಆಗ ದುರ್ಯೋಧನ ಸಂಶಪ್ತಕರಿಗೆ ಮತ್ತು ಸುಶರ್ಮನಿಗೆ ಆಜ್ಞಾಪಿಸಿದ. ನೀವು ಅರ್ಜುನನನ್ನು ಯುದ್ಧಕ್ಕೆ ದೂರ ಒಯ್ಯಿರಿ ಎಂದು. ಸುಶರ್ಮನು ಆಗಲಿ ಎಂದ.

**ಸಮಾಹ್ವಯಾಮಾಸುರಥಾರ್ಜುನಂ ತೇ**
**ಪ್ರಾತರ್ಹುತಾಶಸ್ಯ ದಿಶಂ ರಣಾಯ ।**
**ಅಯೋಧಯತ್ ತಾನ್ ಸ ಚ ತತ್ರ ಗತ್ವಾ**
**ಭೀಮೋ ಗಜಾನೀಕಮಥಾತ್ರ ಚಾವಧೀತ್ ॥ ೧೬ ॥**

**ಅರ್ಥ :- ತೇ** = ಆ ಸಂಶಪ್ತಕರು, **ಪ್ರಾತಃ** = ಬೆಳಗ್ಗೆ, **ಅರ್ಜುನಂ** = ಅರ್ಜುನನನ್ನು, **ಹುತಾಶಸ್ಯ ದಿಶಂ** = ಆಗ್ನೇಯ ದಿಕ್ಕಿಗೆ, **ರಣಾಯ** = ಯುದ್ಧಕ್ಕೆ, **ಸಮಾಹ್ವಯಾಮಾಸುಃ** = ಕರೆದರು, **ಸಚ** = ಆ ಅರ್ಜುನನಾದರೂ, **ತತ್ರ** = ಅಲ್ಲಿಗೆ, **ಗತ್ವಾ** = ಹೋಗಿ, **ತಾನ್ ಅಯೋಧಯತ್** = ಅವರೊಡನೆ ಯುದ್ಧಮಾಡಿದ, **ಅತ್ರ** = ಈ ಕಡೆ,

**ಭೀಮಶ್ಚ** = ಭೀಮನಾದರೂ, **ಗಜಾನೀಕಂ** = ಗಜಸೇನೆಯನ್ನು, **ಅವಧೀತ್** = ನಾಶಮಾಡಿದನು.

**ತಾತ್ಪರ್ಯ** :- ಅನಂತರ ಬೆಳಗ್ಗೆ ಸಂಶಪ್ತಕರು ಅರ್ಜುನನನ್ನು ಯುದ್ಧಕ್ಕೆ ಆಗ್ನೇಯ ದಿಕ್ಕಿಗೆ ಕರೆದುಕೊಂಡು ಹೋದರು. ಅರ್ಜುನ ಅಲ್ಲಿಗೆ ಹೋಗಿ ಅವರ ಜೊತೆ ಯುದ್ಧ ಮಾಡಿದ. ಇತ್ತ ಭೀಮಸೇನ ಗಜಸೇನೆಯನ್ನು ನಾಶಪಡಿಸಿದ.

**ನಿಹನ್ಯಮಾನೇಷು ಗಜೇಷು ಸರ್ವಶೋ**
**ವಿದ್ರಾಪ್ಯಮಾಣೇಷ್ವಖಿಲೇಷು ರಾಜಸು ।**
**ಪ್ರಾಗ್ಜ್ಯೋತಿಷೋ ಧಾರ್ತರಾಷ್ಟ್ರಾರ್ಥಿತಸ್ತಂ**
**ಸಮಾಸದತ್ ಸುಪ್ರತೀಕೇನ ಧನ್ವೀ ॥ ೧೭ ॥**

**ಅರ್ಥ** :- **ಸರ್ವಶಃ** = ಎಲ್ಲಾಕಡೆ, **ಗಜೇಷು** = ಆನೆಗಳು, **ನಿಹನ್ಯಮಾನೇಷು** = ನಾಶ ಮಾಡಲ್ಪಡುತ್ತಿರಲು, **ಅಖಿಲೇಷು ರಾಜಸು** = ಎಲ್ಲಾ ರಾಜರೂ, **ವಿದ್ರಾವ್ಯಮಾಣೇಷು** = ಓಡಿಹೋಗುತ್ತಿರಲು, **ಧಾರ್ತರಾಷ್ಟ್ರಾರ್ದಿತಃ** = ದುರ್ಯೋಧನನಿಂದ ಪ್ರಾರ್ಥಿತನಾಗಿ, **ಧನ್ವೀ** = ಧನುರ್ಧಾರಿಯಾದ, **ಪ್ರಾಗ್ಜ್ಯೋತಿಷಃ** = ಭಗದತ್ತನು, **ಸುಪ್ರತೀಕೇನ(ಸಹ)** = ಸುಪ್ರತೀಕ ಆನೆಯ ಜೊತೆಗೆ (ಸುಪ್ರತೀಕ ಆನೆಯ ಮೇಲೇರಿ), **ತಂ** = ಆ ಭೀಮನನ್ನು ಕುರಿತು, **ಸಮಾಸದತ್** = ಹೋದನು.

**ತಾತ್ಪರ್ಯ** :- ಭೀಮ ಎಲ್ಲಾ ಕಡೆ ಆನೆಗಳನ್ನು ನಾಶಮಾಡುತ್ತಿದ್ದಾಗ ಎಲ್ಲಾ ರಾಜರನ್ನೂ ಓಡಿಸುತ್ತಿದ್ದಾಗ ದುರ್ಯೋಧನನ ಕೋರಿಕೆಯಂತೆ ಧನುರ್ಧಾರಿಯಾದ ಭಗದತ್ತ ಸುಪ್ರತೀಕ ಆನೆಯ ಮೇಲೇರಿ ಭೀಮನಕಡೆ ಹೋದನು.

**ವಿಭೀಷಿತಾಃ ಸುಪ್ರತೀಕೇನ ಭೀಮ-**
**ಹಯಾ ನ ತಸ್ಥುಸ್ತದನು ಸ್ಮ ಸಾತ್ಯಕಿಃ ।**
**ಸೌಭದ್ರಮುಖ್ಯಾಶ್ಚ ಗಜಂ ತಮಭ್ಯಯು-**
**ಶ್ಚಿಕ್ಷೇಪ ತೇಷಾಂ ಸ ರಥಾನಥಾಂಬರೇ ॥ ೧೮ ॥**

**ಅರ್ಥ** :- **ಸುಪ್ರತೀಕೇನ** = ಸುಪ್ರತೀಕ ಆನೆಯಿಂದ, **ವಿಭೀಷಿತಾಃ** = ಭಯಗೊಂಡ, **ಭೀಮಹಯಾಃ** = ಭೀಮನ ಕುದುರೆಗಳು, **ನ ತಸ್ಥುಃ** =

ವಶದಲ್ಲಿ ಬರಲಿಲ್ಲ, **ತದನು** = ಅದಾದ ಬಳಿಕ, **ಸಾತ್ಯಕಿಃ** = ಸಾತ್ಯಕಿಯು, **ಸೌಭದ್ರ ಮುಖ್ಯಾಶ್ಚ** = ಅಭಿಮನ್ಯು ಮುಂತಾದವರು, **ತಂ ಗಜಂ** = ಆ ಸುಪ್ರತೀಕ ಆನೆಯನ್ನು ಕುರಿತು, **ಅಭ್ಯಯುಃ** = ಹೋದರು, **ಸ ಚ** = ಆ ಆನೆಯಾದರೂ, **ತೇಷಾಂ** = ಅವರ, **ರಥಾನ್** = ರಥಗಳನ್ನು, **ಅಂಬರೇ** = ಆಕಾಶಕ್ಕೆ, **ಚಿಕ್ಷೇಪ** = ಎಸೆಯಿತು.

**ತಾತ್ಪರ್ಯ** :- ಸುಪ್ರತೀಕ ಆನೆಯಿಂದ ಹೆದರಿದ ಭೀಮನ ಕುದುರೆಗಳು ವಶದಲ್ಲಿ ಬರಲಿಲ್ಲ. ಆವಾಗ ಸಾತ್ಯಕಿ ಅಭಿಮನ್ಯು ಮೊದಲಾದವರು ಆನೆಯನ್ನು ಎದುರಿಸುವುದಕ್ಕೆ ಹೋದರು. ಆ ಸುಪ್ರತೀಕ ಆನೆಯು ಅವರ ರಥಗಳನ್ನು ಆಕಾಶಕ್ಕೆ ಎಸೆದುಬಿಟ್ಟಿತು.

**ಶೈನೇಯಪೂರ್ವೇಷು ರಥೋಜ್ಝಿತೇಷು**
**ಭೂಮಾವವಪ್ಲುತ್ಯ ಕಥಂಚಿದೇವ ।**
**ಸ್ಥಿತೇಷು ಭೀಮೇ ಚ ವಿಭೀಷಿತಾಶ್ವಾನ್**
**ಸಂಯಮ್ಯ ಯುಧ್ಯತ್ಯಪಿ ಕೃಷ್ಣ ಐಕ್ಷತ್ ।। ೧೯ ।।**

**ಅರ್ಥ** :- **ಶೈನೇಯ ಪೂರ್ವೇಷು** = ಸಾತ್ಯಕಿ ಮೊದಲಾದವರು, **ರಥೋಜ್ಝಿತೇಷು** = ರಥರಹಿತರಾಗುತ್ತಿರಲು, **ಅವಪ್ಲುತ್ಯ** = ಹಾರಿ, **ಭೂಮೌ** = ಭೂಮಿಯಲ್ಲಿ, **ಕಥಂಚಿದೇವ** = ಕಷ್ಟದಿಂದ ಹೇಗೋ, **ಸ್ಥಿತೇಷು** = ನಿಂತಿರಲು, **ಭೀಮೇಚ** = ಭೀಮನಾದರೂ, **ವಿಭೀಷಿತಾಶ್ವಾನ್** = ಹೆದರಿದ ಕುದುರೆಗಳನ್ನು, **ಸಂಯಮ್ಯ** = ವಶಕ್ಕೆ ತಂದುಕೊಂಡು, **ಯುಧ್ಯತ್ಯಪಿ** = ಯುದ್ಧಮಾಡುತ್ತಿರಲೂ, **ಕೃಷ್ಣಃ** = ಕೃಷ್ಣನು, **ಐಕ್ಷತ್** = ನೋಡಿ ಯೋಚಿಸಿದ.

**ತಾತ್ಪರ್ಯ** :- ಸಾತ್ಯಕಿ ಮೊದಲಾದವರು ರಥಗಳನ್ನು ಕಳೆದು ಕೊಂಡವರಾಗಿ ಹಾರಿ ಕಷ್ಟಪಟ್ಟು ನೆಲದಮೇಲೆ ನಿಂತಿರಲು, ಭೀಮ ಹೆದರಿದ ತನ್ನ ಕುದುರೆಗಳನ್ನು ವಶಕ್ಕೆ ತಂದುಕೊಂಡು ಯುದ್ಧ ಮಾಡುತ್ತಿರಲು ಕೃಷ್ಣ ಹೀಗೆ ಯೋಚಿಸಿದ.

**ಸಂಕ್ಲೇಶಿತೋ ವೈಷ್ಣವಾಸ್ತ್ರಂ ಪ್ರಮುಂಚೇತ್**
**ಪ್ರಾಗ್ಜ್ಯೋತಿಷೋ ಭೀಮಸೇನೇ ತತೋऽಹಮ್ ।**
**ಯಾಮ್ಯರ್ಜುನೇನೈವ ತದಸ್ತ್ರಮಾತ್ಮನಃ**
**ಸ್ವೀಕರ್ತುಮನ್ಯೇನ ವರಾದಧಾರ್ಯಮ್ ।। ೨೦ ।।**

**ಅರ್ಥ** :- **ಸಂಕ್ಲೇಶಿತಃ** = ಬಹಳ ಪೀಡಿತನಾದ, **ಪ್ರಾಗ್ಜ್ಯೋತಿಷಃ** = ಭಗದತ್ತನು, **ಭೀಮಸೇನೇ** = ಭೀಮನ ಮೇಲೆ, **ವೈಷ್ಣವಾಸ್ತ್ರಂ** = ವೈಷ್ಣವಾಸ್ತ್ರವನ್ನು, **ಪ್ರಮುಂಚೇತ್** = ಬಿಟ್ಟಾನು, **ತತಃ** = ಆದ್ದರಿಂದ, **ಆತ್ಮನಃ** = ತನ್ನ, **ವರಾತ್** = ವರದಿಂದ, **ಅನ್ಯೇನ** = ಬೇರೆವರಿಂದ, **ಅಧಾರ್ಯಮ್** = ಧರಿಸಲು ಸಾಧ್ಯವಿಲ್ಲದ, **ತದಸ್ತ್ರಮ್** = ಆ ಅಸ್ತ್ರವನ್ನು, **ಸ್ವೀಕರ್ತುಂ** = ಸ್ವೀಕರಿಸಲು, **ಅರ್ಜುನೇನ (ಸಹ)** = ಅರ್ಜುನನ ಜೊತೆಗೆ, **ಅಹಮೇವ** = ನಾನೇ, **ಯಾಮಿ** = ಹೋಗುತ್ತೇನೆ.

**ತಾತ್ಪರ್ಯ** :- ಭೀಮನಿಂದ ಬಹಳ ಪೀಡಿತನಾಗಿ ಭಗದತ್ತ ವೈಷ್ಣವಾಸ್ತ್ರವನ್ನು ಬಿಡಬಹುದು. ನನ್ನ ವರವಿರುವುದರಿಂದ ಬೇರೆಯವರಿಗೆ ಧರಿಸಲಾಗದ ಆ ಅಸ್ತ್ರವನ್ನು ಸ್ವೀಕಾರ ಮಾಡಲು ಅರ್ಜುನನ ಜೊತೆಗೆ ನಾನೇ ಹೋಗುವೆನು.

**ಇತಿ ಸ್ಮ ಸಂಚಿಂತ್ಯ ಸಹಾರ್ಜುನೇನ**
**ತತ್ರಾऽಯಯಾವಥ ಪಾರ್ಥಂ ತ್ರಿಗರ್ತಾಃ ।**
**ನ್ಯವಾರಯಂಸ್ತಾ ಷ್ಟ್ರಮಸ್ತ್ರಂ ಸ ತೇಷು**
**ವ್ಯವಾಸೃಜನ್ಮೋಹನಾಯಾऽಶು ವೀರಃ ॥ ೨೧ ॥**

**ಅರ್ಥ** :- **ಇತಿ** = ಈ ರೀತಿಯಾಗಿ, **ಸಂಚಿಂತ್ಯ** = ಆಲೋಚಿಸಿ, **ಅರ್ಜುನೇನ ಸಹ** = ಅರ್ಜುನನ ಜೊತೆಗೆ ಕೃಷ್ಣನು, **ತತ್ರ** = ಆ ಭಗದತ್ತನಿದ್ದಲ್ಲಿಗೆ, **ಆಯಯೌ** = ಬಂದನು, **ಅಥ** = ಅನಂತರ, **ತ್ರಿಗರ್ತಾಃ** = ಸಂಶಪ್ತಕರು, **ಪಾರ್ಥಂ** = ಅರ್ಜುನನನ್ನು, **ನ್ಯವಾರಯನ್** = ತಡೆದರು, **ವೀರಃ ಸಃ** = ವೀರನಾದ ಆ ಅರ್ಜುನನು, **ಆಶು** = ಬೇಗನೇ, **ಮೋಹನಾಯ** = ಮೋಹ ಹುಟ್ಟಿಸುವುದಕ್ಕೆ, **ತೇಷು** = ಅವರ ಮೇಲೆ, **ತ್ವಾಷ್ಟ್ರಂ ಅಸ್ತ್ರಂ** = ತ್ವಾಷ್ಟ್ರ ಅಸ್ತ್ರವನ್ನು, **ವ್ಯವಾಸೃಜತ್** = ಪ್ರಯೋಗಿಸಿದ.

**ತಾತ್ಪರ್ಯ** :- ಹೀಗೆ ಆಲೋಚಿಸಿ ಕೃಷ್ಣ ಭಗದತ್ತನಿದ್ದಲ್ಲಿಗೆ ಹೊರಟ. ಆಗ ಸಂಶಪ್ತಕರು ಅರ್ಜುನನನ್ನು ತಡೆದರು. ವೀರನಾದ ಅರ್ಜುನ ಬೇಗನೇ ಅವರನ್ನು ಮೋಹಗೊಳಿಸುವುದಕ್ಕಾಗಿ ಅವರ ಮೇಲೆ ತ್ವಾಷ್ಟ್ರಾಸ್ತ್ರವನ್ನು ಪ್ರಯೋಗಿಸಿದ.

**ತದಸ್ತ್ರವೀರ್ಯೇಣ ವಿಮೋಹಿತಾಸ್ತೇ**
**ಪರಸ್ಪರಂ ಕೃಷ್ಣಪಾರ್ಥಾವಿತಿ ಸ್ಮ ।**
**ಜಘ್ನುಸ್ತದಾ ವಾಸವಿಸ್ತಾನ್ ವಿಸೃಜ್ಯ**
**ಪ್ರಾಗ್ಜ್ಯೋತಿಷಂ ಹಂತುಮಿಹಾಭ್ಯಗಾದ್ ದ್ರುತಮ್ ॥ ೨೨ ॥**

**ಅರ್ಥ :- ತದಸ್ತ್ರವೀರ್ಯೇಣ** = ಆ ಅಸ್ತ್ರದ ಪ್ರಭಾವದಿಂದ, **ತೇ** = ಆ ಸಂಶಪ್ತಕರು, **ಪರಸ್ಪರಂ** = ತಾವೇ ಪರಸ್ಪರ, **ಕೃಷ್ಣಪಾರ್ಥೌ ಇತಿ** = ಕೃಷ್ಣ ಅರ್ಜುನ ಎಂಬುದಾಗಿ ಭ್ರಮೆಗೊಳಗಾಗಿ, **ಜಘ್ನುಃ** = ಹೊಡೆದುಕೊಂಡರು, **ತದಾ** = ಆವಾಗ, **ವಾಸವಿಃ** = ಅರ್ಜುನನು, **ತಾನ್** = ಅವರನ್ನು, **ವಿಸೃಜ್ಯ** = ಬಿಟ್ಟು, **ದ್ರುತಮ್** = ಕೂಡಲೇ, **ಪ್ರಾಗ್ಜ್ಯೋತಿಷಂ** = ಭಗದತ್ತನನ್ನು, **ಹಂತುಂ** = ಕೊಲ್ಲುವುದಕ್ಕಾಗಿ, **ಅಭ್ಯಗಾತ್** = ಬಂದನು.

**ತಾತ್ಪರ್ಯ :-** ಆ ತ್ವಾಷ್ಟ್ರಾಸ್ತ್ರದ ಪ್ರಭಾವದಿಂದ ಸಂಶಪ್ತಕರು ಪರಸ್ಪರ ತಾವೇ ಕೃಷ್ಣಾರ್ಜುನರೆಂಬ ಭ್ರಮೆಗೊಳಗಾಗಿ ಒಬ್ಬರಿಗೊಬ್ಬರು ಹೊಡೆದು ಕೊಂಡರು. ಆಗ ಅರ್ಜುನ ಅವರನ್ನು ಅಲ್ಲಿಯೇ ತ್ಯಜಿಸಿ ಭಗದತ್ತನನ್ನು ಕೊಲ್ಲಲಿಕ್ಕೆ ಬೇಗನೇ ಅವನಿದ್ದಲ್ಲಿಗೇ ಬಂದನು.

**ವಿಸೃಜ್ಯ ಭೀಮಂ ಸ ಚ ಪಾರ್ಥಮೇವ**
**ಯಯೌ ಗಜಸ್ಕಂಧಗತೋ ಗಜಂ ತಮ್ ।**
**ಪ್ರಚೋದಯಾಮಾಸ ರಥಾಯ ತಸ್ಯ**
**ಚಕ್ರೇಽಪಸವ್ಯಂ ಹರಿರೇನಮಾಶು ॥ ೨೩ ॥**

**ಅರ್ಥ :- ಸಚ** = ಆ ಭಗದತ್ತನಾದರೂ, **ಭೀಮಂ** = ಭೀಮನನ್ನು, **ವಿಸೃಜ್ಯ** = ಬಿಟ್ಟು, **ಪಾರ್ಥಮೇವ** = ಅರ್ಜುನನನ್ನು ಕುರಿತು, **ಯಯೌ** = ಹೋದನು, **ಗಜಸ್ಕಂಧಗತಃ** = ಆನೆಯ ಹೆಗಲಿನ ಮೇಲೆ ಕುಳಿತಿದ್ದ ಆ ಭಗದತ್ತನು, **ತಂ ಗಜಂ** = ಆ ಆನೆಯನ್ನು, **ರಥಾಯ** = ರಥದ ಕಡೆಗೆ, **ಸಂಚೋದಯಾಮಾಸ** = ನಡೆಸಿದನು, **ಹರಿಃ** = ಕೃಷ್ಣನು, **ಆಶು** = ಕೂಡಲೇ, **ಏನಂ** = ಈ ರಥವನ್ನು, **ತಸ್ಯ** = ಆ ಆನೆಯ, **ಅಪಸವ್ಯಂ** = ಸುತ್ತಲೂ, **ಚಕ್ರೇ** = ತಿರುಗಿಸಿದನು.

**ತಾತ್ಪರ್ಯ** :- ಭಗದತ್ತ ಭೀಮನನ್ನು ಬಿಟ್ಟು ಅರ್ಜುನನನ್ನು ಸಮೀಪಿಸಿದ. ಆನೆಯ ಹೆಗಲಿನ ಮೇಲೆ ಕುಳಿತಿದ್ದ ಭಗದತ್ತ ಆನೆಯನ್ನು ಅರ್ಜುನನ ರಥದ ಕಡೆಗೆ ಕರೆದುಕೊಂಡು ಹೋದ. ಕೃಷ್ಣ ತನ್ನ ರಥವನ್ನು ಭಗದತ್ತನ ಆನೆಯ ಸುತ್ತಲೂ ವೇಗವಾಗಿ ಓಡಿಸಿದನು.

**ಮನೋಜವೇನೈವ ರಥೇ ಪರೇಣ**
**ಸಂಭ್ರಾಮ್ಯಮಾಣೇ ನತು ತಂ ಗಜಃ ಸಃ ।**
**ಪ್ರಾಪ್ತುಂ ಶಶಾಕಾಥ ಶರೈಃ ಸುತೀಕ್ಷ್ಣೈ-**
**ರಭ್ಯರ್ದಯಾಮಾಸ ನೃಪಂ ಸ ವಾಸವಿಃ ॥ ೨೪ ॥**

**ಅರ್ಥ** :- **ರಥೇ** = ರಥವು, **ಮನೋಜವೇನೈವ** = ಮನೋ ವೇಗದಿಂದಲೇನೇ, **ಪರೇಣ** = ಕೃಷ್ಣನಿಂದ, **ಸಂಭ್ರಾಮ್ಯಮಾಣೇ** = ತಿರುಗಿಸುತ್ತಿರಲು, **ಸಃ ಗಜಃ** = ಆ ಆನೆಯು, **ತಂ** = ಆ ರಥವನ್ನು, **ಪ್ರಾಪ್ತುಂ** = ಹೊಂದಲು (ಹಿಡಿಯಲು), **ನ ಶಶಾಕ** = ಸಮರ್ಥವಾಗಲಿಲ್ಲ, **ಸಃ ವಾಸವಿಃ** = ಆ ಅರ್ಜುನನು, **ಸುತೀಕ್ಷ್ಣೈಃ ಶರೈಃ** = ಬಹಳ ತೀಕ್ಷ್ಣವಾದ ಬಾಣಗಳಿಂದ, **ನೃಪಂ** = ಆ ಭಗದತ್ತನನ್ನು, **ಅಭ್ಯರ್ದಯಾಮಾಸ** = ಪೀಡಿಸಿದನು.

**ತಾತ್ಪರ್ಯ** :- ಕೃಷ್ಣ ಮನೋವೇಗದಿಂದ ಆನೆಯ ಸುತ್ತಲೂ ರಥವನ್ನು ತಿರುಗಿಸುತ್ತಿದ್ದರಿಂದ ಆನೆಗೆ ರಥ ಹಿಡಿಯಲು ಆಗಲಿಲ್ಲ. ಅರ್ಜುನ ಬಹಳ ತೀಕ್ಷ್ಣವಾದ ಬಾಣಗಳಿಂದ ಭಗದತ್ತನನ್ನು ಪೀಡಿಸಿದ.

**ಅಸ್ತ್ರೈಶ್ಚ ಶಸ್ತ್ರೈಃ ಸುಚಿರಂ ನೃವೀರಾ-**
**ವಯುಧ್ಯತಾಂ ತೌ ಬಲಿನಾಂ ಪ್ರಬರ್ಹೌ ।**
**ಅಥೋ ಚಕರ್ತಾಸ್ಯ ಧನುಃ ಸ ಪಾರ್ಥಃ**
**ಸ ವೈಷ್ಣವಾಸ್ತ್ರಂ ಚ ತದಾಽಂಕುಶೇಽಕರೋತ್ ॥ ೨೫ ॥**

**ಅರ್ಥ** :- **ಬಲಿನಾಂ ಪ್ರಬರ್ಹೌ** = ಬಲಿಷ್ಠರಲ್ಲಿ ಮೊದಲಿಗರಾದ, **ನೃವೀರೌ** = ಆ ಅರ್ಜುನ ಭಗದತ್ತರು, **ಸುಚಿರಂ** = ಬಹಳ ಕಾಲ, **ಅಸ್ತ್ರೈಃ** = ಅಸ್ತ್ರಗಳಿಂದ, **ಶಸ್ತ್ರೈಶ್ಚ** = ಶಸ್ತ್ರಗಳಿಂದಲೂ ಕೂಡ, **ಆಯುಧ್ಯತಾಂ** = ಯುದ್ಧ ಮಾಡಿದರು, **ಅಥೋ** = ಅನಂತರ, **ಸಃ ಪಾರ್ಥಃ** = ಆ ಅರ್ಜುನನು, **ಅಸ್ಯ** = ಈ ಭಗದತ್ತನ, **ಧನುಃ** = ಬಿಲ್ಲನ್ನು, **ಚಕರ್ತ** = ಕತ್ತರಿಸಿದ, **ಸಃ** = ಆ

ಭಗದತ್ತನು, **ತದಾ** = ಆವಾಗ, **ಅಂಕುಶೇ** = ಅಂಕುಶದಲ್ಲಿ, **ವೈಷ್ಣವಾಸ್ತ್ರಂ** = ವೈಷ್ಣವಾಸ್ತ್ರವನ್ನು, **ಅಕರೋತ್** = ಅಭಿಮಂತ್ರಿಸಿದ.

**ತಾತ್ಪರ್ಯ** :- ಬಲಶಾಲಿಗಳಲ್ಲಿ ಉತ್ತಮರಾದ ಆ ಭಗದತ್ತ ಅರ್ಜುನರು ಬಹಳ ಕಾಲ ಅಸ್ತ್ರದಿಂದಲೂ ಶಸ್ತ್ರಗಳಿಂದಲೂ ಯುದ್ಧಮಾಡಿದರು. ಅನಂತರ ಅರ್ಜುನ ಭಗದತ್ತನ ಬಿಲ್ಲನ್ನು ಕತ್ತರಿಸಿದ. ಭಗದತ್ತ ಅಂಕುಶದಲ್ಲಿ ವೈಷ್ಣವಾಸ್ತ್ರವನ್ನು ಅಭಿಮಂತ್ರಿಸಿದ.

**ತಸ್ಮಿನ್ನಸ್ತ್ರೇ ತೇನ ತದಾ ಪ್ರಮುಕ್ತೇ**
**ದಧಾರ ತದ್ ವಾಸುದೇವೋಽಮಿತೌಜಾಃ ।**
**ತದಂಸದೇಶಸ್ಯ ತು ವೈಜಯಂತೀ**
**ಬಭೂವ ಮಾಲಾಽಖಿಲಲೋಕಭರ್ತುಃ ॥ ೨೬ ॥**

**ಅರ್ಥ** :- **ತೇನ** = ಆ ಭಗದತ್ತನಿಂದ, **ತಸ್ಮಿನ್ ಅಸ್ತ್ರೇ** = ಆ ವೈಷ್ಣವಾಸ್ತ್ರವು, **ಪ್ರಮುಕ್ತೇ** = ಬಿಡಲ್ಪಡುತ್ತಿರಲು, **ತದಾ** = ಆವಾಗ, **ಅಮಿತೌಜಾಃ** = ಅಮಿತಶಕ್ತಿಯುಳ್ಳ, **ವಾಸುದೇವಃ** = ಆ ಕೃಷ್ಣನು, **ತತ್** = ಆ ಅಸ್ತ್ರವನ್ನು, **ದಧಾರ** = ಧರಿಸಿದನು, **ತತ್** = ಆ ಅಸ್ತ್ರವು, **ಅಖಿಲ ಲೋಕಭರ್ತುಃ ಅಸ್ಯ** = ಸಮಸ್ತ ಲೋಕದ ಒಡೆಯನಾದ ಈ ಕೃಷ್ಣನ, **ಅಂಸದೇಶೇ** = ಹೆಗಲಿನಲ್ಲಿ, **ವೈಜಯಂತೀ ಮಾಲಾ** = ವೈಜಯಂತೀ ಮಾಲೆಯು, **ಬಭೂವ** = ಆಯಿತು.

**ತಾತ್ಪರ್ಯ** :- ಭಗದತ್ತ ವೈಷ್ಣವಾಸ್ತ್ರ ಪ್ರಯೋಗಿಸಿದ. ಆವಾಗ ಅಮಿತ ಶಕ್ತಿಶಾಲಿಯಾದ ಶ್ರೀಕೃಷ್ಣ ಆವೈಷ್ಣವಾಸ್ತ್ರವನ್ನು ಧರಿಸಿದ. ಆ ಅಸ್ತ್ರವು ಸಮಸ್ತ ಲೋಕಾಧಿಪತಿಯಾದ ಕೃಷ್ಣನ ಹೆಗಲಲ್ಲಿ ವೈಜಯಂತೀ ಮಾಲೆಯಾಯಿತು.

**ದೃಷ್ಟ್ವೈವ ತದ್ ಧಾರಿತಮಚ್ಯುತೇನ**
**ಪಾರ್ಥಃ ಕಿಮರ್ಥಂ ವಿಧೃತಂ ತ್ವಯೇತಿ ।**
**ಊಚೇ ತಮಾಹಾಽಶು ಜಗನ್ನಿವಾಸೋ**
**ಮಯಾಽಖಿಲಂ ಧಾರ್ಯತೇ ಸರ್ವದೈವ ॥ ೨೭ ॥**

**ಅರ್ಥ** :- **ಅಚ್ಯುತೇನ** = ಕೃಷ್ಣನಿಂದ, **ಧಾರಿತಂ** = ಧರಿಸಲ್ಪಟ್ಟ, **ತತ್** = ಆ ವೈಷ್ಣವಾಸ್ತ್ರವನ್ನು, **ದೃಷ್ಟ್ವೈವ** = ನೋಡಿಯೇ, **ತ್ವಯಾ** = ನಿನ್ನಿಂದ,

**ಕಿಮರ್ಥಂ ವಿಧೃತಂ** = ಏಕೆ ಧರಿಸಲ್ಪಟ್ಟಿತು, **ಇತಿ** = ಎಂಬುದಾಗಿ, **ಊಚೇ** = ಹೇಳಿದನು, **ಆಶು** = ಕೂಡಲೇ, **ತಂ** = ಅವನನ್ನು ಕುರಿತು, **ಜಗನ್ನಿವಾಸಃ** = ಜಗತ್ತಿಗೆ ಆಧಾರನಾದ ಕೃಷ್ಣನು, **ಆಹ** = ಹೇಳಿದನು, **ಮಯಾ ಏವ** = ನನ್ನಿಂದಲೇನೇ, **ಅಖಿಲಂ** = ಎಲ್ಲವೂ, **ಸರ್ವದಾ** = ಯಾವಾಗಲೂ, **ಧಾರ್ಯತೇ** = ಧರಿಸಲ್ಪಡುತ್ತದೆ.

**ತಾತ್ಪರ್ಯ** :- ಶ್ರೀಕೃಷ್ಣ ವೈಷ್ಣವಾಸ್ತ್ರವನ್ನು ಧರಿಸಿದ. ಅದನ್ನು ನೋಡಿ ಅರ್ಜುನ ಕೇಳಿದ. ನೀನು ಏಕೆ ಅದನ್ನು ಧರಿಸಿದೆ ಎಂದು ? ಆಗ ಜಗದಾಧಾರನಾದ ಕೃಷ್ಣ ಹೇಳಿದ. ಯಾವಾಗಲೂ ಎಲ್ಲವನ್ನೂ ನಾನೇ ಧರಿಸುತ್ತೇನೆ.

**ನ ಮಾದೃಶೋಽನ್ಯೋಽಸ್ತಿ ಕುತಃ ಪರೋ ಮತ್**
**ಸೋಽಹಂ ಚತುರ್ಧಾ ಜಗತೋ ಹಿತಾಯ ।**
**ಸ್ಥಿತೋಽಸ್ಮಿ ಮೋಕ್ಷಪ್ರಳಯಸ್ಥಿತೀನಾಂ**
**ಸೃಷ್ಟೇಶ್ಚ ಕರ್ತಾ ಕ್ರಮಶಃ ಸ್ವಮೂರ್ತಿಭಿಃ ।**
**ಸ ವಾಸುದೇವಾದಿಚತುಃಸ್ವರೂಪಃ**
**ಸ್ಥಿತೋಽನಿರುದ್ಧೋ ಹೃದಿ ಚಾಖಿಲಸ್ಯ ॥ ೨೮ ॥**

**ಅರ್ಥ** :- **ಮಾದೃಶಃ** = ನನಗೆ ಸಮಾನನಾದವನು, **ಅನ್ಯಃ** = ಇನ್ನೊಬ್ಬನು, **ನಾಸ್ತಿ** = ಇಲ್ಲ, **ಮತ್ಪರಃ** = ನನಗಿಂತಲೂ ಮಿಗಿಲಾದವನು, **ಕುತಃ** = ಇನ್ನೆಲ್ಲಿದ್ದಾನೆ, **ಜಗತಃ** = ಜಗತ್ತಿನ, **ಹಿತಾಯ** = ಹಿತಕ್ಕಾಗಿ, **ಚತುರ್ಧಾ** = ನಾಲ್ಕು ವಿಧವಾಗಿ, **ಸ್ಥಿತೋಸ್ಮಿ** = ಇದ್ದೇನೆ, **ಸ್ವಮೂರ್ತಿಭಿಃ** = ನನ್ನ ರೂಪಗಳಿಂದ, **ಕ್ರಮಶಃ** = ಕ್ರಮವಾಗಿ, **ಮೋಕ್ಷಪ್ರಲಯಸ್ಥಿತೀನಾಂ** = ಮೋಕ್ಷ, ಪ್ರಲಯ, ಸ್ಥಿತಿಗಳಿಗೆ, **ಸೃಷ್ಟೇಶ್ಚ** = ಸೃಷ್ಟಿಗೂ ಕೂಡ, **ಕರ್ತಾ** = ಕರ್ತನೂ, **ಸ್ಥಿತೋಽಸ್ಮಿ** = ಆಗಿದ್ದೇನೆ, **ವಾಸುದೇವಾದಿ ಚತುಃಸ್ವರೂಪಃ** = ವಾಸುದೇವ ಮೊದಲಾದ ನಾಲ್ಕು ರೂಪದವನಾದ, **ಅಹಂ** = ನಾನು, **ಅನಿರುದ್ಧಃ** = ಅನಿರುದ್ಧನಾಗಿ, **ಅಖಿಲಸ್ಯ ಚ** = ಎಲ್ಲರ, **ಹೃದಿ** = ಮನಸ್ಸಿನಲ್ಲಿ, **ಸ್ಥಿತಃ** = ಇದ್ದೇನೆ.

**ತಾತ್ಪರ್ಯ** :- ನನಗೆ ಸಮಾನನಾದವನು ಇನ್ನೊಬ್ಬನಿಲ್ಲ. ನನಗೆ ಮಿಗಿಲಾದವ ಇನ್ನೆಲ್ಲಿ ? ಜಗತ್ತಿನ ಹಿತಕ್ಕಾಗಿ ನಾಲ್ಕು ರೂಪದವನಾಗಿದ್ದೇನೆ.

ನನ್ನ ರೂಪಗಳಿಂದ ಕ್ರಮವಾಗಿ ಮೋಕ್ಷ, ಪ್ರಲಯ, ಸ್ಥಿತಿ, ಸೃಷ್ಟಿಗಳಿಗೆ ಕರ್ತೃವಾಗಿದ್ದೇನೆ. ವಾಸುದೇವ ಮೊದಲಾದ ನಾಲ್ಕು ರೂಪವುಳ್ಳ ನಾನೇ ಅನಿರುದ್ಧನಾಗಿ ಎಲ್ಲರ ಹೃದಯದಲ್ಲಿ ಇರುತ್ತೇನೆ.

**ಸ ಏವ ಚ ಕ್ರೋಡತನುಃ ಪುರಾऽಹಂ**
**ಭೂಮಿಪ್ರಿಯಾರ್ಥಂ ನರಕಾಯ ಚಾದಾಮ್ ।**
**ಅಸ್ತ್ರಂ ಮದೀಯಂ ವರಮಸ್ಯ ಚಾದಾ-**
**ಮವಧ್ಯತಾಂ ಯಾವದಸ್ತ್ರಂ ಸಸೂನೋಃ ॥ ೨೯ ॥**

**ಅರ್ಥ** :- **ಪುರಾ** = ಹಿಂದೆ, **ಅಹಂ** = ನಾನು, **ಕ್ರೋಡತನುಃ** = ವರಾಹರೂಪನಾಗಿ, **ಭೂಮಿಪ್ರಿಯಾರ್ಥಂ** = ಭೂದೇವಿಗೆ ಪ್ರಿಯ ಉಂಟುಮಾಡುವುದಕ್ಕಾಗಿ, **ನರಕಾಯ** = ನರಕಾಸುರನಿಗೆ, **ಮದೀಯಂ ಅಸ್ತ್ರಂ** = ನನ್ನ ಅಸ್ತ್ರವನ್ನು, **ಸಸೂನೋಃ** = ಮಗನಿಂದ ಕೂಡಿದ, **ಅಸ್ಯ** = ಈ ನರಕಾಸುರನಿಗೆ, **ಯಾವದಸ್ತ್ರಂ** = ಅಸ್ತ್ರವಿರುವಷ್ಟುಕಾಲ, **ಅವಧ್ಯತಾಂ ವರಂ ಚ** = ಅವಧ್ಯತ್ವವರವನ್ನು, **ಅದಾಮ್** = ಕೊಟ್ಟಿದ್ದೆ.

**ತಾತ್ಪರ್ಯ** :- ಹಿಂದೆ ನಾನು ವರಾಹರೂಪವಾಗಿ ಭೂದೇವಿಯ ಸಂತೋಷಕ್ಕಾಗಿ ನರಕಾಸುರನಿಗೆ ಅಸ್ತ್ರವನ್ನು ಕೊಟ್ಟಿದ್ದೆ. ಅವನ ಮಗನಿಗೂ ಅವನಿಗೂ ಅಸ್ತ್ರವಿರುವಷ್ಟು ಕಾಲ ಅವಧ್ಯತ್ವ ವರವನ್ನು ನೀಡಿದ್ದೆ.

**ಅಸ್ತ್ರಸ್ಯ ಚಾನ್ಯೋ ನತು ಕಶ್ಚಿದಸ್ತಿ**
**ಯೋऽವಧ್ಯ ಏತಸ್ಯ ಕುತಶ್ಚ ಮತ್ತಃ ।**
**ಇತಿ ಸ್ಮ ತೇನೈವ ಮಯಾ ಧೃತಂ ತ-**
**ದಸ್ತ್ರಂ ತದೇನಂ ಜಹಿ ಚಾಸ್ತ್ರಹೀನಮ್ ॥ ೩೦ ॥**

**ಅರ್ಥ** :- **ಏತಸ್ಯ ಅಸ್ತ್ರಸ್ಯ** = ಈ ಅಸ್ತ್ರಕ್ಕೆ, **ಯಃ** = ಯಾರು, **ಅವಧ್ಯಃ** = ಅವಧ್ಯನಾದವನೋ, **ಮತ್ತಃ** = ನನಗಿಂತಲೂ, **ಅನ್ಯಃ ಕಶ್ಚಿತ್** = ಬೇರೆ ಯಾರೊಬ್ಬರೂ ಕೂಡ, **ಕುತಶ್ಚ** = ಎಲ್ಲಿಯೂ, **ನಾಸ್ತಿ** = ಇಲ್ಲ, **ತೇನೈವ ಮಯಾ** = ಅಂತಹ ನನ್ನಿಂದಲೇ, **ತತ್ ಅಸ್ತ್ರಂ** = ಆ ಅಸ್ತ್ರವು, **ಧೃತಂ** = ಧರಿಸಲ್ಪಟ್ಟಿತು, **ತತ್** = ಆದ್ದರಿಂದ, **ಅಸ್ತ್ರಹೀನಂ** = ಅಸ್ತ್ರಹೀನನಾದ, **ಏನಂ** = ಈ ಭಗದತ್ತನನ್ನು, **ಜಹಿ** = ಕೊಲ್ಲು, **ಇತಿ** = ಎಂಬುದಾಗಿ.

**ತಾತ್ಪರ್ಯ** :- ಈ ಅಸ್ತ್ರಕ್ಕೆ ನನ್ನನ್ನು ಹೊರತುಪಡಿಸಿ ಎಲ್ಲಿಯೂ ಯಾರೂ ಅವಧ್ಯರೇ ಇಲ್ಲ. ಆದ್ದರಿಂದ ನಾನು ಧರಿಸಿದೆ. ಈಗ ಅಸ್ತ್ರಹೀನನಾಗಿರುವ ಭಗದತ್ತನನ್ನು ಕೊಲ್ಲು.

**ಇತ್ಯುಕ್ತಮಾಕರ್ಣ್ಯ ಸ ಕೇಶವೇನ**
**ಸಮ್ಮಂತ್ರ್ಯ ಬಾಣಂ ಹೃದಯೇ ಮುಮೋಚ ।**
**ಪ್ರಾಗ್ಜ್ಯೋತಿಷಸ್ಯಾಪರಮುತ್ತಮಂ ಶರಂ**
**ಗಜೇಂದ್ರಕುಂಭಸ್ಥಲ ಆಶ್ವಮಜ್ಜಯತ್ ॥ ೩೧ ॥**

**ಅರ್ಥ** :- **ಇತಿ** = ಈ ರೀತಿಯಾಗಿ, **ಉಕ್ತಂ** = ಹೇಳಲ್ಪಟ್ಟಿದ್ದನ್ನು, **ಆಕರ್ಣ್ಯ** = ಕೇಳಿ, **ಸಃ** = ಆ ಅರ್ಜುನನು, **ಕೇಶವೇನ(ಸಹ)** = ಕೃಷ್ಣನ ಜೊತೆಗೆ, **ಸಮ್ಮಂತ್ರ್ಯ** = ವಿಚಾರಮಾಡಿ, **ಪ್ರಾಗ್ಜ್ಯೋತಿಷಸ್ಯ** = ಭಗದತ್ತನ, **ಹೃದಯೇ** = ಎದೆಯ ಮೇಲೆ, **ಆಶು** = ಬೇಗನೇ, **ಬಾಣಂ** = ಬಾಣವನ್ನು, **ಮುಮೋಚ** = ಬಿಟ್ಟನು, **ಗಜೇಂದ್ರಕುಂಭಸ್ಥಲೇ** = ಸುಪ್ರತೀಕ ಆನೆಯ ಕುಂಭಸ್ಥಳದಲ್ಲಿ, **ಅಪರಂ** = ಇನ್ನೊಂದು, **ಉತ್ತಮಂ** = ಉತ್ತಮವಾದ, **ಶರಂ** = ಬಾಣವನ್ನು, **ಅಮಜ್ಜಯತ್** = ನೆಟ್ಟನು.

**ತಾತ್ಪರ್ಯ** :- ಕೃಷ್ಣ ಈ ರೀತಿಯಾಗಿ ಹೇಳಿದ್ದನ್ನು ಕೇಳಿ ಅರ್ಜುನ ಅವನೊಡನೆ ಆಲೋಚನೆ ಮಾಡಿ ಭಗದತ್ತನ ಎದೆಯ ಮೇಲೆ ಬಾಣವನ್ನು ಬಿಟ್ಟನು. ಗಜೇಂದ್ರನಾದ ಸುಪ್ರತೀಕದ ಕುಂಭಸ್ಥಳದಲ್ಲಿ ಇನ್ನೊಂದು ಉತ್ತಮವಾದ ಬಾಣವನ್ನು ಬಿಟ್ಟನು.

**ಉಭೌ ಚ ತೌ ಪೇತತುರದ್ರಿಸನ್ನಿಭೌ**
**ಮಹೇಂದ್ರವಜ್ರಾಭಿಹತಾವಿವಾಽಶು ।**
**ನಿಹತ್ಯ ತೌ ವಾಸವಿರುಗ್ರಪೌರುಷೋ**
**ಮುಮೋದ ಸಾಧು ಸ್ವಜನಾಭಿಪೂಜಿತಃ ॥ ೩೨ ॥**

**ಅರ್ಥ** :- **ತೌಉಭೌ** = ಆ ಭಗದತ್ತ ಸುಪ್ರತೀಕ ಆನೆ ಇಬ್ಬರೂ, **ಮಹೇಂದ್ರವಜ್ರಾಭಿಹತೌ** = ಮಹೇಂದ್ರನ ವಜ್ರಾಯುಧದಿಂದ ಹೊಡೆಯಲ್ಪಟ್ಟ, **ಅದ್ರಿಸನ್ನಿಭೌ ಇವ** = ಪರ್ವತಗಳಂತೆ, **ಆಶು** = ಬೇಗನೇ, **ಪೇತತುಃ** = ಬಿದ್ದರು, **ಉಗ್ರಪೌರುಷಃ** = ಉಗ್ರಪ್ರತಾಪಿಯಾದ, **ವಾಸವಿಃ** =

ಅರ್ಜುನನು, **ತೌ** = ಅವರಿಬ್ಬರನ್ನು, **ನಿಹತ್ಯ** = ಕೊಂದು, **ಸಾಧು** = ಚೆನ್ನಾಗಿ, **ಸ್ವಜನಾಭಿಪೂಜಿತಃ** = ತನ್ನವರಿಂದ ಪೂಜಿತನಾಗಿ, **ಮುಮೋದ** = ಸಂತೋಷಪಟ್ಟನು.

**ತಾತ್ಪರ್ಯ** :- ಭಗದತ್ತ ಮತ್ತ ಸುಪ್ರತೀಕ ಆನೆ ಇಬ್ಬರೂ ಮಹೇಂದ್ರನ ವಜ್ರಾಯುಧದಿಂದ ಹೊಡೆಯಲ್ಪಟ್ಟ ಪರ್ವತಗಳಂತೆ ಬೇಗನೆ ಉರುಳಿಬಿದ್ದರು. ಉಗ್ರಪೌರುಷವುಳ್ಳ ಅರ್ಜುನನು ಭಗದತ್ತ ಸುಪ್ರತೀಕ ಆನೆ ಇಬ್ಬರನ್ನೂ ಕೊಂದು ಚೆನ್ನಾಗಿ ತನ್ನವರ ಹೊಗಳಿಕೆಗೆ ಪಾತ್ರನಾಗಿ ಸಂತೋಷಪಟ್ಟ.

**ಅಥಾಚಲಂ ವೃಷಕಂ ಚೈವ ಹತ್ವಾ**
**ಕನೀಯಸೌ ಶಕುನೇಸ್ತಂ ಚ ಬಾಣೈಃ ।**
**ವಿವ್ಯಾಧ ಮಾಯಾಮಸೃಜತ್ ಸ ತಾಂ ಚ**
**ವಿಜ್ಞಾನಾಸ್ತ್ರೇಣಾಽಶು ನಾಶಾಯ ಚಕ್ರೇ ॥ ೩೩ ॥**

**ಅರ್ಥ** :- **ಅಥ** = ಅನಂತರ, **ಶಕುನೇಃ** = ಶಕುನಿಯ, **ಕನೀಯಸೌ** = ತಮ್ಮಂದಿರಾದ, **ಅಚಲಂ** = ಅಚಲನನ್ನು, **ವೃಷಕಂಚೈವ** = ವೃಷಕನನ್ನೂ ಕೂಡ, **ಹತ್ವಾ** = ಕೊಂದು, **ತಂ ಚ** = ಆ ಶಕುನಿಯನ್ನೂ ಕೂಡ, **ಬಾಣೈಃ** = ಬಾಣಗಳಿಂದ, **ವಿವ್ಯಾಧ** = ಹೊಡೆದನು, **ಸಃ** = ಆ ಶಕುನಿಯು, **ಮಾಯಾಂ** = ಮಾಯೆಯನ್ನು, **ಅಸೃಜತ್** = ಸೃಷ್ಟಿ ಮಾಡಿದನು, **ಸಚ** = ಆ ಅರ್ಜುನನಾದರೂ, **ಆಶು** = ಕೂಡಲೇ, **ವಿಜ್ಞಾನಾಸ್ತ್ರೇಣ** = ವಿಜ್ಞಾನಾಸ್ತ್ರದಿಂದ, **ತಾಂ ಚ** = ಅದನ್ನೂ ಕೂಡ, **ನಾಶಾಯ ಚಕ್ರೇ** = ನಾಶಮಾಡಿದನು.

**ತಾತ್ಪರ್ಯ** :- ಅನಂತರ ಅರ್ಜುನ ಶಕುನಿಯ ತಮ್ಮಂದಿರಾದ ಅಚಲನನ್ನು ವೃಷಕನನ್ನೂ ಕೊಂದನು. ಶಕುನಿಯನ್ನು ಬಾಣಗಳಿಂದ ಪೀಡಿಸಿದ. ಶಕುನಿ ಮಾಯೆಯನ್ನು ಸೃಷ್ಟಿಮಾಡಿದ. ಅರ್ಜುನ ಆ ಮಾಯೆಯನ್ನು ವಿಜ್ಞಾನಾಸ್ತ್ರದಿಂದ ನಾಶಪಡಿಸಿದ.

**ಸ ನಷ್ಟಮಾಯಃ ಪ್ರಾದ್ರವತ್ ಪಾಪಕರ್ಮಾ**
**ತತಃ ಪಾರ್ಥಃ ಶರಪೂಗೈಶ್ಚಮೂಂ ತಾಮ್ ।**
**ವಿದ್ರಾವಯಾಮಾಸ ತದಾ ಗುರೋಃ ಸುತೋ**
**ಮಾಹಿಷ್ಮತೀಪತಿಮಾಜೌ ಜಘಾನ ॥ ೩೪ ॥**

**ಅರ್ಥ :- ಪಾಪಕರ್ಮಾ** = ಪಾಪಕರ್ಮಿಯಾದ, **ಸಃ** = ಆ ಶಕುನಿಯು, **ನಷ್ಟಮಾಯಃ** = ನಷ್ಟವಾದ ಮಾಯೆಯುಳ್ಳವನಾಗಿ, **ಪ್ರಾದ್ರವತ್** = ಓಡಿ ಹೋದನು, **ತತಃ** = ಅನಂತರ, **ಪಾರ್ಥಃ** = ಅರ್ಜುನನು, **ಶರಪೂಗೈಃ** = ಬಾಣಗಳ ಸಮೂಹಗಳಿಂದ, **ತಾಂ ಚಾಮೂಂ** = ಆ ಸೇನೆಯನ್ನು, **ವಿದ್ರಾವಯಾಮಾಸ** = ಓಡಿಸಿದನು, **ತದಾ** = ಆಗ, **ಗುರೋಃ ಸುತಃ** = ಅಶ್ವತ್ಥಾಮರು, **ಮಾಹಿಷ್ಮತೀ ಪತಿವ್** = ಮಾಹಿಷ್ಮತಿಯ ಅರಸನಾದ ನೀಲನನ್ನು, **ಆಜೌ** = ಯುದ್ಧದಲ್ಲಿ, **ಜಘಾನ** = ಕೊಂದರು.

**ತಾತ್ಪರ್ಯ :-** ಪಾಪಕರ್ಮಿಯಾದ ಶಕುನಿ ತನ್ನಿಂದ ಸೃಷ್ಟವಾದ ಮಾಯೆ ನಾಶವಾದೊಡನೇ ಓಡಿಹೋದ. ಅನಂತರ ಅರ್ಜುನ ಬಾಣ ಸಮೂಹಗಳಿಂದ ಕೌರವ ಸೇನೆಯನ್ನು ಓಡಿಸಿದ. ಆಗ ಅಶ್ವತ್ಥಾಮ ಮಾಹಿಷ್ಮತಿಯ ದೊರೆಯಾದ ನೀಲನನ್ನು ಸಂಹರಿಸಿದನು.

**ತದಾ ಭೀಮಸ್ತಸ್ಯ ನಿಹತ್ಯ ವಾಹಾನ್**
**ವ್ಯದ್ರಾವಯದ್ ಧಾರ್ತರಾಷ್ಟ್ರೀಂ ಚಮೂಂ ಚ ।**
**ಭೀಮಾರ್ಜುನಾಭ್ಯಾಂ ಹನ್ಯಮಾನಾಂ ಚಮೂಂ ತಾಂ**
**ದೃಷ್ಟ್ವಾ ದ್ರೋಣಃ ಕ್ಷಿಪ್ರಮಪಾಜಹಾರ ॥ ೩೫ ॥**

**ಅರ್ಥ :- ತದಾ** = ಆಗ, **ಭೀಮಃ** = ಭೀಮನು, **ತಸ್ಯ** = ಆ ಅಶ್ವತ್ಥಾಮನ, **ವಾಹಾನ್** = ಕುದುರೆಗಳನ್ನು, **ನಿಹತ್ಯ** = ಕೊಂದು, **ಧಾರ್ತರಾಷ್ಟ್ರೀಂ ಚಮೂಂ ಚ** = ಕೌರವ ಸೇನೆಯನ್ನೂ ಕೂಡ, **ವ್ಯದ್ರಾವಯತ್** = ಓಡಿಸಿದನು, **ಭೀಮಾರ್ಜುನಾಭ್ಯಾಂ** = ಭೀಮಾರ್ಜುನ ರಿಂದ, **ಹನ್ಯಮಾನಾಂ** = ನಾಶಮಾಡಲ್ಪಡುತ್ತಿದ್ದಂತಹ, **ಚಮೂಂ** = ಸೈನ್ಯವನ್ನು, **ದೃಷ್ಟ್ವಾ** = ನೋಡಿ, **ದ್ರೋಣಃ** = ದ್ರೋಣರು, **ಕ್ಷಿಪ್ರಂ** = ಬೇಗನೇ, **ತಾಂ** = ಆ ಸೈನ್ಯವನ್ನು, **ಅಪಾಜಹಾರ** = ಕರೆಸಿಕೊಂಡರು.

**ತಾತ್ಪರ್ಯ :-** ಆಗ ಭೀಮನು ಅಶ್ವತ್ಥಾಮನ ಕುದುರೆಗಳನ್ನು ಕೊಂದು ಕೌರವರ ಸೈನ್ಯವನ್ನು ಅಟ್ಟಿದನು. ಭೀಮಾರ್ಜುನರು ಸೈನ್ಯ ನಾಶಮಾಡುತ್ತಿದ್ದುದನ್ನು ಕಂಡು, ದ್ರೋಣರು ಬೇಗನೇ ಆ ಸೈನ್ಯವನ್ನು ಕರೆಸಿಕೊಂಡರು.

**ಪ್ರಾಗ್ಜ್ಯೋತಿಷೇ ನಿಹತೇಽಥಾಗ್ರಹಾಚ್ಚ**
**ಯುಧಿಷ್ಠಿರಸ್ಯಾತಿವಿಷಣ್ಣರೂಪಃ ।**
**ದುರ್ಯೋಧನೋಽಶ್ರಾವಯದ್ ದೀನವಾಕ್ಯಾ-**
**ನ್ಯತ್ರ ದ್ರೋಣಂ ಸೋಽಪಿ ನೃಪಂ ಜಗಾದ ॥ ೩೬ ॥**

**ಅರ್ಥ** :- **ಪ್ರಾಗ್ಜ್ಯೋತಿಷೇ** = ಭಗದತ್ತನು, **ನಿಹತೇ** = ಹತನಾಗುತ್ತಿರಲು, **ಅಥ** = ಮತ್ತೂ, **ಯುಧಿಷ್ಠಿರಸ್ಯ** = ಯುಧಿಷ್ಠಿರನನ್ನು, **ಅಗ್ರಹಾಚ್ಚ** = ಹಿಡಿಯದೆ ಇದ್ದುದರಿಂದ, **ಅತಿವಿಷಣ್ಣರೂಪಃ** = ಬಹಳ ವಿಷಣ್ಣನಾದ, **ದುರ್ಯೋಧನಃ** = ದುರ್ಯೋಧನನು, **ದ್ರೋಣಂ** = ದ್ರೋಣರಿಗೆ, **ದೀನವಾಕ್ಯಾನಿ** = ದೀನವಾದ ಮಾತುಗಳನ್ನು, **ಅಶ್ರಾವಯತ್** = ಕೇಳಿಸಿದ, **ಸೋಽಪಿ** = ಆ ದ್ರೋಣನಾದರೂ, **ನೃಪಂ** = ದುರ್ಯೋಧನನನ್ನು ಕುರಿತು, **ಜಗಾದ** = ಹೇಳಿದ.

**ತಾತ್ಪರ್ಯ** :- ಭಗದತ್ತ ಹತನಾದ್ದರಿಂದಲೂ ಯುಧಿಷ್ಠಿರನನ್ನೂ ಸೆರೆ ಹಿಡಿಯಲು ಸಾಧ್ಯವಾಗದಿದ್ದುದರಿಂದ ಬಹಳ ವಿಷಣ್ಣನಾದ ದುರ್ಯೋಧನ ದ್ರೋಣರಿಗೆ ಕಟುವಾದ ಮಾತುಗಳನ್ನಾಡಿದ. ಆಗ ದ್ರೋಣರು ದುರ್ಯೋಧನನಿಗೆ ಹೇಳಿದರು.

**ಪಾರ್ಥೇ ಗತೇ ಶ್ವೋ ನೃಪತಿಂ ಗ್ರಹೀಷ್ಯೇ**
**ನಿಹನ್ಮಿ ವಾ ತತ್ಸದೃಶಂ ತದೀಯಮ್ ।**
**ಇತಿ ಪ್ರತಿಜ್ಞಾಂ ಸ ವಿಧಾಯ ಭೂಯಃ**
**ಪ್ರಾತರ್ಯಯೌ ಯುದ್ಧಮಾಕಾಂಕ್ಷಮಾಣಃ ॥ ೩೭ ॥**

**ಅರ್ಥ** :- **ಶ್ವಃ** = ನಾಳೆ, **ಪಾರ್ಥೇ** = ಅರ್ಜುನನು, **ಗತೇ** = ದೂರ ಹೋಗುತ್ತಿರಲು, **ನೃಪತಿಂ** = ಧರ್ಮರಾಜನನ್ನು, **ಗ್ರಹೀಷ್ಯೇ** = ಹಿಡಿಯುತ್ತೇನೆ, **ವಾ** = ಅಥವಾ, **ತತ್ಸದೃಶಂ** = ಅವನಿಗೆ ಸಮಾನವಾದ, **ತದೀಯಂ** = ಅವರ ಕಡೆಯವನನ್ನು, **ನಿಹನ್ಮಿ** = ಕೊಲ್ಲುತ್ತೇನೆ, **ಇತಿ** = ಈ ರೀತಿಯಾಗಿ, **ಸಃ** = ಆ ದ್ರೋಣನು, **ಭೂಯಃ** = ಪುನಃ, **ಪ್ರತಿಜ್ಞಾಂ** = ಪ್ರತಿಜ್ಞೆಯನ್ನು, **ವಿಧಾಯ** = ಮಾಡಿ, **ಪ್ರಾತಃ** = ಬೆಳಿಗ್ಗೆ, **ಯುದ್ಧಂ** = ಯುದ್ಧವನ್ನು, **ಆಕಾಂಕ್ಷಮಾಣಃ** = ಇಚ್ಛಿಸಿದವನಾಗಿ, **ಯಯೌ** = ಹೋದನು.

**ತಾತ್ಪರ್ಯ** :- ನಾಳೆ ಅರ್ಜುನ ದೂರ ಹೋದಾಗ ಯುಧಿಷ್ಠಿರನನ್ನು ಸೆರೆ ಹಿಡಿಯುವೆನು. ಅಥವಾ ಧರ್ಮರಾಜರಿಗೆ ಸಮಾನನಾದ ಅವರ ಕಡೆಯವನನ್ನು ಕೊಲ್ಲುತ್ತೇನೆ. ಈ ರೀತಿಯಾಗಿ ಪ್ರತಿಜ್ಞೆಮಾಡಿ ದ್ರೋಣ ಬೆಳಗ್ಗೆ ಮತ್ತೆ ಯುದ್ಧವನ್ನು ಇಚ್ಛಿಸಿದವನಾಗಿ ಹೊರಟು ಹೋದನು.

**ಪದ್ಮವ್ಯೂಹಂ ವ್ಯೂಹ್ಯ ಪರೈರಭೇದ್ಯಂ**
**ವರಾದ್ ವಿಷ್ಣೋಸ್ತಸ್ಯ ಮಂತ್ರಂ ಹ್ಯಜಪ್ತ್ವಾ ।**
**ಪಾರ್ಥಾಶ್ಚ ತಂ ಪ್ರಾಪುರ್ಋತೇಽರ್ಜುನೇನ**
**ಸಂಶಪ್ತಕೈರ್ಯುಯುಧೇ ಸೋಽಪಿ ವೀರಃ ॥ ೩೮ ॥**

**ಅರ್ಥ** :- **ವಿಷ್ಣೋಃ** = ವಿಷ್ಣುವಿನ, **ವರಾತ್** = ವರದಿಂದಾಗಿ, **ತಸ್ಯ** = ಆ ವಿಷ್ಣುವಿನ, **ಮಂತ್ರಂ** = ಮಂತ್ರವನ್ನು, **ಅಜಪ್ತ್ವಾ** = ಜಪಿಸದೆ, **ಪರೈಃ** = ಬೇರೆಯವರಿಂದ, **ಅಭೇದ್ಯಂ** = ಭೇದಿಸಲಾಗಿದ, **ಪದ್ಮವ್ಯೂಹಂ** = ಪದ್ಮವ್ಯೂಹವನ್ನು, **ವ್ಯೂಹ್ಯ** = ರಚಿಸಿ, **ಅರ್ಜುನೇನ ಋತೇ** = ಅರ್ಜುನನನ್ನು ಹೊರತುಪಡಿಸಿ, **ಪಾರ್ಥಾಃ** = ಎಲ್ಲಾ ಪಾಂಡವರು, **ತಂ** = ಆ ವ್ಯೂಹವನ್ನು, **ಪ್ರಾಪುಃ** = ಸಮೀಪಿಸಿದರು, **ವೀರಃ** = ವೀರನಾದ, **ಸೋಽಪಿ** = ಆ ಅರ್ಜುನನಾದರೂ, **ಸಂಶಪ್ತಕೈಃ** = ಸಂಶಪ್ತಕರ ಜೊತೆ, **ಯುಯುಧೇ** = ಯುದ್ಧಮಾಡಿದನು.

**ತಾತ್ಪರ್ಯ** :- ವಿಷ್ಣುವಿನ ವರದಿಂದ, ವಿಷ್ಣುಮಂತ್ರ ಜಪಿಸದೆ ಬೇರೆಯವರಿಂದ ಭೇದಿಸಲಾಗದ ಪದ್ಮವ್ಯೂಹವು, ದ್ರೋಣರಿಂದ ರಚಿಸಲ್ಪಟ್ಟಿತ್ತು. ಅರ್ಜುನನನ್ನು ಹೊರತುಪಡಿಸಿ ಎಲ್ಲಾ ಪಾಂಡವರು ವ್ಯೂಹದ ಸಮೀಪಕ್ಕೆ ಬಂದರು. ವೀರನಾದ ಅರ್ಜುನ ಸಂಶಪ್ತಕರೊಡನೆ ಹೋರಾಡಿದನು.

**ಪಾರ್ಥಾ ವ್ಯೂಹಂ ತು ತಂ ಪ್ರಾಪ್ಯ ನಾಶಕನ್ ಬೇತ್ತುಮುದ್ಯತಾಃ ।**
**ಜಾನಂಶ್ಚ ಪ್ರತಿಭಾಯೋಗಾತ್ ಕಾಮ್ಯಂ ನೈವಾಜಪನ್ಮನುಮ್ ॥ ೩೯ ॥**

**ಭೀಮೋ ಯುಧಿಷ್ಠಿರಸ್ತತ್ರ ತಜ್ಜ್ಞಂ ಸೌಭದ್ರಮಬ್ರವೀತ್ ।**
**ಭಿಂಧಿ ವ್ಯೂಹಮಿಮಂ ತಾತ ವಯಂ ತ್ವಾಮನುಯಾಮಹೇ ॥ ೪೦ ॥**

**ಅರ್ಥ** :- **ಪಾರ್ಥಾಃ** = ಪಾಂಡವರು, **ತಂ ವ್ಯೂಹಂ** = ಆ ವ್ಯೂಹವನ್ನು, **ಪ್ರಾಪ್ಯ** = ಹೊಂದಿ, **ಭೇತ್ತುಂ** = ಭೇದಿಸಲು, **ಉದ್ಯತಾಃ** = ಉದ್ಯುಕ್ತರಾದರು, **ತು** = ಆದರೆ, **ನಾಶಕನ್** = ಸಮರ್ಥರಾಗಲಿಲ್ಲ, **ಭೀಮಃ** = ಭೀಮನು, **ಪ್ರತಿಭಾ ಯೋಗಾತ್** = ಪ್ರತಿಭಾಬಲದಿಂದ, **ಜಾನನ್ ಚ** = ತಿಳಿದಿದ್ದರೂ, **ಕಾಮ್ಯಂ** = ಕಾಮ್ಯವಾದ, **ಮನುಂ** = ಮಂತ್ರವನ್ನು, **ನೈವ ಅಜಪತ್** = ಜಪಿಸಲೇ ಇಲ್ಲ, **ಯುಧಿಷ್ಠಿರಃ** = ಯುಧಿಷ್ಠಿರನು, **ತಜ್ಞಂ** = ಆ ಮಂತ್ರವನ್ನು ತಿಳಿದ, **ಸೌಭದ್ರಂ** = ಅಭಿಮನ್ಯುವನ್ನು ಕುರಿತು, **ಅಬ್ರವೀತ್** = ಹೇಳಿದನು, **ತಾತ** = ಮಗುವೇ, **ಇಮಂ ವ್ಯೂಹಂ** = ಈ ವ್ಯೂಹವನ್ನು, **ಭಿಂಧಿ** = ಭೇದಿಸು, **ವಯಂ** = ನಾವು, **ತ್ವಾಂ** = ನಿನ್ನನ್ನು, **ಅನುಯಾಮಹೇ** = ಅನುಸರಿಸುತ್ತೇವೆ.

**ತಾತ್ಪರ್ಯ** :- ಪಾಂಡವರು ವ್ಯೂಹದ ಹತ್ತಿರ ಹೋಗಿ ಅದನ್ನು ಭೇದಿಸಲು ಪ್ರಯತ್ನಿಸಿದರು. ಆದರೆ ಸಮರ್ಥರಾಗಲಿಲ್ಲ. ಭೀಮ ಪ್ರತಿಭಾಬಲದಿಂದ ತಿಳಿದಿದ್ದರೂ ಮಂತ್ರವನ್ನು ಕಾಮಕ್ಕಾಗಿ ಜಪಿಸಲಿಲ್ಲ. ಯುಧಿಷ್ಠಿರನು ಆ ಮಂತ್ರವನ್ನು ತಿಳಿದ ಅಭಿಮನ್ಯುವಿಗೆ ಹೇಳಿದ. ಮಗು! ನೀನು ವ್ಯೂಹವನ್ನು ಭೇದಿಸು. ನಾವು ನಿನ್ನನ್ನು ಹಿಂಬಾಲಿಸುತ್ತೇವೆ.

**ಸ ಏವಮುಕ್ತೋ ರಥಿನಾಂ ಪ್ರಬರ್ಹೋ**
**ವಿವೇಶ ಭಿತ್ತ್ವಾ ದ್ವಿಷತಾಂ ಚಮೂಂ ತಾಮ್ ।**
**ಅನ್ವೇವ ತಂ ವಾಯುಸುತಾದಯಶ್ಚ**
**ವಿವಿಕ್ಷವಃ ಸೈಂಧವೇನೈವ ರುದ್ಧಾಃ ॥ ೪೧ ॥**

**ವರೇಣ ರುದ್ರಸ್ಯ ನಿರುಧ್ಯಮಾನೋ**
**ಜಯದ್ರಥೇನಾತ್ರ ವೃಕೋದರಸ್ತು ।**
**ವಿಷ್ಣೋರಭೀಷ್ಟಂ ವಧಮಾರ್ಜುನೇಸ್ತದಾ**
**ವಿಜ್ಞಾಯ ಶಕ್ತೋऽಪಿ ನಚಾತ್ಯವರ್ತತ ॥ ೪೨ ॥**

**ಅರ್ಥ** :- **ಏವಂ** = ಈ ರೀತಿಯಾಗಿ, **ಉಕ್ತಃ** = ಹೇಳಲ್ಪಟ್ಟ, **ರಥಿನಾಂ ಪ್ರಬರ್ಹಃ** = ರಥಿಕರಲ್ಲಿ ಶ್ರೇಷ್ಠನಾದ, **ಸಃ** = ಆ ಅಭಿಮನ್ಯುವು, **ದ್ವಿಷತಾಂ** = ಶತ್ರುಗಳ, **ತಾಂ ಚಮೂಂ** = ಆ ಸೈನ್ಯವನ್ನು, **ಭಿತ್ತ್ವಾ** = ಭೇದಿಸಿ, **ವಿವೇಶ**

= ಪ್ರವೇಶಿಸಿದನು, **ತಂ ಅನ್ವೇವ** = ಅವನನ್ನು ಅನುಸರಿಸಿಯೇ, **ವಿವಿಕ್ಷವಃ** = ಪ್ರವೇಶಿಸಲು ಇಚ್ಛೆಯುಳ್ಳ, **ವಾಯುಸುತಾದಯಃ** = ಭೀಮ ಮುಂತಾದವರು, **ರುದ್ರಸ್ಯ** = ರುದ್ರದೇವರ, **ವರೇಣ** = ವರದಿಂದ, **ಸೈಂಧವೇನೈವ** = ಸೈಂಧವನಿನದಲೇನೇ, **ರುದ್ಧಾಃ** = ತಡೆಯಲ್ಪಟ್ಟರು, **ಅತ್ರ** = ಇಲ್ಲಿ, **ಜಯದ್ರಥೇನ** = ಸೈಂಧವನಿಂದ, **ನಿರುದ್ಧ್ಯಮಾನಃ** = ತಡೆಯಲ್ಪಟ್ಟ, **ವೃಕೋದರಃ** = ಭೀಮನು, **ಆರ್ಜುನೇಃ** = ಅಭಿಮನ್ಯುವಿನ, **ವಧಂ** = ವಧೆಯನ್ನು, **ವಿಷ್ಣೋಃ** = ವಿಷ್ಣುವಿಗೆ, **ಅಭೀಷ್ಟಂ** = ಅಭೀಷ್ಟವನ್ನಾಗಿ, **ವಿಜ್ಞಾಯ** = ತಿಳಿದು, **ತದಾ** = ಆವಾಗ, **ಶಕ್ತೋಽಪಿ ಚ** = ಸಮರ್ಥನಾಗಿದ್ದರೂ ಕೂಡ, **ನ ಅತ್ಯವರ್ತತ** = ಅವನನ್ನು ದಾಟಿ ಹೋಗಲಿಲ್ಲ.

**ತಾತ್ಪರ್ಯ** :- ಧರ್ಮರಾಜ ಈ ರೀತಿಯಾಗಿ ಹೇಳಿದಾಗ ರಥಿಕರಲ್ಲಿ ಶ್ರೇಷ್ಠನಾದ ಅಭಿಮನ್ಯುವು ಶತ್ರುಸೈನ್ಯವನ್ನು ಭೇದಿಸಿ ಒಳಗೆ ಹೋದ. ಅವನ ಹಿಂದಿನಿಂದಲೇ ಪ್ರವೇಶಿಸಲು ಬಯಸಿದ್ದ ಭೀಮ ಮೊದಲಾದವರನ್ನು ರುದ್ರನ ವರವಿದ್ದದ್ದರಿಂದ ಸೈಂಧವ ತಡೆದನು. ಸೈಂಧವ ತಡೆದಾಗ ಭೀಮ ಅಭಿಮನ್ಯುವಿನ ವಧೆ ಶ್ರೀಕೃಷ್ಣನ ಸಂಕಲ್ಪವೆಂದು ತಿಳಿದು ಸೈಂಧವನನ್ನು ಅತಿಕ್ರಮಿಸಲು ಸಮರ್ಥನಾಗಿದ್ದರೂ ಅತಿಕ್ರಮಿಸಿ ಒಳಗೆ ಹೋಗಲಿಲ್ಲ.

**ಜಯದ್ರಥಸ್ಥೇನ ವೃಷಧ್ವಜೇನ**
**ಪ್ರಯುಧ್ಯಮಾನೇಷು ವೃಕೋದರಾದಿಷು ।**
**ಪ್ರವಿಶ್ಯ ವೀರಃ ಸ ಧನಂಜಯಾತ್ಮಜೋ**
**ವಿಲೋಳಯಾಮಾಸ ಪರೋರುಸೇನಾಮ್ ॥ ೪೩ ॥**

**ಅರ್ಥ** :- **ಜಯದ್ರಥಸ್ಥೇನ** = ಸೈಂಧವನಲ್ಲಿ ಆವಿಷ್ಟನಾದ, **ವೃಷಧ್ವಜೇನ** = ರುದ್ರದೇವರಿಂದ, **ವೃಕೋದರಾದಿಷು** = ಭೀಮಸೇನ ಮೊದಲಾದವರು, **ಪ್ರಯುಧ್ಯಮಾನೇಷು** = ಯುದ್ಧ ಮಾಡುತ್ತಿರಲು, **ವೀರಃ** = ವೀರನಾದ, **ಧನಂಜಯಾತ್ಮಜಃ** = ಅಭಿಮನ್ಯುವು, **ಪ್ರವಿಶ್ಯ** = ವ್ಯೂಹ ಪ್ರವೇಶಿಸಿ, **ಪರೋರುಸೇನಾಂ** = ಶತ್ರುಗಳ ಮಹಾಸೇನೆಯನ್ನು, **ವಿಲೋಡಯಾಮಾಸ** = ಕದಡಿಸಿದನು.

**ತಾತ್ಪರ್ಯ** :- ಸೈಂಧವನಲ್ಲಿ ಆವಿಷ್ಟನಾದ ರುದ್ರ, ಭೀಮ ಮೊದಲಾದವರನ್ನು ತಡೆದಾಗ ವೀರನಾದ ಅಭಿಮನ್ಯು ವ್ಯೂಹವನ್ನು ಪ್ರವೇಶಿಸಿ ಶತ್ರುಗಳ ಮಹಾಸೇನೆಯನ್ನು ಕದಡಿದನು.

**ಸ ದ್ರೋಣದುರ್ಯೋಧನಕರ್ಣಶಲ್ಯೈ-**
**ದ್ರೌಣ್ಯಗ್ರಣೀಭಿಃ ಕೃತವರ್ಮಯುಕ್ತೈಃ ।**
**ರುದ್ಧಶ್ಚಚಾರಾರಿಬಲೇಷ್ವಭೀತಃ**
**ಶಿರಾಂಸಿ ಕೃಂತಂಸ್ತದನುವ್ರತಾನಾಮ್ ॥ ೪೪ ॥**

**ಅರ್ಥ** :- **ಕೃತವರ್ಮಯುಕ್ತೈಃ** = ಕೃತವರ್ಮನಿಂದ ಕೂಡಿದ, **ದ್ರೋಣ ದುರ್ಯೋಧನಕರ್ಣ ಶಲ್ಯದ್ರೌಣ್ಯಗ್ರಣೀಭಿಃ** = ದ್ರೋಣ, ದುರ್ಯೋಧನ, ಕರ್ಣ, ಶಲ್ಯ, ಅಶ್ವತ್ಥಾಮ ಮೊದಲಾದವರಿಂದ, **ರುದ್ಧಃ** = ತಡೆಯಲ್ಪಟ್ಟರೂ, **ಸಃ** = ಆ ಅಭಿಮನ್ಯುವು, **ಅಭೀತಃ** = ನಿರ್ಭಯನಾಗಿ, **ಅರಿಬಲೇಷು** = ಶತ್ರುಗಳ ಸೈನ್ಯಗಳಲ್ಲಿ, **ತದನುವ್ರತಾನಾಂ** = ಶತ್ರುಗಳ ಕಡೆಯವರ, **ಶಿರಾಂಸಿ** = ತಲೆಗಳನ್ನು, **ಕೃಂತನ್** = ಕತ್ತರಿಸುತ್ತಾ, **ಚಚಾರ** = ಸಂಚರಿಸಿದನು.

**ತಾತ್ಪರ್ಯ** :- ದ್ರೋಣ ದುರ್ಯೋಧನ ಕರ್ಣ ಶಲ್ಯ ಅಶ್ವತ್ಥಾಮ ಕೃತವರ್ಮ ಮೊದಲಾದವರು ಅಭಿಮನ್ಯುವನ್ನು ತಡೆದರೂ ಅವನು ನಿರ್ಭಯವಾಗಿ ಶತ್ರುಸೈನ್ಯದಲ್ಲಿ ಅವರ ಕಡೆಯವರ ಶಿರಸ್ಸನ್ನು ಕತ್ತರಿಸುತ್ತಾ ಸಂಚಾರ ಮಾಡಿದನು.

**ಸ ಲಕ್ಷಣಂ ರಾಜಸುತಂ ಪ್ರಸಹ್ಯ**
**ಪಿತುಃ ಸಮೀಪೇಽನಯದಾಶು ಮೃತ್ಯವೇ ।**
**ಬೃಹದ್ಬಲಂ ಚೋತ್ತಮವೀರ್ಯಕರ್ಮಾ**
**ವರಂ ರಥಾನಾಮಯುತಂ ಚ ಪತ್ರಿಭಿಃ ॥ ೪೫ ॥**

**ಅರ್ಥ** :- **ಉತ್ತಮವೀರ್ಯಕರ್ಮಾ** = ಉತ್ತಮವೀರ್ಯ ಕರ್ಮಗಳುಳ್ಳ, **ಸಃ** = ಆ ಅಭಿಮನ್ಯುವು, **ರಾಜಸುತಂ** = ದುರ್ಯೋಧನನ ಮಗನಾದ, **ಲಕ್ಷಣಂ** = ಲಕ್ಷಣನನ್ನು, **ಪತ್ರಿಭಿಃ** = ಬಾಣಗಳಿಂದ, **ಪಿತುಃ ಸಮೀಪೇ** = ಅವನ ತಂದೆ ದುರ್ಯೋಧನನ ಸಮಕ್ಷಮದಲ್ಲಿಯೇ, **ಆಶು** = ಕೂಡಲೆ, **ಪ್ರಸಹ್ಯ** = ಬಲಾತ್ಕಾರವಾಗಿ, **ಮೃತ್ಯವೇ ಅನಯತ್** = ಯಮನಿಗೆ

ಕಳುಹಿಸಿ ಕೊಟ್ಟನು, **ಚ** = ಮತ್ತು, **ಬೃಹದ್ಬಲಂ** = ಬೃಹದ್ಬಲನನ್ನು, **ವರಂ** = ಶ್ರೇಷ್ಠರಾದ, **ರಥಾನಾಂ ಅಯುತಂ** = ಹತ್ತುಸಾವಿರ ರಥಿಕರನ್ನೂ (ಕಳುಹಿಸಿದನು).

**ತಾತ್ಪರ್ಯ** :- ಉತ್ತಮ ವೀರ್ಯ ಕರ್ಮಗಳುಳ್ಳ ಅಭಿಮನ್ಯುವು ದುರ್ಯೋಧನನ ಮಗನಾದ ಲಕ್ಷಣನನ್ನು ದುರ್ಯೋಧನನ ಎದುರಿನಲ್ಲಿಯೇ ಬಲಾತ್ಕಾರದಿಂದ ಯಮನ ಹತ್ತಿರ ಕಳುಹಿಸಿಕೊಟ್ಟ. ಮತ್ತೂ ಬಹದ್ಬಲನನ್ನೂ ಮಹಾಬಲಿಷ್ಠರಾದ ಹತ್ತು ಸಾವಿರ ಶ್ರೇಷ್ಠರಥಿಕರನ್ನೂ ಬಾಣಗಳಿಂದ ಸಂಹರಿಸಿದನು.

**ದ್ರೋಣಾದಯಸ್ತಂ ಹರಿಕೋಪಭೀತಾಃ**
**ಪ್ರತ್ಯಕ್ಷತೋ ಹಂತುಮಶಕ್ನುವಂತಃ ।**
**ಸಮ್ಮಂತ್ರ್ಯ ಕರ್ಣಂ ಪುರತೋ ನಿಧಾಯ**
**ಚಕ್ರುರ್ವಿಚಾಪಾಶ್ವರಥಂ ಕ್ಷಣೇನ ॥ ೪೬ ॥**

**ಅರ್ಥ** :- **ಹರಿಕೋಪಭೀತಾಃ** = ಕೃಷ್ಣನ ಕೋಪದಿಂದ ಹೆದರಿದ, **ದ್ರೋಣಾದಯಃ** = ದ್ರೋಣ ಮೊದಲಾದವರು, **ತಂ** = ಆ ಅಭಿಮನ್ಯುವನ್ನು, **ಹಂತುಂ** = ಕೊಲ್ಲಲು, **ಅಶಕ್ನುವಂತಃ** = ಸಮರ್ಥರಾಗದವರಾಗಿ, **ಕರ್ಣಂ** = ಕರ್ಣನನ್ನು, **ಪುರತಃ ನಿಧಾಯ** = ಮುಂದೆ ಮಾಡಿಕೊಂಡು, **ಸಮ್ಮಂತ್ರ್ಯ** = ವಿಚಾರ ಮಾಡಿ, **ಕ್ಷಣೇನ** = ಒಂದು ಕ್ಷಣದಲ್ಲಿ, **ವಿಚಾಪಾಶ್ವರಥಂ** = ಧನುಸ್ಸು, ಕುದುರೆ ರಥರಹಿತನನ್ನಾಗಿ, **ಚಕ್ರುಃ** = ಮಾಡಿದರು.

**ತಾತ್ಪರ್ಯ** :- ದ್ರೋಣ ಮೊದಲಾದವರು ಕೃಷ್ಣನ ಕೋಪಕ್ಕೆ ಹೆದರಿದವರಾಗಿ ಅಭಿಮನ್ಯುವನ್ನು ಎದುರುಗಡೆಯಿಂದ ಕೊಲ್ಲಲು ಸಮರ್ಥರಾಗದೆ ಕರ್ಣನನ್ನು ಮುಂದೆ ಮಾಡಿಕೊಂಡು ಆಲೋಚನೆ ಮಾಡಿ ಕ್ಷಣದಲ್ಲಿ ಅವನ ಧನುಸ್ಸು ರಥ ಕುದುರೆಗಳೆಲ್ಲವಿಲ್ಲದವನನ್ನಾಗಿ ಮಾಡಿದರು.

**ಕರ್ಣೋ ಧನುಸ್ತಸ್ಯ ಕೃಪಶ್ಚ ಸಾರಥೀ**
**ದ್ರೋಣೋ ಹಯಾನಾಶು ವಿಧೂಯ ಸಾಯಕೈಃ ।**

**ಸಚರ್ಮಖಡ್ಗಂ ರಥಚಕ್ರಮಸ್ಯ**
**ಪ್ರಣುದ್ಯ ಹಸ್ತಸ್ಥಿತಮೇವ ಚಕ್ರುಃ ॥ ೪೭ ॥**

**ಅರ್ಥ** :- **ತಸ್ಯ** = ಆ ಅಭಿಮನ್ಯುವಿನ, **ಧನುಃ** = ಧನಸ್ಸನ್ನು, **ಕರ್ಣಃ** = ಕರ್ಣನು, **ಸಾರಥಿಂ** = ಸಾರಥಿಯನ್ನು, **ಕೃಪಃ** = ಕೃಪನು, **ಚ** = ಮತ್ತೂ, **ಹಯಾನ್** = ಕುದುರೆಗಳನ್ನು, **ದ್ರೋಣಃ** = ದ್ರೋಣನೂ, **ಅಶು** = ಬೇಗನೇ, **ವಿಧೂಯ** = ನಾಶಪಡಿಸಿ, **ಸಾಯಕೈಃ** = ಬಾಣಗಳಿಂದ, **ಅಸ್ಯ** = ಇವನ, **ಸಚರ್ಮಖಡ್ಗಂ** = ಚರ್ಮಖಡ್ಗದಿಂದ ಕೂಡಿದ, **ರಥಚಕ್ರಂ** = ರಥದ ಚಕ್ರವನ್ನು, **ಪ್ರಣುದ್ಯ** = ಭೇದಿಸಿ, **ಹಸ್ತಸ್ಥಿತಮೇವ** = ಬರಿಗೈಯಲ್ಲಿ ನಿಲ್ಲುವವನನ್ನಾಗಿಯೇ, **ಚಕ್ರುಃ** = ಮಾಡಿದರು.

**ತಾತ್ಪರ್ಯ** :- ಕರ್ಣ ಅಭಿಮನ್ಯುವಿನ ಧನುಸ್ಸನ್ನು ಕೃಪ ಸಾರಥಿಯನ್ನು, ದ್ರೋಣ ಕುದುರೆಗಳನ್ನು ನಾಶಪಡಿಸಿ ಬಾಣಗಳಿಂದ ಅವನ ಕತ್ತಿ ಗುರಾಣಿಗಳನ್ನೂ ಚಕ್ರವನ್ನು ಭೇದಿಸಿ ಅವನನ್ನು ಬರಿಗೈಯ್ಯವನನ್ನಾಗಿ ಮಾಡಿದರು.

**ಭೀತೇಷು ಕೃಷ್ಣಾದಥ ತದ್ವಧಾಯ**
**ತೇಷ್ವಾಸಸಾದಾऽಶು ಗದಾಯುಧಂ ಗದೀ ।**
**ದೌಃಶಾಸನಿಸ್ತೌ ಯುಗಪಚ್ಚ ಮಮ್ರತು-**
**ರ್ಗದಾಭಿಘಾತೇನ ಮಿಥೋऽತಿಪೌರುಷೌ ॥ ೪೮ ॥**

**ಅರ್ಥ** :- **ತೇಷು** = ಆ ದ್ರೋಣ ಮೊದಲಾದವರು, **ತದ್ವಧಾಯ** = ಆ ಅಭಿಮನ್ಯುವನ್ನು ಕೊಲ್ಲಲು, **ಕೃಷ್ಣಾತ್** = ಕೃಷ್ಣನಿಂದ, **ಭೀತೇಷು** = ಹೆದರುತ್ತಿರಲು, **ಗದೀ** = ಗದಾಧಾರಿಯಾದ, **ದೌಃಶಾಸನಿಃ** = ದುಃಶಾಸನನ ಮಗನು, **ಗದಾಯುಧಂ** = ಗದೆಯೇ ಆಯುಧವಾಗಿಯುಳ್ಳ ಅಭಿಮನ್ಯುವನ್ನು, **ಆಶು** = ಕೂಡಲೇ, **ಆಸಸಾದ** = ಹೊಂದಿದನು, **ಅತಿಪೌರುಷೌ** = ಅತಿಪೌರುಷಶಾಲಿಗಳಾದ, **ತೌ** = ಅವರಿಬ್ಬರು, **ಮಿಥಃ** = ಪರಸ್ಪರ, **ಗದಾಭೀಘಾತೇನ** = ಗದೆಯ ಏಟಿನಿಂದ, **ಯುಗಪಚ್ಚ** = ಜೊತೆಗೇನೇ, **ಮಮ್ರತುಃ** = ಮರಣ ಹೊಂದಿದರು.

**ತಸ್ಮಿನ್ ಹತೇ ಶತ್ರುರವಂ ನಿಶಮ್ಯ**
**ಹರ್ಷೋದ್ಭವಂ ಮಾರುತಿರುಗ್ರವಿಕ್ರಮಃ ।**
**ವಿಜಿತ್ಯ ಸರ್ವಾನಪಿ ಸೈಂಧವಾದೀನ್**
**ಯುಧಿಷ್ಠಿರಸ್ಯಾನುಮತೇ ನ್ಯಷೀದತ್ ॥ ೪೯ ॥**

**ಅರ್ಥ :- ತಸ್ಮಿನ್** = ಆ ಅಭಿಮನ್ಯುವು, **ಹತೇ** = ಹತನಾಗುತ್ತಿರಲು, **ಶತ್ರುರವಂ** = ಶತ್ರುಗಳ ಸಂತೋಷದ ಧ್ವನಿಯನ್ನು, **ನಿಶಮ್ಯ** = ಕೇಳಿ, **ಉಗ್ರವಿಕ್ರಮಃ** = ಭಯಂಕರ ಪರಾಕ್ರಮಿಯಾದ, **ಮಾರುತಿಃ** = ಭೀಮನು, **ಸೈಂಧವಾದೀನ್ ಸರ್ವಾನಪಿ** = ಸೈಂಧವ ಮೊದಲಾದ ಎಲ್ಲರನ್ನೂ ಕೂಡ, **ವಿಜಿತ್ಯ** = ಗೆದ್ದು, **ಯುಧಿಷ್ಠಿರಸ್ಯಾನುಮತೇ** = ಯುಧಿಷ್ಠಿರನ ಹತ್ತಿರದಲ್ಲಿ, **ನ್ಯಷೀದತ್** = ಕುಳಿತನು.

**ತಾತ್ಪರ್ಯ :-** ಅಭಿಮನ್ಯು ಹತನಾದಾಗ ಶತ್ರುಗಳ ಸಂತೋಷದಧ್ವನಿ ಕೇಳಿ ಭಯಂಕರ ಪರಾಕ್ರಮಿಯಾದ ಭೀಮ ಸೈಂಧವ ಮೊದಲಾದವರೆಲ್ಲರನ್ನು ಗೆದ್ದು ಧರ್ಮರಾಜನ ಹತ್ತಿರದಲ್ಲಿ ಕುಳಿತುಕೊಂಡನು.

**ವ್ಯಾಸಸ್ತದಾ ತಾನಮಿತಾತ್ಮವೈಭವೋ**
**ಯುಧಿಷ್ಠಿರಾದೀನ್ ಗ್ಲಪಿತಾನಬೋಧಯತ್ ।**
**ವಿಜಿತ್ಯ ಸಂಶಪ್ತಕಪೂಗಮುಗ್ರೋ**
**ನಿಶಾಗಮೇ ವಾಸವಿರಾಪ ಸಾಚ್ಯುತಃ ॥ ೫೦ ॥**

**ಅರ್ಥ :- ಅಮಿತಾತ್ಮವೈಭವಃ** = ಅಪಾರವಾದ ಜ್ಞಾನಾನಂದಾದಿ ಸಂಪತ್ತುಳ್ಳ, **ವ್ಯಾಸಃ** = ವೇದವ್ಯಾಸರು, **ತದಾ** = ಆವಾಗ, **ಗ್ಲಪಿತಾನ್** = ದುಃಖಿತರಾದ, **ತಾನ್ ಯುಧಿಷ್ಠಿರಾದೀನ್** = ಆ ಧರ್ಮರಾಜ ಮೊದಲಾದವರನ್ನು, **ಅಬೋಧಯತ್** = ಸಾಂತ್ವನಗೊಳಿಸಿದರು, **ಉಗ್ರಃ** = ಉಗ್ರಪ್ರತಾಪಿಯಾದ, **ವಾಸವಿಃ** = ಅರ್ಜುನನು, **ಸಂಶಪ್ತಕಪೂಗಂ** = ಸಂಶಪ್ತಕರ ಸಮೂಹವನ್ನು, **ವಿಜಿತ್ಯ** = ಗೆದ್ದು, **ನಿಶಾಗಮೇ** = ರಾತ್ರಿಯಾಗುತ್ತಿರಲು, **ಸಾಚ್ಯುತಃ** = ಕೃಷ್ಣನಿಂದ ಕೂಡಿದವನಾಗಿ, **ಆಪ** = ಹೊಂದಿದನು (ಬಂದನು).

ತಾತ್ಪರ್ಯ :- ಅಮಿತಜ್ಞಾನಾನಂದಾದಿ ಸಂಪತ್ತುಳ್ಳ ವ್ಯಾಸರು ದುಃಖಿತರಾದ ಯುಧಿಷ್ಠಿರ ಮೊದಲಾದವರನ್ನು ಸಾಂತ್ವನಗೊಳಿಸಿದರು. ಉಗ್ರಪೌರುಷ ಉಳ್ಳ ಅರ್ಜುನ ಸಂಶಪ್ತಕರ ಸಮೂಹವನ್ನು ಗೆದ್ದು ರಾತ್ರಿಯಾದಾಗ ಕೃಷ್ಣನ ಜೊತೆಗೆ ಬಂದನು.

**ನಿಶಮ್ಯ ಪುತ್ರಸ್ಯ ವಧಂ ಭೃಶಾರ್ತಃ**
**ಪ್ರತಿಶ್ರವಂ ಸೋಽಥ ಚಕಾರ ವೀರಃ ।**
**ಜಯದ್ರಥಸ್ಯೈವ ವಧೇ ನಿಶಾಯಾಂ**
**ಸ್ವಪ್ನೇಽನಯತ್ ತಂ ಗಿರಿಶಾಂತಿಕಂ ಹರಿಃ ॥ ೫೧ ॥**

**ಅರ್ಥ** :- **ಪುತ್ರಸ್ಯ** = ಮಗನ, **ವಧಂ** = ವಧೆಯನ್ನು, **ನಿಶಮ್ಯ** = ಕೇಳಿ, **ಭೃಶಾರ್ತಃ** = ಬಹಳ ದುಃಖಿತನಾದ, **ವೀರಃ** = ವೀರನಾದ, **ಸಃ** = ಆ ಅರ್ಜುನನು, **ಜಯದ್ರಥಸ್ಯ** = ಸೈಂಧವನ, **ವಧೇ** = ಸಂಹಾರದ ವಿಷಯದಲ್ಲಿ, **ಪ್ರತಿಶ್ರವಂ ಏವ** = ಪ್ರತಿಜ್ಞೆಯನ್ನೇ, **ಚಕಾರ** = ಮಾಡಿದನು, **ನಿಶಾಯಾಂ** = ರಾತ್ರಿಯ ಸಮಯದಲ್ಲಿ, **ಸ್ವಪ್ನೇ** = ಸ್ವಪ್ನದಲ್ಲಿ, **ಹರಿಃ** = ಶ್ರೀಕೃಷ್ಣನು, **ತಂ** = ಆ ಅರ್ಜುನನನ್ನು, **ಗಿರಿಶಾಂತಿಕಂ** = ರುದ್ರದೇವರ ಬಳಿಗೆ, **ಅನಯತ್** = ಒಯ್ದನು.

ತಾತ್ಪರ್ಯ :- ಮಗನ ವಧೆಯ ವಾರ್ತೆ ಕೇಳಿ ಬಹಳ ದುಃಖಿಗೊಂಡ ಅರ್ಜುನ ಸೈಂಧವನ ವಧೆಯ ವಿಚಾರದಲ್ಲಿ ಪ್ರತಿಜ್ಞೆ ಮಾಡಿದನು. ರಾತ್ರಿಯ ಕಾಲದಲ್ಲಿ ಕೃಷ್ಣ ಅರ್ಜುನನನ್ನು ಕನಸಿನಲ್ಲಿ ರುದ್ರದೇವರ ಹತ್ತಿರಕ್ಕೆ ಕರೆದುಕೊಂಡು ಹೋದನು.

**ಸ್ವಯಮೇವಾಖಿಲಜಗದ್ರಕ್ಷಾದ್ಯಮಿತಶಕ್ತಿಮಾನ್ ।**
**ಅಪ್ಯಚ್ಯುತೋ ಗುರುದ್ವಾರಾ ಪ್ರಸಾದಕೃದಹಂ ತ್ವಿತಿ ।**
**ಜ್ಞಾಪಯನ್ ಫಲ್ಗುನಸ್ಯಾಸ್ತ್ರಗುರುಂ ಗಿರಿಶಮಂಜಸಾ ॥ ೫೨ ॥**

**ಪ್ರಾಪಯಿತ್ವೈನಮೇವೈತತ್ಪ್ರಸಾದಾದಸ್ತ್ರಮುಲ್ಬಣಮ್ ।**
**ಚಕ್ರೇ ತದರ್ಥಮೇವಾಸ್ಯ ರಕ್ಷಾಂ ಚಕ್ರೇ ತದಾತ್ಮಿಕಾಮ್ ॥ ೫೩ ॥**

**ಅರ್ಥ** :- **ಅಚ್ಯುತಃ** = ಕೃಷ್ಣನು, **ಸ್ವಯಮೇವ** = ತಾನೇ, **ಅಖಿಲಜಗದ್ರಕ್ಷಾದ್ಯಮಿತಶಕ್ತಿಮಾನ್ ಅಪಿ** = ಸಮಸ್ತ ಲೋಕದ ರಕ್ಷಣೆ

ಮುಂತಾದ ವಿಷಯಗಳಲ್ಲಿ ಅಪರಿಮಿತಶಕ್ತಿಯುಳ್ಳವನಾದರೂ, **ಅಹಂ** = ನಾನು, **ಗುರುದ್ವಾರಾ** = ಗುರುಗಳ ಮೂಲಕ, **ಪ್ರಸಾದಕೃತ್** = ಅನುಗ್ರಹ ಮಾಡುವವನು, **ಇತಿ** = ಎಂಬುದಾಗಿ, **ಜ್ಞಾಪಯನ್** = ತಿಳಿಸುತ್ತಾ, **ಫಲ್ಗುನಸ್ಯ** = ಅರ್ಜುನನ, **ಅಸ್ತ್ರಗುರುಂ** = ಅಸ್ತ್ರಗುರುವಾದ, **ಗಿರಿಶಂ** = ರುದ್ರದೇವರನ್ನು, **ಪ್ರಾಪಯಿತ್ವಾ** = ಹೊಂದಿಸಿ, **ಏನಂ** = ಮೊದಲೇ ಇದ್ದ, **ಅಸ್ತ್ರಂ** = ಪಾಶುಪತಾಸ್ತ್ರವನ್ನು, **ಏತತ್ಪ್ರಸಾದಾತ್** = ಈ ರುದ್ರದೇವರ ಅನುಗ್ರಹದಿಂದ, **ಉಲ್ಬಣಂಚಕ್ರೇ** = ಬಲಿಷ್ಠ ಮಾಡಿದನು, **ತದರ್ಥಮೇವ** = ಪಾಶುಪತಾಸ್ತ್ರಕ್ಕಾಗಿಯೇ, **ಅಸ್ಯ** = ಈ ಅರ್ಜುನನಿಗೆ, **ತದಾತ್ಮಿಕಾಂ ರಕ್ಷಾಂ** = ರುದ್ರ ದೇವರ ಅನುಗ್ರಹರೂಪವಾದ ರಕ್ಷಣೆಯನ್ನು, **ಚಕ್ರೇ** = ಉಂಟುಮಾಡಿದನು.

**ತಾತ್ಪರ್ಯ** :- ಕೃಷ್ಣ ತಾನೆ ಸಕಲ ಲೋಕ ರಕ್ಷಣೆ ಮೊದಲಾದ ವಿಷಯಗಳಲ್ಲಿ ಅಪರಿಮಿತಶಕ್ತಿಯುಳ್ಳವನಾದರೂ ನಾನು ಗುರುಗಳ ಮೂಲಕವೇ ಅನುಗ್ರಹ ಮಾಡುತ್ತೇನೆ ಎಂದು ತೋರಿಸುತ್ತಾ ಅರ್ಜುನನನ್ನು ಅವನ ಅಸ್ತ್ರಗುರುವಾದ ರುದ್ರದೇವರ ಹತ್ತಿರಕ್ಕೆ ಕರೆದುಕೊಂಡು ಹೋಗಿ ಅವನ ಅನುಗ್ರಹದಿಂದ ಮೊದಲೇ ಇದ್ದ ಪಾಶುಪತಾಸ್ತ್ರವನ್ನು ಬಲಿಷ್ಠವಾಗುವಂತೆ ಮಾಡಿದನು. ಮತ್ತೂ ಅರ್ಜುನನಿಗೆ ಶಿವನ ಅನುಗ್ರಹ ರೂಪವಾದ ರಕ್ಷಣೆ ಸಿಗುವಂತೆ ಮಾಡಿದನು.

**ಸಾಂತ್ವಯಿತ್ವಾ ಸುಭದ್ರಾಂ ಚ ಗತ್ವೋಪಪ್ಲಾವ್ಯಮಚ್ಯುತಃ ।**
**ಯೋಜಯಿತ್ವಾ ರಥಂ ಪ್ರಾತಃ ಸಾರ್ಜುನೋ ಯುದ್ಧಮಭ್ಯಯಾತ್ ।।೫೪।।**

**ಅರ್ಥ** :- **ಅಚ್ಯುತಃ** = ಕೃಷ್ಣನು, **ಪ್ರಾತಃ** = ಬೆಳಗ್ಗೆ, **ಉಪಪ್ಲಾವ್ಯಂ ಗತ್ವಾ** = ಉಪಪ್ಲಾವ್ಯಕ್ಕೆ ಹೋಗಿ, **ಸುಭದ್ರಾಂಚ** = ಸುಭದ್ರೆಯನ್ನೂ, **ಸಾಂತ್ವಯಿತ್ವಾ** = ಸಾಂತ್ವನಗೊಳಿಸಿ, **ರಥಂ** = ರಥವನ್ನು, **ಯೋಜಯಿತ್ವಾ** = ಕಟ್ಟಿ, **ಸಾರ್ಜುನಃ** = ಅರ್ಜುನನಿಂದ ಕೂಡಿದವನಾಗಿ, **ಯುದ್ಧಂ** = ಯುದ್ಧಕ್ಕೆ, **ಅಭ್ಯಯಾತ್** = ಹೊರಟನು.

**ತಾತ್ಪರ್ಯ** :- ಕೃಷ್ಣ ಬೆಳಗ್ಗೆ ಉಪಪ್ಲಾವ್ಯಕ್ಕೆ ಹೋಗಿ ಸುಭದ್ರೆಯನ್ನು ಸಾಂತ್ವನಗೊಳಿಸಿ ರಥವನ್ನು ಜೋಡಿಸಿ ಯುದ್ಧಕ್ಕಾಗಿ ಅರ್ಜುನನ ಜೊತೆ ಹೊರಟನು.

**ಶ್ರುತ್ವಾ ಪ್ರತಿಜ್ಞಾಂ ಪುರುಹೂತಸೂನೋ-**
**ರ್ದುರ್ಯೋಧನೇನಾರ್ಥಿತಃ ಸಿಂಧುರಾಜಮ್ ।**
**ತ್ರಾತಾಸ್ಮ್ಯಹಂ ಸರ್ವಥೇತಿ ಪ್ರತಿಜ್ಞಾಂ**
**ಕೃತ್ವಾ ದ್ರೋಣೋ ವ್ಯೂಹಮಭೇದ್ಯಮಾತನೋತ್ ॥ ೫೫ ॥**

**ಅರ್ಥ :- ಪುರುಹೂತಸೂನೋಃ** = ಅರ್ಜುನನ, **ಪ್ರತಿಜ್ಞಾಂ** = ಪ್ರತಿಜ್ಞೆಯನ್ನು, **ಶ್ರುತ್ವಾ** = ಕೇಳಿ, **ದುರ್ಯೋಧನೇನ** = ದುರ್ಯೋಧನನಿಂದ, **ಅರ್ಥಿತಃ** = ಪ್ರಾರ್ಥಿತನಾದ, **ದ್ರೋಣಃ** = ದ್ರೋಣರು, **ಅಹಂ** = ನಾನು, **ಸರ್ವಥಾ** = ಎಲ್ಲಾ ರೀತಿಯಿಂದಲೂ, **ಸಿಂಧುರಾಜಂ** = ಸೈಂಧವನನ್ನು, **ತ್ರಾತಾ** = ರಕ್ಷಿಸುವೆನು, **ಇತಿ** = ಎಂದು, **ಪ್ರತಿಜ್ಞಾಂ ಕೃತ್ವಾ** = ಪ್ರತಿಜ್ಞೆ ಮಾಡಿ, **ಅಭೇದ್ಯಂ** = ಅಭೇದ್ಯವಾದ, **ವ್ಯೂಹಂ** = ವ್ಯೂಹವನ್ನು, **ಆತನೋತ್** = ರಚಿಸಿದನು.

**ತಾತ್ಪರ್ಯ :-** ಅರ್ಜುನನ ಪ್ರತಿಜ್ಞೆ ಕೇಳಿ ದುರ್ಯೋಧನ ದ್ರೋಣರನ್ನು ಪ್ರಾರ್ಥಿಸಿದ. ಪ್ರಾರ್ಥಿತನಾದ ದ್ರೋಣ ಹೇಳಿದ. ನಾನು ಎಲ್ಲಾ ರೀತಿಯಿಂದಲೂ ಜಯದ್ರಥನನ್ನು ರಕ್ಷಿಸುತ್ತೇನೆ ಎಂದು ಪ್ರತಿಜ್ಞೆ ಮಾಡಿ ಅಭೇದ್ಯವಾದ ವ್ಯೂಹ ರಚನೆ ಮಾಡಿದ.

**ಸ ದಿವ್ಯಮಗ್ರ್ಯಂ ಶಕಟಾಬ್ಜಚಕ್ರಂ**
**ಕೃತ್ವಾ ಸ್ವಯಂ ವ್ಯೂಹಮುಖೇ ವ್ಯವಸ್ಥಿತಃ ।**
**ಪೃಷ್ಠೇ ಕರ್ಣದ್ರೌಣಿಕೃಪೈಃ ಸಶಲ್ಯೈ-**
**ರ್ಜಯದ್ರಥಂ ಗುಪ್ತಮಧಾತ್ ಪರೈಶ್ಚ ॥ ೫೬ ॥**

**ಅರ್ಥ :- ಸಃ** = ಆ ದ್ರೋಣನು, **ದಿವ್ಯಂ** = ದಿವ್ಯವಾದ, **ಅಗ್ರ್ಯಂ** = ಶ್ರೇಷ್ಠವಾದ, **ಶಕಟಾಬ್ಜಚಕ್ರಂ** = ಶಕಟಾಬ್ಜಚಕ್ರವ್ಯೂಹವನ್ನು, **ಕೃತ್ವಾ** = ಮಾಡಿ, **ಸ್ವಯಂ** = ತಾನು, **ವ್ಯೂಹಮುಖೇ** = ವ್ಯೂಹದ ದ್ವಾರದಲ್ಲಿ, **ವ್ಯವಸ್ಥಿತಃ** = ನಿಂತನು, **ಪೃಷ್ಠೇ** = ಬೆನ್ನ ಹಿಂದೆ, **ಸಶಲ್ಯೈಃ** = ಶಲ್ಯನಿಂದ ಕೂಡಿದ, **ಕರ್ಣದ್ರೌಣಿಕೃಪೈಃ** = ಕರ್ಣ, ಅಶ್ವತ್ಥಾಮ, ಕೃಪರಿಂದ, **ಪರೈಶ್ಚ** = ಬೇರೆಯವರಿಂದಲೂ ಕೂಡ, **ಜಯದ್ರಥಂ** = ಸೈಂಧವನನ್ನು, **ಗುಪ್ತಮ್** = ರಕ್ಷಿತನನ್ನಾಗಿ, **ಅಧಾತ್** = ಮಾಡಿದನು.

**ತಾತ್ಪರ್ಯ** :- ದಿವ್ಯವಾದ ಶ್ರೇಷ್ಠವಾದ ಶಕಟಾಬ್ಜ ಚಕ್ರವ್ಯೂಹವನ್ನು ಮಾಡಿ ದ್ರೋಣ ತಾನೇ ಆ ವ್ಯೂಹದ ಬಾಗಿಲಿನಲ್ಲಿ ನಿಂತನು. ಶಲ್ಯ ಅಶ್ವತ್ಥಾಮ ಕೃಪ ಕರ್ಣರ ಮತ್ತು ಬೇರೆಯವರ ರಕ್ಷಣೆಯಲ್ಲಿ ಸೈಂಧವನನ್ನು ನಿಲ್ಲಿಸಿದ.

**ಅಥಾರ್ಜುನೋ ದಿವ್ಯರಥೋಪರಿ ಸ್ಥಿತಃ**
**ಸುರಕ್ಷಿತಃ ಕೇಶವೇನಾವ್ಯಯೇನ ।**
**ವಿಜಿತ್ಯ ದುರ್ಮರ್ಷಣಮಗ್ರತೋಽಭ್ಯಯಾದ್**
**ದ್ರೋಣಂ ಸುಧನ್ವಾ ಗುರುಮುಗ್ರಪೌರುಷಃ ।। ೫೭ ।।**

**ಅರ್ಥ** :- **ಅಥ** = ಅನಂತರ, **ಉಗ್ರಪೌರುಷಃ** = ಭಯಂಕರ ಪೌರುಷಶಾಲಿಯಾದ, **ಸುಧನ್ವಾ** = ಉತ್ತಮಧನುರ್ಧಾರಿಯಾದ, **ದಿವ್ಯರಥೋಪರಿಸ್ಥಿತಃ** = ದಿವ್ಯ ರಥದ ಮೇಲೆ ನಿಂತಂತಹ, **ಅವ್ಯಯೇನ** = ನಾಶರಹಿತನಾದ, **ಕೇಶವೇನ** = ಕೃಷ್ಣನಿಂದ, **ರಕ್ಷಿತಃ** = ರಕ್ಷಿತನಾದ, **ಅರ್ಜುನಃ** = ಅರ್ಜುನನು, **ಅಗ್ರತಃ** = ಮೊದಲು, **ದುರ್ಮರ್ಷಣಂ** = ದುರ್ಮರ್ಷಣನನ್ನು, **ವಿಜಿತ್ಯ** = ಗೆದ್ದು, **ಗುರುಂ** = ಗುರುಗಳಾದ, **ದ್ರೋಣಂ** = ದ್ರೋಣರನ್ನು, **ಅಭ್ಯಯಾತ್** = ಎದುರಿಸಿದನು.

**ತಾತ್ಪರ್ಯ** :- ಉಗ್ರಪೌರುಷಶಾಲಿಯಾದ ಉತ್ತಮ ಧನುರ್ಧಾರಿಯಾದ ಅರ್ಜುನನು ದಿವ್ಯ ರಥದಲ್ಲಿ ನಿಂತು ಕೃಷ್ಣನಿಂದ ರಕ್ಷಿತನಾಗಿ ಮೊದಲು ಧರ್ಮರ್ಷಣನನ್ನು ಸೋಲಿಸಿ ಗುರುಗಳಾದ ದ್ರೋಣರ ಬಳಿಗೆ ಬಂದನು.

**ಪ್ರದಕ್ಷಿಣೀಕೃತ್ಯ ತಮಾಶ್ವಗಾತ್ ತತಃ**
**ಕಾಲಾತ್ಯಯಂ ತ್ವೇವ ವಿಶಂಕಮಾನಃ ।**
**ರಥಂ ಮನೋವೇಗಮಥಾನಯದ್ಧರಿ-**
**ರ್ಯಥಾ ಶರಾಃ ಪೇತುರಮುಷ್ಯ ಪೃಷ್ಠತಃ ।। ೫೮ ।।**

**ಅರ್ಥ** :- **ಕಾಲಾತ್ಯಯಂ** = ಕಾಲಾತಿಕ್ರಮವನ್ನು, **ವಿಶಂಕಮಾನಃ** = ಶಂಕಿಸುತ್ತಿರುವ ಅರ್ಜುನನು, **ತಂ** = ಆ ದ್ರೋಣರನ್ನು, **ಪ್ರದಕ್ಷಿಣೀಕೃತ್ಯ** = ಪ್ರದಕ್ಷಿಣೆ ಮಾಡಿ, **ತತಃ** = ಅಲ್ಲಿಂದ, **ಆಶು** = ಬೇಗನೇ, **ಅಗಾತ್** = ಹೊರಟುಹೋದನು, **ಅಮುಷ್ಯ** = ಆ ಅರ್ಜುನನ, **ಶರಾಃ** = ಬಾಣಗಳು,

**ಯಥಾ** = ಹೇಗೆ, **ಪೃಷ್ಠತಃ** = ಹಿಂದೆ, **ಪೇತುಃ** = ಬಂದವೋ, **ತಥಾ** = ಹಾಗೆ, **ಹರಿಃ** = ಕೃಷ್ಣನು, **ರಥಂ** = ರಥವನ್ನು, **ಅನಯತ್** = ನಡೆಸಿದನು.

**ತಾತ್ಪರ್ಯ** :- ಅರ್ಜುನ ಕಾಲಾತಿಕ್ರಮವನ್ನು ಶಂಕಿಸುತ್ತಾ ಬೇಗನೇ ಪ್ರದಕ್ಷಿಣೆ ಮಾಡಿ ಅಲ್ಲಿಂದ ಹೊರಟು ಹೋದನು. ಕೃಷ್ಣ ಅವನ ಮನೋವೇಗದ ರಥವನ್ನು ಅರ್ಜುನನ ಬಾಣಗಳು ಅವನ ಹಿಂದೆ ಬರುವಂತೆ ವೇಗವಾಗಿ ನಡೆಸಿದ.

**ವಿಜಿತ್ಯ ಹಾರ್ದಿಕ್ಯಮಥಾಪ್ರಯತ್ನತಃ**
**ಸ ಇಂದ್ರಸೂನುಃ ಪ್ರವಿವೇಶ ತದ್ ಬಲಮ್ ।**
**ವಿಲೋಳಯಾಮಾಸ ಚ ಸಾಯಕೋತ್ತಮೈ-**
**ರ್ಯಥಾ ಗಜೇಂದ್ರೋ ನಳಿನೀಂ ಬಲೋದ್ಧತಃ ॥ ೫೯ ॥**

**ಅರ್ಥ** :- **ಇಂದ್ರಸೂನುಃ** = ಅರ್ಜುನನು, **ಅಪ್ರಯತ್ನತಃ** = ಪ್ರಯತ್ನವೇ ಇಲ್ಲದೆ, **ಹಾರ್ದಿಕ್ಯಂ** = ಕೃತವರ್ಮನನ್ನು, **ವಿಜಿತ್ಯ** = ಗೆದ್ದು, **ಬಲಂ** = ಸೈನ್ಯವನ್ನು, **ಪ್ರವಿವೇಶ** = ಪ್ರವೇಶಿಸಿದನು, **ಬಲೋದ್ಧತಃ** = ಬಲದಿಂದ ಉದ್ಧಟನಾದ, **ಗಜೇಂದ್ರಃ** = ಗಜೇಂದ್ರನು, **ಯಥಾ** = ಹೇಗೆ, **ನಲಿನೀಂ** = ಕೋಳವನ್ನು, **ವಿಲೋಡಯಾಮಾಸ** = ಕದಡಿದನೋ, **ತಥಾ** = ಹಾಗೆ, **ಸಃ** = ಆ ಅರ್ಜುನನು, **ಸಾಯಕೋತ್ತಮೈಃ** = ಶ್ರೇಷ್ಠ ಬಾಣಗಳಿಂದ, **ತತ್** = ಆ ಸೈನ್ಯವನ್ನು, **ವಿಲೋಡಯಾಮಾಸ** = ಕದಡಿದನು.

**ತಾತ್ಪರ್ಯ** :- ಅರ್ಜುನನು ಅನಾಯಾಸವಾಗಿ ಕೃತವರ್ಮನನ್ನು ಸೋಲಿಸಿ ಸೈನ್ಯ ಪ್ರವೇಶಮಾಡಿದ. ಬಲದಿಂದ ಉದ್ಧಟನಾದ ಗಜೇಂದ್ರ ಹೇಗೆ ಕೊಳವನ್ನು ಕದಡಿಸಿದನೋ ಹಾಗೆ ಅರ್ಜುನನು ಬಾಣಗಳಿಂದ ಸೈನ್ಯವನ್ನು ಕದಡಿಸಿದನು.

**ಸ ಉಚ್ಚಕಾಶೇಽತಿರಥೋ ರಥೋತ್ತಮೇ**
**ಸವಾಸುದೇವೋ ಹರಿಣಾ ಯಥೇಂದ್ರಃ ।**
**ಚಕರ್ತ ಚೋಗ್ರೋ ದ್ವಿಷತಾಂ ಶಿರಾಂಸಿ**
**ಶರೈಃ ಶರೀರಾಂತಕರೈಃ ಸಮಂತತಃ ॥ ೬೦ ॥**

**ತಾತ್ಪರ್ಯ** :- ದಿವ್ಯವಾದ ಶ್ರೇಷ್ಠವಾದ ಶಕಟಾಬ್ಜ ಚಕ್ರವ್ಯೂಹವನ್ನು ಮಾಡಿ ದ್ರೋಣ ತಾನೇ ಆ ವ್ಯೂಹದ ಬಾಗಿಲಿನಲ್ಲಿ ನಿಂತನು. ಶಲ್ಯ ಅಶ್ವತ್ಥಾಮ ಕೃಪ ಕರ್ಣರ ಮತ್ತು ಬೇರೆಯವರ ರಕ್ಷಣೆಯಲ್ಲಿ ಸೈಂಧವನನ್ನು ನಿಲ್ಲಿಸಿದ.

**ಅಥಾರ್ಜುನೋ ದಿವ್ಯರಥೋಪರಿ ಸ್ಥಿತಃ**
**ಸುರಕ್ಷಿತಃ ಕೇಶವೇನಾವ್ಯಯೇನ ।**
**ವಿಜಿತ್ಯ ದುರ್ಮರ್ಷಣಮಗ್ರತೋಽಭ್ಯಯಾದ್**
**ದ್ರೋಣಂ ಸುಧನ್ವಾ ಗುರುಮುಗ್ರಪೌರುಷಃ ॥ ೫೭ ॥**

**ಅರ್ಥ** :- **ಅಥ** = ಅನಂತರ, **ಉಗ್ರಪೌರುಷಃ** = ಭಯಂಕರ ಪೌರುಷಶಾಲಿಯಾದ, **ಸುಧನ್ವಾ** = ಉತ್ತಮಧನುರ್ಧಾರಿಯಾದ, **ದಿವ್ಯರಥೋಪರಿಸ್ಥಿತಃ** = ದಿವ್ಯ ರಥದ ಮೇಲೆ ನಿಂತಂತಹ, **ಅವ್ಯಯೇನ** = ನಾಶರಹಿತನಾದ, **ಕೇಶವೇನ** = ಕೃಷ್ಣನಿಂದ, **ರಕ್ಷಿತಃ** = ರಕ್ಷಿತನಾದ, **ಅರ್ಜುನಃ** = ಅರ್ಜುನನು, **ಅಗ್ರತಃ** = ಮೊದಲು, **ದುರ್ಮರ್ಷಣಂ** = ದುರ್ಮರ್ಷಣನನ್ನು, **ವಿಜಿತ್ಯ** = ಗೆದ್ದು, **ಗುರುಂ** = ಗುರುಗಳಾದ, **ದ್ರೋಣಂ** = ದ್ರೋಣರನ್ನು, **ಅಭ್ಯಯಾತ್** = ಎದುರಿಸಿದನು.

**ತಾತ್ಪರ್ಯ** :- ಉಗ್ರಪೌರುಷಶಾಲಿಯಾದ ಉತ್ತಮ ಧನುರ್ಧಾರಿ ಯಾದ ಅರ್ಜುನನು ದಿವ್ಯ ರಥದಲ್ಲಿ ನಿಂತು ಕೃಷ್ಣನಿಂದ ರಕ್ಷಿತನಾಗಿ ಮೊದಲು ಧರ್ಮರ್ಷಣನನ್ನು ಸೋಲಿಸಿ ಗುರುಗಳಾದ ದ್ರೋಣರ ಬಳಿಗೆ ಬಂದನು.

**ಪ್ರದಕ್ಷಿಣೀಕೃತ್ಯ ತಮಾಶ್ವಗಾತ್ ತತಃ**
**ಕಾಲಾತ್ಯಯಂ ತ್ವೇವ ವಿಶಂಕಮಾನಃ ।**
**ರಥಂ ಮನೋವೇಗಮಥಾನಯದ್ಧರಿ-**
**ರ್ಯಥಾ ಶರಾಃ ಪೇತುರಮುಷ್ಯ ಪೃಷ್ಠತಃ ॥ ೫೮ ॥**

**ಅರ್ಥ** :- **ಕಾಲಾತ್ಯಯಂ** = ಕಾಲಾತಿಕ್ರಮವನ್ನು, **ವಿಶಂಕಮಾನಃ** = ಶಂಕಿಸುತ್ತಿರುವ ಅರ್ಜುನನು, **ತಂ** = ಆ ದ್ರೋಣರನ್ನು, **ಪ್ರದಕ್ಷಿಣೀಕೃತ್ಯ** = ಪ್ರದಕ್ಷಿಣೆ ಮಾಡಿ, **ತತಃ** = ಅಲ್ಲಿಂದ, **ಆಶು** = ಬೇಗನೇ, **ಅಗಾತ್** = ಹೊರಟುಹೋದನು, **ಅಮುಷ್ಯ** = ಆ ಅರ್ಜುನನ, **ಶರಾಃ** = ಬಾಣಗಳು,

**ಯಥಾ** = ಹೇಗೆ, **ಪೃಷ್ಠತಃ** = ಹಿಂದೆ, **ಪೇತುಃ** = ಬಂದವೋ, **ತಥಾ** = ಹಾಗೆ, **ಹರಿಃ** = ಕೃಷ್ಣನು, **ರಥಂ** = ರಥವನ್ನು, **ಅನಯತ್** = ನಡೆಸಿದನು.

**ತಾತ್ಪರ್ಯ** :- ಅರ್ಜುನ ಕಾಲಾತಿಕ್ರಮವನ್ನು ಶಂಕಿಸುತ್ತಾ ಬೇಗನೇ ಪ್ರದಕ್ಷಿಣೆ ಮಾಡಿ ಅಲ್ಲಿಂದ ಹೊರಟು ಹೋದನು. ಕೃಷ್ಣ ಅವನ ಮನೋವೇಗದ ರಥವನ್ನು ಅರ್ಜುನನ ಬಾಣಗಳು ಅವನ ಹಿಂದೆ ಬರುವಂತೆ ವೇಗವಾಗಿ ನಡೆಸಿದ.

**ವಿಜಿತ್ಯ ಹಾರ್ದಿಕ್ಯಮಥಾಪ್ರಯತ್ನತಃ**
**ಸ ಇಂದ್ರಸೂನುಃ ಪ್ರವಿವೇಶ ತದ್ ಬಲಮ್ ।**
**ವಿಲೋಳಯಾಮಾಸ ಚ ಸಾಯಕೋತ್ತಮೈ-**
**ರ್ಯಥಾ ಗಜೇಂದ್ರೋ ನಳಿನೀಂ ಬಲೋದ್ಧತಃ ॥ ೫೯ ॥**

**ಅರ್ಥ** :- **ಇಂದ್ರಸೂನುಃ** = ಅರ್ಜುನನು, **ಅಪ್ರಯತ್ನತಃ** = ಪ್ರಯತ್ನವೇ ಇಲ್ಲದೆ, **ಹಾರ್ದಿಕ್ಯಂ** = ಕೃತವರ್ಮನನ್ನು, **ವಿಜಿತ್ಯ** = ಗೆದ್ದು, **ಬಲಂ** = ಸೈನ್ಯವನ್ನು, **ಪ್ರವಿವೇಶ** = ಪ್ರವೇಶಿಸಿದನು, **ಬಲೋದ್ಧತಃ** = ಬಲದಿಂದ ಉದ್ಧಟನಾದ, **ಗಜೇಂದ್ರಃ** = ಗಜೇಂದ್ರನು, **ಯಥಾ** = ಹೇಗೆ, **ನಲಿನೀಂ** = ಕೋಳವನ್ನು, **ವಿಲೋಡಯಾಮಾಸ** = ಕದಡಿದನೋ, **ತಥಾ** = ಹಾಗೆ, **ಸಃ** = ಆ ಅರ್ಜುನನು, **ಸಾಯಕೋತ್ತಮೈಃ** = ಶ್ರೇಷ್ಠ ಬಾಣಗಳಿಂದ, **ತತ್** = ಆ ಸೈನ್ಯವನ್ನು, **ವಿಲೋಡಯಾಮಾಸ** = ಕದಡಿದನು.

**ತಾತ್ಪರ್ಯ** :- ಅರ್ಜುನನು ಅನಾಯಾಸವಾಗಿ ಕೃತವರ್ಮನನ್ನು ಸೋಲಿಸಿ ಸೈನ್ಯ ಪ್ರವೇಶಮಾಡಿದ. ಬಲದಿಂದ ಉದ್ಧಟನಾದ ಗಜೇಂದ್ರ ಹೇಗೆ ಕೊಳವನ್ನು ಕದಡಿಸಿದನೋ ಹಾಗೆ ಅರ್ಜುನನು ಬಾಣಗಳಿಂದ ಸೈನ್ಯವನ್ನು ಕದಡಿಸಿದನು.

**ಸ ಉಚ್ಚಕಾಶೇऽತಿರಥೋ ರಥೋತ್ತಮೇ**
**ಸವಾಸುದೇವೋ ಹರಿಣಾ ಯಥೇಂದ್ರಃ ।**
**ಚಕರ್ತ ಚೋಗ್ರೋ ದ್ವಿಷತಾಂ ಶಿರಾಂಸಿ**
**ಶರೈಃ ಶರೀರಾಂತಕರೈಃ ಸಮಂತತಃ ॥ ೬೦ ॥**

**ಅರ್ಥ** :- **ಅತಿರಥಃ** = ಅತಿರಥನಾದ, **ಸಃ** = ಆ ಅರ್ಜುನನು, **ರಥೋತ್ತಮೇ** = ಉತ್ತಮವಾದ ರಥದಲ್ಲಿ, **ಸವಾಸುದೇವಃ** = ಕೃಷ್ಣನಿಂದ ಕೂಡಿದವನಾಗಿ, **ಹರಿಣಾ** = ಉಪೇಂದ್ರನಿಂದ, **ಇಂದ್ರಃ** = ಇಂದ್ರನು, **ಯಥಾ** = ಹೇಗೆ, **ಉಚ್ಚಕಾಶೇ** = ಶೋಭಿಸಿದನೋ, **ತಥಾ** = ಹಾಗೆ, **ಉಚ್ಚಕಾಶೇ** = ಶೋಭಿಸಿದನು, **ಉಗ್ರಃ** = ಶತ್ರು ಭಯಂಕರನಾದ, ಅರ್ಜುನನು, **ಸಮಂತತಃ** = ಎಲ್ಲಾ ಕಡೆ ಇರುವ, **ದ್ವಿಷತಾಂ** = ಶತ್ರುಗಳ, **ಶಿರಾಂಸಿ** = ತಲೆಗಳನ್ನು, **ಚಕರ್ತ** = ಕತ್ತರಿಸಿದನು.

**ತಾತ್ಪರ್ಯ** :- ಅತಿರಥನಾದ ಅರ್ಜುನನು ಉತ್ತಮವಾದ ರಥದಲ್ಲಿ ಹೇಗೆ ಶೋಭಿಸಿದನೆಂದರೇ, ಉಪೇಂದ್ರನ ಜೊತೆಗಿರುವ ಇಂದ್ರನಂತೆ ಕೃಷ್ಣನ ಜೊತೆಗೆ ಶೋಭಿಸಿದನು. ಶತ್ರುಗಳಿಗೆ ಭಯಂಕರನಾದ ಆ ಅರ್ಜುನನು ಶರೀರ ನಾಶಕವಾದ ಬಾಣಗಳಿಂದ ಎಲ್ಲಾ ಕಡೆ ಶತ್ರುಗಳ ಶಿರಶ್ಛೇದನೆ ಮಾಡಿದನು.

**ದೃಢಾಯುಮಚ್ಯುತಾಯುಂ ಚ ಹತ್ವಾ ವಿಂದಾನುವಿಂದಕೌ ।**
**ಶರಾಭ್ಯಾಂ ಪ್ರೇಷಯಾಮಾಸ ಯಮಾಯ ವಿಜಯೋ ಯುಧಿ ॥ ೬೧ ॥**

**ಅರ್ಥ** :- **ವಿಜಯಃ** = ಅರ್ಜುನನು, **ಯುಧಿ** = ಯುದ್ಧದಲ್ಲಿ, **ದೃಢಾಯುಂ** = ದೃಢಾಯುವನ್ನು, **ಅಚ್ಯುತಾಯುಂ ಚ** = ಅಚ್ಯುತಾಯುವನ್ನೂ, **ವಿಂದಾನುವಿಂದಕೌ** = ವಿಂದ ಅನುವಿಂದರನ್ನೂ, **ಶರಾಭ್ಯಾಂ** = ಎರಡು ಬಾಣಗಳಿಂದ, **ಹತ್ವಾ** = ಹೊಡೆದು, **ಯಮಾಯ ಪ್ರೇಷಯಾಮಾಸ** = ಯಮನ ಹತ್ತಿರ ಕಳುಹಿಸಿಕೊಟ್ಟ.

**ತಾತ್ಪರ್ಯ** :- ಅರ್ಜುನ ಯುದ್ಧದಲ್ಲಿ ದೃಢಾಯು, ಅಚ್ಯುತಾಯು, ವಿಂದ, ಅನುವಿಂದರೆಲ್ಲರನ್ನೂ ಎರಡು ಬಾಣಗಳಿಂದ ಹೊಡೆದು ಸಂಹರಿಸಿದನು.

**ಸುದಕ್ಷಿಣಂ ಚ ಕಾಂಬೋಜಂ ನಿಹತ್ಯಾಂಬಷ್ಠಮೇವ ಚ ।**
**ಶ್ರುತಾಯುಧಂ ನದೀಜಾತಂ ವರುಣಾದಾಸಸಾದ ಹ ॥ ೬೨ ॥**

**ಅರ್ಥ** :- (ವಿಜಯಃ = ಅರ್ಜುನನು) **ಕಾಂಬೋಜಂ** = ಕಾಂಭೋಜದವನಾದ, **ಸುದಕ್ಷಿಣಂ ಚ** = ಸುದಕ್ಷಿಣನನ್ನೂ, **ಅಂಬಷ್ಠಮೇವ**

**ಚ** = ಅಂಬಷ್ಠರಾಜನನ್ನೂ ಕೂಡ, **ನಿಹತ್ಯ** = ಕೊಂದು, **ವರುಣಾತ್** = ವರುಣನಿಂದ, **ನದೀಜಾತಂ** = ಪರ್ಣಾಶಾನದಿಯಲ್ಲಿ ಹುಟ್ಟಿದ, **ಶ್ರುತಾಯುಧಂ** = ಶ್ರುತಾಯುಧನನ್ನು, **ಆಸಸಾದ ಹ** = ಸಮೀಪಿಸಿದನಷ್ಟೇ.

**ತಾತ್ಪರ್ಯ** :- ಅರ್ಜುನನು ಕಾಂಬೋಜದ ರಾಜಕುಮಾರನಾದ ಸುದಕ್ಷಿಣನನ್ನು ಅಂಬಷ್ಟರಾಜನನ್ನೂ ಕೊಂದು ವರುಣನಿಂದ ಪರ್ಣಾಶಾ ನದಿಯಲ್ಲಿ ಹುಟ್ಟಿದ ಶ್ರುತಾಯುಧನನ್ನು ಎದುರಿಸಿದ.

**ಯಸ್ಯಾದಾದ್ ವರುಣೋ ದಿವ್ಯಾಮ-**
**ಮೋಘಾಂ ಮಹತೀಂ ಗದಾಮ್ ।**
**ಸ ತು ತೇನ ಶರೈಸ್ತೀಕ್ಷ್ಣೈರರ್ದಿತೋ ವಿರಥಂ ಕ್ಷಣಾತ್ ।**
**ಚಕಾರ ಪಾರ್ಥಸ್ಯ ರಥಮಾರುಹ್ಯಾರಿಧಾರಾಯ ತಾಮ್ ॥ ೬೩ ॥**

**ಗದಾಂ ಚಿಕ್ಷೇಪ ಸಾ ತಸ್ಯ ವಾರುಣೇಃ ಶಿರ ಏವತು ।**
**ಬಿಭೇದ ಶತಧಾ ಶೀರ್ಣಮಸ್ತಿಷ್ಕಃ ಸೋಽಪತದ್ ಭುವಿ ॥ ೬೪ ॥**

**ಅರ್ಥ** :- **ಯಸ್ಯ** = ಯಾರಿಗೆ, **ವರುಣಃ** = ವರುಣನು, **ದಿವ್ಯಾಂ** = ದಿವ್ಯವಾದ, **ಅಮೋಘಾಂ** = ಅಮೋಘವಾದ, **ಮಹತೀಂ ಗದಾಂ** = ಮಹಾಗದೆಯನ್ನು, **ಅದಾತ್** = ಕೊಟ್ಟಿದ್ದನೋ, **ತೇನ** = ಆ ಶ್ರುತಾಯುಧನಿಂದ, **ತೀಕ್ಷ್ಣ** = ತೀಕ್ಷ್ಣವಾದ, **ಶರೈಃ** = ಬಾಣಗಳಿಂದ, **ಅರ್ದಿತಃ** = ಪೀಡಿತನಾದ, **ಸಃ** = ಆ ಅರ್ಜುನನು, **ಕ್ಷಣಾತ್** = ಒಂದು ಕ್ಷಣದಲ್ಲಿ, **ವಿರಥಂ ಚಕಾರ** = ರಥರಹಿತನನ್ನಾಗಿ ಮಾಡಿದನು, **ಪಾರ್ಥಸ್ಯ** = ಅರ್ಜುನನ, **ರಥಮಾರುಹ್ಯ** = ರಥವೇರಿ, **ಅರಿಧರಾಯ** = ಕೃಷ್ಣನಿಗೆ, **ತಾಂ ಗದಾಂ** = ಆ ಗದೆಯನ್ನು, **ಚಿಕ್ಷೇಪ** = ಎಸೆದನು, **ತು** = ಆದರೆ, **ಸಾ ಗದಾ** = ಆ ಗದೆಯು, **ವಾರುಣೇಃ** = ಶ್ರುತಾಯುಧನ, **ಶಿರ ಏವ** = ತಲೆಯನ್ನೇ, **ಶತಧಾ** = ನೂರು ಹೋಳಾಗಿ, **ಬಿಭೇದ** = ಭೇದಿಸಿತು, **ಶೀರ್ಣಮಸ್ತಿಷ್ಕಃ** = ನಾಶವಾದ ತಲೆಯುಳ್ಳ, **ಸಃ** = ಆ ಶ್ರುತಾಯುಧನು, **ಭುವಿ** = ನೆಲದ ಮೇಲೆ, **ಅಪತತ್** = ಬಿದ್ದನು.

**ತಾತ್ಪರ್ಯ** :- ವರುಣನು ಶ್ರುತಾಯುಧನಿಗೆ ದಿವ್ಯವಾದ ಅಮೋಘವೂ ಆದ ಮಹಾಗದೆಯನ್ನು ಕೊಟ್ಟಿದ್ದ. ಆ ಶ್ರುತಾಯುಧ ಅರ್ಜುನನನ್ನು

ಬಾಣಗಳಿಂದ ಪೀಡಿಸಿದ. ಪೀಡಿತನಾದ ಅರ್ಜುನ ಆ ಶ್ರುತಾಯುಧನನ್ನು ಕ್ಷಣದಲ್ಲೇ ರಥ ರಹಿತನನ್ನಾಗಿ ಮಾಡಿದನು. ಕೂಡಲೇ ಶ್ರುತಾಯುಧ ಅರ್ಜುನನ ರಥವೇರಿ ಕೃಷ್ಣನ ಮೇಲೆ ಗದೆಯೇಟು ಹಾಕಿದ. ಆದರೆ ಆ ಗಧೆಯು ಅವನ ತಲೆಯನ್ನೇ ಭೇದಿಸಿತು. ನೂರು ಹೋಳುಗಳಾಗಿ ತಲೆ ಒಡೆದುಕೊಂಡು ಸತ್ತು ನೆಲದ ಮೇಲೆ ಬಿದ್ದನು.

**ಅಯುಧ್ಯಂತಂ ಸ್ವಗದಯಾ ಯದಿ ತಾಡಯಸಿ ಸ್ವಯಮ್ ।**
**ತಯಾ ವಿಶೀರ್ಣಮಸ್ತಿಷ್ಕೋ ಮರಿಷ್ಯಸಿ ನ ಸಂಶಯಃ ॥ ೬೫ ॥**

**ಅರ್ಥ :- ಅಯುದ್ಧ್ಯಂತಂ** = ಯುದ್ಧ ಮಾಡದೆ ಇರವವರನ್ನು, **ಯದಿ** = ಒಂದು ವೇಳೆ, **ಸ್ವಗದಯಾ** = ನಿನ್ನ ಗದೆಯಿಂದ, **ಸ್ವಯಂ** = ನೀನು, **ತಾಡಯಸಿ** = ಹೊಡೆದರೆ, **ತದಾ** = ಆವಾಗ, **ತಯಾ** = ಆ ಗದೆಯಿಂದ, **ವಿಶೀರ್ಣಮಸ್ತಿಷ್ಕಃ** = ಒಡೆಯಲ್ಪಟ್ಟ ತಲೆಯುಳ್ಳವನಾಗಿ, **ಮರಿಷ್ಯಸಿ** = ಸಾಯುತ್ತೀ, **ನ ಸಂಶಯಃ** = ಸಂದೇಹವಿಲ್ಲ.

**ತಾತ್ಪರ್ಯ :-** ಯುದ್ಧ ಮಾಡದೆ ಇದ್ದವರನ್ನು ನೀನು ನಿನ್ನ ಗದೆಯಿಂದ ಹೊಡದಿಯಾದರೆ, ಆವಾಗ ಆ ಗದೆಯಿಂದ ನಿನ್ನ ತಲೆ ಒಡೆದು ಸಾಯುತ್ತೀ. ಈ ವಿಷಯದಲ್ಲಿ ಸಂಶಯವಿಲ್ಲ.

**ಅಮೋಘಾ ಚಾನ್ಯಥಾ ಸೇಯಂ ಗದಾ ತವ ಭವಿಷ್ಯತಿ ॥ ೬೬ ॥**

**ಅರ್ಥ :- ಅನ್ಯಥಾ** = ಇಲ್ಲದಿದ್ದರೆ, **ತವ** = ನಿನ್ನ, **ಸಾ ಇಯಂ ಗದಾ** = ಈ ಗದೆಯು, **ಅಮೋಘಾ** = ಅಮೋಘವಾಗಿ, **ಭವಿಷ್ಯತಿ** = ಇರುತ್ತದೆ.

**ತಾತ್ಪರ್ಯ :-** ಯುದ್ಧ ಮಾಡದೆ ಇದ್ದವರನ್ನು ನೀನು ಹೊಡೆಯದೆ ಇದ್ದರೆ ಆವಾಗ ನಿನ್ನ ಈ ಗದೆಯು ಅಮೋಘವಾಗಿ ಇರುತ್ತದೆ.

**ಇತ್ಯಬ್ರವೀತ್ ತಂ ವರುಣಃ ಪುರಾ ತೇನ ಸ ಕೇಶವೇ ।**
**ಅಯುಧ್ಯತಿ ಗದಾಕ್ಷೇಪಾತ್ ತಯಾ ಶೀರ್ಣಶಿರಾ ಅಭೂತ್ ॥ ೬೭ ॥**

**ಅರ್ಥ :- ಇತಿ** = ಹೀಗೆ, **ವರುಣಃ** = ವರುಣನು, **ಪುರಾ** = ಹಿಂದೆ, **ತಂ** = ಆ ಶ್ರುತಾಯುಧನನ್ನು ಕುರಿತು, **ಅಬ್ರವೀತ್** = ಹೇಳಿದ್ದನು, **ತೇನ** =

ಅದರಿಂದ, **ಅಯುದ್ಧ್ಯತಿ** = ಯುದ್ಧ ಮಾಡದಿದ್ದ, **ಕೇಶವೇ** = ಕೃಷ್ಣನ ಮೇಲೆ, **ಗದಾಕ್ಷೇಪಾತ್** = ಗದೆ ಎಸೆದದ್ದರಿಂದ, **ತಯಾ** = ಆ ಗದೆಯಿಂದ, **ಸಃ** = ಆ ಶ್ರುತಾಯುಧನು, **ಶೀರ್ಣಶಿರಾಃ** = ಹೋಳಾದ ತಲೆಯುಳ್ಳವನು, **ಅಭೂತ್** = ಆದನು.

**ತಾತ್ಪರ್ಯ** :- ಹಿಂದೆ ವರುಣ ಹೀಗೆ ಶ್ರುತಾಯುಧನಿಗೆ ಹೇಳಿದ್ದ. ಆದ್ದರಿಂದ ಯುದ್ಧ ಮಾಡದೆ ಇದ್ದ ಕೃಷ್ಣನ ಮೇಲೆ ಗದೆಯನ್ನು ಎಸೆದದ್ದರಿಂದ ಆ ಗದೆಯಿಂದಲೇ ಅವನ ತಲೆ ಹೋಳಾಯಿತು.

**ಹತೇಷು ವೀರೇಷು ನಿಜೇಷು ಸಂಘಶೋ**
**ವಿದ್ರಾವಿತೇಷ್ವಾಲುಳಿತೇ ಚ ಸೈನ್ಯೇ ।**
**ದುರ್ಯೋಧನೋ ದ್ರೋಣಮುಪೇತ್ಯ ದೀನ-**
**ಮುವಾಚ ಹಾ ಪಾರ್ಥ ಉಪೇಕ್ಷಿತಸ್ತ್ವಯಾ ॥ ೬೮ ॥**

**ಅರ್ಥ** :- **ನಿಜೇಷು** = ತನ್ನ ಕಡೆಯವರಾದ, **ವೀರೇಷು** = ವೀರರುಗಳು, **ಹತೇಷು** = ಹತರಾಗುತ್ತಿರಲು, **ಸಂಘಶಃ** = ಗುಂಪಾಗಿ, **ವಿದ್ರಾವಿತೇಷು** = ಓಡಿಸಲ್ಪಡುತ್ತಿರಲು, **ಸೈನ್ಯೇ ಚ** = ಸೈನ್ಯವಾದರು, **ಆಲುಲಿತೇ** = ಚೂರಾಗುತ್ತಿರಲು, **ದುರ್ಯೋಧನಃ** = ದುರ್ಯೋಧನನು, **ದ್ರೋಣಂ** = ದ್ರೋಣರನ್ನು, **ಉಪೇತ್ಯ** = ಹೊಂದಿ, **ದೀನಂ** = ದೀನತೆಯಿಂದ, **ಉವಾಚ** = ಹೇಳಿದನು, **ಹಾ** = ಅಯ್ಯೋ, **ತ್ವಯಾ** = ನಿನ್ನಿಂದ, **ಪಾರ್ಥಃ** = ಅರ್ಜುನನು, **ಉಪೇಕ್ಷಿತಃ** = ಉಪೇಕ್ಷೆ ಮಾಡಲ್ಪಟ್ಟನು.

**ತಾತ್ಪರ್ಯ** :- ತನ್ನ ಕಡೆಯ ವೀರರು ಹತರಾಗುತ್ತಿರಲು, ಗುಂಪಾಗಿ ಓಡಿಸಲ್ಪಡುತ್ತಿರಲು, ಸೈನ್ಯವು ಚೂರಾಗುತ್ತಿರಲು ದ್ರೋಣನ ಬಳಿಗೆ ದುರ್ಯೋಧನ ಬಂದು ದೀನತೆಯಿಂದ ಹೇಳಿದನು. ಅಯ್ಯೋ! ನೀನು ಅರ್ಜುನನನ್ನು ತಡೆಯದೆ ಉಪೇಕ್ಷೆ ಮಾಡಿದಿ.

**ಇತೀರಿತೇಽಭೇದ್ಯಮಮುಷ್ಯ ವರ್ಮ**
**ಬಧ್ವಾ ಮಹಾಮಂತ್ರಬಲಾತ್ ಸ ವಿಪ್ರಃ ।**
**ಜಗಾದ ಯೇನೈವ ಬಲೇನ ಪಾರ್ಥೈ-**
**ರ್ವಿರುಧ್ಯಸೇ ತೇನ ಹಿ ಯಾಹಿ ಫಲ್ಗುನಮ್ ॥ ೬೯ ॥**

**ಅರ್ಥ** :- **ಇತಿ** = ಈ ರೀತಿಯಾಗಿ, **ಈರಿತಃ** = ಹೇಳಲ್ಪಟ್ಟ, **ಸಃ ವಿಪ್ರಃ** = ಆ ದ್ರೋಣನು, **ಮಹಾಮಂತ್ರಬಲಾತ್** = ಮಹಾಮಂತ್ರಬಲದಿಂದ, **ಅಮುಷ್ಯ** = ಅವನಿಗೆ, **ಅಭೇದ್ಯಂ** = ಅಭೇದ್ಯವಾದ, **ವರ್ಮ** = ಕವಚವನ್ನು, **ಬದ್ಧ್ವಾ** = ತೊಡಿಸಿ, **ಜಗಾದ** = ಹೇಳಿದನು, **ಯೇನೈವ ಬಲೇನ** = ಯಾವ ಬಲದಿಂದ, **ಪಾರ್ಥೈಃ** = ಪಾಂಡವರೊಡನೆ, **ವಿರುಧ್ಯಸೇ** = ಯುದ್ಧ ಮಾಡುತ್ತೀಯೋ, **ತೇನ ಹಿ** = ಆ ಬಲದಿಂದ, **ಫಲ್ಗುನಂ ಯಾಹಿ** = ಅರ್ಜುನನೊಡನೆ ಹೋರಾಡು.

**ತಾತ್ಪರ್ಯ** :- ದುರ್ಯೋಧನ ಹೀಗೆ ಹೇಳಿದಾಗ ದ್ರೋಣ ಮಹಾಮಂತ್ರದ ಬಲದಿಂದ ಅವನಿಗೆ ಕವಚ ತೊಡಿಸಿ ಹೇಳಿದನು. ಪಂಚ ಪಾಂಡವರೊಡನೆ ಎಷ್ಟು ಬಲದಿಂದ ಹೋರಾಡುವಿಯೋ ಅಷ್ಟೇ ಬಲದಿಂದ ಅರ್ಜುನನೊಡನೆ ಹೋರಾಡು.

**ಇತೀರಿತೋ ಧಾರ್ತರಾಷ್ಟ್ರಃ ಸ ಚಾಪ-**
**ಮಾದಾಯ ಸೌವರ್ಣರಥೋಪರಿ ಸ್ಥಿತಃ ।**
**ಜಗಾಮ ಪಾರ್ಥಂ ತಮವಾರಯಚ್ಚ**
**ಶರೈರನೇಕೈರನಲಪ್ರಕಾಶೈಃ ॥ ೭೦ ॥**

**ಅರ್ಥ** :- **ಇತಿ** = ಈ ರೀತಿಯಾಗಿ, **ಈರಿತಃ** = ಹೇಳಲ್ಪಟ್ಟ, **ಸಃ** = ಆ, **ಧಾರ್ತರಾಷ್ಟ್ರಃ** = ದುರ್ಯೋಧನನು, **ಚಾಪಮಾದಾಯ** = ಬಿಲ್ಲನ್ನೆತ್ತಿಕೊಂಡು, **ಸೌವರ್ಣ ರಥೋಪರಿಸ್ಥಿತಃ** = ಬಂಗಾರದ ರಥದಲ್ಲಿ ಇದ್ದವನಾಗಿ, **ಪಾರ್ಥಂ** = ಅರ್ಜುನನನ್ನು ಕುರಿತು, **ಜಗಾಮ** = ಹೋದನು, **ಚ** = ಮತ್ತು, **ಅನೇಕೈಃ** = ಬಹಳ, **ಅನಲಪ್ರಕಾಶೈಃ** = ಬೆಂಕಿಯೆಂತೆ ಹೊಳೆಯುವ, **ಶರೈಃ** = ಬಾಣಗಳಿಂದ, **ತಮ್** = ಆ ಅರ್ಜುನನನ್ನು, **ಅವಾರಯತ್** = ತಡೆದನು.

**ತಾತ್ಪರ್ಯ** :- ಹೀಗೆ ಹೇಳಲ್ಪಟ್ಟ ದುರ್ಯೋಧನ ಬಿಲ್ಲೆತ್ತಿಕೊಂಡು ಬಂಗಾರದ ರಥದ ಮೇಲೆ ಹತ್ತಿನಿಂತನು. ಅರ್ಜುನನ ಹತ್ತಿರ ಹೋದನು. ಬೆಂಕಿಯಂತೆ ಹೊಳೆಯುವ ಅನೇಕ ಬಾಣಗಳಿಂದ ಅವನನ್ನು ತಡೆದನು.

**ವಿವ್ಯಾಧ ಪಾರ್ಥೋಽಪಿ ತಮುಗ್ರವೇಗೈಃ**
**ಶರೈರ್ನ ತೇ ತಸ್ಯ ಚ ವರ್ಮಭೇದನಮ್ ।**

**ಚಕ್ರುಸ್ತತೋ ವಾಸವಿರ್ದಿವ್ಯಮಸ್ತ್ರಂ**
**ತದ್ವರ್ಮಭೇದಾಯ ಸಮಾದದೇ ರುಷಾ ॥ ೭೧ ॥**

**ಅರ್ಥ** :- **ಪಾರ್ಥೋಽಪಿ** = ಅರ್ಜುನನಾದರೂ, **ಉಗ್ರವೇಗೈಃ** = ಭಯಂಕರ ವೇಗವುಳ್ಳ, **ಶರೈಃ** = ಬಾಣಗಳಿಂದ, **ತಂ** = ಆ ದುರ್ಯೋಧನನನ್ನು, **ವಿವ್ಯಾಧ** = ಹೊಡೆದನು, **ತೇ** = ಆ ಬಾಣಗಳು, **ತಸ್ಯ** = ಆ ದುರ್ಯೋಧನನ, **ವರ್ಮಭೇದನಂ ಚ** = ಕವಚ ಭೇದನೆಯನ್ನೂ ಕೂಡ, **ನ ಚಕ್ರುಃ** = ಮಾಡಲಿಲ್ಲ, **ತತಃ** = ಅನಂತರ, **ವಾಸವಿಃ** = ಅರ್ಜುನನು, **ರುಷಾ** = ಕೋಪದಿಂದ, **ತದ್ವರ್ಮಭೇದಾಯ** = ಅವನ ಕವಚ ಭೇದನೆಗಾಗಿ, **ದಿವ್ಯಂ** = ದಿವ್ಯವಾದ, **ಅಸ್ತ್ರಂ** = ಅಸ್ತ್ರವನ್ನು, **ಸಮಾದದೇ** = ತೆಗೆದುಕೊಂಡನು.

**ತಾತ್ಪರ್ಯ** :- ಅರ್ಜುನನಾದರೂ ಭಯಂಕರವಾದ ವೇಗವುಳ್ಳ ಬಾಣಗಳಿಂದ ದುರ್ಯೋಧನನನ್ನು ಹೊಡೆದನು. ಆ ಬಾಣಗಳು ಅವನ ಕವಚ ಭೇದನೆಯನ್ನೂ ಮಾಡಲಿಲ್ಲ. ಅನಂತರ ಅರ್ಜುನ ಕೋಪದಿಂದ ದುರ್ಯೋಧನನ ಕವಚ ಭೇದನಕ್ಕಾಗಿ ದಿವ್ಯಾಸ್ತ್ರವನ್ನು ತೆಗೆದುಕೊಂಡನು.

**ಸಂಧೀಯಮಾನಂ ತು ಗುರೋಃ ಸುತಸ್ತ-**
**ಚ್ಚಿಚ್ಛೇದ ಪಾರ್ಥೋಽಥ ಸುಯೋಧನಾಶ್ವಾನ್ ।**
**ಹತ್ವಾ ತಲೇಽವಿದ್ಧ್ಯದಥೈನಮುಗ್ರೈ-**
**ರ್ದ್ರೌಣಿಃ ಶರೈಃ ಪಾರ್ಥಮವಾರಯದ್ ಯುಧಿ ॥ ೭೨ ॥**

**ಅರ್ಥ** :- **ಸಂಧೀಯಮಾನಂ** = ಹೂಡಲ್ಪಟ್ಟ, **ತತ್** = ಆ ಬಿಲ್ಲನ್ನು, **ಗುರೋಃ ಸುತಃ** = ಅಶ್ವತ್ಥಾಮರು, **ಚಿಚ್ಛೇದ** = ಕತ್ತರಿಸಿದರು, **ಪಾರ್ಥಃ** = ಅರ್ಜುನನು, **ಸುಯೋಧನಾಶ್ವಾನ್** = ದುರ್ಯೋಧನ ಕುದುರೆಗಳನ್ನು, **ಹತ್ವಾ** = ಕೊಂದು, **ತಲೇ** = ಅಂಗೈಯಲ್ಲಿ, **ಅವಿದ್ಧ್ಯತ್** = ಗಾಯಗೊಳಿಸಿದನು, **ದ್ರೌಣಿಃ** = ಅಶ್ವತ್ಥಾಮರು, **ಉಗ್ರೈಃ** = ಕ್ರೂರವಾದ, **ಶರೈಃ** = ಬಾಣಗಳಿಂದ, **ಯುಧಿ** = ಯುದ್ಧದಲ್ಲಿ, **ಪಾರ್ಥಂ** = ಅರ್ಜುನನನ್ನು, **ಅವಾರಯತ್** = ತಡೆದನು.

**ತಾತ್ಪರ್ಯ** :- ದಿವ್ಯಾಸ್ತ್ರ ಹೂಡುತ್ತಿದ್ದದ್ದನ್ನು ಅಶ್ವತ್ಥಾಮ ಕತ್ತರಿಸಿದ. ಅರ್ಜುನ ದುರ್ಯೋಧನನ ಕುದುರೆಗಳನ್ನು ಕೊಂದು ಅಂಗೈಗೆ ಬಾಣಗಳಿಂದ

ಹೊಡೆದನು. ಅಶ್ವತ್ಥಾಮರು ಭಯಂಕರವಾದ ಬಾಣಗಳಿಂದ ಯುದ್ಧದಲ್ಲಿ ಅರ್ಜುನನನ್ನು ತಡೆದರು.

**ಸ ದ್ರೌಣಿಕರ್ಣಪ್ರಮುಖೈರ್ಧನಂಜಯೋ**
**ಯುಯೋಧ ತೇ ಚೈನಮವಾರಯನ್ ಶರೈಃ ।**
**ಬಭೂವ ಯುದ್ಧಂ ತದತುಲ್ಯಮದ್ಭುತಂ**
**ಜಯದ್ರಥಾರ್ಥೇಽದ್ಭುತವೀರ್ಯಕರ್ಮಣಾಮ್ ॥ ೭೩ ॥**

**ಅರ್ಥ** :- **ಸಃ ಧನಂಜಯಃ** = ಆ ಅರ್ಜುನನು, **ದ್ರೌಣಿಕರ್ಣಪ್ರಮುಖೈಃ** = ಅಶ್ವತ್ಥಾಮ ಕರ್ಣ ಮೊದಲಾದವರ ಜೊತೆ, **ಯಯೋಧ** = ಯುದ್ಧ ಮಾಡಿದನು, **ತೇ ಚ** = ಅವರಾದರೂ, **ಏನಂ** = ಈ ಅರ್ಜುನನನ್ನು, **ಶರೈಃ** = ಬಾಣಗಳಿಂದ, **ಅವಾರಯನ್** = ತಡೆದರು, **ಜಯದ್ರಥಾರ್ಥೇ** = ಜಯದ್ರಥನಿಗೋಸ್ಕರ, **ಅದ್ಭುತವೀರ್ಯಕರ್ಮಣಾಂ** = ಅದ್ಭುತವೀರ್ಯ ಕರ್ಮವುಳ್ಳ ಅಶ್ವತ್ಥಾಮ ಮೊದಲಾದವರ, **ತತ್ ಯುದ್ಧಂ** = ಆ ಯುದ್ಧವು, **ಅತುಲ್ಯಂ** = ಅಸದೃಶವು, **ಅದ್ಭುತಂ** = ಅದ್ಭುತವೂ, **ಬಭೂವ** = ಆಯಿತು.

**ತಾತ್ಪರ್ಯ** :- ಅರ್ಜುನನು ಅಶ್ವತ್ಥಾಮ ಕರ್ಣ ಮೊದಲಾದವರ ಜೊತೆ ಯುದ್ಧ ಮಾಡಿದನು. ಅಶ್ವತ್ಥಾಮ ಮೊದಲಾದವರಾದರೂ ಅರ್ಜುನನನ್ನು ಬಾಣಗಳಿಂದ ತಡೆದರು. ಅದ್ಭುತವೀರ್ಯಕರ್ಮವುಳ್ಳ ಅಶ್ವತ್ಥಾಮ ಮೊದಲಾದವರು ಸೈಂಧವನಿಗೋಸ್ಕರ ಮಾಡಿದ ಯುದ್ಧವು ಅಸದೃಶ ಮತ್ತೂ ಅದ್ಭುತವೂ ಆಗಿತ್ತು.

**ಪಾರ್ಥೇ ಪ್ರವಿಷ್ಟೇ ಕುರುಸೈನ್ಯಮಧ್ಯಂ**
**ದ್ರೋಣೋಽವಿಶತ್ ಪಾಂಡವಸೈನ್ಯಮಾಶು ।**
**ಸ ತದ್ರಥಾನೀಕಮುದಗ್ರವೇಗೈಃ**
**ಶರೈರ್ವಿಧೂಯ ನ್ಯಹನಚ್ಚ ವೀರಾನ್ ॥ ೭೪ ॥**

**ಅರ್ಥ** :- **ಪಾರ್ಥೇ** = ಅರ್ಜುನನು, **ಕುರುಸೈನ್ಯಮಧ್ಯಂ** = ಕೌರವ ಸೈನ್ಯವನ್ನು, **ಪ್ರವಿಷ್ಟೇ** = ಪ್ರವೇಶಿಸುತ್ತಿರಲು, **ದ್ರೋಣಃ** = ದ್ರೋಣನು, **ಆಶು** = ಕೂಡಲೇ, **ಪಾಂಡವಸೈನ್ಯಂ** = ಪಾಂಡವರ ಸೈನ್ಯವನ್ನು, **ಅವಿಶತ್** = ಪ್ರವೇಶಿಸಿದನು, **ಉದಾರವೇಗೈಃ** = ಮಹಾವೇಗವುಳ್ಳ, **ಶರೈಃ** = ಬಾಣಗಳಿಂದ,

**ತದ್ರಥಾನೀಕಂ** = ಪಾಂಡವರ ರಥಸೈನ್ಯವನ್ನು, **ವಿಧೂಯ** = ಓಡಿಸಿ, **ಸಃ** = ಆ ದ್ರೋಣನು, **ವೀರಾನ್** = ವೀರರನ್ನು, **ನ್ಯಹನಚ್ಚ** = ಕೊಂದನೂ ಕೂಡ.

**ತಾತ್ಪರ್ಯ** :- ಅರ್ಜುನ ಕೌರವರ ಸೈನ್ಯ ಪ್ರವೇಶ ಮಾಡುತ್ತಿದ್ದಾಗ ದ್ರೋಣ ಪಾಂಡವರ ಸೈನ್ಯವನ್ನು ಪ್ರವೇಶ ಮಾಡಿದ. ಮಹಾವೇಗವುಳ್ಳ ಬಾಣಗಳಿಂದ ಪಾಂಡವರ ರಥ ಸೈನ್ಯವನ್ನು ಓಡಿಸಿ ವೀರರನ್ನು ನಾಶಪಡಿಸಿದ.

**ಸ ವೀರವರ್ಯಃ ಸ್ಥವಿರೋಽಪಿ ಯೂನಾಂ**
**ಯುವೇವ ಮಧ್ಯೇ ಪ್ರಚಚಾರ ಧನ್ವಿನಾಮ್ ।**
**ಪ್ರಪಾತಯನ್ ವೀರಶಿರಾಂಸಿ ಬಾಣೈ-**
**ರ್ಯುಧಿಷ್ಠಿರಂ ಚಾಽಸಸದದುಗ್ರವೀರ್ಯಃ ॥ ೭೫ ॥**

**ಅರ್ಥ** :- **ವೀರವರ್ಯಃ** = ವೀರಶ್ರೇಷ್ಠನಾದ, **ಸಃ** = ಆ ದ್ರೋಣನು, **ಸ್ಥವಿರೋಽಪಿ** = ವೃದ್ಧನಾದರೂ, **ಯೂನಾಂ** = ಯುವಕರಿಗೆ, **ಯುವಾ ಇವ** = ಯುವಕನಂತೆ, **ಧನ್ವಿನಾಂ ಮಧ್ಯೇ** = ಧನುರ್ಧಾರಿಗಳ ಮಧ್ಯದಲ್ಲಿ, **ಪ್ರಚಚಾರ** = ಸಂಚರಿಸಿದನು, **ಉಗ್ರವೀರ್ಯಃ** = ಭಯಂಕರ ಪರಾಕ್ರಮಿಯಾದ ಅವನು, **ವೀರಶಿರಾಂಸಿ** = ವೀರರ ರುಂಡಗಳನ್ನು, **ಬಾಣೈಃ** = ಬಾಣಗಳಿಂದ, **ಪ್ರಪಾತಯನ್** = ಉರುಳಿಸುತ್ತಾ, **ಯುಧಿಷ್ಠಿರಂ** = ಧರ್ಮರಾಜನನ್ನು, **ಆಸಸಾದ** = ಸಮೀಪಿಸಿದನು.

**ತಾತ್ಪರ್ಯ** :- ವೀರ ಶ್ರೇಷ್ಠನಾದ ದ್ರೋಣನು ವೃದ್ಧನಾದರೂ ಯುವಕರಿಗೆ ಯುವಕನಂತೆ ಆ ಧನುರ್ಧಾರಿಗಳ ಮಧ್ಯದಲ್ಲಿ ಓಡಾಡಿದನು. ಭಯಂಕರ ಪರಾಕ್ರಮಿಯಾದ ಅವನು ವೀರರ ರುಂಡಗಳನ್ನು ನೆಲಕ್ಕೆ ಉರುಳಿಸುತ್ತಾ ಧರ್ಮರಾಜನನ್ನು ಎದುರಿಸಿದ.

**ನೃಪಗ್ರಹೇಚ್ಛುಂ ತಮವೇತ್ಯ ಸತ್ಯಜಿ-**
**ನ್ನ್ಯವಾರಯದ್ ದ್ರೌಪದಿರಾಶು ವೀರ್ಯವಾನ್ ।**
**ನಿವಾರಿತಸ್ತೇನ ಶಿರಃ ಶರೇಣ**
**ಚಕರ್ತ ಪಾಂಚಾಲಸುತಸ್ಯ ವಿಪ್ರಃ ॥ ೭೬ ॥**

**ಅರ್ಥ** :- **ತಂ** = ಆ ದ್ರೋಣರನ್ನು, **ನೃಪಗ್ರಹೇಚ್ಛುಂ** = ಯುಧಿಷ್ಠಿರನನ್ನು ಸೆರೆಹಿಡಿಯುವ ಆಸೆಯುಳ್ಳವರನ್ನಾಗಿ, **ಅವೇತ್ಯ** = ತಿಳಿದು,

**ವೀರ್ಯವಾನ್** = ಪರಾಕ್ರಮಿಯಾದ, **ದ್ರೌಪದಿಃ** = ದ್ರುಪದನ ಮಗನಾದ, **ಸತ್ಯಜಿತ್** = ಸತ್ಯಜಿತನು, **ಆಶು** = ಬೇಗನೇ, **ತಂ** = ಆ ದ್ರೋಣರನ್ನು, **ನ್ಯವಾರಯತ್** = ತಡೆದನು, **ತೇನ** = ಸತ್ಯಜಿತನಿಂದ, **ನಿವಾರಿತಃ** = ತಡೆಯಲ್ಪಟ್ಟ, **ವಿಪ್ರಃ** = ದ್ರೋಣರು, **ಶರೇಣ** = ಬಾಣದಿಂದ, **ಪಾಂಚಾಲಸುತಸ್ಯ** = ಸತ್ಯಜಿತನ, **ಶಿರಃ** = ತಲೆಯನ್ನು, **ಚಕರ್ತ** = ಕತ್ತರಿಸಿದರು.

**ತಾತ್ಪರ್ಯ** :- ದ್ರೋಣ ಯುಧಿಷ್ಠಿರನನ್ನು ಸೆರೆಹಿಡಿಯಲು ಬಯಸಿದ್ದು ತಿಳಿದು ದ್ರುಪದನ ಮಗನಾದ ಪರಾಕ್ರಮಶಾಲಿಯಾದ ಸತ್ಯಜಿತ್ ಅವರನ್ನು ತಡೆದನು. ಆಗ ದ್ರೋಣರು ಬಾಣದಿಂದ ಅವನ ತಲೆಯನ್ನು ಕತ್ತರಿಸಿದರು.

**ನಿಹತ್ಯ ತಂ ವೀರತಮಂ ರಣೋತ್ಕಟಂ**
**ಯುಧಿಷ್ಠಿರಂ ಬಾಣಗಣೈಃ ಸಮಾರ್ದಯತ್ ॥ ೭೭ ॥**

**ಅರ್ಥ** :- **ವೀರತಮಃ** = ಮಹಾವೀರನಾದ ದ್ರೋಣನು, **ರಣೋತ್ಕಟಂ** = ಯುದ್ಧದಲ್ಲಿ ನಿಪುಣನಾದ, **ತಂ** = ಆ ಸತ್ಯಜಿತನನ್ನು, **ನಿಹತ್ಯ** = ಕೊಂದು, **ಬಾಣಗಣೈಃ** = ಬಾಣಸಮೂಹಗಳಿಂದ, **ಯುಧಿಷ್ಠಿರಂ** = ಯುಧಿಷ್ಠಿರನನ್ನು, **ಸಮಾರ್ದಯತ್** = ಪೀಡಿಸಿದನು.

**ತಾತ್ಪರ್ಯ** :- ವೀರರಾದ ದ್ರೋಣರು ಯುದ್ಧದಲ್ಲಿ ನಿಪುಣನಾದ ಸತ್ಯಜಿತನನ್ನು ಕೊಂದು ಬಾಣಸಮೂಹಗಳಿಂದ ಧರ್ಮರಾಜನನ್ನು ಪೀಡಿಸಿದನು.

**ಸ ಶಕ್ತಿತಸ್ತೇನ ವಿಧಾಯ ಸಂಗರಂ**
**ನಿರಾಯುಧೋ ವ್ಯಶ್ವರಥಃ ಕೃತಃ ಕ್ಷಣಾತ್ ।**
**ಸ ಊರ್ಧ್ವಬಾಹುರ್ಭುವಿ ಸಂಸ್ಥಿತೋಽಪಿ**
**ಗ್ರಹೀತುಮಾಜೌ ಗುರುಣಾಽಭಿಪನ್ನಃ ॥ ೭೮ ॥**

**ಮಾದ್ರೀಸುತಸ್ಯಾವರಜಸ್ಯ ಯಾನ-**
**ಮಾರುಹ್ಯ ವೇಗಾದಪಜಗ್ಮಿವಾಂಸ್ತತಃ ।**

**ಅರ್ಥ** :- **ಸಃ** = ಧರ್ಮರಾಜನು, **ಶಕ್ತಿತಃ** = ಶಕ್ತಿ ಇದ್ದಷ್ಟು, **ಸಂಗರಂ ಕೃತ್ವಾ** = ಯುದ್ಧಮಾಡಿ, **ತೇನ** = ದ್ರೋಣರಿಂದ, **ಕ್ಷಣಾತ್** = ಒಂದು

ಕ್ಷಣದಲ್ಲಿ, **ನಿರಾಯುಧಃ** = ನಿರಾಯುಧನು, **ವ್ಯಶ್ವರಥಃ** = ಅಶ್ವರಥರಹಿತನೂ, **ಕೃತಃ** = ಮಾಡಲ್ಪಟ್ಟನು, **ಸಃ** = ಅವನು, **ಊರ್ಧ್ವಬಾಹುಃ** = ಕೈಯಿ ಮೇಲೆತ್ತಿದವನಾಗಿ, **ಭುವಿ** = ನೆಲದಮೇಲೆ, **ಸಂಸ್ಥಿತೋಽಪಿ** = ನಿಂತವನೂ ಆಗಿ, **ಆಜೌ** = ಯುದ್ಧದಲ್ಲಿ, **ಗ್ರಹೀತುಂ** = ಸೆರೆಹಿಡಿಯಲು, **ಗುರುಣಾ** = ಗುರುಗಳಿಂದ, **ಅಭಿಪನ್ನಃ** = ಎದುರಿಸಲ್ಪಟ್ಟನು, ಮಾದ್ರೀಸುತಸ್ಯ, **ಅವರಜಸ್ಯ** = ಮಾದ್ರಿಯಮಗನಾದ ಸಣ್ಣವನಾದ ಸಹದೇವನ, **ಯಾನಮಾರುಹ್ಯ** = ರಥವನ್ನೇರಿ, **ವೇಗಾತ್** = ವೇಗವಾಗಿ, **ತತಃ** = ಅಲ್ಲಿಂದ, **ಅಪಜಗ್ಮಿವಾನ್** = ಹೊರಟುಹೋದನು.

**ತಾತ್ಪರ್ಯ** :- ಧರ್ಮರಾಜ ಶಕ್ತಿ ಇದ್ದಷ್ಟು ಕಾಲ ಯುದ್ಧ ಮಾಡಿ ಒಂದು ಕ್ಷಣದಲ್ಲಿ ಆಯುಧ ಕುದುರೆ ರಥ ಕಳೆದುಕೊಂಡು ನೆಲದ ಮೇಲೆ ಕೈಗಳೆತ್ತಿಕೊಂಡು ನಿಂತುಬಿಟ್ಟನು. ಆದರೂ ಅವನನ್ನು ಯುದ್ಧದಲ್ಲಿ ಹಿಡಿಯಲು ದ್ರೋಣರು ಮುಂದೆ ಬಂದರು. ಯುಧಿಷ್ಠಿರ ಸಹದೇವನ ರಥವನ್ನೇರಿ ವೇಗವಾಗಿ ಅಲ್ಲಿಂದ ಹೊರಟುಹೋದ.

**ದ್ರೋಣಂ ತತಃ ಶೈಶುಪಾಲಿಃ ಸಪುತ್ರೋ**
**ಜಾರಾಸಂಧಿಃ ಕಾಶಿರಾಜಃ ಸಶೈಬ್ಯಃ ।**
**ಸಮಾಸದನ್ ಕೇಕಯಾಶ್ಚೈವ ಪಂಚ**
**ಸಮಾರ್ದಯನ್ ಬಾಣಗಣೈಶ್ಚ ಸರ್ವಶಃ ॥ ೭೯ ॥**

**ಅರ್ಥ** :- **ತತಃ** = ಅನಂತರ, **ಸಪುತ್ರಃ** = ಮಕ್ಕಳಿಂದ ಕೂಡಿದ, **ಶೈಶುಪಾಲಿಃ** = ಶಿಶುಪಾಲನ ಮಗನಾದ ಧೃಷ್ಟಕೇತು, **ಜಾರಾಸಂಧಿಃ** = ಜರಾಸಂಧನ ಮಗನು, **ಸಶೈಬ್ಯಃ** = ಶೈಬ್ಯನಿಂದ ಕೂಡಿದ, **ಕಾಶಿರಾಜಃ** = ಕಾಶೀರಾಜನು, **ಪಂಚ ಕೇಕಯಾಃ** = ಐದು ಮಂದಿ ಕೇಕಯರುಗಳು, **ದ್ರೋಣಂ** = ದ್ರೋಣರನ್ನು, **ಸಮಾಸದನ್** = ಸಮೀಪಿಸಿದರು, **ಬಾಣಗಣೈಶ್ಚ** = ಬಾಣಸಮೂಹಗಳಿಂದಲೂ ಕೂಡ, **ಸರ್ವಶಃ** = ಎಲ್ಲಾ ಕಡೆಯಿಂದ, **ಸಮಾರ್ದಯನ್** = ಪೀಡಿಸಿದರು.

**ತಾತ್ಪರ್ಯ** :- ಅನಂತರ ಶಿಶುಪಾಲನ ಮಗನಾದ ಧೃಷ್ಟಕೇತು ಅವನ ಮಕ್ಕಳು ಜರಾಸಂಧನ ಮಗನು, ಕಾಶೀರಾಜ, ಶೈಬ್ಯ, ಬೃಹತ್‌ಕ್ಷತ್ರ

ಮೊದಲಾದ ಐದು ಮಂದಿ ಕೈಕೇಯರು ಎಲ್ಲರೂ ದ್ರೋಣನನ್ನು ಸಮೀಪಿಸಿದರು. ಬಾಣಸಮೂಹಗಳಿಂದ ಎಲ್ಲಾ ಕಡೆಯಿಂದ ಪೀಡಿಸಿದರು.

**ಸ ತಾನ್ ಕ್ರಮೇಣೈವ ನಿಕೃತ್ತಕಂಧರಾನ್**
**ಶರೋತ್ತಮೈರತ್ರ ವಿಧಾಯ ವಿಪ್ರಃ ।**
**ನಿನಾಯ ಲೋಕಂ ಪರಮರ್ಕಮಂಡಲಂ**
**ವ್ರಜಂತಿ ನಿರ್ಭಿದ್ಯ ಯಮೂರ್ಧ್ವರೇತಸಃ ॥ ೮೦ ॥**

**ಅರ್ಥ** :- **ಸಃ ವಿಪ್ರಃ** = ಆ ದ್ರೋಣರು, **ಶರೋತ್ತಮೈಃ** = ಉತ್ತಮ ಬಾಣಗಳಿಂದ, **ಕ್ರಮೇಣೈವ** = ಕ್ರಮವಾಗಿಯೇ, **ತಾನ್** = ಅವರನ್ನು, **ನಿಕೃತ್ತಕಂಧರಾನ್** = ಕತ್ತರಿಸಲ್ಪಟ್ಟ ತಲೆಯುಳ್ಳವರನ್ನಾಗಿ, **ವಿಧಾಯ** = ಮಾಡಿ, **ಊರ್ಧ್ವರೇತಸಃ** = ನೈಷ್ಠಿಕ ಬ್ರಹ್ಮಚರ್ಯನಿಷ್ಠರು, **ಪರಂ** = ಉತ್ತಮವಾದ, **ಅರ್ಕಮಂಡಲಂ** = ಸೂರ್ಯಮಂಡಲವನ್ನು, **ನಿರ್ಭಿದ್ಯ** = ಭೇದಿಸಿ, **ಯಂ ಲೋಕಂ** = ಯಾವ ಲೋಕಕ್ಕೆ, **ವ್ರಜಂತಿ** = ಹೋಗುತ್ತಾರೋ, **ತಂ** = ಅಂತಹ ಲೋಕಕ್ಕೆ, **ನಿನಾಯ** = ಕಳುಹಿಸಿದನು.

**ತಾತ್ಪರ್ಯ** :- ದ್ರೋಣರು ಉತ್ತಮ ಬಾಣಗಳಿಂದ ಕ್ರಮವಾಗಿ ಅವರ ತಲೆ ಕತ್ತರಿಸಿ ನೈಷ್ಠಿಕ ಬ್ರಹ್ಮಚರ್ಯನಿಷ್ಠರು ಸೂರ್ಯಮಂಡಲವನ್ನು ಭೇದಿಸಿ ಯಾವ ಉತ್ತಮಲೋಕವನ್ನು ಹೊಂದುವರೋ ಆ ಲೋಕಕ್ಕೆ ಕಳುಹಿಸಿದರು.

**ವಿಧೂಯಮಾನೇ ಗುರುಣೋರುಸೈನ್ಯೇ**
**ಪೃಥಾಸುತಾನಾಂ ಪೃತನಾಃ ಪರೇಷಾಮ್ ।**
**ಪ್ರಾಯೋ ರಣೇ ಮಾರುತಸೂನುನೈವ**
**ಹತಪ್ರವೀರಾ ಮೃದಿತಾಃ ಪರಾದ್ರವನ್ ॥ ೮೧ ॥**

**ಅರ್ಥ** :- **ಗುರುಣಾ** = ದ್ರೋಣನಿಂದ, **ಪೃಥಾಸುತಾನಾಂ** = ಪಾಂಡವರ, **ಉರುಸೈನ್ಯೇ** = ಮಹಾಸೈನ್ಯವು, **ವಿಧೂಯಮಾನೇ** = ನಾಶಗೊಳಿಸಲ್ಪಡುತ್ತಿರಲು, **ಪರೇಷಾಂ ಪೃತನಾಃ** = ಕೌರವರ ಸೈನ್ಯಗಳು, **ಮಾರುತಸೂನುನಾ ಏವ** = ಭೀಮಸೇನನಿಂದಲೇ, **ರಣೇ** = ಯುದ್ಧದಲ್ಲಿ, **ಪ್ರಾಯಃ** = ಬಹಳ, **ಹತಪ್ರವೀರಾಃ** = ಹತರಾದ ವೀರರುಳ್ಳವುಗಳಾಗಿ, **ಮೃದಿತಾಃ** = ಪೀಡಿಸಲ್ಪಟ್ಟವುಗಳಾಗಿ, **ಪರಾದ್ರವನ್** = ಓಡಿಹೋದವು.

**ತಾತ್ಪರ್ಯ** :- ದ್ರೋಣನಿಂದ ಪಾಂಡವರ ಸೈನ್ಯವು ನಾಶವಾಗುತ್ತಿದ್ದಾಗ ಕೌರವರ ಸೇನೆಯ ಮಹಾವೀರರು ಪ್ರಾಯಃ ಯುದ್ಧದಲ್ಲಿ ಭೀಮನಿಂದ ಹತರಾದರು. ಕೌರವರ ಸೇನೆಗಳು ಸೋತು ಓಡಿಹೋದವು.

**ಅಲಂಬುಷೋ ನಾಮ ತದೈವ ರಾಕ್ಷಸಃ**
**ಸಮಾಸದನ್ಮಾರುತಿಮುಗ್ರಪೌರುಷಮ್ ।**
**ಸ ಪೀಡಿತಸ್ತೇನ ಶರೈಃ ಸುತೇಜನೈಃ**
**ಕ್ಷಣಾದದೃಶ್ಯತ್ವಮವಾಪ ಮಾಯಯಾ ॥ ೮೨ ॥**

**ಅರ್ಥ** :- **ತದೈವ** = ಆಗಲೇನೇ, **ಅಲಂಬುಷೋ ನಾಮ** = ಅಲಂಬುಸನೆಂದು ಪ್ರಸಿದ್ಧನಾದ, **ರಾಕ್ಷಸಃ** = ರಾಕ್ಷಸನು, **ಉಗ್ರಪೌರುಷಂ** = ಮಹಾಪೌರುಷಶಾಲಿಯಾದ, **ಮಾರುತಿಂ** = ಭೀಮನನ್ನು, **ಸಮಾಸದತ್** = ಎದುರಿಸಿದನು, **ಸುತೇಜನೈಃ** = ಒಳ್ಳೆಯ ತೀಕ್ಷ್ಣವಾದ, **ಶರೈಃ** = ಬಾಣಗಳಿಂದ, **ತೇನ** = ಆ ಭೀಮನಿಂದ, **ಪೀಡಿತಃ ಸಃ** = ಪೀಡಿತನಾದ ಅವನು, **ಕ್ಷಣಾತ್** = ಒಂದು ಕ್ಷಣದಲ್ಲಿ, **ಮಾಯಯಾ** = ಮಾಯೆಯಿಂದ, **ಅದೃಶ್ಯತ್ವಂ ಅವಾಪ** = ಅದೃಶ್ಯನಾದನು.

**ತಾತ್ಪರ್ಯ** :- ಆಗಲೇನೇ ಅಲಂಬುಸನೆಂಬ ರಾಕ್ಷಸ ಮಹಾಪೌರುಷ ಶಾಲಿಯಾದ ಭೀಮನನ್ನು ಎದುರಿಸಿದನು. ಭೀಮ ಒಳ್ಳೆಯ ತೀಕ್ಷ್ಣವಾದ ತನ್ನ ಬಾಣಗಳಿಂದ ಪೀಡಿಸಿದನು. ಪೀಡಿತನಾದ ಅಲಂಬುಸ ಕ್ಷಣದಲ್ಲಿ ಮಾಯಾಶಕ್ತಿಯಿಂದ ಅದೃಶ್ಯನಾದನು.

**ಸೋಽದೃಶ್ಯರೂಪೋಽನುಚರಾನಪೀಡಯದ್**
**ಭೀಮಸ್ಯ ತದ್ ವೀಕ್ಷ್ಯ ಚುಕೋಪ ಮಾರುತಿಃ ।**
**ಅಸ್ತ್ರಜ್ಞತಾಮಾತ್ಮನಿ ಕೇಶವಾಜ್ಞಯಾ**
**ಸಂದರ್ಶಯನ್ನಾಗತಧರ್ಮಸಂಕಟಃ ॥ ೮೩ ॥**

**ತ್ವಾಷ್ಟ್ರಾಸ್ತ್ರಮಾದತ್ತ ಸ ಕಾಮ್ಯಕರ್ಮ-**
**ಹೀನೋಽಪಿ ಭೀಮಸ್ತತ ಉತ್ಥಿತಾಃ ಶರಾಃ ।**
**ತೇ ಬಾಣವರ್ಯಾಸ್ತದದೃಶ್ಯವೇಧಿನೋ**
**ರಕ್ಷೋ ವಿದಾರ್ಯಾಽವಿವಿಶುರ್ಧರಾತಳಮ್ ॥ ೮೪ ॥**

**ಅರ್ಥ** :- **ಸಃ** = ಆ ಅಲಂಬುಸನು, **ಅದೃಶ್ಯರೂಪಃ** = ಅದೃಶ್ಯರೂಪನಾಗಿ, **ಭೀಮಸ್ಯ** = ಭೀಮನ, **ಅನುಚರಾನ್** = ಅನುಚರರನ್ನು, **ಅಪೀಡಯತ್** = ಪೀಡಿಸಿದನು, **ತತ್** = ಅದನ್ನು, **ವೀಕ್ಷ್ಯ** = ನೋಡಿ, **ಮಾರುತಿಃ** = ಭೀಮನು, **ಚುಕೋಪ** = ಕುಪಿತನಾದನು, **ಆಗತಧರ್ಮಸಂಕಟಃ** = ಹೊಂದಿದ ಧರ್ಮ ಸಂಕಟವುಳ್ಳ, **ಸಃ ಭೀಮಃ** = ಆ ಭೀಮನು, **ಕಾಮ್ಯಕರ್ಮಹೀನೋऽಪಿ** = ಕಾಮ್ಯಕರ್ಮ ಮಾಡದೆ ಇದ್ದವನಾದರೂ, **ಕೇಶವಾಜ್ಞಯಾ** = ಭಗವಂತನ ಇಚ್ಛೆಯಿಂದ, **ಆತ್ಮನಿ** = ತನ್ನಲ್ಲಿ, **ಅಸ್ತ್ರಜ್ಞತಾಂ** = ಅಸ್ತ್ರಜ್ಞತ್ವವನ್ನು, **ಸಂದರ್ಶಯನ್** = ತೋರಿಸುತ್ತಾ, **ತ್ವಾಷ್ಟ್ರಾಸ್ತ್ರಮ್** = ತ್ವಾಷ್ಟ್ರಾಸ್ತ್ರವನ್ನು, **ಆದತ್ತ** = ತೆಗೆದುಕೊಂಡನು, **ತತಃ** = ಆ ಅಸ್ತ್ರದಿಂದ, **ಶರಾಃ** = ಬಾಣಗಳು, **ಉತ್ಥಿತಾಃ** = ಎದ್ದವು, **ತೇ ಬಾಣವರ್ಯಾಃ** = ಆ ಶ್ರೇಷ್ಠ ಬಾಣಗಳು, **ಅದೃಶ್ಯವೇಧಿನಃ** = ಅದೃಶ್ಯವಾಗಿ ಹಿಂಸಿಸುತ್ತಾ, **ತದ್ ರಕ್ಷಃ** = ರಾಕ್ಷಸನಾದ, ಅಲಂಬುಸನನ್ನು, **ವಿದಾರ್ಯ** = ಸೀಳಿಹಾಕಿ, **ಧರಾತಳಂ** = ಭೂತಲವನ್ನು, **ಆವಿವಿಶುಃ** = ಪ್ರವೇಶಿಸಿದವು.

**ತಾತ್ಪರ್ಯ** :- ಅಲಂಬುಸ ಅದೃಶ್ಯನಾಗಿ ಭೀಮನ ಅನುಚರರನ್ನು ಪೀಡಿಸಿದ. ಅದನ್ನು ನೋಡಿ ಭೀಮ ಕೋಪಗೊಂಡನು. ಅವನಿಗೆ ಧರ್ಮಸಂಕಟ ಬಂದಿತು. ಅವನು ಕಾಮ್ಯಕರ್ಮ ಮಾಡದೇ ಇದ್ದರೂ ಕೃಷ್ಣನ ಇಚ್ಛೆಯಿಂದ ತನ್ನಲ್ಲಿರುವ ಅಸ್ತ್ರಜ್ಞಾನವನ್ನು ತೋರಿಸುವುದಕ್ಕಾಗಿ ತ್ವಾಷ್ಟ್ರಾಸ್ತ್ರವನ್ನು ತೆಗೆದುಕೊಂಡನು. ಆ ಅಸ್ತ್ರದಿಂದ ಬಾಣಗಳು ಹೊರಬಂದವು. ಆ ಬಾಣಗಳು ಅದೃಶ್ಯವಾಗಿದ್ದು ಆ ಅಲಂಬುಸನನ್ನು ಹಿಂಸಿಸುತ್ತಾ ಅವನನ್ನು ಸೀಳಿಹಾಕಿ ಭೂತಲವನ್ನು ಪ್ರವೇಶಿಸಿದವು.

**ತದ್ಧನ್ಯಮಾನಂ ಪ್ರವಿಹಾಯ ಭೀಮ-**
**ಮಪಾದ್ರವದ್ ದೂರತರಂ ಸುಭೀತಮ್ ।**
**ತತಸ್ತು ಭೀಮೋ ದ್ವಿಷತಾಂ ವರೂಥಿನೀಂ**
**ವಿದ್ರಾವಯಾಮಾಸ ಶರೈಃ ಸುಮುಕ್ತೈಃ ॥ ೮೫ ॥**

**ಅರ್ಥ** :- **ತದ್ಧನ್ಯಮಾನಂ** = ಅವನಿಂದ ಹೊಡೆಯಲ್ಪಟ್ಟ, **ತತ್** = ಆ ರಾಕ್ಷಸನು, **ಸುಭೀತಂ** = ಬಹಳ ಭೀತನಾಗಿ, **ಭೀಮಂ** = ಭೀಮನನ್ನು, **ಪ್ರವಿಹಾಯ** = ಬಿಟ್ಟು, **ದೂರತರಂ** = ಬಹಳ ದೂರಕ್ಕೆ, **ಅಪಾದ್ರವತ್** =

ಓಡಿ ಹೋದನು, **ತತಃ** = ಅನಂತರ, **ಭೀಮಃ** = ಭೀಮನು, **ಸುಮುಕ್ತೈಃ** = ಚೆನ್ನಾಗಿ ಪ್ರಯೋಗ ಮಾಡಲ್ಪಟ್ಟ, **ಶರೈಃ** = ಬಾಣಗಳಿಂದ, **ದ್ವಿಷತಾಂ** = ಶತ್ರುಗಳ, **ವರೂಥಿನೀಂ** = ಸೈನ್ಯವನ್ನು, **ವಿದ್ರಾವಯಾಮಾಸ** = ಓಡಿಸಿದನು.

**ತಾತ್ಪರ್ಯ** :- ಭೀಮ ತ್ವಾಷ್ಟ್ರಾಸ್ತ್ರದಿಂದ ಬಹಳ ಬಾಣಗಳಿಂದ ಹೊಡೆಯುತ್ತಿದ್ದ. ಆಗ ಅಲಂಬುಸ ಬಹಳ ಭಯಗೊಂಡು ಭೀಮನಿಂದ ಬಹಳ ದೂರಕ್ಕೆ ಓಡಿಹೋದ. ಅನಂತರ ಭೀಮ ಚೆನ್ನಾಗಿ ಬಾಣಪ್ರಯೋಗ ಮಾಡಿ ಶತ್ರು ಸೈನ್ಯವನ್ನು ಓಡಿಸಿದನು.

**ತದೈವ ಕೃಷ್ಣಾತನಯಾಃ ಸಮೇತಾ**
**ಜಘ್ನುಃ ಶಲಂ ಸಂಯತಿ ಸೌಮದತ್ತಿಮ್ ।**
**ಅಲಂಬುಸಂ ಪ್ರಾಪ ತದಾ ಘಟೋತ್ಕಚಃ**
**ಪರಸ್ಪರಂ ತೌ ರಥಿನಾವಯುಧ್ಯತಾಮ್ ॥ ೮೬ ॥**

**ಅರ್ಥ** :- **ತದೈವ** = ಆಗಲೇನೆ, **ಕೃಷ್ಣಾತನಯಾಃ ಸಮೇತಾಃ** = ದ್ರೌಪದಿಯ ಮಕ್ಕಳು ಎಲ್ಲರೂ ಕೂಡಿಕೊಂಡು, **ಸಂಯತಿ** = ಯುದ್ಧದಲ್ಲಿ, **ಸೌಮದತ್ತಿಮ್** = ಸೋಮದತ್ತನ ಮಗನಾದ, **ಶಲಂ** = ಶಲನನ್ನು, **ಜಘ್ನುಃ** = ಕೊಂದರು, **ತದಾ** = ಆವಾಗ, **ಘಟೋತ್ಕಚಃ** = ಘಟೋತ್ಕಚನು, **ಅಲಂಬುಸಂ** = ಅಲಂಬುಸನನ್ನು, **ಪ್ರಾಪ** = ಹೊಂದಿದನು, **ರಥಿನೌ ತೌ** = ರಥದಲ್ಲಿ ಇದ್ದಂತಹ ಅವರಿಬ್ಬರು, **ಪರಸ್ಪರಂ** = ಪರಸ್ಪರ, **ಅಯುದ್ಧ್ಯತಾಮ್** = ಯುದ್ಧ ಮಾಡಿದರು.

**ತಾತ್ಪರ್ಯ** :- ಆಗ ದ್ರೌಪದಿಯ ಮಕ್ಕಳು ಯುದ್ಧದಲ್ಲಿ ಸೋಮದತ್ತನ ಮಗನಾದ ಶಲನನ್ನು ಕೊಂದರು. ಆಗಲೇನೇ ಘಟೋತ್ಕಚ ಅಲಂಬುಸನನ್ನು ಎದುರಿಸಿದ. ರಥಸ್ಥರಾದ ಅವರಿಬ್ಬರು ಪರಸ್ಪರ ಯುದ್ಧ ಮಾಡಿದರು.

**ಘಟೋತ್ಕಚಸ್ತಂ ವಿರಥಂ ವಿಧಾಯ**
**ಖಸ್ಥಂ ಖ ಏವಾಭಿಯುಯೋಧ ಸಂಸ್ಥಿತಃ ।**
**ತತಸ್ತು ತಂ ಭೀಮಸುತೋ ನಿಗೃಹ್ಯ**
**ನಿಪಾತ್ಯ ಭೂಮೌ ಪ್ರದದೌ ಪ್ರಹಾರಮ್ ॥ ೮೭ ॥**

**ಪದಾ ಶಿರಸ್ಯೇವ ಸ ಪಿಷ್ಟಮಸ್ತಕೋ**
**ಮಮಾರ ಮಧ್ಯೇ ಪೃಥಿವೀಪತೀನಾಮ್ ।**
**ತಸ್ಮಿನ್ ಹತೇ ಭೈಮಸೇನಿಃ ಕುರೂಣಾಂ**
**ವ್ಯದ್ರಾವಯದ್ ರಥವೃಂದಂ ಸಮಂತಾತ್ ॥ ೮೮ ॥**

**ಅರ್ಥ** :- **ಘಟೋತ್ಕಚಃ** = ಘಟೋತ್ಕಚನು, **ತಂ** = ಆ ಅಲಂಬುಸನನನ್ನು, **ವಿರಥಂ** = ರಥರಹಿತನನ್ನಾಗಿ, **ವಿಧಾಯ** = ಮಾಡಿ, **ಖಸ್ಥಂ** = ಆಕಾಶದಲ್ಲಿ ಇದ್ದ ಅವನ ಜೊತೆ, **ಖೇ ಏವ ಸಂಸ್ಥಿತಃ** = ಆಕಾಶದಲ್ಲೇ ಇದ್ದವನಾಗಿ, **ಅಭಿಯುಯೋಧ** = ಯುದ್ಧ ಮಾಡಿದನು, **ತತಸ್ತು** = ಅನಂತರವಾದರೂ, **ತಂ** = ಆ ಅಲಂಬುಸನನ್ನು, **ನಿಗೃಹ್ಯ** = ಪರಾಭವಗೊಳಿಸಿ, **ಭೀಮಸುತಃ** = ಘಟೋತ್ಕಚನು, **ಭೂಮೌ ನಿಪಾತ್ಯ** = ನೆಲದ ಮೇಲೆ ಕೆಡವಿ, **ಪದಾ** = ಕಾಲಿನಿಂದ, **ಶಿರಸ್ಯೇವ** = ತಲೆಯ ಮೇಲೆ, **ಪ್ರಹಾರಂ** = ಪ್ರಹಾರವನ್ನು, **ಪ್ರದದೌ** = ಕೊಟ್ಟನು, **ಪಿಷ್ಟಮಸ್ತಕಃ** = ಪುಡಿಯಾದ ತಲೆಯುಳ್ಳ, **ಸಃ** = ಅವನು, **ಮಮಾರ** = ಸತ್ತನು, **ಪೃಥಿವೀ ಪತೀನಾಂ ಮಧ್ಯೇ** = ರಾಜರ ಮಧ್ಯದಲ್ಲಿ, **ತಸ್ಮಿನ್** = ಆ ಅಲಂಬುಸನು, **ಹತೇ** = ಹತನಾಗುತ್ತಿರಲು, **ಭೈಮಸೇನಿಃ** = ಘಟೋತ್ಕಚನು, **ಕುರೂಣಾಂ** = ಕೌರವರ, **ರಥವೃಂದಂ** = ರಥಸಮೂಹವನ್ನು, **ಸಮಂತಾತ್** = ಎಲ್ಲಾ ಕಡೆಗೆ, **ವ್ಯದ್ರಾವಯತ್** = ಓಡಿಸಿದನು.

**ತಾತ್ಪರ್ಯ** :- ಘಟೋತ್ಕಚನು ಅಲಂಬುಸನನ್ನು ರಥರಹಿತನನ್ನಾಗಿ ಮಾಡಿ ಆ ರಾಕ್ಷಸ ಆಕಾಶದಲ್ಲಿ ನಿಂತಾಗ ಘಟೋತ್ಕಚನು ಆಕಾಶದಲ್ಲಿ ನಿಂತೇ ಯುದ್ಧ ಮಾಡಿದ. ಅನಂತರ ಅವನನ್ನು ಸೋಲಿಸಿ ನೆಲದ ಮೇಲೆ ಕೆಡವಿ ತಲೆಗೆ ಪಾದದಿಂದ ಪ್ರಹಾರ ನೀಡಿದನು. ಅವನ ತಲೆ ಪುಡಿಯಾಯಿತು. ಅಲಂಬುಸ ಸತ್ತ. ರಾಜರುಗಳ ನಡುವೆ ಅಲಂಬುಸ ಸತ್ತಾಗ ಘಟೋತ್ಕಚ ಕೌರವರ ರಥಸಮೂಹವನ್ನು ಎಲ್ಲಾಕಡೆಗೆ ಓಡಿಸಿದನು.

**ತದಾಽಽಸದತ್ ಕೃತವರ್ಮಾ ರಥೇನ**
**ಸೇನಾಂ ಪಾಂಡೂನಾಂ ಶರವರ್ಷಂ ಪ್ರಮುಂಚನ್ ।**
**ದದೌ ವರಂ ತಸ್ಯ ಹಿ ಪೂರ್ವಮಚ್ಯುತಃ**
**ಪ್ರೀತಃ ಸ್ತುತ್ಯಾ ಸರ್ವಜಯಂ ಮುಹೂರ್ತೇ ॥ ೮೯ ॥**

**ಅರ್ಥ** :- **ತದಾ** = ಆಗ, **ಕೃತವರ್ಮಾ** = ಕೃತವರ್ಮನು, **ಶರವರ್ಷಂ** = ಬಾಣದ ಮಳೆಯನ್ನು, **ಪ್ರಮುಂಚನ್** = ಸುರಿಸುತ್ತಾ, **ರಥೇನ** = ರಥದಿಂದ, **ಪಾಂಡೂನಾಂ** = ಪಾಂಡವರ, **ಸೇನಾಂ** = ಸೈನ್ಯವನ್ನು, **ಆಸದತ್** = ಎದುರಿಸಿದನು, **ಪೂರ್ವಂ** = ಹಿಂದೆ, **ತಸ್ಯ** = ಆ ಕೃತವರ್ಮನ, **ಸ್ತುತ್ಯಾ** = ಸ್ತೋತ್ರದಿಂದ, **ಪ್ರೀತಃ** = ಪ್ರೀತನಾದ, **ಅಚ್ಯುತಃ** = ಕೃಷ್ಣನು, **ಮೂಹೂರ್ತೇ** = ಒಂದು ಕ್ಷಣಕಾಲ, **ಸರ್ವಜಯಂ** = ಎಲ್ಲರನ್ನು ಜಯಿಸುವ, **ವರಂ** = ವರವನ್ನು, **ದದೌ ಹಿ** = ಕೊಟ್ಟಿದ್ದನಷ್ಟೆ.

**ತಾತ್ಪರ್ಯ** :- ಆವಾಗ ಕೃತವರ್ಮ ಬಾಣಗಳ ಮಳೆ ಸುರಿಸುತ್ತಾ ರಥದಿಂದ ಪಾಂಡವರ ಸೈನ್ಯವನ್ನು ಎದುರಿಸಿದನು. ಹಿಂದೆ ಕೃತವರ್ಮನ ಸ್ತೋತ್ರದಿಂದ ಮೆಚ್ಚಿದ ಶ್ರೀ ಕೃಷ್ಣ ಒಂದು ಕ್ಷಣಕಾಲ ಎಲ್ಲರನ್ನೂ ಗೆಲ್ಲುವ ವರವನ್ನು ಕೊಟ್ಟಿದ್ದನು.

**ಸ ತೇನ ಪಾಂಚಾಲಗಣಾನ್ ವಿಜಿಗ್ಯೇ**
**ಯಮೌ ಚ ಭೀಮಸ್ಯ ಪುರೋಽಥ ತಂ ಚ ।**
**ವಿವ್ಯಾಧ ಬಾಣೇನ ಸ ವಾಸುದೇವ-**
**ವರಂ ವಿಜಾನನ್ ನ ತದಾ ಸಮಭ್ಯಯಾತ್ ॥ ೯೦ ॥**

**ಅರ್ಥ** :- **ತೇನ** = ಆ ವರದಿಂದ, **ಸಃ** = ಆ ಕೃತವರ್ಮನು, **ಭೀಮಸ್ಯ ಪುರಃ** = ಭೀಮನ ಎದುರಿನಲ್ಲಿ, **ಪಾಂಚಾಲಗಣಾನ್** = ಪಾಂಚಾಲ ಸೇನೆಗಳನ್ನು, **ಯಮೌಚ** = ನಕುಲ ಸಹದೇವರನ್ನೂ ಕೂಡ, **ವಿಜಿಗ್ಯೇ** = ಗೆದ್ದನು, **ಅಥ** = ಅನಂತರ, **ತಂ ಚ** = ಆ ಭೀಮನನ್ನು, **ಬಾಣೇನ** = ಬಾಣದಿಂದ, **ವಿವ್ಯಾಧ** = ಹೊಡೆದನು, **ಸಃ** = ಆ ಭೀಮನು, **ವಾಸುದೇವವರಂ** = ಕೃಷ್ಣನ ವರವನ್ನು, **ವಿಜಾನನ್** = ತಿಳಿದವನಾಗಿ, **ತದಾ** = ಆವಾಗ, **ನ ಸಮಭ್ಯಯಾತ್** = ಎದುರಿಸಲಿಲ್ಲ.

**ತಾತ್ಪರ್ಯ** :- ವರವಿದ್ದದ್ದರಿಂದ ಕೃತವರ್ಮ ಭೀಮನ ಎದುರಿನಲ್ಲೇ ಪಾಂಚಾಲ ಸೇನೆಯನ್ನು ಸೋಲಿಸಿದ. ನಕುಲ ಸಹದೇವರನ್ನೂ ಸೋಲಿಸಿದ. ಅನಂತರ ಭೀಮನನ್ನೂ ಬಾಣಗಳಿಂದ ಹೊಡೆದನು. ಶ್ರೀಕೃಷ್ಣನ ವರ ತಿಳಿದ ಭೀಮ ಆಗ ಕೃತವರ್ಮನನ್ನು ಎದುರಿಸಲಿಲ್ಲ.

**ವಿನೈವ ವೃಷ್ಣೀನ್ ವಿಜಯೇ ವರೋ ಯ-**
**ದಮುಷ್ಯ ತೇನಾಸ್ಯ ಹಯಾನ್ ಸ ಸಾತ್ಯಕಿಃ ।**
**ನಿಹತ್ಯ ಬಾಣೈರತುದತ್ ಸ ಯಾನ-**
**ಮನ್ಯತ್ ಸಮಾಸ್ಥಾಯ ತತೋಽಪಜಗ್ಮಿವಾನ್ ॥ ೯೧ ॥**

**ಅರ್ಥ :- ವೃಷ್ಣೀನ್ ವಿನಾ** = ಯಾದವರನ್ನು ಹೊರತುಪಡಿಸಿ, **ವಿಜಯೇ** = ಜಯಗಳಿಸುವ ವಿಷಯದಲ್ಲಿ, **ಯತ್** = ಯಾವ ಕಾರಣದಿಂದ, **ಅಮುಷ್ಯ** = ಈ ಕೃತವರ್ಮನಿಗೆ, **ವರಃ (ಆಸೀತ್)** = ವರವಿತ್ತೋ, **ತೇನ** = ಆ ಕಾರಣದಿಂದ, **ಅಸ್ಯ** = ಈ ಕೃತವರ್ಮನ, **ಹಯಾನ್** = ಕುದುರೆಗಳನ್ನು, **ಸಃ ಸಾತ್ಯಕಿಃ** = ಆ ಸಾತ್ಯಕಿಯು, **ನಿಹತ್ಯ** = ಕೊಂದು, **ಬಾಣೈಃ** = ಬಾಣಗಳಿಂದ, **ಅತುದತ್** = ಪೀಡಿಸಿದನು, **ಸಃ** = ಆ ಕೃತವರ್ಮನು, **ಅನ್ಯತ್ ಯಾನಂ** = ಬೇರೆ ವಾಹನವನ್ನು, **ಸಮಾಸ್ಥಾಯ** = ಏರಿ, **ತತಃ** = ಅಲ್ಲಿಂದ, **ಅಪಜಗ್ಮಿವಾನ್** = ಹೊರಟುಹೋದನು.

**ತಾತ್ಪರ್ಯ :-** ಯಾದವರನ್ನು ಹೊರತುಪಡಿಸಿ ಜಯಗಳಿಸುವ ವಿಷಯದಲ್ಲಿ ಕೃತವರ್ಮನಿಗೆ ಕೃಷ್ಣನ ವರವಿದ್ದುದರಿಂದ ಸಾತ್ಯಕಿ ಕೃತವರ್ಮನ ಕುದುರೆಗಳನ್ನು ಕೊಂದು ಅವನನ್ನು ಬಾಣಗಳಿಂದ ಪೀಡಿಸಿದನು. ಕೃತವರ್ಮ ಬೇರೆ ರಥವನ್ನೇರಿ ಅಲ್ಲಿಂದ ಹೊರಟುಹೋದ.

**ತದಾ ಹರಿಃ ಪಾಂಚಜನ್ಯಂ ಸುಘೋಷ-**
**ಮಾಪೂರಯಾಮಾಸ ಜಯೇಽಭಿಯುಧ್ಯತಿ ।**
**ಕರ್ಣಾದಿಭಿರ್ದ್ರೌಣಿಮುಖ್ಯೈ ರಿಪೂಣಾಂ**
**ಬಲಪ್ರಹಾಣಾಯ ಪರಃ ಪರೇಭ್ಯಃ ॥ ೯೨ ॥**

**ಅರ್ಥ :- ಕರ್ಣಾದಿಭಿಃ** = ಕರ್ಣ ಮೊದಲಾದವರೊಡನೆ, **ದ್ರೌಣಿ ಮುಖ್ಯೈಃ** = ಅಶ್ವತ್ಥಾಮ ಮೊದಲಾದವರೊಡನೆ, **ಜಯೇ** = ಅರ್ಜುನನು, **ಅಭಿಯುಧ್ಯತಿ** = ಯುದ್ಧಮಾಡುತ್ತಿರಲು, **ಪರೇಭ್ಯಃ ಪರಃ** = ಉತ್ತಮರಿಗೂ ಉತ್ತಮನಾದ, **ಹರಿಃ** = ಶ್ರೀಕೃಷ್ಣನು, **ರಿಪೂಣಾಂ** = ಶತ್ರುಗಳ, **ಬಲಪ್ರಹಾಣಾಯ** = ಬಲಕುಂದಿಸುವುದಕ್ಕೋಸ್ಕರ, **ಸುಘೋಷಂ** = ಒಳ್ಳೆಯ ಧ್ವನಿಯುಳ್ಳ, **ಪಾಂಚಜನ್ಯಂ** = ಪಾಂಚಜನ್ಯಶಂಖವನ್ನು, **ಆಪೂರಯಾಮಾಸ** = ಊದಿದನು.

**ತಾತ್ಪರ್ಯ** :- ಕರ್ಣ ಮೊದಲಾದವರೊಡನೆ ಮತ್ತು ಅಶ್ವತ್ಥಾಮ ಮೊದಲಾದವರೊಡನೆ ಅರ್ಜುನ ಯುದ್ಧಮಾಡುತ್ತಿದ್ದಾಗ ಸರ್ವೋತ್ತಮನಾದ ಶ್ರೀಕೃಷ್ಣ ಶತ್ರುಗಳ ಬಲ ಕುಂದಿಸುವುದಕ್ಕೋಸ್ಕರ ಉತ್ತಮ ಧ್ವನಿಯುಳ್ಳ ಪಾಂಚಜನ್ಯ ಶಂಖವನ್ನು ಊದಿದನು.

**ಸ ಪಾಂಚಜನ್ಯೋಽಚ್ಯುತವಕ್ತ್ರವಾಯುನಾ**
**ಭೃಶಂ ಸುಪೂರ್ಣೋದರನಿಸ್ಸೃತಧ್ವನಿಃ ।**
**ಜಗದ್ ವಿರಿಂಚೇಶಸುರೇಂದ್ರಪೂರ್ವಕಂ**
**ಪ್ರಕಂಪಯಾಮಾಸ ಯುಗಾತ್ಯಯೇ ಯಥಾ ॥ ೯೩ ॥**

**ಅರ್ಥ** :- **ಸಃ ಪಾಂಚಜನ್ಯಃ** = ಆ ಪಾಂಚಜನ್ಯ ಶಂಖವು, **ಅಚ್ಯುತವಕ್ತ್ರವಾಯುನಾ** = ಕೃಷ್ಣನ ಬಾಯಿಯ ಗಾಳಿಯಿಂದ, **ಭೃಶಂ** = ಚೆನ್ನಾಗಿ, **ಸುಪೂರ್ಣೋದರನಿಸ್ಸೃತಧ್ವನಿಃ** = ತುಂಬಿದ ಒಳಭಾಗದಿಂದ ಹೊರಹೊಮ್ಮಿದ ಧ್ವನಿಯುಳ್ಳದ್ದಾಗಿ, **ಯುಗಾತ್ಯಯೇ ಯಥಾ** = ಪ್ರಲಯಕಾಲದಲ್ಲಿ ಹೇಗೋ ಹಾಗೆ, **ವಿರಿಂಚೇಶಸುರೇಂದ್ರಪೂರ್ವಕಂ** = ಬ್ರಹ್ಮ ರುದ್ರ ಇಂದ್ರಾದಿಗಳೇ ಮೊದಲಾಗಿ ಉಳ್ಳ, **ಜಗತ್** = ಲೋಕವನ್ನು, **ಪ್ರಕಂಪಯಾಮಾಸ** = ನಡುಗಿಸಿತು.

**ತಾತ್ಪರ್ಯ** :- ಆ ಪಾಂಚಜನ್ಯಶಂಖವು ಶ್ರೀ ಕೃಷ್ಣನ ಬಾಯಿಯ ಗಾಳಿಯಿಂದ ತುಂಬಿಕೊಂಡಾಗ ಜೋರಾಗಿ ಧ್ವನಿ ಹೊರಡಿಸಿತು. ಪ್ರಲಯಕಾಲದಲ್ಲಿ ಹೇಗೋ ಹಾಗೆ ಬ್ರಹ್ಮ ರುದ್ರ ಇಂದ್ರಾದಿ ಲೋಕವನ್ನು ನಡುಗಿಸಿತು.

**ಗಾಂಡೀವಘೋಷೇ ಚ ತದಾಽಭಿಭೂತೇ**
**ಯುಧಿಷ್ಠಿರೋ ಭೀತಭೀತಸ್ತದೇತ್ಯ ।**
**ಶೈನೇಯಮೂಚೇ ಪರಸೈನ್ಯಮಗ್ನೇ**
**ಪಾರ್ಥೇ ಸ್ವಯಂ ಯುಧ್ಯತಿ ಕೇಶವಃ ಸ್ಮ ॥ ೯೪ ॥**

**ಅರ್ಥ** :- **ತದಾ** = ಆಗ, **ಗಾಂಡೀವಘೋಷೇ** = ಗಾಂಡೀವದ ಧ್ವನಿಯು, **ಅಭಿಭೂತೇ** = ಕೇಳದಿರುತ್ತಿರಲು, **ಯುಧಿಷ್ಠಿರಃ** = ಧರ್ಮರಾಜನು, **ಭೀತಭೀತಃ** = ಬಹಳ ಭಯಗೊಂಡವನಾಗಿ, **ತದಾ** =

ಆವಾಗ, **ಶೈನೇಯಂ ಏತ್ಯ** = ಸಾತ್ಯಕಿಯನ್ನು ಹೊಂದಿ, **ಊಚೇ** = ಹೇಳಿದನು, **ಪಾರ್ಥೇ** = ಅರ್ಜುನನು, **ಪರಸೈನ್ಯಮಗ್ನೇ** = ಶತ್ರುಸೈನ್ಯದಲ್ಲಿ ಮುಳುಗಿ ಹೋಗುತ್ತಿರಲು, **ಸ್ವಯಂ** = ತಾನೇ, **ಕೇಶವಃ** = ಕೃಷ್ಣನು, **ಯುದ್ಧ್ಯತಿ ಸ್ಮ** = ಯುದ್ಧ ಮಾಡುತ್ತಿರುವನೇ ?

**ತಾತ್ಪರ್ಯ** :- ಆಗ ಗಾಂಡೀವಧ್ವನಿ ಕೇಳಿಸದೇ ಇರಲು ಧರ್ಮರಾಜ ಬಹಳ ಭಯಗೊಂಡವನಾಗಿ ಸಾತ್ಯಕಿಯ ಬಳಿ ಹೋಗಿ ಅರ್ಜುನನು ಶತ್ರುಸೈನ್ಯದಲ್ಲಿ ಮುಳುಗುತ್ತಿರಲು ಕೃಷ್ಣ ತಾನೆ ಯುದ್ಧ ಮಾಡುತ್ತಿರುವನೆ ಎಂದು ವಿಚಾರಿಸಿದನು.

**ನ ಶ್ರೂಯತೇ ಗಾಂಡಿವಸ್ಯಾದ್ಯ ಘೋಷಃ**
**ಸಂಶ್ರೂಯತೇ ಪಾಂಚಜನ್ಯಸ್ಯ ಘೋಷಃ ।**
**ತದ್ ಯಾಹಿ ಜಾನೀಹಿ ತಮದ್ಯ ಪಾರ್ಥಂ**
**ಯದಿ ಸ್ಮ ಜೀವತ್ಯಸಹಾಯ ಏಷಃ ॥ ೯೫ ॥**

**ಅರ್ಥ** :- **ಅದ್ಯ** = ಈಗ, **ಗಾಂಡಿವಸ್ಯ ಘೋಷಃ** = ಗಾಂಡೀವದ ಶಬ್ದವು, **ನ ಶ್ರೂಯತೇ** = ಕೇಳಲ್ಪಡುತ್ತಿಲ್ಲ, **ಪಾಂಚಜನ್ಯಸ್ಯ** = ಪಾಂಚಜನ್ಯಶಂಖದ, **ಘೋಷಃ** = ಶಬ್ದವು, **ಸಂಶ್ರೂಯತೇ** = ಕೇಳಲ್ಪಡುತ್ತಿದೆ, **ಪಾರ್ಥಂ** = ಅರ್ಜುನನನ್ನು ಕುರಿತು, **ಯಾಹಿ** = ಹೋಗು, **ಯದಿ** = ಒಂದುವೇಳೆ, **ಜೀವತಿ** = ಬದುಕಿದ್ದರೆ, **ಏಷಃ** = ಅರ್ಜುನನು, **ಅಸಹಾಯಃ** = ಅಸಹಾಯಕನಾಗಿದ್ದರೆ, **ತತ್** = ಅದನ್ನು, **ಜಾನೀಹಿ** = ತಿಳಿದುಕೋ.

**ತಾತ್ಪರ್ಯ** :- ಗಾಂಡೀವ ಧ್ವನಿ ಕೇಳಿಸುತ್ತಿಲ್ಲ. ಪಾಂಚಜನ್ಯ ಶಂಖದ ಧ್ವನಿ ಕೇಳಿಬರುತ್ತಿದೆ. ಆದ್ದರಿಂದ ನೀನು ಈಗ ಕೃಷ್ಣನ ಹತ್ತಿರಕ್ಕೆ ಹೋಗು. ಅರ್ಜುನನು ಬದುಕಿದ್ದಾನೋ ಇಲ್ಲವೋ ಎಂದು ತಿಳಿದುಕೋ ಬದುಕಿದ್ದರೆ ಅಸಹಾಯಕನಾಗಿದ್ದರೇ ನೀನು ಸಹಾಯಕನಾಗು.

**ಇತೀರಿತಃ ಸಾತ್ಯಕಿರತ್ರ ವಿಪ್ರಾನ್**
**ಸಂಪೂಜ್ಯ ವಿತ್ತೈಃ ಪರಮಾಶಿಷಶ್ಚ ।**
**ಜಯಾಯ ತೇಭ್ಯಃ ಪ್ರತಿಗೃಹ್ಯ ಸೇನಾ-**
**ಮುಖಂ ಯಯೌ ಭೀಮಸೇನಾನುಯಾತಃ ॥ ೯೬ ॥**

**ಅರ್ಥ** :- **ಇತಿ** = ಈ ರೀತಿಯಾಗಿ, **ಈರಿತಃ** = ಹೇಳಲ್ಪಟ್ಟ, **ಸಾತ್ಯಕಿಃ** = ಸಾತ್ಯಕಿಯು, **ವಿಪ್ರಾನ್** = ಬ್ರಾಹ್ಮಣರನ್ನು, **ವಿತ್ತೈಃ** = ದ್ರವ್ಯಗಳಿಂದ, **ಸಂಪೂಜ್ಯ** = ಸತ್ಕರಿಸಿ, **ಜಯಾಯ** = ಜಯಕ್ಕೋಸ್ಕರ, **ತೇಭ್ಯಃ** = ಆ ಬ್ರಾಹ್ಮಣರಿಂದ, **ಪರಮಾಶಿಷಶ್ಚ** = ಉತ್ತಮ ಆಶೀರ್ವಾದಗಳನ್ನು, **ಪ್ರತಿಗೃಹ್ಯ** = ಹೊಂದಿ, **ಭೀಮಸೇನಾನುಯಾತಃ** = ಭೀಮನಿಂದ ಹಿಂಬಾಲಿಸಲ್ಪಟ್ಟವನಾಗಿ, **ಸೇನಾಮುಖಂ** = ಸೈನ್ಯದ ದ್ವಾರಕ್ಕೆ, **ಯಯೌ** = ಹೋದನು.

**ತಾತ್ಪರ್ಯ** :- ಧರ್ಮರಾಜನಿಂದ ಹೀಗೆ ಹೇಳಲ್ಪಟ್ಟ ಸಾತ್ಯಕಿ ಬ್ರಾಹ್ಮಣರನ್ನು ದ್ರವ್ಯಗಳಿಂದ ಚೆನ್ನಾಗಿ ಸತ್ಕರಿಸಿ ಯುದ್ಧದಲ್ಲಿ ಜಯಪ್ರಾಪ್ತಿಗಾಗಿ ಆ ಬ್ರಾಹ್ಮಣರಿಂದ ಆಶೀರ್ವಾದಗಳನ್ನು ಪಡೆದು ಸೈನ್ಯದಕಡೆಗೆ ಹೋದ. ಅವನಿಗೆ ಯಾವುದೇ ತಡೆ ಆಗದಿರಲೆಂದು ಭೀಮ ಅವನನ್ನು ಅನುಸರಿಸಿದ.

**ಭೀಮಸ್ತು ಸೇನಾಮುಖಮಾಶು ಭಿತ್ತ್ವಾ**
**ಪ್ರಾವೇಶಯದ್ ಯುಯುಧಾನಂ ಚಮೂಂ ತಾಮ್ ।**
**ಸ ಯುಧ್ಯಮಾನೋ ಗುರುಣಾಽಭ್ಯುಪೇಕ್ಷಿತಃ**
**ಸೂತಂ ನಿಹತ್ಯ ದ್ರಾವಯಾಮಾಸ ಚಾಶ್ವಾನ್ ॥ ೯೭ ॥**

**ಅರ್ಥ** :- **ಭೀಮಸ್ತು** = ಭೀಮನಾದರೂ, **ಆಶು** = ಬೇಗನೆ, **ಸೇನಾಮುಖಂ** = ಸೈನ್ಯದ ದ್ವಾರವನ್ನು, **ಭಿತ್ವಾ** = ಭೇದಿಸಿ, **ಯುಯುಧಾನಂ** = ಸಾತ್ಯಕಿಯನ್ನು, **ತಾಂ ಚಮೂಂ** = ಆ ಸೈನ್ಯವನ್ನು, **ಪ್ರಾವೇಶಯತ್** = ಪ್ರವೇಶಮಾಡಿಸಿದನು, **ಸಃ** = ಅವನು, **ಯುದ್ಧ್ಯಮಾನಃ** = ಯುದ್ಧ ಮಾಡುವವನಾಗಿ, **ಗುರುಣಾ** = ದ್ರೋಣರಿಂದ, **ಅಭ್ಯುಪೇಕ್ಷಿತಃ** = ಉಪೇಕ್ಷಿತನಾಗಿ, **ಸೂತಂ** = ಸಾರಥಿಯನ್ನು, **ನಿಹತ್ಯ** = ಕೊಂದು, **ಅಶ್ವಾನ್ ಚ** = ಕುದುರೆಗಳನ್ನೂ ಕೂಡ, **ದ್ರಾವಯಾಮಾಸ** = ಓಡಿಸಿದನು.

**ತಾತ್ಪರ್ಯ** :- ಭೀಮ ಬೇಗ ಸೈನ್ಯದ ದ್ವಾರವನ್ನು ಭೇದಿಸಿ ಸಾತ್ಯಕಿಯನ್ನು ಸೈನ್ಯದೊಳಗೆ ಪ್ರವೇಶ ಮಾಡಿಸಿದನು. ಸಾತ್ಯಕಿ ದ್ರೋಣರೊಡನೆ ಯುದ್ಧ ಕೈಗೊಂಡನು. ದ್ರೋಣರು ಅವನನ್ನು ಉಪೇಕ್ಷೆ ಮಾಡಿದರು ಉಪೇಕ್ಷಿತನಾದ ಆ ಸಾತ್ಯಕಿ ದ್ರೋಣನ ರಥದ ಸಾರಥಿಯನ್ನು ಕೊಂದು ಕುದುರೆಗಳನ್ನು ಓಡಿಸಿದನು.

**ಬಲಂ ವಿವೃದ್ಧಂ ಚ ತದಾಽಸ್ಯ ಸಾತ್ಯಕೇ-**
**ರ್ವಿಪ್ರಾಶೀರ್ಭಿಃ ಕೃಷ್ಣವರಾದಪಿ ಸ್ಮ ।**
**ಬಲಸ್ಯ ವೃದ್ಧಿರ್ಹಿ ಪುರಾಽಸ್ಯ ದತ್ತಾ**
**ಕೃಷ್ಣೇನ ತುಷ್ಟೇನ ದಿನೇ ಹಿ ತಸ್ಮಿನ್ ॥ ೯೮ ॥**

**ಅರ್ಥ :-** **ತದಾ** = ಆಗ, **ಸಾತ್ಯಕೇಃ** = ಸಾತ್ಯಕಿಯ, **ಬಲಂ** = ಬಲವು, **ವಿಪ್ರಾಶೀರ್ಭಿಃ** = ಬ್ರಾಹ್ಮಣರ ಆಶೀರ್ವಾದದಿಂದಲೂ, **ಕೃಷ್ಣವರಾದಪಿ** = ಕೃಷ್ಣನ ವರದಿಂದಲೂ ಕೂಡ, **ವಿವೃದ್ಧಂ** = ವೃದ್ಧಿ ಹೊಂದಿತ್ತು, **ತಸ್ಮಿನ್ ದಿನೇ** = ಆ ದಿನದಲ್ಲಿ, **ಅಸ್ಯ** = ಇವನಿಗೆ, **ಪುರಾ** = ಹಿಂದೆ, **ತುಷ್ಟೇನ** = ಸಂತೋಷಗೊಂಡ, **ಕೃಷ್ಣೇನ** = ಕೃಷ್ಣನಿಂದ, **ಬಲಸ್ಯ ವೃದ್ಧಿಃ** = ಬಲದ ವೃದ್ಧಿಯು, **ದತ್ತಾ** = ವರವಾಗಿ ಕೊಡಲ್ಪಟ್ಟಿತ್ತು.

**ತಾತ್ಪರ್ಯ :-** ಆಗ ಸಾತ್ಯಕಿಯ ಬಲವು ಬ್ರಾಹ್ಮಣರ ಆಶೀರ್ವಾದದಿಂದ ಮತ್ತು ಕೃಷ್ಣನ ವರದಿಂದಲೂ ವೃದ್ಧಿಹೊಂದಿತ್ತು. ಆ ದಿನದಲ್ಲಿ ಇವನಿಗೆ ಬಲ ವೃದ್ಧಿಯಾಗಲೆಂದು ಸಂತುಷ್ಟನಾದ ಕೃಷ್ಣ ಹಿಂದೆ ವರ ಕೊಟ್ಟಿದ್ದ.

**ತತೋ ವಿವೃದ್ಧೋರುಬಲಾತ್ ಸ ಸಾತ್ಯಕಿಃ**
**ಸಂಸ್ಥಾಪ್ಯ ಭೀಮಂ ಪ್ರಯಯೌ ರಥೇನ ।**
**ತಂ ಬಾಣವರ್ಷೈಃ ಪೃತನಾಂ ಸಮಂತಾ-**
**ನ್ನಿಘ್ನಂತಮಾಜೌ ಹೃದಿಕಾತ್ಮಜೋಽಭ್ಯಯಾತ್ ॥ ೯೯ ॥**

**ಅರ್ಥ :-** **ತತಃ** = ಅದರಿಂದ, **ವಿವೃದ್ಧೋರುಬಲಾತ್** = ಅಭಿವೃದ್ಧವಾಗಿರುವ ಮಹಾಬಲದಿಂದ, **ಸಃ ಸಾತ್ಯಕಿಃ** = ಆ ಸಾತ್ಯಕಿಯು, **ಭೀಮಂ** = ಭೀಮನನ್ನು, **ಸಂಸ್ಥಾಪ್ಯ** = ಅಲ್ಲಿಯೇ ಬಿಟ್ಟು, **ರಥೇನ** = ರಥದಿಂದ, **ಪ್ರಯಯೌ** = ಹೊರಟನು, **ಆಜೌ** = ಯುದ್ಧದಲ್ಲಿ, **ಬಾಣವರ್ಷೈಃ** = ಬಾಣಗಳ ಮಳೆಗಳಿಂದ, **ಪೃತನಾಂ** = ಸೈನ್ಯವನ್ನು, **ಸಮಂತಾತ್** = ಎಲ್ಲೆಡೆಗೆ, **ನಿಘ್ನಂತಂ** = ನಾಶಮಾಡುತ್ತಿರುವ, **ತಂ** = ಆ ಸಾತ್ಯಕಿಯನ್ನು ಕುರಿತು, **ಹೃದಿಕಾತ್ಮಜಃ** = ಕೃತವರ್ಮನು, **ಅಭ್ಯಯಾತ್** = ಬಂದನು.

**ತಾತ್ಪರ್ಯ :-** ಆ ವರದಿಂದ ವೃದ್ಧಿಹೊಂದಿರುವ ಮಹಾಬಲದಿಂದ ಆ ಸಾತ್ಯಕಿಯು ಭೀಮನನ್ನು ಸೇನೆಯ ದ್ವಾರದಲ್ಲೇ ಬಿಟ್ಟು ರಥದಿಂದ ಒಳಗೆ

ಹೊರಟನು. ಯುದ್ಧದಲ್ಲಿ ಬಾಣಗಳ ಮಳೆಗಳಿಂದ ಸೇನೆಯನ್ನು ಎಲ್ಲಾಕಡೆ ನಾಶಮಾಡುತ್ತಿರುವ ಆ ಸಾತ್ಯಕಿಯ ಕಡೆ ಕೃತವರ್ಮ ಬಂದನು.

**ತಯೋರಭೂದ್ ಯುದ್ಧಮತೀವ ದಾರುಣಂ**
**ತತ್ರಾಕರೋತ್ ತಂ ವಿರಥಂ ಸ ಸಾತ್ಯಕಿಃ ।**
**ವಿಜಿತ್ಯ ತಂ ಸಾತ್ಯಕಿರುಗ್ರಧನ್ವಾ**
**ಯಯಾವತೀತ್ಯೈವ ಶಿರಾಂಸಿ ಯೂನಾಮ್ ।**
**ಕೃಂತನ್ ಶರೈಸ್ತಂ ಜಲಸಂಧ ಆಗಮದ್**
**ರಣೇ ಗಜಸ್ಕಂಧಗತೋಽಭಿಯೋದ್ಧುಮ್ ॥ ೧೦೦ ॥**

**ನಿವಾರಯಂತಂ ತಮಸಹ್ಯವಿಕ್ರಮಂ**
**ನಿಹತ್ಯ ಬಾಣೈಃ ಸಮರೇ ಸ ಸಾತ್ಯಕಿಃ ॥ ೧೦೧**

**ವಿಲೋಳಯಾಮಾಸ ಬಲಂ ಕುರೂಣಾಂ**
**ನಿಘ್ನನ್ ಗಜಸ್ಯಂದನವಾಜಿಪತ್ತಿನಃ ॥ ೧೦೨ ॥**

**ಅರ್ಥ :- ತಯೋಃ** = ಆ ಸಾತ್ಯಕಿ ಕೃತವರ್ಮರಿಗೆ, **ಅತೀವ** = ಬಹಳ, **ದಾರುಣಂ** = ಭಯಂಕರವಾದ, **ಯುದ್ಧಂ** = ಯುದ್ಧವು, **ಅಭೂತ್** = ನಡೆಯಿತು, **ತತ್ರ** = ಆ ಯುದ್ಧದಲ್ಲಿ, **ಸಃ ಸಾತ್ಯಕಿಃ** = ಆ ಸಾತ್ಯಕಿಯು, **ತಂ** = ಆ ಕೃತವರ್ಮನನ್ನು, **ವಿರಥಂ** = ರಥರಹಿತನನ್ನಾಗಿ, **ಅಕರೋತ್** = ಮಾಡಿದನು, **ಉಗ್ರಧನ್ವಾ** = ಭಯಂಕರ ಧನುರ್ಧಾರಿಯಾದ, **ಸಾತ್ಯಕಿಃ** = ಸಾತ್ಯಕಿಯು, **ತಂ** = ಆ ಕೃತವರ್ಮನನ್ನು, **ವಿಜಿತ್ಯ** = ಗೆದ್ದು, **ಅತೀತ್ಯೈವ** = ದಾಟಿಯೇ, **ಶರೈಃ** = ಬಾಣಗಳಿಂದ, **ಯೂನಾಂ** = ಯುವಕರ, **ಶಿರಾಂಸಿ** = ತಲೆಗಳನ್ನು, **ಕೃಂತನ್** = ಕತ್ತರಿಸುತ್ತಾ, **ಯಯೌ** = ನಡೆದನು, **ಗಜಸ್ಕಂಧಗತಃ** = ಆನೆಯ ಹೆಗಲಿನ ಮೇಲಿದ್ದ, **ಜಲಸಂಧಃ** = ಜಲಸಂಧನು, **ರಣೇ** = ಯುದ್ಧದಲ್ಲಿ, **ತಂ** = ಆ ಸಾತ್ಯಕಿಯನ್ನು, **ಅಭಿಯೋದ್ಧುಂ** = ಎದುರಿಸಲು, **ಆಗಮತ್** = ಬಂದನು, **ನಿವಾರಯಂತಂ** = ತನ್ನನ್ನು ತಡೆಯುತ್ತಿದ್ದ, **ಅಸಹ್ಯವಿಕ್ರಮಂ** = ಅಸಹನೀಯವಾದ ಪರಾಕ್ರಮ ಶಾಲಿಯಾದ, **ತಂ** = ಆ ಜಲಸಂಧನನ್ನು, **ಸಃ ಸಾತ್ಯಕಿಃ** = ಆ ಸಾತ್ಯಕಿಯು, **ಸಮರೇ** = ಯುದ್ಧದಲ್ಲಿ, **ಬಾಣೈಃ** = ಬಾಣಗಳಿಂದ, **ನಿಹತ್ಯ** = ಕೊಂದು,

**ಕುರೂಣಾಂ** = ಕೌರವರ, **ಗಜಸ್ಯಂದನವಾಜಿಪತ್ತಿನಃ** = ಆನೆ, ರಥ ಕುದುರೆ, ಕಾಲಾಳುಗಳನ್ನು, **ನಿಘ್ನನ್** = ಹೊಡೆಯುತ್ತಾ, **ಬಲಂ** = ಸೈನ್ಯವನ್ನು, **ವಿಲೋಲಯಾಮಾಸ** = ನಾಶ ಮಾಡಿದನು.

**ತಾತ್ಪರ್ಯ** :- ಸಾತ್ಯಕಿ ಕೃತವರ್ಮರಿಗೆ ಭಯಂಕರವಾದ ಯುದ್ಧ ನಡೆಯಿತು. ಆ ಯುದ್ಧದಲ್ಲಿ ಸಾತ್ಯಕಿ ಕೃತವರ್ಮನನ್ನು ರಥರಹಿತನನ್ನಾಗಿ ಮಾಡಿದ. ಸಾತ್ಯಕಿ ಅವನನ್ನು ಸೋಲಿಸಿ ದಾಟಿ ಯುವಕರ ತಲೆಗಳನ್ನು ಬಾಣಗಳಿಂದ ಕತ್ತರಿಸುತ್ತಾ ನಡೆದನು. ಆ ಸಾತ್ಯಕಿ ಭಯಂಕರ ಧನುರ್ಧಾರಿ. ಅವನೊಡನೆ ಹೋರಾಡಲಿಕ್ಕಾಗಿ ಆನೆಯ ಮೇಲೆರಿದ ಜಲಸಂಧ ಬಂದ. ತನ್ನನ್ನು ತಡೆಯುತ್ತಿದ್ದ ಭಯಂಕರ ಪರಾಕ್ರಮಿಯಾದ ಜಲಸಂಧನನ್ನು ಸಾತ್ಯಕಿ ಬಾಣಗಳಿಂದ ಕೊಂದು ಕೌರವರ ಆನೆ ರಥ ಕುದುರೆ ಕಾಲಾಳು ಹೊಡೆಯುತ್ತಾ ಸೈನ್ಯವನ್ನು ನಾಶ ಮಾಡಿದನು.

**ಸ ಪಾರ್ವತೀಯಾಂಶ್ಚ ಶಿಲಾಪ್ರವರ್ಷಿಣೋ**
**ನಿಹತ್ಯ ವಿದ್ರಾಪ್ಯ ಚ ಸರ್ವಸೈನಿಕಾನ್ ।**
**ಸಮಾಸದತ್ ಕೇಶವಫಲ್ಗುನೌ ಚ**
**ಬಲೀ ತಮಾರಾಽಶು ಚ ಯೂಪಕೇತುಃ ॥ ೧೦೩ ॥**

**ತಯೋರಭೂದ್ ಯುದ್ಧಮತೀವ ಘೋರಂ**
**ಚಿರಂ ವಿಚಿತ್ರಂ ಚ ಮಹದ್ ವಿಭೀಷಣಮ್ ॥ ೧೦೪ ॥**

**ಅರ್ಥ** :- **ಸಃ** = ಆ ಸಾತ್ಯಕಿಯು, **ಶಿಲಾಭಿವರ್ಷಿಣಃ** = ಕಲ್ಲಿನ ಮಳೆ ಸುರಿಸುತ್ತಿದ್ದ, **ಪಾರ್ವತೀಯಾಂಶ್ಚ** = ಗುಡ್ಡಗಾಡಿನವರನ್ನು, **ನಿಹತ್ಯ** = ಕೊಂದು, **ಸರ್ವಸೈನಿಕಾಂಶ್ಚ** = ಎಲ್ಲಾ ಸೈನಿಕರನ್ನೂ ಕೂಡ, **ವಿದ್ರಾವ್ಯ** = ಓಡಿಸಿ, **ಕೇಶವ ಫಲ್ಗುನೌ ಚ** = ಕೃಷ್ಣ ಅರ್ಜುನರನ್ನು ಕುರಿತು, **ಸಮಾಸದತ್** = ಬಂದನು, **ಬಲೀ** = ಬಲಿಷ್ಠನಾದ, **ಯೂಪಕೇತುಃ** = ಭೂರಿಶ್ರವನು, **ತಂ** = ಆ ಸಾತ್ಯಕಿಯನ್ನು, **ಆರ** = ಎದುರಿಸಿದನು.

**ತಯೋಃ** = ಅವರಿಬ್ಬರಿಗೆ, **ಅತೀವ** = ಬಹಳ, **ಘೋರಂ** = ಘೋರವಾದ, **ಮಹದ್ ವಿಭೀಷಣಂ** = ಬಹಳ ಭಯಂಕರವಾದ, **ವಿಚಿತ್ರಂ**

= ವಿಚಿತ್ರವಾದ, **ಯುದ್ಧಂ** = ಯುದ್ಧವು, **ಚಿರಂ** = ಬಹಳ ಕಾಲ, **ಅಭೂತ್** = ನಡೆಯಿತು.

**ತಾತ್ಪರ್ಯ** :- ಸಾತ್ಯಕಿಯು ಕಲ್ಲಿನ ಮಳೆ ಸುರಿಸುತ್ತಿದ್ದ ಗುಡ್ಡಗಾಡಿನವರನ್ನು ಕೊಂದು ಎಲ್ಲಾ ಸೈನಿಕರನ್ನು ಓಡಿಸಿ ಕೃಷ್ಣಾರ್ಜುನರ ಕಡೆಗೆ ಮುಂದೊರೆದ. ಆಗ ಬಲಶಾಲಿಯಾದ ಭೂರಿಶ್ರವ ಸಾತ್ಯಕಿಯನ್ನು ತಡೆದ. ಅವರಿಬ್ಬರಿಗೆ ಬಹಳ ಘೋರ ಮಹಾ ಭಯಂಕರವಾದ ವಿಚಿತ್ರವಾದ ಯುದ್ಧ ಬಹಳ ಕಾಲ ನಡೆಯಿತು.

**ಪರಸ್ಪರಂ ತೌ ತುರಗಾನ್ ನಿಹತ್ಯ**
**ನಿಪಾತ್ಯ ಸೂತೌ ಧನುಷೀ ನಿಕೃತ್ಯ ।**
**ಸಮೀಯತುಶ್ಚರ್ಮಮಹಾಸಿಧಾರಿಣೌ**
**ವಿಚಿತ್ರಮಾರ್ಗಾನ್ ಯುಧಿ ದರ್ಶಯಂತೌ ॥ ೧೦೫ ॥**

**ಅರ್ಥ** :- **ತೌ** = ಆ ಸಾತ್ಯಕಿ ಭೂರಿಶ್ರವರು, **ಪರಸ್ಪರಂ** = ಪರಸ್ಪರ, **ತುರಗಾನ್** = ಕುದುರೆಗಳನ್ನು, **ನಿಹತ್ಯ** = ಕೊಂದು, **ಸೂತೌ** = ಸಾರಥಿಗಳನ್ನು, **ನಿಪಾತ್ಯ** = ಬೀಳಿಸಿ, **ಧನುಷೀ** = ಬಿಲ್ಲುಗಳನ್ನು, **ನಿಕೃತ್ಯ** = ಕತ್ತರಿಸಿ, **ಚರ್ಮವರಾಸಿಧಾರಿಣೌ** = ಗುರಾಣಿ ಶ್ರೇಷ್ಠವಾದ ಕತ್ತಿಯನ್ನು ಧರಿಸಿದವರಾಗಿ, **ಯುಧಿ** = ಯುದ್ಧದಲ್ಲಿ, **ವಿಚಿತ್ರಮಾರ್ಗಾನ್** = ವಿಚಿತ್ರವಾದ ವರಸೆಗಳನ್ನು, **ದರ್ಶಯಂತೌ** = ತೋರಿಸುತ್ತಾ, **ಸಮೀಯತುಃ** = ಹೋರಾಡಿದರು.

**ತಾತ್ಪರ್ಯ** :- ಸಾತ್ಯಕಿ ಭೂರಿಶ್ರವ ಅವರಿಬ್ಬರು ಪರಸ್ಪರ ಕುದುರೆಗಳನ್ನು ಕೊಂದು ಸಾರಥಿಗಳನ್ನು ಬೀಳಿಸಿ ಬಿಲ್ಲುಗಳನ್ನು ಕತ್ತರಿಸಿ ಗುರಾಣಿ ಕತ್ತಿಗಳನ್ನು ಹಿಡಿದುಕೊಂಡವರಾಗಿ ಯುದ್ಧದಲ್ಲಿ ವಿಚಿತ್ರವಾದ ವರಸೆಯನ್ನು ತೋರಿಸುತ್ತಾ ಹೋರಾಡಿದರು.

**ಸ ಸೌಮದತ್ತಿರ್ಭುವಿ ಸಾತ್ಯಕಿಂ ರಣೇ**
**ನಿಪಾತ್ಯ ಕೇಶೇಷು ಚ ಸಂಪ್ರಗೃಹ್ಯ ।**
**ಪದಾऽಸ್ಯ ವಕ್ಷಸ್ಯಧಿರುಹ್ಯ ಖಡ್ಗ-**
**ಮುದಗ್ರಹೀದಾಶು ಶಿರೋऽಪಹರ್ತುಮ್ ॥ ೧೦೬ ॥**

**ಅರ್ಥ** :- **ಸಃ ಸೌಮದತ್ತಿಃ** = ಆ ಭೂರಿಶ್ರವನು, **ರಣೇ** = ಯುದ್ಧದಲ್ಲಿ, **ಸಾತ್ಯಕಿಂ** = ಸಾತ್ಯಕಿಯನ್ನು, **ಭುವಿ** = ನೆಲದ ಮೇಲೆ, **ನಿಪಾತ್ಯ** = ಕೆಡವಿ, **ಕೇಶೇಷು** = ಕೂದಲುಗಳಲ್ಲಿ, **ಸಂಪ್ರಗೃಹ್ಯ** = ಹಿಡಿದು, **ಅಸ್ಯ** = ಇವನ, **ವಕ್ಷಸಿ** = ಎದೆಯ ಮೇಲೆ, **ಪದಾ** = ಕಾಲಿನಿಂದ, **ಅಧಿರುಹ್ಯ** = ಏರಿ, **ಶಿರಃ ಅಪಹರ್ತುಂ** = ಶಿರಶ್ಛೇದ ಮಾಡಲು, **ಆಶು** = ಬೇಗನೆ, **ಖಡ್ಗಂ** = ಖಡ್ಗವನ್ನು, **ಉದಗ್ರಹೀತ್** = ಎತ್ತಿದನು.

**ತಾತ್ಪರ್ಯ** :- ಭೂರಿಶ್ರವ ಯುದ್ಧದಲ್ಲಿ ಸಾತ್ಯಕಿಯನ್ನು ನೆಲದ ಮೇಲೆ ಕೆಡವಿ ಕೂದಲುಗಳನ್ನು ಕೈಯಿಂದ ಹಿಡಿದು ಎದೆಯ ಮೇಲೆ ಕಾಲಿಟ್ಟು ಶಿರಶ್ಛೇದ ಮಾಡಲು ಬೇಗನೇ ಖಡ್ಗವನ್ನೆತ್ತಿದ.

**ತದ್ ವಾಸುದೇವಸ್ತು ನಿರೀಕ್ಷ್ಯ ವಿಶ್ವತ-**
**ಶ್ಚಕ್ಷುರ್ಜಗಾದಾಽಶು ಧನಂಜಯಂ ರಣೇ ।**
**ತ್ರಾಯಶ್ವ ಶೈನೇಯಮಿತಿ ಸ್ಮ ಸೋಽಪಿ**
**ಭಲ್ಲೇನ ಚಿಚ್ಛೇದ ಭುಜಂ ಪರಸ್ಯ ॥ ೧೦೭ ॥**

**ಅರ್ಥ** :- **ವಿಶ್ವತಶ್ಚಕ್ಷುಃ** = ವಿಶ್ವತಶ್ಚಕ್ಷುವಾದ, **ವಾಸುದೇವಸ್ತು** = ಕೃಷ್ಣನಾದರೂ, **ತತ್** = ಅದನ್ನು, **ನಿರೀಕ್ಷ್ಯ** = ನೋಡಿ, **ಧನಂಜಯಂ** = ಅರ್ಜುನನನ್ನು ಕುರಿತು, **ಜಗಾದ** = ಹೇಳಿದನು, **ಶೈನೇಯಂ** = ಸಾತ್ಯಕಿಯನ್ನು, **ತ್ರಾಯಶ್ವ** = ಕಾಪಾಡು, **ಇತಿ** = ಎಂಬುದಾಗಿ, **ಸೋಽಪಿ** = ಆ ಅರ್ಜುನನಾದರೂ, **ಭಲ್ಲೇನ** = ಭಲ್ಲೆಯಿಂದ, **ಪರಸ್ಯ** = ಶತ್ರುವಾದ ಭೂರಿಶ್ರವನ, **ಭುಜಂ** = ಭುಜವನ್ನು, **ಚಿಚ್ಛೇದ** = ಕತ್ತರಿಸಿದನು.

**ತಾತ್ಪರ್ಯ** :- ವಿಶ್ವತಶ್ಚಕ್ಷುವಾದ ಕೃಷ್ಣ ಅದನ್ನು ನೋಡಿ ಬೇಗನೇ ಅರ್ಜುನನಿಗೆ ಹೇಳಿದನು. ಯುದ್ಧದಲ್ಲಿ ಸಾತ್ಯಕಿಯನ್ನು ಕಾಪಾಡು ಎಂಬುದಾಗಿ. ಅರ್ಜುನ ಭಲ್ಲೆಯಿಂದ ಭೂರಿಶ್ರವನ ತೋಳನ್ನು ಕತ್ತರಿಸಿದ.

**ಸ ತೇನ ಚೋತ್ಕೃತ್ತಸಖಡ್ಗಬಾಹು-**
**ರ್ವಿನಿಂದ್ಯ ಪಾರ್ಥಂ ನಿಷಸಾದ ಭೂಮೌ ।**
**ಪ್ರಾಯೋಪವಿಷ್ಟಃ ಶರಸಂಸ್ತರೇ ಹರಿಂ**
**ಧ್ಯಾಯನ್ ವಿನಿಂದನ್ನಸುರಪ್ರವೇಶಾತ್ ॥ ೧೦೮ ॥**

**ಅರ್ಥ** :- **ಸಃ** = ಆ ಭೂರಿಶ್ರವನು, **ಉತ್ಕೃತ್ತಸಖಡ್ಗಬಾಹುಃ** = ಕತ್ತರಿಸಲ್ಪಟ್ಟ ಖಡ್ಗ ಸಮೇತವಾದ ಬಾಹುವುಳ್ಳವನಾಗಿ, **ಪಾರ್ಥಂ** = ಅರ್ಜುನನನ್ನು, **ವಿನಿಂದ್ಯ** = ನಿಂದಿಸಿ, **ಭೂಮೌ** = ನೆಲದ ಮೇಲೆ, **ನಿಷಸಾದ** = ಕುಳಿತನು, **ಅಸುರಪ್ರವೇಶಾತ್** = ಅಸುರಾವೇಶದಿಂದ, **ಹರಿಂ** = ಶ್ರೀಕೃಷ್ಣನನ್ನು, **ವಿನಿಂದನ್** = ನಿಂದಿಸುತ್ತಾ, **ಹರಿಂ** = ಶ್ರೀ ಹರಿಯನ್ನು, **ಧ್ಯಾಯನ್** = ಧ್ಯಾನಿಸುತ್ತಾ, **ಶರಸಂಸ್ತರೇ** = ಬಾಣಗಳ ಹಾಸಿಗೆಯ ಮೇಲೆ, **ಪ್ರಾಯೋಪವಿಷ್ಟಃ** = ಪ್ರಾಯೋಪವೇಶಕ್ಕೆ ಕುಳಿತನು.

**ತಾತ್ಪರ್ಯ** :- ಆ ಭೂರಿಶ್ರವ ತನ್ನ ಖಡ್ಗ ಎತ್ತಿದ ಬಾಹು ಕತ್ತರಿಸಲ್ಪಟ್ಟಾಗ ಅರ್ಜುನನನ್ನು ನಿಂದಿಸಿ ನೆಲದ ಮೇಲೆ ಕುಳಿತುಕೊಂಡ. ಅಸುರಾವೇಶದಿಂದ ಕೃಷ್ಣನನ್ನು ನಿಂದಿಸುತ್ತಾ ಶ್ರೀಹರಿಯನ್ನು ಧ್ಯಾನಿಸುತ್ತಾ ಬಾಣಗಳ ಹಾಸಿಗೆ ಮೇಲೆ ಪ್ರಾಯೋಪವೇಶಕ್ಕೆ ಕುಳಿತುಕೊಂಡನು.

**ಗತೇಽಸುರಾವೇಶ ಉತಾತಿಭಕ್ತ್ಯಾ**
**ಧ್ಯಾಯತ್ಯಮುಷ್ಮಿನ್ ಗರುಡಧ್ವಜಂ ತಮ್ ।**
**ಶೈನೇಯ ಉತ್ಥಾಯ ನಿವಾರ್ಯಮಾಣಃ**
**ಕೃಷ್ಣಾರ್ಜುನಾದ್ಯೈರಹರಚ್ಛಿರೋಽಸ್ಯ ॥ ೧೦೯ ॥**

**ಅರ್ಥ** :- **ಅಸುರಾವೇಶೇ** = ಅಸುರಾವೇಶವು, **ಗತೇ** = ಹೋಗುತ್ತಿರಲು, **ಉತ** = ಅನಂತರ, **ಅತಿಭಕ್ತ್ಯಾ** = ಒಳ್ಳೆಯ ಭಕ್ತಿಯಿಂದ, **ಅಮುಷ್ಮಿನ್** = ಈ ಭೂರಿಶ್ರವನು, **ಗರುಡಧ್ವಜಂ ತಂ** = ಗರುಡವಾಹನನಾದ ಶ್ರೀಕೃಷ್ಣನನ್ನು, **ಧ್ಯಾಯತಿ** = ಧ್ಯಾನಿಸುತ್ತಿರಲು, **ಶೈನೇಯಃ** = ಸಾತ್ಯಕಿಯು, **ಉತ್ಥಾಯ** = ಎದ್ದು, **ಕೃಷ್ಣಾರ್ಜುನಾದ್ಯೈಃ** = ಕೃಷ್ಣಾರ್ಜುನ ಮೊದಲಾದವರಿಂದ, **ನಿವಾರ್ಯಮಾಣಃ** = ತಡೆಯಲ್ಪಟ್ಟವನಾಗಿ, **ಅಸ್ಯ** = ಈ ಭೂರಿಶ್ರವನ, **ಶಿರಃ** = ತಲೆಯನ್ನು, **ಅಹರತ್** = ಕತ್ತರಿಸಿದನು.

**ತಾತ್ಪರ್ಯ** :- ಅಸುರಾವೇಶ ಹೋದ ಮೇಲೆ ಒಳ್ಳೆಯ ಭಕ್ತಿಯಿಂದ ಭೂರಿಶ್ರವ ಗರುಡಧ್ವಜನಾದ ಶ್ರೀಕೃಷ್ಣನನ್ನು ಧ್ಯಾನಿಸುತ್ತಿದ್ದಾಗ ಸಾತ್ಯಕಿ ಎಂದ್ದು ಶ್ರೀ ಕೃಷ್ಣ ಅರ್ಜುನರಿಂದ ತಡೆಯಲ್ಪಟ್ಟರೂ ಭೂರಿಶ್ರವನ ತಲೆಯನ್ನು ಕಡೆದುಹಾಕಿದ.

**ತದಾ ಸ್ವಕೀಯಂ ರಥಮೇತದರ್ಥಂ**
**ಕ್ಲ್ಪಪ್ತಂ ದದೌ ಸಾತ್ಯಕಯೇ ಸಸೂತಮ್ ।**
**ಕೃಷ್ಣೋಽಥ ಪಾರ್ಥಸ್ಯ ಹಯಾಸ್ತೃಷಾಽರ್ದಿತಾ-**
**ಸ್ತದಾಽಸೃಜದ್ ವಾರುಣಾಸ್ತ್ರಂ ಸ ಪಾರ್ಥಃ ॥ ೧೧೦ ॥**

**ಅರ್ಥ** :- **ಏತದರ್ಥಂ** = ಈ ಸಾತ್ಯಕಿಗಾಗಿಯೇ, **ಕ್ಲೃಪ್ತಂ** = ಸಿದ್ಧಗೊಳಿಸಲ್ಪಟ್ಟ, **ಸ್ವಕೀಯಂ** = ತನ್ನದಾದ, **ಸಸೂತಂ** = ಸೂತ ಸಹಿತವಾದ, **ರಥಂ** = ರಥವನ್ನು, **ಕೃಷ್ಣಃ** = ಕೃಷ್ಣನು, **ಸಾತ್ಯಕಯೇ** = ಸಾತ್ಯಕಿಗೆ, **ದದೌ** = ಕೊಟ್ಟನು, **ತದಾ** = ಆಗ, **ಪಾರ್ಥಸ್ಯ** = ಅರ್ಜುನನ, **ಹಯಾಃ** = ಕುದುರೆಗಳು, **ತೃಷಾಽರ್ದಿತಾಃ** = ಬಾಯಾರಿಕೆಯಿಂದ ಬಳಲಿದ್ದವು, **ಅಥ** = ಅನಂತರ, **ಸಃ ಪಾರ್ಥಃ** = ಆ ಅರ್ಜುನನು, **ವಾರುಣಾಸ್ತ್ರಂ** = ವಾರುಣಾಸ್ತ್ರವನ್ನು, **ಅಸೃಜತ್** = ಪ್ರಯೋಗಿಸಿದನು.

**ತಾತ್ಪರ್ಯ** :- ಸಾತ್ಯಕಿಗಾಗಿಯೆ ಸಿದ್ಧಗೊಳಿಸಲ್ಪಟ್ಟ ತನ್ನ ರಥವನ್ನು ಶ್ರೀಕೃಷ್ಣ ಸಾರಥಿ ಸಮೇತ ಸಾತ್ಯಕಿಗೆ ಕೊಟ್ಟನು. ಆಗ ಅರ್ಜುನನ ರಥದ ಕುದುರೆಗಳು ಬಾಯಾರಿದ್ದವು. ಆವಾಗ ಅರ್ಜುನ ವಾರುಣಾಸ್ತ್ರವನ್ನು ಪ್ರಯೋಗಿಸಿದ.

**ತೇನೈವ ತೀರ್ಥಂ ಪರಮಂ ಚಕಾರ**
**ತಥಾಽಶ್ವಶಾಲಾಮಪಿ ಬಾಣರೂಪಾಮ್ ।**
**ತತೋ ವಿಮುಚ್ಯಾತ್ರ ಹಯಾನಪಾಯಯ-**
**ದ್ಧರಿಸ್ತದಾ ವಾಸವಿರಾರ್ದಯತ್ ಪರಾನ್ ॥ ೧೧೧ ॥**

**ಅರ್ಥ** :- **ತೇನೈವ** = ಆ ವಾರುಣಾಸ್ತ್ರದಿಂದಲೇನೇ, **ಪರಮಂ** = ಉತ್ತಮವಾದ, **ತೀರ್ಥಂ** = ತೀರ್ಥವನ್ನು, **ತಥಾ** = ಹಾಗೆಯೇ, **ಬಾಣರೂಪಾಂ** = ಬಾಣರೂಪವಾದ, **ಅಶ್ವಶಾಲಾಂ ಅಪಿ** = ಅಶ್ವಶಾಲೆಯನ್ನೂ ಕೂಡ, **ಚಕಾರ** = ಮಾಡಿದನು, (**ಕೃಷ್ಣಃ** = ಕೃಷ್ಣನು), **ತತಃ** = ಆ ರಥದಿಂದ, **ಹಯಾನ್** = ಕುದುರೆಗಳನ್ನು, **ವಿಮುಚ್ಯ** = ಬಿಚ್ಚಿ, **ಅಪಾಯಯತ್** = ನೀರು ಕುಡಿಸಿದ, **ತದಾ** = ಆಗ, **ವಾಸವಿಃ** = ಅರ್ಜುನನು, **ಪರಾನ್** = ಶತ್ರುಗಳನ್ನು, **ಆರ್ದಯತ್** = ಪೀಡಿಸಿದ.

**ತಾತ್ಪರ್ಯ** :- ಆ ವಾರುಣಾಸ್ತ್ರದಿಂದಲೇ ಉತ್ತಮವಾದ ಜಲಾಶಯವನ್ನು ನಿರ್ಮಿಸಿದ ಮತ್ತೂ ಬಾಣರೂಪದ ಅಶ್ವಶಾಲೆಯನ್ನೂ ಕೂಡ ನಿರ್ಮಿಸಿದ. ಕೃಷ್ಣ ಕುದುರೆಗಳನ್ನು ರಥದಿಂದ ಬಿಚ್ಚಿ ನೀರು ಕುಡಿಸಿದ. ಅರ್ಜುನ ನೆಲದ ಮೇಲೆ ನಿಂತು ಶತ್ರುಗಳ ಜೊತೆ ಹೋರಾಡಿದ.

**ಯುಯೋಜ ಕೃಷ್ಣಸ್ತುರಗಾನ್ ರಥೇ ಪುನ-**
**ರ್ಗತಶ್ರಮಾನುದ್ಧೃತಸಾಯಕಾನ್ ಪ್ರಭುಃ ।**
**ಪ್ರಚೋದಿತೇ ತೇನ ರಥೇ ಸ್ಥಿತಃ ಪುನ-**
**ಸ್ತಥೈವ ಬೀಭತ್ಸುರರೀನಯೋಧಯತ್ ॥ ೧೧೨ ॥**

**ಅರ್ಥ** :- **ಪ್ರಭುಃ** = ಪ್ರಭುವಾದ, **ಕೃಷ್ಣಃ** = ಕೃಷ್ಣನು, **ಉದ್ಧೃತಸಾಯಕಾನ್** = ತೆಗೆಯಲ್ಪಟ್ಟ ಬಾಣಗಳುಳ್ಳ, **ಗತಶ್ರಮಾನ್** = ಹೋಗಲ್ಪಟ್ಟ ಶ್ರಮವುಳ್ಳ, **ತುರಗಾನ್** = ಕುದುರೆಗಳನ್ನು, **ಪುನಃ** = ಮತ್ತೆ, **ಯುಯೋಜ** = ಕಟ್ಟಿದನು, **ತೇನ** = ಆ ಕೃಷ್ಣನಿಂದ, **ರಥೇ** = ರಥವು, **ಪ್ರಚೋದಿತೇ** = ನಡೆಸಲ್ಪಡುತ್ತಿರಲು, **ಬೀಭತ್ಸುಃ** = ಅರ್ಜುನನು, **ಸ್ಥಿತಃ** = ರಥದಲ್ಲಿ ನಿಂತವನಾಗಿ, **ಪುನಃ** = ಮತ್ತೆ, **ತಥೈವ** = ಹಾಗೆಯೇ, **ಅರೀನ್** = ಶತ್ರುಗಳನ್ನು, **ಅಯೋಧಯತ್** = ಯುದ್ಧ ಮಾಡಿದ.

**ತಾತ್ಪರ್ಯ** :- ಪ್ರಭು ಶ್ರೀಕೃಷ್ಣ ಕುದುರೆಗಳ ಮೈಯಲ್ಲಿ ನೆಟ್ಟಿದ್ದ ಬಾಣಗಳನ್ನು ಕಿತ್ತೊಗೆದು ಅವುಗಳ ಆಯಾಸ ಪರಿಹರಿಸಿ ರಥಕ್ಕೆ ಕಟ್ಟಿದ. ಅನಂತರ ಅವನು ರಥ ನಡೆಸಲು ಸಿದ್ಧನಾದಾಗ ಅರ್ಜುನ ರಥವನ್ನೇರಿ ಪುನಃ ಹಿಂದಿನಂತೆಯೇ ಜಯದ್ರಥನ ಕಡೆಗೆ ಹೋಗುತ್ತಾ ಶತ್ರುಗಳೊಡನೆ ಹೋರಾಡಿದ.

**ಶಿನಿಪ್ರವೀರೇ ತು ಗತೇ ಯುಧಿಷ್ಠಿರಃ**
**ಪುನಶ್ಚ ಚಿಂತಾಕುಲಿತೋ ಬಭೂವ ಹ ।**
**ಜಗಾದ ಭೀಮಂ ಚ ನ ಗಾಂಡಿವಧ್ವನಿಃ**
**ಸಂಶ್ರೂಯತೇ ಪಾಂಚಜನ್ಯಸ್ಯ ರಾವಃ ॥ ೧೧೩ ॥**

**ಅರ್ಥ** :- **ಶಿನಿಪ್ರವೀರೇ ತು** = ಸಾತ್ಯಕಿಯಾದರೂ, **ಗತೇ** = ಹೋಗುತ್ತಿರಲು, **ಪುನಃ** = ಮತ್ತೆ, **ಯುಧಿಷ್ಠಿರಃ** = ಯುಧಿಷ್ಠಿರನು,

**ಚಿಂತಾಕುಲಿತೋ ಬಭೂವ ಹ** = ಚಿಂತಾಗ್ರಸ್ತನಾದನು, **ಭೀಮಂ** = ಭೀಮನನ್ನು ಕುರಿತು, **ಜಗಾದ** = ಹೇಳಿದನು, **ಗಾಂಡೀವಧ್ವನಿಃ** = ಗಾಂಡೀವ ಧ್ವನಿಯು, **ನ** = ಇಲ್ಲ, **ಪಾಂಚಜನ್ಯಸ್ಯ** = ಪಾಂಚಜನ್ಯದ, **ರಾವಃ** = ಧ್ವನಿಯು, **ಸಂಶ್ರೂಯತೇ** = ಕೇಳಲ್ಪಡುತ್ತದೆ.

**ತಾತ್ಪರ್ಯ** :- ಸಾತ್ಯಕಿಯು ಹೋದಾಗ ಮತ್ತೆ ಯುಧಿಷ್ಠಿರ ಚಿಂತಾಗ್ರಸ್ತನಾದ. ಭೀಮನಿಗೆ ಹೇಳಿದ ಗಾಂಡೀವ ಧ್ವನಿ ಕೇಳಿಸುತ್ತಿಲ್ಲ. ಪಾಂಚಜನ್ಯದ ಧ್ವನಿಯು ಕೇಳಿಸುತ್ತಿದೆ.

**ಮಯಾ ನಿಯುಕ್ತಶ್ಚ ಗತಃ ಸ ಸಾತ್ಯಕಿ-**
**ರ್ಭಾರಂ ಚ ತಸ್ಯಾಧಿಕಮೇವ ಮನ್ಯೇ ।**
**ತತ್ ಪಾಹಿ ಪಾರ್ಥಂ ಯುಯುಧಾನಮೇವ ಚ**
**ತ್ವಂ ಭೀಮ ಗತ್ವಾ ಯದಿ ಜೀವತಸ್ತೌ ॥ ೧೧೪ ॥**

**ಅರ್ಥ** :- **ಮಯಾ** = ನನ್ನಿಂದ, **ಸಃ ಸಾತ್ಯಕಿಃ** = ಆ ಸಾತ್ಯಕಿಯು, **ನಿಯುಕ್ತಃ** = ನಿಯೋಜಿಸಲ್ಪಟ್ಟವನಾಗಿ, **ಗತಃ** = ಹೋಗಿದ್ದಾನೆ, **ತಸ್ಯ** = ಆ ಸಾತ್ಯಕಿಗೆ, **ಕಾರ್ಯಭಾರಂ** = ಕಾರ್ಯಭಾರವನ್ನು, **ಅಧಿಕಂ** = ಅಧಿಕವನ್ನಾಗಿ, **ಮನ್ಯೇ** = ತಿಳಿಯುತ್ತೇನೆ, **ತತ್** = ಆದ್ದರಿಂದ, **ಭೀಮ** = ಭೀಮನೇ!, **ತ್ವಂ** = ನೀನು, **ಗತ್ವಾ** = ಹೋಗಿ, **ಯದಿ** = ಒಂದುವೇಳೆ, **ತೌ** = ಅವರಿಬ್ಬರು, **ಜೀವತಃ** = ಜೀವಂತವಾಗಿದ್ದರೆ, **ಪಾರ್ಥಂ** = ಅರ್ಜುನನ್ನು, **ಯುಯುಧಾನಮೇವ** = ಸಾತ್ಯಕಿಯನ್ನೂ, **ಪಾಹಿ** = ಕಾಪಾಡು.

**ತಾತ್ಪರ್ಯ** :- ನನ್ನಿಂದ ನಿಯೋಜಿಸಲ್ಪಟ್ಟ ಸಾತ್ಯಕಿ ಅರ್ಜುನನ ಸಹಾಯಕ್ಕಾಗಿ ಹೋಗಿದ್ದಾನೆ. ಆದರೆ ಅವನಿಗೆ ಆ ಕಾರ್ಯಭಾರ ಅತೀವ ಎಂದನ್ನಿಸುತ್ತದೆ. ಆದ್ದರಿಂದ ಭೀಮ! ನೀನು ಬೇಗನೇ ಹೋಗಿ ಅವರು ಬದುಕಿದ್ದರೆ ಕಾಪಾಡು.

**ಇತೀರಿತಃ ಪ್ರಾಹ ವೃಕೋದರಸ್ತಂ**
**ನ ರಕ್ಷಿತಂ ವಾಸುದೇವೇನ ಪಾರ್ಥಮ್ ।**
**ಬ್ರಹ್ಮೇಶಾನಾವಪಿ ಜೇತುಂ ಸಮರ್ಥೌ**
**ಕಿಂ ದ್ರೌಣಿಕರ್ಣಾದಿಧನುರ್ಭೃತೋಽತ್ರ ॥ ೧೧೫ ॥**

**ಅರ್ಥ** :- **ಇತಿ** = ಈ ರೀತಿಯಾಗಿ, **ಈರಿತಃ** = ಹೇಳಲ್ಪಟ್ಟ, **ವೃಕೋದರಃ** = ಭೀಮಸೇನನು, **ತಂ** = ಆ ಧರ್ಮರಾಜನನ್ನು ಕುರಿತು, **ಪ್ರಾಹ** = ಹೇಳಿದನು, **ವಾಸುದೇವೇನ** = ಕೃಷ್ಣನಿಂದ, **ರಕ್ಷಿತಂ** = ರಕ್ಷಿತನಾದ, **ಪಾರ್ಥಂ** = ಅರ್ಜುನನನ್ನು, **ಜೇತುಂ** = ಗೆಲ್ಲಲು, **ಬ್ರಹ್ಮೇಶಾನಾವಪಿ** = ಬ್ರಹ್ಮರುದ್ರರೂ ಕೂಡ, **ನ ಸಮರ್ಥೌ** = ಸಮರ್ಥರಲ್ಲ, **ದ್ರೌಣಿಕರ್ಣಾದಿ ಧನುರ್ಭೃತಃ** = ಅಶ್ವತ್ಥಾಮಕರ್ಣ ಮೊದಲಾದವರನ್ನು ಕುರಿತು, **ಅತ್ರ** = ಗೆಲ್ಲುವ ವಿಷಯದಲ್ಲಿ, **ಕಿಂ** = ಇನ್ನೇನು ಹೇಳಬೇಕು.

**ತಾತ್ಪರ್ಯ** :- ಹೀಗೆ ಧರ್ಮರಾಜ ಭೀಮನಿಗೆ ಹೇಳಿದಾಗ ಭೀಮ ಧರ್ಮರಾಜನಿಗೆ ಹೇಳಿದ. ಕೃಷ್ಣನಿಂದ ರಕ್ಷಿತನಾದ ಅರ್ಜುನನನ್ನು ಗೆಲ್ಲಲು ಬ್ರಹ್ಮರುದ್ರರೂ ಕೂಡ ಸಮರ್ಥರಲ್ಲ. ಇನ್ನು ಅಶ್ವತ್ಥಾಮ ಕರ್ಣ ಮೊದಲಾದ ಧನುರ್ಧಾರಿಗಳು ಏನು ಮಾಡಿಯಾರು ?

**ಅತೋ ಭಯಂ ನಾಸ್ತಿ ಧನಂಜಯಸ್ಯ**
**ನ ಸಾತ್ಯಕೇಶ್ಚೈವ ಹರೇಃ ಪ್ರಸಾದಾತ್ ।**
**ರಕ್ಷ್ಯಸ್ತ್ವಮೇವಾತ್ರ ಮತೋ ಮಮಾದ್ಯ**
**ದ್ರೋಣೋ ಹ್ಯಯಂ ಯತತೇ ತ್ವಾಂ ಗ್ರಹೀತುಮ್ ॥ ೧೧೬ ॥**

**ಅರ್ಥ** :- **ಅತಃ** = ಆದ್ದರಿಂದ, **ಧನಂಜಯಸ್ಯ** = ಅರ್ಜುನನಿಗೆ, **ಸಾತ್ಯಕೇಶ್ಚಾಪಿ** = ಸಾತ್ಯಕಿಗೂ ಕೂಡ, **ಹರೇಃ** = ಕೃಷ್ಣನ, **ಪ್ರಸಾದಾತ್** = ಅನುಗ್ರಹದಿಂದ, **ಭಯಂ** = ಭಯವು, **ನಾಸ್ತಿ** = ಇಲ್ಲ, **ಅದ್ಯ** = ಈಗ, **ಅಯಂ ದ್ರೋಣಃ** = ಈ ದ್ರೋಣನು, **ತ್ವಾ** = ನಿನ್ನನ್ನು, **ಗ್ರಹೀತುಂ** = ಹಿಡಿಯಲು, **ಯತತೇ ಹಿ** = ಪ್ರಯತ್ನಿಸುತ್ತಿದ್ದಾನೆ, **ಅತ್ರ** = ಇಲ್ಲಿ, **ತ್ವಮೇವ** = ನೀನೇ, **ರಕ್ಷ್ಯಃ** = ರಕ್ಷಿಸಲ್ಪಡಬೇಕಾದವನಾಗಿ, **ಮಮ** = ನನಗೆ, **ಮತಃ** = ಸಮ್ಮತನಾಗಿದ್ದಿ.

**ತಾತ್ಪರ್ಯ** :- ಆದ್ದರಿಂದ ಅರ್ಜುನನಿಗೆ ಸಾತ್ಯಕಿಗೂ ಕೂಡ ಕೃಷ್ಣನ ಅನುಗ್ರಹವಿರುವುದರಿಂದ ಭಯವು ಇಲ್ಲ. ಈಗ ದ್ರೋಣನು ನಿನ್ನನ್ನು ಸೆರೆ ಹಿಡಿಯಲು ಪ್ರಯತ್ನಿಸುತ್ತಿದ್ದಾನೆ. ಆದ್ದರಿಂದ ಇಲ್ಲಿ ನೀನೇ ರಕ್ಷಿಸಲ್ಪಡಬೇಕು.

**ಇತೀರಿತಃ ಪ್ರಾಹ ಯುಧಿಷ್ಠಿರಸ್ತಂ**
**ನ ಜೀವಮಾನೇ ಯುಧಿ ಮಾಂ ಘಟೋತ್ಕಚೇ ।**
**ಧೃಷ್ಟದ್ಯುಮ್ನೇ ಚಾಸ್ತ್ರವಿದಾಂ ವರಿಷ್ಠೇ**
**ದ್ರೋಣೋ ವಶಂ ನೇತುಮಿಹ ಪ್ರಭುಃ ಕ್ವಚಿತ್ ॥ ೧೧೭ ॥**

**ಅರ್ಥ** :- **ಇತಿ** = ಈ ರೀತಿಯಾಗಿ, **ಈರಿತಃ** = ಹೇಳಲ್ಪಟ್ಟ, **ಯುಧಿಷ್ಠಿರಃ** = ಧರ್ಮರಾಜನು, **ತಂ** = ಆ ಭೀಮನನ್ನು ಕುರಿತು, **ಪ್ರಾಹ** = ಹೇಳಿದನು, **ಘಟೋತ್ಕಚೇ** = ಘಟೋತ್ಕಚನು, **ಚ** = ಮತ್ತು, **ಅಸ್ತ್ರವಿದಾಂ** = ಅಸ್ತ್ರಜ್ಞಾನಿಗಳಲ್ಲಿ, **ವರಿಷ್ಠೇ** = ಶ್ರೇಷ್ಠನಾದ, **ಧೃಷ್ಟದ್ಯುಮ್ನೇ** = ಧೃಷ್ಟದ್ಯುಮ್ನನು, **ಜೀವಮಾನೇ** = ಬದುಕಿರುತ್ತಿರಲು, **ದ್ರೋಣಃ** = ದ್ರೋಣನು, **ವಶಂ ನೇತುಂ** = ವಶಪಡಿಸಿಕೊಳ್ಳುವುದಕ್ಕೆ, **ಕ್ವಚಿತ್ ಪ್ರಭುಃ ನ** = ಎಂದೂ ಸಮರ್ಥನಲ್ಲ.

**ತಾತ್ಪರ್ಯ** :- ಭೀಮ ಹೀಗೆ ಹೇಳಿದಾಗ ಧರ್ಮರಾಜ ಹೇಳಿದ. ಘಟೋತ್ಕಚ ಮತ್ತು ಅಸ್ತ್ರವೇತ್ತರಲ್ಲಿ ಶ್ರೇಷ್ಠನಾದ ಧೃಷ್ಟದ್ಯುಮ್ನ ಇವರು ಬದುಕಿರುವಾಗ ದ್ರೋಣ ನನ್ನನ್ನು ವಶಮಾಡಿಕೊಳ್ಳಲಿಕ್ಕೆ ಶಕ್ತನಾಗುವುದಿಲ್ಲ.

**ಯದಿ ಪ್ರಿಯಂ ಕರ್ತುಮಿಹೇಚ್ಛಸಿ ತ್ವಂ**
**ಮಮ ಪ್ರಯಾಹ್ಯಾಶು ಚ ಪಾರ್ಥಸಾತ್ಯಕೀ ।**
**ರಕ್ಷಸ್ವ ಸಂಜ್ಞಾಮಪಿ ಸಿಂಹನಾದಾತ್**
**ಕುರುಷ್ವ ಮೇ ಪಾರ್ಥಶೈನೇಯದೃಷ್ಟೌ ॥ ೧೧೮ ॥**

**ಅರ್ಥ** :- **ತ್ವಂ** = ನೀನು, **ಯದಿ** = ಒಂದುವೇಳೆ, **ಮಮ** = ನನಗೆ, **ಪ್ರಿಯಂ** = ಇಷ್ಟವಾದುದನ್ನು, **ಕರ್ತುಂ** = ಮಾಡಲು, **ಇಹ** = ಈಗ, **ಇಚ್ಛಸಿ** = ಇಚ್ಛಿಸುವಿಯಾದರೆ, **ಪಾರ್ಥಸಾತ್ಯಕೀ** = ಅರ್ಜುನ ಸಾತ್ಯಕಿಯರನ್ನು ಕುರಿತು, **ಆಶು** = ಬೇಗನೇ, **ಪ್ರಯಾಹಿ** = ಹೋಗು, **ಚ** = ಮತ್ತು, **ರಕ್ಷಸ್ವ** = ರಕ್ಷಿಸು, **ಪಾರ್ಥಶೈನೇಯದೃಷ್ಟೌ** = ಅರ್ಜುನಸಾತ್ಯಕಿಯರನ್ನು ನೋಡುತ್ತಿರಲು, **ಸಿಂಹನಾದಾತ್** = ಸಿಂಹನಾದದಿಂದ, **ಮೇ** = ನನಗೆ, **ಸಂಜ್ಞಾಮಪಿ ಕುರುಷ್ವ** = ಸೂಚನೆಯನ್ನೂ ಕೊಡು.

ತಾತ್ಪರ್ಯ :- ನೀನು ನನಗೆ ಪ್ರಿಯವಾದುದನ್ನು ಇಚ್ಛಿಸುವಿಯಾದರೆ ಅರ್ಜುನ ಸಾತ್ಯಕಿಯರ ಬಳಿಗೆ ಹೋಗು. ಅವರನ್ನು ರಕ್ಷಿಸು. ಅವರನ್ನು ನೋಡಿದ ತಕ್ಷಣ ನನಗೆ ಸಿಂಹನಾದದಿಂದ ಅದರ ಬಗ್ಗೆ ಸೂಚನೆ ನೀಡು.

**ತಥಾ ಹತೇ ಚೈವ ಜಯದ್ರಥೇ ಮೇ**
**ಕುರುಷ್ವ ಸಂಜ್ಞಾಮಿತಿ ತೇನ ಭೀಮಃ ।**
**ಉಕ್ತಸ್ತು ಹೈಡಿಂಬಮಮುಷ್ಯ ರಕ್ಷಣೇ**
**ವ್ಯಧಾಚ್ಚ ಸೇನಾಪತಿಮೇವ ಸಮ್ಯಕ್ ॥ ೧೧೯ ॥**

**ಅರ್ಥ** :- **ತಥಾ** = ಹಾಗೆ, **ಜಯದ್ರಥೇ** = ಸೈಂಧವನು, **ಹತೇ ಚೈವ** = ಹತನಾಗುತ್ತಿರುವಾಗಲೂನೂ, **ಮೇ** = ನನಗೆ, **ಸಂಜ್ಞಾಂ ಕುರುಷ್ವ** = ಸೂಚನೆ ಕೊಡು, **ಇತಿ** = ಈ ರೀತಿಯಾಗಿ, **ತೇನ** = ಆ ಯುಧಿಷ್ಠಿರನಿಂದ, **ಉಕ್ತಃ** = ಹೇಳಲ್ಪಟ್ಟ, **ಭೀಮಸ್ತು** = ಭೀಮನಾದರೂ, **ಅಮುಷ್ಯ** = ಈ ಧರ್ಮರಾಜನ, **ರಕ್ಷಣೇ** = ರಕ್ಷಣೆಯಲ್ಲಿ, **ಹೈಡಿಂಬಂ** = ಘಟೋತ್ಕಚನನ್ನು, **ಸೇನಾಪತಿಮೇವ ಚ** = ಸೇನಾಪತಿಯಾದ ದೃಷ್ಟದ್ಯುಮ್ನನನ್ನೂ, **ಸಮ್ಯಕ್** = ಚೆನ್ನಾಗಿ, **ವ್ಯಧಾತ್** = ನಿಯೋಜಿಸಿದನು.

ತಾತ್ಪರ್ಯ :- ಹಾಗೆ ಸೈಂಧವ ಸತ್ತಾಗಲೂ ನನಗೆ ಸೂಚನೆ ಕೊಡು. ಹೀಗೆ ಧರ್ಮರಾಜ ಹೇಳಿದಾಗ ಭೀಮ ಅವನ ರಕ್ಷಣೆಯ ಕಾರ್ಯದಲ್ಲಿ ಘಟೋತ್ಕಚ ಮತ್ತೂ ಸೇನಾಧಿಪತಿಯಾದ ದೃಷ್ಟದ್ಯುಮ್ನನನ್ನು ಚೆನ್ನಾಗಿ ನಿಯೋಜಿಸಿದ.

**ಸ ಚಾಽಹ ಸೇನಾಪತಿರತ್ರ ಭೀಮಂ**
**ಪ್ರಯಾಹಿ ತೌ ಯತ್ರ ಚ ಕೇಶವಾರ್ಜುನೌ ।**
**ನ ಜೀವಮಾನೇ ಮಯಿ ಧರ್ಷಿತುಂ ಕ್ಷಮೋ**
**ದ್ರೋಣೋ ನೃಪಂ ಮೃತ್ಯುರಹಂ ಚ ತಸ್ಯ ॥ ೧೨೦ ॥**

**ಅರ್ಥ** :- **ಅತ್ರ** = ಇಲ್ಲಿ, **ಸೇನಾಪತಿಃ** = ಸೇನಾಪತಿಯಾದ, **ಸ ಚ** = ಆ ದೃಷ್ಟದ್ಯುಮ್ನನಾದರೂ, **ಭೀಮಂ** = ಭೀಮನನ್ನು ಕುರಿತು, **ಆಹ** = ಹೇಳಿದನು, **ಯತ್ರ** = ಎಲ್ಲಿ, **ತಾ ಕೇಶವಾರ್ಜುನೌ** = ಆ ಕೃಷ್ಣಾರ್ಜುನರಿದ್ದಾರೋ (ತತ್ರ = ಅಲ್ಲಿಗೆ), **ಪ್ರಯಾಹಿ** = ಹೋಗು, **ಮಯಿ**

= ನಾನು, **ಜೀವಮಾನೇ** = ಜೀವಿಸುತ್ತಿರಲು, **ದ್ರೋಣಃ** = ದ್ರೋಣನು, **ನೃಪಂ** = ಯುಧಿಷ್ಠಿರನನ್ನು, **ಧರ್ಷಿತುಂ** = ಪೀಡಿಸಲು, **ನ ಕ್ಷಮಃ** = ಸಮರ್ಥನಾಗುವುದಿಲ್ಲ, **ಅಹಂ** = ನಾನು, **ತಸ್ಯ** = ಅವನಿಗೆ, **ಮೃತ್ಯುಃ** = ಮೃತ್ಯುವು.

**ತಾತ್ಪರ್ಯ** :- ಸೇನಾಪತಿಯಾದ ದೃಷ್ಟದ್ಯುಮ್ನ ಭೀಮನಿಗೆ ಹೇಳಿದ. ನೀನು ಕೃಷ್ಣಾರ್ಜುನರಿರುವಲ್ಲಿಗೆ ಹೋಗು. ನಾನು ಬದುಕಿರುವಾಗ ನನ್ನ ಬಳಿಯಿರುವ ಧರ್ಮರಾಜನನ್ನು ಬಲಾತ್ಕರಿಸಲು ದ್ರೋಣ ಸಮರ್ಥನಾಗುವುದಿಲ್ಲ. ಏಕೆಂದರೆ ದ್ರೋಣನಿಗೆ ನಾನು ಮೃತ್ಯು.

**ಇತಿ ಬ್ರುವಾಣೇ ಪ್ರಣಿಧಾಯ ಭೀಮಃ**
**ಪುನಃಪುನಸ್ತಂ ನೃಪತಿಂ ಗದಾಧರಃ ।**
**ಯಯೌ ಪರಾನೀಕಮಧಿಜ್ಯಧನ್ವಾ**
**ನಿರಂತರಂ ಪ್ರವಪನ್ ಬಾಣಪೂಗಾನ್ ॥ ೧೨೧ ॥**

**ಅರ್ಥ** :- **ಇತಿ** = ಈ ರೀತಿಯಾಗಿ, **ಪುನಃ ಪುನಃ** = ಮತ್ತೆ ಮತ್ತೆ, **ಬ್ರುವಾಣೇ** = ಹೇಳುತ್ತಿರಲು, **ಗದಾಧರಃ** = ಗದಾಧಾರಿಯಾದ, **ಭೀಮಃ** = ಭೀಮನು, **ನೃಪತಿಂ** = ಯುಧಿಷ್ಠಿರನನ್ನು, **ಪ್ರಣಿಧಾಯ** = ಇರಿಸಿ, **ಅಧಿಜ್ಯಧನ್ವಾ** = ಹೆದೆ ಏರಿಸಲ್ಪಟ್ಟ ಬಿಲ್ಲುಳ್ಳವನಾಗಿ, **ನಿರಂತರಂ** = ನಿರಂತರವಾಗಿ, **ಬಾಣಪೂಗಾನ್ ಪ್ರವಮನ್** = ಬಾಣಸಮೂಹಗಳನ್ನು ಸುರಿಸುತ್ತಾ, **ಪರಾನೀಕಂ ಯಯೌ** = ಶತ್ರು ಸೈನ್ಯವನ್ನು ಹೊಂದಿದನು.

**ತಾತ್ಪರ್ಯ** :- ಈ ರೀತಿಯಾಗಿ ದೃಷ್ಟದ್ಯುಮ್ನ ಮತ್ತೆ ಮತ್ತೆ ಹೇಳಿದಾಗ ಗದಾಧಾರಿಯಾದ ಭೀಮ ಧರ್ಮರಾಜನನ್ನು ದೃಷ್ಟದ್ಯುಮ್ನನ ಹತ್ತಿರ ಇರಿಸಿ ಬಿಲ್ಲನ್ನು ಧರಿಸಿ ನಿರಂತರವಾಗಿ ಬಾಣಸಮೂಹಗಳನ್ನು ಚೆಲ್ಲುತ್ತಾ ಶತ್ರುಸೈನ್ಯವನ್ನು ಪ್ರವೇಶಿಸಿದನು.

**ನ್ಯವಾರಯತ್ ತಂ ಶರವರ್ಷಧಾರೋ**
**ದ್ರೋಣೋ ವಚಶ್ಚೇದಮುವಾಚ ಭೀಮಮ್ ।**
**ಶಿಷ್ಯಸ್ನೇಹಾದ್ ವಾಸವಿಃ ಸಾತ್ಯಕಿಶ್ಚ**
**ಮಯಾ ಪ್ರಮುಕ್ತೌ ಭೃಶಮಾನತೌ ಮಯಿ ॥ ೧೨೨ ॥**

**ಅರ್ಥ :- ಶರವರ್ಷಧಾರಃ** = ಬಾಣಗಳ ಮಳೆ ಸುರಿಸುತ್ತಿದ್ದ, **ದ್ರೋಣಃ** = ದ್ರೋಣನು, **ತಂ** = ಆ ಭೀಮನನ್ನು, **ನ್ಯವಾರಯತ್** = ತಡೆದನು, **ಇದಂ ವಚಃ** = ಮುಂದಿನ ಈ ಮಾತನ್ನು, **ಭೀಮಂ** = ಭೀಮನನ್ನು ಕುರಿತು, **ಉವಾಚ** = ಹೇಳಿದನು, **ಮಯಿ** = ನನ್ನಲ್ಲಿ, **ಭೃಶಂ** = ಬಹಳ, **ಆನತೌ** = ವಿನೀತರಾದ, **ವಾಸವಿಃ ಚ** = ಅರ್ಜುನನೂ, **ಸಾತ್ಯಕಿಶ್ಚ** = ಸಾತ್ಯಕಿಯೂ, **ಮಯಾ** = ನನ್ನಿಂದ, **ಶಿಷ್ಯಸ್ನೇಹಾತ್** = ಶಿಷ್ಯವಾತ್ಸಲ್ಯದಿಂದ, **ಪ್ರಮುಕ್ತೌ** = ಬಿಡಲ್ಪಟ್ಟರು.

**ತಾತ್ಪರ್ಯ :-** ದ್ರೋಣನು ಬಾಣಗಳ ಮಳೆ ಸುರಿಸುತ್ತಾ ಭೀಮನನ್ನು ತಡೆದು ಭೀಮನಿಗೆ ಈ ಮಾತನ್ನು ಹೇಳಿದ. 'ಶಿಷ್ಯ ವಾತ್ಸಲ್ಯದಿಂದ ನಾನು ಅರ್ಜುನನನ್ನು ಸಾತ್ಯಕಿಯನ್ನೂ ಬಿಟ್ಟೆ ಏಕೆಂದರೆ ಅವರು ನನ್ನಲ್ಲಿ ಬಹಳ ವಿನೀತರಾಗಿದ್ದಾರೆ.

**ಸ್ವೀಯಾ ಪ್ರತಿಜ್ಞಾऽಪಿ ಹಿ ಸೈಂಧವಸ್ಯ**
**ಗುಪ್ತೌ ಮಯಾ ಪಾರ್ಥಕೃತೇ ವಿಸೃಷ್ಟಾ ।**
**ದಾಸ್ಯೇ ನ ತೇ ಮಾರ್ಗಮಹಂ ಕಥಂಚಿದ್**
**ಪಶ್ಯಾಸ್ತ್ರವೀರ್ಯಂ ಮಮ ದಿವ್ಯಮದ್ಭುತಮ್ ॥ ೧೨೩ ॥**

**ಅರ್ಥ :- ಸೈಂಧವಸ್ಯ ಗುಪ್ತೌ** = ಸೈಂಧವನ ರಕ್ಷಣೆಯ ವಿಷಯದಲ್ಲಿ, **ಸ್ವೀಯಾ** = ನನ್ನ, **ಪ್ರತಿಜ್ಞಾ** = ಪ್ರತಿಜ್ಞೆಯು, **ಪಾರ್ಥ ಕೃತೇ** = ಅರ್ಜುನನಿಗಾಗಿ, **ಮಯಾ** = ನನ್ನಿಂದ, **ವಿಸೃಷ್ಟಾ** = ಬಿಡಲ್ಪಟ್ಟಿತು, **ಅಹಂ** = ನಾನು, **ತೇ** = ನಿನಗೆ, **ಕಥಂಚಿತ್** = ಯಾವ ರೀತಿಯಿಂದಲೂ, **ಮಾರ್ಗಂ** = ದಾರಿಯನ್ನು, **ನ ದಾಸ್ಯೇ** = ಕೊಡುವುದಿಲ್ಲ, **ಮಮ** = ನನ್ನ, **ದಿವ್ಯಂ** = ದಿವ್ಯವಾದ, **ಅದ್ಭುತಮ್** = ಅದ್ಭುತವಾದ, **ಅಸ್ತ್ರವೀರ್ಯಂ** = ಅಸ್ತ್ರದ ಸಾಮರ್ಥ್ಯವನ್ನು, **ಪಶ್ಯ** = ನೋಡು.

**ತಾತ್ಪರ್ಯ :-** ಸೈಂಧವನ ರಕ್ಷಣೆಯ ವಿಷಯದಲ್ಲಿ ನಾನು ಮಾಡಿದ್ದ ಪ್ರತಿಜ್ಞೆಯನ್ನು ಅರ್ಜುನನಿಗಾಗಿ ಬಿಟ್ಟಿದ್ದೇನೆ. ಆದರೆ ನಾನು ನಿನಗೆ ಯಾವ ರೀತಿಯಿಂದಲೂ ದಾರಿ ನೀಡಲಾರೆ. ನನ್ನ ಅದ್ಭುತವಾದ ದಿವ್ಯವಾದ ಅಸ್ತ್ರಸಾಮರ್ಥ್ಯವನ್ನು ನೋಡು.

**ಇತ್ಯುಕ್ತವಾಕ್ಯಃ ಸ ಗದಾಂ ಸಮಾದದೇ**
**ಚಿಕ್ಷೇಪ ತಾಂ ದ್ರೋಣರಥಾಯ ಭೀಮಃ ।**
**ಉವಾಚ ಚಾಹಂ ಪಿತೃವನ್ಮಾನಯೇ ತ್ವಾಂ**
**ಸದಾ ಮೃದುಸ್ತ್ವಾಂ ಪ್ರತಿ ನಾನ್ಯಥಾ ಕ್ವಚಿತ್ ।। ೧೨೪ ।।**

**ಅರ್ಥ** :- **ಇತಿ** = ಈ ರೀತಿಯಾಗಿ, **ಉಕ್ತವಾಕ್ಯಃ** = ಹೇಳಲ್ಪಟ್ಟ ವಾಕ್ಯವುಳ್ಳ, **ಸಃ** = ಆ ಭೀಮನು, **ಗದಾಂ** = ಗದೆಯನ್ನು, **ಸಮಾದದೇ** = ತೆಗೆದುಕೊಂಡನು, **ಭೀಮಃ** = ಭೀಮನು, **ತಾಂ** = ಆ ಗದೆಯನ್ನು, **ದ್ರೋಣರಥಾಯ** = ದ್ರೋಣನ ರಥಕ್ಕೆ, **ಚಿಕ್ಷೇಪ** = ಎಸೆದನು, **ಉವಾಚ** = ಹೇಳಿದನೂ ಕೂಡ, **ಅಹಂ** = ನಾನು, **ತ್ವಾಂ** = ನಿನ್ನನ್ನು, **ಪಿತೃವತ್** = ತಂದೆಯಂತೆ, **ಮಾನಯೇ** = ಗೌರವಿಸುತ್ತೇನೆ, **ಸದಾ** = ಯಾವಾಗಲೂ, **ತ್ವಾಂ ಪ್ರತಿ** = ನಿನ್ನನ್ನು ಕುರಿತು, **ಮೃದುಃ** = ಮೃದುವು, **ಕ್ವಚಿತ್** = ಎಂದೂಕೂಡ, **ಅನ್ಯಥಾನ** = ಕಠಿಣವಾಗಿ ಇರುವುದಿಲ್ಲ.

**ತಾತ್ಪರ್ಯ** :- ದ್ರೋಣ ಹೀಗೆ ಹೇಳಿದಾಗ ಭೀಮ ಗದೆಯನ್ನೆತ್ತಿಕೊಂಡು ಅದನ್ನು ದ್ರೋಣನ ರಥಕ್ಕೆ ಎಸೆದನು ಮತ್ತು ಹೇಳಿದ ನಾನು ನಿನ್ನನ್ನು ತಂದೆಯಂತೆ ಭಾವಿಸುತ್ತೇನೆ. ಆದ್ದರಿಂದ ನಾನು ಸದಾ ನಿನ್ನೊಡನೆ ಮೃದುವಾಗಿ ಹೋರಾಡುತ್ತೇನೆ ಹೊರತು ಕಠಿಣವಾಗಿ ಹೋರಾಡುವುದಿಲ್ಲ.

**ಅಮಾರ್ದವೇ ಪಶ್ಯ ಚ ಯಾದೃಶಂ ಬಲಂ**
**ಮಮೇತಿ ತಸ್ಯಾಽಶು ವಿಚೂರ್ಣಿತೋ ರಥಃ ।**
**ಗದಾಭಿಪಾತೇನ ವೃಕೋದರಸ್ಯ**
**ಸಸೂತವಾಜಿಧ್ವಜಯಂತ್ರಕೂಬರಃ ।। ೧೨೫ ।।**

**ಅರ್ಥ** :- **ಅಮಾರ್ದವೇ** = ಮೃದುವಾಗಿ ಅಲ್ಲದಿದ್ದರೆ, **ಮಮ** = ನನ್ನ, **ಬಲಂ** = ಬಲವು, **ಯಾದೃಶಂ** = ಯಾವ ರೀತಿಯಾದುದು, **ಪಶ್ಯ** = ನೋಡು, **ಇತಿ** = ಎಂಬುದಾಗಿ, **ಉವಾಚ** = ಹೇಳಿದನು, **ಆಶು** = ಕೂಡಲೇ, **ವೃಕೋದರಸ್ಯ** = ಭೀಮಸೇನನ, **ಗದಾಭಿಘಾತೇನ** = ಗದೆಯ ಏಟಿನಿಂದ, **ತಸ್ಯ** = ಆ ದ್ರೋಣನ, **ಸಸತೂವಾಜಿಧ್ವಜಯನ್ತ್ರಕೂಬರಃ** = ಸಾರಥಿ ಕುದುರೆ ಧ್ವಜ ಚಕ್ರ ನೊಗಗಳಿಂದ ಕೂಡಿದ, **ರಥಶ್ಚ** = ರಥವೂ, **ವಿಚೂರ್ಣಿತಃ** = ಪುಡಿ ಮಾಡಲ್ಪಟ್ಟಿತು.

**ತಾತ್ಪರ್ಯ** :- ಕಠೋರವಾದರೆ ನನ್ನ ಬಲ ಯಾವ ರೀತಿಯಾದದು ಎಂದು ನೋಡು ಭೀಮ ಹೀಗೆ ಹೇಳಿದ ಕೂಡಲೇ ಭೀಮನು ತನ್ನ ಗದೆಯ ಏಟಿನಿಂದ ದ್ರೋಣನ ರಥ ಸಾರಥಿ ಕುದುರೆ ಧ್ವಜ ಚಕ್ರನೋಗಗಳನ್ನು ಪುಡಿ ಮಾಡಿದನು.

**ದ್ರೋಣೋ ಗದಾಮಾಪತತೀಂ ನಿರೀಕ್ಷ್ಯ**
**ತ್ವವಪ್ಲುತೋ ಲಾಘವತೋ ಧರಾತಳೇ ।**
**ತದೈವ ದುರ್ಯೋಧನಯಾಪಿತಂ ರಥಂ**
**ಪರಂ ಸಮಾಸ್ಥಾಯ ಶರಾನ್ ವವರ್ಷ ಹ ॥ ೧೨೬ ॥**

**ಅರ್ಥ** :- **ಆ ಪತತೀಂ** = ಬರುತ್ತಿದ್ದಂತಹ, **ಗದಾಂ** = ಗದೆಯನ್ನು, ನೀರೀಕ್ಷ್ಯ = ನೋಡಿ, **ದ್ರೋಣಃ** = ದ್ರೋಣನು, **ಲಾಘವತಃ** = ತ್ವರಿತದಿಂದ, ಧರಾತಲೇ **ಅವಪ್ಲುತಃ** = ನೆಲಕ್ಕೆ ಹಾರಿದನು, **ತದೈವ** = ಆವಾಗಲೇನೇ, **ದುರ್ಯೋಧನಯಾಪಿತಂ** = ದುರ್ಯೋಧನನಿಂದ ಕಳಿಸಲ್ಪಟ್ಟ, **ಪರಂ ರಥಂ** = ಇನ್ನೊಂದು ರಥವನ್ನು, **ಸಮಾಸ್ಥಾಯ** = ಏರಿ, **ಶರಾನ್ ವವರ್ಷ ಹ** = ಬಾಣಗಳನ್ನು ಮಳೆಗರಿಸಿದನಷ್ಟೇ.

**ತಾತ್ಪರ್ಯ** :- ಗದೆ ಬರುತ್ತಿದ್ದದ್ದನ್ನು ನೋಡಿ ದ್ರೋಣ ಬೇಗನೇ ನೆಲಕ್ಕೆ ಹಾರಿದ. ತಕ್ಷಣವೇ ದುರ್ಯೋಧನ ಕಳುಸಿದ ಮತ್ತೊಂದು ರಥವನ್ನೇರಿ ಬಾಣಗಳ ಮಳೆ ಸುರಿಸಿದ.

**ಶರೈಸ್ತದೀಯೈಃ ಪರಮಾಸ್ತ್ರಮಂತ್ರಿತೈಃ**
**ಪ್ರವೃಷ್ಯಮಾಣೋ ಜಗದೀರಣಾತ್ಮಜಃ ।**
**ಶಿರೋ ನಿಧಾಯಾSಶು ಪುರೋ ವೃಷೋ ಯಥಾ**
**ತಮಭ್ಯಯಾದೇವ ರಥಾದವಪ್ಲುತಃ ॥ ೧೨೭ ॥**

**ಅರ್ಥ** :- **ತದೀಯೈಃ** = ಅವನದ್ದಾದ, **ಪರಮಾಸ್ತ್ರಮಂತ್ರಿತೈಃ** = ಉತ್ತಮವಾದ ಅಸ್ತ್ರಮಂತ್ರಗಳಿಂದ ಮಂತ್ರಿತವಾದ, **ಶರೈಃ** = ಬಾಣಗಳಿಂದ, **ಪ್ರವೃಷ್ಯಮಾಣಃ** = ಮಳೆಗರಿಸಲ್ಪಟ್ಟರೂ, **ಜಗದೀರಣಾತ್ಮಜಃ** = ಭೀಮನು, **ರಥಾದವಪ್ಲುತಃ** = ರಥದಿಂದ ಹಾರಿದವನಾಗಿ, **ಶಿರಃ** = ಶಿರಸ್ಸನ್ನು, **ಪುರೋನಿಧಾಯ** = ಮುಂದೆ ಮಾಡಿಕೊಂಡು, **ಯಥಾ** = ಹೇಗೆ, **ವೃಷಃ** =

ಎತ್ತು ಹೋಗುತ್ತೋ, **ತಥಾ** = ಹಾಗೆ, **ಆಶು** = ಬೇಗನೇ, **ತಂ** = ಆ ದ್ರೋಣನನ್ನು ಕುರಿತು, **ಅಭ್ಯಯಾದೇವ** = ಹೋಗಿಬಿಟ್ಟನು.

**ತಾತ್ಪರ್ಯ** :- ಉತ್ತಮವಾದ ಅಸ್ತ್ರಮಂತ್ರಗಳಿಂದ ಮಂತ್ರಿತವಾದ ಬಾಣಗಳ ಮಳೆಯನ್ನು ದ್ರೋಣ ತನ್ನ ಮೇಲೆ ಸುರಿಸುತ್ತಿದ್ದಂತೆಯೇ ಭೀಮ ರಥದಿಂದ ಹಾರಿ ತಲೆಯನ್ನು ಮುಂದೆ ಮಾಡಿಕೊಂಡು ಗೂಳಿಯಂತೆ ದ್ರೋಣನ ಕಡೆಗೆ ಹೋದನು.

**ಮನೋಜವಾದೇವ ತಮಾಪ್ಯ ಭೀಮೋ**
**ರಥಂ ಗೃಹೀತ್ವಾಽಂಬರ ಆಕ್ಷಿಪತ್ ಕ್ಷಣಾತ್ ।**
**ಶಕ್ತೋಽಪ್ಯಹಂ ತ್ವಾಂ ನ ನಿಹನ್ಮಿ ಗೌರವಾ-**
**ದಿತ್ಯೇವ ಸುಜ್ಞಾಪಯಿತುಂ ತದಸ್ಯ ॥ ೧೨೮ ॥**

**ಅರ್ಥ** :- **ಅಹಂ** = ನಾನು, **ಶಕ್ತೋಽಪಿ** = ಸಮರ್ಥನಾದರೂ, **ಗೌರವಾತ್** = ಗೌರವದಿಂದ, **ತ್ವಾಂ** = ನಿನ್ನನ್ನು, **ನ ನಿಹನ್ಮಿ** = ಕೊಲ್ಲುವುದಿಲ್ಲ, **ಇತಿ** = ಎಂಬುದಾಗಿ, **ತತ್** = ಆ ವಿಷಯವನ್ನು, **ಅಸ್ಯ** = ಈ ದ್ರೋಣನಿಗೆ, **ಸಂಜ್ಞಾಪಯಿತುಂ** = ತಿಳಿಸಲು, **ಭೀಮಃ** = ಭೀಮನು, **ಮನೋಜವಾತ್ ಏವ** = ಮನೋವೇಗದಿಂದಲೇನೇ, **ತಂ** = ಆ ದ್ರೋಣನನ್ನು, **ಆಪ್ಯ** = ಹೊಂದಿ, **ಕ್ಷಣಾತ್** = ಒಂದು ಕ್ಷಣದಲ್ಲಿ, **ರಥಂ ಗೃಹೀತ್ವಾ** = ರಥವನ್ನು ಹಿಡಿದುಕೊಂಡು, **ಅಂಬರೇ ಆಕ್ಷಿಪತ್** = ಆಕಾಶಕ್ಕೆ ಎಸೆದನು.

**ತಾತ್ಪರ್ಯ** :- ನಾನು ಶಕ್ತನಾದರೂ ಗೌರವದಿಂದ ನಿನ್ನನ್ನು ಕೊಲ್ಲುವುದಿಲ್ಲ ಎಂದು ದ್ರೋಣನಿಗೆ ತಿಳಿಸುವುದಕ್ಕಾಗಿ ಭೀಮ ಮನೋವೇಗದಿಂದ ದ್ರೋಣನ ಬಳಿಗೆ ಬಂದು ಕ್ಷಣದಲ್ಲಿ ರಥವನ್ನೆತ್ತಿಕೊಂಡು ಆಕಾಶಕ್ಕೆ ಎಸೆದನು.

**ಸವಾಜಿಸೂತಃ ಸ ರಥಃ ಕ್ಷಿತೌ ಪತನ್**
**ವಿಚೂರ್ಣಿತೋಽಸ್ಮಾದ್ ಗುರುರಪ್ಯವಪ್ಲುತಃ ।**
**ತದಾ ವಿಶೋಕೋಽಸ್ಯ ರಥಂ ಸಮಾನಯತ್**
**ತಮಾರುಹದ್ ಭೀಮ ಉದಾರವಿಕ್ರಮಃ ॥ ೧೨೯ ॥**

**ಅರ್ಥ** :- **ಸವಾಜಿಸೂತಃ** = ಕುದುರೆ ಸಾರಥಿಯಿಂದ ಕೂಡಿದ, **ಸಃ ರಥಃ** = ಆ ರಥವು, **ಕ್ಷಿತೌ** = ನೆಲಕ್ಕೆ, **ಪತನ್** = ಬೀಳುತ್ತಾ, **ವಿಚೂರ್ಣಿತಃ** =

ಪುಡಿಯಾಯಿತು, **ಅಸ್ಮಾತ್** = ಈ ರಥದಿಂದ, **ಗುರುರಪಿ** = ದ್ರೋಣರೂ ಕೂಡ, **ಅವಪ್ಲುತಃ** = ಹಾರಿದರು, **ತದಾ** = ಆವಾಗ, **ವಿಶೋಕಃ** = ವಿಶೋಕನು, **ಅಸ್ಯ** = ಈ ಭೀಮನಿಗೆ, **ರಥಂ** = ರಥವನ್ನು, **ಸಮಾನಯತ್** = ತಂದನು, **ಉದಾರವಿಕ್ರಮಃ** = ಮಹಾಪರಾಕ್ರಮವುಳ್ಳ, **ಭೀಮಃ** = ಭೀಮನು, **ತಂ** = ಆ ರಥವನ್ನು, **ಆರುಹತ್** = ಏರಿದನು.

**ತಾತ್ಪರ್ಯ** :- ಕುದುರೆ ಸಾರಥಿಯಿಂದ ಕೂಡಿದ ರಥ ನೆಲದಲ್ಲಿ ಬಿದ್ದು ಪುಡಿಯಾಯಿತು. ಅದು ಬೀಳುವುದರೊಡನೆ ದ್ರೋಣ ನೆಲಕ್ಕೆ ಹಾರಿದನು. ಆವಾಗ ವಿಶೋಕ ಭೀಮನಿಗಾಗಿ ರಥವನ್ನು ತಂದನು. ಮಹಾಪರಾಕ್ರಮಿ ಯಾದ ಭೀಮ ಆ ರಥವನ್ನೇರಿದ.

**ದ್ರೋಣೋಽಪಿ ದುರ್ಯೋಧನದತ್ತಮನ್ಯಂ**
**ರಥಂ ಸಮಾಸ್ಥಾಯ ಯುಧಿಷ್ಠಿರಂ ಯಯೌ ।**
**ಗ್ರಹೀತುಕಾಮಂ ನೃಪತಿಂ ಪ್ರಯಾಂತಂ**
**ನ್ಯವಾರಯತ್ ಸಂಯತಿ ವಾಹಿನೀಪತಿಃ ॥ ೧೩೦ ॥**

**ಅರ್ಥ** :- **ದ್ರೋಣೋಽಪಿ** = ದ್ರೋಣನಾದರೂ, **ದುರ್ಯೋಧನದತ್ತಂ** = ದುರ್ಯೋಧನನಿಂದ ಕೊಡಲ್ಪಟ್ಟ, **ಅನ್ಯಂ ರಥಂ** = ಬೇರೆ ರಥವನ್ನು, **ಸಮಾಸ್ಥಾಯ** = ಏರಿ, **ಯಯೌ** = ಹೋದನು, **ನೃಪತಿಂ** = ಯುಧಿಷ್ಠಿರ ನನ್ನು, **ಗ್ರಹೀತುಕಾಮಂ** = ಹಿಡಿಯಲು ಇಚ್ಛೆಯುಳ್ಳ, **ಪ್ರಯಾಂತಂ** = ಹೋಗುತ್ತಿದ್ದ ಆ ದ್ರೋಣನನ್ನು, **ವಾಹಿನೀ ಪತಿಃ** = ಸೇನಾಧಿಪತಿಯಾದ ದೃಷ್ಟದ್ಯುಮ್ನನು, **ಸಂಯತಿ** = ಯುದ್ಧದಲ್ಲಿ, **ನ್ಯವಾರಯತ್** = ತಡೆದನು.

**ತಾತ್ಪರ್ಯ** :- ದ್ರೋಣನಾದರೂ ದುರ್ಯೋಧನ ಕೊಟ್ಟ ಇನ್ನೊಂದು ರಥವನ್ನೇರಿ ಧರ್ಮರಾಜನನ್ನು ಹಿಡಿಯಲು ಹೋದನು. ಆ ದ್ರೋಣನನ್ನು ದೃಷ್ಟದ್ಯುಮ್ನ ತಡೆದನು.

**ವಿದ್ರಾವಿತಾಂ ದ್ರೋಣಶರೈಃ ಸ್ವಸೇನಾಂ**
**ಸಂಸ್ಥಾಪ್ಯ ಭೂಯೋ ದ್ರುಪದಾತ್ಮಜಃ ಶರೈಃ ।**
**ದ್ರೋಣಂ ನಿವಾರ್ಯೈವ ಚಮೂಂ ಪರೇಷಾಂ**
**ವಿದ್ರಾವಯಮಾಸ ಚ ತಸ್ಯ ಪಶ್ಯತಃ ॥ ೧೩೧ ॥**

**ಅರ್ಥ** :- **ದ್ರುಪದಾತ್ಮಜಃ** = ದೃಷ್ಟದ್ಯುಮ್ನನು, **ದ್ರೋಣಶರೈಃ** = ದ್ರೋಣನ ಬಾಣಗಳಿಂದ, **ವಿದ್ರಾವಿತಾಂ** = ಓಡಿಸಲ್ಪಡುತ್ತಿದ್ದ, **ಸ್ವಸೇನಾಂ** = ತಮ್ಮ ಸೈನ್ಯವನ್ನು, **ಸಂಸ್ಥಾಪ್ಯ** = ನಿಲ್ಲಿಸಿ, **ಭೂಯಃ** = ಮತ್ತೆ, **ಶರೈಃ** = ಬಾಣಗಳಿಂದ, **ದ್ರೋಣಂ** = ದ್ರೋಣನನ್ನು, **ನಿವಾರ್ಯ** = ತಡೆದು, **ತಸ್ಯ ಪಶ್ಯತಃ** = ದ್ರೋಣ ನೋಡುತ್ತಿದ್ದಂತೆಯೇ, **ಪರೇಷಾಂ** = ಶತ್ರುಗಳಾದ ಕೌರವರ, **ಸೇನಾಂ** = ಸೇನೆಯನ್ನು, **ವಿದ್ರಾವಯಾಮಾಸ** = ಓಡಿಸಿದನು.

**ತಾತ್ಪರ್ಯ** :- ದೃಷ್ಟದ್ಯುಮ್ನನು ದ್ರೋಣನ ಬಾಣಗಳಿಂದ ಓಡಿಸಲ್ಪಡುತ್ತಿದ್ದ ತಮ್ಮ ಸೈನ್ಯವನ್ನು ನೋಡಿ ತಡೆದು ನಿಲ್ಲಿಸಿ ಮತ್ತೆ ಬಾಣಗಳಿಂದ ದ್ರೋಣನನ್ನು ತಡೆದು ಅವನ ಮುಂದೆಯೇ ಕೌರವರ ಸೈನ್ಯವನ್ನು ಓಡಿಸಿದನು.

**ತಯೋರಭೂದ್ ಯುದ್ಧಮತೀವ ರೌದ್ರಂ**
**ಜಯೈಷಿಣೋಃ ಪಾಂಡವಧಾರ್ತರಾಷ್ಟ್ರಯೋಃ ।**
**ಅತ್ಯದ್ಭುತಂ ಸಂತತಬಾಣವರ್ಷ-**
**ಮನಾರತಂ ಸುಚಿರಂ ನಿರ್ವಿಶೇಷಮ್ ॥ ೧೩೨ ॥**

**ಅರ್ಥ** :- **ಪಾಂಡವಧಾರ್ತರಾಷ್ಟ್ರಯೋಃ** = ಪಾಂಡವ ಕೌರವರಿಗೆ, **ಜಯೈಷಿಣೋಃ** = ಜಯಬಯಸುವ, **ತಯೋಃ** = ಆ ದೃಷ್ಟದ್ಯುಮ್ನ ದ್ರೋಣರಿಗೆ, **ಅತೀವ ರೌದ್ರಂ** = ಬಹಳ ಭಯಂಕರವಾದ, **ಅತ್ಯದ್ಭುತಂ** = ಬಹಳ ಅದ್ಭುತವಾದ, **ಸಂತತ ಬಾಣವರ್ಷಂ** = ಸತತವಾದ ಬಾಣಗಳ ಮಳೆಯಿಂದ ಕೂಡಿದ, **ಅನಾರತಂ** = ತಡೆ ಇಲ್ಲದ, **ಸುಚಿರಂ** = ಬಹಳ ಕಾಲದ, **ನಿರ್ವಿಶೇಷಂ** = ಯಾರು ಹೆಚ್ಚು ಯಾರು ಕಡಿಮೆ ಎಂಬ ವಿಶೇಷ ರಹಿತವಾದ, **ಯುದ್ಧಂ** = ಯುದ್ಧವು, **ಅಭೂತ್** = ನಡೆಯಿತು.

**ತಾತ್ಪರ್ಯ** :- ಪಾಂಡವ-ಕೌರವರ ಜಯವನ್ನು ಬಯಸುತ್ತಿದ್ದ ಆ ದ್ರೋಣ ದೃಷ್ಟದ್ಯುಮ್ನರಿಗೆ ಬಹಳ ಭಯಂಕರವಾದ ಯುದ್ಧ ನಡೆಯಿತು. ಅದು ಬಹಳ ಅದ್ಭುತವಾಗಿತ್ತು. ಸತತವಾದ ಬಾಣಗಳ ಮಳೆಯಿಂದ ಕೂಡಿತ್ತು. ತಡೆ ಇಲ್ಲದೆ ಬಹಳ ಕಾಲ ನಡೆಯಿತು. ಯಾರು ಹೆಚ್ಚು ಯಾರು ಕಡಿಮೆ ಎಂದು ಹೇಳಲಾಗದಂತಿತ್ತು.

**ತತಃ ಪ್ರಾಯಾದ್ ಭೀಮಸೇನೋಽಮಿತೌಜಾ**
**ಮೃದ್ನನ್ ಶರೈಃ ಕೌರವರಾಜಸೇನಾಮ್ ।**
**ವಿಂದಾನುವಿಂದಪ್ರಮುಖಾ ಧಾರ್ತರಾಷ್ಟ್ರಾಃ**
**ತಮಾಸೇದುರ್ದ್ವಾದಶ ವೀರಮುಖ್ಯಾಃ ॥ ೧೩೩ ॥**

**ಅರ್ಥ** :- **ತತಃ** = ಅನಂತರ, **ಅಮಿತೌಜಾಃ** = ಅಪರಿಮಿತ ಪರಾಕ್ರಮವುಳ್ಳ, **ಭೀಮಸೇನಃ** = ಭೀಮಸೇನನು, **ಶರೈಃ** = ಬಾಣಗಳಿಂದ, **ಕೌರವರಾಜಸೇನಾಂ** = ದುರ್ಯೋಧನನ ಸೈನ್ಯವನ್ನು, **ಮೃದ್ನನ್** = ನಾಶಪಡಿಸುತ್ತಾ, **ಪ್ರಾಯಾತ್** = ಹೊರಟನು, **ಧಾರ್ತರಾಷ್ಟ್ರಾಃ** = ಧೃತರಾಷ್ಟ್ರನ ಮಕ್ಕಳಾದ, **ವಿಂದಾನುವಿಂದಪ್ರಮುಖಾಃ** = ವಿಂದ ಅನುವಿಂದ ಮೊದಲಾದ, **ದ್ವಾದಶ ವೀರಮುಖ್ಯಾಃ** = ಹನ್ನೆರಡು ಜನ ವೀರಶ್ರೇಷ್ಠರು, **ತಂ** = ಆ ಭೀಮನನ್ನು, **ಆಸೇದುಃ** = ಎದುರಿಸಿದರು.

**ತಾತ್ಪರ್ಯ** :- ಅನಂತರ ಅಪರಿಮಿತ ಪರಾಕ್ರಮಶಾಲಿಯಾದ ಭೀಮನು ಬಾಣಗಳಿಂದ ದುರ್ಯೋಧನನ ಸೈನ್ಯವನ್ನು ನಾಶಪಡಿಸುತ್ತಾ ಹೋದನು. ಧೃತರಾಷ್ಟ್ರನ ಮಕ್ಕಳಾದ ವೀರಶ್ರೇಷ್ಠರಾದ ವಿಂದ ಅನುವಿಂದ ಮೊದಲಾದ ಹನ್ನೆರಡು ಜನರು ಆ ಭೀಮನನ್ನು ಎದುರಿಸಿದರು.

**ವಿದ್ಧಃ ಶರೈಸ್ತೈರ್ಬಹುಭಿರ್ವೃಕೋದರಃ**
**ಶಿರಾಂಸಿ ತೇಷಾಂ ಯುಗಪಚ್ಚಕರ್ತ ।**
**ಹತೇಷು ತೇಷು ಪ್ರವರೇಷು ಧನ್ವಿನಾಂ**
**ಸತ್ಯವ್ರತಃ ಪುರುಮಿತ್ರೋ ಜಯಶ್ಚ ॥ ೧೩೪ ॥**

**ವೃಂದಾರಕಃ ಪೌರವಶ್ಚೇತ್ಯಮಾತ್ಯಾಃ**
**ಸಮಾಸೇದುರ್ಧಾರ್ತರಾಷ್ಟ್ರಸ್ಯ ಭೀಮಮ್ ॥ ೧೩೫ ॥**

**ಅರ್ಥ** :- **ತೈಃ** = ಅವರಿಂದ, **ಬಹುಭಿಃ ಶರೈಃ** = ಬಹಳ ಬಾಣಗಳಿಂದ, **ವಿದ್ಧಃ** = ಹೊಡೆಯಲ್ಪಟ್ಟ, **ವೃಕೋದರಃ** = ಭೀಮನು, **ಯುಗಪತ್** = ಒಟ್ಟಿಗೆ, **ತೇಷಾಂ** = ಅವರ, **ಶಿರಾಂಸಿ** = ತಲೆಗಳನ್ನು, **ಚಕರ್ತ** = ಕತ್ತರಿಸಿದನು, **ಧನ್ವಿನಾಂ ಪ್ರವರೇಷು** = ಬಿಲ್ಲುಗಾರರಲ್ಲಿ ಶ್ರೇಷ್ಠರಾದ, **ತೇಷು** = ಅವರು, **ಹತೇಷು** = ಸಾಯುತ್ತಿರಲು, **ಸತ್ಯವ್ರತಃ** = ಸತ್ಯವ್ರತನು, **ಪುರುಮಿತ್ರಃ** =

**ಅರ್ಥ** :- **ದ್ರುಪದಾತ್ಮಜಃ** = ದೃಷ್ಟದ್ಯುಮ್ನನು, **ದ್ರೋಣಶರೈಃ** = ದ್ರೋಣನ ಬಾಣಗಳಿಂದ, **ವಿದ್ರಾವಿತಾಂ** = ಓಡಿಸಲ್ಪಡುತ್ತಿದ್ದ, **ಸ್ವಸೇನಾಂ** = ತಮ್ಮ ಸೈನ್ಯವನ್ನು, **ಸಂಸ್ಥಾಪ್ಯ** = ನಿಲ್ಲಿಸಿ, **ಭೂಯಃ** = ಮತ್ತೆ, **ಶರೈಃ** = ಬಾಣಗಳಿಂದ, **ದ್ರೋಣಂ** = ದ್ರೋಣನನ್ನು, **ನಿವಾರ್ಯ** = ತಡೆದು, **ತಸ್ಯ ಪಶ್ಯತಃ** = ದ್ರೋಣ ನೋಡುತ್ತಿದ್ದಂತೆಯೇ, **ಪರೇಷಾಂ** = ಶತ್ರುಗಳಾದ ಕೌರವರ, **ಸೇನಾಂ** = ಸೇನೆಯನ್ನು, **ವಿದ್ರಾವಯಾಮಾಸ** = ಓಡಿಸಿದನು.

**ತಾತ್ಪರ್ಯ** :- ದೃಷ್ಟದ್ಯುಮ್ನನು ದ್ರೋಣನ ಬಾಣಗಳಿಂದ ಓಡಿಸಲ್ಪಡುತ್ತಿದ್ದ ತಮ್ಮ ಸೈನ್ಯವನ್ನು ನೋಡಿ ತಡೆದು ನಿಲ್ಲಿಸಿ ಮತ್ತೆ ಬಾಣಗಳಿಂದ ದ್ರೋಣನನ್ನು ತಡೆದು ಅವನ ಮುಂದೆಯೇ ಕೌರವರ ಸೈನ್ಯವನ್ನು ಓಡಿಸಿದನು.

**ತಯೋರಭೂದ್ ಯುದ್ಧಮತೀವ ರೌದ್ರಂ**
**ಜಯೈಷಿಣೋಃ ಪಾಂಡವಧಾರ್ತರಾಷ್ಟ್ರಯೋಃ ।**
**ಅತ್ಯದ್ಭುತಂ ಸಂತತಬಾಣವರ್ಷ-**
**ಮನಾರತಂ ಸುಚಿರಂ ನಿರ್ವಿಶೇಷಮ್ ॥ ೧೩೨ ॥**

**ಅರ್ಥ** :- **ಪಾಂಡವಧಾರ್ತರಾಷ್ಟ್ರಯೋಃ** = ಪಾಂಡವ ಕೌರವರಿಗೆ, **ಜಯೈಷಿಣೋಃ** = ಜಯಬಯಸುವ, **ತಯೋಃ** = ಆ ದೃಷ್ಟದ್ಯುಮ್ನ ದ್ರೋಣರಿಗೆ, **ಅತೀವ ರೌದ್ರಂ** = ಬಹಳ ಭಯಂಕರವಾದ, **ಅತ್ಯದ್ಭುತಂ** = ಬಹಳ ಅದ್ಭುತವಾದ, **ಸಂತತ ಬಾಣವರ್ಷಂ** = ಸತತವಾದ ಬಾಣಗಳ ಮಳೆಯಿಂದ ಕೂಡಿದ, **ಅನಾರತಂ** = ತಡೆ ಇಲ್ಲದ, **ಸುಚಿರಂ** = ಬಹಳ ಕಾಲದ, **ನಿರ್ವಿಶೇಷಂ** = ಯಾರು ಹೆಚ್ಚು ಯಾರು ಕಡಿಮೆ ಎಂಬ ವಿಶೇಷ ರಹಿತವಾದ, **ಯುದ್ಧಂ** = ಯುದ್ಧವು, **ಅಭೂತ್** = ನಡೆಯಿತು.

**ತಾತ್ಪರ್ಯ** :- ಪಾಂಡವ-ಕೌರವರ ಜಯವನ್ನು ಬಯಸುತ್ತಿದ್ದ ಆ ದ್ರೋಣ ದೃಷ್ಟದ್ಯುಮ್ನರಿಗೆ ಬಹಳ ಭಯಂಕರವಾದ ಯುದ್ಧ ನಡೆಯಿತು. ಅದು ಬಹಳ ಅದ್ಭುತವಾಗಿತ್ತು. ಸತತವಾದ ಬಾಣಗಳ ಮಳೆಯಿಂದ ಕೂಡಿತ್ತು. ತಡೆ ಇಲ್ಲದೆ ಬಹಳ ಕಾಲ ನಡೆಯಿತು. ಯಾರು ಹೆಚ್ಚು ಯಾರು ಕಡಿಮೆ ಎಂದು ಹೇಳಲಾಗದಂತಿತ್ತು.

**ತತಃ ಪ್ರಾಯಾದ್ ಭೀಮಸೇನೋಽಮಿತೌಜಾ**
**ಮೃದ್ನನ್ ಶರೈಃ ಕೌರವರಾಜಸೇನಾಮ್ ।**
**ವಿಂದಾನುವಿಂದಪ್ರಮುಖಾ ಧಾರ್ತರಾಷ್ಟ್ರಾಃ**
**ತಮಾಸೇದುರ್ದ್ವಾದಶ ವೀರಮುಖ್ಯಾಃ ॥ ೧೩೩ ॥**

**ಅರ್ಥ :-** **ತತಃ** = ಅನಂತರ, **ಅಮಿತೌಜಾಃ** = ಅಪರಿಮಿತ ಪರಾಕ್ರಮವುಳ್ಳ, **ಭೀಮಸೇನಃ** = ಭೀಮಸೇನನು, **ಶರೈಃ** = ಬಾಣಗಳಿಂದ, **ಕೌರವರಾಜಸೇನಾಂ** = ದುರ್ಯೋಧನನ ಸೈನ್ಯವನ್ನು, **ಮೃದ್ನನ್** = ನಾಶಪಡಿಸುತ್ತಾ, **ಪ್ರಾಯಾತ್** = ಹೊರಟನು, **ಧಾರ್ತರಾಷ್ಟ್ರಾಃ** = ಧೃತರಾಷ್ಟ್ರನ ಮಕ್ಕಳಾದ, **ವಿಂದಾನುವಿಂದಪ್ರಮುಖಾಃ** = ವಿಂದ ಅನುವಿಂದ ಮೊದಲಾದ, **ದ್ವಾದಶ ವೀರಮುಖ್ಯಾಃ** = ಹನ್ನೆರಡು ಜನ ವೀರಶ್ರೇಷ್ಠರು, **ತಂ** = ಆ ಭೀಮನನ್ನು, **ಆಸೇದುಃ** = ಎದುರಿಸಿದರು.

**ತಾತ್ಪರ್ಯ :-** ಅನಂತರ ಅಪರಿಮಿತ ಪರಾಕ್ರಮಶಾಲಿಯಾದ ಭೀಮನು ಬಾಣಗಳಿಂದ ದುರ್ಯೋಧನನ ಸೈನ್ಯವನ್ನು ನಾಶಪಡಿಸುತ್ತಾ ಹೋದನು. ಧೃತರಾಷ್ಟ್ರನ ಮಕ್ಕಳಾದ ವೀರಶ್ರೇಷ್ಠರಾದ ವಿಂದ ಅನುವಿಂದ ಮೊದಲಾದ ಹನ್ನೆರಡು ಜನರು ಆ ಭೀಮನನ್ನು ಎದುರಿಸಿದರು.

**ವಿದ್ಧಃ ಶರೈಸ್ತೈರ್ಬಹುಭಿರ್ವೃಕೋದರಃ**
**ಶಿರಾಂಸಿ ತೇಷಾಂ ಯುಗಪಚ್ಚಕರ್ತ ।**
**ಹತೇಷು ತೇಷು ಪ್ರವರೇಷು ಧನ್ವಿನಾಂ**
**ಸತ್ಯವ್ರತಃ ಪುರುಮಿತ್ರೋ ಜಯಶ್ಚ ॥ ೧೩೪ ॥**

**ವೃಂದಾರಕಃ ಪೌರವಶ್ಚೇತ್ಯಮಾತ್ಯಾಃ**
**ಸಮಾಸೇದುರ್ಧಾರ್ತರಾಷ್ಟ್ರಸ್ಯ ಭೀಮಮ್ ॥ ೧೩೫ ॥**

**ಅರ್ಥ :-** **ತೈಃ** = ಅವರಿಂದ, **ಬಹುಭಿಃ ಶರೈಃ** = ಬಹಳ ಬಾಣಗಳಿಂದ, **ವಿದ್ಧಃ** = ಹೊಡೆಯಲ್ಪಟ್ಟ, **ವೃಕೋದರಃ** = ಭೀಮನು, **ಯುಗಪತ್** = ಒಟ್ಟಿಗೆ, **ತೇಷಾಂ** = ಅವರ, **ಶಿರಾಂಸಿ** = ತಲೆಗಳನ್ನು, **ಚಕರ್ತ** = ಕತ್ತರಿಸಿದನು, **ಧನ್ವಿನಾಂ ಪ್ರವರೇಷು** = ಬಿಲ್ಲುಗಾರರಲ್ಲಿ ಶ್ರೇಷ್ಠರಾದ, **ತೇಷು** = ಅವರು, **ಹತೇಷು** = ಸಾಯುತ್ತಿರಲು, **ಸತ್ಯವ್ರತಃ** = ಸತ್ಯವ್ರತನು, **ಪುರುಮಿತ್ರಃ** =

ಪುರುಮಿತ್ರನು, **ಜಯಶ್ಚ** = ಜಯನೂ, **ವೃಂದಾರಕಃ** = ವೃಂದಾರಕನು, **ಪೌರವಶ್ಚ ಇತಿ** = ಪೌರವನೂ ಎಂಬ, **ಧಾರ್ತರಾಷ್ಟ್ರಸ್ಯ** = ದುರ್ಯೋಧನನ, **ಅಮಾತ್ಯಾಃ** = ಮಂತ್ರಿಗಳು, **ಭೀಮಂ** = ಭೀಮನನ್ನು, **ಸಮಾಸೇದುಃ** = ಸಮೀಪಿಸಿದರು.

**ತಾತ್ಪರ್ಯ** :- ಅವರು ಬಹಳ ಬಾಣಗಳಿಂದ ಹೊಡೆದಾಗ ಭೀಮ ಒಟ್ಟಿಗೆ ಅವರೆಲ್ಲರ ತಲೆಗಳನ್ನು ಕತ್ತರಿಸಿದ. ಅವರು ಸತ್ತಾಗ ಸತ್ಯವ್ರತ ಪುರುಮಿತ್ರ ಜಯ ವೃಂದಾರಕ ಪೌರವ ಎಂಬಂತಹ ದುರ್ಯೋಧನನ ಮಂತ್ರಿಗಳು ಭೀಮನನ್ನು ಸಮೀಪಿಸಿದರು.

**ಸ ತೈಃ ಪೃಷತ್ಕೈರವಕೀರ್ಯಮಾಣಃ**
**ಶಿತಾನ್ ವಿಪಾಠಾನ್ ಯುಗಪತ್ ಸಮಾದದೇ ।**
**ಜಹಾರ ತೈರೇವ ಶಿರಾಂಸಿ ತೇಷಾಂ**
**ಹತೇಷು ತೇಷ್ವೇವ ಪರೇ ಪ್ರದುದ್ರುವುಃ ॥ ೧೩೬ ॥**

**ಅರ್ಥ** :- **ತೈಃ ಪೃಷತ್ಕೈಃ** = ಆ ಬಾಣಗಳಿಂದ, **ಅವಕೀರ್ಯಮಾಣಃ ಸಃ** = ಮುಚ್ಚಲ್ಪಡುತ್ತಿದ್ದ ಆ ಭೀಮನು, **ಶಿತಾನ್** = ಹರಿತವಾದ, **ವಿಪಾಠಾನ್** = ಬಾಣಗಳನ್ನು, **ಯುಗಪತ್** = ಒಟ್ಟಿಗೆ, **ಸಮಾದದೇ** = ತೆಗೆದುಕೊಂಡನು (ಹೂಡಿದನು), **ತೈರೇವ** = ಆ ಬಾಣಗಳಿಂದಲೇನೇ, **ತೇಷಾಂ** = ಅವರ, **ಶಿರಾಂಸಿ** = ತಲೆಗಳನ್ನು, **ಜಹಾರ** = ನಾಶಮಾಡಿದನು, **ತೇಷು ಹತೇಷು ಏವ** = ಅವರು ಹತರಾಗುತ್ತಿರುವಾಗಲೇ, **ಪರೇ** = ಬೇರೆಯವರು, **ಪ್ರದುದ್ರುವುಃ** = ಓಡಿಹೋದರು.

**ತಾತ್ಪರ್ಯ** :- ಅವರು ಬಾಣಗಳಿಂದ ಭೀಮನನ್ನು ಮುಚ್ಚುತ್ತಿದ್ದಾಗ ಅವನು ಹರಿತವಾದ ಬಾಣಗಳನ್ನು ಒಟ್ಟಿಗೆ ಹೂಡಿದನು. ಆ ಬಾಣ ಗಳಿಂದಲೇನೇ ಅವರ ತಲೆಗಳನ್ನು ಕತ್ತರಿಸಿದ. ಅವರು ಹತರಾದಾಗ ಉಳಿದವರು ಓಡಿಹೋದರು.

**ಸ ಸಿಂಹವತ್ ಕ್ಷುದ್ರಮೃಗಾನ್ ಸಮಂತತೋ**
**ವಿದ್ರಾಪ್ಯ ಶತ್ರೂನ್ ಹೃದಿಕಾತ್ಮಜಂ ರಣೇ ।**

**ಅಭ್ಯಾಗಮತ್ ತೇನ ನಿವಾರಿತಃ ಶರೈಃ**
**ಕ್ಷಣೇನ ಚಕ್ರೇ ವಿರಥಾಶ್ವಸೂತಮ್ ।। ೧೩೭ ।।**

**ಅರ್ಥ :- ಕ್ಷುದ್ರಮೃಗಾನ್ ಸಿಂಹವತ್** = ಕ್ಷುದ್ರಮೃಗಗಳನ್ನು ಸಿಂಹ ಹೇಗೋ ಹಾಗೆ, **ಸಃ** = ಆ ಭೀಮನು, **ಸಮಂತತಃ** = ಎಲ್ಲೆಡೆಗೆ, **ಶತ್ರೂನ್** = ಶತ್ರುಗಳನ್ನು, **ವಿದ್ರಾವ್ಯ** = ಓಡಿಸಿ, **ರಣೇ** = ಯುದ್ಧದಲ್ಲಿ, **ಹೃದಿಕಾತ್ಮಜಂ** = ಕೃತವರ್ಮನನ್ನು ಕುರಿತು, **ಅಭ್ಯಾಗಮತ್** = ಹೋದನು, **ತೇನ** = ಅವನಿಂದ, **ಶರೈಃ** = ಬಾಣಗಳಿಂದ, **ನಿವಾರಿತಃ** = ತಡೆಯಲ್ಪಟ್ಟವನಾಗಿ, **ಕ್ಷಣೇನ** = ಒಂದು ಕ್ಷಣದಲ್ಲಿ, **ವಿರಥಾಶ್ವಸೂತಂ** = ರಥ ಕುದುರೆ ಸಾರಥಿರಹಿತನನ್ನಾಗಿ, **ಚಕ್ರೇ** = ಮಾಡಿದನು.

**ತಾತ್ಪರ್ಯ :-** ಸಿಂಹವು ಕ್ಷುದ್ರಮೃಗಗಳನ್ನು ಓಡಿಸುವಂತೆ ಭೀಮ ಶತ್ರುಗಳನ್ನು ಓಡಿಸಿ ಯುದ್ಧದಲ್ಲಿ ಕೃತವರ್ಮನ ಕಡೆಗೆ ಹೋದನು. ಕೃತವರ್ಮ ಬಾಣಗಳಿಂದ ತಡೆದಾಗ ಒಂದು ಕ್ಷಣದಲ್ಲಿ ಅವನ ರಥ ಕುದುರೆ ಸಾರಥಿಗಳನ್ನು ನಾಶಪಡಿಸಿದನು.

**ಸ ಗಾಢವಿದ್ಧಸ್ತು ವೃಕೋದರೇಣ**
**ರಣಂ ವಿಸೃಜ್ಯಾಪಯಯೌ ಕ್ಷಣೇನ ।**
**ವಿಜಿತ್ಯ ಹಾರ್ದಿಕ್ಯಮಥಾಽಽಶು ಭೀಮೋ**
**ವಿದ್ರಾವಯಾಮಾಸ ವರೂಥಿನೀಂ ತಾಮ್ ।**
**ಸಂಪ್ರೇಷಯನ್ ಸರ್ವನರಾಶ್ವಕುಂಜರಾನ್**
**ಯಮಾಯ ಯಾತೋ ಹರಿಪಾರ್ಥಪಾರ್ಶ್ವಮ್ ।। ೧೩೮ ।।**

**ಅರ್ಥ :- ವೃಕೋದರೇಣ** = ಭೀಮನಿಂದ, **ಗಾಢವಿದ್ಧಃ** = ಗಾಢವಾಗಿ ಹೊಡೆಸಿಕೊಂಡ, **ಸಃ** = ಆ ಕೃತವರ್ಮನು, **ಕ್ಷಣೇನ** = ಒಂದು ಕ್ಷಣದಲ್ಲಿ, **ರಣಂ** = ಯುದ್ಧವನ್ನು, **ವಿಸೃಜ್ಯ** = ಬಿಟ್ಟು, **ಅಪಯಯೌ** = ಓಡಿ ಹೋದನು, **ಆಶು** = ಕೂಡಲೇ, **ಭೀಮಃ** = ಭೀಮನು, **ಹಾರ್ದಿಕ್ಯಂ** = ಕೃತವರ್ಮನನ್ನು, **ವಿಜಿತ್ಯ** = ಗೆದ್ದು, **ತಾಂ ವರೂಥಿನೀಂ** = ಆ ಸೈನ್ಯವನ್ನು, **ವಿದ್ರಾವಯಾಮಾಸ** = ಓಡಿಸಿದನು, **ಅಥ** = ಅನಂತರ, **ಸರ್ವ ನರಾಶ್ವಕುಂಜರಾನ್** = ಎಲ್ಲಾ ಕಾಲಾಳು ಕದುರೆ ಆನೆಗಳನ್ನು, **ಯಮಾಯ**

= ಯಮನಿಗೆ, **ಸಂಪ್ರೇಷಯನ್** = ಕಳಿಸುತ್ತಾ, **ಹರಿಪಾರ್ಥಪಾರ್ಶ್ವಂ** = ಕೃಷ್ಣಾರ್ಜುನರ ಬಳಿಗೆ, **ಯಾತಃ** = ಹೋದನು.

**ತಾತ್ಪರ್ಯ** :- ಕೃತವರ್ಮ ಭೀಮನಿಂದ ಗಾಢವಾಗಿ ಹೊಡೆಸಿಕೊಂಡು ಒಂದು ಕ್ಷಣದಲ್ಲಿ ಯುದ್ಧ ಬಿಟ್ಟು ಓಡಿಹೋದನು. ಭೀಮ ಬೇಗನೇ ಕೃತವರ್ಮನನ್ನು ಗೆದ್ದು ಆ ಸೈನ್ಯವನ್ನು ಓಡಿಸಿದ. ಎಲ್ಲಾ ಕಾಲಾಳು ಕುದುರೆ ಆನೆಗಳನ್ನು ಯಮನ ಕಡೆಗೆ ಕಳಿಸುತ್ತಾ ಕೃಷ್ಣಾರ್ಜುನರ ಕಡೆಗೆ ಹೋದನು.

**ದೃಷ್ಟ್ವೈವ ಕೃಷ್ಣವಿಜಯೌ ಪರಮಪ್ರಹೃಷ್ಟ-**
**ಸ್ತಾಭ್ಯಾಂ ನಿರೀಕ್ಷಿತ ಉತ ಪ್ರತಿಭಾಷಿತಶ್ಚ ।**
**ಸಂಜ್ಞಾಂ ನೃಪಸ್ಯ ಸ ದದಾವಪಿ ಸಿಂಹನಾದಾನ್**
**ಶ್ರುತ್ವಾ ಪರಾಂ ಮುದಮವಾಪ ಸ ಚಾಗ್ರ್ಯಬುದ್ಧಿಃ ॥ ೧೩೯ ॥**

**ಅರ್ಥ** :- **ಕೃಷ್ಣವಿಜಯೌ** = ಕೃಷ್ಣಾರ್ಜುನರನ್ನು, **ದೃಷ್ಟ್ವೈವ** = ನೋಡಿಯೇ, **ಪರಮಪ್ರಹೃಷ್ಟಃ** = ಬಹಳ ಸಂತೋಷಗೊಂಡವನಾಗಿ, **ತಾಭ್ಯಾಂ** = ಅವರಿಂದ, **ನಿರೀಕ್ಷಿತಃ** = ನೋಡಲ್ಪಟ್ಟವನಾಗಿ, **ಉತ** = ಮತ್ತು, **ಪ್ರತಿಭಾಷಿತಶ್ಚ** = ಮಾತಾಡಿಸಲ್ಪಟ್ಟವನೂ ಆಗಿ, **ಸಃ** = ಆ ಭೀಮನು, **ಸಿಂಹನಾದಾತ್** = ಸಿಂಹಗರ್ಜನೆಯಿಂದ, **ನೃಪಸ್ಯ** = ಧರ್ಮರಾಜನಿಗೆ, **ಸಂಜ್ಞಾಂ** = ಸೂಚನೆಯನ್ನು, **ದದೌ** = ಕೊಟ್ಟನು, **ಅಗ್ರ್ಯಬುದ್ಧಿಃ ಸ ಚಾಪಿ** = ಉತ್ತಮವಾದ ಬುದ್ಧಿಯುಳ್ಳ ಧರ್ಮರಾಜನಾದರೂ, **ಶ್ರುತ್ವಾ** = ಕೇಳಿ, **ಪರಾಂ ಮುದಂ ಅವಾಪ** = ಬಹಳ ಸಂತೋಷಗೊಂಡನು.

**ತಾತ್ಪರ್ಯ** :- ಭೀಮನು ಕೃಷ್ಣಾರ್ಜುನರನ್ನು ನೋಡಿ ಬಹಳ ಸಂತೋಷಗೊಂಡನು. ಅವರೂ ಭೀಮನನ್ನು ನೋಡಿದರು. ಸಂಭಾಷಣೆ ನಡೆಸಿದರು. ಈ ವಿಷಯದ ಬಗ್ಗೆ ಸಿಂಹಗರ್ಜನೆಯಿಂದ ಭೀಮ ಧರ್ಮರಾಜನಿಗೆ ಸೂಚನೆ ನೀಡಿದನು. ಉತ್ತಮ ಬುದ್ಧಿಶಾಲಿಯಾದ ಧರ್ಮರಾಜ ಅದನ್ನು ಕೇಳಿ ಬಹಳ ಸಂತೋಷಪಟ್ಟನು.

**ಭೀಮಸ್ಯ ನಾನದತ ಏವ ಮಹಾಸ್ವನೇನ**
**ವಿಣ್ಮೂತ್ರಶೋಣಿತಮಥೋ ಮೃತಿಮಾಪುರೇಕೇ ।**

**ಭೀತೇಷು ಸರ್ವನೃಪತಿಷ್ವಮುಮಾಪ ತೂರ್ಣಂ**
**ಕರ್ಣೋ ವಿಕರ್ಣಮುಖರಾ ಅಪಿ ಧಾರ್ತರಾಷ್ಟ್ರಾಃ ॥ ೧೪೦ ॥**

**ಅರ್ಥ :-** **ನಾನದತಃ** = ಅತಿ ನಾದ ಮಾಡುತ್ತಿರುವ, **ಭೀಮಸ್ಯ** = ಭೀಮನ, **ಮಹಾಸ್ವನೇನ ಏವ** = ಆ ಮಹಾ ನಾದದಿಂದಲೇ, **ಏಕೇ** = ಕೆಲವರು, **ವಿಣ್ಮೂತ್ರ ಶೋಣಿತಂ** = ಮಲಮೂತ್ರ ವಿಸರ್ಜನೆಯನ್ನು ರಕ್ತಕಾರಿಕೆಯನ್ನು, **ಮೃತಿಂ** = ಮರಣವನ್ನು, **ಆಪುಃ** = ಹೊಂದಿದರು, **ಸರ್ವನೃಪತಿಷು** = ಎಲ್ಲಾ ರಾಜರುಗಳು, **ಭೀತೇಷು** = ಭಯಗ್ರಸ್ತರಾಗುತ್ತಿರಲು, **ತೂರ್ಣಂ** = ಬೇಗನೇ, **ಕರ್ಣಃ** = ಕರ್ಣನು, **ಅಮುಂ** = ಈ ಭೀಮನನ್ನು, **ಆಪ** = ಹೊಂದಿದನು, **ವಿಕರ್ಣಮುಖರಾಃ ಧಾರ್ತರಾಷ್ಟ್ರಾಃ ಅಪಿ** = ವಿಕರ್ಣ ಮೊದಲಾದ ಧೃತರಾಷ್ಟ್ರನ ಮಕ್ಕಳೂ ಕೂಡ, **ಆಪುಃ** = ಹೊಂದಿದರು.

**ತಾತ್ಪರ್ಯ :-** ಭೀಮಸೇನ ಸಿಂಹನಾದ ಮಾಡಿದಾಗ ಆ ನಾದದಿಂದ ಕೆಲವರು ಕೌರವ ಸೈನಿಕರು ಮಲಮೂತ್ರ ವಿಸರ್ಜನೆ ಮಾಡಿದರು. ರಕ್ತಕಾರಿದರು ಮರಣವನ್ನೂ ಹೊಂದಿದರು. ಎಲ್ಲಾ ರಾಜರೂ ಭಯಗೊಂಡಾಗ ಕರ್ಣ ಭೀಮನ ಎದುರಿಗೆ ಬಂದ. ವಿಕರ್ಣ ಮೊದಲಾದ ಧೃತರಾಷ್ಟ್ರನ ಮಕ್ಕಳೂ ಬಂದರು.

**ಹತ್ವಾ ವಿಕರ್ಣಮುತ ತತ್ರ ಚ ಚಿತ್ರಸೇನಂ**
**ಸಂಚೂರ್ಣಿತಂ ಚ ವಿದಧೇ ರಥಮರ್ಕಸೂನೋಃ ।**
**ಘೋರೈಃ ಶರೈಃ ಪುನರಪಿ ಸ್ಮ ಸಮರ್ದ್ಯಮಾನಃ**
**ಕರ್ಣೋऽಪಯಾನಮಕರೋದ್ ದ್ರುತಮೇವ ಭೀಮಾತ್ ॥ ೧೪೧ ॥**

**ಅರ್ಥ :-** **ತತ್ರ** = ಆ ಯುದ್ಧದಲ್ಲಿ, **ವಿಕರ್ಣಂ** = ವಿಕರ್ಣನನ್ನೂ, **ಉತ** = ಮತ್ತು, **ಚಿತ್ರಸೇನಂ ಚ** = ಚಿತ್ರಸೇನನನ್ನೂ, **ಹತ್ವಾ** = ಕೊಂದು, **ಅರ್ಕಸೂನೋಃ** = ಕರ್ಣನ, **ರಥಂ ಚ** = ರಥವನ್ನೂ, **ಸಂಚೂರ್ಣಿತಂ ವಿದಧೇ** = ಪುಡಿ ಮಾಡಿದನು, **ಕರ್ಣಃ** = ಕರ್ಣನು, **ಘೋರೈಃ ಶರೈಃ** = ಭಯಂಕರವಾದ ಬಾಣಗಳಿಂದ, **ಪುನರಪಿ** = ಮತ್ತೆ ಮತ್ತೆ, **ಸಮರ್ದ್ಯಮಾನಃ** = ಚೆನ್ನಾಗಿ ಹೊಡೆಯಲ್ಪಟ್ಟವನಾಗಿ, **ದ್ರುತಂ** = ಕೂಡಲೇ, **ಭೀಮಾತ್** = ಭೀಮನ ದೆಸೆಯಿಂದ, **ಅಪಯಾನಮಕರೋತ್** = ಪಲಾಯನ ಮಾಡಿದನು.

**ತಾತ್ಪರ್ಯ** :- ಭೀಮಸೇನ ಯುದ್ಧದಲ್ಲಿ ವಿಕರ್ಣನನ್ನೂ ಚಿತ್ರಸೇನನನ್ನೂ ಕೊಂದು ಕರ್ಣನ ರಥವನ್ನು ಪುಡಿಮಾಡಿದ. ಕರ್ಣ ಭೀಮನ ಬಾಣಗಳಿಂದ ಪುನಃ ಪುನಃ ಹೊಡೆಯಲ್ಪಟ್ಟವನಾಗಿ ಭೀಮನ ಎದುರಿನಿಂದ ಕೂಡಲೇ ಪಲಾಯನ ಮಾಡಿದ.

**ಆಶ್ವಾಸ್ಯ ಚೈವ ಸುಚಿರಂ ಪುನರೇವ ಭೀಮಂ**
**ಯುದ್ಧಾಯ ಯಾತಿ ಧೃತರಾಷ್ಟ್ರಸುತೈಸ್ತಥಾಽನ್ಯೈಃ ।**
**ತಾಂಶ್ಚೈವ ತತ್ರ ವಿನಿಹತ್ಯ ತಥೈವ ಕರ್ಣೋ**
**ವ್ಯಶ್ವಾಯುಧಃ ಕೃತ ಉತಾಪಯಯೌ ಕ್ಷಣೇನ ॥ ೧೪೨ ॥**

**ಅರ್ಥ** :- **ಸುಚಿರಂ** = ಬಹಳ ಸಮಯ, **ಆಶ್ವಾಸ್ಯ** = ವಿಶ್ರಾಂತಿ ಪಡೆದು, **ಪುನರೇವ** = ಮತ್ತೆ, **ಅನ್ಯೈಃ ಧೃತರಾಷ್ಟ್ರಪುತ್ರೈಃ (ಸಹ)** = ಬೇರೆ ಧೃತರಾಷ್ಟ್ರನ ಮಕ್ಕಳೊಡನೆ, **ಯುದ್ಧಾಯ** = ಯುದ್ಧಕ್ಕಾಗಿ, **ಕರ್ಣೇ** = ಕರ್ಣನು, **ಯಾತಿ** = ಹೋಗುತ್ತಿರಲು, **ತತ್ರ** = ಅಲ್ಲಿ, **ತಾಂಶ್ಚೈವ** = ಅವರನ್ನೂ, **ವಿನಿಹತ್ಯ** = ಕೊಂದು, **ತಥೈವ** = ಹಾಗೆಯೇ, **ಕರ್ಣಃ** = ಕರ್ಣನು, **ವ್ಯಶ್ವಾಯುಧಃ** = ಕುದುರೆ ಮತ್ತು ಆಯುಧ ರಹಿತನೂ, **ಕೃತಃ** = ಮಾಡಲ್ಪಟ್ಟನು, **ಉತ** = ಮತ್ತೆ, **ಕ್ಷಣೇನ** = ಒಂದು ಕ್ಷಣದಲ್ಲಿ, **ಅಪಾಯಯೌ** = ಓಡಿಹೋದನು.

**ತಾತ್ಪರ್ಯ** :- ಕರ್ಣ ಬಹಳಕಾಲ ವಿಶ್ರಾಂತಿ ಪಡೆದು ಮತ್ತೆ ಬೇರೆ ಧೃತರಾಷ್ಟ್ರನ ಮಕ್ಕಳೊಡನೆ ಯುದ್ಧಕ್ಕಾಗಿ ಭೀಮನ ಕಡೆಗೆ ಹೋದನು. ಭೀಮ ಅವರನ್ನು ಕೊಂದು ಕರ್ಣನ ಕುದುರೆ ಆಯುಧಗಳನ್ನು ನಾಶಮಾಡಿದ. ಆವಾಗ ಕರ್ಣ ಒಂದು ಕ್ಷಣದಲ್ಲಿ ಪಲಾಯ ಮಾಡಿದ.

**ವಿಕರ್ಣಚಿತ್ರಸೇನಾದ್ಯಾ ಏವಂ ವೀರತಮಾಃ ಸುತಾಃ ।**
**ಕರ್ಣಸ್ಯ ಪಶ್ಯತೋ ಭೀಮಬಾಣಕೃತ್ತಶಿರೋಧರಾಃ ॥ ೧೪೩ ॥**

**ನಿಪೇತುರ್ಧೃತರಾಷ್ಟ್ರಸ್ಯ ರಥೇಭ್ಯಃ ಪೃಥಿವೀತಳೇ ।**
**ತ್ರಯೋವಿಂಶತಿರೇವಾತ್ರ ಕರ್ಣಸಾಹಾಯ್ಯಕಾರಿಣಃ ॥ ೧೪೪ ॥**

**ಅರ್ಥ** :- **ಏವಂ** = ಈ ರೀತಿಯಾಗಿ, **ಕರ್ಣಸ್ಯ ಪಶ್ಯತಃ** = ಕರ್ಣ ನೋಡುತ್ತಿದ್ದಂತೆಯೇ, **ಕರ್ಣಸಾಹಾಯ್ಯಕಾರಿಣಃ** = ಕರ್ಣನಿಗೆ ಸಾಹಾಯ್ಯ

ಮಾಡುತ್ತಿದ್ದ, **ವಿಕರ್ಣಚಿತ್ರಸೇನಾದ್ಯಾಃ** = ವಿಕರ್ಣ ಚಿತ್ರಸೇನ ಮೊದಲಾದ, **ತ್ರಯೋವಿಂಶತಿಃ ವೀರತಮಾಃ** = ಇಪ್ಪತ್ತು ಮೂರು ಮಂದಿ ಮಹಾವೀರರಾದ, **ಧೃತರಾಷ್ಟ್ರಸ್ಯ ಸುತಾಃ** = ಧೃತರಾಷ್ಟ್ರನ ಮಕ್ಕಳೂ, **ಭೀಮಬಾಣಕೃತ್ತ ಶಿರೋಧರಾಃ** = ಭೀಮನ ಬಾಣಗಳಿಂದ ಕತ್ತರಿಸಲ್ಪಟ್ಟ ಕುತ್ತಿಗೆಯುಳ್ಳವರಾಗಿ, **ರಥೇಭ್ಯಃ** = ರಥಗಳಿಂದ, **ಪೃಥಿವೀತಲೇ** = ನೆಲದ ಮೇಲೆ, **ನಿಪೇತುಃ** = ಬಿದ್ದರು.

**ತಾತ್ಪರ್ಯ** :- ಹೀಗೆ ಕರ್ಣ ನೋಡುತ್ತಿರುವಾಗಲೇ ಕರ್ಣನಿಗೆ ಸಹಾಯಕರಾಗಿ ಬಂದಿದ್ದ ವಿಕರ್ಣ ಚಿತ್ರಸೇನ ಮೊದಲಾದ ಇಪ್ಪತ್ತು ಮೂರು ಮಂದಿ ಮಹಾವೀರರಾದ ಧೃತರಾಷ್ಟ್ರನ ಮಕ್ಕಳೂ ಭೀಮನ ಬಾಣಗಳಿಂದ ಶಿರಚ್ಛೇದ ಹೊಂದಿ ರಥಗಳಿಂದ ನೆಲದ ಮೇಲೆ ಬಿದ್ದರು.

**ಏಕವಿಂಶತಿವಾರಂ ಚ ವ್ಯಶ್ವಸೂತರಥಧ್ವಜಃ ।**
**ಗಾಢಮಭ್ಯರ್ದಿತಸ್ತೀಕ್ಷ್ಣೈಃ ಶರೈರ್ಭೀಮೇನ ಸಂಯುಗೇ ॥ ೧೪೫ ॥**

**ಪ್ರಾಣಸಂಶಯಮಾಪನ್ನಃ ಸರ್ವಲೋಕಸ್ಯ ಪಶ್ಯತಃ ।**
**ರಣಂ ತ್ಯಕ್ತ್ವಾ ಪ್ರದುದ್ರಾವ ರುದನ್ ದುಃಖಾತ್ ಪುನಃ ಪುನಃ ॥ ೧೪೬ ॥**

**ಅರ್ಥ** :- **ಏಕವಿಂಶತಿವಾರಂ ಚ** = ಇಪ್ಪತ್ತೊಂದು ಬಾರಿಯೂ, **ಭೀಮೇನ** = ಭೀಮನಿಂದ, **ತೀಕ್ಷ್ಣೈಃ ಶರೈಃ** = ತೀಕ್ಷ್ಣವಾದ ಬಾಣಗಳಿಂದ, **ಗಾಢಂ** = ಗಾಢವಾಗಿ, **ಅಭ್ಯರ್ದಿತಃ** = ಪೀಡಿತನಾದ ಕರ್ಣನು, **ವ್ಯಶ್ವಸೂತರಥಧ್ವಜಃ** = ಕುದುರೆ ಸಾರಥಿ ರಥ ಧ್ವಜ ರಹಿತನಾಗಿ, **ಸಂಯುಗೇ** = ಯುದ್ಧದಲ್ಲಿ, **ಪ್ರಾಣಸಂಶಯಂ ಆಪನ್ನಃ** = ಪ್ರಾಣಾಪಾಯ ಸಂಶಯವನ್ನು ಹೊಂದಿದವನಾಗಿ, **ಸರ್ವಲೋಕಸ್ಯ ಪಶ್ಯತಃ** = ಎಲ್ಲಾ ಜನರೂ ನೋಡುತ್ತಿದ್ದಂತೆಯೇ, **ದುಃಖಾತ್** = ದುಃಖದಿಂದ, **ಪುನಃ ಪುನಃ** = ಮತ್ತೆ ಮತ್ತೆ, **ರುದನ್** = ಅಳುತ್ತಾ, **ರಣಂ** = ಯುದ್ಧವನ್ನು, **ತ್ಯಕ್ತ್ವಾ** = ಬಿಟ್ಟು, **ಪ್ರದುದ್ರಾವ** = ಓಡಿ ಹೋದನು.

**ತಾತ್ಪರ್ಯ** :- ಇಪ್ಪತ್ತೊಂದು ಬಾರಿ ಯುದ್ಧದಲ್ಲಿ ಭೀಮನ ಬಾಣಗಳಿಂದ ಪೀಡಿತನಾದ ಕರ್ಣನು ಕುದುರೆ ರಥ ಸಾರಥಿ ಧ್ವಜಗಳನ್ನು ಕಳೆದುಕೊಂಡು

ಪ್ರಾಣಾಪಾಯ ಬಂದಾಗ ಜನರೆಲ್ಲರೂ ನೋಡುತ್ತಿರುವಾಗಲೇ ದುಃಖದಿಂದ ಮತ್ತೆ ಮತ್ತೆ ಅಳುತ್ತಾ ಯುದ್ಧವನ್ನು ಬಿಟ್ಟು ಪಲಾಯನ ಮಾಡಿದ.

**ದ್ವಾವಿಂಶತಿಮಯುದ್ಧೇ ತು ರಾಮದತ್ತಂ ಸುಭಾಸ್ವರಮ್ ।**
**ಅಭೇದ್ಯಂ ರಥಮಾರುಹ್ಯ ವಿಜಯಂ ಧನುರೇವ ಚ ॥ ೧೪೭ ॥**

**ತದ್ದತ್ತಮೇವ ಸಂಗೃಹ್ಯ ತೂಣೀ ಚಾಕ್ಷಯಸಾಯಕೌ ।**
**ಆಸಸಾದ ರಣೇ ಭೀಮಂ ಕರ್ಣೋ ವೈಕರ್ತನೋ ರುಷಾ ॥ ೧೪೮ ॥**

**ಅರ್ಥ :- ದ್ವಾವಿಂಶತಿಮಯುದ್ಧೇ ತು** = ಇಪ್ಪತ್ತೆರಡನೆಯ ಯುದ್ಧದಲ್ಲಿ ಯಾದರೂ, **ವೈಕರ್ತನಃ ಕರ್ಣಃ** = ಸೂರ್ಯನ ಮಗನಾದ ಕರ್ಣನು, **ಸುಭಾಸ್ವರಂ** = ಚೆನ್ನಾಗಿ ಹೊಳೆಯುವ, **ಅಭೇದ್ಯಂ** = ಅಭೇದ್ಯವಾದ, **ರಾಮದತ್ತಂ** = ಪರಶುರಾಮನಿಂದ ಕೊಡಲ್ಪಟ್ಟ, **ರಥಂ** = ರಥವನ್ನು, **ಆರುಹ್ಯ** = ಏರಿ, **ತದ್ದತ್ತಮೇವ** = ಪರಶುರಾಮನಿಂದಲೇ ಕೊಡಲ್ಪಟ್ಟ, **ವಿಜಯಂ ಧನುರೇವ ಚ** = ವಿಜಯ ಧನುಸ್ಸನ್ನೇನೇ, **ಅಕ್ಷಯಸಾಯಕೌ** = ಅಪರಿಮಿತ ಬಾಣಗಳುಳ್ಳ, **ತೂಣೀ** = ಬತ್ತಳಿಕೆಗಳನ್ನು, **ಸಂಗೃಹ್ಯ** = ತೆಗೆದುಕೊಂಡು, **ರಣೇ** = ಯುದ್ಧದಲ್ಲಿ, **ರುಷಾ** = ಕೋಪದಿಂದ, **ಭೀಮಂ** = ಭೀಮನನ್ನು, **ಆಸಸಾದ** = ಎದುರಿಸಿದನು.

**ತಾತ್ಪರ್ಯ :-** ಇಪ್ಪತ್ತೆರಡನೆಯ ಯುದ್ಧದಲ್ಲಿ ಕರ್ಣ ಚೆನ್ನಾಗಿ ಹೊಳೆಯುವ ಅಭೇದವಾದ ಪರಶುರಾಮನಿಂದ ಕೊಡಲ್ಪಟ್ಟ ರಥವನ್ನು ಮತ್ತೂ ವಿಜಯ ಎಂಬಂತಹ ಬಿಲ್ಲನ್ನೂ ಅಪರಿಮಿತ ಬಾಣಗಳಿಂದ ಕೂಡಿದ ಬತ್ತಳಿಕೆಯನ್ನೂ ತೆಗೆದುಕೊಂಡು ಕೋಪದಿಂದ ಯುದ್ಧದಲ್ಲಿ ಭೀಮನ ಕಡೆಗೆ ಬಂದನು.

**ಸುಘೋರ ಆಸೀತ್ ಸ ತಯೋರ್ವಿಮರ್ದೋ**
**ಭೀಮಸ್ಯ ಕರ್ಣಸ್ಯ ಚ ದೀರ್ಘಕಾಲಮ್ ।**
**ಆಕಾಶಮಾಚ್ಛಾದಯತೋಃ ಶರೌಘೈಃ**
**ಪರಸ್ಪರಂ ಚೈವ ಸುರಕ್ತನೇತ್ರಯೋಃ ॥ ೧೪೯ ॥**

**ಅರ್ಥ :- ಸುರಕ್ತನೇತ್ರಯೋಃ** = ಬಹಳ ಕೆಂಪಾದ ಕಣ್ಣುಗಳುಳ್ಳ, **ಶರೌಘೈಃ ಆಕಾಶಂ ಆಚ್ಛಾದಯತೋಃ** = ಬಾಣಗಳ ಸಮೂಹಗಳಿಂದ

ಆಕಾಶವನ್ನು ಮುಚ್ಚಿಹಾಕುತ್ತಿದ್ದ, **ತಯೋಃ** = ಅವರಿಬ್ಬರಿಗೆ, **ಪರಸ್ಪರಂ** = ಪರಸ್ಪರವಾಗಿ, **ದೀರ್ಘ ಕಾಲಂ** = ದೀರ್ಘಕಾಲದವರೆಗೆ, **ಸುಘೋರಃ** = ಬಹಳ ಘೋರವಾದ, **ವಿಮರ್ದಃ** = ಯುದ್ಧವು, **ಆಸೀತ್** = ನಡೆಯಿತು.

**ತಾತ್ಪರ್ಯ** :- ಬಹಳ ಕೆಂಪಾದ ಕಣ್ಣುಳ್ಳ ಅವರಿಬ್ಬರ ಪರಸ್ಪರ ದೀರ್ಘಕಾಲದ ಯುದ್ಧ ಬಹಳ ಘೋರವಾಗಿತ್ತು. ಅವರಿಬ್ಬರು ಬಾಣ ಸಮೂಹಗಳಿಂದ ಆಕಾಶವನ್ನು ಮುಚ್ಚಿದರು.

**ತತೋ ಭೀಮೋ ಮಹಾಬಾಹುಃ ಸಹಜಾಭ್ಯಾಂ ಚ ಸಂಯುತಮ್ ।**
**ತ್ವಾಂ ತು ಕುಂಡಲವರ್ಮಭ್ಯಾಂ ಶಕ್ನುಯಾಂ ಹಂತುಮಂಜಸಾ ॥ ೧೫೦ ॥**

**ಇತಿ ಜ್ಞಾಪಯಿತುಂ ತಸ್ಯ ಕುಂಡಲೇ ಕವಚಂ ತಥಾ ।**
**ಶರೈರುತ್ಕೃತ್ಯ ಸಮರೇ ಪಾತಯಾಮಾಸ ಭೂತಳೇ ॥ ೧೫೧ ॥**

**ಅರ್ಥ** :- **ತತಃ** = ಅನಂತರ, **ಮಹಾಬಾಹುಃ** = ಮಹಾಬಾಹುವಾದ, **ಭೀಮಃ** = ಭೀಮನು, **ಸಹಜಾಭ್ಯಾಂ** = ಸಹಜವಾದ, **ಕುಂಡಲವರ್ಮಭ್ಯಾಂ ಚ** = ಕುಂಡಲ ಕವಚಗಳಿಂದಲೂ, **ಸಂಯುತಂ** = ಕೂಡಿದ, **ತ್ವಾಂ** = ನಿನ್ನನ್ನು, **ಹಂತುಂ** = ಕೊಲ್ಲಲು, **ಅಂಜಸಾ** = ಚೆನ್ನಾಗಿ, **ಶಕ್ನುಯಾಂ** = ಸಮರ್ಥನಾಗಿದ್ದೇನೆ, **ಇತಿ** = ಎಂದು, **ಜ್ಞಾಪಯಿತುಂ** = ತಿಳಿಸಲು, **ಸಮರೇ** = ಯುದ್ಧದಲ್ಲಿ, **ತಸ್ಯ** = ಆ ಕರ್ಣನ, **ಕುಂಡಲೇ** = ಕುಂಡಲಗಳನ್ನು, **ತಥಾ** = ಹಾಗೆಯೇ, **ಕವಚಂ** = ಕವಚವನ್ನು, **ಶರೈಃ** = ಬಾಣಗಳಿಂದ, **ಉತ್ಕೃತ್ಯ** = ಕತ್ತರಿಸಿ, **ಭೂತಲೇ ಪಾತಯಾಮಾಸ** = ನೆಲಕ್ಕೆ ಬೀಳಿಸಿದನು.

**ತಾತ್ಪರ್ಯ** :- ಅನಂತರ ಭೀಮನು 'ಕರ್ಣ! ನೀನು ಸಹಜವಾದ ಕುಂಡಲ ಕವಚಗಳಿಂದ ಕೂಡಿದ್ದರೂ ನಿನ್ನನ್ನು ಕೊಲ್ಲಲು ನಾನು ಸಮರ್ಥನಿದ್ದೇನೆ' ಎಂದು ತೋರಿಸಲು ಯುದ್ಧದಲ್ಲಿ ಅವನ ಕುಂಡಲ ಮತ್ತು ಕವಚಗಳನ್ನು ಬಾಣಗಳಿಂದ ಕತ್ತರಿಸಿ ನೆಲದ ಮೇಲೆ ಹಾಕಿದ.

**ಏವಂ ತಾನ್ಯಪಕೃಷ್ಯಾಹಂ ಹನ್ಯಾಂ ತ್ವಾಮಿತಿ ವೇದಯನ್ ।**
**ಪುನಶ್ಚ ಬಹುಭಿಸ್ತೀಕ್ಷ್ಣೈಃ ಶರೈರೇನಂ ಸಮಾರ್ದಯತ್ ॥ ೧೫೨ ॥**

**ಅರ್ಥ** :- **ಏವಂ** = ಹೀಗೆ, **ತಾನಿ** = ಆ ಕವಚ ಕುಂಡಲಗಳನ್ನು, **ಇತಿ** = ಎಂದು, **ವೇದಯನ್** = ತಿಳಿಸುತ್ತಾ, **ಪುನಶ್ಚ** = ಮತ್ತೆ, **ಬಹುಭಿಃ** = ಬಹಳ, **ತೀಕ್ಷ್ಣೈಃ ಶರೈಃ** = ತೀಕ್ಷ್ಣವಾದ ಬಾಣಗಳಿಂದ, **ಏನಂ** = ಈ ಕರ್ಣನನ್ನು, **ಸಮಾರ್ದಯತ್** = ಪೀಡಿಸಿದನು.

**ತಾತ್ಪರ್ಯ** :- ನಿನ್ನ ಸಹಜ ಕುಂಡಲಕವಚಗಳನ್ನು ಕಿತ್ತಿ ನಿನ್ನನ್ನು ಕೊಲ್ಲಬಲ್ಲೆ ಎಂದು ತಿಳಿಸುತ್ತಾ ಭೀಮ ಪುನಃ ತೀಕ್ಷ್ಣವಾದ ಅನೇಕ ಬಾಣಗಳಿಂದ ಕರ್ಣನನ್ನು ಪೀಡಿಸಿದನು.

**ತತಸ್ತು ಭೀಮಸ್ಯ ಬಭೂವ ಬುದ್ಧಿ-**
**ರಸ್ಪರ್ಧಿನಃ ಸರ್ವಜಯೋ ಹಿ ದತ್ತಃ ।**
**ಅಮುಷ್ಯ ರಾಮೇಣ ನಚ ಸ್ಪೃಧಾಽಯಂ**
**ಕರ್ಣೋ ಮಯಾ ಯುಧ್ಯತಿ ಕೃಚ್ಛ್ರಗೋ ಹ್ಯಯಮ್ ॥ ೧೫೩ ॥**

**ಅರ್ಥ** :- **ತತಸ್ತು** = ಅನಂತರದಲ್ಲಿಯಾದರೂ, **ಭೀಮಸ್ಯ** = ಭೀಮನಿಗೆ, **ಬುದ್ಧಿಃ ಬಭೂವ** = ಆಲೋಚನೆ ಉಂಟಾಯಿತು, **ಅಸ್ಪರ್ಧಿನಃ** = ಸ್ಪರ್ಧೆ ಮಾಡದಿದ್ದ, **ಅಮುಷ್ಯ** = ಕರ್ಣನಿಗೆ, **ರಾಮೇಣ** = ಪರಶುರಾಮನಿಂದ, **ಸರ್ವಜಯಃ** = ಎಲ್ಲರನ್ನೂ ಗೆಲ್ಲುವ ವರವು, **ದತ್ತಃ** = ಕೊಡಲ್ಪಟ್ಟಿದೆ, **ಅಯಂ ಕರ್ಣಃ** = ಈ ಕರ್ಣನು, **ಮಯಾ** = ನನ್ನ ಜೊತೆ, **ಸ್ಪೃಧಾ** = ಸ್ಪರ್ಧೆಯಿಂದ, **ನಯುದ್ಧತಿ** = ಯುದ್ಧ ಮಾಡುತ್ತಿಲ್ಲ, **ಅಯಂ** = ಇವನು, **ಕೃಚ್ಛ್ರಗಃ** = ಪ್ರಾಣಾಪಾಯಕ್ಕೆ ಒಳಗಾಗಿದ್ದಾನೆ.

**ತಾತ್ಪರ್ಯ** :- ಅನಂತರ ಭೀಮ ಹೀಗೆ ಆಲೋಚಿಸಿದ. ಕರ್ಣನಿಗೆ ಪರಶುರಾಮನ ವರವಿದೆ. ಸ್ಪರ್ಧೆ ಮಾಡದೆ ಇದ್ದರೆ ನೀನು ಎಲ್ಲರನ್ನೂ ಗೆಲ್ಲುತ್ತಿ ಎಂಬುದಾಗಿ. ಈಗ ಕರ್ಣ ನನ್ನೊಡನೆ ಸ್ಪರ್ಧೆ ಮಾಡುತ್ತಿಲ್ಲ. ಏಕೆಂದರೆ ಅವನು ಪ್ರಾಣಾಪಾಯಕ್ಕೆ ಒಳಗಾಗಿದ್ದಾನೆ.

**ತಥಾಽಪಿ ಮೇ ಭಗವಾನತ್ಯನುಗ್ರಹಾ-**
**ಜ್ಜಯಂ ದದಾತ್ಯಾತ್ಮವಚೋಽಪಹಾಯ ।**
**ಮಯಾ ತು ಮಾನ್ಯಂ ವಚನಂ ಹರೇಃ ಸದಾ**
**ತಸ್ಮಾದ್ ದಾಸ್ಯೇ ವಿವರಂ ತ್ವದ್ಯ ಶತ್ರೋಃ ॥ ೧೫೪ ॥**

**ಅರ್ಥ** :- **ತಥಾಽಪಿ** = ಹಾಗಿದ್ದರೂ, **ಭಗವಾನ್** = ಷಡ್ಗುಣ್ಯೈಶ್ವರ್ಯ ಸಂಪನ್ನನಾದ ಪರಶುರಾಮನು, **ಮೇ** = ನನಗೆ, **ಅತ್ಯನುಗ್ರಹಾತ್** = ಪರಮಾನುಗ್ರಹದಿಂದ, **ಆತ್ಮವಚಃ ವಿಹಾಯ** = ತನ್ನ ವರವನ್ನು ಬಿಟ್ಟು, **ಜಯಂ ದದಾತಿ** = ಜಯಕೊಡುತ್ತಾನೆ, **ತು** = ಆದರೆ, **ಹರೇಃ** = ಹರಿಯ, **ವಚನಂ** = ವಚನವು, **ಸದಾ** = ಯಾವಾಗಲೂ, **ಮಯಾ** = ನನ್ನಿಂದ, **ಮಾನ್ಯಂ** = ಗೌರವಿಸಲ್ಪಡಬೇಕು, **ತಸ್ಮಾತ್** = ಆದ್ದರಿಂದ, **ಅದ್ಯ** = ಈಗ, **ಶತ್ರೋಃ** = ಕರ್ಣನಿಗೆ, **ವಿವರಂ ದಾಸ್ಯೇ** = ಅವಕಾಶ ಕೊಡುತ್ತೇನೆ.

**ತಾತ್ಪರ್ಯ** :- ಆದರೂ ಪರಶುರಾಮ ನನಗೆ ಪರಮಾನುಗ್ರಹ ಮಾಡಿ ತನ್ನ ವರವನ್ನು ಬಿಟ್ಟು ಜಯವನ್ನು ಕೊಡುತ್ತಿದ್ದಾನೆ. ಆದರೂ ಹರಿಯ ವರವು ನನ್ನಿಂದ ಸದಾ ಮಾನ್ಯವಾಗಬೇಕು. ಆದ್ದರಿಂದ ನಾನು ಕರ್ಣನಿಗೆ ಅವಕಾಶ ಕೊಡುತ್ತೇನೆ.

**ಏವಂ ಸ್ಮೃತ್ವಾ ತೇನ ರಂಧ್ರೇ ಪ್ರದತ್ತೇ**
**ಕರ್ಣೋಽಸ್ತ್ರವೀರ್ಯೇಣ ಧನುರ್ನ್ಯಕೃಂತತ್ ।**
**ರಶ್ಮೀನ್ ಹಯಾನಾಂ ಚ ತತೋ ರಥಂ ಸ**
**ತತ್ಯಾಜ ನೈಜಂ ಬಲಮೇವ ವೇದಯನ್ ॥ ೧೫೫ ॥**

**ಅರ್ಥ** :- **ಏವಂ** = ಈ ರೀತಿಯಾಗಿ, **ಸ್ಮೃತ್ವಾ** = ಆಲೋಚಿಸಿ, **ತೇನ** = ಆ ಭೀಮನಿಂದ, **ರಂಧ್ರೇ** = ಅವಕಾಶವು, **ಪ್ರದತ್ತೇ** = ಕೊಡಲ್ಪಡುತ್ತಿರಲು, **ಕರ್ಣಃ** = ಕರ್ಣನು, **ಅಸ್ತ್ರವೀರ್ಯೇಣ** = ಅಸ್ತ್ರ ಸಾಮರ್ಥ್ಯದಿಂದ, **ಧನುಃ** = ಧನುಸ್ಸನ್ನು, **ಹಯಾನಾಂ ರಶ್ಮೀನ್ ಚ** = ಕುದುರೆಗಳ ಹಗ್ಗಗಳನ್ನೂ ಕೂಡ, **ನ್ಯಕೃಂತತ್** = ಕತ್ತರಿಸಿದನು, **ತತಃ** = ಅನಂತರ, **ಸಃ** = ಆ ಭೀಮನು, **ನೈಜಂ ಬಲಮೇವ** = ನಿಜವಾದ ಬಲವನ್ನೇ, **ವೇದಯನ್** = ತಿಳಿಸುತ್ತಾ, **ರಥಂ** = ರಥವನ್ನು, **ತತ್ಯಾಜ** = ಬಿಟ್ಟನು.

**ತಾತ್ಪರ್ಯ** :- ಈ ರೀತಿಯಾಗಿ ಆಲೋಚಿಸಿ ಭೀಮ ಅವಕಾಶ ಕೊಟ್ಟ ತಕ್ಷಣ ಕರ್ಣ ಅಸ್ತ್ರಸಾಮರ್ಥ್ಯದಿಂದ ಭೀಮನ ಬಿಲ್ಲನ್ನು ಕುದುರೆಗಳ ಹಗ್ಗವನ್ನೂ ಕತ್ತರಿಸಿದ. ಆಗ ಭೀಮ ತನ್ನ ನಿಜವಾದ ಬಲವನ್ನು ತೋರಿಸುವುದಕ್ಕಾಗಿ ರಥವನ್ನು ಬಿಟ್ಟನು.

**ನ ಮೇ ರಥಾದ್ಯೈರ್ಧನುಷಾऽಪಿ ಕಾರ್ಯ-**
**ಮಿತ್ಯೇವ ಸ ಖ್ಯಾಪಯಿತುಂ ವೃಕೋದರಃ ।**
**ಖಮುತ್ಪಪಾತೋತ್ತಮವೀರ್ಯತೇಜಾ**
**ರಥಂ ಚ ಕರ್ಣಸ್ಯ ಸಮಾಸ್ಥಿತಃ ಕ್ಷಣಾತ್ ॥ ೧೫೬ ॥**

**ಅರ್ಥ** :- **ರಥಾದ್ಯೈಃ** = ರಥ ಮೊದಲಾದವುಗಳಿಂದ, **ಧನುಷಾऽಪಿ** = ಧನುಸ್ಸಿನಿಂದಲೂ, **ಮೇ** = ನನಗೆ, **ನ ಕಾರ್ಯಂ** = ಕಾರ್ಯವಿಲ್ಲ, ಇತ್ಯೇವ = ಈ ರೀತಿಯಾಗಿಯೇ, **ಸಂಜ್ಞಾಪಯಿತುಂ** = ತಿಳಿಸಲು, **ಉತ್ತಮವೀರ್ಯ ತೇಜಾಃ** = ಉತ್ತಮವಾದ ವೀರ್ಯ ತೇಜಸ್ಸುಳ್ಳ, **ವೃಕೋದರಃ** = ಭೀಮನು, **ಖಂ ಉತ್ಪಪಾತ** = ಆಕಾಶಕ್ಕೆ ಹಾರಿದ, **ಕ್ಷಣಾತ್** = ಒಂದು ಕ್ಷಣದಲ್ಲಿ, **ಕರ್ಣಸ್ಯ** = ಕರ್ಣನ, **ರಥಂ ಚ** = ರಥವನ್ನೂ ಕೂಡ, **ಸಮಾಸ್ಥಿತಃ** = ಏರಿದನು.

**ತಾತ್ಪರ್ಯ** :- ರಥ ಧನುಸ್ಸು ಮೊದಲಾದವುಗಳಿಂದ ನನಗೆ ಮಾಡಬೇಕಾದದ್ದು ಏನೂ ಇಲ್ಲ ಎಂದು ತಿಳಿಸಲು ಉತ್ತಮ ವೀರ್ಯ ಪರಾಕ್ರಮಶಾಲಿಯಾದ ಭೀಮನು ಆಕಾಶಕ್ಕೆ ಹಾರಿದ. ಕ್ಷಣದಲ್ಲಿ ಕರ್ಣನ ರಥದ ಮೇಲೆ ಬಂದು ನಿಂತನು.

**ಭೀತಸ್ತು ಕರ್ಣೋ ರಥಕೂಬರೇ ತದಾ**
**ವ್ಯಲೀಯತಾತಃ ಸ ವೃಕೋದರೋ ರಥಾತ್ ।**
**ಅವಪ್ಲುತೋ ಜ್ಞಾಪಯಿತುಂ ಸ್ವಶಕ್ತಿಂ**
**ನಿರಾಯುಧತ್ವೇऽಪ್ಯರಿನಿಗ್ರಹಾದೌ ॥ ೧೫೭ ॥**

**ಅರ್ಥ** :- **ಭೀತಃ** = ಭೀತನಾದ, **ಕರ್ಣಸ್ತು** = ಕರ್ಣನಾದರೂ, **ತದಾ** = ಆವಾಗ, **ರಥಕೂಬರೇ** = ರಥದ ನೊಗದ ಕೆಳಗೆ,. **ವ್ಯಲೀಯತ** = ಅಡಗಿದನು, **ಸಃ ವೃಕೋದರಃ** = ಆ ಭೀಮನು, **ನಿರಾಯುಧತ್ವೇऽಪಿ** = ಆಯುಧವಿಲ್ಲದಿದ್ದರೂ, **ಅರಿನಿಗ್ರಹಾದೌ** = ಶತ್ರು ನಿಗ್ರಹ ಮೊದಲಾದವು ಗಳಲ್ಲಿ, **ಸ್ವಶಕ್ತಿಂ** = ತನ್ನ ಶಕ್ತಿಯನ್ನು, **ಜ್ಞಾಪಯಿತುಂ** = ತಿಳಿಸಲು, **ರಥಾತ್** = ರಥದಿಂದ, **ಅವಪ್ಲುತಃ** = ಹಾರಿದನು.

**ತಾತ್ಪರ್ಯ** :- ಭಯಗ್ರಸ್ತನಾಗಿ ಕರ್ಣ ರಥದ ನೊಗದ ಕೆಳಗೆ ಅಡಗಿಕೊಂಡನು. ಆ ಭೀಮ ನಿರಾಯುಧನಾರೂ ಶತ್ರುನಿಗ್ರಹ

ಮೊದಲಾದವುಗಳಲ್ಲಿ ತನಗೆ ಇರುವ ಶಕ್ತಿಯನ್ನು ತೋರಿಸುವುದಕ್ಕಾಗಿ ಕರ್ಣನ ರಥದಿಂದ ಕೆಳಗೆ ಹಾರಿದ.

**ನೈಚ್ಛದ್ ಗ್ರಹೀತುಂ ವಿನಿಹಂತುಮೇವ ವಾ**
**ರಥಂ ಧನುರ್ವಾಽಸ್ಯ ರಣೇಽಪಹರ್ತುಮ್ ।**
**ದ್ರೋಣಸ್ಯ ಯದ್ವತ್ ಪೂರ್ವಮತೀವ ಶಕ್ತೋಽ-**
**ಪ್ಯಮಾನಯದ್ ರಾಮವಚೋಽಸ್ಯ ಭಕ್ತ್ಯಾ ॥ ೧೫೮ ॥**

**ಅರ್ಥ :-** **ವೃಕೋದರಃ** = ಭೀಮನು, **ಗ್ರಹೀತುಂ** = ಕರ್ಣನನ್ನು ಹಿಡಿಯಲು, **ವಾ** = ಅಥವಾ, **ವಿನಿಹಂತುಮೇವ** = ಕೊಲ್ಲುವುದಕ್ಕೆ, **ಅಸ್ಯ** = ಈ ಕರ್ಣನ, **ರಥಂ** = ರಥವನ್ನು, **ವಾ** = ಅಥವಾ, **ಧನುಃ** = ಧನುಸ್ಸನ್ನು, **ರಣೇ** = ಯುದ್ಧದಲ್ಲಿ, **ಅಪಹರ್ತುಂ** = ಅಪಹರಿಸುವುದಕ್ಕೆ, **ನೈಚ್ಛತ್** = ಇಚ್ಛಿಸಲಿಲ್ಲ, **ಅತೀವ ಶಕ್ತೋಽಪಿ** = ಅತ್ಯಂತ ಶಕ್ತನಾದರೂ, **ಪೂರ್ವಂ** = ಹಿಂದೆ, **ದ್ರೋಣಸ್ಯ ಯದ್ವತ್** = ದ್ರೋಣನ ವಿಷಯದಲ್ಲಿ ಹೇಗೋ ಹಾಗೆ, **ಅಸ್ಯಾಪಿ** = ಈ ಕರ್ಣನ ವಿಷಯದಲ್ಲೂ, **ರಾಮವಚಃ** = ಪರಶುರಾಮನ ಮಾತನ್ನು, **ಅಮಾನಯತ್** = ಮಾನಿಸಿದನು.

**ತಾತ್ಪರ್ಯ :-** ಭೀಮ ಕರ್ಣನನ್ನು ಸೆರೆಹಿಡಿಯುವುದಕ್ಕೆ ಅಥವಾ ಕೊಲ್ಲುವುದಕ್ಕೆ ಬಯಸಲಿಲ್ಲ. ರಥ ಧನುಸ್ಸುಗಳನ್ನು ಅಪಹರಿಸುವುದಕ್ಕೂ ಬಯಸಲಿಲ್ಲ ಭೀಮ ಅತ್ಯಂತ ಶಕ್ತನಾದರೂ ಹಿಂದೆ ದ್ರೋಣನ ವಿಷಯದಲ್ಲಿ ಹೇಗೋ ಹಾಗೆ ಕರ್ಣನ ವಿಷಯದಲ್ಲೂ ಪರಶುರಾಮನ ವರವನ್ನು ಭಕ್ತಿಯಿಂದ ಮಾನಿಸಿದ.

**ಸತ್ಯಾಂ ಕರ್ತುಂ ವಾಸವೇಶ್ಚ ಪ್ರತಿಜ್ಞಾಂ**
**ಸಮ್ಮಾನಯನ್ ವೈಷ್ಣವತ್ವಾಚ್ಚ ಕರ್ಣಮ್ ।**
**ದಾತುಂ ರಂಧ್ರಂ ಸೂರ್ಯಜಸ್ಯ ಪ್ರಯಾತಃ**
**ಶರಕ್ಷೇಪಾರ್ಥಂ ದೂರಮತಿಷ್ಠದತ್ರ ॥ ೧೫೯ ॥**

**ಅರ್ಥ :-** **ವಾಸವೇಃ** = ಅರ್ಜುನನ, **ಪ್ರತಿಜ್ಞಾಂ** = ಪ್ರತಿಜ್ಞೆಯನ್ನು, **ಸತ್ಯಾಂ ಕರ್ತುಂ** = ಸತ್ಯವನ್ನಾಗಿ ಮಾಡಲು, **ಕರ್ಣಂ** = ಕರ್ಣನನ್ನು, **ವೈಷ್ಣವತ್ವಾಚ್ಚ** = ವೈಷ್ಣವನಾದ್ದರಿಂದ, **ಸಮ್ಮಾನಯನ್** = ಸಂಮಾನ ಮಾಡಲು

(ಸಂಮಾನ ಮಾಡತಕ್ಕವನಾಗಿ), **ಸೂರ್ಯಜಸ್ಯ** = ಕರ್ಣನಿಗೆ, **ಶರಕ್ಷೇಪಾರ್ಥಂ** = ಬಾಣ ಬಿಡಲು, **ರಂಧ್ರಂ ದಾತುಂ** = ಅವಕಾಶ ಕೊಡಲು, **ಅತ್ರ** = ಈ ಸಂದರ್ಭದಲ್ಲಿ, **ದೂರಂ ಅತಿಷ್ಠತ್** = ನಿಂತನು.

**ತಾತ್ಪರ್ಯ** :- ಅರ್ಜುನನು ಕರ್ಣನನ್ನು ಕೊಲ್ಲುವ ಪ್ರತಿಜ್ಞೆ ಮಾಡಿದ್ದ. ಅದೂ ನಡೆಯಬೇಕು. ಕರ್ಣನು ಸೂರ್ಯಾಂಶನಾದುದರಿಂದ ವೈಷ್ಣವನೇ. ಅಸುರಾವೇಶಕ್ಕೆ ಮಾತ್ರ ಒಳಗಾಗಿದ್ದ. ಆದ್ದರಿಂದ ಅವನನ್ನು ಸಂಮಾನಿಸಬೇಕು. ಆದಕ್ಕಾಗಿ ಭೀಮನು ಕರ್ಣನೇ ಬಾಣ ಬಿಡಲಿ ಎಂದು ದೂರ ಬಂದು ನಿಂತ.

**ತತಃ ಕರ್ಣೋ ದೂರಗತಂ ವೃಕೋದರಂ**
**ಸಮ್ಮಾನಯಂತಂ ರಾಮವಾಕ್ಯಂ ವಿಜಾನನ್ ।**
**ಶರೈರವಿಧ್ಯತ್ ಸ ಚ ತಾನವಾರಯದ್**
**ಗಜೈರ್ಮೃತೈಸ್ತಾಂಶ್ಚ ಚಕರ್ತ ಕರ್ಣಃ ॥ ೧೬೦ ॥**

**ಅರ್ಥ** :- **ತತಃ** = ಅನಂತರ, **ರಾಮವಾಕ್ಯಂ** = ಪರಶುರಾಮನ ವರವನ್ನು, **ಸಮ್ಮಾನಯಂತಂ** = ಮಾನಿಸುತ್ತಿದ್ದ, **ದೂರಗತಂ** = ದೂರದಲ್ಲಿ ನಿಂತಿದ್ದ, **ವೃಕೋದರಂ** = ಭೀಮನನ್ನು, **ವಿಜಾನನ್** = ತಿಳಿದಿದ್ದ, **ಕರ್ಣಃ** = ಕರ್ಣನು, **ಶರೈಃ** = ಬಾಣಗಳಿಂದ, **ಅವಿಧ್ಯತ್** = ಹೊಡೆದನು, **ಸ ಚ** = ಆ ಭೀಮನೂ, **ಮೃತೈಃ ಗಜೈಃ** = ಸತ್ತಿದ್ದ ಆನೆಗಳಿಂದ, **ತಾನ್** = ಆ ಬಾಣಗಳನ್ನು, **ಅವಾರಯತ್** = ತಡೆದನು, **ಕರ್ಣಃ** = ಕರ್ಣನು, **ತಾಂಶ್ಚ** = ಆ ಆನೆಗಳನ್ನು, **ಚಕರ್ತ** = ಕತ್ತರಿಸಿದನು.

**ತಾತ್ಪರ್ಯ** :- ಬಳಿಕ ಕರ್ಣನು ಭೀಮ ಪರಶುರಾಮನ ವರವನ್ನು ಮಾನಿಸುತ್ತಾ ದೂರದಲ್ಲಿ ನಿಂತಿದ್ದಾನೆ ಎಂದು ತಿಳಿದು ಆ ಭೀಮನನ್ನು ಬಾಣಗಳಿಂದ ಹೊಡೆದ. ಭೀಮ ಸತ್ತಿದ್ದ ಆನೆಗಳಿಂದ ಬಾಣಗಳನ್ನು ತಡೆದ. ಕರ್ಣ ಆ ಸತ್ತ ಆನೆಗಳನ್ನೂ ಬಾಣಗಳಿಂದ ಕತ್ತರಿಸಿ ಹಾಕಿದ.

**ವ್ಯಸೂನ್ ಗಜಾನ್ ಪ್ರಕ್ಷಿಪಂತಂ ಸಮೇತ್ಯ**
**ಸಂಸ್ಪೃಶ್ಯ ಚಾಪೇನ ವಚಶ್ಚ ದುಷ್ಟಮ್ ।**
**ಸಂಶ್ರಾವಯಾಮಾಸ ಸುಯೋಧನಸ್ಯ**
**ಪ್ರೀತ್ಯೈ ಪ್ರಜಾನನ್ನಪಿ ತಸ್ಯ ವೀರ್ಯಮ್ ॥ ೧೬೧ ॥**

**ಅರ್ಥ :- ವ್ಯಸೂನ್ ಗಜಾನ್** = ಸತ್ತ ಆನೆಗಳನ್ನು, **ಪ್ರಕ್ಷಿಪಂತಂ** = ಎಸೆಯುತ್ತಿದ್ದ ಭೀಮನನ್ನು ಕುರಿತು, **ಸಮೇತ್ಯ** = ಬಂದು, (**ಕರ್ಣಃ** = ಕರ್ಣನು) **ಚಾಪೇನ** = ಬಿಲ್ಲಿನಿಂದ, **ಸಂಸ್ಪೃಶ್ಯ** = ಚುಚ್ಚಿ, **ತಸ್ಯ ಪರಾಕ್ರಮಂ** = ಆ ಭೀಮನ ಪರಾಕ್ರಮವನ್ನು, **ಪ್ರಜಾನನ್ನಪಿ** = ತಿಳಿದಿದ್ದರೂ, **ಸುಯೋಧನಸ್ಯ ಪ್ರೀತ್ಯೈ** = ದುರ್ಯೋಧನನ ಪ್ರೀತಿಗಾಗಿ, **ದುಷ್ಟಂ ವಚಶ್ಚ** = ಕೆಟ್ಟಮಾತನ್ನೂ, **ಸಂಶ್ರಾವಯಾಮಾಸ** = ಹೇಳಿದ.

**ತಾತ್ಪರ್ಯ :-** ಸತ್ತ ಆನೆಗಳನ್ನು ಎಸೆಯುತ್ತಿದ್ದ ಭೀಮನ ಕಡೆಗೆ ಕರ್ಣ ಬಂದು ಬಿಲ್ಲಿನಿಂದ ಅವನಿಗೆ ಚುಚ್ಚಿ ಅವನ ಪರಾಕ್ರಮವನ್ನು ತಿಳಿದಿದ್ದರೂ ದರ್ಯೋಧನನ ಪ್ರೀತಿಗಾಗಿ ಕೆಟ್ಟ ಮಾತುಗಳನ್ನಾಡಿದ.

**ಸಂಶ್ರಾವಯಂತಂ ವಚನಾನಿ ರೂಕ್ಷಾ-**
**ಣ್ಯಪಾಹನದ್ ಬಾಣವರೈಸ್ತದಾಽರ್ಜುನಃ ।**
**ಸ ವರ್ಮಹೀನಃ ಪಾರ್ಥಬಾಣಾಭಿತಪ್ತೋ**
**ವ್ಯಪಾಗಮದ್ ಭೀಮ ಆಪಾಽತ್ಮಯಾನಮ್ ॥ ೧೬೨ ॥**

**ಅರ್ಥ :- ರೂಕ್ಷಾಣಿ ವಚನಾನಿ ಸಂಶ್ರಾವಯಂತಂ** = ಕೆಟ್ಟ ಮಾತುಗಳನ್ನಾಡುತ್ತಿದ್ದ ಕರ್ಣನನ್ನು, **ಅರ್ಜುನಃ** = ಅರ್ಜುನನು, **ಬಾಣವರೈಃ** = ಶ್ರೇಷ್ಠವಾದ ಬಾಣಗಳಿಂದ, **ಅಪಾಹನತ್** = ಹೊಡೆದನು, **ತದಾ** = ಆವಾಗ, **ವರ್ಮಹೀನಃ ಸಃ** = ಕವಚ ರಹಿತನಾಗಿದ್ದ ಕರ್ಣನು, **ಪಾರ್ಥಬಾಣಾಭಿತಪ್ತಃ** = ಅರ್ಜುನನ ಬಾಣಗಳಿಂದ ನೊಂದವನಾಗಿ, **ವ್ಯಪಾಗಮತ್** = ಪಲಾಯನ ಮಾಡಿದ, **ಭೀಮಃ** = ಭೀಮನು, **ಆತ್ಮಯಾನಂ** = ತನ್ನ ವಾಹನವನ್ನು, **ಆಪ** = ಹೊಂದಿದನು.

**ತಾತ್ಪರ್ಯ :-** ಕೆಟ್ಟ ಮಾತುಗಳನ್ನಾಡುತ್ತಿದ್ದ ಕರ್ಣನನ್ನು ಶ್ರೇಷ್ಠವಾದ ಬಾಣಗಳಿಂದ ಅರ್ಜುನ ಹೊಡೆದ. ಆಗ ಕವಚ ರಹಿತನಾಗಿದ್ದ ಕರ್ಣ ಬಾಣಗಳಿಂದ ನೊಂದವನಾಗಿ ಓಡಿ ಹೋದನು. ಭೀಮ ತನ್ನ ರಥವನ್ನು ಏರಿದ.

**ಕರ್ಣೋ ಭೀಮೇ ವಾಸವೀಂ ನೈವ ಶಕ್ತಿಂ**
**ವಿಮೋಕ್ತುಮೈಚ್ಛನ್ನೈವ ಬೀಭತ್ಸುತೋಽನ್ಯಾನ್ ।**

**ಹನ್ಯಾಮಿತಿ ಪ್ರಾಹ ಯತಃ ಸ ಕುಂತ್ಯೈ**
**ಯದ್ಯಪ್ಯವಧ್ಯಃ ಸ ತಯಾಽಪಿ ಭೀಮಃ ॥ ೧೬೩ ॥**

**ಅರ್ಥ** :- **ತಥಾಪಿ** = ಹಾಗಿದ್ದರೂ, **ಬೀಭತ್ಸುತಃ ಅನ್ಯಾನ್** = ಅರ್ಜುನನಿಗಿಂತಲೂ ಬೇರೆಯವರನ್ನು, **ನ ಹನ್ಯಾಂ** = ಕೊಲ್ಲುವುದಿಲ್ಲ, **ಇತಿ** = ಎಂಬುದಾಗಿ, **ಯತಃ** = ಯಾವ ಕಾರಣದಿಂದ, **ಕುಂತ್ಯೈ** = ಕುಂತಿಗೆ, **ಪ್ರಾಹ** = ಹೇಳಿದ್ದನೋ, **ತತಃ** = ಆದ್ದರಿಂದ, **ವಾಸವೀಂ ಶಕ್ತಿಂ** = ಇಂದ್ರನದ್ದಾದ ಶಕ್ತ್ಯಾಯುಧವನ್ನು, **ವಿಮೋಕ್ತುಂ** = ಪ್ರಯೋಗಿಸಲು, **ನೈವ ಐಚ್ಛತ್** = ಇಚ್ಛಿಸಲಿಲ್ಲ, **ಯದ್ಯಪಿ** = ಒಂದು ವೇಳೆ ಪ್ರಯೋಗಿಸಿದ್ದರೂ, **ಸ ಭೀಮಃ** = ಆ ಭೀಮನು, **ತಯಾಪಿ** = ಅದರಿಂದಲೂ, **ಅವಧ್ಯಃ** = ಅವಧ್ಯನೇ.

**ತಾತ್ಪರ್ಯ** :- ಭೀಮನು ಶಕ್ತ್ಯಾಯುಧದಿಂದಲೂ ಅವಧ್ಯನಾಗಿದ್ದನು. ಆದರೂ ಕೂಡ ಅರ್ಜುನನನ್ನು ಹೊರತು ಪಡಿಸಿ ಬೇರೆ ಪಾಂಡವರನ್ನು ಕೊಲ್ಲುವುದಿಲ್ಲ ಎಂದು ಕುಂತಿಗೆ ಕರ್ಣ ಹೇಳಿದ್ದ. ಆದ್ದರಿಂದ ಭೀಮನ ಮೇಲೆ ಶಕ್ತ್ಯಾಯುಧವನ್ನು ಪ್ರಯೋಗಿಸಲು ಇಚ್ಛಿಸಲಿಲ್ಲ.

**ನಾರಾಯಣಾಸ್ತ್ರಂ ಶಿರಸಿ ಪ್ರಪಾತಿತಂ**
**ನ ಯಸ್ಯ ಲೋಮಾಪ್ಯದಹಚ್ಚಿರಸ್ಥಿತಮ್ ।**
**ಕಿಂ ತಸ್ಯ ಶಕ್ತಿಃ ಪ್ರಕರೋತಿ ವಾಸವೀ**
**ತಥಾಽನ್ಯದಪ್ಯಸ್ತ್ರಶಸ್ತ್ರಂ ಮಹಚ್ಚ ॥ ೧೬೪ ॥**

**ಅರ್ಥ** :- **ಯಸ್ಯ** = ಯಾವ ಭೀಮನ, **ಶಿರಸಿ** = ತಲೆಯ ಮೇಲೆ, **ಪ್ರಪಾತಿತಂ** = ಬಿದ್ದ, **ಚಿರಸ್ಥಿತಂ** = ಬಹಳ ಕಾಲ ಇದ್ದ, **ನಾರಾಯಣಾಸ್ತ್ರಂ ಅಪಿ** = ನಾರಾಯಣಾಸ್ತ್ರವೂ ಕೂಡ, **ಲೋಮಾಪಿ** = ರೋಮವನ್ನೂ, **ನ ಅದಹತ್** = ಸುಡಲಿಲ್ಲವೋ, **ತಸ್ಯ** = ಅಂತಹ ಭೀಮನಿಗೆ, **ವಾಸವೀ ಶಕ್ತಿಃ** = ಇಂದ್ರನದ್ದಾದ ಶಕ್ತ್ಯಾಯುಧವು, **ಕಿಂ ಪ್ರಕರೋತಿ** = ಏನನ್ನು ಮಾಡುತ್ತದೆ ?, **ತಥಾ** = ಹಾಗೆಯೇ, **ಅನ್ಯತ್** = ಬೇರೆಯದ್ದಾದ, **ಮಹತ್ ಅಸ್ತ್ರಶಸ್ತ್ರಂ ಅಪಿಚ** = ಮಹಾ ಅಸ್ತ್ರಶಸ್ತ್ರವೂ ಕೂಡ, **ಕಿಂ ಪ್ರಕರೋತಿ** = ಏನನ್ನು ಮಾಡುತ್ತದೆ.

**ತಾತ್ಪರ್ಯ** :- ಭೀಮನ ತಲೆಯ ಮೇಲೆ ಬಿದ್ದ ನಾರಾಯಣಾಸ್ತ್ರವೂ ಬಹಳ ಕಾಲ ಇದ್ದರೂ ಅವನ ಒಂದು ಕೂದಲನ್ನೂ ಸುಡಲಿಲ್ಲ. ಇನ್ನು ಅವನಿಗೆ ಇಂದ್ರನ ಶಕ್ತ್ಯಾಯುಧವು ಏನು ಮಾಡುತ್ತದೇ ? ಹೀಗೇನೇ ಮಹಾ ಶಸ್ತ್ರಾಸ್ತ್ರಗಳೂ ಕೂಡ ಏನು ಮಾಡುತ್ತವೇ ?

**ಭೀಮಃ ಕರ್ಣರಥಂ ಪ್ರಾಪ್ತಃ ಶಕ್ತಿಂ ನಾಽದಾತುಮೈಚ್ಛತ ।**
**ಅಭಿಪ್ರಾಯಂ ಕೇಶವಸ್ಯ ಜಾನನ್ ಹೈಡಿಂಬಮೃತ್ಯವೇ ॥ ೧೬೫ ॥**

**ಅರ್ಥ** :- **ಭೀಮಃ** = ಭೀಮನು, **ಕರ್ಣರಥಂ** = ಕರ್ಣನ ರಥವನ್ನು, **ಪ್ರಾಪ್ತಃ** = ಹೊಂದಿದವನಾಗಿ, **ಶಕ್ತಿಂ** = ಶಕ್ತ್ಯಾಯುಧವನ್ನು, **ಹೈಡಿಂಬ ಮೃತ್ಯವೇ** = ಘಟೋತ್ಕಚನ ಮೃತ್ಯುವಿಗೆ ಎಂದು, **ಕೇಶವಸ್ಯ ಅಭಿಪ್ರಾಯಂ** = ಕೃಷ್ಣನ ಸಂಕಲ್ಪವನ್ನು, **ಜಾನನ್** = ತಿಳಿದವನಾಗಿ, **ಆದಾತುಂ** = ತೆಗೆದುಕೊಳ್ಳಲು (ಅಪಹರಿಸಲು), **ನ ಏಚ್ಛತ್** = ಇಚ್ಛಿಸಲಿಲ್ಲ.

**ತಾತ್ಪರ್ಯ** :- ಭೀಮ ಕರ್ಣನ ಮುಂದೆ ಬಂದರೂ ಅವನ ಶಕ್ತ್ಯಾಯುಧವನ್ನು ಅಪಹರಿಸಲು ಇಚ್ಛಿಸಲಿಲ್ಲ. ಏಕೆಂದರೆ ಆ ಅಸ್ತ್ರವು ಘಟೋತ್ಕಚನ ವಧೆಗೆ ಕಾರಣವಾಗಲಿ ಎಂಬ ಕೃಷ್ಣನ ಸಂಕಲ್ಪವನ್ನು ತಿಳಿದಿದ್ದ.

**ತತಃ ಕರ್ಣೋಽನ್ಯಮಾಸ್ಥಾಯ ರಥಮರ್ಜುನಮಭ್ಯಯಾತ್ ।**
**ದಿವ್ಯಂ ರಥಂ ಧನುಶ್ಚೈವ ಕೃಷ್ಣಬುದ್ಧ್ಯಾಽರ್ಜುನೋ ಹರೇತ್ ॥ ೧೬೬ ॥**

**ಇತಿ ಭೀತಸ್ತು ತಾಂ ಶಕ್ತಿಮಾದಾಯಾರ್ಜುನಮೃತ್ಯವೇ ।**
**ಯುದ್ಧಾಯಾಯಾದ್ ರಥಂ ಚಾಪಂ ಶಕ್ತಿಂ ಚೈಕತ್ರ ನಾಕರೋತ್ ।**
**ಏಕಂ ಹೃತಂ ಚೇದನ್ಯತ್ ಸ್ಯಾದಿತಿ ಮತ್ವಾ ಭಯಾಕುಲಃ ॥ ೧೬೭ ॥**

**ಬಿಭೇತಿ ಸರ್ವದಾ ನೀತೇಃ ಕೃಷ್ಣಸ್ಯಾಮಿತತೇಜಸಃ ॥ ೧೬೮ ॥**

**ಅರ್ಥ** :- **ತತಃ** = ಅನಂತರ, **ಕರ್ಣಃ** = ಕರ್ಣನು, **ಅನ್ಯಂ ರಥಂ** = ಬೇರೆ ರಥವನ್ನು, **ಆಸ್ಥಾಯ** = ಏರಿ, **ಅರ್ಜುನಂ** = ಅರ್ಜುನನನ್ನು, **ಅಭ್ಯಯಾತ್** = ಎದುರಿಸಿದನು, **ದಿವ್ಯಂ** = ದಿವ್ಯವಾದ, **ರಥಂ** = ರಥವನ್ನು, **ಧನುಶ್ಚೈವ** = ಧನುಸ್ಸನ್ನೂ, **ಕೃಷ್ಣಬುದ್ಧ್ಯಾ** = ಕೃಷ್ಣನ ಉಪಾಯದಿಂದ, **ಅರ್ಜುನಃ** = ಅರ್ಜುನನು, **ಹರೇತ್** = ಅಪಹರಿಸಿಯಾನು, **ಇತಿ** =

ಎಂಬುದಾಗಿ, **ಭೀತಃ** = ಭಯಗೊಂಡವನಾಗಿ, **ತಾಂ ಶಕ್ತಿಂ** = ಆ ಶಕ್ತ್ಯಾಯುಧವನ್ನು, **ಆದಾಯ** = ಹಿಡಿದುಕೊಂಡು, **ಅರ್ಜುನಮೃತ್ಯವೇ** = ಅರ್ಜುನನ ಮೃತ್ಯುವಿಗಾಗಿ, **ಯುದ್ಧಾಯ** = ಯುದ್ಧಕ್ಕಾಗಿ, **ಆಯಾತ್** = ಬಂದನು, **ಏಕಂ** = ಒಂದು, **ಹೃತಂ ಚೇತ್** = ಅಪಹರಿಸಲ್ಪಟ್ಟರೆ, **ಅನ್ಯತ್** = ಬೇರೆಯದ್ದು, **ಸ್ಯಾತ್** = ಉಳಿದೀತು, **ಇತಿ** = ಎಂದು, **ಮತ್ವಾ** = ತಿಳಿದು, **ಭಯಾಕುಲಃ** = ಭಯಗ್ರಸ್ತನಾಗಿ, **ರಥಂ** = ರಥವನ್ನು, **ಚಾಪಂ** = ಧನುಸ್ಸನ್ನು, **ಶಕ್ತಿಂ ಚ** = ಶಕ್ತ್ಯಾಯುಧವನ್ನೂ, **ಏಕತ್ರ** = ಒಟ್ಟಿಗೆ, **ನ ಅಕರೋತ್** = ಮಾಡಲಿಲ್ಲ (ತರಲಿಲ್ಲ), **ಅಮಿತ ತೇಜಸಃ** = ಅಮಮಿತವಾದ ಶಕ್ತಿಯುಳ್ಳ, **ಕೃಷ್ಣಸ್ಯ** = ಕೃಷ್ಣನ, **ನೀತೇಃ** = ನೀತಿಯ ದೆಸೆಯಿಂದ, **ಸರ್ವದಾ** = ಯಾವಾಗಲೂ, **ಬಿಭೇತಿ** = ಭಯಪಡುತ್ತಿದ್ದನು.

**ತಾತ್ಪರ್ಯ** :- ಅನಂತರ ಕರ್ಣ ಬೇರೆ ರಥವನ್ನೇರಿ ಅರ್ಜುನನನ್ನು ಎದುರಿಸಿದ. ಪರಶುರಾಮ ಕೊಟ್ಟಿದ್ದ ದಿವ್ಯರಥ ಧನುಸ್ಸುಗಳನ್ನು ತಂದರೆ ಅವುಗಳನ್ನು ಅರ್ಜುನ ಕೃಷ್ಣನ ಉಪಾಯದಿಂದ ಅಪಹರಿಸುತ್ತಾನೆ ಎಂದು ಭಯಗೊಂಡವನಾಗಿ ಕರ್ಣ ಶಕ್ತ್ಯಾಯುಧವನ್ನು ಮಾತ್ರ ಅರ್ಜುನನ ವಧೆಗಾಗಿ ತಂದನು. ಮೂರರಲ್ಲಿ ಒಂದನ್ನು ಅಪಹರಿಸಿದರೆ ಇನ್ನೆರೆಡು ಉಳಿಯುತ್ತದೆ ಎಂದು ದಿವ್ಯವಾದ ರಥ ಬಿಲ್ಲು ಶಕ್ತ್ಯಾಯುಧ ಇವೆಲ್ಲವನ್ನು ಒಂದು ಕಡೆಗೆ ತರುತ್ತಿರಲಿಲ್ಲ. ಅಪರಿಮಿತ ಶಕ್ತನಾದ ಕೃಷ್ಣನ ಯುದ್ಧ ನೀತಿಗೆ ಅವನು ಸದಾ ಹೆದರುತ್ತಿದ್ದ.

**ನಿಶ್ಚಿತೋ ಮರಣಾಯೈವ ಮೃತಿಕಾಲೇ ತು ತಂ ರಥಮ್ ।**
**ಆರುಹ್ಯಾಗಾದ್ಧಿ ಪೂರ್ವಂ ತು ನ ಕಾಲಂ ಮನ್ಯತೇ ಮೃತೇಃ ॥ ೧೬ ॥**

**ಅರ್ಥ** :- **ಮೃತಿಕಾಲೇ** = ಮರಣಕಾಲದಲ್ಲಿ, **ಮರಣಾಯ** = ಮರಣಕ್ಕಾಗಿ, **ನಿಶ್ಚಿತಃ ಏವ** = ನಿಶ್ಚಯಿಸಿಕೊಂಡವನಾಗಿಯೇ, **ಕರ್ಣಃ** = ಕರ್ಣನು, **ತಂ ರಥಂ** = ಆ ರಥವನ್ನು, **ಆರುಹ್ಯ** = ಏರಿ, **ಆಗಾತ್** = ಬಂದನು, **ಪೂರ್ವಂ ತು** = ಇದಕ್ಕಿಂತಲೂ ಮೊದಲಾದರೂ, **ಮೃತೇಃ ಕಾಲಂ** = ಮರಣದ ಕಾಲವನ್ನಾಗಿ, **ನ ಮನ್ಯತೇ** = ತಿಳಿದಿರಲಿಲ್ಲ.

**ತಾತ್ಪರ್ಯ** :- ಮರಣ ಸಮಯದಲ್ಲಿ ಮಾತ್ರ ಕರ್ಣ ಮರಣಕ್ಕಾಗಿ ನಿಶ್ಚಿತನಾಗಿ ಆ ದಿವ್ಯರಥವನ್ನೇರಿ ಬಂದ. ಅದಕ್ಕಿಂತ ಪೂರ್ವದಲ್ಲಿ ಆ ಕಾಲವನ್ನು ತನ್ನ ಮರಣ ಕಾಲವೆಂದು ನಿಶ್ಚಯಿಸಿರಲಿಲ್ಲ.

**ಶಕ್ತಿಂ ತು ತದ್ರಥಗತಾಂ ಪ್ರಸಮೀಕ್ಷ್ಯ ಕೃಷ್ಣಃ**
**ಸಂಸ್ಥಾಪ್ಯ ಪಾರ್ಥಮಪಿ ಸಾತ್ಯಕಿಮೇವ ಯೋದ್ಧುಮ್ ।**
**ದತ್ವಾ ಸ್ವಕೀಯರಥಮೇವ ವಿರೋಚನಸ್ಯ**
**ಪುತ್ರೇಣ ಸೋऽದಿಶದಮುಷ್ಯ ಬಲಂ ಪ್ರದಾಯ ॥ ೧೭೦ ॥**

**ಅರ್ಥ** :- **ತದ್ರಥಗತಾಂ** = ಆ ಕರ್ಣನ ರಥದಲ್ಲಿದ್ದ, **ಶಕ್ತಿಂ** = ಶಕ್ತ್ಯಾಯುಧವನ್ನು, **ಪ್ರಸಮೀಕ್ಷ್ಯ** = ನೋಡಿ, **ಸಃ ಕೃಷ್ಣಃ** = ಆ ಕೃಷ್ಣನು, **ಪಾರ್ಥಂ** = ಅರ್ಜುನನನ್ನು, **ಸಂಸ್ಥಾಪ್ಯ** = ನಿಲ್ಲಿಸಿ, **ಸಾತ್ಯಕಿಂ** = ಸಾತ್ಯಕಿಯನ್ನು ಕುರಿತು, **ಸ್ವಕೀಯಂ ರಥಂ ಏವ** = ತನ್ನ ರಥವನ್ನೇ, **ದತ್ವಾ** = ಕೊಟ್ಟು, **ವಿರೋಚನಸ್ಯ ಪುತ್ರೇಣ** = ಕರ್ಣನ ಜೊತೆಗೆ, **ಯೋದ್ಧುಂ** = ಯುದ್ಧಮಾಡಲು, **ಬಲಂ** = ಬಲವನ್ನು, **ಪ್ರದಾಯ** = ಕೊಟ್ಟು, **ಅಮುಷ್ಯ** = ಈ ಸಾತ್ಯಕಿಗೆ, **ಅದಿಶತ್** = ಆದೇಶಿಸಿದನು.

**ತಾತ್ಪರ್ಯ** :- ಕರ್ಣನ ರಥದಲ್ಲಿ ಶಕ್ತ್ಯಾಯುಧವನ್ನು ನೋಡಿ ಶ್ರೀಕೃಷ್ಣ ಅರ್ಜುನನನ್ನು ನಿಲ್ಲಿಸಿ ಸಾತ್ಯಕಿಗೆ ತನ್ನ ರಥವನ್ನು ಕೊಟ್ಟು ಬಲವನ್ನೂ ಕೊಟ್ಟು ಕರ್ಣನ ಜೊತೆಗೆ ಯುದ್ಧ ಮಾಡಲು ಆದೇಶ ಮಾಡಿದ.

**ಶಿಷ್ಯಂ ತ್ವಶಕ್ತಮಿಹ ಮೇ ಪ್ರತಿಯೋಧನಾಯ**
**ಪಾರ್ಥೋऽ ಹ್ಯದಾದಿತಿ ಸ ಸಾತ್ಯಕಿಮೀಕ್ಷಮಾಣಃ ।**
**ಸಂಸ್ಪರ್ಧಯೈವ ಯುಯುಧೇ ವಿರಥಂ ಚಕಾರ**
**ತೇನೈವ ಸಾತ್ಯಕಿರಮುಂ ಹರಿಯಾನಸಂಸ್ಥಃ ॥ ೧೭೧ ॥**

**ಅರ್ಥ** :- **ಪಾರ್ಥಃ** = ಅರ್ಜುನನು, **ಮೇ** = ನನಗೆ, **ಪ್ರತಿಯೋಧನಾಯ** = ಯುದ್ಧ ಮಾಡುವುದಕ್ಕೆ, **ಅಶಕ್ತಂ** = ದುರ್ಬಲನಾದ, **ಶಿಷ್ಯಂ** = ಶಿಷ್ಯನನ್ನು, **ಅದಾತ್** = ಕೊಟ್ಟಿದ್ದಾನೆ (ಕಳುಹಿಸಿದ್ದಾನೆ), **ಇತಿ** = ಎಂದು, **ಸಃ** = ಆ ಕರ್ಣನು, **ಸಾತ್ಯಕಿಂ** = ಸಾತ್ಯಕಿಯನ್ನು, **ಈಕ್ಷಮಾಣಃ** = ನೋಡುವವನಾಗಿ, **ಸಂಸ್ಪರ್ಧಯಾ ಏವ** = ಸ್ಪರ್ಧೆಯಿಂದಲೇನೇ,

**ಯುಯುಧೇ** = ಯುದ್ಧ ಮಾಡಿದನು, **ತೇನೈವ** = ಆದ್ದರಿಂದಲೇನೇ, **ಹರಿಯಾನ ಸಂಸ್ಥಃ** = ಕೃಷ್ಣನ ರಥದಲ್ಲಿ ಕುಳಿತಿದ್ದ, **ಸಾತ್ಯಕಿಃ** = ಸಾತ್ಯಕಿಯು, **ಅಮುಂ** = ಈ ಕರ್ಣನನ್ನು, **ವಿರಥಂ ಚಕಾರ** = ರಥ ರಹಿತನನ್ನಾಗಿ ಮಾಡಿದ.

**ತಾತ್ಪರ್ಯ** :- ಅರ್ಜುನ ನನ್ನ ಜೊತೆಗೆ ಯುದ್ಧ ಮಾಡಲು ತನ್ನ ಶಿಷ್ಯನನ್ನು ಕಳಿಸಿದ್ದಾನೆ ಎಂಬುದಾಗಿ ಕರ್ಣ ಸಾತ್ಯಕಿಯನ್ನು ನೋಡುತ್ತಾ ಸ್ಪರ್ಧೆಯಿಂದ ಹೋರಾಡಿದ. ಆದ್ದರಿಂದಲೇನೇ ಕೃಷ್ಣನ ರಥದಲ್ಲಿ ಕುಳಿತಿದ್ದ ಸಾತ್ಯಕಿ ಆ ಕರ್ಣನನ್ನು ರಥ ರಹಿತನನ್ನಾಗಿ ಮಾಡಿದ.

**ನ ಕೇಶವರಥೇ ಕಶ್ಚಿತ್ ಸ್ಥಿತೋ ಯಾತಿ ಪರಾಜಯಮ್ ।**
**ಅತಶ್ಚ ಸಾತ್ಯಕಿರ್ನಾಽಪ ಕರ್ಣೇನಾತ್ರ ಪರಾಜಯಮ್ ॥ ೧೭೨ ॥**

**ಅರ್ಥ** :- **ಕೇಶವರಥೇ** = ಕೃಷ್ಣನ ರಥದಲ್ಲಿ, **ಸ್ಥಿತಃ** = ಇದ್ದವನು, **ಕಶ್ಚಿತ್** = ಯಾರೂ, **ಪರಾಜಯಂ** = ಸೋಲನ್ನು, **ನ ಯಾತಿ** = ಹೊಂದುವುದಿಲ್ಲ, **ಅತಶ್ಚ** = ಆದ್ದರಿಂದಲೂ, **ಅತ್ರ** = ಈ ಯುದ್ಧದಲ್ಲಿ, **ಸಾತ್ಯಕಿಃ** = ಸಾತ್ಯಕಿಯು, **ಕರ್ಣೇನ** = ಕರ್ಣನಿಂದ, **ಪರಾಜಯಂ** = ಸೋಲನ್ನು, **ನ ಆಪ** = ಹೊಂದಲಿಲ್ಲ.

**ತಾತ್ಪರ್ಯ** :- ಕೃಷ್ಣನ ರಥದಲ್ಲಿ ಕುಳಿತವರು ಯಾರೂ ಸೋಲುವುದಿಲ್ಲ. ಆದ್ದರಿಂದಲೂ ಸಾತ್ಯಕಿ ಕರ್ಣನ ಜೊತೆ ಯುದ್ಧದಲ್ಲಿ ಸೋಲಲಿಲ್ಲ.

**ಶಸ್ತ್ರಸಂಗ್ರಹಕಾಲೇ ತು ಕುಮಾರಾಣಾಂ ವ್ರತಂ ಭವೇತ್ ।**
**ಇತ್ಯುಕ್ತಂ ಜಾಮದಗ್ನ್ಯೇನ ಧನುರ್ವಿದ್ಯಾಪುರಾಕೃತಾ ॥ ೧೭೩ ॥**

**ಅರ್ಥ** :- **ಧನುರ್ವಿದ್ಯಾ ಪುರಾಕೃತಾ** = ಧನುರ್ವಿದ್ಯೆಯ ಪ್ರಥಮ ಆಚಾರ್ಯನಾದ, **ಜಾಮದಗ್ನ್ಯೇನ** = ಪರಶುರಾಮನಿಂದ, **ಉಕ್ತಂ** = ಹೇಳಲ್ಪಟ್ಟಿತ್ತು, **ಶಸ್ತ್ರಸಂಗ್ರಹಕಾಲೇ** = ಶಸ್ತ್ರಾಭ್ಯಾಸ ಮಾಡಿಸುವ ಸಮಯದಲ್ಲಿ, **ಕುಮಾರಾಣಾಂ** = ಶಿಷ್ಯರಿಗೆ, **ವ್ರತಂ** = ವ್ರತವು, **ಭವೇತ್**= ಇರಬೇಕು.

**ತಾತ್ಪರ್ಯ** :- ಧನುರ್ವಿದ್ಯೆಯ ಮೊದಲನೆಯ ಆಚಾರ್ಯನಾದ ಪರಶುರಾಮ ಶಸ್ತ್ರಾಭ್ಯಾಸದ ಸಮಯದಲ್ಲಿ ಶಿಷ್ಯರಿಗೆ ಹೇಳಿದ ನೀವು ಕುಮಾರರಿಂದ ಒಂದು ವ್ರತವನ್ನು ಸ್ವೀಕಾರ ಮಾಡಿಸಬೇಕು.

ತಚ್ಛತ್ರುವಧರೂಪಂ ಚ ಪೂರ್ವಾಸಿದ್ಧಂ ಚ ಗೂಹಿತಮ್ ।
ಅವಿರುದ್ಧಂ ಚ ಧರ್ಮಸ್ಯ ಕಾರ್ಯಂ ರಾಮಸ್ಯ ತುಷ್ಟಿದಮ್ ॥ ೧೭೪ ॥

ಅನುಪದ್ರವಂ ಚ ಲೋಕಸ್ಯೇತ್ಯತೋ ಭೀಮೋ ವ್ರತಂ ತ್ವಿದಮ್ ।
ಚಕಾರ ತೂಬರೇತ್ಯುಕ್ತೇ ಹನ್ಯಾಮಿತಿ ರಹಃ ಪ್ರಭುಃ ॥ ೧೭೫ ॥

ಅನುಪದ್ರವಾಯ ಲೋಕಸ್ಯ ಸುವ್ಯಂಜಚ್ಶ್ಮಶ್ರುಮಂಡಲಃ ।
ಸುಶ್ಮಶ್ರುಂ ಮಾಂ ನ ಕಶ್ಚಿದ್ಧಿ ತಥಾ ಬ್ರೂಯಾದಿತಿ ಸ್ಫುಟಮ್ ।
ತದರ್ಜುನೋ ವಿಜಾನಾತಿ ಸ್ನೇಹಾದ್ ಭೀಮೋದಿತಂ ರಹಃ ॥ ೧೭೬ ॥

**ಅರ್ಥ** :- **ತತ್** = ಆ ವ್ರತವು, **ಶತ್ರುವಧರೂಪಂ ಚ** = ಶತ್ರುವಧರೂಪವಾದದ್ದೂ, **ಪೂರ್ವಾಸಿದ್ಧಂ** = ಈ ಮೊದಲು ಯಾರೂ ಮಾಡದೇ ಇದ್ದದ್ದು, **ಗೂಹಿತಂ ಚ** = ಗೋಪ್ಯವಾದದ್ದೂ, **ಧರ್ಮಸ್ಯ ಅವಿರುದ್ಧಂ ಚ** = ಧರ್ಮಕ್ಕೆ ಅವಿರುದ್ಧವಾದದ್ದೂ, **ರಾಮಸ್ಯ** = ಪರಶುರಾಮನಿಗೆ, **ತುಷ್ಟಿದಂ** = ಸಂತೋಷಕರವಾದದ್ದೂ, **ಲೋಕಸ್ಯ** = ಲೋಕಕ್ಕೆ, **ಅನುಪದ್ರವಂ ಚ** = ಉಪದ್ರವಕರವಾಗದೇ ಇದ್ದದ್ದೂ, **ಕಾರ್ಯಂ** = ಮಾಡಲ್ಪಡಬೇಕು, **ಇತಿ** = ಎಂಬುದಾಗಿ, **ಉಕ್ತಂ** = ಹೇಳಲ್ಪಟ್ಟಿತ್ತು, **ಅತಃ** = ಈ ಕಾರಣದಿಂದ, **ಸುವ್ಯಕ್ತ ಸ್ಮಶ್ರು ಮಂಡಲಃ** = ಸ್ಪಷ್ಟವಾದ ಮೀಸೆಯುಳ್ಳ, **ಪ್ರಭುಃ** = ಸಮರ್ಥನಾದ, **ಭೀಮಃ** = ಭೀಮನು, **ಲೋಕಸ್ಯ** = ಲೋಕಕ್ಕೆ, **ಅನುಪದ್ರವಾಯ** = ಉಪದ್ರವವಾಗದಿರಲೆಂದು, '**ತೂಬರೇತ್ಯುಕ್ತಃ** = ಗಡ್ಡಮೀಸೆ ಇಲ್ಲದವನೆಂದು ಹೇಳಲ್ಪಟ್ಟರೆ, **ಹನ್ಯಾಂ** = ಕೊಲ್ಲುವೆನು', **ಇತಿ** = ಎಂಬುದಾಗಿ, '**ಸುಸ್ಮಶ್ರುಂ ಮಾಂ** = ಒಳ್ಳೆಯ ಮೀಸೆಯುಳ್ಳ ನನ್ನನ್ನು, **ಕಶ್ಚಿತ್** = ಯಾರೂ ಕೂಡ, **ತಥಾ** = ಹಾಗೆ, **ನಬ್ರೂಯಾತ್ ಹಿ** = ಹೇಳಲಾರರಷ್ಟೆ', **ಇತಿ** = ಎಂದು, **ಸ್ಫುಟಂ** = ನಿಶ್ಚಯದಿಂದ, **ಇದಂ ವ್ರತಂ** = ಈ ವೃತವನ್ನು, **ರಹಃ** = ಏಕಾಂತದಲ್ಲಿ, **ಚಕಾರ** = ಸ್ವೀಕರಿಸಿದ್ದನು, **ಸ್ನೇಹಾತ್** = ಸ್ನೇಹದಿಂದ, **ರಹಃ** = ಏಕಾಂತದಲ್ಲಿ, **ಭೀಮೋದಿತಂ** = ಭೀಮನಿಂದ ಹೇಳಲ್ಪಟ್ಟ, **ತತ್** = ಅದನ್ನು, **ಅರ್ಜುನಃ** = ಅರ್ಜುನನು, **ವಿಜಾನಾತಿ** = ತಿಳಿದಿದ್ದಾನೆ.

**ತಾತ್ಪರ್ಯ** :- ಆ ವ್ರತವು ಅಪೂರ್ವವೂ ಶತ್ರು ವಧಕ್ಕೆ ಕಾರಣವೂ ಗೋಪ್ಯವೂ ಧರ್ಮಕ್ಕೆ ಅವಿರುದ್ಧವು ಪರಶುರಾಮ ಪ್ರೀತಿಕರವೂ ಆಗಿರಬೇಕು.

ಲೋಕಕ್ಕೆ ಹಾನಿಕಾರಕವಾಗಿರಬಾರದು ಎಂಬ ನಿಯಮವಿತ್ತು. ಆದ್ದರಿಂದ ಭೀಮನು ತನ್ನನ್ನು ತೂಬರ (ಗಡ್ಡ ಮೀಸೆ ಇಲ್ಲದವನು) ಎಂದವರನ್ನು ಕೊಲ್ಲುತ್ತೇನೆಂದು ಪ್ರತಿಜ್ಞೆ ಮಾಡಿದ್ದ. ಸ್ಪಷ್ಟವಾದ ಗಡ್ಡ ಮೀಸೆ ಇರುವ ತನ್ನನ್ನು ಯಾರೂ ಹಾಗೆ ಹೇಳಲಾರರು ಇದರಿಂದ ಲೋಕಕ್ಕೂ ಹಾನಿ ಇಲ್ಲ ಎಂದು ಭಾವಿಸಿದ್ದ. ಈ ವಿಚಾರವನ್ನು ಏಕಾಂತದಲ್ಲಿ ಅರ್ಜುನನಿಗೂ ಹೇಳಿದ್ದ.

**ಅರ್ಜುನಸ್ಯಾಪಿ ಗಾಂಡೀವಂ ದೇಹೀತ್ಯುಕ್ತೋ ನಿಹನ್ಮ್ಯಹಮ್ ।**
**ಗಾಂಡೀವಸ್ಯಾऽಗಮಂ ಪೂರ್ವಂ ಜಾನಾತ್ಯೇವ ಹಿ ನಾರದಾತ್ ॥ ೧೭೭ ॥**

**ಅರ್ಥ** :- **ಗಾಂಡೀವಂ** = ಗಾಂಡೀವವನ್ನು, **ದೇಹಿ** = ಕೊಡು, **ಇತಿ** = ಎಂದು, **ಉಕ್ತೇ** = ಹೇಳಲ್ಪಡುತ್ತಿರಲು, **ತಂ** = ಅವನನ್ನು, **ನಿಹನ್ಮಿ** = ಕೊಲ್ಲುತ್ತೇನೆ ಎಂದು, **ಅರ್ಜುನಸ್ಯಾಪಿ** = ಅರ್ಜುನನನದ್ದು ಪ್ರತಿಜ್ಞೆ ಇತ್ತು, **ಪೂರ್ವಂ** = ಹಿಂದೆ, **ಗಾಂಡೀವಸ್ಯ ಆಗಮಂ** = ಗಾಂಡೀವದ ಪ್ರಾಪ್ತಿಯನ್ನು, **ನಾರದಾದೇವ** = ನಾರದರಿಂದಲೇನೇ, **ಜಾನಾತಿ ಹಿ** = ತಿಳಿದಿದ್ದನಷ್ಟೆ.

**ತಾತ್ಪರ್ಯ** :- 'ಗಾಂಡೀವವನ್ನು ಕೊಡು' ಎಂದು ಹೇಳಿದರೆ ಅವನನ್ನು ಕೊಲ್ಲುತ್ತೇನೆ ಎಂದು ಅರ್ಜುನನದ್ದೂ ಪ್ರತಿಜ್ಞೆ ಇತ್ತು. ಗಾಂಡೀವದ ಹೊಂದುವಿಕೆಯ ಬಗ್ಗೆ ನಾರದರ ಮಾತಿನಿಂದ ಅರ್ಜುನ ಮೊದಲೇ ತಿಳಿದಿದ್ದ.

**ಇತಿ ತಚ್ಚ ವಿಜಾನಾತಿ ಭೀಮ ಏಕೋ ನ ಚಾಪರಃ ॥ ೧೭೮ ॥**

**ಅರ್ಥ** :- **ಇತಿ** = ಈ ರೀತಿಯಾಗಿ, **ತತ್** = ಆ ಪ್ರತಿಜ್ಞೆಯನ್ನು, **ಏಕಃ ಭೀಮಃ** = ಭೀಮ ಒಬ್ಬನು, **ವಿಜಾನಾತಿ** = ತಿಳಿದಿದ್ದ, **ಅಪರಶ್ಚ** = ಬೇರೆಯವರೂ, **ನ ವಿಜಾನಾತಿ** = ತಿಳಿದಿರಲಿಲ್ಲ.

**ತಾತ್ಪರ್ಯ** :- ಹೀಗೆ ಅರ್ಜುನನ ಪ್ರತಿಜ್ಞೆ ಭೀಮನೊಬ್ಬನೇ ತಿಳಿದಿದ್ದ. ಬೇರೆ ಯಾರೂ ತಿಳಿದಿರಲಿಲ್ಲ.

**ಪ್ರತಿಜ್ಞಾಂ ಭೀಮಸೇನಸ್ಯ ಬ್ರುವತಃ ಫಲ್ಗುನೇ ರಹಃ ।**
**ದುರ್ಯೋಧನಸ್ತು ಶುಶ್ರಾವ ತಾಂ ಚ ಕರ್ಣಾಯ ಸೋऽಬ್ರವೀತ್ ॥ ೧೭೯ ॥**

**ಅರ್ಥ** :- **ಪ್ರತಿಜ್ಞಾಂ** = ಪ್ರತಿಜ್ಞೆಯನ್ನು, **ರಹಃ** = ಏಕಾಂತದಲ್ಲಿ, **ಫಲ್ಗುನೇ** = ಅರ್ಜುನನಲ್ಲಿ, **ಭೀಮಸೇನಸ್ಯ ಬ್ರುವತಃ** = ಭೀಮನು

ಹೇಳುತ್ತಿರುವಾಗ, **ದುರ್ಯೋಧನಃ** = ದುರ್ಯೋಧನನು, **ತಾಂ** = ಅದನ್ನು, **ಶುಶ್ರಾವ** = ಕೇಳಿಸಿಕೊಂಡನು, **ಸ ಚ** = ಆ ದುರ್ಯೋಧನನೂ, **ತಾಂ** = ಆ ಪ್ರತಿಜ್ಞೆಯನ್ನು, **ಕರ್ಣಾಯ** = ಕರ್ಣನಿಗೆ, **ಅಬ್ರವೀತ್** = ಹೇಳಿದನು.

**ತಾತ್ಪರ್ಯ** :- ಭೀಮಸೇನ ತನ್ನ ಪ್ರತಿಜ್ಞೆಯನ್ನು ಏಕಾಂತದಲ್ಲಿ ಅರ್ಜುನನಿಗೆ ಹೇಳಿದಾಗ ದುರ್ಯೋಧನ ಕದ್ದು ಕೇಳಿಸಿಕೊಂಡಿದ್ದ. ಅವನು ಅದನ್ನು ಕರ್ಣನಿಗೆ ಹೇಳಿದ.

**ಅತೂಬರೋಽಪಿ ತೇನಾಸೌ ತಸ್ಮಾತ್ ತೂಬರ ಇತ್ಯಲಮ್ ।**
**ಉಕ್ತಃ ಪ್ರಕೋಪನಾಯೈವ ತಸ್ಮಾದರ್ಜುನಮಬ್ರವೀತ್ ॥ ೧೮೦ ॥**

**ಅರ್ಥ** :- **ಪ್ರಕೋಪನಾಯೈವ** = ಕೋಪಬರಿಸುವುದಕ್ಕಾಗಿಯೇ, **ತೇನ** = ಆ ಕರ್ಣನಿಂದ, **ಅತೂಬರೋಽಪಿ** = ತೂಬರ ಅಲ್ಲದೆ ಇದ್ದರೂ, **ತೂಬರ ಇತಿ** = ತೂಬರ ಎಂಬುದಾಗಿ, **ಉಕ್ತಃ** = ಹೇಳಲ್ಪಟ್ಟನು, **ತಸ್ಮಾತ್** = ಆದ್ದರಿಂದ, **ಅಸೌ** = ಈ ಭೀಮನು, **ಅರ್ಜುನಂ** = ಅರ್ಜುನನನ್ನು ಕುರಿತು, **ಅಬ್ರವೀತ್** = ಹೇಳಿದನು.

**ತಾತ್ಪರ್ಯ** :- ಭೀಮನಿಗೆ ಕೋಪ ಬರಿಸುವುದಕ್ಕಾಗಿಯೇ ಕರ್ಣ ತೂಬರ ಅಲ್ಲದೆ ಇದ್ದವನನ್ನು ತೂಬರ ಎಂದನು. ಅದರಿಂದ ಭೀಮ ಅರ್ಜುನನಿಗೆ ಹೇಳಿದ.

**ಜಾನಾಸಿ ಮತ್ಪ್ರತಿಜ್ಞಾಂ ತ್ವಂ ತ್ವತ್ಪ್ರತಿಜ್ಞಾಮಹಂ ತಥಾ ।**
**ತತ್ರ ಹಂತವ್ಯತಾಂ ಪ್ರಾಪ್ತೋ ಮಮ ವೈಕರ್ತನೋಽತ್ರಹಿ ॥ ೧೮೧ ॥**

**ಪ್ರತಿಜ್ಞಾತೋ ವಧಶ್ಚಾಸ್ಯ ತ್ವಯಾಽಪಿ ಮದನುಜ್ಞಯಾ ।**
**ಅತಸ್ತ್ವಯಾ ಮಯಾ ವಾಽಯಂ ಹಂತವ್ಯಃ ಸೂತನಂದನಃ ॥ ೧೮೨ ॥**

**ಅರ್ಥ** :- **ಮತ್ಪ್ರತಿಜ್ಞಾಂ** = ನನ್ನ ಪ್ರತಿಜ್ಞೆಯನ್ನು, **ತ್ವಂ** = ನೀನು, **ಜಾನಾಸಿ** = ತಿಳಿದಿದ್ದಿ, **ಅಹಂ** = ನಾನು, **ತ್ವತ್ಪ್ರತಿಜ್ಞಾಂ** = ನಿನ್ನ ಪ್ರತಿಜ್ಞೆಯನ್ನು, **ತಥಾ** = ಹಾಗೆಯೇ ತಿಳಿದಿದ್ದೇನೆ, **ಅತ್ರ** = ಇಲ್ಲಿ, **ವೈಕರ್ತನಃ** = ಕರ್ಣನು, **ಮಮ** = ನನಗೆ, **ಹಂತವ್ಯತಾಂ** = ಹಂತವ್ಯತ್ವವನ್ನು, **ಪ್ರಾಪ್ತಃ** = ಹೊಂದಿದ್ದಾನೆ, **ತ್ವಯಾಽಪಿ** = ನಿನ್ನಿಂದಲೂ ಕೂಡ, **ಮದನುಜ್ಞಯಾ** = ನನ್ನ ಅಪ್ಪಣೆಯಿಂದ,

**ಅಸ್ಯ** = ಈ ಕರ್ಣನ, **ವಧಶ್ಚ** = ವಧೆಯೂ, **ಪ್ರತಿಜ್ಞಾತಃ** = ಪ್ರತಿಜ್ಞಾಪಿಸಲ್ಪಟ್ಟಿದೆ, **ಅತಃ** = ಆದ್ದರಿಂದ, **ತ್ವಯಾ** = ನಿನ್ನಿಂದ, **ವಾ** = ಅಥವಾ, **ಮಯಾ** = ನನ್ನಿಂದ, **ಅಯಂ ಸೂತನಂದನಃ** = ಈ ಕರ್ಣನು, **ಹಂತವ್ಯಃ** = ಕೊಲ್ಲಲ್ಪಡಬೇಕು.

**ತಾತ್ಪರ್ಯ :-** ನನ್ನ ಪ್ರತಿಜ್ಞೆ ನಿನಗೆ ತಿಳಿದಿದೆ. ನಿನ್ನ ಪ್ರತಿಜ್ಞೆ ನನಗೆ ತಿಳಿದಿದೆ. ಈಗ ಕರ್ಣ ನನ್ನಿಂದ ವಧ್ಯನೆನಿಸಿದ್ದಾನೆ. ನೀನೂ ಅವನನ್ನು ಕೊಲ್ಲುವ ಪ್ರತಿಜ್ಞೆ ಮಾಡಿದ್ದೀ. ಅದೂ ನನ್ನ ಅಪ್ಪಣೆಯಿಂದ ಹೀಗಾಗಿ ನೀನು ಅಥವಾ ನಾನು ಕರ್ಣನನ್ನು ಕೊಲ್ಲಬೇಕು.

**ಇತ್ಯುಕ್ತೋ ವಾಸವಿಃ ಪ್ರಾಹ ಹಂತವ್ಯೋಽಯಂ ಮಯೈವ ಹಿ ।**
**ತ್ವದೀಯೋಽಹಂ ಯತಸ್ತೇನ ಮತ್ಕೃತಂ ತ್ವತ್ಕೃತಂ ಭವೇತ್ ॥ ೧೮೩ ॥**

**ನ ತ್ವತ್ಕೃತಂ ಮತ್ಕೃತಂ ಸ್ಯಾದ್ ಗುರುರ್ಮಮ ಯತೋ ಭವಾನ್ ।**
**ಅತೋ ಮಯೈವ ಹಂತವ್ಯ ಇತ್ಯುಕ್ತ್ವಾ ಕರ್ಣಮಬ್ರವೀತ್ ॥ ೧೮೪ ॥**

**ಅರ್ಥ :-** **ಇತಿ** = ಈ ರೀತಿಯಾಗಿ, **ಉಕ್ತಃ** = ಹೇಳಲ್ಪಟ್ಟ, **ವಾಸವಿಃ** = ಅರ್ಜುನನು, **ಪ್ರಾಹ** = ಹೇಳಿದನು, **ಅಯಂ** = ಇವನು, **ಮಯೈವ** = ನನ್ನಿಂದಲೇನೇ, **ಹಂತವ್ಯಃ** = ಕೊಲ್ಲಲ್ಪಡಬೇಕು, **ಯತಃ** = ಏಕೆಂದರೆ, **ಅಹಂ** = ನಾನು, **ತ್ವದೀಯಃ** = ನಿನ್ನವನು, **ತೇನ** = ಆದ್ದರಿಂದ, **ಮತ್ಕೃತಂ** = ನನ್ನಿಂದ ಮಾಡಲ್ಪಟ್ಟಿದ್ದು, **ತ್ವತ್ಕೃತಂ ಭವೇತ್** = ನಿನ್ನಿಂದ ಮಾಡಲ್ಪಟ್ಟಿದ್ದು ಆಗುತ್ತದೆ, **ತ್ವತ್ಕೃತಂ** = ನಿನ್ನಿಂದ ಮಾಡಲ್ಪಟ್ಟಿದ್ದು, **ಮತ್ಕೃತಂ** = ನನ್ನಿಂದ ಮಾಡಲ್ಪಟ್ಟಿದ್ದಾಗಿ, **ನ ಸ್ಯಾತ್** = ಆಗುವುದಿಲ್ಲ, **ಯತಃ** = ಏಕೆಂದರೆ, **ಭವಾನ್** = ನೀನು, **ಮಮ** = ನನಗೆ, **ಗುರುಃ** = ಹಿರಿಯನು, **ಅತಃ** = ಆದ್ದರಿಂದ, **ಮಯೈವ** = ನನ್ನಿಂದಲೇನೇ, **ಹಂತವ್ಯಃ** = ಕೊಲ್ಲಲ್ಪಡಬೇಕು, **ಇತ್ಯುಕ್ತ್ವಾ** = ಹೀಗೆ ಹೇಳಿ, **ಕರ್ಣಂ** = ಕರ್ಣನನ್ನು ಕುರಿತು, **ಅಬ್ರವೀತ್** = ಹೇಳಿದನು.

**ತಾತ್ಪರ್ಯ :-** ಈ ರೀತಿಯಾಗಿ ಭೀಮ ಹೇಳಿದಾಗ ಅರ್ಜುನ ಹೇಳಿದ. ನಾನೇ ಕರ್ಣನನ್ನು ಕೊಲ್ಲುತ್ತೇನೆ. ಏಕೆಂದರೆ ನಾನು ನಿನಗೆ ಸೇರಿದವನು. ನಾನು ಮಾಡಿದರೆ ನೀನು ಮಾಡಿದ ಹಾಗೆಯೇ ಆಗುತ್ತದೆ. ನೀನು ಮಾಡಿದರೆ ನಾನು ಮಾಡಿದ ಹಾಗೆ ಆಗುವುದಿಲ್ಲ. ಏಕೆಂದರೆ ನೀನು ನನಗಿಂತಲೂ

ದೊಡ್ಡವನು. ಆದ್ದರಿಂದ ನಾನೇ ಕರ್ಣನನ್ನು ಕೊಲ್ಲಬೇಕು ಎಂದು ಹೇಳಿ ಅರ್ಜುನ ಕರ್ಣನಿಗೆ ಹೇಳಿದ.

**ರೂಕ್ಷಾ ವಾಚಃ ಶ್ರಾವಿತೋಽಯಂ ಭೀಮಃ ಕೃಷ್ಣಸ್ಯ ಶೃಣ್ವತಃ ।**
**ಯಚ್ಚಾಭಿಮನ್ಯುರ್ಯುಷ್ಮಾಭಿರೇಕಃ ಸಂಭೂಯ ಪಾತಿತಃ ॥ ೧೮೫ ॥**

**ಅರ್ಥ** :- **ಕೃಷ್ಣಸ್ಯ ಶೃಣ್ವತಃ** = ಕೃಷ್ಣ ಕೇಳಿಸಿಕೊಳ್ಳುತ್ತಿರುವಂತೆ, **ಅಯಂ ಭೀಮಃ** = ಈ ಭೀಮನು, **ರೂಕ್ಷಾ ವಾಚಃ** = ಕೆಟ್ಟ ಮಾತುಗಳನ್ನು, **ಶ್ರಾವಿತಃ** = ಕೇಳಿಸಲ್ಪಟ್ಟಿದ್ದಾನೆ (ಅನ್ನಿಸಿಕೊಂಡಿದ್ದಾನೆ), **ಚ** = ಮತ್ತು, **ಯತ್** = ಯಾವ ಕಾರಣದಿಂದ, **ಯುಷ್ಮಾಭಿಃ** = ನಿಮ್ಮಿಂದ, **ಏಕಃ ಅಭಿಮನ್ಯುಃ** = ಒಬ್ಬ ಅಭಿಮನ್ಯುವು, **ಸಂಭೂಯ** = ಸೇರಿ, **ಪಾತಿತಃ** = ಕೊಲ್ಲಲ್ಪಟ್ಟನು.

**ತಾತ್ಪರ್ಯ** :- ನೀನು ಕೃಷ್ಣ ಕೇಳಿಸಿಕೊಳ್ಳುತ್ತಿರುವಾಗಲೇ ಭೀಮನಿಗೆ ಕೆಟ್ಟ ಮಾತುಗಳನ್ನಾಡಿದ್ದೀ ಮತ್ತು ನೀವೆಲ್ಲರೂ ಸೇರಿ ಅಭಿಮನ್ಯು ಒಬ್ಬನನ್ನು ಕೊಂದಿದ್ದೀರಿ.

**ಅತಸ್ತ್ವಾಂ ನಿಹನಿಷ್ಯಾಮಿ ತ್ವತ್ಪುತ್ರಂ ಚ ತವಾಗ್ರತಃ ।**
**ಇತ್ಯುಕ್ತೋಽನ್ಯರಥಂ ಪ್ರಾಪ್ಯ ಕರ್ಣ ಆವೀಜ್ಜಯದ್ರಥಮ್ ॥ ೧೮೬ ॥**

**ಅರ್ಥ** :- **ಅತಃ** = ಆದ್ದರಿಂದ, **ತ್ವಾಂ** = ನಿನ್ನನ್ನು, **ತವ ಅಗ್ರತಃ** = ನಿನ್ನ ಮುಂದೆಯೇ, **ತ್ವತ್ಪುತ್ರಂ ಚ** = ನಿನ್ನ ಮಗನನ್ನೂ, **ನಿಹನಿಷ್ಯಾಮಿ** = ಕೊಲ್ಲುತ್ತೇನೆ, **ಇತಿ** = ಈ ರೀತಿಯಾಗಿ, **ಉಕ್ತಃ** = ಹೇಳಲ್ಪಟ್ಟ, **ಕರ್ಣಃ** = ಕರ್ಣನು, **ಅನ್ಯರಥಂ** = ಬೇರೆಯ ರಥವನ್ನು, **ಪ್ರಾಪ್ಯ** = ಹೊಂದಿ, **ಜಯದ್ರಥಂ** = ಸೈಂಧವನನ್ನು, **ಆವೀತ್** = ರಕ್ಷಿಸಿದನು.

**ತಾತ್ಪರ್ಯ** :- ಆದ್ದರಿಂದ ನಾನು ನಿನ್ನನ್ನು ಕೊಲ್ಲುತ್ತೇನೆ. ನಿನ್ನ ಎದುರಿನಲ್ಲಿಯೇ ನಿನ್ನ ಮಗನಾದ ವೃಷಸೇನನನ್ನು ಕೊಲ್ಲುತ್ತೇನೆ ಎಂದು ಅರ್ಜುನ ಹೇಳಿದಾಗ ಆ ಕರ್ಣ ಮತ್ತೊಂದು ರಥವನ್ನೇರಿ ಸೈಂಧವನನ್ನು ರಕ್ಷಿಸಿದನು.

**ದ್ರೌಣಿಕರ್ಣಾಭಿಗುಪ್ತಂ ತಂ ನಾಶಕದ್ಧಂತುಮರ್ಜುನಃ ।**
**ತತ್ರ ವೇಗಂ ಪರಂ ಚಕ್ರೇ ದ್ರೌಣಿಃ ಪಾರ್ಥನಿವಾರಣೇ ॥ ೧೮೭ ॥**

**ಅರ್ಥ** :- **ದ್ರೌಣಿಕರ್ಣಾಭಿಗುಪ್ತಂ** = ಅಶ್ವತ್ಥಾಮ ಕರ್ಣರಿಂದ ರಕ್ಷಿತನಾಗಿದ್ದ, **ತಂ** = ಆ ಸೈಂಧವನನ್ನು, **ಹಂತುಂ** = ಕೊಲ್ಲಲು, **ಅರ್ಜುನಃ** = ಅರ್ಜುನನು, **ನಾಶಕತ್** = ಸಮರ್ಥನಾಗಲಿಲ್ಲ, **ತತ್ರ** = ಆವಾಗ, **ದ್ರೌಣಿಃ** = ಅಶ್ವತ್ಥಾಮನು, **ಪಾರ್ಥನಿವಾರಣೇ** = ಅರ್ಜುನನನ್ನು ತಡೆಯುವಲ್ಲಿ, **ಪರಂ ವೇಗಂ** = ಬಹಳ ಪರಾಕ್ರಮವನ್ನು, **ಚಕ್ರೇ** = ತೋರಿಸಿದನು.

**ತಾತ್ಪರ್ಯ** :- ಅಶ್ವತ್ಥಾಮ ಮತ್ತು ಕರ್ಣರಿಂದ ರಕ್ಷಿತನಾಗಿದ್ದ ಸೈಂಧವನನ್ನು ಕೊಲ್ಲಲು ಅರ್ಜುನ ಸಮರ್ಥನಾಗಲಿಲ್ಲ. ಆಗ ಅಶ್ವತ್ಥಾಮ ಅರ್ಜುನನನ್ನು ತಡೆಯಲು ಬಹಳ ಪರಾಕ್ರಮ ತೋರಿಸಿದನು.

**ನಚೈನಮಶಕತ್ ತರ್ತುಂ ಯತ್ನವಾನಪಿ ಫಲ್ಗುನಃ ।**
**ತಯೋರಾಸೀಚ್ಚಿರಂ ಯುದ್ಧಂ ಚಿತ್ರಂ ಲಘು ಚ ಸುಷ್ಠು ಚ ॥ ೧೮೮ ॥**

**ಅರ್ಥ** :- **ಫಲ್ಗುನಃ** = ಅರ್ಜುನನು, **ಯತ್ನವಾನಪಿ** = ಪ್ರಯತ್ನ ಪಟ್ಟವನಾದರೂ, **ಏನಂ** = ಈ ಅಶ್ವತ್ಥಾಮನನ್ನು, **ತರ್ತುಂ** = ದಾಟಲು, ನ **ಅಶಕತ್** = ಸಮರ್ಥನಾಗಲಿಲ್ಲ, **ತಯೋಃ** = ಅವರಿಬ್ಬರಿಗೆ, **ಚಿರಂ** = ಬಹಳ ಕಾಲ, **ಚಿತ್ರಂ** = ವಿಚಿತ್ರವಾದ, **ಲಘು** = ಉತ್ತಮವಾದ, **ಯುದ್ಧಂ** = ಯುದ್ಧವು, **ಸುಷ್ಠು** = ಚೆನ್ನಾಗಿ, **ಆಸೀತ್** = ನಡೆಯಿತು.

**ತಾತ್ಪರ್ಯ** :- ಅರ್ಜುನ ಎಷ್ಟು ಪ್ರಯತ್ನಿಸಿದರೂ ಅಶ್ವತ್ಥಾಮನನ್ನು ದಾಟಲು ಸಮರ್ಥನಾಗಲಿಲ್ಲ. ಅವರಿಬ್ಬರಿಗೆ ಉತ್ತಮವಾದ ವಿಚಿತ್ರವಾದ ಯುದ್ಧ ಬಹಳ ಕಾಲ ನಡೆಯಿತು.

**ತದ್ ದೃಷ್ಟ್ವಾ ಭಗವಾನ್ ಕೃಷ್ಣೋ ಲೋಹಿತಾಯತಿ ಭಾಸ್ಕರೇ ।**
**ಅಜಿತೇ ದ್ರೋಣತನಯೇ ತ್ವಹತೇ ಚ ಜಯದ್ರಥೇ ।**
**ಅರ್ಜುನಸ್ಯ ಜಯಾಕಾಂಕ್ಷೀ ಸಸರ್ಜ ತಮ ಊರ್ಜಿತಮ್ ॥ ೧೮೯ ॥**

**ಅರ್ಥ** :- **ತತ್** = ಅದನ್ನು, **ದೃಷ್ಟ್ವಾ** = ನೋಡಿ, **ಭಗವಾನ್ ಕೃಷ್ಣಃ** = ಭಗವಂತ ಶ್ರೀಕೃಷ್ಣನು, **ಭಾಸ್ಕರೇ** = ಸೂರ್ಯನು, **ಲೋಹಿತಾಯತಿ** = ಕೆಂಪಾಗುತ್ತಿರಲು, **ದ್ರೋಣತನಯೇ** = ಅಶ್ವತ್ಥಾಮನು, **ಅಜಿತೇ** = ಹಿಮ್ಮೆಟ್ಟದಿರುವಾಗ, **ಚ** = ಮತ್ತು, **ಜಯದ್ರಥೇ ತು** = ಸೈಂಧವನಾದರೂ,

**ಅಹತೇ** = ಕೊಲ್ಲಲ್ಪಡದೇ ಇರಲು, **ಅರ್ಜುನಸ್ಯ** = ಅರ್ಜುನನ, **ಜಯಾಕಾಂಕ್ಷೀ** = ಜಯಾಕಾಂಕ್ಷಿಯಾಗಿ, **ಊರ್ಜಿತಂ ತಮಃ** = ಬಹಳವಾದ ಕತ್ತಲನ್ನು, **ಸಸರ್ಜ** = ಸೃಷ್ಟಿಮಾಡಿದನು.

**ತಾತ್ಪರ್ಯ** :- ಅದನ್ನು ನೋಡಿ ಭಗವಂತ ಶ್ರೀಕೃಷ್ಣ ಸೂರ್ಯ ಕೆಂಪಾಗುತ್ತಿರಲು ಇನ್ನೂ ಅಶ್ವತ್ಥಾಮ ಹಿಮ್ಮೆಟ್ಟದಿರುವಾಗ ಸೈಂಧವ ಕೊಲ್ಲಲ್ಪಡದೇ ಇರಲು ಅರ್ಜುನನ ಜಯಾಕಾಂಕ್ಷಿಯಾಗಿ ಗಟ್ಟಿಯಾದ ಕತ್ತಲನ್ನು ಸೃಷ್ಟಿ ಮಾಡಿದನು.

**ತಮೋವ್ಯಾಪ್ತೇ ಗಗನೇ ಸೂರ್ಯಮಸ್ತಂ**
**ಗತಂ ಮತ್ವಾ ದ್ರೌಣಿಪೂರ್ವಾಃ ಸಮಸ್ತಾಃ ।**
**ವಿಶಶ್ರಮುಃ ಸೈಂಧವಶ್ಚಾರ್ಜುನಸ್ಯ**
**ಹತಪ್ರತಿಜ್ಞಸ್ಯ ಮುಖಂ ಸಮೈಕ್ಷತ ॥ ೧೯೦ ॥**

**ಅರ್ಥ** :- **ಗಗನೇ** = ಆಕಾಶವು, **ತಮೋವ್ಯಾಪ್ತೇ** = ಕತ್ತಲಿನಿಂದ ವ್ಯಾಪಿಸಲ್ಪಡುತ್ತಿರಲು, **ದ್ರೋಣಪೂರ್ವಾಃ ಸಮಸ್ತಾಃ** = ದ್ರೋಣ ಮೊದಲಾದವರೆಲ್ಲರೂ, **ಸೂರ್ಯಂ ಅಸ್ತಂ ಗತಂ ಮತ್ವಾ** = ಸೂರ್ಯ ಅಸ್ತಂಗತನಾದನೆಂದು ತಿಳಿದು, **ವಿಶಶ್ರಮುಃ** = ವಿಶ್ರಾಂತಿ ಪಡೆದರು, **ಹತಪ್ರತಿಜ್ಞಸ್ಯ ಅರ್ಜುನಸ್ಯ** = ನಾಶವಾಗಲ್ಪಟ್ಟ ಪ್ರತಿಜ್ಞೆಯುಳ್ಳ ಅರ್ಜುನನ, **ಮುಖಂ** = ಮುಖವನ್ನು, **ಸೈಂಧವಃ** = ಸೈಂಧವನು, **ಸಮೈಕ್ಷತ** = ನೋಡಿದನು.

**ತಾತ್ಪರ್ಯ** :- ಆಕಾಶದಲ್ಲಿ ಕತ್ತಲು ತುಂಬಿದಾಗ ದ್ರೋಣ ಮೊದಲಾದವರೆಲ್ಲರೂ ಸೂರ್ಯಾಸ್ತ ಹೊಂದಿದನೆಂದು ತಿಳಿದು ಯುದ್ಧ ನಿಲ್ಲಿಸಿ ವಿಶ್ರಾಂತಿ ಪಡೆದರು. ಅರ್ಜುನನ ಪ್ರತಿಜ್ಞೆ ಪೂರ್ಣವಾಗಲಿಲ್ಲ ಎಂದು ಭಾವಿಸಿ ಅವನ ಮುಖವನ್ನು ಸೈಂಧವ ನೋಡಿದನು.

**ತದಾ ಹರೇರಾಜ್ಞಯಾ ಶಕ್ರಸೂನುಃ**
**ಚಕರ್ತ ಬಾಣೇನ ಜಯದ್ರಥಸ್ಯ ।**
**ಅಗ್ನಿಂ ವಿವಿಕ್ಷನ್ನಿವ ದರ್ಶಿತಃ ಶಿರ-**
**ಸ್ತದಾ ವಚಃ ಪ್ರಾಹ ಜನಾರ್ದನಸ್ತಮ್ ॥ ೧೯೧ ॥**

**ಅರ್ಥ** :- **ತದಾ** = ಆವಾಗ, **ವಹ್ನಿಂ ವಿವಿಕ್ಷನ್ನಿವ ದರ್ಶಿತಃ** = ವಹ್ನಿ ಪ್ರವೇಶ ಮಾಡುವಂತೆ ಕಾಣಿಸಿಕೊಳ್ಳಲ್ಪಟ್ಟ, **ಶಕ್ರಸೂನುಃ** = ಅರ್ಜುನನು, **ಹರೇಃ** = ಶ್ರೀಕೃಷ್ಣನ, **ಆಜ್ಞಯಾ** = ಅಪ್ಪಣೆಯಿಂದ, **ಬಾಣೇನ** = ಬಾಣದಿಂದ, **ಜಯದ್ರಥಸ್ಯ** = ಸೈಂಧವನ, **ಶಿರಃ** = ತಲೆಯನ್ನು, **ಚಕರ್ತ** = ಕತ್ತರಿಸಿದನು, **ತದಾ** = ಆವಾಗ, **ಜನಾರ್ದನಃ** = ಶ್ರೀಕೃಷ್ಣನು, **ತಂ** = ಆ ಅರ್ಜುನನನ್ನು ಕುರಿತು, **ವಚಃ** = ಮಾತನ್ನು, **ಪ್ರಾಹ** = ಹೇಳಿದನು.

**ತಾತ್ಪರ್ಯ** :- ಆವಾಗ ವಹ್ನಿಪ್ರವೇಶ ಮಾಡಲು ಹೊರಟಂತೆ ಕಾಣಿಸಿಕೊಳ್ಳಲ್ಪಟ್ಟ ಅರ್ಜುನ ಶ್ರೀಕೃಷ್ಣನ ಅಪ್ಪಣೆಯಿಂದ ಬಾಣದಿಂದ ಸೈಂಧವನ ತಲೆಯನ್ನು ಕತ್ತರಿಸಿದ. ಆಗ ಕೃಷ್ಣ ಅರ್ಜುನನಿಗೆ ಮಾತನ್ನು ಹೇಳಿದನು.

**ನೈತಚ್ಛಿರಃ ಪಾತಯ ಭೂತಲೇ ತ್ವ-**
**ಮಿತೀರಿತಃ ಪಾಶುಪತಾಸ್ತ್ರತೇಜಸಾ ।**
**ದಧಾರ ಬಾಣೈರನುಪುಂಖಪುಂಖೈಃ**
**ಪುನಸ್ತಮೂಚೇ ಗರುಡಧ್ವಜೋ ವಚಃ ॥ ೧೯೨ ॥**

**ಅರ್ಥ** :- **ಏತತ್ ಶಿರಃ** = ಈ ತಲೆಯನ್ನು, **ಭೂತಲೇ** = ನೆಲದ ಮೇಲೆ, **ತ್ವಂ** = ನೀನು, **ನ ಪಾತಯ** = ಬೀಳಿಸಬೇಡ, **ಇತಿ** = ಈ ರೀತಿಯಾಗಿ, **ಈರಿತಃ** = ಹೇಳಲ್ಪಟ್ಟ ಅರ್ಜುನನು, **ಪಾಶುಪತಾಸ್ತ್ರತೇಜಸಾ** = ಪಾಶುಪತಾಸ್ತ್ರದ ಪ್ರಭಾವದಿಂದ, **ಅನುಪುಂಖಪುಂಖೈಃ ಬಾಣೈಃ** = ಪುಂಖಾನು ಪುಂಖ ಬಾಣಗಳಿಂದ, **ದಧಾರ** = ಧರಿಸಿದನು, **ಗರುಡಧ್ವಜಃ** = ಕೃಷ್ಣನು, **ಪುನಃ** = ಮತ್ತೆ, **ವಚಃ** = ಮಾತನ್ನು, **ಊಚೇ** = ಹೇಳಿದನು.

**ತಾತ್ಪರ್ಯ** :- ನೀನು ಈ ತಲೆಯನ್ನು ನೆಲದ ಮೇಲೆ ಬೀಳಿಸಬೇಡ ಎಂದು ಕೃಷ್ಣ ಹೇಳಿದಾಗ ಅರ್ಜುನ ಪಾಶುಪತಾಸ್ತ್ರದ ಸಾಮರ್ಥ್ಯದಿಂದ ಪುಂಖಾನುಪುಂಖವಾಗಿ ಬಾಣಗಳನ್ನು ಬಿಟ್ಟು ತಲೆಯನ್ನು ನೆಲದ ಮೇಲೆ ಬೀಳದಂತೆ ತಡೆದನು. ಆ ಕೃಷ್ಣ ಮತ್ತೆ ಹೇಳಿದ.

**ಇದಂ ಪಿತುಸ್ತಸ್ಯ ಕರೇ ನಿಪಾತ್ಯತಾಂ**
**ವರೋಽಸ್ಯ ದತ್ತೋ ಹಿ ಪುರಾಽಮುನಾಽಯಮ್ ।**

**ಶಿರೋ ನಿಕೃತ್ತಂ ಭುವಿ ಪಾತಯೇದ್ ಯ-**
**ಸ್ತವಾಸ್ಯ ಭೂಯಾಚ್ಚ ಶಿರಃ ಸಹಸ್ರಧಾ ॥ ೧೯೩ ॥**

**ಅರ್ಥ** :- **ಇದಂ** = ಈ ತಲೆಯು, **ತಸ್ಯ** = ಆ ಜಯದ್ರಥನ, **ಪಿತುಃ** = ತಂದೆಯ, **ಕರೇ** = ಕೈಯಲ್ಲಿ, **ನಿಪಾತ್ಯತಾಂ** = ಬೀಳಿಸಲ್ಪಡಲಿ, **ಪುರಾ** = ಹಿಂದೆ, **ಅಮುನಾ** = ಅವನಿಂದ, **ಅಸ್ಯ** = ಈ ಜಯದ್ರಥನಿಗೆ, **ಅಯಂ ವರಃ** = ಈ ಮುಂದಿನ ವರವು, **ದತ್ತಃ** = ಕೊಡಲ್ಪಟ್ಟಿದೆ, **ಯಃ** = ಯಾರು, **ತವ** = ನಿನ್ನ, **ನಿಕೃತ್ತಂ** = ಕತ್ತರಿಸಲ್ಪಟ್ಟ, **ಶಿರಃ** = ತಲೆಯನ್ನು, **ಭುವಿ** = ನೆಲದ ಮೇಲೆ, **ಪಾತಯೇತ್** = ಬೀಳಿಸುತ್ತಾನೋ, **ತಸ್ಯ** = ಅವನ, **ಶಿರಃ** = ತಲೆಯು, **ಸಹಸ್ರಧಾ ಭೂಯಾತ್** = ಸಾವಿರ ಹೋಳಾಗಲಿ.

**ತಾತ್ಪರ್ಯ** :- ಇವನ ತಲೆಯನ್ನು ಇವನ ಅಪ್ಪನ ಕೈಯಲ್ಲಿ ಬೀಳಿಸು. ಅವನು ಸೈಂಧವನಿಗೆ ವರ ಕೊಟ್ಟಿದ್ದಾನೆ. ಯಾರು ಕತ್ತರಿಸಿದ ನಿನ್ನ ತಲೆಯನ್ನು ನೆಲದ ಮೇಲೆ ಬೀಳಿಸುತ್ತಾರೋ ಅವನ ತಲೆ ಸಾವಿರ ಹೋಳಾಗಲಿ.

**ಇತಿ ಸ್ಮ ವಧ್ಯಃ ಸ ಪಿತಾಽಪಿ ತೇನೇ-**
**ತ್ಯುದೀರಿತೇ ತಸ್ಯ ಸಂಧ್ಯಾಕ್ರಿಯಸ್ಯ ।**
**ಅಂಕೇ ವ್ಯಧಾತ್ ತಚ್ಛಿರ ಆಶು ವಾಸವಿಃ**
**ಸ ಸಂಭ್ರಮಾತ್ ತದ್ ಭುವಿ ಚ ನ್ಯಪಾತಯತ್ ॥ ೧೯೪ ॥**

**ಅರ್ಥ** :- **ಸಃ ಪಿತಾಽಪಿ** = ಆ ವರನೀಡಿದ ತಂದೆಯೂ ಕೂಡ, **ವಧ್ಯಃ ಸ್ಮ** = ವಧ್ಯನಷ್ಟೆ, **ಇತಿ** = ಈ ರೀತಿಯಾಗಿ, **ತೇನ** = ಆ ಕೃಷ್ಣನಿಂದ, **ಉದೀರಿತೇ** = ಹೇಳಲ್ಪಡುತ್ತಿರಲು, **ವಾಸವಿಃ** = ಅರ್ಜುನನು, **ಸಂಧ್ಯಾಕ್ರಿಯಸ್ಯ ತಸ್ಯ** = ಸಂಧ್ಯಾವಂದನೆ ಮಾಡುತ್ತಿದ್ದ ಅವನ, **ಅಂಕೇ** = ತೊಡೆಯ ಮೇಲೆ, **ತತ್‌ಶಿರಃ** = ಆ ತಲೆಯನ್ನು, **ವ್ಯಧಾತ್** = ಬೀಳಿಸಿದನು, **ಚ** = ಮತ್ತು, **ಸಃ** = ಅವನು, **ಸಂಭ್ರಮಾತ್** = ಗಾಬರಿಯಿಂದ, **ತತ್** = ಆ ತಲೆಯನ್ನು, **ಭುವಿ** = ನೆಲದ ಮೇಲೆ, **ನ್ಯಪಾತಯತ್** = ಬೀಳಿಸಿದನು.

**ತಾತ್ಪರ್ಯ** :- ಹೀಗೆ ವರ ಕೊಟ್ಟಿದ್ದರಿಂದ ಮತ್ತು ಸೈಂಧವನ ತಂದೆಯೂ ಕೂಡ ವಧಾರ್ಹನು ಎಂದು ಕೃಷ್ಣ ಹೇಳಿದ್ದರಿಂದ ಅರ್ಜುನನು ಸಂಧ್ಯಾವಂದನೆ

ಮಾಡುತ್ತಿದ್ದ ಅವನ ತೊಡೆಯ ಮೇಲೆ ಬೀಳಿಸಿದ. ಅವನು ಗಾಬರಿಯಿಂದ ಆ ತಲೆಯನ್ನು ನೆಲದ ಮೇಲೆ ಬೀಳಿಸಿದ.

**ತತೋಽಭವತ್ ತಸ್ಯ ಶಿರಃ ಸಹಸ್ರಧಾ**
**ಹರಿಶ್ಚ ಚಕ್ರೇ ತಮಸೋ ಲಯಂ ಪುನಃ ।**
**ತದೈವ ಸೂರ್ಯೋ ಸಕಲೈಶ್ಚ ದೃಷ್ಟೇ**
**ಹಾಹೇತಿ ವಾದಃ ಸುಮಹಾನಥಾಽಸೀತ್ ॥ ೧೯೫ ॥**

**ಅರ್ಥ :- ತಸ್ಯ** = ಆ ಸೈಂಧವನ ತಂದೆಯ, **ಶಿರಃ** = ತಲೆಯು, **ಸಹಸ್ರಧಾ ಅಭವತ್** = ಸಾವಿರ ಹೋಳಾಯಿತು, **ತತಃ** = ಅನಂತರ, **ಹರಿಶ್ಚ** = ಕೃಷ್ಣನೂ, **ಪುನಃ** = ಮತ್ತೆ, **ತಮಸಃ ಲಯಂ ಚಕ್ರೇ** = ಕತ್ತಲನ್ನು ಕರಗಿಸಿದ, **ತದೈವ** = ಆವಾಗಲೇ, **ಸಕಲೈಶ್ಚ** = ಎಲ್ಲರಿಂದಲೂ, **ಸೂರ್ಯೇ** = ಸೂರ್ಯನು, **ದೃಷ್ಟೇ** = ನೋಡಲ್ಪಡುತ್ತಿರಲು, **ಅಥ** = ಅನಂತರ, **ಸುಮಹಾನ್** = ಬಹಳ ದೊಡ್ಡದಾದ, **ಹಾಹಾ ಇತಿ ವಾದಃ ಆಸೀತ್** = ಹಾಹಾಕಾರ ಉಂಟಾಯಿತು.

**ತಾತ್ಪರ್ಯ :-** ಅನಂತರ ತಂದೆಯ ತಲೆ ಸಾವಿರ ಹೋಳಾಯಿತು. ಅನಂತರ ಕೃಷ್ಣ ಕತ್ತಲನ್ನು ನಾಶಪಡಿಸಿದ. ಆವಾಗಲೇ ಎಲ್ಲರಿಗೂ ಸೂರ್ಯ ಕಾಣಿಸಿದಾಗ ಕೌರವರ ಸೈನ್ಯದಲ್ಲಿ ಬಹಳ ದೊಡ್ಡ ಹಾಹಾಕಾರ ಉಂಟಾಯಿತು.

**ಭೀಮಸ್ತದಾ ಶಲ್ಯಸುಯೋಧನಾದೀನ್**
**ಕೃಪಂ ಚ ಜಿತ್ವಾ ವ್ಯನದತ್ ಸುಭೈರವಮ್ ।**
**ಕುರ್ವನ್ ಸಾಹಾಯ್ಯಂ ಫಲ್ಗುನಸ್ಯೈವ ತುಷ್ಟೋ**
**ಬಭೂವ ಶೈನೇಯ ಉತೋ ಹತೇ ರಿಪೌ ॥ ೧೯೬ ॥**

**ಅರ್ಥ :- ತದಾ** = ಆವಾಗ, **ಭೀಮಃ** = ಭೀಮನು, **ಶಲ್ಯ ದುರ್ಯೋಧನಾದೀನ್** = ಶಲ್ಯದುರ್ಯೋಧನ ಮೊದಲಾದವರನ್ನು, **ಕೃಪಂ ಚ** = ಕೃಪನನ್ನೂ, **ಜಿತ್ವಾ** = ಗೆದ್ದು, **ಸುಭೈರವಂ ವ್ಯನದತ್** = ಭಯಂಕರವಾಗಿ ಸಿಂಹನಾದ ಮಾಡಿದನು, **ಫಲ್ಗುನಸ್ಯ** = ಅರ್ಜುನನಿಗೆ, **ಸಾಹಾಯ್ಯಂ ಕುರ್ವನ್** = ಸಹಾಯ ಮಾಡುತ್ತಿದ್ದ, **ಶೈನೇಯಯುತಃ** = ಸಾತ್ಯಕಿಯಿಂದ

ಕೂಡಿದ ಭೀಮನು, **ರಿಪೌ ಹತೇ** = ಶತ್ರು ಹತನಾಗುತ್ತಿರಲು, **ತುಷ್ಟೋ ಬಭೂವ** = ಸಂತುಷ್ಟನಾದನು.

**ತಾತ್ಪರ್ಯ :-** ಆವಾಗ ಭೀಮ ಶಲ್ಯದುರ್ಯೋಧನ ಮೊದಲಾದವರನ್ನು ಕೃಪನನ್ನೂ ಸೋಲಿಸಿ ಭೀಕರವಾಗಿ ಸಿಂಹನಾದ ಮಾಡಿದನು. ಅರ್ಜುನನಿಗೆ ಸಹಾಯ ಮಾಡಲು ಬಂದಿದ್ದ ಸಾತ್ಯಕಿ ಭೀಮರು ಹತನಾದನೆಂದು ಸಂತುಷ್ಟರಾದರು.

**ಅಪೂರಯತ್ ಪಾಂಚಜನ್ಯಂ ಚ ಕೃಷ್ಣೋ**
**ಮುದಾ ತದಾ ದೇವದತ್ತಂ ಚ ಪಾರ್ಥಃ ।**
**ಭೀಮಸ್ಯ ನಾದಂ ಸಹಪಾಂಚಜನ್ಯ-**
**ಘೋಷಂ ಶ್ರುತ್ವಾ ನಿಹತಂ ಸಿಂಧುರಾಜಮ್ ।**
**ಜ್ಞಾತ್ವಾ ರಾಜಾ ಧರ್ಮಸುತೋ ಮುಮೋದ**
**ದುರ್ಯೋಧನಶ್ಚಾऽಸ ಸುದುಃಖಿತಸ್ತದಾ ॥ ೧೯೭ ॥**

**ಅರ್ಥ :- ಕೃಷ್ಣಶ್ಚ** = ಕೃಷ್ಣನೂ, **ಮುದಾ** = ಸಂತೋಷದಿಂದ, **ಪಾಂಚಜನ್ಯಂ ಅಪೂರಯತ್** = ಪಾಂಚಜನ್ಯಶಂಖವನ್ನು ಊದಿದನು, **ತದಾ** = ಆವಾಗ, **ಪಾರ್ಥಶ್ಚ** = ಅರ್ಜುನನೂ, **ದೇವದತ್ತಂ** = ದೇವದತ್ತ ಶಂಖವನ್ನು, **ಅಪೂರಯತ್** = ಊದಿದನು, **ಸಹಪಾಂಚಜನ್ಯಘೋಷಂ** = ಪಾಂಚಜನ್ಯದ ಶಬ್ದದಿಂದ ಕೂಡಿದ, **ಭೀಮಸ್ಯ ನಾದಂ** = ಭೀಮನ ಸಿಂಹನಾದವನ್ನು, **ಶ್ರುತ್ವಾ** = ಕೇಳಿ, **ಧರ್ಮಸುತಃ** = ಯುಧಿಷ್ಠಿರನು, **ಸಿಂಧುರಾಜಂ** = ಸೈಂಧವನನ್ನು, **ನಿಹತಂ** = ಸತ್ತವನನ್ನಾಗಿ, **ಜ್ಞಾತ್ವಾ** = ತಿಳಿದು, **ಮುಮೋದ** = ಸಂತೋಷಗೊಂಡನು, **ಚ** = ಮತ್ತು, **ತದಾ** = ಆವಾಗ, **ದುರ್ಯೋಧನಃ** = ದುರ್ಯೋಧನನು, **ಸುದುಃಖಿತಃ ಆಸ** = ಬಹಳ ದುಃಖಿತನಾದನು.

**ತಾತ್ಪರ್ಯ :-** ಕೃಷ್ಣ ಸಂತೋಷದಿಂದ ಪಾಂಚಜನ್ಯಶಂಖ ಊದಿದನು. ಆವಾಗಲೇ ಅರ್ಜುನ ದೇವದತ್ತ ಶಂಖವನ್ನು ಮೊಳಗಿಸಿದನು. ಪಾಂಚಜನ್ಯನಾದದ ಜೊತೆಗೆ ಭೀಮನ ಸಿಂಹನಾದವನ್ನು ಕೇಳಿ ಯುಧಿಷ್ಠಿರ ಸಂತೋಷಗೊಂಡನು. ದುರ್ಯೋಧನ ಬಹಳ ದುಃಖಿತನಾದ.

**ತತೋ ದ್ರೌಣಿಮುಖಾಂ ಸೇನಾಂ**
**ಸರ್ವಾಂ ಭೀಮೋऽಭ್ಯವರ್ತತ ।**
**ಪಾರ್ಥಃ ಕರ್ಣಮುಖಾನ್ ಶಿಷ್ಟಾಂ**
**ತತೋऽಭಜ್ಯತ ತದ್‌ಬಲಮ್ ॥ ೧೯೮ ॥**

**ಅರ್ಥ** :- **ತತಃ** = ಅನಂತರ, **ದ್ರೌಣಿಮುಖಾಂ ಸರ್ವಾಂ ಸೇನಾಂ** = ಅಶ್ವತ್ಥಾಮ ಮೊದಲಾದ ಎಲ್ಲಾ ಸೇನೆಯನ್ನು, **ಭೀಮಃ** = ಭೀಮನು, **ಅಭ್ಯವರ್ತತ** = ಎದುರಿಸಿದನು, **ಪಾರ್ಥಃ** = ಅರ್ಜುನನು, **ಶಿಷ್ಟಾಂ** = ಉಳಿದ, **ಕರ್ಣಮುಖಾಂ** = ಕರ್ಣ ಮೊದಲಾದ ಸೇನೆಯನ್ನು, **ಅಭ್ಯವರ್ತತ** = ಎದುರಿಸಿದನು, **ತತಃ** = ಅನಂತರ, **ತದ್ ಬಲಂ** = ಆ ಅಶ್ವತ್ಥಾಮ ಕರ್ಣರ ಸೈನ್ಯವು, **ಅಭಜ್ಯತ** = ಪರಾಜಿತವಾಯಿತು.

**ತಾತ್ಪರ್ಯ** :- ಅನಂತರ ಅಶ್ವತ್ಥಾಮನ ನೇತೃತ್ವದಲ್ಲಿ ಬಂದ ಸೇನೆಯನ್ನು ಭೀಮ ಎದುರಿಸಿದ. ಕರ್ಣ ನೇತೃತ್ವದಲ್ಲಿ ಬಂದದ್ದನ್ನು ಅರ್ಜುನ ಎದುರಿಸಿದ. ಆಗ ಅಶ್ವತ್ಥಾಮರ ಸೈನ್ಯವೇ ಪರಾಜಿತವಾಯಿತು.

**ಶೀರ್ಣಾಂ ಸೇನಾಂ ಪ್ರವಿವಿಶುರ್ಧೃಷ್ಟದ್ಯುಮ್ನಪುರೋಗಮಾಃ ।**
**ತತಸ್ತಂ ದೇಶಮಾಪುಸ್ತೇ ಯತ್ರ ಭೀಮಧನಂಜಯೌ ॥ ೧೯೯ ॥**

**ಅರ್ಥ** :- **ಶೀರ್ಣಾಂ** = ಸೋತ, **ಸೇನಾಂ** = ಸೈನ್ಯವನ್ನು, **ದೃಷ್ಟದ್ಯುಮ್ನ ಪುರೋಗಮಾಃ** = ದೃಷ್ಟದ್ಯುಮ್ನ ಮೊದಲಾದವರು, **ಪ್ರವಿವಿಶುಃ** = ಪ್ರವೇಶಿಸಿದರು, **ತತಃ** = ಅನಂತರ, **ಯತ್ರ** = ಎಲ್ಲಿ, **ಭೀಮ ಧನಂಜಯೌ** = ಭೀಮ ಅರ್ಜುನರಿದ್ದರೋ, **ತಂ ದೇಶಂ** = ಅಂತಹ ಜಾಗವನ್ನು, **ಆಪುಃ** = ಹೊಂದಿದರು.

**ತಾತ್ಪರ್ಯ** :- ಸೋತ ಆ ಕೌರವರ ಸೈನ್ಯವನ್ನು ದೃಷ್ಟದ್ಯುಮ್ನ ಮೊದಲಾದವರು ಪ್ರವೇಶ ಮಾಡಿದರು. ಭೀಮಾರ್ಜುನರಿದ್ದಲ್ಲಿಗೇ ಹೋದರು.

**ತತ ಏಕೀಕೃತಾಃ ಸರ್ವೇ ಪಾಂಡವಾಃ ಸಹಸೋಮಕಾಃ ।**
**ಪರಾನ್ ವಿದ್ರಾವಯಾಮಾಸುಸ್ತೇ ಭೀತಾಃ ಪ್ರಾದ್ರವನ್ ದಿಶಃ ॥ ೨೦೦ ॥**

**ಅರ್ಥ** :- **ತತಃ** = ಅನಂತರ, **ಸಹಸೋಮಕಾಃ** = ಪಾಂಚಾಲರಿಂದ ಕೂಡಿದ, **ಪಾಂಡವಾಃ** = ಪಾಂಡವರು, ಸರ್ವೇ = ಎಲ್ಲರೂ, **ಏಕೀಕೃತಾಃ** = ಒಟ್ಟಿಗೆ ಕೂಡಿದವರಾಗಿ, **ಪರಾನ್** = ಶತ್ರುಗಳನ್ನು, **ವಿದ್ರಾವಯಾಮಾಸುಃ** = ಓಡಿಸಿದರು, **ತೇ** = ಅವರು, **ಭೀತಾಃ** = ಹೆದರಿದವರಾಗಿ, **ದಿಶಃ** = ದಿಕ್ಕುಗಳಿಗೆ, **ಪರಾದ್ರವನ್** = ಪಲಾಯನ ಮಾಡಿದರು.

**ತಾತ್ಪರ್ಯ** :- ಅನಂತರ ಪಾಂಡವರು ಪಾಂಚಾಲರು ಎಲ್ಲರೂ ಒಟ್ಟಾಗಿ ಶತ್ರುಗಳನ್ನು ಓಡಿಸಿದರು. ಆ ಶತ್ರುಗಳು ಹೆದರಿಕೊಂಡು ಬೇರೆ ಬೇರೆ ದಿಕ್ಕಿಗೆ ಓಡಿಹೋದರು.

**ವಿದ್ರಾವ್ಯಮಾಣಂ ಸೈನ್ಯಂ ತಂ ದೃಷ್ಟ್ವಾ ದುರ್ಯೋಧನೋ ನೃಪಃ ।**
**ಜಯದ್ರಥವಧಾಚ್ಚೈವ ಕುಪಿತೋಽಭ್ಯದ್ರವತ್ ಪರಾನ್ ॥ ೨೦೦ ॥**

**ಅರ್ಥ** :- **ವಿದ್ರಾವ್ಯಮಾಣಂ ತತ್ ಸೈನ್ಯಂ** = ಓಡಿಸಲ್ಪಡುತ್ತಿದ್ದ ಆ ಸೈನ್ಯವನ್ನು, **ದೃಷ್ಟ್ವಾ** = ನೋಡಿ, **ಜಯದ್ರಥವಧಾಚ್ಚೈವ** = ಸೈಂಧವನ ವಧೆಯಿಂದಲೂ, **ಕುಪಿತಃ** = ಕೋಪಗೊಂಡವನಾಗಿ, **ಪರಾನ್ ಅಭ್ಯದ್ರವತ್** = ಶತ್ರುಗಳಿಗೆ ಎದುರಾದ.

**ತಾತ್ಪರ್ಯ** :- ತನ್ನ ಸೇನೆ ಓಡಿಸಲ್ಪಡುತ್ತಿದ್ದದ್ದನ್ನು ನೋಡಿ ದುರ್ಯೋಧನ ಕೋಪಗೊಂಡ. ಸೈಂಧವನ ವಧೆಯಿಂದ ಮೊದಲೇ ಕೋಪಗೊಂಡಿದ್ದ ಅವನು ಶತ್ರುಗಳಿಗೆ ಎದುರಾದನು.

**ಸ ಭೀಮಸೇನಂ ಚ ಧನಂಜಯಂ ಚ**
**ಯುಧಿಷ್ಠಿರಂ ಮಾದ್ರವತೀಸುತೌ ಚ ।**
**ಧೃಷ್ಟದ್ಯುಮ್ನಂ ಸಾತ್ಯಕಿಂ ದ್ರೌಪದೇಯಾನ್**
**ಸರ್ವಾನೇಕಃ ಶರವರ್ಷೈರ್ವವರ್ಷ ॥ ೨೦೨ ॥**

**ಅರ್ಥ** :- **ಭೀಮಸೇನಂ** = ಭೀಮನನ್ನು, **ಧನಂಜಯಂ ಚ** = ಅರ್ಜುನನನ್ನೂ, **ಯುಧಿಷ್ಠಿರಂ ಚ** = ಧರ್ಮರಾಜನನ್ನೂ, **ಮಾದ್ರವತೀಸುತೌ ಚ** = ಮಾದ್ರಿಯ ಮಕ್ಕಳಾದ ನಕುಲ ಸಹದೇವರನ್ನೂ, **ಧೃಷ್ಟದ್ಯುಮ್ನಂ** = ದೃಷ್ಟದ್ಯುಮ್ನನನ್ನು, **ಸಾತ್ಯಕಿಂ** = ಸಾತ್ಯಕಿಯನ್ನು, **ದ್ರೌಪದೇಯಾನ್** =

ದ್ರೌಪದಿಯ ಮಕ್ಕಳನ್ನು, **ಸರ್ವಾನ್** = ಎಲ್ಲರನ್ನೂ ಕುರಿತು, **ಸಃ** = ದುರ್ಯೋಧನನೊಬ್ಬನು, **ಶರವರ್ಷೈಃ** = ಬಾಣಗಳ ಮಳೆಯಿಂದ, **ವವರ್ಷ** = ಮಳೆಗರೆದ.

**ತಾತ್ಪರ್ಯ** :- ದುರ್ಯೋಧನ ಒಬ್ಬನೇ ಭೀಮಸೇನ, ಅರ್ಜುನ, ಧರ್ಮರಾಜ, ನಕುಲ, ಸಹದೇವ, ದೃಷ್ಟದ್ಯುಮ್ನ, ಸಾತ್ಯಕಿ, ದ್ರೌಪದಿಯ ಮಕ್ಕಳು ಇವರೆಲ್ಲರ ಮೇಲೆ ಬಾಣಗಳ ಮಳೆ ಸುರಿಸಿದ.

**ತೇ ವಿವ್ಯಧುಸ್ತಂ ಬಹುಭಿಃ ಶಿಲೀಮುಖೈಃ**
**ಸ ತಾನನಾದೃತ್ಯ ಚಕರ್ತ ಬಾಣೈಃ ।**
**ಧನೂಂಷಿ ಚಿತ್ರಾಣಿ ಮಹಾರಥಾನಾಂ**
**ಚಕಾರ ಸಂಖೇ ವಿರಥೌ ಯಮೌ ಚ ॥ ೨೦೩ ॥**

**ಅರ್ಥ** :- **ತೇ** = ಅವರು, **ಬಹುಭಿಃ ಶಿಲೀಮುಖೈಃ** = ಬಹಳ ಬಾಣಗಳಿಂದ, **ತಂ** = ಆ ದುರ್ಯೋಧನನನ್ನು, **ವಿವ್ಯಧುಃ** = ಪೀಡಿಸಿದರು, **ಸಃ** = ಆ ದುರ್ಯೋಧನನು, **ತಾನ್** = ಅವುಗಳನ್ನು, **ಅನಾದೃತ್ಯ** = ಲೆಕ್ಕಿಸದೇ, **ಬಾಣೈಃ** = ಬಾಣಗಳಿಂದ, **ಮಹಾರಥಾನಾಂ** = ಮಹಾರಥರ, **ಚಿತ್ರಾಣಿ** = ವಿಚಿತ್ರವಾದ, **ಧನೂಂಷಿ** = ಧನುಸ್ಸುಗಳನ್ನು, **ಚಕರ್ತ** = ಕತ್ತರಿಸಿದನು, **ಸಂಖ್ಯೇ** = ಯುದ್ಧದಲ್ಲಿ, **ಯಮೌ** = ನಕುಲ ಸಹದೇವರನ್ನೂ, **ವಿರಥೌ ಚಕಾರ** = ರಥರಹಿತನನ್ನಾಗಿ ಮಾಡಿದ.

**ತಾತ್ಪರ್ಯ** :- ಭೀಮ ಅರ್ಜುನ ಮೊದಲಾದವರು ದುರ್ಯೋಧನನಿಗೆ ಬಾಣಗಳಿಂದ ಬಹಳ ಹೊಡೆದರು. ದುರ್ಯೋಧನ ಅದನ್ನು ಲೆಕ್ಕಿಸದೆ ಬಾಣಗಳಿಂದ ಮಹಾರಥರ ನಾನಾ ಬಗೆಯ ಧನುಸ್ಸುಗಳನ್ನು ಕತ್ತರಿಸಿದನು. ನಕುಲ ಸಹದೇವರ ರಥಗಳನ್ನು ನಾಶಪಡಿಸಿದ.

**ಆದಾಯ ಚಾಪಾನಿ ಪರಾಣಿ ತೇಽಪಿ**
**ದುರ್ಯೋಧನಂ ವವೃಷುಃ ಸಾಯಕೌಘೈಃ ।**
**ಅಚಿಂತಯಿತ್ವೈವ ಶರಾನ್ ಸ ಏಕೋ**
**ನ್ಯವಾರಯತ್ ತಾನಖಿಲಾಂಶ್ಚ ಬಾಣೈಃ ॥ ೨೦೪ ॥**

**ಅರ್ಥ** :- **ತೇऽಪಿ** = ಆ ಮಹಾರಥರೂ ಕೂಡ, **ಅಪರಾಣಿ ಚಾಪಾನಿ** = ಬೇರೆ ಬಿಲ್ಲುಗಳನ್ನು, **ಆದಾಯ** = ಎತ್ತಿಕೊಂಡು, **ಸಾಯಕೌಘೈಃ** = ಬಾಣ ಸಮೂಹಗಳಿಂದ, **ದುರ್ಯೋಧನಂ** = ದುರ್ಯೋಧನನನ್ನು, **ವವೃಷುಃ** = ಮಳೆಗರೆದರು, **ಸಃ ಏಕ ಏವ** = ದುರ್ಯೋಧನನೊಬ್ಬನೇ, **ಶರಾಂಶ್ಚ** = ಬಾಣಗಳನ್ನೂ, **ಅಚಿಂತಯಿತ್ವಾ** = ಲೆಕ್ಕಿಸದೇ, **ತಾನ್ ಅಖಿಲಾಂಶ್ಚ** = ಅವರೆಲ್ಲರನ್ನೂ, **ಬಾಣೈಃ** = ಬಾಣಗಳಿಂದ, **ನ್ಯವಾರಯತ್** = ತಡೆದನು.

**ತಾತ್ಪರ್ಯ** :- ಆ ಮಹಾರಥರೂ ಕೂಡ ಬಿಲ್ಲುಗಳನ್ನೆತ್ತಿಕೊಂಡು ದುರ್ಯೋಧನನ ಮೇಲೆ ಬಾಣಗಳ ಮಳೆ ಸುರಿಸಿದರು. ಅವುಗಳನ್ನು ಲೆಕ್ಕಿಸದೆ ದುರ್ಯೋಧನನೊಬ್ಬನೇ ಅವೆಲ್ಲವನ್ನೂ ಬಾಣಗಳಿಂದ ತಡೆದನು.

**ತಂ ಗಾಹಮಾನಂ ದ್ವಿಷತಾಂ ಬಹೂನಾಂ**
**ಮಧ್ಯೇ ದ್ರೋಣದ್ರೌಣಿಕೃಪಪ್ರಧಾನಾಃ ।**
**ದೃಷ್ಟ್ವಾ ಸರ್ವೇ ಜುಗುಪುಃ ಸ್ವಾತ್ತಚಾಪಾ**
**ಅನಾರತಂ ಬಾಣಗಣಾನ್ ಸೃಜಂತಃ ॥ ೨೦೫ ॥**

**ಅರ್ಥ** :- **ಬಹೂನಾಂ ದ್ವಿಷತಾಂ** = ಬಹಳ ಮಂದಿ ಶತ್ರುಗಳ, **ಮಧ್ಯೇ** = ಮಧ್ಯದಲ್ಲಿ, **ಗಾಹಮಾನಂ** = ಮುಳುಗುತ್ತಿದ್ದ ದುರ್ಯೋಧನನನ್ನು, **ದೃಷ್ಟ್ವಾ** = ನೋಡಿ, **ದ್ರೋಣದ್ರೌಣಿ ಕೃಪಪ್ರಧಾನಾ ಸರ್ವೇ** = ದ್ರೋಣ ಅಶ್ವತ್ಥಾಮ ಕೃಪ ಮೊದಲಾದವರೆಲ್ಲರೂ, **ಸ್ವಾತ್ತಚಾಪಾಃ** = ಧರಿಸಲ್ಪಟ್ಟ ಬಿಲ್ಲುಗಳುಳ್ಳವರಾಗಿ, **ಅನಾರತಂ** = ನಿರಂತರವಾಗಿ, **ಬಾಣಗಣಾನ್** = ಬಾಣಸಮೂಹಗಳನ್ನು, **ಸೃಜಂತಃ** = ಎಸೆಯುವವರಾಗಿ, **ತಂ** = ಆ ದುರ್ಯೋಧನನನ್ನು, **ಜುಗುಪುಃ** = ರಕ್ಷಿಸಿದರು.

**ತಾತ್ಪರ್ಯ** :- ಬಹಳ ಮಂದಿ ಶತ್ರುಗಳ ಮಧ್ಯದಲ್ಲಿ ದುರ್ಯೋಧನ ಮುಳುಗುತ್ತಿದ್ದಾಗ ಅದನ್ನು ನೋಡಿ ದ್ರೋಣ ಅಶ್ವತ್ಥಾಮ ಕೃಪ ಮೊದಲಾದವರೆಲ್ಲರೂ ಬಿಲ್ಲುಗಳನ್ನೆತ್ತಿಕೊಂಡು ಎಡೆಬಿಡದೆ ಬಾಣಸಮೂಹ ಗಳನ್ನು ಎಸೆಯುತ್ತಾ ದುರ್ಯೋಧನನನ್ನು ಸಂರಕ್ಷಿಸಿದರು.

**ಸುಯೋಧನಃ ಕರ್ಣಮಾಹ ಜಹಿ ಭೀಮಮಿಮಂ ಯುಧಿ ।**
**ಸ ಆಹ ನೈಷ ಶಕ್ಯೋ ಹಿ ಜೇತುಂ ದೇವೈಃ ಸವಾಸವೈಃ ॥ ೨೦೬ ॥**

**ಅರ್ಥ** :- **ಸುಯೋಧನಃ** = ದುರ್ಯೋಧನನು, **ಕರ್ಣಂ** = ಕರ್ಣನನ್ನು ಕುರಿತು, **ಇಮಂ ಭೀಮಂ** = ಈ ಭೀಮನನ್ನು, **ಜಹಿ** = ಕೊಲ್ಲು, **ಇತಿ** = ಎಂದು, **ಆಹ** = ಹೇಳಿದನು, **ಸಃ** = ಆ ಕರ್ಣನು, **ಆಹ** = ಹೇಳಿದನು, **ಸವಾಸವೈಃ ದೇವೈಃ** = ಇಂದ್ರ ಸಹಿತರಾದ ದೇವತೆಗಳಿಂದ, **ಜೇತುಂ** = ಗೆಲ್ಲಲು, **ಏಷಃ** = ಇವನು, **ನ ಶಕ್ಯಃ** = ಶಕ್ಯನಲ್ಲ.

**ತಾತ್ಪರ್ಯ** :- ದುರ್ಯೋಧನ ಕರ್ಣನಿಗೆ ಹೇಳಿದ. ಈ ಭೀಮನನ್ನು ಯುದ್ಧದಲ್ಲಿ ಕೊಲ್ಲು ಎಂದು. ಕರ್ಣ ಹೇಳಿದ ಭೀಮನನ್ನು ಗೆಲ್ಲಲು ಇಂದ್ರಾದಿ ದೇವತೆಗಳಿಂದಲೂ ಶಕ್ಯವಿಲ್ಲ.

**ದೈವಾಜ್ಜೀವಾಮ್ಯಹಂ ರಾಜನ್ ಯುಧ್ಯನೇನಾತಿಪೀಡಿತಃ ।**
**ಅತೋ ಘಟಾಮಹೇ ಶಕ್ತ್ಯಾ ಜಯೋ ದೈವೇ ಸಮಾಹಿತಃ ॥ ೨೦೭ ॥**

**ಅರ್ಥ** :- **ರಾಜನ್** = ರಾಜನೇ!, **ಅಹಂ** = ನಾನು, **ಅನೇನ** = ಈ ಭೀಮನಿಂದ, **ಯುಧಿ** = ಯುದ್ಧದಲ್ಲಿ, **ಅತಿಪೀಡಿತಃ** = ಬಹಳ ಪೀಡಿತನಾಗಿ, **ದೈವಾತ್** = ಅದೃಷ್ಟದಿಂದ, **ಜೀವಾಮಿ** = ಬದುಕಿದ್ದೇನೆ, **ಅತಃ** = ಆದ್ದರಿಂದ, **ಶಕ್ತ್ಯಾ ಘಟಾಮಹೇ** = ಯಥಾಶಕ್ತಿ ಪ್ರಯತ್ನಿಸುತ್ತೇವೆ, **ಜಯಃ** = ಜಯವು, **ದೈವೇ ಸಮಾಹಿತಃ** = ದೈವಾಧೀನವು.

**ತಾತ್ಪರ್ಯ** :- ರಾಜನೇ ನಾನು ಭೀಮನ ಜೊತೆ ಯುದ್ಧ ಮಾಡುತ್ತಾ ದೈವವಶಾತ್ ಉಳಿದು ಬಂದಿದ್ದೇನೆ. ಆದ್ದರಿಂದ ಇನ್ನು ಮುಂದೆ ಯಥಾಶಕ್ತಿ ಹೋರಾಡುವೆನು. ಜಯವು ದೇವರ ಅಧೀನ.

**ದುರ್ಯೋಧನೋ ದ್ರೋಣಮಾಹ ಸೈಂಧವಸ್ತ್ವದುಪೇಕ್ಷಯಾ ।**
**ಪಾರ್ಥೇನ ನಿಹತೋ ಭೀಮಸಾತ್ಯಕಿಭ್ಯಾಂ ಚ ಮೇ ಬಲಮ್ ॥ ೨೦೮ ॥**

**ಅರ್ಥ** :- **ದುರ್ಯೋಧನಃ** = ದುರ್ಯೋಧನನು, **ದ್ರೋಣಂ** = ದ್ರೋಣನನ್ನು ಕುರಿತು, **ಆಹ** = ಹೇಳಿದನು, **ತ್ವದುಪೇಕ್ಷಯಾ** = ನಿನ್ನ ಉಪೇಕ್ಷೆಯಿಂದ, **ಪಾರ್ಥೇನ** = ಅರ್ಜುನನಿಂದ, **ಸೈಂಧವಃ** = ಸೈಂಧವನು, **ನಿಹತಃ** = ಕೊಲ್ಲಲ್ಪಟ್ಟನು, **ಭೀಮಸಾತ್ಯಕಿಭ್ಯಾಂ** = ಭೀಮ ಸಾತ್ಯಕಿಯರಿಂದ, **ಮೇ ಬಲಂ ಚ** = ನನ್ನ ಸೈನ್ಯವೂ ಕೂಡ ಕೊಲ್ಲಲ್ಪಟ್ಟಿತು.

**ತಾತ್ಪರ್ಯ** :- ದುರ್ಯೋಧನ ದ್ರೋಣನಿಗೆ ಹೇಳಿದ. ನೀನು ಉಪೇಕ್ಷೆ ಮಾಡಿದ್ದರಿಂದ ಅರ್ಜುನ ಸೈಂಧವನನ್ನು ಕೊಂದ. ಭೀಮಸಾತ್ಯಕಿಯರಿಂದ ನನ್ನ ಸೈನ್ಯವೂ ನಾಶವಾಯಿತು.

**ಪ್ರತಿಜ್ಞಾ ಚ ಪರಿತ್ಯಕ್ತಾ ಪಾಂಡವಸ್ನೇಹತಸ್ತ್ವಯಾ ।**
**ಇತ್ಯುಕ್ತಃ ಕುಪಿತೋ ದ್ರೋಣಃ ಪ್ರತಿಜ್ಞಾಮಕರೋತ್ ತತಃ ॥ ೨೦೯ ॥**

**ಅರ್ಥ** :- **ಪಾಂಡವಸ್ನೇಹತಃ** = ಪಾಂಡವರ ಸ್ನೇಹದಿಂದ, **ತ್ವಯಾ** = ನಿನ್ನಿಂದ, **ಪ್ರತಿಜ್ಞಾ ಚ** = ಪ್ರತಿಜ್ಞೆಯೂ, **ಪರಿತ್ಯಕ್ತಾ** = ಬಿಡಲ್ಪಟ್ಟಿತು, **ಇತ್ಯುಕ್ತಃ** = ಹೀಗೆ ಹೇಳಲ್ಪಟ್ಟ, **ದ್ರೋಣಃ** = ದ್ರೋಣನು, **ಕುಪಿತಃ** = ಕೋಪಗೊಂಡವನಾಗಿ, **ತತಃ** = ಮತ್ತೆ, **ಪ್ರತಿಜ್ಞಾಂ** = ಪ್ರತಿಜ್ಞೆಯನ್ನು, **ಅಕರೋತ್** = ಮಾಡಿದನು.

**ತಾತ್ಪರ್ಯ** :- ಪಾಂಡವರ ಮೇಲಿನ ಸ್ನೇಹದಿಂದ ನೀನು ನಿನ್ನ ಪ್ರತಿಜ್ಞೆಯನ್ನು ಬಿಟ್ಟಿದ್ದೀ. ಹೀಗೆ ದುರ್ಯೋಧನ ಹೇಳಿದಾಗ ದ್ರೋಣ ಕೋಪಗೊಂಡು ಮತ್ತೆ ಪ್ರತಿಜ್ಞೆ ಮಾಡಿದ.

**ಇತಃ ಪರಂ ನೈವ ರಣಾದ್ ರಾತ್ರಾವಹನಿ ವಾ ಕ್ವಚಿತ್ ।**
**ಗಚ್ಛೇಯಂ ನಚ ಮೋಕ್ಷ್ಯಾಮಿ ವರ್ಮ ಬದ್ಧಂ ಕಥಂಚನ ॥ ೨೧೦ ॥**

**ಅರ್ಥ** :- **ಇತಃ ಪರಂ** = ಇನ್ನು ಮುಂದೆ, **ರಾತ್ರೌ** = ರಾತ್ರಿಯಲ್ಲಿ, **ವಾ** = ಅಥವಾ, **ಅಹನಿ** = ಹಗಲಿನಲ್ಲಿ, **ಕ್ವಚಿತ್** = ಯಾವಾಗಲೂ, **ರಣಾತ್** = ಯುದ್ಧದಿಂದ, **ನೈವ ಗಚ್ಛೇಯಂ** = ಹಿಂತುರುಗಲಾರೆ, **ಬದ್ಧಂ ವರ್ಮ** = ಧರಿಸಲ್ಪಟ್ಟ ಕವಚವನ್ನು, **ಕಥಂಚನ ನೈವ ಮೋಕ್ಷಾಮಿ** = ಯಾವ ಕಾರಣದಿಂದಾಗಲಿ ಬಿಚ್ಚುವುದಿಲ್ಲ.

**ತಾತ್ಪರ್ಯ** :- ಇನ್ನು ಮುಂದೆ ನಾನು ಹಗಲಾಗಲಿ ರಾತ್ರಿಯಾಗಲಿ ಯುದ್ಧವನ್ನು ತ್ಯಜಿಸಿ ಹಿಂದಿರುಗುವುದಿಲ್ಲ. ಧರಿಸಿದ ಕವಚವನ್ನು ಯಾವ ಕಾರಣದಿಂದಲೂ ಕೂಡ ಬಿಚ್ಚುವುದಿಲ್ಲ.

**ಮತ್ಪುತ್ರಶ್ಚ ತ್ವಯಾ ವಾಚ್ಯಃ ಪಾಂಚಾಲಾನ್ ನೈವ ಶೇಷಯೇಃ ।**
**ಸದೌಹಿತ್ರಾನಿತೀತ್ಯುಕ್ತ್ವಾ ವಿಜಗಾಹೇ ನಿಶಾಗಮೇ ॥ ೨೧೧ ॥**

**ಚಮೂಂ ಪರೇಷಾಮಭ್ಯಾಗಾದ್ ಧೃಷ್ಟದ್ಯುಮ್ನಸ್ತಮಾಶು ಚ ।**
**ದ್ರೌಣಿದುರ್ಯೋಧನೌ ತತ್ರ ವಿರಥೀಕೃತ್ಯ ಮಾರುತಿಃ ।**
**ದ್ರಾವಯಾಮಾಸ ತತ್ ಸೈನ್ಯಂ ಪಶ್ಯತಾಂ ಸರ್ವಭೂಭೃತಾಮ್ ॥ ೨೧೨ ॥**

**ತಾತ್ಪರ್ಯ** :- **ತ್ವಯಾ** = ನಿನ್ನಿಂದ, **ಮತ್ಪುತ್ರಶ್ಚ** = ನನ್ನ ಮಗನೂ, **ವಾಚ್ಯಃ** = ಹೇಳಲ್ಪಡಬೇಕು, **ಸದೌಹಿತ್ರಾನ್** = ದೌಹಿತ್ರರಾದ ದ್ರೌಪದಿಯ ಮಕ್ಕಳಿಂದ ಕೂಡಿದ, **ಪಾಂಚಾಲಾನ್** = ಪಾಂಚಾಲರನ್ನು, **ನೈವ ಶೇಷಯೇಃ** = ಉಳಿಸಬೇಡ, **ಇತಿ** = ಈ ರೀತಿಯಾಗಿ, **ಉಕ್ತ್ವಾ** = ಹೇಳಿ (**ದ್ರೋಣಃ** = ದ್ರೋಣನು), **ನಿಶಾಗಮೇ** = ರಾತ್ರಿಯಾದಾಗ, **ಪರೇಷಾಂ ಚಮೂಂ** = ಶತ್ರುಗಳ ಸೈನ್ಯವನ್ನು, **ವಿಜಗಾಹೇ** = ಪ್ರವೇಶಿಸಿದನು, **ತಮ್** = ಅವನನ್ನು ಕುರಿತು, **ಆಶು** = ಬೇಗನೇ, **ಧೃಷ್ಟದ್ಯುಮ್ನಃ** = ಧೃಷ್ಟದ್ಯುಮ್ನನು, **ಅಭ್ಯಾಗಾತ್** = ಎದುರಿಸಿದ, **ಮಾರುತಿಃ** = ಭೀಮನು, **ದ್ರೌಣಿದುರ್ಯೋಧನೌ** = ಅಶ್ವತ್ಥಾಮ ದುರ್ಯೋಧನರನ್ನು, **ವಿರಥೀಕೃತ್ಯ** = ರಥರಹಿತರನ್ನಾಗಿ ಮಾಡಿ, **ತತ್ರ** = ಅಲ್ಲಿ, **ಸರ್ವಭೂಭೃತಾಂ ಪಶ್ಯತಾಂ** = ಎಲ್ಲಾ ರಾಜರೂ ನೋಡುತ್ತಿದ್ದಂತೆಯೇ, **ತತ್ಸೈನ್ಯಂ** = ಆ ಸೈನ್ಯವನ್ನು, **ವಿದ್ರಾವಯಾಮಾಸ** = ಓಡಿಸಿದನು.

**ತಾತ್ಪರ್ಯ** :- 'ನನ್ನ ಮಗನಿಗೂ ನೀನು ಹೇಳು. ಪಾಂಚಾಲರನ್ನು ದ್ರೌಪದಿಯ ಮಕ್ಕಳನ್ನೂ ಯಾರನ್ನೂ ಉಳಿಸಬೇಡ' ಎಂದು. ಹೀಗೆ ದ್ರೋಣ ಹೇಳಿ ರಾತ್ರಿಯಾದಾಗಲೂ ಪಾಂಡವರ ಸೈನ್ಯ ಪ್ರವೇಶ ಮಾಡಿದ. ಧೃಷ್ಟದ್ಯುಮ್ನ ಬೇಗನೇ ದ್ರೋಣನನ್ನು ಎದುರಿಸಿದ. ಭೀಮನು ಅಶ್ವತ್ಥಾಮ ದುರ್ಯೋಧನರ ರಥಗಳನ್ನು ನಾಶಪಡಿಸಿ ಎಲ್ಲಾ ರಾಜರು ನೋಡುತ್ತಿದ್ದಂತೆಯೇ ಅವರ ಎದುರಿನಲ್ಲಿಯೇ ಆ ಸೈನ್ಯವನ್ನು ಓಡಿಸಿದ.

**ಅಕ್ಷೋಹಿಣ್ಯಸ್ತು ಸಪ್ತೈವ ಸೇನಯೋರುಭಯೋರಪಿ ।**
**ಹತಾಸ್ತಾಸಾಂ ಚ ಭೀಮೇನ ತಿಸ್ರೋ ದ್ವೇ ಫಲ್ಗುನೇನ ಚ ॥ ೨೧೩ ॥**

**ಅರ್ಥ** :- **ಉಭಯೋಃ ಸೇನಯೋರಪಿ** = ಎರಡು ಸೈನ್ಯಗಳಲ್ಲಿಯೂ ಕೂಡ, **ಸಪ್ತ ಅಕ್ಷೋಹಿಣ್ಯಃ ಏವ** = ಏಳು ಅಕ್ಷೋಹಿಣೀ ಸೈನ್ಯಗಳೇ, **ಹತಾಃ** = ಹತವಾದವು, **ತಾಸಾಂ ಚ** = ಅವುಗಳ ಪೈಕಿಯೂ, **ಭೀಮೇನ** =

ಭೀಮನಿಂದ, **ತಿಸ್ರಃ** = ಮೂರು, **ಚ** = ಮತ್ತು, **ಫಲ್ಗುನೇನ** = ಅರ್ಜುನನಿಂದ, **ದ್ವೇ** = ಎರಡು, **ಹತಾಃ** = ಕೊಲ್ಲಲ್ಪಟ್ಟವು.

**ತಾತ್ಪರ್ಯ :-** ಎರಡೂ ಸೈನ್ಯಗಳಲ್ಲಿ ಒಟ್ಟು ಏಳು ಅಕ್ಷೋಹಿಣೀ ಸೈನ್ಯಗಳು ಹತವಾದವು. ಅವುಗಳಲ್ಲಿ ಭೀಮನಿಂದ ಮೂರು ಅರ್ಜುನನಿಂದ ಎರಡು ಅಕ್ಷೋಹಿಣೀಗಳು ಹತವಾದವು.

**ಸೌಭದ್ರಸಾತ್ಯಕಿಮುಖ್ಯೈಸ್ತನ್ಮಧ್ಯೇ ಷೋಡಶಾಂಶಕಃ ।**
**ಹೈಡಿಂಬಪಾರ್ಷತಮುಖ್ಯೈಸ್ತ್ರಯಾಚ್ಚ ದಶಮಾಂಶಕಃ ॥ ೨೧೪ ॥**

**ಅರ್ಥ :-** **ತನ್ಮಧ್ಯೇ** = ಅರ್ಜುನನಿಂದ ಹತವಾದ ಸೈನ್ಯದ ಮಧ್ಯದಲ್ಲಿ, **ಷೋಡಶಾಂಶಕಃ** = ಹದಿನಾರನೆಯ ಒಂದು ಭಾಗ, **ಸೌಭದ್ರ ಸಾತ್ಯಕಿ ಮುಖ್ಯೈಃ** = ಅಭಿಮನ್ಯು ಸಾತ್ಯಕಿ ಮೊದಲಾದವರಿಂದ, **ಚ** = ಮತ್ತು, **ತ್ರಯಾಚ್ಚ ದಶಮಾಂಶಕಃ** = ಭೀಮನಿಂದ ಹತವಾದ ಮೂರರ ಪೈಕಿ ಹತ್ತನೆಯ ಒಂದಂಶ, **ಹೈಡಿಂಬ ಪಾರ್ಷತ ಮುಖ್ಯೈಃ** = ಘಟೋತ್ಕಚ ದೃಷ್ಟದ್ಯುಮ್ನ ಮೊದಲಾದವರಿಂದ, **ಹತಾಃ** = ಹತವಾದವು.

**ತಾತ್ಪರ್ಯ :-** ಅರ್ಜುನನಿಂದ ನಾಶವಾದ ಸೈನ್ಯದಲ್ಲಿ ಅಭಿಮನ್ಯು ಸಾತ್ಯಕಿ ಮೊದಲಾದವರು ಹದಿನಾರನೆಯ ಒಂದಂಶದಷ್ಟು ನಾಶಪಡಿಸಿದ್ದರು. ಭೀಮನಿಂದ ಹತವಾದ ಮೂರು ಅಕ್ಷೋಹಿಣೀ ಸೈನ್ಯದಲ್ಲಿ ಹತ್ತನೆಯ ಒಂದು ಭಾಗ ಘಟೋತ್ಕಚ ದೃಷ್ಟದ್ಯುಮ್ನ ಮೊದಲಾದವರಿಂದ ಹತವಾಯಿತು.

**ಭೀಷ್ಮದ್ರೋಣದ್ರೌಣಿಭಿಶ್ಚ ದ್ವೇ ಸಮಂ ನಿಹತೇ ತದಾ ।**
**ತದನ್ಯೈರ್ಮಿಳಿತೈಃ ಸರ್ವೈಸ್ತಚ್ಚತುರ್ಥಾಂಶ ಏವ ಚ ॥ ೨೧೫ ॥**

**ಅರ್ಥ :-** **ಭೀಷ್ಮದ್ರೋಣದ್ರೌಣಿಭಿಃ ಸಮಂ** = ಭೀಷ್ಮದ್ರೋಣ ಅಶ್ವತ್ಥಾಮರಿಂದ ಒಟ್ಟು, **ದ್ವೇ** = ಎರಡು ಅಕ್ಷೋಹಿಣೀ ಸೈನ್ಯಗಳು, **ನಿಹತೇ** = ಕೊಲ್ಲಲ್ಪಟ್ಟವು, **ತದನ್ಯೈಃ ಮಿಲಿತೈಃ ಸರ್ವೈಃ ಚ** = ಅವರನ್ನು ಬಿಟ್ಟು ಬೇರೆ ಒಟ್ಟು ಗೂಡಿದ ಎಲ್ಲರಿಂದಲೂ, **ತಚ್ಚತುರ್ಥಾಂಶ ಏವ** = ಅದರ ನಾಲ್ಕನೆಯ ಒಂದು ಭಾಗವಷ್ಟೇ ಕೊಲ್ಲಲ್ಪಟ್ಟಿತು.

**ತಾತ್ಪರ್ಯ** :- ಭೀಷ್ಮ ದ್ರೋಣ ಅಶ್ವತ್ಥಾಮರಿಂದ ಒಟ್ಟು ಎರಡು ಅಕ್ಷೋಹಿಣಿಗಳು ಹತವಾದವು. ಇವರನ್ನು ಬಿಟ್ಟು ಉಳಿದವರೆಲ್ಲರೂ ಸೇರಿ ಅದರ ನಾಲ್ಕನೆಯ ಒಂದಂಶವನ್ನು ನಾಶಮಾಡಿದರು.

**ತತೋ ರಾತ್ರೌ ಪಂಚಭಿಶ್ಚ ಪಾರ್ಥಾಃ ಷಡ್ಭಿಶ್ಚ ಕೌರವಾಃ ।**
**ಅಕ್ಷೋಹಿಣೀಭಿಃ ಸಂವ್ಯೂಹ್ಯ ಯುದ್ಧಂ ಚಕ್ರುಃ ಸುದಾರುಣಮ್ ॥ ೨೧೬ ॥**

**ಅರ್ಥ** :- **ತತಃ** = ಅನಂತರ, **ರಾತ್ರೌ** = ರಾತ್ರಿಯಲ್ಲಿ, **ಪಾರ್ಥಾಃ** = ಪಾಂಡವರು, **ಪಂಚಭಿಃ ಅಕ್ಷೋಹಿಣೀಭಿಃ** = ಐದು ಅಕ್ಷೋಹಿಣೀಗಳಿಂದ, **ಕೌರವಾಃ** = ಕೌರವರು, **ಷಡ್ಭಿಶ್ಚ** = ಆರು ಅಕ್ಷೋಹಿಣೀಗಳಿಂದಲೂ, **ಸಂವ್ಯೂಹ್ಯ** = ವ್ಯೂಹರಚನೆ ಮಾಡಿ, **ಸುದಾರುಣಂ ಯುದ್ಧಂ** = ಬಹಳ ಭಯಂಕರವಾದ ಯುದ್ಧವನ್ನು, **ಚಕ್ರುಃ** = ಮಾಡಿದರು.

**ತಾತ್ಪರ್ಯ** :- ಅನಂತರ ರಾತ್ರಿಯಲ್ಲಿ ಪಾಂಡವರು ಐದು ಅಕ್ಷೋಹಿಣೀ ಸೈನ್ಯದಿಂದ ಕೌರವರು ಆರು ಅಕ್ಷೋಹಿಣೀ ಸೈನ್ಯದಿಂದಲೂ ವ್ಯೂಹರಚಿಸಿ ಬಲು ಭಯಂಕರವಾದ ಯುದ್ಧ ಮಾಡಿದರು.

**ಭೀಮಂ ಸೇನಾಂ ದ್ರಾವಯಂತಂ ಪುನಃ ಕರ್ಣಃ ಸಮಾಸದತ್ ।**
**ಸ ಕರ್ಣಪುರತೋ ಭೀಮೋ ದುಷ್ಕರ್ಣಂ ಕರ್ಣಮೇವ ಚ ॥ ೨೧೭ ॥**

**ದುರ್ಯೋಧನಸ್ಯಾವರಜೌ ನಿಷ್ಪಿಪೇಷ ಪದಾ ಕ್ಷಣಾತ್ ।**
**ರಥಾಶ್ವಧ್ವಜಸೂತೈಶ್ಚ ಸಹ ತೌ ನ ವ್ಯದೃಶ್ಯತಾಮ್ ॥ ೨೧೮ ॥**

**ಅರ್ಥ** :- **ಸೇನಾಂ ದ್ರಾವಯಂತಂ** = ಸೇನೆಯನ್ನು ಓಡಿಸುತ್ತಿದ್ದ, **ಭೀಮಂ** = ಭೀಮನನ್ನು ಕುರಿತು, **ಕರ್ಣಃ** = ಕರ್ಣನು, **ಪುನಃ** = ಮತ್ತೆ, **ಸಮಾಸದತ್** = ಬಂದನು, **ಸಃ ಭೀಮಃ** = ಆ ಭೀಮನು, **ಕರ್ಣ ಪುರತಃ ಏವ** = ಕರ್ಣನ ಮುಂದೆಯೇ, **ದುರ್ಯೋಧನಸ್ಯಾವರಜೌ** = ದುರ್ಯೋಧನನ ತಮ್ಮಂದಿರಾದ, **ದುಷ್ಕರ್ಣಂ** = ದುಷ್ಕರ್ಣನನ್ನು, **ಕರ್ಣಂ ಚ** = ಕರ್ಣನನ್ನೂ, **ಪದಾ** = ಕಾಲಿನಿಂದ, **ಕ್ಷಣಾತ್** = ಕ್ಷಣದಲ್ಲಿ, **ನಿಷ್ಪಿಪೇಷ** = ಪುಡಿ ಮಾಡಿದನು, **ರಥಾಶ್ವಧ್ವಜಸೂತೈಶ್ಚ ಸಹಿತೌ** = ರಥ ಕುದುರೆ ಧ್ವಜ ಸಾರಥಿಗಳಿಂದಲೂ ಸಮೇತರಾಗಿ, **ನ ವ್ಯದೃಶ್ಯತಾಂ** = ನಾಶವಾದರು.

**ತಾತ್ಪರ್ಯ** :- ಭೀಮ ಸೈನ್ಯ ಓಡಿಸುತ್ತಿದ್ದಾಗ ಕರ್ಣ ಮತ್ತೆ ಬಂದ. ಭೀಮ ಕರ್ಣನ ಮುಂದೆಯೇ ದುರ್ಯೋಧನನ ತಮ್ಮಂದಿರಾದ ದುಷ್ಕರ್ಣ ಕರ್ಣರನ್ನು ಕ್ಷಣದಲ್ಲಿ ಕಾಲಿಂದ ತುಳಿದು ನಾಶಪಡಿಸಿದ. ದುರ್ಯೋಧನನ ತಮ್ಮಂದಿರಿಬ್ಬರೂ ರಥ ಧ್ವಜ ಕುದುರೆ ಸಾರಥಿಗಳಿಂದ ಕೂಡಿದವರಾಗಿ ನಾಶ ಹೊಂದಿದರು.

**ನಿರಾಯುಧೋಽಹಮಿತಿ ಮಾಂ ತ್ವಮಾತ್ಥ ಪರುಷಂ ವಚಃ ।**
**ನಿರಾಯುಧಃ ಪದ್ಯೈವಾಹಂ ತ್ವಾಂ ಹಂತುಮಶಕಂ ತದಾ ॥ ೨೧೯ ॥**

**ಅರ್ಥ** :- **ಅಹಂ** = ನಾನು, **ನಿರಾಯುಧಃ** = ನಿರಾಯುಧನು, **ಇತಿ** = ಎಂದು, **ತ್ವಂ** = ನೀನು, **ಪರುಷಂ ವಚಃ ಆತ್ಥ** = ನಿಷ್ಠುರವಾದ ಮಾತನ್ನಾಡಿದ್ದಿ, (**ತು** = ಆದರೆ), **ನಿರಾಯುಧಃ ಅಹಂ** = ನಿರಾಯುಧನಾದ ನಾನು, **ತ್ವಾಂ** = ನಿನ್ನನ್ನು, **ತದಾ** = ಆವಾಗ, **ಪದಾ ಏವ** = ಪಾದದಿಂದಲೇನೇ, **ಹಂತುಂ** = ಕೊಲ್ಲಲು, **ಅಶಕಂ** = ಸಮರ್ಥನಾಗಿದ್ದೇ.

**ತಾತ್ಪರ್ಯ** :- ನಿರಾಯುಧನೆಂದು ನನಗೆ ನೀನು ನಿಷ್ಠುರವಾದ ಮಾತನ್ನಾಡಿರುವಿ. ಆದರೆ ನಿರಾಯುಧನಾದರೂ ನಾನು ನಿನ್ನನ್ನು ಆವಾಗ ಕಾಲಿನಿಂದ ತುಳಿದೇ ಕೊಲ್ಲಲು ಸಮರ್ಥನಾಗಿದ್ದೆ.

**ಇತಿ ಕರ್ಣಸ್ಯ ತೌ ಭೀಮಃ ಸಂಜ್ಞಯಾ ಜ್ಞಾಪಯನ್ ಭುವಿ ।**
**ಪದಾ ಪಿಪೇಷ ಕಾಲಿಂಗಂ ಮುಷ್ಟಿನೈವ ಜಘಾನ ಹ ॥ ೨೨೦ ॥**

**ಮುಷ್ಟಿನಾ ತ್ವದ್ವಧಾಯಾಹಂ ಸಮರ್ಥ ಇತಿ ಕಿಂ ವದೇ ॥ ೨೨೧ ॥**

**ತಸ್ಮಾನ್ಮಯಾ ರಕ್ಷಿತಸ್ತ್ವಮಿತಿ ಜ್ಞಾಪಯಿತುಂ ಪ್ರಭುಃ ।**
**ಸಾಶ್ವಸೂತಧ್ವಜರಥಃ ಕಾಲಿಂಗೋ ಮುಷ್ಟಿಚೂರ್ಣಿತಃ ॥ ೨೨೨ ॥**

**ಅರ್ಥ** :- **ಇತಿ** = ಈ ರೀತಿಯಾಗಿ, **ಕರ್ಣಸ್ಯ** = ಕರ್ಣನಿಗೆ, **ಸಂಜ್ಞಯಾ** = ಸೂಚನೆಯಿಂದ, **ಜ್ಞಾಪಯನ್** = ತಿಳಿಸುತ್ತಾ, **ಪ್ರಭುಃ** = ಶಕ್ತನಾದ, **ಭೀಮಃ** = ಭೀಮನು, **ತೌ** = ಆ ದುಷ್ಕರ್ಣ ಕರ್ಣರನ್ನು, **ಭುವಿ** = ನೆಲದ ಮೇಲೆ, **ಪದಾ** = ಕಾಲಿನಿಂದ, **ಪಿಪೇಷ** = ತುಳಿದು ಪುಡಿಮಾಡಿದನು, **ಮುಷ್ಟಿನಾ** = ಮುಷ್ಟಿಯಿಂದ, **ತ್ವದ್ವಧಾಯ** = ನಿನ್ನನ್ನು ಕೊಲ್ಲಲು, **ಅಹಂ** = ನಾನು,

**ಸಮರ್ಥಃ** = ಸಮರ್ಥನು, **ಇತಿ** = ಎಂಬುದಾಗಿ, **ಕಿಂವದೇ** = ಏನು ಹೇಳಬೇಕು ?, **ತಸ್ಮಾತ್** = ಆದ್ದರಿಂದ, **ಮಯಾ** = ನನ್ನಿಂದ, **ತ್ವಂ** = ನೀನು, **ರಕ್ಷಿತಃ** = ರಕ್ಷಿಸಲ್ಪಟ್ಟಿದ್ದಿ, **ಇತಿ** = ಈ ರೀತಿಯಾಗಿ, **ಜ್ಞಾಪಯಿತುಂ** = ತಿಳಿಸಲು, **ಸಾಶ್ವಸೂತಧ್ವಜರಥಃ** = ಕುದುರೆ ಸಾರಥಿ ಧ್ವಜರಥ ಸಮೇತನಾಗಿ, **ಕಾಲಿಂಗಃ** = ಕಾಲಿಂಗನು, **ಮುಷ್ಟಿಚೂರ್ಣಿತಃ** = ಮುಷ್ಟಿಯ ಏಟಿನಿಂದ ಪುಡಿಮಾಡಲ್ಪಟ್ಟನು.

**ತಾತ್ಪರ್ಯ** :- ಈ ರೀತಿ ಸೂಚನೆ ನೀಡುತ್ತಾ ಭೀಮ ದುಷ್ಕರ್ಣ ಕರ್ಣರನ್ನು ನೆಲದ ಮೇಲೆ ಹಾಕಿ ಕಾಲಿಂದ ತುಳಿದು ಕೊಂದನು. ಮುಷ್ಟಿಯಿಂದಲೇ ಹೊಡೆದು ಕಾಲಿಂಗನನ್ನು ಕೊಂದನು. 'ಮುಷ್ಟಿಯಿಂದಲೂ ನಿನ್ನನ್ನು ಕೊಲ್ಲಲು ನಾನು ಶಕ್ತನೆಂದು ಇನ್ನೇನು ಹೇಳಬೇಕು. ಆದ್ದರಿಂದ ನಾನು ನಿನ್ನನ್ನು ಕೊಲ್ಲಲಿಲ್ಲವಷ್ಟೇ' ಎಂದು ತಿಳಿಸಲು ಭೀಮ ಕುದುರೆ ಸಾರಥಿ ಧ್ವಜರಥ ಸಮೇತನಾದ ಕಾಲಿಂಗನನ್ನು ಮುಷ್ಟಿಯಿಂದ ಹೊಡೆದು ಕೊಂದನು.

**ಕೇತುಮಾಂಶ್ಚ ಪಿತಾ ತಸ್ಯ ಶಕ್ರದೇವಃ ಶ್ರುತಾಯುಧಃ ।**
**ಅಕ್ಷೋಹಿಣ್ಯಾ ಸೇನಯಾ ಚ ಸಹ ಭೀಮೇನ ಪಾತಿತಾಃ ॥ ೨೨೩ ॥**

**ಖಡ್ಗಯುದ್ಧೇ ಪುರಾ ಭೀಷ್ಮೇ ಸೈನಾಪತ್ಯಂ ಪ್ರಕುರ್ವತಿ ।**
**ಕರ್ಣಾನುಜಾನ್ ಧ್ರುವಾದ್ಯಾಂಶ್ಚ ಬಹೂನ್ ಜಘ್ನೇ ಸ ವೈ ನಿಶಿ ॥ ೨೨೪ ॥**

**ಅರ್ಥ** :- **ಪುರಾ** = ಹಿಂದೆ, **ಭೀಷ್ಮೇ** = ಭೀಷ್ಮನು, **ಸೈನಾಪತ್ಯಂ ಪ್ರಕುರ್ವತಿ** = ಸೈನಾಪತ್ಯವನ್ನು ಮಾಡುತ್ತಿರಲು, **ಖಡ್ಗಯುದ್ಧೇ** = ಖಡ್ಗ ಯುದ್ಧದಲ್ಲಿ, **ತಸ್ಯ** = ಆ ಕಾಲಿಂಗನ, **ಪಿತಾ ಕೇತುಮಾನ್** = ತಂದೆಯಾದ ಕೇತುಮಂತನು, **ಚ** = ಮತ್ತು, **ಶಕ್ರದೇವಃ** = ಶಕ್ರದೇವನು, **ಶ್ರುತಾಯುಧಃ** = ಶ್ರುತಾಯುಧನು, **ಅಕ್ಷೋಹಿಣ್ಯಾಸೇನಯಾ ಸಹ** = ಅಕ್ಷೋಹಿಣೀ ಸೈನ್ಯದೊಂದಿಗೆ, **ಭೀಮೇನ** = ಭೀಮನಿಂದ, **ಪಾತಿತಾಃ** = ಕೊಲ್ಲಲ್ಪಟ್ಟಿದ್ದರು, **ನಿಶಿ** = ರಾತ್ರಿಯಲ್ಲಿ, (**ಕಾಲಿಂಗಂ** = ಕಾಲಿಂಗನನ್ನು), **ಕರ್ಣಾನುಜಾನ್** = ಕರ್ಣನ ತಮ್ಮಂದಿರಾದ, **ಧ್ರುವಾದ್ಯಾನ್ ಬಹೂನ್ ಚ** = ಧ್ರುವ ಮೊದಲಾದ ಬಹಳ ಜನರನ್ನು, **ಜಘಾನ ವೈ** = ಕೊಂದನಷ್ಟೇ.

**ತಾತ್ಪರ್ಯ** :- ಹಿಂದೆ ಭೀಷ್ಮ ಸೇನಾಪತಿಯಾಗಿದ್ದಾಗ ಖಡ್ಗ ಯುದ್ಧದಲ್ಲಿ ಕಾಲಿಂಗನ ತಂದೆಯಾದ ಕೇತುಮಾನ್ ಶಕ್ರದೇವ ಶ್ರುತಾಯುಧ ಇವರನ್ನು ಅಕ್ಷೋಹಿಣಿಯೊಂದಿಗೆ ಭೀಮನೇ ಕೊಂದಿದ್ದ. ಈಗ ರಾತ್ರಿಯುದ್ಧಲ್ಲಿ ಕಾಲಿಂಗನನ್ನು ಕರ್ಣನ ತಮ್ಮಂದಿರಾದ ಧ್ರುವ ಮೊದಲಾದ ಬಹಳ ಮಂದಿಯನ್ನು ಸಂಹರಿಸಿದ.

**ಸಂಜ್ಞಾಂ ಭೀಮಕೃತಾಂ ಜ್ಞಾತ್ವಾ ಶಕ್ತಿಂ ಚಿಕ್ಷೇಪ ಚಾಪರಾಮ್ ।**
**ಕರ್ಣಃ ಶಕ್ತಿರ್ಮಯಾ ದಿವ್ಯಾ ನ ಮುಕ್ತಾ ತೇನ ಜೀವಸಿ ॥ ೨೨೫ ॥**

**ಇತಿ ಜ್ಞಾಪಯಿತುಂ ತಾಂ ತು ಜ್ಞಾತ್ವಾ ಭೀಮಃ ಕ್ಷಣಾತ್ ತದಾ ।**
**ಖಮುತ್ಪತ್ಯ ಗೃಹೀತ್ವಾ ಚ ಕರ್ಣೇ ಚಿಕ್ಷೇಪ ಸತ್ವರಃ ॥ ೨೨೬ ॥**

**ಅರ್ಥ** :- **ಭೀಮಕೃತಾಂ ಸಂಜ್ಞಾಂ** = ಭೀಮ ಮಾಡಿದ ಸೂಚನೆಯನ್ನು, **ಗೃಹೀತ್ವಾ** = ತಿಳಿದು, **ಮಯಾ** = ನನ್ನಿಂದ, **ದಿವ್ಯಾ ಶಕ್ತಿಃ** = ದಿವ್ಯವಾದ ಶಕ್ತ್ಯಾಯುಧವು, **ನ ಮುಕ್ತಾ** = ಬಿಡಲ್ಪಟ್ಟಿಲ್ಲ, **ತೇನ** = ಆದ್ದರಿಂದ, **ಜೀವಸಿ** = ಬದುಕಿದ್ದೀ, **ಇತಿ** = ಎಂದು, **ಜ್ಞಾಪಯಿತುಂ** = ತಿಳಿಸಲು, **ಕರ್ಣಃ** = ಕರ್ಣನು, **ಅಪರಾಂ ಶಕ್ತಿಂ** = ಬೇರೆಯೊಂದು ಶಕ್ತ್ಯಾಯುಧವನ್ನು, **ಚಿಕ್ಷೇಪ** = ಎಸೆದನು, **ತಾಂ** = ಅದನ್ನು, **ಜ್ಞಾತ್ವಾ** = ತಿಳಿದು, **ಭೀಮಸ್ತು** = ಭೀಮನಾದರೂ, **ತದಾ** = ಆವಾಗ, **ಕ್ಷಣಾತ್** = ಕ್ಷಣದಲ್ಲಿ, **ಖಂ ಉತ್ಪತ್ಯ** = ಆಕಾಶಕ್ಕೆ ಹಾರಿ, **ಸತ್ವರಃ** = ವೇಗ ಉಳ್ಳವನಾಗಿ, **ಗೃಹೀತ್ವಾ** = ಶಕ್ತ್ಯಾಯುಧವನ್ನು ಹಿಡಿದು, **ಚ** = ಮತ್ತು, **ಕರ್ಣೇ ಚಿಕ್ಷೇಪ** = ಕರ್ಣನ ಮೇಲೆ ಹಾಕಿದನು.

**ತಾತ್ಪರ್ಯ** :- ಭೀಮನ ಸೂಚಿಸಿದ ವಿಷಯವನ್ನು ಗ್ರಹಿಸಿ ಕರ್ಣ ಸಾಮಾನ್ಯವಾದ ಮತ್ತೊಂದು ಶಕ್ತ್ಯಾಯುಧವನ್ನು ಭೀಮನ ಮೇಲೆ ಎಸೆದ. ನಾನು ನಿನ್ನ ಮೇಲೆ ದಿವ್ಯವಾದ ಇಂದ್ರನ ಶಕ್ತ್ಯಾಯುಧವನ್ನು ಎಸೆದಿಲ್ಲ. ಆದ್ದರಿಂದ ನೀನು ಜೀವಿಸಿರುವಿ ಎಂದು ಸೂಚಿಸಿದ. ಅದನ್ನು ತಿಳಿದು ಭೀಮ ಒಂದು ಕ್ಷಣದಲ್ಲಿ ಆಕಾಶಕ್ಕೆ ಹಾರಿ ಶಕ್ತ್ಯಾಯುಧವನ್ನು ಹಿಡಿದು ಕರ್ಣನ ಮೇಲೆ ಹಾಕಿದ.

**ಯದಿ ತ್ವಯಾ ತದಾ ಮುಕ್ತಾ ಶಕ್ತಿಸ್ತ್ವಾಂ ಸಾ ಹನಿಷ್ಯತಿ ।**
**ಇತಿ ಜ್ಞಾಪಯಿತುಂ ಸಾ ಚ ಕರ್ಣರಕ್ಷಣಕಾಂಕ್ಷಿಣಾ ॥ ೨೨೭ ॥**

**ಮುಕ್ತಾ ದಕ್ಷಭುಜೇ ಸಾಽಥ ವಿದಾರ್ಯ ಧರಣೀಂ ತಥಾ ।**
**ಭಿತ್ತ್ವಾ ವಿವೇಶ ಕರ್ಣಸ್ಯ ದರ್ಶಯಂತೀ ನಿದರ್ಶನಮ್ ॥ ೨೨೮ ॥**

**ಅರ್ಥ :- ಯದಿ** = ಒಂದುವೇಳೆ, **ತ್ವಯಾ** = ನಿನ್ನಿಂದ, **ತದಾ** = ಆವಾಗ, **ಶಕ್ತಿಃ** = ಶಕ್ತ್ಯಾಯುಧವು, **ಮುಕ್ತಾ(ಚೇತ್)** = ಬಿಡಲ್ಪಟ್ಟಿದ್ದರೆ, **ಸಾ** = ಅದು, **ತ್ವಾಂ** = ನಿನ್ನನ್ನು, **ಹನಿಷ್ಯತಿ** = ಕೊಲ್ಲುತ್ತಿತ್ತು, **ಇತಿ** = ಈ ರೀತಿಯಾಗಿ, **ಜ್ಞಾಪಯಿತುಂ** = ತಿಳಿಸಲು, **ಕರ್ಣರಕ್ಷಣ ಕಾಂಕ್ಷಿಣಾ** = ಕರ್ಣನ ರಕ್ಷಣೆಯ ಆಸೆಯುಳ್ಳ ಭೀಮನಿಂದ, **ಸಾ** = ಆ ಶಕ್ತ್ಯಾಯುಧವು, **ದಕ್ಷಭುಜೇ** = ಬಲಭುಜಕ್ಕೆ, **ಮುಕ್ತಾ** = ಬಿಡಲ್ಪಟ್ಟಿತು, **ಸಾ** = ಅದು, **ಅಥ** = ಅನಂತರ, **ವಿದಾರ್ಯ** = ಭುಜವನ್ನು ಸೀಳಿ, **ತಥಾ** = ಹಾಗೆಯೇ, **ಕರ್ಣಸ್ಯ** = ಕರ್ಣನಿಗೆ, **ನಿದರ್ಶನಂ ದರ್ಶಯಂತೀ** = ನಿದರ್ಶನವನ್ನು ತೋರಿಸುತ್ತಾ, **ಧರಣೀಂ ಭಿತ್ತ್ವಾ** = ನೆಲವನ್ನು ಸೀಳಿ, **ವಿವೇಶ** = ಪ್ರವೇಶಿಸಿತು.

**ತಾತ್ಪರ್ಯ :-** ನೀನು ಆವಾಗ ದಿವ್ಯವಾದ ಶಕ್ತ್ಯಾಯುಧವನ್ನು ಪ್ರಯೋಗಿಸಿದ್ದರೂ ಅದು ನಿನ್ನನ್ನೇ ಕೊಲ್ಲುತ್ತಿತ್ತು ಎಂದು ಸೂಚನೆ ನೀಡಲು ಭೀಮ ಹಾಗೆ ಮಾಡಿದ. ಕರ್ಣನ ರಕ್ಷಣೆ ಬಯಸಿದ್ದ ಭೀಮ ಆ ಕರ್ಣನ ಬಲಭುಜಕ್ಕೆ ಶಕ್ತ್ಯಾಯುಧವನ್ನು ಎಸೆದನು. ಅವನನ್ನು ಕೊಲ್ಲಲಿಲ್ಲ. ಏಕೆಂದರೆ ಅವನನ್ನು ಕೊಲ್ಲುವುದಾಗಿ ಅರ್ಜುನ ಪ್ರತಿಜ್ಞೆಗೈದಿದ್ದ.

**ತತೋ ಭೀಮಃ ಪುನಃ ಸ್ವಂ ತು ರಥಮಾಸ್ಥಾಯ ಚಾಪಭೃತ್ ।**
**ಕರ್ಣಸ್ಯ ಪುರತಃ ಶತ್ರೂನ್ ದ್ರಾವಯಾಮಾಸ ಸರ್ವತಃ ॥ ೨೨೯ ॥**

**ಅರ್ಥ :- ತತಃ** = ಅನಂತರ, **ಭೀಮಃ** = ಭೀಮನು, **ಪುನಃ** = ಮತ್ತೆ, **ಸ್ವಂ ರಥಂ ಆಸ್ಥಾಯ** = ತನ್ನ ರಥವನ್ನೇರಿ, **ಚಾಪಭೃತ್** = ಬಿಲ್ಲನ್ನು ಧರಿಸಿದವನಾಗಿ, **ಕರ್ಣಸ್ಯ ಪುರತಃ** = ಕರ್ಣನ ಮುಂದೆಯೇ, **ಶತ್ರೂನ್** = ಶತ್ರುಗಳನ್ನು, **ಸರ್ವತಃ ದ್ರಾವಯಾಮಾಸ** = ಎಲ್ಲೆಡೆಗೆ ಓಡಿಸಿದನು.

**ತಾತ್ಪರ್ಯ :-** ಭೀಮ ಮತ್ತೆ ತನ್ನ ರಥವನ್ನೇರಿ ಬಿಲ್ಲನ್ನು ಹಿಡಿದುಕೊಂಡು ಕರ್ಣನ ಮುಂದೆಯೇ ಶತ್ರುಗಳನ್ನು ಎಲ್ಲೆಡೆಗೆ ಓಡಿಸಿದನು.

**ತಂ ಕರ್ಣೋ ವಾರಯಾಮಾಸ ಶರೈಃ ಸನ್ನತಪರ್ವಭಿಃ ।**
**ಭೀಮಃ ಕರ್ಣರಥಾಯೈವ ಗದಾಂ ಚಿಕ್ಷೇಪ ವೇಗತಃ ॥ ೨೩೦ ॥**

**ಅರ್ಥ** :- **ಕರ್ಣಃ** = ಕರ್ಣನು, **ತಂ** = ಆ ಭೀಮನನ್ನು, **ಸನ್ನತ ಪರ್ವಭಿಃ ಶರೈಃ** = ಬಾಗಿದ ಗಂಟುಗಳುಳ್ಳ ಬಾಣಗಳಿಂದ, **ವಾರಯಾಮಾಸ** = ತಡೆದನು, **ಭೀಮಃ** = ಭೀಮನು, **ವೇಗತಃ** = ವೇಗದಿಂದ, **ಕರ್ಣರಥಾಯೈವ** = ಕರ್ಣನ ರಥಕ್ಕೇ, **ಗದಾಂ** = ಗದೆಯನ್ನು, **ಚಿಕ್ಷೇಪ** = ಎಸೆದನು.

**ತಾತ್ಪರ್ಯ** :- ಕರ್ಣ ಬಾಗಿದ ಗಂಟುಗಳುಳ್ಳ ಬಾಣಗಳಿಂದ ಭೀಮನನ್ನು ತಡೆದನು. ಭೀಮ ವೇಗವಾಗಿ ಕರ್ಣನ ರಥಕ್ಕೆ ಗದೆ ಎಸೆದ.

**ಸ ತದ್ಗದಾವಿಘಾತಾಯ ಸ್ಥೂಣಾಕರ್ಣಾಸ್ತ್ರಮಾಸೃಜತ್ ।**
**ತೇನಾಸ್ತ್ರೇಣ ಪ್ರತಿಹತಾ ಸಾ ಗದಾ ಭೀಮಮಾವ್ರಜತ್ ॥ ೨೩೦ ॥**

**ಅರ್ಥ** :- **ಸಃ** = ಆ ಕರ್ಣನು, **ತದ್ಗದಾವಿಘಾತಾಯ** = ಆ ಗದೆಯನ್ನು ತುಂಡರಿಸಲು, **ಸ್ಥೂಣಾಕರ್ಣಾಸ್ತ್ರಂ** = ಸ್ಥೂಣಾಕರ್ಣವೆಂಬ ಅಸ್ತ್ರವನ್ನು, **ಅಸೃಜತ್** = ಪ್ರಯೋಗಿಸಿದನು, **ತೇನ ಅಸ್ತ್ರೇಣ** = ಆ ಅಸ್ತ್ರದಿಂದ, **ಪ್ರತಿಹತಾ** = ತಡೆಯಲ್ಪಟ್ಟ, **ಸಾ ಗದಾ** = ಆ ಗದೆಯು, **ಭೀಮಂ ಆವ್ರಜತ್** = ಭೀಮನ ಕಡೆಗೆ ಹಿಂತಿರುಗಿ ಬಂದಿತು.

**ತಾತ್ಪರ್ಯ** :- ಕರ್ಣ ಆ ಗದೆಯನ್ನು ತುಂಡು ಮಾಡಲು ಸ್ಥೂಣಾಕರ್ಣವೆಂಬ ಬಾಣವನ್ನು ಪ್ರಯೋಗಿಸಿದ. ಆ ಸ್ಥೂಣಾಕರ್ಣ ಬಾಣದಿಂದ ತಡೆಯಲ್ಪಟ್ಟ ಗದೆ ಭೀಮನ ಬಳಿಗೆ ಹಿಂತಿರುಗಿ ಬಂದಿತು.

**ಭೀಮೋ ಗದಾಂ ಸಮಾದಾಯ ಕರ್ಣಸ್ಯ ರಥಮಾರುಹತ್ ।**
**ತಯಾ ಸಂಚೂರ್ಣಯಾಮಾಸ ಕರ್ಣಸ್ಯ ರಥಕೂಬರಮ್ ॥ ೨೩೨ ॥**

**ಅರ್ಥ** :- **ಭೀಮಃ** = ಭೀಮನು, **ಗದಾಂ ಸಮಾದಾಯ** = ಗದೆಯನ್ನು ಹಿಡಿದುಕೊಂಡು, **ಕರ್ಣಸ್ಯ ರಥಂ** = ಕರ್ಣನ ರಥವನ್ನು, **ಆರುಹತ್** = ಏರಿದನು, **ತಯಾ** = ಆ ಗದೆಯಿಂದ, **ಕರ್ಣಸ್ಯ** = ಕರ್ಣನ, **ರಥಕೂಬರಂ** = ರಥದ ನೊಗವನ್ನು, **ಸಂಚೂರ್ಣಯಾಮಾಸ** = ಪುಡಿ ಮಾಡಿದ.

**ತಾತ್ಪರ್ಯ** :- ಭೀಮ ಗದೆಯನ್ನು ಹಿಡಿದುಕೊಂಡು ಕರ್ಣನ ರಥವನ್ನೇರಿದ. ಗದೆಯಿಂದ ಕರ್ಣನ ರಥದ ನೊಗವನ್ನು ಪುಡಿಮಾಡಿದ.

**ಏವಂ ತ್ವಚ್ಚೂರ್ಣನೇ ಶಕ್ತೋ ಮತ್ಕಾಮಾತ್ ತ್ವಂ ಹಿ ಜೀವಸಿ ।**
**ಏವಂ ನಿದರ್ಶಯಿತ್ವೈವ ಪುನಃ ಸ್ವಂ ರಥಮಾವ್ರಜತ್ ॥ ೨೩೩ ॥**

**ಅರ್ಥ** :- **ಏವಂ** = ಈ ರೀತಿಯಾಗಿ, **ತ್ವಚ್ಚೂರ್ಣನೇ ಶಕ್ತಃ** = ನಿನ್ನನ್ನು ಪುಡಿ ಮಾಡುವದರಲ್ಲಿಯೂ ಸಮರ್ಥನು, **ಮತ್ಕಾಮಾತ್** = ನನ್ನ ಇಚ್ಛೆಯಿಂದ, **ತ್ವಂ** = ನೀನು, **ಜೀವಸಿ** = ಬದುಕಿರುವಿ, **ಏವಂ** = ಈ ರೀತಿಯಾಗಿ, **ನಿದರ್ಶಯಿತ್ವೈವ** = ನಿದರ್ಶನವನ್ನು ತೋರಿಸಿಯೇ, (**ಭೀಮಃ** = ಭೀಮನು), **ಪುನಃ** = ಮತ್ತೆ, **ಸ್ವಂ ರಥಂ ಆವ್ರಜತ್** = ತನ್ನ ರಥಕ್ಕೆ ಬಂದನು.

**ತಾತ್ಪರ್ಯ** :- ಇದೇ ರೀತಿಯಾಗಿ ನಿನ್ನನ್ನು ಪುಡಿ ಮಾಡಲು ಸಮರ್ಥನಾಗಿದ್ದೇನೆ. ನನ್ನ ಇಚ್ಛೆಯಿಂದ ನೀನು ಬದುಕಿರುವಿ ಎಂಬುದಕ್ಕೆ ನಿದರ್ಶನವನ್ನು ತೋರಿಸಿ ಭೀಮ ಪುನಃ ತನ್ನ ರಥಕ್ಕೆ ಬಂದ.

**ಪುನಃ ಕರ್ಣಪುರಃ ಸೇನಾಂ ಜಘಾನ ಬಹುಶೋ ರಣೇ ।**
**ಕರ್ಣಸ್ತು ತಂ ಪರಿತ್ಯಜ್ಯ ಸಹದೇವಮುಪಾದ್ರವತ್ ॥ ೨೩೪ ॥**

**ಅರ್ಥ** :- (**ಭೀಮಃ** = ಭೀಮನು), **ಪುನಃ** = ಮತ್ತೆ, **ಕರ್ಣಪುರಃ** = ಕರ್ಣನ ಎದುರಿನಲ್ಲಿಯೇ, **ರಣೇ** = ಯುದ್ಧದಲ್ಲಿ, **ಸೇನಾಂ** = ಸೇನೆಯನ್ನು, **ಬಹುಶಃ** = ಬಹಳವಾಗಿ, **ಜಘಾನ** = ನಾಶ ಮಾಡಿದನು, **ಕರ್ಣಸ್ತು** = ಕರ್ಣನಾದರೂ, **ತಂ** = ಆ ಭೀಮನನ್ನು, **ಪರಿತ್ಯಜ್ಯ** = ಬಿಟ್ಟು, **ಸಹದೇವಂ ಉಪಾದ್ರವತ್** = ಸಹದೇವನನ್ನು ಕುರಿತು ನಡೆದ.

**ತಾತ್ಪರ್ಯ** :- ಭೀಮ ಮತ್ತೆ ಕರ್ಣನ ಎದುರಿನಲ್ಲಿಯೇ ಯುದ್ಧದಲ್ಲಿ ಬಹಳ ಸೈನ್ಯವನ್ನು ಕೊಂದನು. ಕರ್ಣ ಅವನನ್ನು ಬಿಟ್ಟು ಸಹದೇವನ ಕಡೆಗೆ ನಡೆದನು.

**ಸ ತು ತಂ ವಿರಥೀಕೃತ್ಯ ಧನುಃ ಕಂಠೇಽವಸಜ್ಯ ಚ ।**
**ಕುತ್ಸಯಾಮಾಸ ಬಹುಶಃ ಸ ತು ನಿರ್ವೇದಮಾಗಮತ್ ॥ ೨೩೫ ॥**

**ಅರ್ಥ** :- **ಸಃ** = ಆ ಕರ್ಣನು, **ತಂ** = ಆ ಸಹದೇವನನ್ನು, **ವಿರಥೀಕೃತ್ಯ** = ರಥರಹಿತನನ್ನಾಗಿ ಮಾಡಿ, **ಕಂಠೇ** = ಕುತ್ತಿಗೆಯಲ್ಲಿ, **ಧನುಃ ಅವಸಜ್ಯ** =

ಬಿಲ್ಲನ್ನು ಸಿಕ್ಕಿಸಿ, **ಬಹುಶಃ ಕುತ್ಸಯಾಮಾಸ** = ಬಹಳ ಪೀಡಿಸಿದ, **ಸತು** = ಆ ಸಹದೇವನಾದರೂ, **ನಿರ್ವೇದಂ ಆಗಮತ್** = ದುಃಖಪಟ್ಟನು.

**ತಾತ್ಪರ್ಯ** :- ಆ ಕರ್ಣ ಸಹದೇವನ ರಥವನ್ನು ಪುಡಿ ಮಾಡಿ ಕುತ್ತಿಗೆಗೆ ಬಿಲ್ಲು ಸಿಕ್ಕಿಸಿ ಬಹಳ ಪೀಡಿಸಿದ. ಸಹದೇವ ಬಹಳ ದುಃಖಪಟ್ಟ.

**ನ ಹಂತುಮೈಚ್ಛತ್ ತಂ ಕರ್ಣಃ ಪೃಥಾಯೈ ಸ್ವಂ ವಚಃ ಸ್ಮರನ್ ।**
**ತಂ ವಿಜಿತ್ಯ ರಣೇ ಕರ್ಣೋ ಜಘ್ನೇ ಪಾರ್ಥವರೂಥಿನೀಮ್ ॥ ೨೩೬ ॥**

**ಅರ್ಥ** :- **ಕರ್ಣಃ** = ಕರ್ಣನು, **ತಂ** = ಆ ಸಹದೇವನನ್ನು, **ಹಂತುಂ** = ಕೊಲ್ಲಲು, **ನೈಚ್ಛತ್** = ಬಯಸಲಿಲ್ಲ, **ಪೃಥಾಯೈ ಸ್ವಂ ವಚಃ** = ಕುಂತಿಗೆ ನೀಡಿದ್ದ ತನ್ನ ಮಾತನ್ನು, **ಸ್ಮರನ್** = ಸ್ಮರಿಸುತ್ತಾ, **ಕರ್ಣಃ** = ಕರ್ಣನು, **ತಂ** = ಆ ಸಹದೇವನನ್ನು, **ವಿಜಿತ್ಯ** = ಗೆದ್ದು, **ರಣೇ** = ಯುದ್ಧದಲ್ಲಿ, **ಪಾರ್ಥವರೂಥಿನೀಂ** = ಪಾಂಡವರ ಸೈನ್ಯವನ್ನು, **ಜಘ್ನೇ** = ಕೊಂದನು.

**ತಾತ್ಪರ್ಯ** :- ಕರ್ಣನು ಸಹದೇವನನ್ನು ಕೊಲ್ಲಲು ಇಚ್ಛಿಸಲಿಲ್ಲ. ಏಕೆಂದರೆ ಅವನು ಕುಂತಿಗೆ ಮಾತುಕೊಟ್ಟಿದ್ದ. ಅರ್ಜುನನನ್ನು ಬಿಟ್ಟು ನಿನ್ನ ಯಾವ ಮಕ್ಕಳನ್ನೂ ಕೊಲ್ಲುವುದಿಲ್ಲ ಎಂದು. ಆ ಮಾತನ್ನು ನೆನಪಿಸಿಕೊಳ್ಳುತ್ತಾ ಸಹದೇವನನ್ನು ಗೆದ್ದು ಯುದ್ಧದಲ್ಲಿ ಪಾಂಡವರ ಸೈನ್ಯವನ್ನು ಕೊಲ್ಲಲಾರಂಭಿಸಿದನು.

**ತತೋ ದ್ರೌಣಿರ್ವಿವಿಧೈರ್ಬಾಣಸಂಘೈ-**
**ರ್ಜಘಾನ ಪಾರ್ಥಸ್ಯ ಚಮೂಂ ಸಮಂತತಃ ।**
**ಸಾ ಹನ್ಯಮಾನಾ ರಣಕೋವಿದೇನ**
**ನ ಶಂ ಲೇಭೇ ಮೃತ್ಯುನಾऽऽರ್ತಾ ಪ್ರಜೇವ ॥ ೨೩೭ ॥**

**ಅರ್ಥ** :- **ತತಃ** = ಅನಂತರ, **ದ್ರೌಣಿಃ** = ಅಶ್ವತ್ಥಾಮನು, **ವಿವಿಧೈಃ ಬಾಣಸಂಘೈಃ** = ನಾನಾ ವಿಧವಾದ ಬಾಣಸಮೂಹಗಳಿಂದ, **ಪಾರ್ಥಸ್ಯ ಚಮೂಂ** = ಪಾಂಡವ ಸೈನ್ಯವನ್ನು, **ಸಮಂತತಃ ಜಘಾನ** = ಎಲ್ಲಾ ಕಡೆಗೆ ಕೊಲ್ಲಲಾರಂಭಿಸಿದನು, **ರಣಕೋವಿದೇನ** = ಯುದ್ಧ ವಿಶಾರದನಾದ ಅಶ್ವತ್ಥಾಮನಿಂದ, **ಹನ್ಯಮಾನಾ** = ಹತವಾಗುತ್ತಿದ್ದ, **ಸಾ** = ಆ ಸೈನ್ಯವು,

**ಮೃತ್ಯುನಾ ಆರ್ತಾ** = ಮೃತ್ಯುವಿನಿಂದ ಪೀಡಿತನಾದ, **ಪ್ರಜೇವ** = ಜಂತುವಿನಂತೆ, **ಶಂ ನ ಲೇಭೇ** = ನೆಮ್ಮದಿಯನ್ನು ಹೊಂದಲಿಲ್ಲ.

**ತಾತ್ಪರ್ಯ** :- ಅಶ್ವತ್ಥಾಮ ನಾನಾ ವಿಧವಾದ ಬಾಣ ಸಮೂಹಗಳಿಂದ ಎಲ್ಲಾ ಕಡೆ ಪಾಂಡವರ ಸೈನ್ಯವನ್ನು ಸಂಹರಿಸಲಾರಂಭಿಸಿದ. ಯುದ್ಧ ನಿಪುಣನಾದ ಅಶ್ವತ್ಥಾಮನಿಂದ ಹತವಾಗುತ್ತಿದ್ದ ಆ ಸೈನ್ಯಕ್ಕೆ ಮೃತ್ಯುವಿನಿಂದ ಪೀಡಿತವಾದ ಆರ್ತ ಜಂತುವಿನಂತೆ ನೆಮ್ಮದಿಯಿಲ್ಲದಂತಾಯಿತು.

**ದೃಷ್ಟ್ವಾ ಸೇನಾಂ ದ್ರೌಣಿಬಲಾಭಿಭೂತಾಂ**
**ತಮಾಹ್ವಯಾಮಾಸ ಘಟೋತ್ಕಚೋ ಯುಧೇ ।**
**ದ್ರೌಣಿಸ್ತಮಾಹಾಽಲಮಲಂ ನ ವತ್ಸ**
**ಪುತ್ರಸ್ತಾತಂ ಯೋಧಯಸ್ವಾದ್ಯ ಮಾಂ ತ್ವಮ್ ॥ ೨೩೮ ॥**

**ಅರ್ಥ** :- **ದ್ರೌಣಿಬಲಾಭಿಭೂತಾಂ ಸೇನಾಂ** = ಅಶ್ವತ್ಥಾಮನ ಬಲದಿಂದ ನಾಶವಾಗುತ್ತಿದ್ದ, **ಸೇನಾಂ** = ಸೈನ್ಯವನ್ನು, **ದೃಷ್ಟ್ವಾ** = ನೋಡಿ, **ಘಟೋತ್ಕಚಃ** = ಘಟೋತ್ಕಚನು, **ತಂ** = ಆ ಅಶ್ವತ್ಥಾಮನನ್ನು, **ಯುಧೇ ಆಹ್ವಯಾಮಾಸ** = ಯುದ್ಧಕ್ಕೆ ಆಹ್ವಾನಿಸಿದನು, **ದ್ರೌಣಿಃ** = ಅಶ್ವತ್ಥಾಮನು, **ತಂ** = ಆ ಘಟೋತ್ಕಚನನ್ನು ಕುರಿತು, **ಆಹ** = ಹೇಳಿದನು, **ವತ್ಸ** = ಮಗುವೇ!, **ಅಲಂ ಅಲಂ** = ಬೇಡ ಬೇಡ, **ಪುತ್ರಃ ತ್ವಂ** = ಮಗನಾದ ನೀನು, **ತಾತಂ ಮಾಂ** = ತಂದೆಯಾದ ನನ್ನೊಡನೆ, **ಅದ್ಯ ನ ಯೋಧಯಸ್ವ** = ಈಗ ಯುದ್ಧ ಮಾಡಿಸಬೇಡ.

**ತಾತ್ಪರ್ಯ** :- ಅಶ್ವತ್ಥಾಮನ ಬಲಕ್ಕೆ ಪಾಂಡವರ ಸೈನ್ಯ ನಾಶ ವಾಗುತ್ತಿದ್ದದ್ದನ್ನು ನೋಡಿ ಘಟೋತ್ಕಚ ಅಶ್ವತ್ಥಾಮನನ್ನು ಯುದ್ಧಕ್ಕೆ ಕರೆದ. ಆಗ ಅಶ್ವತ್ಥಾಮ ಹೇಳಿದ 'ಮಗು, ಬೇಡ ಬೇಡ, ಮಗ ತಂದೆಯೊಡನೆ ಯುದ್ಧ ಮಾಡಬಾರದು ಎಂದು.'

**ಇತ್ಯುಕ್ತ ಊಚೇ ನ ಪಿತಾ ಮಮ ತ್ವಂ**
**ಸಖಾ ಪಿತುರ್ಯದ್ಯಪಿ ಶತ್ರುಸಂಶ್ರಯಾತ್ ।**
**ಅರಿಶ್ಚ ಮೇಽಸೀತಿ ತಮಾಹ ಯದ್ಯರಿಂ**
**ಮಾಂ ಮನ್ಯಸೇ ತದ್ವದಹಂ ಕರೋಮಿ ತೇ ॥ ೨೩೯ ॥**

**ಅರ್ಥ** :- **ಇತಿ** = ಈ ರೀತಿಯಾಗಿ, **ಉಕ್ತಃ** = ಹೇಳಲ್ಪಟ್ಟ ಘಟೋತ್ಕಚನು, **ತ್ವಂ** = ನೀನು, **ಮಮ** = ನನ್ನ, **ಪಿತಾ ನ** = ತಂದೆಯಲ್ಲ, **ಪಿತುಃ ಸಖಾ** = ತಂದೆಯ ಸ್ನೇಹಿತನು, **ಯದ್ಯಪಿ** = ನನ್ನ ತಂದೆಯ ಸ್ನೇಹಿತನಾಗಿದ್ದರೂ, **ಶತ್ರು ಸಂಶ್ರಯಾತ್** = ಶತ್ರು ಪಕ್ಷದಲ್ಲಿರುವುದರಿಂದ, **ಮೇ** = ನನಗೆ, **ಅರಿಶ್ಚ ಅಪಿ** = ಶತ್ರುವೂ ಆಗಿರುವಿ, **ಇತಿ** = ಎಂದು, **ಊಚೇ** = ಹೇಳಿದನು, **ತಂ** = ಆ ಘಟೋತ್ಕಚನನ್ನು ಕುರಿತು, **ಯದಿ** = ಒಂದುವೇಳೆ, **ಮಾಂ** = ನನ್ನನ್ನು, **ಅರಿಂ ಮನ್ಯಸೇ** = ಶತ್ರುವನ್ನಾಗಿ ತಿಳಿಯುವಿಯಾದರೆ, **ಅಹಂ** = ನಾನು, **ತೇ** = ನಿನಗೆ, **ತದ್ವತ್ ಕರೋಮಿ** = ಶತ್ರುವಿನಂತೆ ಮಾಡುತ್ತೇನೆ ಎಂದು, **ಆಹ** = ಅಶ್ವತ್ಥಾಮ ಹೇಳಿದನು.

**ತಾತ್ಪರ್ಯ** :- ಅಶ್ವತ್ಥಾಮ ಹೀಗೆ ಹೇಳಿದಾಗ ಘಟೋತ್ಕಚ ನುಡಿದ. ನೀನು ನನ್ನ ತಂದೆಯಲ್ಲ. ನನ್ನ ತಂದೆಯ ಸ್ನೇಹಿತನೆನ್ನುವುದು ಸತ್ಯವೇ. ಆದರೆ ನೀನು ಈಗ ಶತ್ರುಪಕ್ಷಸ್ಥನಾದ್ದರಿಂದ ಶತ್ರುವೆ ಆಗಿರುವಿ ಎಂದು. ಆಗ ಅಶ್ವತ್ಥಾಮ ಹೇಳಿದ. ಒಂದುವೇಳೆ ನೀನು ನನ್ನನ್ನು ಶತ್ರುವೆಂದು ತಿಳಿಯುವಿಯಾದರೆ ನಿನ್ನೊಡನೆ ಶತ್ರುವಿನಂತೆಯೇ ವರ್ತಿಸುತ್ತೇನೆ ಎಂದು.

**ಇತ್ಯೂಚಿವಾನ್ ಶಕ್ರಧನುಃಪ್ರಕಾಶಂ**
**ವಿಷ್ಫಾರ್ಯ ಚಾಪಂ ಪ್ರಕಿರನ್ ಶರೌಘಾನ್ ।**
**ಅಭ್ಯಾಗಮದ್ ರಾಕ್ಷಸಮುಗ್ರವೇಗಃ**
**ಸ್ವಸೇನಯಾ ಸೋಽಪಿ ತಮಭ್ಯವರ್ತತ ॥ ೨೪೦ ॥**

**ಅರ್ಥ** :- **ಇತಿ** = ಈ ರೀತಿಯಾಗಿ, **ಊಚಿವಾನ್** = ಹೇಳತಕ್ಕವನಾಗಿ, **ಉಗ್ರವೇಗಃ** = ಭಯಂಕರ ವೇಗವುಳ್ಳ ಅಶ್ವತ್ಥಾಮನು, **ಶಕ್ರಧನುಃ ಪ್ರಕಾಶಂ** = ಇಂದ್ರ ಧನುಸ್ಸಿನಂತೆ ಪ್ರಕಾಶವುಳ್ಳ, **ಚಾಪಂ ವಿಷ್ಫಾರ್ಯ** = ಬಿಲ್ಲನ್ನು ಎರಿಸಿ, **ಶರೌಘಾನ್ ಪ್ರಕಿರನ್** = ಬಾಣಸಮೂಹಗಳನ್ನು ಸುರಿಸುತ್ತಾ, **ರಾಕ್ಷಸಂ ಅಭ್ಯಾಗಮತ್** = ಘಟೋತ್ಕಚನನ್ನು ಕುರಿತು ಬಂದನು, **ಸೋಽಪಿ** = ಘಟೋತ್ಕಚನೂ ಕೂಡ, **ಸ್ವಸೇನಯಾ** = ತನ್ನ ಸೇನೆಯೊಂದಿಗೆ, **ತಂ ಅಭ್ಯವರ್ತತ** = ಅಶ್ವತ್ಥಾಮನನ್ನು ಎದುರಿಸಿದ.

**ತಾತ್ಪರ್ಯ** :- ಅಶ್ವತ್ಥಾಮ ಈ ರೀತಿಯಾಗಿ ಹೇಳಿದಾಗ ಇಂದ್ರ ಧನುಸ್ಸಿನಂತೆ ಪ್ರಕಾಶಿಸುವ ಬಿಲ್ಲನ್ನು ಧರಿಸಿ ಬಾಣಸಮೂಹಗಳನ್ನು ಸುರಿಸುತ್ತಾ

ಭಯಂಕರ ವೇಗವುಳ್ಳವನಾಗಿ ಘಟೋತ್ಕಚನ ಬಳಿಗೆ ಬಂದನು. ಘಟೋತ್ಕಚನು ತನ್ನ ಸೇನೆಯೊಂದಿಗೆ ಅಶ್ವತ್ಥಾಮನನ್ನು ಎದುರಿಸಿದ.

**ಸ ರಕ್ಷಸಾಂ ಲಕ್ಷಸಮಾವೃತೋ ಬಲೀ**
**ನೃಭಿಶ್ಚ ವೀರೈರ್ಬಹುಭಿಃ ಸುಶಿಕ್ಷಿತೈಃ ।**
**ಅಕ್ಷೋಹಿಣೀಮಾತ್ರಬಲೇನ ರಾಕ್ಷಸಃ**
**ಸಂಕ್ಷೋಭಯಾಮಾಸ ಗುರೋಃ ಸುತಂ ಶರೈಃ ॥ ೨೪೧ ॥**

**ಅರ್ಥ** :- **ಬಲೀ ಸಃ ರಾಕ್ಷಸಃ** = ಬಲಿಷ್ಠನಾದ ಘಟೋತ್ಕಚನು, **ರಕ್ಷಸಾಂ ಲಕ್ಷಸಮಾವೃತಃ** = ಒಂದು ಲಕ್ಷ ರಾಕ್ಷಸರಿಂದ ಯುಕ್ತನಾಗಿ, **ಸುಶಿಕ್ಷಿತೈಃ** = ಚೆನ್ನಾಗಿ ಶಿಕ್ಷಿತರಾದ, **ಬಹುಭಿಃ ವೀರೈಃ ನೃಭಿಶ್ಚ** = ವೀರರಾದ ಜನರಿಂದಲೂ ಕೂಡಿದವನಾಗಿ, **ಅಕ್ಷೋಹಿಣೀಮಾತ್ರಬಲೇನ** = ಒಂದು ಅಕ್ಷೋಹಿಣೀ ಪರಿಮಾಣದ ಸೈನ್ಯದಿಂದ, **ಗುರೋಃ ಸುತಂ** = ಗುರುಗಳ ಮಗನಾದ ಅಶ್ವತ್ಥಾಮನನ್ನು , **ಶರೈಃ** = ಬಾಣಗಳಿಂದ, **ಸಂಕ್ಷೋಭಯಾಮಾಸ** = ಕ್ಷೋಭೆಗೊಳಿಸಿದ.

**ತಾತ್ಪರ್ಯ** :- ಬಲಿಷ್ಠನಾದ ಘಟೋತ್ಕಚ ಒಂದು ಲಕ್ಷ ರಾಕ್ಷಸರಿಂದ ಕೂಡಿದವನಾಗಿ ಯುದ್ಧ ವಿದ್ಯೆಯಲ್ಲಿ ಚೆನ್ನಾಗಿ ತರಬೇತಿ ಪಡೆದ ಬಹಳ ಮಂದಿ ಮನುಷ್ಯ ವೀರರಿಂದಲೂ ಕೂಡಿಕೊಂಡು ಒಟ್ಟು ಒಂದು ಅಕ್ಷೋಹಿಣೀ ಸೈನ್ಯದ ಜೊತೆಗೆ ಆವನು ಅಶ್ವತ್ಥಾಮನ್ನು ಬಾಣಗಳಿಂದ ಕ್ಷೋಭೆಗೊಳಿಸಿದ.

**ಸ ತೇನ ಬಾಣೈರ್ಬಹುಭಿಃ ಪ್ರಪೀಡಿತೋ**
**ವಿಭಿನ್ನಗಾತ್ರಃ ಕ್ಷತಜಾಪ್ಲುತಾಂಗಃ ।**
**ವ್ಯಾವೃತ್ಯ ನೇತ್ರೇ ಕುಪಿತೋ ಮಹದ್ ಧನು-**
**ರ್ವಿಷ್ಫಾರ್ಯ ಬಾಣೈ ರಜನೀಂ ಚಕಾರ ॥ ೨೪೨ ॥**

**ಅರ್ಥ** :- **ತೇನ** = ಆ ಘಟೋತ್ಕಚನಿಂದ, **ಬಹುಭಿಃ ಬಾಣೈಃ** = ಬಹಳ ಬಾಣಗಳಿಂದ, **ಪ್ರಪೀಡಿತಃ** = ಪೀಡಿತನಾದ, **ಸಃ** = ಆ ಅಶ್ವತ್ಥಾಮನು, **ವಿಭಿನ್ನಗಾತ್ರಃ** = ಗಾಯಗೊಂಡ ಮೈಯುಳ್ಳವನಾಗಿ, **ಕ್ಷತಜಾಪ್ಲುತಾಂಗಃ** = ರಕ್ತದಿಂದ ಆರ್ದ್ರವಾದ ಅಂಗವುಳ್ಳವನಾಗಿ, **ಕುಪಿತಃ** = ಕೋಪಗೊಂಡವನಾಗಿ, **ನೇತ್ರೇ ವಾವೃತ್ಯ** = ಕಣ್ಣು ತಿರುಗಿಸಿ, **ಮಹದ್ ಧನುಃ** = ಮಹಾ ಧನುಸ್ಸನ್ನು,

**ವಿಷ್ಫಾರ್ಯ** = ಸೆಳೆದು, **ಬಾಣೈಃ** = ಬಾಣಗಳಿಂದ, **ರಜನೀಂ ಚಕಾರ** = ರಾತ್ರಿಯನ್ನು ನಿರ್ಮಿಸಿದ.

**ತಾತ್ಪರ್ಯ** :- ಘಟೋತ್ಕಚನ ಬಹಳ ಬಾಣಗಳಿಂದ ಬಹಳ ಪೀಡಿತನಾದ ಅಶ್ವತ್ಥಾಮ ಮೈಯೆಲ್ಲ ಗಾಯಗೊಂಡು ರಕ್ತದಿಂದ ತೊಯ್ದು ಕುಪಿತನಾಗಿ ಕಣ್ಣು ತಿರುಗಿಸುತ್ತಾ ಮಹಾಧನುಸ್ಸನ್ನು ಹಿಡಿದುಕೊಂಡು ಬಾಣಗಳಿಂದ ಕತ್ತಲನ್ನು ಸೃಷ್ಟಿಸಿದನು.

**ಸೋಽಕ್ಷೋಹಿಣೀಂ ತಾಂ ಕ್ಷಣಮಾತ್ರತಃ ಕ್ಷರನ್**
**ಮಹಾಶರಾಂಸ್ತಾನಪಿ ರಾಕ್ಷಸಾನ್ ಕ್ಷಯಮ್ ।**
**ನಿನಾಯ ಪುತ್ರಂ ಚ ಘಟೋತ್ಕಚಸ್ಯ**
**ನಿಷ್ಠ್ಯ ಪುರಾ ಯೋಽಂಜನವರ್ಮನಾಮಕಃ ॥ ೨೪೩ ॥**

**ಅರ್ಥ** :- **ಸಃ** = ಆ ಅಶ್ವತ್ಥಾಮನು, **ಮಹಾಶರಾನ್ ಕ್ಷರನ್** = ಮಹಾಬಾಣಗಳನ್ನು ಎಸೆಯುತ್ತಾ, **ಕ್ಷಣಮಾತ್ರತಃ** = ಒಂದು ಕ್ಷಣದಲ್ಲಿ, **ತಾಂ ಅಕ್ಷೋಹಿಣೀಂ** = ಆ ಅಕ್ಷೋಹಿಣೀ ಸೈನ್ಯವನ್ನು, **ತಾನ್ ರಾಕ್ಷಸಾನಪಿ** = ಆ ರಾಕ್ಷಸರನ್ನೂ ಕೂಡ, **ಕ್ಷಯಂ ನಿನಾಯ** = ನಾಶಗೊಳಿಸಿದನು, **ಪುರಾ** = ಹಿಂದೆ, **ಯಃ** = ಯಾರು, **ಅಂಜನವರ್ಮನಾಮಕಃ** = ಅಂಜನ ವರ್ಮನಾಗಿದ್ದನೋ ಅಂತಹ, **ಘಟೋತ್ಕಚಸ್ಯ ಪುತ್ರಂ ನಿಷ್ಠ್ಯಂ ಚ** = ಘಟೋತ್ಕಚನ ಮಗನಾದ ನಿಷ್ಠ್ಯನನ್ನೂ, **ಕ್ಷಯಂ ನಿನಾಯ** = ಕೊಂದನು.

**ತಾತ್ಪರ್ಯ** :- ಆ ಅಶ್ವತ್ಥಾಮ ಮಹಾಬಾಣಗಳನ್ನು ಎಸೆಯುತ್ತಾ ಒಂದು ಕ್ಷಣದಲ್ಲಿ ಆ ಅಕ್ಷೋಹಿಣೀ ಸೈನ್ಯವನ್ನು ಆ ರಾಕ್ಷಸರನ್ನೂ ಕೂಡ ನಾಶಪಡಿಸಿದ. ಘಟೋತ್ಕಚನ ಮಗನಾದ ಹಿಂದೆ ಅಂಜನವರ್ಮನಾಗಿದ್ದ ನಿಷ್ಠ್ಯನನ್ನೂ ಕೊಂದನು.

**ನಿರೀಕ್ಷ್ಯ ಸೇನಾಂ ಸ್ವಸುತಂ ಚ ಪಾತಿತಂ**
**ಘಟೋತ್ಕಚೋ ದ್ರೋಣಸುತಂ ಶರೇಣ ।**
**ವಿವ್ಯಾಧ ಗಾಢಂ ಸ ತು ವಿಹ್ವಲೋ ಧ್ವಜಂ**
**ಸಮಾಶ್ರಿತಶ್ಚಾಽಶು ಸಸಂಜ್ಞಕೋಽಭವತ್ ॥ ೨೪೪ ॥**

**ಅರ್ಥ** :- **ಸೇನಾಂ** = ಸೈನ್ಯವನ್ನು, **ಪಾತಿತಂ ಸ್ವಸುತಂ ಚ** = ಬೀಳಿಸಲ್ಪಟ್ಟ ತನ್ನ ಮಗನನ್ನೂ, **ನಿರೀಕ್ಷ್ಯ** = ನೋಡಿ, **ಘಟೋತ್ಕಚಃ** = ಘಟೋತ್ಕಚನು, **ದ್ರೋಣಸುತಂ** = ಅಶ್ವತ್ಥಾಮನನ್ನು, **ಶರೇಣ** = ಬಾಣದಿಂದ, **ಗಾಢಂ ವಿವ್ಯಾಧ** = ತೀವ್ರವಾಗಿ ಗಾಯಗೊಳಿಸಿದ, **ಸತು** = ಆ ಅಶ್ವತ್ಥಾಮನಾದರೂ, **ವಿಹ್ವಲಃ** = ಕಳವಳಗೊಂಡವನಾಗಿ, **ಧ್ವಜಂ ಸಮಾಶ್ರಿತಃ** = ಧ್ವಜವನ್ನು ಆಶ್ರಯಿಸಿದವನಾಗಿ, **ಆಶು** = ಬೇಗನೇ, **ಸಸಂಜ್ಞಕೋಽಭವತ್** = ಚೇತರಿಸಿಕೊಂಡನು.

**ತಾತ್ಪರ್ಯ** :- ಸೈನ್ಯವೂ ಮತ್ತು ತನ್ನ ಮಗನೂ ನಾಶ ಹೊಂದಿದ್ದನ್ನು ನೋಡಿ ಘಟೋತ್ಕಚ ಅಶ್ವತ್ಥಾಮನನ್ನು ಬಾಣದಿಂದ ಬಲವಾಗಿ ಹೊಡೆದ. ಅಶ್ವತ್ಥಾಮ ಬಹಳ ವಿಹ್ವಲವಾಗಿ ಧ್ವಜವನ್ನು ಆಶ್ರಯಿಸಿ ಬೇಗನೇ ಚೇತರಿಸಿಕೊಂಡ.

**ಉತ್ಥಾಯ ಬಾಣಂ ಯಮದಂಡಕಲ್ಪಂ**
**ಸಂಧಾಯ ಚಾಪೇ ಪ್ರವಿಕೃಷ್ಯ ರಾಕ್ಷಸೇ ।**
**ಮುಮೋಚ ತೇನಾಭಿಹತಃ ಪಪಾತ**
**ವಿನಷ್ಟಸಂಜ್ಞಃ ಸ್ವರಥೇ ಘಟೋತ್ಕಚಃ ॥ ೨೪೫ ॥**

**ಅರ್ಥ** :- (ಸಃ = ಆ ಅಶ್ವತ್ಥಾಮನು), **ಉತ್ಥಾಯ** = ಎದ್ದು, **ಯಮದಂಡಕಲ್ಪಂ** = ಯಮದಂಡಕ್ಕೆ ಸಮಾನವಾದ, **ಬಾಣಂ** = ಬಾಣವನ್ನು, **ಚಾಪೇ ಸಂಧಾಯ** = ಬಿಲ್ಲಿನಲ್ಲಿ ಹೂಡಿ, **ಪ್ರವಿಕೃಷ್ಯ** = ಎಳೆದು, **ರಾಕ್ಷಸೇ ಮುಮೋಚ** = ಘಟೋತ್ಕಚನ ಮೇಲೆ ಎಸೆದನು, **ತೇನ** = ಆ ಬಾಣದಿಂದ, **ಅಭಿಹತಃ** = ಹೊಡೆಯಲ್ಪಟ್ಟ, **ಘಟೋತ್ಕಚಃ** = ಘಟೋತ್ಕಚನು, **ವಿನಷ್ಟಸಂಜ್ಞಃ** = ಎಚ್ಚರ ತಪ್ಪಿದವನಾಗಿ, **ಸ್ವರಥೇ** = ತನ್ನ ರಥದಲ್ಲಿ, **ಪಪಾತ** = ಬಿದ್ದನು.

**ತಾತ್ಪರ್ಯ** :- ಅಶ್ವತ್ಥಾಮ ಎದ್ದು ಯಮದಂಡಕ್ಕೆ ಸಮಾನವಾದ ಬಾಣವನ್ನು ಬಿಲ್ಲಿನಲ್ಲಿ ಹೂಡಿ ಚೆನ್ನಾಗಿ ಎಳೆದು ಘಟೋತ್ಕಚನಿಗೆ ಎಸೆದ. ಆ ಬಾಣದ ಏಟಿಗೆ ಘಟೋತ್ಕಚ ಎಚ್ಚರತಪ್ಪಿ ತನ್ನ ರಥದಲ್ಲಿ ಬಿದ್ದು ಬಿಟ್ಟ.

**ವಿಮೂರ್ಛಿತಂ ಸಾರಥಿರಸ್ಯ ದೂರಂ**
**ನಿನಾಯ ಯುದ್ಧಾಜ್ಜಗತೋ ವಿಪಶ್ಯತಃ ।**

**ದ್ರೌಣಿಶ್ಚ ಸೇನಾಂ ನಿಶಿ ತೈಃ ಶರೋತ್ತಮೈ-**
**ರ್ವ್ಯದ್ರಾವಯತ್ ಪಾಂಡವಸೋಮಕಾನಾಮ್ ॥ ೨೪೬ ॥**

**ಅರ್ಥ :- ವಿಮೂರ್ಛಿತಂ** = ಮೂರ್ಛಿತನಾದ ಘಟೋತ್ಕಚನನ್ನು, **ಅಭಿಪಶ್ಯತಃ ಜಗತಃ** = ಲೋಕವೆಲ್ಲಾ ನೋಡುತ್ತಿದ್ದಂತೆಯೇ, **ಅಸ್ಯ ಸಾರಥಿಃ** = ಈ ಘಟೋತ್ಕಚನ ಸಾರಥಿಯು, **ರಣಾತ್** = ಯುದ್ಧದ ಸ್ಥಳದಿಂದ, **ದೂರಂ ನಿನಾಯ** = ದೂರಕ್ಕೊಯ್ದು, **ದ್ರೌಣಿಶ್ಚ** = ಅಶ್ವತ್ಥಾಮನೂ, **ನಿಶಿತೈಃ ಶರೋತ್ತಮೈಃ** = ಹರಿತವಾದ ಶ್ರೇಷ್ಠ ಬಾಣಗಳಿಂದ, **ಪಾಂಡವ ಸೋಮಕಾನಾಂ** = ಪಾಂಡವರ ಮತ್ತು ಪಾಂಚಾಲರ, **ಸೇನಾಂ** = ಸೇನೆಯನ್ನು, **ವ್ಯದ್ರಾವಯತ್** = ಓಡಿಸಿದ.

**ತಾತ್ಪರ್ಯ :-** ಮೂರ್ಛೆಗೊಂಡ ಘಟೋತ್ಕಚನನ್ನು ಜನರೆಲ್ಲಾ ನೋಡುತ್ತಿರುವಾಗಲೇ ಅವನ ಸಾರಥಿ ರಣರಂಗದಿಂದ ದೂರಕ್ಕೊಯ್ದ. ಅಶ್ವತ್ಥಾಮ ಹರಿತವಾದ ಬಾಣಗಳಿಂದ ಪಾಂಡವರ ಮತ್ತು ಪಾಂಚಾಲರ ಸೈನ್ಯವನ್ನು ಓಡಿಸಿದ.

**ಸಂಜ್ಞಾಮವಾಪ್ಯಾಥ ಘಟೋತ್ಕಚೋಽಪಿ**
**ಕ್ರುದ್ಧೋಽವಿಶತ್ ಕೌರವಸೈನ್ಯಮಾಶು ।**
**ವಿದ್ರಾವಯಾಮಾಸ ಸ ಬಾಣವರ್ಷೈಃ**
**ಪ್ರಕಂಪಯಾಮಾಸ ಮಹಾರಥಾಂಸ್ತಥಾ ॥ ೨೪೭ ॥**

**ಅರ್ಥ :- ಘಟೋತ್ಕಚೋಽಪಿ** = ಘಟೋತ್ಕಚನೂ ಕೂಡ, **ಸಂಜ್ಞಾಂ ಅವಾಪ್ಯ** = ಎಚ್ಚರಗೊಂಡು, **ಅಥ** = ಅನಂತರ, **ಕ್ರುದ್ಧಃ** = ಕೋಪಗೊಂಡವನಾಗಿ, **ಆಶು** = ಕೂಡಲೇ, **ಕೌರವಸೈನ್ಯಂ ಅವಿಶತ್** = ಕೌರವರ ಸೈನ್ಯವನ್ನು ಪ್ರವೇಶಿಸಿದ, **ಸಃ** = ಅವನು, **ಬಾಣವರ್ಷೈಃ** = ಬಾಣಗಳ ಮಳೆಗಳಿಂದ, **ವಿದ್ರಾವಯಾಮಾಸ** = ಓಡಿಸಿದ, **ತಥಾ** = ಹಾಗೆಯೇ, **ಮಹಾರಥಾನ್** = ಮಹಾರಥರನ್ನು, **ಪ್ರಕಮ್ಪಯಾಮಾಸ** = ನಡುಗಿಸಿದ.

**ತಾತ್ಪರ್ಯ :-** ಘಟೋತ್ಕಚ ಎಚ್ಚತ್ತು ಕೋಪಗೊಂಡು ಕೌರವರ ಸೈನ್ಯವನ್ನು ಕೂಡಲೇ ಪ್ರವೇಶಿಸಿದ. ಬಾಣಗಳ ಮಳೆಗಳಿಂದ ಓಡಿಸಿದ. ಹಾಗೆ ಮಹಾರಥರನ್ನು ನಡುಗಿಸಿದ.

**ತದೈವ ಪಾರ್ಥಂ ಪ್ರತಿ ಯೋದ್ಧುಮಾಗತಂ**
**ವೈಕರ್ತನಂ ವೀಕ್ಷ್ಯ ಜಗತ್ಪತಿರ್ಹರಿಃ ।**
**ಘಟೋತ್ಕಚಂ ಪ್ರಾಹಿಣೋಚ್ಛಕ್ತಿಮುಗ್ರಾಂ**
**ತಸ್ಮಿನ್ ಮೋಕ್ತುಂ ಪಾರ್ಥರಕ್ಷಾರ್ಥಮೇವ ॥ ೨೪೮ ॥**

**ಅರ್ಥ** :- **ತದೈವ** = ಆವಾಗಲೇ, **ಪಾರ್ಥಂ ಪ್ರತಿಯೋದ್ಧುಂ** = ಅರ್ಜುನನೊಡನೆ ಹೋರಾಡಲು, **ಆಗತಂ** = ಬಂದಿದ್ದ, **ವೈಕರ್ತನಂ** = ಕರ್ಣನನ್ನು, **ವೀಕ್ಷ್ಯ** = ನೋಡಿ, **ಜಗತ್ಪತಿಃ ಹರಿಃ** = ಜಗದೊಡೆಯನಾದ ಶ್ರೀ ಕೃಷ್ಣನು, **ಪಾರ್ಥರಕ್ಷಾರ್ಥಮೇವ** = ಅರ್ಜುನನ ರಕ್ಷಣೆಗಾಗಿಯೇ, **ಉಗ್ರಾಂ ಶಕ್ತಿಂ** = ಉಗ್ರವಾದ ಶಕ್ತ್ಯಾಯುಧವನ್ನು, **ತಸ್ಮಿನ್ ಮೋಕ್ತುಂ** = ಘಟೋತ್ಕಚನಲ್ಲಿ ಬೀಳಿಸುವುದಕ್ಕೋಸ್ಕರ, **ಘಟೋತ್ಕಚಂ ಪ್ರಾಹಿಣೋತ್** = ಘಟೋತ್ಕಚನನ್ನು ಕಳಿಸಿದ.

**ತಾತ್ಪರ್ಯ** :- ಆಗಲೇ ಅರ್ಜುನನ ಜೊತೆಗೆ ಹೋರಾಡಲು ಬಂದಿದ್ದ ಕರ್ಣನನ್ನು ನೋಡಿ ಜಗದೊಡೆಯನಾದ ಶ್ರೀಕೃಷ್ಣ ಅರ್ಜುನನ ರಕ್ಷಣೆಗಾಗಿ ಉಗ್ರವಾದ ಶಕ್ತ್ಯಾಯುಧವನ್ನು ಘಟೋತ್ಕಚನಲ್ಲಿ ಬೀಳಿಸುವುದಕ್ಕೋಸ್ಕರ ಅವನನ್ನು ಕರ್ಣನ ಇದಿರಿಗೆ ಕಳಿಸಿದ.

**ಸ ಕರ್ಣಮಾಹೂಯ ಯುಯೋಧ ತೇನ**
**ತಸ್ಯಾನು ದುರ್ಯೋಧನಪೂರ್ವಕಾಶ್ಚ ಯೇ ।**
**ದ್ರೋಣೇನ ಚೈತಾನ್ ಸಮರೇ ಸ ಏಕೋ**
**ನಿವಾರಯಾಮಾಸ ಮಮರ್ದ ಚಾಧಿಕಮ್ ॥ ೨೪೯ ॥**

**ಅರ್ಥ** :- **ಸಃ** = ಆ ಘಟೋತ್ಕಚನು, **ಕರ್ಣಂ ಆಹೂಯ** = ಕರ್ಣನನ್ನು ಕರೆದು, **ತೇನ** = ಆ ಕರ್ಣನೊಡನೆ, **ಚ** = ಮತ್ತು, **ತಸ್ಯ** = ಅವನ, **ಅನು** = ಅನುಸರಿಸಿದ, **ಯೇ ದುರ್ಯೋಧನ ಪೂರ್ವಕಾಃ** = ಯಾವ ದುರ್ಯೋಧನ ಮೊದಲಾದವರಿದ್ದರೋ ಅವರೊಂದಿಗೆ, **ದ್ರೋಣೇನ ಚ** = ದ್ರೋಣನ ಜೊತೆಗೂ, **ಯುಯೋಧ** = ಯುದ್ಧ ಮಾಡಿದನು, **ಸಮರೇ** = ಯುದ್ಧದಲ್ಲಿ, **ಸ ಏಕಃ** = ಅವನೊಬ್ಬನು, **ಏತಾನ್** = ಅವರನ್ನು, **ನಿವಾರಯಾಮಾಸ** = ತಡೆದನು, **ಅಧಿಕಂ ಮಮರ್ದ ಚ** = ಬಹಳ ಪೀಡಿಸಿದನು.

**ತಾತ್ಪರ್ಯ :-** ಘಟೋತ್ಕಚ ಕರ್ಣನನ್ನು ಆಹ್ವಾನಿಸಿ ಅವನೊಡನೆ ಅವನ ಹಿಂದೆ ಬಂದಿದ್ದ ದುರ್ಯೋಧನ ಮೊದಲಾದವರೊಡನೆ ಮತ್ತು ದ್ರೋಣರೊಡನೆ ಹೋರಾಡಿದ. ಯುದ್ಧದಲ್ಲಿ ಇವನೊಬ್ಬನೇ ಅವರೆಲ್ಲರನ್ನೂ ತಡೆದ ಮತ್ತು ಬಹಳ ಪೀಡಿಸಿದ.

**ತೇ ಬಾಧ್ಯಮಾನಾ ಬಹುಶೋ ಬಲೀಯಸಾ**
**ಕರ್ಣಂ ಪುರೋಧಾಯ ತಮಭ್ಯಯೋಧಯನ್ ।**
**ನ ವಿವ್ಯಥೇ ತತ್ರ ರಣೇ ಸ ಕರ್ಣಃ**
**ಸ್ವವೀರ್ಯಮಾಸ್ಥಾಯ ಮಹಾಸ್ತ್ರವೇತ್ತಾ ॥ ೨೫೦ ॥**

**ಅರ್ಥ :- ಬಲೀಯಸಾ** = ಬಲಿಷ್ಠನಾದ ಘಟೋತ್ಕಚನಿಂದ, **ಬಹುಶಃ** = ಬಹಳ, **ಬಾಧ್ಯಮಾನಾಃ ತೇ** = ಪೀಡಿತರಾದ ದುರ್ಯೋಧನ ಮೊದಲಾದವರು, **ತಂ ಕರ್ಣಂ ಪುರೋಧಾಯ** = ಆ ಕರ್ಣನನ್ನು ಮುಂದೆ ಮಾಡಿಕೊಂಡು, **ಅಭ್ಯಯೋಧಯನ್** = ಹೋರಾಡಿದರು. **ಮಹಾಸ್ತ್ರವೇತ್ತಾ ಸಃ ಕರ್ಣಃ** = ಮಹಾ ಅಸ್ತ್ರಜ್ಞಾನಿಯಾದ ಕರ್ಣನು, **ಸ್ವವೀರ್ಯಂ ಆಸ್ಥಾಯ** = ತನ್ನ ಪರಾಕ್ರಮವನ್ನು ತೋರಿಸಿ, **ತತ್ರ ರಣೇ** = ಆ ಯುದ್ಧದಲ್ಲಿ, **ನ ವಿವ್ಯಥೇ** = ವ್ಯಥಿತನಾಗಲಿಲ್ಲ.

**ತಾತ್ಪರ್ಯ :-** ಬಲಿಷ್ಠನಾದ ಘಟೋತ್ಕಚನಿಂದ ಬಹಳ ಪೀಡಿತನಾದ ದುರ್ಯೋಧನ ಮೊದಲಾದವರು ಕರ್ಣನನ್ನು ಮುಂದೆ ಮಾಡಿಕೊಂಡು ಹೋರಾಡಿದರು. ಮಹಾ ಅಸ್ತ್ರಜ್ಞನಾದ ಕರ್ಣ ತನ್ನ ಪರಾಕ್ರಮವನ್ನು ತೋರಿಸುತ್ತಾ ಯುದ್ಧದಲ್ಲಿ ವ್ಯಥಿತನಾಗದೆ ನಿಂತ.

**ನಿವಾರಯಾಮಾಸ ಗುರೋಃ ಸುತಂ ತದಾ**
**ಭೀಮಸ್ತ್ರಿಗರ್ತಾನ್ ಶತಮನ್ಯುನಂದನಃ ।**
**ಅಲಂಬಲೋ ನಾಮ ತದೈವ ರಾಕ್ಷಸಃ**
**ಸಮಾಗಮದ್ ಭೀಮಸುತಂ ನಿಹಂತುಮ್ ॥ ೨೫೧ ॥**

**ಅರ್ಥ :- ತದಾ** = ಆವಾಗ, **ಭೀಮಃ** = ಭೀಮನು, **ಗುರೋಃ ಸುತಂ** = ಅಶ್ವತ್ಥಾಮನನ್ನು, **ನಿವಾರಯಾಮಾಸ** = ತಡೆದನು, **ಶತಮನ್ಯುನಂದನಃ** = ಇಂದ್ರಸುತನಾದ ಅರ್ಜುನನು, **ತ್ರಿಗರ್ತಾನ್** = ತ್ರಿಗರ್ತರನ್ನು,

**ನಿವಾರಯಾಮಾಸ** = ತಡೆದನು, **ತದ್ವೈವ** = ಆವಾಗಲೇನೇ, **ಅಲಂಬಲೋ ನಾಮ ರಾಕ್ಷಸಃ** = ಅಲಂಬಲನೆಂದು ಪ್ರಸಿದ್ಧನಾದ ರಾಕ್ಷಸನು, **ಭೀಮಸುತಂ** = ಘಟೋತ್ಕಚನನ್ನು, **ನಿಹಂತುಂ** = ಕೊಲ್ಲಲು, **ಸಮಾಗಮತ್** = ಬಂದನು.

**ತಾತ್ಪರ್ಯ** :- ಆಗ ಭೀಮನು ಅಶ್ವತ್ಥಾಮನನ್ನು ತಡೆದ. ಅರ್ಜುನ ತ್ರಿಗರ್ತರನ್ನು ತಡೆದ. ಆವಾಗಲೇ ಅಲಂಬಲನೆಂದು ಪ್ರಸಿದ್ಧನಾದ ರಾಕ್ಷಸನು ಘಟೋತ್ಕಚನನ್ನು ಕೊಲ್ಲಲು ಬಂದನು.

**ಯುದ್ಧ್ವಾ ಪ್ರಗೃಹ್ಯೈನಮಥೋ ನಿಪಾತ್ಯ**
**ಘಟೋತ್ಕಚೋ ಭೂಮಿತಳೇಽಸಿನಾಽಸ್ಯ ।**
**ಉತ್ಕೃತ್ಯ ಶೀರ್ಷಂ ತು ಸುಯೋಧನೇಽಕ್ಷಿಪದ್**
**ವಿಷೇದುರತ್ರಾಖಿಲಭೂಮಿಪಾಲಾಃ ॥ ೨೫೨ ॥**

**ಅರ್ಥ** :- **ಅಥೋ** = ಅನಂತರ, **ಘಟೋತ್ಕಚಃ** = ಘಟೋತ್ಕಚನು, **ಯುದ್ಧ್ವಾ** = ಯುದ್ಧ ಮಾಡಿ, **ಏನಂ** = ಈ ಅಲಂಬಲನನ್ನು, **ಪ್ರಗೃಹ್ಯ** = ಹಿಡಿದುಕೊಂಡು, **ಭೂಮಿತಲೇ ನಿಪಾತ್ಯ** = ನೆಲದ ಮೇಲೆ ಕೆಡವಿ, **ಅಸಿನಾ** = ಖಡ್ಗದಿಂದ, **ಅಸ್ಯ** = ಇವನ, **ಶೀರ್ಷಂ** = ತಲೆಯನ್ನು, **ಉತ್ಕೃತ್ಯ** = ಕತ್ತರಿಸಿ, **ಸುಯೋಧನೇ ಅಕ್ಷಿಪತ್** = ದುರ್ಯೋಧನನಿಗೆ ಎಸೆದ, **ಅತ್ರ** = ಈ ಸಮಯದಲ್ಲಿ, **ಅಖಿಲಭೂಮಿಪಾಲಾಃ** = ಎಲ್ಲಾ ರಾಜರುಗಳು, **ವಿಷೇದುಃ** = ಕಳವಳಗೊಂಡರು.

**ತಾತ್ಪರ್ಯ** :- ಅಲಂಬಲನೊಡನೆ ಘಟೋತ್ಕಚ ಯುದ್ಧ ಮಾಡಿ ಅವನನ್ನು ನೆಲದ ಮೇಲೆ ಹಾಕಿ ಖಡ್ಗದಿಂದ ಅವನ ಶಿರಶ್ಛೇದ ಮಾಡಿ ಆ ತಲೆಯಿಂದ ದುರ್ಯೋಧನನಿಗೆ ಹೊಡೆದ. ಆವಾಗ ಎಲ್ಲಾ ರಾಜರೂ ಕಳವಳಗೊಂಡರು.

**ಅಲಾಯುಧೋಽಥಾಽಗಮದುಗ್ರವೀರ್ಯೋ**
**ನರಾಶನಸ್ತಂ ಸ ಘಟೋತ್ಕಚೋಽಭ್ಯಯಾತ್ ।**
**ಯುದ್ಧ್ವಾ ಮುಹೂರ್ತಂ ಸ ತು ತೇನ ಭೂಮೌ**
**ನಿಪಾತ್ಯ ತಂ ಯಜ್ಞಪಶುಂ ಚಕಾರ ॥ ೨೫೩ ॥**

**ಅರ್ಥ** :- **ಅಥ** = ಅನಂತರ, **ಉಗ್ರವೀರ್ಯಃ** = ಉಗ್ರಪರಾಕ್ರಮ ಶಾಲಿಯಾದ, **ನರಾಶನಃ ಅಲಾಯುಧಃ** = ನರಭಕ್ಷಕನಾದ ಅಲಾಯುಧನೆಂಬ ರಾಕ್ಷಸನು, **ಆಗಮತ್** = ಬಂದನು, **ಸಃ ಘಟೋತ್ಕಚಃ** = ಆ ಘಟೋತ್ಕಚನು, **ತಂ** = ಅವನನ್ನು, **ಅಭ್ಯಯಾತ್** = ಇದಿರಿಸದ, **ಸಃ** = ಆ ಘಟೋತ್ಕಚನು, **ತೇನ** = ಅವನೊಡನೆ, **ಮುಹೂರ್ತಂ ಯುದ್ಧ್ವಾ** = ಒಂದು ಕ್ಷಣಕಾಲ ಯುದ್ಧ ಮಾಡಿ, **ತಂ** = ಅವನನ್ನು, **ಭೂಮೌ ನಿಪಾತ್ಯ** = ನೆಲದ ಮೇಲೆ ಬೀಳಿಸಿ, **ಯಜ್ಞಪಶುಂ ಚಕಾರ** = ಯಜ್ಞಪಶುವನ್ನಾಗಿ ಮಾಡಿದ.

**ತಾತ್ಪರ್ಯ** :- ಬಳಿಕ ಉಗ್ರಪರಾಕ್ರಮಶಾಲಿಯಾದ ಅಲಂಬುಸನೆಂಬ ನರಭಕ್ಷಕ ರಾಕ್ಷಸನು ಬಂದ. ಘಟೋತ್ಕಚ ಅವನನ್ನೂ ಇದಿರಿಸಿದ.ಅವನೊಡನೆ ಒಂದು ಕ್ಷಣಕಾಲ ಯುದ್ಧ ಮಾಡಿ ಅವನನ್ನು ನೆಲದ ಮೇಲೆ ಕೆಡವಿ ಯಜ್ಞಪಶುವನ್ನಾಗಿ ಮಾಡಿದ.

**ಅಥಾಸ್ಯ ಶಿರ ಉದ್ಧೃತ್ಯ ಕ್ರೋಧಾದ್ ದುರ್ಯೋಧನೋರಸಿ ।**
**ಚಿಕ್ಷೇಪ ತೇನ ಸಂಭ್ರಾಂತಾಃ ಸರ್ವೇ ದುರ್ಯೋಧನಾದಯಃ ॥ ೨೫೪ ॥**

**ಅರ್ಥ** :- **ಅಥ** = ಅನಂತರ, (ಸಃ = ಆ ಘಟೋತ್ಕಚನು), **ಅಸ್ಯ ಶಿರಃ** = ಈ ಅಲಾಯುಧನ ಶಿರಸ್ಸನ್ನು, **ಉದ್ಧೃತ್ಯ** = ಕತ್ತರಿಸಿ, **ಕ್ರೋಧಾತ್** = ಕೋಪದಿಂದ, **ದುರ್ಯೋಧನೋರಸಿ ಚಿಕ್ಷೇಪ** = ದುರ್ಯೋಧನನ ಎದೆಗೆ ಎಸೆದನು, **ತೇನ** = ಅದರಿಂದ, **ದುರ್ಯೋಧನಾದಯಃ ಸರ್ವೇ** = ದುರ್ಯೋಧನ ಮೊದಲಾದವರೆಲ್ಲರೂ, **ಸಂಭ್ರಾಂತಾಃ** = ವ್ಯಾಕುಲಿತರಾದರು.

**ತಾತ್ಪರ್ಯ** :- ಘಟೋತ್ಕಚ ಅಲಾಯುಧನ ಶಿರಸ್ಸನ್ನು ಕತ್ತರಿಸಿ ಕೋಪದಿಂದ ದುರ್ಯೋಧನನ ಎದೆಗೆ ಎಸೆದನು. ಅದರಿಂದ ದುರ್ಯೋಧನ ಮೊದಲಾದವರೆಲ್ಲರೂ ಕಳವಳಗೊಂಡರು.

**ಘಟೋತ್ಕಚಬಲಖ್ಯಾತ್ಯೈ ಸಮರ್ಥೇನಾಪಿ ಯೋ ರಣೇ ।**
**ನ ಹತೋ ಭೀಮಸೇನೇನ ಹತೇಽಸ್ಮಿನ್ ಭೈಮಸೇನಿನಾ ।**
**ಸರ್ವೇ ಸಂಚೋದಯಾಮಾಸುಃ ಕರ್ಣಂ ಶಕ್ತಿವಿಮೋಕ್ಷಣೇ ॥ ೨೫೫ ॥**

**ಅಸ್ಮಿನ್ ಹತೇ ಹತಂ ಸರ್ವಂ ಕಿಂ ನಃ ಪಾರ್ಥಃ ಕರಿಷ್ಯತಿ ॥ ೨೫೬ ॥**

**ಅರ್ಥ** :- **ಸಮರ್ಥೇನ** = ಸಮರ್ಥನಾದ, **ಭೀಮಸೇನೇನ** = ಭೀಮನಿಂದ, **ಘಟೋತ್ಕಚಬಲಖ್ಯಾತ್ಯೈ** = ಘಟೋತ್ಕಚನ ಬಲವನ್ನು ತಿಳಿಸುವದಕ್ಕೋಸ್ಕರ, **ರಣೇ** = ಯುದ್ಧದಲ್ಲಿ, **ಯಃ** = ಅಲಾಯುಧನು, **ನ ಹತಃ** = ಕೊಲ್ಲಲ್ಪಡಲಿಲ್ಲವೋ, **ಅಸ್ಮಿನ್** = ಅಂತಹ ಅಲಾಯುಧನು, **ಭೈಮಸೇನಿನಾ ಹತೇ** = ಘಟೋತ್ಕಚನಿಂದ ಕೊಲ್ಲಲ್ಪಡುತ್ತಿರಲು, **ಸರ್ವೇ** = ಎಲ್ಲರೂ, **ಶಕ್ತಿವಿಮೋಕ್ಷಣೇ** = ಶಕ್ತ್ಯಾಯುಧದ ಪ್ರಯೋಗ ಮಾಡುವುದರಲ್ಲಿ, **ಕರ್ಣಂ** = ಕರ್ಣನನ್ನು, **ಸಂಚೋದಯಾಮಾಸುಃ** = ಒತ್ತಾಯಿಸಿದರು. **ಅಸ್ಮಿನ್** = ಈ ಘಟೋತ್ಕಚನು, **ಹತೇ** = ಹತನಾಗುತ್ತಿರಲು, **ಸರ್ವಂ ಹತಂ** = ಎಲ್ಲವೂ ಹತವಾದಂತೆ, **ಪಾರ್ಥಃ** = ಅರ್ಜುನನು, **ನಃ** = ನಮಗೆ, **ಕಿಂಕರಿಷ್ಯತಿ** = ಏನು ಮಾಡುತ್ತಾನೆ.

**ತಾತ್ಪರ್ಯ** :- ಭೀಮ ಅಲಾಯುಧನನ್ನು ಕೊಲ್ಲಲು ಸಮರ್ಥನಾಗಿದ್ದರೂ ಘಟೋತ್ಕಚನ ಬಲ ಹೀಗೆ ಎಲ್ಲರಿಗೂ ತಿಳಿಯಲೆಂದೇ ಕೊಲ್ಲದೆ ಬಿಟ್ಟ. ಘಟೋತ್ಕಚ ಅವನನ್ನು ಕೊಂದಾಗ ಎಲ್ಲರೂ ಶಕ್ತ್ಯಾಯುಧ ಪ್ರಯೋಗಿಸಲು ಕರ್ಣನನ್ನು ಒತ್ತಾಯಿಸಿದರು. 'ಈತನೊಬ್ಬ ಹತನಾದರೂ ಎಲ್ಲರೂ ಹತರಾದಂತೆ. ಅನಂತರ ಅರ್ಜುನ ನಮ್ಮನ್ನೇನು ಮಾಡಬಲ್ಲ?' ಎಂಬುದಾಗಿ.

**ಏವಂ ಸಂಚೋದ್ಯಮಾನಃ ಸ ಧಾರ್ತರಾಷ್ಟ್ರೈಃ ಪುನಃಪುನಃ ।**
**ಹೈಡಿಂಬೇನಾರ್ದ್ಯಮಾನೈಸ್ತು ಸ್ವಯಂ ಚ ಭೃಶಪೀಡಿತಃ ।**
**ಆದತ್ತ ಶಕ್ತಿಂ ವಿಪುಲಾಂ ಪಾಕಶಾಸನಸಮ್ಮತಾಮ್ ॥ ೨೫೭ ॥**

**ಅರ್ಥ** :- **ಏವಂ** = ಈ ರೀತಿಯಾಗಿ, **ಹೈಡಿಂಬೇನ** = ಘಟೋತ್ಕಚನಿಂದ, **ಆರ್ದ್ಯಮಾನೈಃ** = ಪಿಡಿತರಾಗುತ್ತಿದ್ದ, **ಧಾರ್ತರಾಷ್ಟ್ರೈಃ** = ಕೌರವರಿಂದ, **ಪುನಃ ಪುನಃ** = ಮತ್ತೆ ಮತ್ತೆ, **ಸಂಚೋದ್ಯಮಾನಃ ಸಃ** = ಪ್ರೇರಿಸಲ್ಪಟ್ಟ ಕರ್ಣನು, **ಸ್ವಯಂ ಚ** = ತಾನೂ, **ಭೃಶಪೀಡಿತಃ** = ಬಹಳ ಪೀಡಿತನಾಗಿ, **ಪಾಕಶಾಸನ ಸಮ್ಮತಾಂ** = ಇಂದ್ರನ ಪ್ರೀತಿ ಪಾತ್ರವಾದ, **ವಿಪುಲಾಂ ಶಕ್ತಿಂ** = ಮಹತ್ತಾದ ಶಕ್ತ್ಯಾಯುಧವನ್ನು, **ಆದತ್ತ** = ತೆಗೆದುಕೊಂಡರು.

**ತಾತ್ಪರ್ಯ** :- ಹೀಗೆ ಘಟೋತ್ಕಚನಿಂದ ಪೀಡಿತರಾದ ಕೌರವರು ಮತ್ತೆ ಮತ್ತೆ ಒತ್ತಾಯಿಸಿದಾಗ, ತಾನೂ ಬಹಳ ಪೀಡಿತನಾದ್ದರಿಂದ ಇಂದ್ರನಿಗೆ ಇಷ್ಟವಾದ ಮಹತ್ತಾದ ಶಕ್ತ್ಯಾಯುಧವನ್ನು ಎತ್ತಿಕೊಂಡ.

**ತಾಮಂಬರಸ್ಥಾಯ ಘಟೋತ್ಕಚಾಯ**
**ಶೈಲೋಪಮಾಯಾತುಲವಿಕ್ರಮಾಯ ।**
**ಚಿಕ್ಷೇಪ ಮೃತ್ಯೋಃ ರಸನೋಪಮಾಮಲಂ**
**ಪ್ರಕಾಶಯಂತೀಂ ಪ್ರದಿಶೋ ದಿಶಶ್ಚ ॥ ೨೫೮ ॥**

**ಅರ್ಥ :- ಅತುಲವಿಕ್ರಮಾಯ** = ಅತುಲ ಪರಾಕ್ರಮವುಳ್ಳ, **ಅಂಬರಸ್ಥಾಯ** = ಆಕಾಶದಲ್ಲಿ ನಿಂತಿದ್ದ, **ಶೈಲೋಪಮಾಯ** = ಬೆಟ್ಟದಂತೆ ಇದ್ದ, **ಘಟೋತ್ಕಚಾಯ** = ಘಟೋತ್ಕಚನಿಗೆ, **ಸಃ** = ಆ ಕರ್ಣನು, **ಮೃತ್ಯೋಃ ರಸನೋಪಮಾಂ** = ಮೃತ್ಯುವಿನ ನಾಲಿಗೆಯಂತಿದ್ದ, **ಪ್ರದಿಶೋ ದಿಶಶ್ಚ** = ದಿಕ್ಕು ವಿದಿಕ್ಕುಗಳನ್ನೂ, **ಅಲಂ ಪ್ರಕಾಶಯಂತೀಂ** = ಚೆನ್ನಾಗಿ ಬೆಳಗಿಸುತ್ತಿದ್ದ, **ತಾಂ** = ಆ ಶಕ್ತ್ಯಾಯುಧವನ್ನು, **ಚಿಕ್ಷೇಪ** = ಎಸೆದನು.

**ತಾತ್ಪರ್ಯ :-** ಬಹಳ ಪರಾಕ್ರಮಶಾಲಿಯಾದ ಘಟೋತ್ಕಚ ಆಕಾಶದಲ್ಲಿ ನಿಂತಿದ್ದ. ಪರ್ವತದಂತೆ ಕಾಣುತ್ತಿದ್ದ ಆ ಘಟೋತ್ಕಚನ ಮೇಲೆ ಕರ್ಣನು ಮೃತ್ಯುವಿನ ನಾಲಿಗೆಯಂತಿದ್ದ ದಿಕ್ಕು ವಿದಿಕ್ಕುಗಳನ್ನು ಚೆನ್ನಾಗಿ ಪ್ರಕಾಶಿಸುತ್ತಿದ್ದ ಶಕ್ತ್ಯಾಯುಧವನ್ನು ಎಸೆದ.

**ನಿರ್ಭಿಣ್ಣವಕ್ಷಾಃ ಸ ತಯಾ ಪಪಾತ**
**ವಿಚೂರ್ಣಯನ್ ಶತ್ರುಬಲಂ ಹತೋಽಪಿ ।**
**ತಸ್ಮಿನ್ ಹತೇ ಜಹೃಷುರ್ಧಾರ್ತರಾಷ್ಟ್ರಾ**
**ಉಚ್ಚುಕ್ರುಶುರ್ದುಧುವುಶ್ಚಾಂಬರಾಣಿ ॥ ೨೫೯ ॥**

**ಅರ್ಥ :- ಸಃ** = ಆ ಘಟೋತ್ಕಚನು, **ತಯಾ** = ಆ ಶಕ್ತ್ಯಾಯುಧದಿಂದ, **ನಿರ್ಭಿಣ್ಣವಕ್ಷಾಃ** = ಸೀಳಲ್ಪಟ್ಟ ಎದೆಯುಳ್ಳವನಾಗಿ, **ಹತೋಽಪಿ** = ಹತನಾದರೂ ಕೂಡ, **ಶತ್ರುಬಲಂ** = ಶತ್ರುಸೈನ್ಯವನ್ನು, **ವಿಚೂರ್ಣಯನ್** = ಪುಡಿಮಾಡುತ್ತಾ, **ಪಪಾತ** = ಬಿದ್ದನು, **ತಸ್ಮಿನ್ ಹತೇ** = ಆ ಘಟೋತ್ಕಚ ಹತನಾದಾಗ, **ಧಾರ್ತರಾಷ್ಟ್ರಾಃ** = ಕೌರವರು, **ಜಹೃಷುಃ** = ಹರ್ಷಪಟ್ಟರು, **ಉಚ್ಚುಕ್ರುಶುಃ** = ಕೇಕೇ ಹಾಕಿದರು, **ಅಂಬರಾಣಿ ಚ ದುಧುವುಃ** = ವಸ್ತ್ರಗಳನ್ನು ಹಾರಿಸಿದರು.

**ಅರ್ಥ** :- **ಸಮರ್ಥೇನ** = ಸಮರ್ಥನಾದ, **ಭೀಮಸೇನೇನ** = ಭೀಮನಿಂದ, **ಘಟೋತ್ಕಚಬಲಖ್ಯಾತ್ಯೈ** = ಘಟೋತ್ಕಚನ ಬಲವನ್ನು ತಿಳಿಸುವದಕ್ಕೋಸ್ಕರ, **ರಣೇ** = ಯುದ್ಧದಲ್ಲಿ, **ಯಃ** = ಅಲಾಯುಧನು, **ನ ಹತಃ** = ಕೊಲ್ಲಲ್ಪಡಲಿಲ್ಲವೋ, **ಅಸ್ಮಿನ್** = ಅಂತಹ ಅಲಾಯುಧನು, **ಭೈಮಸೇನಿನಾ ಹತೇ** = ಘಟೋತ್ಕಚನಿಂದ ಕೊಲ್ಲಲ್ಪಡುತ್ತಿರಲು, **ಸರ್ವೇ** = ಎಲ್ಲರೂ, **ಶಕ್ತಿವಿಮೋಕ್ಷಣೇ** = ಶಕ್ತ್ಯಾಯುಧದ ಪ್ರಯೋಗ ಮಾಡುವುದರಲ್ಲಿ, **ಕರ್ಣಂ** = ಕರ್ಣನನ್ನು, **ಸಂಚೋದಯಾಮಾಸುಃ** = ಒತ್ತಾಯಿಸಿದರು. **ಅಸ್ಮಿನ್** = ಈ ಘಟೋತ್ಕಚನು, **ಹತೇ** = ಹತನಾಗುತ್ತಿರಲು, **ಸರ್ವಂ ಹತಂ** = ಎಲ್ಲವೂ ಹತವಾದಂತೆ, **ಪಾರ್ಥಃ** = ಅರ್ಜುನನು, **ನಃ** = ನಮಗೆ, **ಕಿಂಕರಿಷ್ಯತಿ** = ಏನು ಮಾಡುತ್ತಾನೆ.

**ತಾತ್ಪರ್ಯ** :- ಭೀಮ ಅಲಾಯುಧನನ್ನು ಕೊಲ್ಲಲು ಸಮರ್ಥನಾಗಿದ್ದರೂ ಘಟೋತ್ಕಚನ ಬಲ ಹೀಗೆ ಎಲ್ಲರಿಗೂ ತಿಳಿಯಲೆಂದೇ ಕೊಲ್ಲದೆ ಬಿಟ್ಟ. ಘಟೋತ್ಕಚ ಅವನನ್ನು ಕೊಂದಾಗ ಎಲ್ಲರೂ ಶಕ್ತ್ಯಾಯುಧ ಪ್ರಯೋಗಿಸಲು ಕರ್ಣನನ್ನು ಒತ್ತಾಯಿಸಿದರು. 'ಈತನೊಬ್ಬ ಹತನಾದರೂ ಎಲ್ಲರೂ ಹತರಾದಂತೆ. ಅನಂತರ ಅರ್ಜುನ ನಮ್ಮನ್ನೇನು ಮಾಡಬಲ್ಲ?' ಎಂಬುದಾಗಿ.

**ಏವಂ ಸಂಚೋದ್ಯಮಾನಃ ಸ ಧಾರ್ತರಾಷ್ಟ್ರೈಃ ಪುನಃಪುನಃ ।**
**ಹೈಡಿಂಬೇನಾರ್ದ್ಯಮಾನೈಸ್ತು ಸ್ವಯಂ ಚ ಭೃಶಪೀಡಿತಃ ।**
**ಆದತ್ತ ಶಕ್ತಿಂ ವಿಪುಲಾಂ ಪಾಕಶಾಸನಸಮ್ಮತಾಮ್ ॥ ೨೫೭ ॥**

**ಅರ್ಥ** :- **ಏವಂ** = ಈ ರೀತಿಯಾಗಿ, **ಹೈಡಿಂಬೇನ** = ಘಟೋತ್ಕಚನಿಂದ, **ಆರ್ದ್ಯಮಾನೈಃ** = ಪಿಡಿತರಾಗುತ್ತಿದ್ದ, **ಧಾರ್ತರಾಷ್ಟ್ರೈಃ** = ಕೌರವರಿಂದ, **ಪುನಃ ಪುನಃ** = ಮತ್ತೆ ಮತ್ತೆ, **ಸಂಚೋದ್ಯಮಾನಃ ಸಃ** = ಪ್ರೇರಿಸಲ್ಪಟ್ಟ ಕರ್ಣನು, **ಸ್ವಯಂ ಚ** = ತಾನೂ, **ಭೃಶಪೀಡಿತಃ** = ಬಹಳ ಪೀಡಿತನಾಗಿ, **ಪಾಕಶಾಸನ ಸಮ್ಮತಾಂ** = ಇಂದ್ರನ ಪ್ರೀತಿ ಪಾತ್ರವಾದ, **ವಿಪುಲಾಂ ಶಕ್ತಿಂ** = ಮಹತ್ತಾದ ಶಕ್ತ್ಯಾಯುಧವನ್ನು, **ಆದತ್ತ** = ತೆಗೆದುಕೊಂಡರು.

**ತಾತ್ಪರ್ಯ** :- ಹೀಗೆ ಘಟೋತ್ಕಚನಿಂದ ಪೀಡಿತರಾದ ಕೌರವರು ಮತ್ತೆ ಮತ್ತೆ ಒತ್ತಾಯಿಸಿದಾಗ, ತಾನೂ ಬಹಳ ಪೀಡಿತನಾದ್ದರಿಂದ ಇಂದ್ರನಿಗೆ ಇಷ್ಟವಾದ ಮಹತ್ತಾದ ಶಕ್ತ್ಯಾಯುಧವನ್ನು ಎತ್ತಿಕೊಂಡ.

**ತಾಮಂಬರಸ್ಥಾಯ ಘಟೋತ್ಕಚಾಯ**
**ಶೈಲೋಪಮಾಯಾತುಲವಿಕ್ರಮಾಯ ।**
**ಚಿಕ್ಷೇಪ ಮೃತ್ಯೋಃ ರಸನೋಪಮಾಮಲಂ**
**ಪ್ರಕಾಶಯಂತೀಂ ಪ್ರದಿಶೋ ದಿಶಶ್ಚ ।। ೨೫೮ ।।**

**ಅರ್ಥ :- ಅತುಲವಿಕ್ರಮಾಯ** = ಅತುಲ ಪರಾಕ್ರಮವುಳ್ಳ, **ಅಂಬರಸ್ಥಾಯ** = ಆಕಾಶದಲ್ಲಿ ನಿಂತಿದ್ದ, **ಶೈಲೋಪಮಾಯ** = ಬೆಟ್ಟದಂತೆ ಇದ್ದ, **ಘಟೋತ್ಕಚಾಯ** = ಘಟೋತ್ಕಚನಿಗೆ, **ಸಃ** = ಆ ಕರ್ಣನು, **ಮೃತ್ಯೋಃ ರಸನೋಪಮಾಂ** = ಮೃತ್ಯುವಿನ ನಾಲಿಗೆಯಂತಿದ್ದ, **ಪ್ರದಿಶೋ ದಿಶಶ್ಚ** = ದಿಕ್ಕು ವಿದಿಕ್ಕುಗಳನ್ನೂ, **ಅಲಂ ಪ್ರಕಾಶಯಂತೀಂ** = ಚೆನ್ನಾಗಿ ಬೆಳಗಿಸುತ್ತಿದ್ದ, **ತಾಂ** = ಆ ಶಕ್ತ್ಯಾಯುಧವನ್ನು, **ಚಿಕ್ಷೇಪ** = ಎಸೆದನು.

**ತಾತ್ಪರ್ಯ :-** ಬಹಳ ಪರಾಕ್ರಮಶಾಲಿಯಾದ ಘಟೋತ್ಕಚ ಆಕಾಶದಲ್ಲಿ ನಿಂತಿದ್ದ. ಪರ್ವತದಂತೆ ಕಾಣುತ್ತಿದ್ದ ಆ ಘಟೋತ್ಕಚನ ಮೇಲೆ ಕರ್ಣನು ಮೃತ್ಯುವಿನ ನಾಲಿಗೆಯಂತಿದ್ದ ದಿಕ್ಕು ವಿದಿಕ್ಕುಗಳನ್ನು ಚೆನ್ನಾಗಿ ಪ್ರಕಾಶಿಸುತ್ತಿದ್ದ ಶಕ್ತ್ಯಾಯುಧವನ್ನು ಎಸೆದ.

**ನಿರ್ಭಿಣ್ಣವಕ್ಷಾಃ ಸ ತಯಾ ಪಪಾತ**
**ವಿಚೂರ್ಣಯನ್ ಶತ್ರುಬಲಂ ಹತೋಽಪಿ ।**
**ತಸ್ಮಿನ್ ಹತೇ ಜಹೃಷುರ್ಧಾರ್ತರಾಷ್ಟ್ರಾ**
**ಉಚ್ಚುಕ್ರುಶುರ್ದುಧುವುಶ್ಚಾಂಬರಾಣಿ ।। ೨೫೯ ।।**

**ಅರ್ಥ :- ಸಃ** = ಆ ಘಟೋತ್ಕಚನು, **ತಯಾ** = ಆ ಶಕ್ತ್ಯಾಯುಧದಿಂದ, **ನಿರ್ಭಿಣ್ಣವಕ್ಷಾಃ** = ಸೀಳಲ್ಪಟ್ಟ ಎದೆಯುಳ್ಳವನಾಗಿ, **ಹತೋಽಪಿ** = ಹತನಾದರೂ ಕೂಡ, **ಶತ್ರುಬಲಂ** = ಶತ್ರುಸೈನ್ಯವನ್ನು, **ವಿಚೂರ್ಣಯನ್** = ಪುಡಿಮಾಡುತ್ತಾ, **ಪಪಾತ** = ಬಿದ್ದನು, **ತಸ್ಮಿನ್ ಹತೇ** = ಆ ಘಟೋತ್ಕಚ ಹತನಾದಾಗ, **ಧಾರ್ತರಾಷ್ಟ್ರಾಃ** = ಕೌರವರು, **ಜಹೃಷುಃ** = ಹರ್ಷಪಟ್ಟರು, **ಉಚ್ಚುಕ್ರುಶುಃ** = ಕೇಕೇ ಹಾಕಿದರು, **ಅಂಬರಾಣಿ ಚ ದುಧುವುಃ** = ವಸ್ತ್ರಗಳನ್ನು ಹಾರಿಸಿದರು.

**ತಾತ್ಪರ್ಯ** :- ಶಕ್ತ್ಯಾಯುಧದಿಂದ ಘಟೋತ್ಕಚನ ಎದೆ ಸೀಳಿತು. ಅವನು ಕೆಳಗೆ ಬಿದ್ದ. ತಾನು ಹತನಾಗಿ ಬೀಳುವಾಗ ಶತ್ರುಗಳ ಸೈನ್ಯವನ್ನು ನಾಶಪಡಿಸುತ್ತಾ ಬಿದ್ದನು. ಅವನು ಹತನಾದಾಗ ಕೌರವರು ಸಂತೋಷಪಟ್ಟರು. ವಸ್ತ್ರಗಳನ್ನು ಹಾರಿಸಿದರು. ಕೇಕೇ ಹಾಕಿದರು.

**ತದಾ ನನರ್ತ ಕೇಶವಃ ಸಮಾಶ್ಲಿಷಚ್ಚ ಫಲ್ಗುನಮ್ ।**
**ನನಾದ ಶಂಖಮಾಧಮಜ್ಜಹಾಸ ಚೋರುನಿಸ್ವನಃ ॥ ೨೬೦ ॥**

**ಅರ್ಥ** :- **ತದಾ** = ಆವಾಗ, **ಕೇಶವಃ** = ಕೃಷ್ಣನು, **ನನರ್ತ** = ಕುಣಿದಾಡಿದ, **ಚ** = ಮತ್ತು, **ಫಲ್ಗುನಂ** = ಅರ್ಜುನನನ್ನು, **ಸಮಾಶ್ಲಿಷತ್** = ತಬ್ಬಿಕೊಂಡನು, **ಶಂಖಂ ನನಾದ** = ಶಂಖನಾದವನ್ನು ಮಾಡಿದನು, **ಆಧಮತ್** = ಸಿಂಹನಾದವನ್ನು ಮಾಡಿದ, **ಉರುನಿಸ್ವನಃ** = ದೊಡ್ಡ ಧ್ವನಿಯುಳ್ಳವನಾಗಿ, **ಜಹಾಸ** = ನಕ್ಕನು.

**ತಾತ್ಪರ್ಯ** :- ಆಗ ಕೃಷ್ಣನೂ ಕುಣಿದಾಡಿದ. ಅರ್ಜುನನನ್ನು ಆಲಿಂಗಿಸಿದ. ಶಂಖನಾದ ಮಾಡುತ್ತಾ ಸಿಂಹನಾದ ಮಾಡಿದ. ಗಟ್ಟಿ ಧ್ವನಿಯಿಂದ ನಕ್ಕನು.

**ತಮಪೃಚ್ಛದ್ ಗುಡಾಕೇಶಃ ಕಿಮೇತದಿತಿ ದುರ್ಮನಾಃ ।**
**ಹತೇ ಸುತೇಽಗ್ರಜೇಽಸ್ಮಾಕಂ ವೀರೇ ಕಿಂ ನಂದಸಿ ಪ್ರಭೋ ॥ ೨೬೧ ॥**

**ಅರ್ಥ** :- **ದುರ್ಮನಾಃ ಗುಡಾಕೇಶಃ** = ದುಃಖಿತನಾದ ಅರ್ಜುನನು, **ತಂ** = ಆ ಶ್ರೀಕೃಷ್ಣನನ್ನು, **ಅಪೃಚ್ಛತ್** = ಕೇಳಿದನು, **ಪ್ರಭೋ** = ಪ್ರಭುವೇ, **ಕಿಮೇತತ್** = ಏನಿದು ?, **ವೀರೇ** = ವೀರನಾದ, **ಅಸ್ಮಾಕಂ ಅಗ್ರಜೇ ಸುತೇ** = ನಮ್ಮ ಹಿರಿಯ ಮಗನು, **ಹತೇ** = ಹತನಾಗುತ್ತಿರಲು, **ಕಿಂ ನಂದಸಿ** = ಏತಕ್ಕಾಗಿ ಸಂತೋಷಪಡುತ್ತಿರುವಿ.

**ತಾತ್ಪರ್ಯ** :- ದುಃಖಿತನಾದ ಅರ್ಜುನನು ಕೃಷ್ಣನಿಗೆ ಕೇಳಿದ 'ಪ್ರಭುವೇ, ಏನಿದು ? ವೀರನಾದ ನಮ್ಮ ಹಿರಿಯ ಮಗನು ಹತನಾದಾಗ ಏಕೆ ಸಂತೋಷ ಪಡುತ್ತಿರುವಿ ?'

**ತಮಾಹ ಭಗವಾನ್ ಕೃಷ್ಣೋ ದಿಷ್ಟ್ಯಾ ಜೀವಸಿ ಫಲ್ಗುನ ।**
**ತ್ವದರ್ಥಂ ನಿಹಿತಾ ಶಕ್ತಿರ್ವಿಮುಕ್ತಾऽಸ್ಮಿನ್ ಹಿ ರಾಕ್ಷಸೇ ॥ ೨೬೨ ॥**

**ಅರ್ಥ** :- **ಭಗವಾನ್ ಕೃಷ್ಣಃ** = ಭಗವಾನ್ ಶ್ರೀಕೃಷ್ಣನು, **ತಂ** = ಆ ಅರ್ಜುನನನ್ನು ಕುರಿತು, **ಆಹ** = ಹೇಳಿದನು, **ಫಲ್ಗುನ** = ಅರ್ಜುನ, **ದಿಷ್ಟ್ಯಾಜೀವಸಿ** = ಅದೃಷ್ಟವಶದಿಂದ ಬದುಕಿದ್ದೀ, **ತ್ವದರ್ಥಂ** = ನಿನಗಾಗಿ, **ನಿಹಿತಾ** = ಇಡಲ್ಪಟ್ಟ, **ಶಕ್ತಿಃ** = ಶಕ್ತ್ಯಾಯುಧವು, **ಅಸ್ಮಿನ್ ರಾಕ್ಷಸೇ** = ಈ ಘಟೋತ್ಕಚನ ಮೇಲೆ, **ವಿಮುಕ್ತಾ ಹಿ** = ಬಿಡಲ್ಪಟ್ಟಿತಷ್ಟೆ.

**ತಾತ್ಪರ್ಯ** :- ಭಗವಂತ ಶ್ರೀಕೃಷ್ಣ ಅರ್ಜುನನಿಗೆ ಹೇಳಿದನು. 'ಅರ್ಜುನ! ಅದೃಷ್ಟವಶಾತ್ ನೀನು ಬದುಕಿಕೊಂಡೆ. ನಿನಗಾಗಿಯೇ ಕಾದಿರಿಸಿದ್ದ ಶಕ್ತ್ಯಾಯುಧವನ್ನು ಕರ್ಣ ಘಟೋತ್ಕಚನ ಮೇಲೆ ಎಸೆದುಬಿಟ್ಟ.

**ತತೋ ಯುಧಿಷ್ಠಿರೋ ದುಃಖಾದಮರ್ಷಾಚ್ಚಾಭ್ಯವರ್ತತ ।**
**ಕರ್ಣಂ ಪ್ರತಿ ತಮಾಹಾಥ ಕೃಷ್ಣದ್ವೈಪಾಯನಃ ಪ್ರಭುಃ ॥ ೨೬೩ ॥**

**ಅರ್ಥ** :- **ತತಃ** = ಅನಂತರ, **ಯುಧಿಷ್ಠಿರಃ** = ಯುಧಿಷ್ಠಿರನು, **ಅಮರ್ಷಾತ್** = ಕೋಪದಿಂದ, **ದುಃಖಾಚ್ಚ** = ದುಃಖದಿಂದಲೂ, **ಕರ್ಣಂ ಪ್ರತಿ ಅಭ್ಯವರ್ತತ** = ಕರ್ಣನ ಜೊತೆಗೆ ಯುದ್ಧಕ್ಕೆ ಹೊರಟ, **ಅಥ** = ಅನಂತರ, **ಪ್ರಭುಃ ಕೃಷ್ಣದ್ವೈಪಾಯನಃ** = ಪ್ರಭುಗಳಾದ ವೇದವ್ಯಾಸರು, **ತಂ** = ಆ ಯುಧಿಷ್ಠಿರನನ್ನು ಕುರಿತು, **ಆಹ** = ಹೇಳಿದರು.

**ತಾತ್ಪರ್ಯ** :- ಆವಾಗ ಯುಧಿಷ್ಠಿರ ಕೋಪದಿಂದ ಮತ್ತೂ ದುಃಖದಿಂದ ಕರ್ಣನ ಮುಂದೆ ಯುದ್ಧಕ್ಕೆ ಹೊರಟನು. ಆವಾಗ ಪ್ರಭುಗಳಾದ ವೇದವ್ಯಾಸರು ಆಗಮಿಸಿ ಹೇಳಿದರು.

**ಯಯಾऽರ್ಜುನೋ ನಿಹಂತವ್ಯಸ್ತಯಾऽಸೌ ರಾಕ್ಷಸೋ ಹತಃ ।**
**ತನ್ಮಾ ಶುಚಸ್ತ್ವಂ ರಾಜೇಂದ್ರ ದಿಷ್ಟ್ಯಾ ಜೀವತಿ ಫಲ್ಗುನಃ ।**
**ಇತ್ಯುಕ್ತ್ವಾ ಪ್ರಯಯೌ ವ್ಯಾಸಸ್ತತೋ ಯುದ್ಧಮವರ್ತತ ॥ ೨೬೪ ॥**

**ಅರ್ಥ** :- **ಯಯಾ** = ಯಾವ ಶಕ್ತ್ಯಾಯುಧದಿಂದ, **ಅರ್ಜುನಃ** = ಅರ್ಜುನನು, **ನಿಹಂತವ್ಯಃ** = ಕೊಲ್ಲಲ್ಪಡಬೇಕಿತ್ತೋ, **ತಯಾ** = ಅಂತಹ

ಶಕ್ತ್ಯಾಯುಧದಿಂದ, **ರಾಕ್ಷಸಃ** = ಘಟೋತ್ಕಚನು, **ಹತಃ** = ಕೊಲ್ಲಲ್ಪಟ್ಟನು, **ರಾಜೇಂದ್ರ** = ಮಹಾರಾಜ!, **ತನ್ಮಾಶುಚಃ** = ಆದ್ದರಿಂದ ಶೋಕಿಸಬೇಡ, **ದಿಷ್ಟ್ಯಾ** = ಅದೃಷ್ಟವಶದಿಂದ, **ಫಲ್ಗುನಃ** = ಅರ್ಜುನನು, **ಜೀವತಿ** = ಬದುಕಿದ್ದಾನೆ, **ಇತಿ** = ಈ ರೀತಿಯಾಗಿ, **ಉಕ್ತ್ವಾ** = ಹೇಳಿ, **ವ್ಯಾಸಃ** = ವೇದವ್ಯಾಸರು, **ಪ್ರಯಯೌ** = ಹೊರಟು ಹೋದರು, **ತತಃ** = ಬಳಿಕ, **ಯುದ್ಧಂ ಅವರ್ತತ** = ಯುದ್ಧ ಮುಂದುವರಿಯಿತು.

**ತಾತ್ಪರ್ಯ** :- ಯಾವ ಶಕ್ತ್ಯಾಯುಧದಿಂದ ಅರ್ಜುನ ಹತನಾಗ ಬೇಕಾಗಿತ್ತೋ ಆ ಶಕ್ತಿಯಿಂದ ಘಟೋತ್ಕಚ ಹತನಾಗಿದ್ದಾನೆ. ಆದ್ದರಿಂದ ಮಹಾರಾಜ! ದುಃಖಿಸಬೇಡ. ಅದೃಷ್ಟವಶದಿಂದ ಅರ್ಜುನ ಬದುಕಿದ್ದಾನೆ ಎಂದು ಈ ರೀತಿಯಾಗಿ ಹೇಳಿ ವೇದವ್ಯಾಸರು ಹೊರಟು ಹೋದರು. ಅನಂತರ ಯುದ್ಧ ಮುಂದುವರಿಯಿತು.

**ಭೀಮಾರ್ಜುನಾಭ್ಯಾಮಿಹ ಹನ್ಯಮಾನೇ**
**ಬಲೇ ಕುರೂಣಾಮಿತರೈಶ್ಚ ಪಾಂಡವೇ ।**
**ಪ್ರದೀಪಹಸ್ತಾ ಅಥ ಯೋಧಕಾಶ್ಚ**
**ಸರ್ವೇಽಪಿ ನಿದ್ರಾವಶಗಾ ಬಭೂವುಃ ॥ ೨೬೫ ॥**

**ಅರ್ಥ** :- **ಅಥ** = ಅನಂತರ, **ಭೀಮಾರ್ಜುನಾಭ್ಯಾಂ** = ಭೀಮ ಅರ್ಜುನರಿಂದ, **ಕುರೂಣಾಂ ಬಲೇ ಹನ್ಯಮಾನೇ** = ಕೌರವರ ಸೈನ್ಯವು ನಾಶಮಾಡಲ್ಪಡುತ್ತಿರಲು, **ಇತರೈಶ್ಚ** = ಬೇರೆ ಕೌರವರಿಂದ, **ಇಹ ಪಾಂಡವೇ ಬಲೇ ಹನ್ಯಮಾನೇ** = ಇತ್ತ ಪಾಂಡವರ ಸೈನ್ಯವು ನಾಶಮಾಡಲ್ಪಡುತ್ತಿರಲು, **ಪ್ರದೀಪಹಸ್ತಾಃ** = ಕೈಯಲ್ಲಿ ದೀಪ ಹಿಡಿದವರು, **ಚ** = ಮತ್ತು, **ಯೋಧಕಾಶ್ಚ ಸರ್ವೇಽಪಿ** = ಯೋಧರೆಲ್ಲರೂ ಕೂಡ, **ನಿದ್ರಾವಶಗಾ ಬಭೂವುಃ** = ನಿದ್ರಾಪರವಶರಾದರು.

**ತಾತ್ಪರ್ಯ** :- ಭೀಮಾರ್ಜುನರು ಕೌರವರ ಸೈನ್ಯವನ್ನು ಕೌರವರು ಪಾಂಡವರ ಸೈನ್ಯವನ್ನು ನಾಶ ಮಾಡುತ್ತಿದ್ದಾಗ ದೀಪಗಳನ್ನು ಹಿಡಿದವರೂ ಯೋಧರೂ ಎಲ್ಲರೂ ಕೂಡ ನಿದ್ರಾಪರವಶರಾದರು.

**ದೃಷ್ಟ್ವೈವ ತಾನಾಹ ಧನಂಜಯಸ್ತದಾ**
**ಸ್ವಪ್ಸ್ಯಂತು ಯಾವಚ್ಛಶಿನಃ ಪ್ರಕಾಶಃ ।**
**ಇತೀರಿತಾ ಆಶಿಷಃ ಫಲ್ಗುನಾಯ**
**ಪ್ರಯುಜ್ಯ ಸರ್ವೇ ಸುಷುಪುರ್ಯಥಾಸ್ಥಿತಾಃ ॥ ೨೬೬ ॥**

**ಅರ್ಥ** :- **ತದಾ** = ಆವಾಗ, **ಧನಂಜಯಃ** = ಅರ್ಜುನನು, **ತಾನ್ ದೃಷ್ಟ್ವಾ** = ಅವರನ್ನು ನೋಡಿ, **ಆಹ** = ಹೇಳಿದನು, **ಯಾವತ್ ಶಶಿನಃ ಪ್ರಕಾಶಃ ತಾವತ್** = ಚಂದ್ರನ ಪ್ರಕಾಶ ಹರಡುವವರೆಗೆ, **ಸ್ವಪ್ಸ್ಯಂತು** = ನಿದ್ದೆ ಮಾಡಿರಿ, **ಇತಿ** = ಈ ರೀತಿಯಾಗಿ, **ಈರಿತಾಃ ಸರ್ವೇ** = ಹೇಳಲ್ಪಟ್ಟ ಅವರೆಲ್ಲರೂ, **ಫಲ್ಗುನಾಯ** = ಅರ್ಜುನನಿಗೆ, **ಆಶಿಷಃ ಪ್ರಯುಜ್ಯ** = ಆಶೀರ್ವಾದ ಮಾಡಿ, **ಯಥಾ ಸ್ಥಿತಾಃ** = ಹೇಗಿದ್ದರೋ ಹಾಗೆ, **ಸುಷುಪುಃ** = ಮಲಗಿ ನಿದ್ರಾಪರರಾದರು.

**ತಾತ್ಪರ್ಯ** :- ಸೈನಿಕರು ಮಲಗುತ್ತಿದ್ದದ್ದನ್ನು ನೋಡಿ ಅರ್ಜುನ ಹೇಳಿದ, 'ಚಂದ್ರನ ಪ್ರಕಾಶ ಹರಡುವವರೆಗೆ ಎಲ್ಲರೂ ನಿದ್ದೆ ಮಾಡಿರಿ'. ಹೀಗೆ ಹೇಳಿದಾಗ ಎಲ್ಲರೂ ಅವನನ್ನು ಆಶೀರ್ವದಿಸಿ ಹೇಗಿದ್ದರೋ ಹಾಗೇ ಮಲಗಿ ನಿದ್ರಾವಶರಾದರು.

**ಪುನಶ್ಚ ಚಂದ್ರೇಽಭ್ಯುದಿತೇ ಯುಧೇ ತೇ**
**ಸಮಾಯಯುಃ ಶಸ್ತ್ರಮಹಾಸ್ತ್ರವರ್ಷಾಃ ।**
**ತತ್ರಾಽಯಾತಃ ಸಾತ್ಯಕಿಂ ಸೋಮದತ್ತೋ**
**ಭೂರಿಶ್ಚ ತಾಭ್ಯಾಂ ಯುಯುಧೇ ಸ ಏಕಃ ॥ ೨೬೭ ॥**

**ಅರ್ಥ** :- **ಚಂದ್ರೇಽಭ್ಯುದಿತೇ** = ಚಂದ್ರನುದಯಿಸಿದಾಗ, **ಪುನಶ್ಚ** = ಮತ್ತೆ, **ತೇ** = ಅವರು, **ಶಸ್ತ್ರಮಹಾಸ್ತ್ರವರ್ಷಾಃ** = ಶಸ್ತ್ರಮಹಾಅಸ್ತ್ರಗಳ ಮಳೆಯನ್ನು ಸುರಿಸುವವರಾಗಿ, **ಯುಧೇ ಸಮಾಯಯುಃ** = ಯುದ್ಧಕ್ಕಾಗಿ ಆಗಮಿಸಿದರು, **ಸೋಮದತ್ತಃ** = ಸೋಮದತ್ತನು, **ಸಾತ್ಯಕಿಂ ಆಯಾತಃ** = ಸಾತ್ಯಕಿಯನ್ನು ಕುರಿತು ಬಂದನು, **ಭೂರಿಶ್ಚ ಆಯಾತಃ** = ಭೂರಿಯೂ ಬಂದನು, **ಸ ಏಕಃ** = ಆ ಸಾತ್ಯಕಿಯೊಬ್ಬನೇ, **ತಾಭ್ಯಾಂ ಯುಯುಧೇ** = ಅವರಿಬ್ಬರೊಡನೆ ಹೋರಾಡಿದ.

**ತಾತ್ಪರ್ಯ** :- ಚಂದ್ರನು ಉದಯಿಸಿದಾಗ ಪುನಃ ಅವರು ಶಸ್ತ್ರ ಮಹಾಸ್ತ್ರಗಳ ಮಳೆ ಸುರಿಸುತ್ತಾ ಯುದ್ಧಕ್ಕಾಗಮಿಸಿದರು. ಭೂರಿ ಮತ್ತು ಸೋಮದತ್ತರು ಸಾತ್ಯಕಿಯ ಬಳಿಗೆ ಹೋದರು. ಸಾತ್ಯಕಿಯೊಬ್ಬನೇ ಅವರಿಬ್ಬರೊಡನೆ ಹೋರಾಡಿದ.

**ಹತೌ ಚ ತೌ ಪೇತತುಸ್ತೇನ ಭೂಮೌ**
**ಬಾಹ್ಲೀಕ ಏನಂ ಸಮರೇ ತ್ವಯೋಧಯತ್ ।**
**ಸ ಸಾತ್ಯಕಿಂ ವಿರಥೀಕೃತ್ಯ ಬಾಣಂ**
**ವಧಾಯ ತಸ್ಯಾಽಶು ಮುಮೋಚ ವೀರಃ ॥ ೨೬೮ ॥**

**ಅರ್ಥ** :- **ತೇನ** = ಆ ಸಾತ್ಯಕಿಯಿಂದ, **ತೌ** = ಆ ಭೂರಿ ಸೋಮದತ್ತರು, **ಹತೌ** = ಹತರಾಗಿ, **ಭೂಮೌ ಪೇತತುಃ** = ನೆಲದ ಮೇಲೆ ಬಿದ್ದರು, **ಬಾಹ್ಲೀಕಃ** = ಬಾಹ್ಲೀಕನು, **ಏನಂ** = ಸಾತ್ಯಕಿಯೊಡನೆ, **ಸಮರೇ** = ಯುದ್ಧದಲ್ಲಿ, **ಅಯೋಧಯತ್** = ಹೋರಾಡಿದ, **ವೀರಃ ಸಃ** = ವೀರನಾದ ಆ ಬಾಹ್ಲೀಕನು, **ಸಾತ್ಯಕಿಂ** = ಸಾತ್ಯಕಿಯನ್ನು, **ವಿರಥೀಕೃತ್ಯ** = ರಥರಹಿತನನ್ನಾಗಿ ಮಾಡಿ, **ತಸ್ಯ ವಧಾಯ** = ಅವನ ವಧೆಗಾಗಿ, **ಆಶು** = ಕೂಡಲೇ, **ಬಾಣಂ ಮುಮೋಚ** = ಬಾಣವನ್ನು ಬಿಟ್ಟನು.

**ತಾತ್ಪರ್ಯ** :- ಭೂರಿಸೋಮದತ್ತರು ಸಾತ್ಯಕಿಯಿಂದ ಹತರಾಗಿ ನೆಲದಲ್ಲಿ ಬಿದ್ದರು. ಬಾಹ್ಲೀಕ ಸಾತ್ಯಕಿಯ ಜೊತೆ ಹೋರಾಡಿದ. ವೀರನಾದ ಬಾಹ್ಲೀಕನು ಸಾತ್ಯಕಿಯನ್ನು ರಥರಹಿತನನ್ನಾಗಿ ಮಾಡಿ ಅವನ ವಧೆಗಾಗಿ ಬಾಣವನ್ನು ಪ್ರಯೋಗಿಸಿದ.

**ಚಿಚ್ಛೇದ ತಂ ಭೀಮಸೇನಸ್ತ್ರಿಧೈವ**
**ತಸ್ಮೈ ಶತಘ್ನೀಂ ಪ್ರಜಹಾರ ಬಾಹ್ಲಿಕಃ ।**
**ತಯಾ ಹತೋ ವಿಹ್ವಲಿತೋ ವೃಕೋದರೋ**
**ಜಘಾನ ತಂ ಗದಯಾ ಸೋಽಪತಚ್ಚ ॥ ೨೬೯ ॥**

**ಅರ್ಥ** :- **ಭೀಮಸೇನಃ** = ಭೀಮಸೇನನು, **ತಂ** = ಆ ಬಾಣವನ್ನು, **ತ್ರಿಧೈವ ಚಿಚ್ಛೇದ** = ಮೂರಾಗಿ ಕತ್ತರಿಸಿದ, **ಬಾಹ್ಲಿಕಃ** = ಬಾಹ್ಲೀಕನು, **ತಸ್ಮೈ** = ಆ ಭೀಮನ ಮೇಲೆ, **ಶತಘ್ನೀಂ ಪ್ರಜಹಾರ** = ಶತಘ್ನಿಯನ್ನು

ಪ್ರಯೋಗಿಸಿದ, **ತಯಾ** = ಆ ಶತಘ್ನಿಯಿಂದ, **ಹತಃ** = ಹೊಡೆಯಲ್ಪಟ್ಟ, **ವೃಕೋದರಃ** = ಭೀಮನು, **ವಿಹ್ವಲಿತಃ(ಇವ)** = ವಿಹ್ವಲನಾದವನಂತೆ ಆಗಿ, **ತಂ** = ಅವನನ್ನು, **ಗದಯಾ** = ಗದೆಯಿಂದ, **ಜಘಾನ** = ಹೊಡೆದ, **ಸಃ ಅಪತತ್** = ಅವನು ಸತ್ತು ಬಿದ್ದ.

**ತಾತ್ಪರ್ಯ** :- ಭೀಮ ಆ ಬಾಣವನ್ನು ಮೂರಾಗಿ ತುಂಡು ಮಾಡಿದ. ಬಾಹ್ಲೀಕ ಭೀಮನ ಮೇಲೆ ಶತಘ್ನಿಯನ್ನು ಪ್ರಯೋಗಿಸಿದ. ಆ ಅಸ್ತ್ರದಿಂದ ಹೊಡೆಸಿಕೊಂಡ ಭೀಮ ವಿಹ್ವಲನಾದವನಂತೆ ತೋರುತ್ತಾ ಅವನನ್ನು ಗದೆಯಿಂದ ಹೊಡೆದ. ಅವನು ಸತ್ತು ಬಿದ್ದ.

**ಬಾಹ್ಲೀಕಃ ಪ್ರಾರ್ಥಯಾಮಾಸ ಪೂರ್ವಂ ಸ್ನೇಹಪುರಸ್ಸರಮ್ ।**
**ಭೀಮ ತ್ವಯ್ಯೈವ ಹಂತವ್ಯೋ ರಣೇಽಹಂ ಪ್ರೀತಿಮಿಚ್ಛತಾ ।**
**ತದಾ ಯಶಶ್ಚ ಧರ್ಮಂ ಚ ಲೋಕಂ ಚ ಪ್ರಾಪ್ನುಯಾಮಹಮ್ ॥ ೨೭೦ ॥**

**ಅರ್ಥ** :- **ಪೂರ್ವಂ** = ಹಿಂದೆ, **ಬಾಹ್ಲೀಕಃ** = ಬಾಹ್ಲೀಕನು, **ಸ್ನೇಹಪುರಸ್ಸರಂ** = ಸ್ನೇಹಪುರಸ್ಸರವಾಗಿ, **ಭೀಮ** = ಭೀಮನೇ, **ಪ್ರೀತಿಮಿಚ್ಛತಾ** = ಸಂತೋಷವನ್ನು ಬಯಸುವ, **ತ್ವಯ್ಯೈವ** = ನಿನ್ನಿಂದಲೇ, **ಅಹಂ** = ನಾನು, **ರಣೇ** = ಯುದ್ಧದಲ್ಲಿ, **ಹಂತವ್ಯಃ** = ಕೊಲ್ಲಲ್ಪಡಬೇಕು, **ತದಾ** = ಆವಾಗ, **ಅಹಂ** = ನಾನು, **ಯಶಶ್ಚ** = ಕೀರ್ತಿಯನ್ನೂ, **ಧರ್ಮಂ ಚ** = ಪುಣ್ಯವನ್ನೂ, **ಲೋಕಂ ಚ** = ಉತ್ತಮ ಲೋಕವನ್ನೂ, **ಪ್ರಾಪ್ನುಯಾಂ** = ಹೊಂದಬಲ್ಲೆ, **ಇತಿ** = ಎಂದು, **ಸಂಪ್ರಾರ್ಥಯಾಮಾಸ** = ಕೇಳಿಕೊಂಡಿದ್ದನು.

**ತಾತ್ಪರ್ಯ** :- ಹಿಂದೆ ಬಾಹ್ಲೀಕ ಭೀಮನಿಗೆ ಸ್ನೇಹಪುರಸ್ಸರವಾಗಿ ಕೇಳಿಕೊಂಡಿದ್ದ. ಭೀಮ! ನೀನು ನನ್ನ ಸಂತೋಷವನ್ನು ಬಯಸುವಿಯಾದರೆ ನೀನೇ ನನ್ನನ್ನು ಯುದ್ಧದಲ್ಲಿ ಕೊಲ್ಲಬೇಕು. ಆವಾಗಲೇ ನಾನು ಕೀರ್ತಿಯನ್ನೂ ಪುಣ್ಯವನ್ನು ಉತ್ತಮವಾದ ಲೋಕವನ್ನೂ ಕೂಡ ಹೊಂದಬಲ್ಲೇ ಎಂದು.

**ಇತ್ಯುಕ್ತ ಆಹ ತಂ ಭೀಮೋ ನಿತರಾಂ ವ್ಯಥಿತಸ್ತದಾ ।**
**ಹನ್ಯಾಂ ನೈವಾನ್ಯಥಾ ಯುದ್ಧೇ ತತ್ ತೇ ಶುಶ್ರೂಷಣಂ ಭವೇತ್ ॥ ೨೭೧**

**ಇತಿ ತೇನ ಹತಸ್ತತ್ರ ಭೀಮಸೇನೇನ ಬಾಹ್ಲಿಕಃ ॥ ೨೭೨ ॥**

**ಅರ್ಥ** :- **ಇತಿ** = ಈ ರೀತಿಯಾಗಿ, **ಉಕ್ತಃ** = ಹೇಳಲ್ಪಟ್ಟ, **ಭೀಮಃ** = ಭೀಮನು, **ಆಹ** = ಹೇಳಿದನು, **ನಿತರಾಂ ವ್ಯಥಿತಃ** = ಬಹಳ ಹೊಡೆಸಿಕೊಂಡವನಾಗಿ, **ಹನ್ಯಾಂ** = ಕೊಲ್ಲುತ್ತೇನೆ, **ಅನ್ಯಥಾ** = ಹೊಡೆಸಿಕೊಳ್ಳದಿದ್ದರೆ, **ನೈವ ಹನ್ಯಾಂ** = ಕೊಲ್ಲುವುದಿಲ್ಲ, **ಯುದ್ಧೇ** = ಯುದ್ಧದಲ್ಲಿ, **ತತ್** = ಆ ಹನನ ಕಾರ್ಯವು, **ತೇ ಶುಶ್ರೂಷಣಂ ಭವೇತ್** = ನಿನಗೆ ಶುಶ್ರೂಷಣೆ ಆಗಬೇಕು, **ಇತಿ** = ಎಂಬುದಾಗಿ, **ತೇನ** = ಆದ್ದರಿಂದ, **ತತ್ರ** = ಆ ಯುದ್ಧದಲ್ಲಿ, **ಭೀಮಸೇನೇನ** = ಭೀಮಸೇನನಿಂದ, **ಬಾಹ್ಲಿಕಃ** = ಬಾಹ್ಲೀಕನು, **ಹತಃ** = ಕೊಲ್ಲಲ್ಪಟ್ಟನು.

**ತಾತ್ಪರ್ಯ** :- ಬಾಹ್ಲೀಕ ಹೀಗೆ ಹೇಳಿದಾಗ ಭೀಮನು ಹೇಳಿದ. ನಾನು ನಿನ್ನಿಂದ ಬಹಳ ಹೊಡೆಸಿಕೊಂಡಾಗ ಮಾತ್ರ ಕೊಲ್ಲುತ್ತೇನೆ. ನಮ್ಮ ವಂಶದಲ್ಲಿ ಹಿರಿಯನಾದ ನೀನು ಕೊಲ್ಲು ಎಂದು ಆಜ್ಞೆ ಮಾಡಿದ್ದೀ. ಹಾಗಾಗಿ ಚಿಕ್ಕವನಾದ ನಾನು ನಿನ್ನನ್ನು ಕೊಲ್ಲುತ್ತಿದ್ದೇನೆ. ನೀನು ನನಗೆ ಕೊಲ್ಲಲು ಆಜ್ಞೆ ಮಾಡದಿದ್ದರೆ ನಾನು ನಿನ್ನನ್ನು ಕೊಲ್ಲುತ್ತಿರಲಿಲ್ಲ. ಆ ಕಾರಣದಿಂದ ಕುಲವೃದ್ಧನಾದ ನಿನ್ನ ಮಾತನ್ನು ಪಾಲಿಸುವುದು ನಿನ್ನ ಶುಶ್ರೂಷಯೇ ಆಗುತ್ತದೆ ಎಂದು ಹೇಳಿ ಬಾಹ್ಲಿಕನನ್ನು ಕೊಂದನು.

**ಹತೇ ಬಾಹ್ಲೀಕೇ ಕೌರವಾ ಭೀಮಸೇನ-**
**ಮಭ್ಯಾಜಗ್ಮುಃ ಕರ್ಣದುರ್ಯೋಧನಾದ್ಯಾಃ ।**
**ದ್ರೌಣಿಂ ಪುರಸ್ಕೃತ್ಯ ಗುರುಂ ಚ ಪಾರ್ಷತಃ**
**ಸಭ್ರಾತೃಕಃ ಸಾತ್ಯಕಿನಾ ಸಮಭ್ಯಯಾತ್ ॥ ೨೭೩ ॥**

**ಅರ್ಥ** :- **ಬಾಹ್ಲೀಕೇ ಹತೇ** = ಬಾಹ್ಲೀಕ ಹತನಾಗುತ್ತಿರಲು, **ಕರ್ಣ ದುರ್ಯೋಧನಾದ್ಯಾಃ ಕೌರವಾಃ** = ಕರ್ಣ ದುರ್ಯೋಧನ ಮೊದಲಾದ ಕೌರವ ಯೋಧರು, **ದ್ರೌಣಿಂ ಪುರಸ್ಕೃತ್ಯ** = ಅಶ್ವತ್ಥಾಮನನ್ನು ಮುಂದೆ ಮಾಡಿಕೊಂಡು, **ಭೀಮಸೇನಂ ಅಭ್ಯಾಜಗ್ಮುಃ** = ಭೀಮನನ್ನು ಕುರಿತು ಆಗಮಿಸಿದರು, **ಪಾರ್ಷತಃ** = ದೃಷ್ಟದ್ಯುಮ್ನನು, **ಸಭ್ರಾತೃಕಃ** = ಸೋದರರಿಂದ ಕೂಡಿದವನಾಗಿ, **ಸಾತ್ಯಕಿನಾ ಚ** = ಸಾತ್ಯಕಿಯಿಂದಲೂ ಕೂಡಿದವನಾಗಿ, **ಗುರುಂ ಸಮಭ್ಯಯಾತ್** = ದ್ರೋಣರನ್ನು ಕುರಿತು ಹೋದನು.

ತಾತ್ಪರ್ಯ :- ಬಾಹ್ಲೀಕ ಸತ್ತಾಗ ಕರ್ಣ ದುರ್ಯೋಧನ ಮೊದಲಾದ ಕೌರವ ಯೋಧರು ಅಶ್ವತ್ಥಾಮನನ್ನು ಮುಂದೆ ಮಾಡಿಕೊಂಡು ಭೀಮನ ಎದುರಿಗೆ ಬಂದರು. ದೃಷ್ಟದ್ಯುಮ್ನ ಸೋದರರ ಜೊತೆ ಮತ್ತು ಸಾತ್ಯಕಿಯೊಂದಿಗೆ ದ್ರೋಣನ ಕಡೆಗೆ ಬಂದನು.

**ಸಂಶಪ್ತಕೈರೇವ ಪಾರ್ಥೋ ಯುಯೋಧ**
**ತದ್ ಯುದ್ಧಮಾಸೀದತಿರೌದ್ರಮದ್ಭುತಮ್ ।**
**ಅಕ್ಷೋಹಿಣೀ ತತ್ರ ಭೀಮಾರ್ಜುನಾಭ್ಯಾಂ**
**ನಿಸೂದಿತಾ ರಾತ್ರಿಯುದ್ಧೇ ಸಮಸ್ತಾ ॥ ೨೭೪ ॥**

**ಅರ್ಥ** :- **ಪಾರ್ಥಃ** = ಅರ್ಜುನನು, **ಸಂಶಪ್ತಕೈಃ ಯುಯೋಧ** = ಸಂಶಪ್ತಕರೊಡನೆ ಯುದ್ಧ ಮಾಡಿದ, **ತದ್ ಯುದ್ಧಂ** = ಆ ಯುದ್ಧವು, **ಅತಿರೌದ್ರಂ** = ಅತೀವ ಭಯಂಕರವೂ, **ಅದ್ಭುತಂ** = ಆಶ್ಚರ್ಯಕರವೂ, **ಆಸೀತ್** = ಆಗಿತ್ತು, **ತತ್ರ ರಾತ್ರಿಯುದ್ಧೇ** = ಆವತ್ತು ರಾತ್ರಿಯುದ್ಧದಲ್ಲಿ, **ಸಮಸ್ತಾ ಅಕ್ಷೋಹಿಣೀ** = ಪೂರ್ಣ ಒಂದು ಅಕ್ಷೋಹಿಣೀ ಸೈನ್ಯವು, **ಭೀಮಾರ್ಜುನಾಭ್ಯಾಂ ನಿಸೂದಿತಾ** = ಭೀಮ ಅರ್ಜುನರಿಂದ ಹತವಾಯಿತು.

ತಾತ್ಪರ್ಯ :- ಅರ್ಜುನ ಸಂಶಪ್ತಕರ ಜೊತೆಗೆ ಯುದ್ಧ ಮಾಡಿದ. ಆ ಯುದ್ಧ ಅತೀವ ಭಯಂಕರ ಮತ್ತೂ ಅದ್ಭುತವಾಗಿತ್ತು. ಅಂದಿನ ದಿನ ರಾತ್ರಿಯುದ್ಧದಲ್ಲಿ ಕೌರವರ ಒಂದು ಅಕ್ಷೋಹಿಣೀ ಸೈನ್ಯವು ಭೀಮಾರ್ಜುನರಿಂದ ನಾಶವಾಯಿತು.

**ತತಃ ಸೂರ್ಯಶ್ಚಾಭ್ಯುದಿತಸ್ತದಾಽತಿ-**
**ಘೋರಂ ದ್ರೋಣಃ ಕರ್ಮ ಯುದ್ಧೇ ಚಕಾರ ।**
**ಸ ಪಾಂಚಾಲಾನಾಂ ರಥವೃಂದಂ ಪ್ರವಿಶ್ಯ**
**ಜಘಾನ ಹಸ್ತ್ಯಶ್ವರಥಾನ್ ನರಾಂಶ್ಚ ॥ ೨೭೫ ॥**

**ಅರ್ಥ** :- **ತತಃ** = ಅನಂತರ, **ಸೂರ್ಯಃ ಚ** = ಸೂರ್ಯನೂ, **ಅಭ್ಯುದಿತಃ** = ಉದಯಿಸಿದ, **ತದಾ** = ಆವಾಗ, **ಯುದ್ಧೇ** = ಯುದ್ಧದಲ್ಲಿ, **ಪಾಂಚಾಲಾನಾಂ** = ಪಾಂಚಾಲರ, **ರಥವೃಂದಂ ಪ್ರವಿಶ್ಯ** = ರಥ ಸಮೂಹವನ್ನು ಪ್ರವೇಶಿಸಿ, **ದ್ರೋಣಃ** = ದ್ರೋಣನು, **ಅತಿಘೋರಂ ಕರ್ಮ**

**ಚಕಾರ** = ಅತಿ ಘೋರವಾದ ಹೋರಾಟ ಮಾಡಿದನು, **ಸಃ** = ಆ ದ್ರೋಣನು, **ಹಸ್ತ್ಯಶ್ವರಥಾನ್ ನರಾಂಶ್ಚ** = ಆನೆ ಕುದುರೆ ರಥ ಕಾಲಾಳುಗಳನ್ನೂ, **ಜಘಾನ** = ಸಂಹರಿಸಿದ.

**ತಾತ್ಪರ್ಯ** :- ಅನಂತರ ಸೂರ್ಯ ಉದಯಿಸಿದ. ಆವಾಗ ದ್ರೋಣನು ಯುದ್ಧದಲ್ಲಿ ಪಾಂಚಾಲರ ರಥ ಸಮೂಹಗಳನ್ನು ಪ್ರವೇಶಿಸಿ ಅತಿಘೋರವಾದ ಹೋರಾಟ ಮಾಡಿದ. ಆನೆ ಕುದುರೆ ರಥ ಕಾಲಾಳುಗಳನ್ನು ನಾಶಪಡಿಸಿದ.

**ವಿದ್ರಾವಿತಾಸ್ತೇನ ಮಹಾರಥಾಶ್ಚ**
**ನೈವಾವಿಂದನ್ ಶರ್ಮ ಬಾಣಾಂಧಕಾರೇ ।**
**ಯುವೇವ ವೃದ್ಧೋಽಪಿ ಚಚಾರ ಯುದ್ಧೇ**
**ಸ ಉಗ್ರಧನ್ವಾ ಪರಮಾಸ್ತ್ರವೇತ್ತಾ ।। ೨೭೬ ।।**

**ಅರ್ಥ** :- **ತೇನ** = ಆ ದ್ರೋಣನಿಂದ, **ಮಹಾರಥಾಶ್ಚ ಚ ವಿದ್ರಾವಿತಾಃ** = ಮಹಾರಥರೂ ಓಡಿಸಲ್ಪಟ್ಟರು, **ಬಾಣಾಂಧಕಾರೇ** = ಬಾಣಗಳ ಕತ್ತಲಲ್ಲಿ, **ಶರ್ಮ ನೈವ ಅವಿಂದನ್** = ನೆಮ್ಮದಿಯನ್ನು ಪಡಲಿಲ್ಲ, **ಪರಮಾಸ್ತ್ರವೇತ್ತಾ ಸಃ** = ಮಹಾ ಅಸ್ತ್ರಜ್ಞಾನಿಯಾದ ಅವನು, **ವೃದ್ಧೋಽಪಿ** = ವೃದ್ಧನಾದರೂ, **ಯುವೇವ** = ಯುವಕನಂತೆ, **ಉಗ್ರಧನ್ವಾ** = ಭಯಂಕರವಾದ ಧನುಸ್ಸುಳ್ಳವನಾಗಿ, **ಯುದ್ಧೇ** = ರಣರಂಗದಲ್ಲಿ, **ಚಚಾರ** = ಸಂಚರಿಸಿದನು.

**ತಾತ್ಪರ್ಯ** :- ದ್ರೋಣ ಮಹಾರಥರನ್ನು ಓಡಿಸಿದ. ಬಾಣಗಳ ಕತ್ತಲಿನಲ್ಲಿ ಯಾರೂ ನೆಮ್ಮದಿಯಿಂದ ಇರಲಿಲ್ಲ. ಮಹಾ ಅಸ್ತ್ರಜ್ಞಾನಿಯಾದ ಆ ದ್ರೋಣನು ಮುದುಕನಾದರೂ ಯುವಕನಂತೆ ಉಗ್ರಧನುಸ್ಸನ್ನು ಧರಿಸಿದವನಾಗಿ ರಣರಂಗದಲ್ಲಿ ಸಂಚಾರ ಮಾಡಿದ.

**ರಥಾರ್ಬುದಂ ತೇನ ಹತಂ ಚ ತತ್ರ**
**ತತಃ ಸಹಸ್ರಂ ಗುಣಿತಂ ನರಾಣಾಮ್ ।**
**ತತೋ ದಶಾಂಶೋ ನಿಹತೋ ಹಯಾನಾಂ**
**ಗಜಾರ್ಬುದಂ ಚೈವ ರಣೋತ್ಕಟೇನ ।। ೨೭೭ ।।**

**ಅರ್ಥ** :- **ರಣೋತ್ಕಟೇನ** = ಯುದ್ಧದಲ್ಲಿ, ಅಪ್ರತಿಮನಾದ ದ್ರೋಣನಿಂದ, **ತತ್ರ** = ಆ ಯುದ್ಧದಲ್ಲಿ, **ರಥಾರ್ಬುದಂ ಹತಂ** = ಇಪ್ಪತ್ತು

ಸಾವಿರ ರಥಿಕರು ಹತರಾದರು. **ತತಃ** = ಅದಕ್ಕಿಂತಲೂ, **ನರಾಣಾಂ ಸಹಸ್ರಂ ಹತಂ** = ಸಾವಿರ ಕಾಲಾಳುಗಳು ಹತರಾದರು, **ತತಃ ದಶಾಂಶಃ ಹಯಾನಾಂ** = ಅದರ ಹತ್ತನೆಯ ಒಂದಂಶ ಕುದುರೆಗಳು ನಾಶವಾದವು, **ಗಜಾರ್ಬುದಂ ಚ ಹತಂ** = ಇಪ್ಪತ್ತು ಸಾವಿರ ಆನೆಗಳು ಹತವಾದವು.

**ತಾತ್ಪರ್ಯ :-** ಯುದ್ಧದಲ್ಲಿ ಅಸದೃಶವಾದ ದ್ರೋಣನು ಆ ಯುದ್ಧದಲ್ಲಿ ಇಪ್ಪತ್ತು ಸಾವಿರ ರಥ ಸೈನಿಕರನ್ನು ನಾಶಪಡಿಸಿದ. ಅದಕ್ಕೆ ಸಹಸ್ರಪಟ್ಟು ಕಾಲಾಳುಗಳನ್ನು ಕೊಂದ. ಅದರ ಹತ್ತನೆಯ ಒಂದಷ್ಟು ಭಾಗ ಅಶ್ವಸೈನಿಕರನ್ನು ಕೊಂದನು. ಇಪ್ಪತ್ತು ಸಾವಿರ ಆನೆ ಸೈನಿಕರನ್ನೂ ಕೊಂದನು.

**ತಥಾ ವಿರಾಟದ್ರುಪದೌ ಶರಾಭ್ಯಾಂ**
**ನಿನಾಯ ಲೋಕಂ ಪರಮಾಜಿಮಧ್ಯೇ ।**
**ತತೋ ವಿಜಿತ್ಯೈವ ಗುರೋಃ ಸುತಾದೀನ್**
**ಧೃಷ್ಟದ್ಯುಮ್ನಂ ಭೀಮಸೇನೋ ಜುಗೋಪ ॥ ೨೭೮ ॥**

**ಅರ್ಥ :-** **ಸಃ** = ಆ ದ್ರೋಣನು, **ಪರಮಾಜಿಮಧ್ಯೇ** = ರಣರಂಗದಲ್ಲಿ, **ಶರಾಭ್ಯಾಂ** = ಎರಡು ಬಾಣಗಳಿಂದ, **ವಿರಾಟದ್ರುಪದೌ** = ವಿರಾಟ ದ್ರುಪದರನ್ನು, **ಲೋಕಂ ನಿನಾಯ** = ಪರಲೋಕಕ್ಕೆ ಕಳುಹಿಸಿದ, **ತತಃ** = ಅನಂತರ, **ಭೀಮಸೇನಃ** = ಭೀಮನು, **ಗುರೋಃ ಸುತಾದೀನ್** = ಅಶ್ವತ್ಥಾಮ ಮೊದಲಾದವರನ್ನು, **ವಿಜಿತ್ಯ** = ಗೆದ್ದು, **ಧೃಷ್ಟದ್ಯುಮ್ನಂ ಜುಗೋಪ** = ದೃಷ್ಟದ್ಯುಮ್ನನನ್ನು ರಕ್ಷಿಸಿದ.

**ತಾತ್ಪರ್ಯ :-** ದ್ರೋಣ ಯುದ್ಧ ಭೂಮಿಯಲ್ಲಿ ಎರಡು ಶರಗಳಿಂದ ವಿರಾಟದ್ರುಪದರನ್ನು ಪರಲೋಕಕ್ಕೆ ಕಳುಹಿಸಿದ. ಆವಾಗ ಭೀಮ ಅಶ್ವತ್ಥಾಮ ಮೊದಲಾದವರನ್ನು ಗೆದ್ದು ದೃಷ್ಟದ್ಯುಮ್ನನನ್ನು ರಕ್ಷಿಸಿದ.

**ಧೃಷ್ಟದ್ಯುಮ್ನೋ ಭೀಮಸೇನಾಭಿಗುಪ್ತೋ**
**ದ್ರೋಣಂ ಹಂತುಂ ಯತ್ನಮುಚ್ಚೈಶ್ಚಕಾರ ।**
**ನಿವಾರಯಾಮಾಸ ಗುರುಃ ಶರೌಘೈ-**
**ರ್ಧೃಷ್ಟದ್ಯುಮ್ನಂ ಸೋಽಪಿ ತಂ ಸಾಯಕೇನ ॥ ೨೭೯ ॥**

**ವಿವ್ಯಾಧ ತೇನಾಭಿಹತಃ ಸ ಮೂರ್ಛಾ-**
**ಮವಾಪ ವಿಪ್ರೋ ನಿಷಸಾದ ಚಾSಶು ॥ ೨೮೦ ॥**

**ಅರ್ಥ** :- **ಭೀಮಸೇನಾಭಿಗುಪ್ತಃ** = ಭೀಮನಿಂದ ರಕ್ಷಿಸಲ್ಪಟ್ಟಿದ್ದ, **ದೃಷ್ಟದ್ಯುಮ್ನಃ** = ದೃಷ್ಟದ್ಯುಮ್ನನು, **ದ್ರೋಣಂ ಹಂತುಂ** = ದ್ರೋಣನನ್ನು ಕೊಲ್ಲಲು, **ಉಚ್ಚೈಃ ಯತ್ನಂ ಚಕಾರ** = ಬಹಳ ಪ್ರಯತ್ನ ಮಾಡಿದ, **ಗುರುಃ** = ದ್ರೋಣನು, **ಶರೌಘೈಃ** = ಬಾಣಸಮೂಹಗಳಿಂದ, **ದೃಷ್ಟದ್ಯುಮ್ನಂ ನಿವಾರಯಾಮಾಸ** = ದೃಷ್ಟದ್ಯುಮ್ನನನ್ನು ತಡೆದನು, **ಸೋSಪಿ** = ಆ ದೃಷ್ಟದ್ಯುಮ್ನನೂ ಕೂಡ, **ತಂ** = ಆ ದ್ರೋಣನನ್ನು, **ಸಾಯಕೇನ ವಿವ್ಯಾಧ** = ಬಾಣಗಳಿಂದ ಹೊಡೆದ, **ತೇನ** = ಆ ಬಾಣದಿಂದ, **ಅಭಿಹತಃ** = ಹೊಡೆಯಲ್ಪಟ್ಟ, **ಸ ವಿಪ್ರಃ** = ಆ ದ್ರೋಣನು, **ಮೂರ್ಛಾಮವಾಪ** = ಮೂರ್ಛೆಯನ್ನು ಹೊಂದಿದ, **ನಿಷಸಾದ ಚ** = ಕುಳಿತುಬಿಟ್ಟ.

**ತಾತ್ಪರ್ಯ** :- ಭೀಮನಿಂದ ರಕ್ಷಿತನಾಗಿದ್ದ ದೃಷ್ಟದ್ಯುಮ್ನನು ದ್ರೋಣನನ್ನು ಕೊಲ್ಲಲು ಬಹಳ ಯತ್ನಿಸಿದ ದ್ರೋಣ ಬಾಣಸಮೂಹಗಳಿಂದ ದೃಷ್ಟದ್ಯುಮ್ನನನ್ನು ತಡೆದ. ಆ ದೃಷ್ಟದ್ಯುಮ್ನನೂ ಕೂಡ ದ್ರೋಣನನ್ನು ಬಾಣಗಳಿಂದ ಹೊಡೆದ. ಆ ಬಾಣದಿಂದ ಹೊಡೆಸಿಕೊಂಡ ದ್ರೋಣ ಮೂರ್ಛಾವಶನಾದನು ಮತ್ತು ಕುಳಿತುಬಿಟ್ಟ.

**ಧೃಷ್ಟದ್ಯುಮ್ನಃ ಸತ್ವರಂ ಖಡ್ಗಚರ್ಮಣೀ**
**ಆದಾಯ ತಸ್ಯಾSರುರುಹೇ ರಥೋತ್ತಮಮ್ ।**
**ಸಂಜ್ಞಾಮವಾಪ್ಯಾಥ ಗುರುಃ ಶರೌಘೈಃ**
**ಪ್ರಾದೇಶಮಾತ್ರೈರ್ವ್ಯಥಯಾಮಾಸ ತಂ ಚ ॥ ೨೮೧ ॥**

**ಅರ್ಥ** :- **ದೃಷ್ಟದ್ಯುಮ್ನಃ** = ದೃಷ್ಟದ್ಯುಮ್ನನು, **ಸತ್ವರಂ** = ಕೂಡಲೇ, **ಖಡ್ಗಚರ್ಮಣೀ** = ಕತ್ತಿ ಗುರಾಣಿಗಳನ್ನು, **ಆದಾಯ** = ಹಿಡಿದುಕೊಂಡು, **ತಸ್ಯ** = ಆ ದ್ರೋಣನ, **ರಥೋತ್ತಮಂ ಆರುರುಹೇ** = ಉತ್ತಮವಾದ ರಥವನ್ನು ಏರಿದನು, **ಅಥ** = ಅನಂತರ, **ಗುರುಃ** = ದ್ರೋಣನು, **ಸಂಜ್ಞಾಂ ಅವಾಪ್ಯ** = ಎಚ್ಚೆತ್ತು, **ಪ್ರಾದೇಶಮಾತ್ರೈಃ ಶರೌಘೈಃ** = ಗೇಣುದ್ದದ ಬಾಣ ಸಮೂಹಗಳಿಂದ, **ತಂ** = ಆ ದೃಷ್ಟದ್ಯುಮ್ನನನ್ನು, **ವ್ಯಥಯಾಮಾಸ** = ಪೀಡಿಸಿದ.

**ತಾತ್ಪರ್ಯ :-** ದೃಷ್ಟದ್ಯುಮ್ನ ಬೇಗನೇ ಕತ್ತಿ ಗುರಾಣಿ ಹಿಡಿದುಕೊಂಡು ದ್ರೋಣನ ಉತ್ತಮವಾದ ರಥವನ್ನೇರಿದ. ಕೂಡಲೇ ಎಚ್ಚರೆತು ದ್ರೋಣ ಗೇಣುದ್ದದ ಬಾಣಗಳಿಂದ ದೃಷ್ಟದ್ಯುಮ್ನನನ್ನು ಪೀಡಿಸಿದ.

**ಸ ತೈರತಿವ್ಯಥಿತಸ್ತದ್ರಥಾಚ್ಚ**
**ಪರಾವೃತ್ತಃ ಸ್ವಂ ರಥಮಾರುರೋಹ ।**
**ಸುಸಂರಬ್ಧೌ ತೌ ಪುನರೇವ ಯುದ್ಧಂ**
**ಸಂಚಕ್ರತುರ್ವೃಷ್ಟಶರಾಂಬುಧಾರೌ ॥ ೨೮೨ ॥**

**ಅರ್ಥ :-** **ಸಃ** = ಆ ದೃಷ್ಟದ್ಯುಮ್ನನು, **ತೈಃ** = ಆ ಬಾಣಗಳಿಂದ, **ಅತಿವ್ಯಥಿತಃ** = ಬಹಳ ವೇದನೆ ಹೊಂದಿದವನಾಗಿ, **ತದ್ರಥಾತ್** = ಆ ದ್ರೋಣನ ರಥದಿಂದ, **ಪರಾವೃತ್ತಃ** = ಹಿಂತಿರುಗಿ ಬಂದವನಾಗಿ, **ಸ್ವಂ ರಥಂ ಆರುರೋಹ** = ತನ್ನ ರಥವನ್ನೇರಿದನು, **ಸುಸಂರಬ್ಧೌ ತೌ** = ಬಹಳ ಯತ್ನಿಸುತ್ತಿದ್ದ ಅವರಿಬ್ಬರು, **ವೃಷ್ಟಶರಾಂಬುಧಾರೌ** = ಬಾಣಗಳ ಜಲಧಾರೆ ಸುರಿಸುವವರಾಗಿ, **ಪುನರೇವ ಯುದ್ಧಂ ಸಂಚಕ್ರತುಃ** = ಮತ್ತೆ ಯುದ್ಧ ಮಾಡಿದರು.

**ತಾತ್ಪರ್ಯ :-** ದೃಷ್ಟದ್ಯುಮ್ನ ಬಾಣಗಳಿಂದ ಬಹಳ ನೋವನ್ನು ಅನುಭವಿಸಿ ದ್ರೋಣನ ರಥದಿಂದ ತಿರುಗಿ ಬಂದು ತನ್ನ ರಥವನ್ನೇರಿದ. ಅವರಿಬ್ಬರೂ ಬಹಳ ಪ್ರಯತ್ನಿಸುತ್ತಾ ಬಾಣಗಳ ಮಳೆಯನ್ನು ಸುರಿಸುತ್ತಾ ಮತ್ತೆ ಯುದ್ಧ ಮಾಡಿದರು.

**ನಿವಾರ್ಯ ಶತ್ರುಂ ಸ ಶರೈರ್ಬ್ರಹ್ಮಾಸ್ತ್ರಮಸೃಜದ್ ದ್ವಿಜಃ ।**
**ತೇನ ಸಂದಾಹಯಾಮಾಸ ಪಾಂಚಾಲಾನ್ ಸುಬಹೂನ್ ರಣೇ ।**
**ಪುರುಜಿತ್ ಕುಂತಿಭೋಜಶ್ಚ ತೇನಾನ್ಯೇ ಚ ಹತಾಸ್ತದಾ ॥ ೨೮೩ ॥**

**ಅರ್ಥ :-** **ಸಃ ದ್ವಿಜಃ** = ಆ ದ್ರೋಣನು, **ಶರೈಃ** = ಬಾಣಗಳಿಂದ, **ಶತ್ರುಂ ನಿವಾರ್ಯ** = ಶತ್ರುವಾದ ದೃಷ್ಟದ್ಯುಮ್ನನನ್ನುತಡೆದು, **ಬ್ರಹ್ಮಾಸ್ತ್ರಂ ಅಸೃಜತ್** = ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದ, **ತೇನ** = ಅದರಿಂದ, **ಸುಬಹೂನ್ ಪಾಂಚಾಲಾನ್** = ಬಹುಮಂದಿ ಪಾಂಚಾಲರನ್ನು, **ರಣೇ** = ಯುದ್ಧದಲ್ಲಿ, **ಸಂದಾಹಯಾಮಾಸ** = ಸುಟ್ಟು ಹಾಕಿದ, **ಪುರುಜಿತ್ ಕುಂತಿಭೋಜಶ್ಚ ಅನ್ಯೇಚ**

= ಪುರುಜಿತ್ ಕುಂತಿ ಭೋಜ ಮತ್ತು ಬೇರೆಯವರೂ, **ತದಾ** = ಆ ಯುದ್ಧದಲ್ಲಿ, **ತೇನ** = ಆ ದ್ರೋಣನಿಂದ, **ಹತಾಃ** = ಕೊಲ್ಲಲ್ಪಟ್ಟರು.

**ತಾತ್ಪರ್ಯ** :- ದ್ರೋಣ ಬಾಣಗಳಿಂದ ದೃಷ್ಟದ್ಯುಮ್ನನನ್ನು ತಡೆದು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದ. ಆ ಬ್ರಹ್ಮಾಸ್ತ್ರವು ಬಹಳ ಮಂದಿ ಪಾಂಚಾಲರನ್ನು ಸುಟ್ಟು ಹಾಕಿತು. ಪುರುಜಿತ್ ಕುಂತಿಭೋಜ ಮತ್ತು ಬೇರೆಯವರೂ ಕೂಡ ಆವಾಗ ಅಲ್ಲಿ ದ್ರೋಣನಿಂದ ಹತರಾದರು.

**ಭೀಮೋಽರ್ಜುನಃ ಸಾತ್ಯಕಿಶ್ಚ ಪರ್ಯಾಯೇಣ ಗುರೋಃ ಸುತಮ್ ।**
**ದೂರತೋ ವಾರಯಾಮಾಸುರ್ಮಹತ್ಯಾ ಸೇನಯಾ ಸಹ ॥ ೨೮೪ ॥**

**ಅರ್ಥ** :- **ಭೀಮಃ ಅರ್ಜುನಃ ಸಾತ್ಯಕಿಶ್ಚ** = ಭೀಮ ಅರ್ಜುನ ಮತ್ತೂ ಸಾತ್ಯಕಿ, **ಪರ್ಯಾಯೇಣ** = ಒಬ್ಬರಾದ ಬಳಿಕ ಒಬ್ಬರಂತೆ, **ಗುರೋಃ ಸುತಂ** = ಅಶ್ವತ್ಥಾಮನನ್ನು, **ಮಹತ್ಯಾ ಸೇನಯಾ ಸಹ** = ಮಹತ್ತಾದ ಸೇನೆಯ ಜೊತೆಗೆ, **ದೂರತೋ ವಾರಯಾಮಾಸುಃ** = ದೂರದಲ್ಲಿಯೇ ತಡೆದು ನಿಲ್ಲಿಸಿದರು.

**ತಾತ್ಪರ್ಯ** :- ಭೀಮ ಅರ್ಜುನ ಸಾತ್ಯಕಿಯರು ಒಬ್ಬರಾದ ಬಳಿಕ ಒಬ್ಬರಂತೆ ಗುರುಗಳ ಮಗನಾದ ಅಶ್ವತ್ಥಾಮನನ್ನು ಮಹತ್ತಾದ ಸೇನೆಯ ಜೊತೆಗೆ ದೂರದಲ್ಲಿಯೇ ತಡೆದು ನಿಲ್ಲಿಸಿದರು.

**ಕರ್ಣದುರ್ಯೋಧನಾದೀಂಶ್ಚ ಶಲ್ಯಂ ಭೋಜಂ ಕೃಪಂ ತಥಾ ।**
**ಭೀಮಾರ್ಜುನೌ ಶರೌಘೇಣ ವಾರಯಾಮಾಸತೂ ರಣೇ ॥ ೨೮೫ ॥**

**ಅರ್ಥ** :- **ಭೀಮಾರ್ಜುನೌ** = ಭೀಮಾರ್ಜುನರು, **ಶರೌಘೇಣ** = ಬಾಣ ಸಮೂಹದಿಂದ, **ಕರ್ಣದುರ್ಯೋಧನಾದೀಂಶ್ಚ** = ಕರ್ಣ ದುರ್ಯೋಧನ ಮೊದಲಾದವರನ್ನು, **ಶಲ್ಯಂ ಭೋಜಂ ತಥಾ ಕೃಪಂ** = ಶಲ್ಯ ಕೃತವರ್ಮರನ್ನು ಹಾಗೆಯೇ ಕೃಪನನ್ನು, **ರಣೇ** = ಯುದ್ಧದಲ್ಲಿ, **ವಾರಯಾಮಾಸತುಃ** = ತಡೆದರು.

**ತಾತ್ಪರ್ಯ** :- ಭೀಮಾರ್ಜುನರು ಕರ್ಣ ದುರ್ಯೋಧನ ಮೊದಲಾದವರನ್ನೂ ಶಲ್ಯಕೃತವರ್ಮ ಕೃಪರನ್ನೂ ಬಾಣಸಮೂಹಗಳಿಂದ ಯುದ್ಧದಲ್ಲಿ ತಡೆದರು.

**ತತ್ರ ಭೀಮೋ ಗಜಾನೀಕಂ ಜಯತ್ಸೇನಂ ಚ ಮಾಗಧಮ್ ।**
**ಜಘಾನ ಸುಬಹೂಂಶ್ಚೈವ ಮಾಗಧಾನಾಂ ರಥವ್ರಜಾನ್ ॥ ೨೮೬ ॥**

**ಅರ್ಥ** :- **ತತ್ರ** = ಅಲ್ಲಿ, **ಭೀಮಃ** = ಭೀಮನು, **ಗಜಾನೀಕಂ** = ಗಜಸೇನೆಯನ್ನು, **ಜಯತ್ಸೇನಂ ಚ** = ಜಯತ್ಸೇನನನ್ನೂ, **ಮಾಗಧಂ** = ಮಾಗಧ ದೇಶದ ರಾಜನನ್ನು, **ಮಾಗಧಾನಾಂ** = ಮಗಧ ದೇಶದವರ, **ಸುಬಹೂನ್ ರಥವ್ರಜಾಂಶ್ಚ** = ಬಹಳ ರಥಸಮೂಹಗಳನ್ನೂ, **ಜಘಾನ** = ನಾಶಪಡಿಸಿದ.

**ತಾತ್ಪರ್ಯ** :- ಆವಾಗ ಭೀಮ ಗಜ ಸೇನೆಯನ್ನು ಜಯತ್ಸೇನನ್ನೂ ಸಂಹರಿಸಿದ. ಮಗಧ ದೇಶದ ರಾಜನನ್ನೂ ಮಗಧ ದೇಶದವರ ಬಹಳ ರಥಗಳನ್ನೂ ನಾಶಪಡಿಸಿದ.

**ಅಥ ಮಾಳವರಾಜಸ್ಯ ತ್ವಶ್ವತ್ಥಾಮಾಭಿಧಂ ಗಜಮ್ ।**
**ಭೀಮಸೇನಹತಂ ದೃಷ್ಟ್ವಾ ವಾಸುದೇವಪ್ರಚೋದಿತಃ ।**
**ಅಶ್ವಥ್ಥಾಮಾ ಹತ ಇತಿ ಪ್ರಾಹ ರಾಜಾ ಯುಧಿಷ್ಠಿರಃ ॥ ೨೮೭ ॥**

**ಅರ್ಥ** :- **ಅಥ** = ಅನಂತರ, **ಮಾಲವರಾಜಸ್ಯ** = ಮಾಲವ ರಾಜನ, **ಅಶ್ವತ್ಥಾಮಾಭಿಧಂ ಗಜಂ** = ಅಶ್ವತ್ಥಾಮ ಎಂಬ ಹೆಸರುಳ್ಳ ಆನೆಯನ್ನು, **ಭೀಮಸೇನಹತಂ** = ಭೀಮನಿಂದ ಹತವಾದದ್ದನ್ನು, **ದೃಷ್ಟ್ವಾ** = ಕಂಡು, **ವಾಸುದೇವಪ್ರಚೋದಿತಃ** = ಕೃಷ್ಣನಿಂದ ಪ್ರೇರಿತನಾಗಿ, **ರಾಜಾ ಯುಧಿಷ್ಠಿರಃ** = ರಾಜನಾದ ಯುಧಿಷ್ಠಿರನು, ''**ಅಶ್ವತ್ಥಾಮಾಹತಃ** = ಅಶ್ವತ್ಥಾಮ ಹತನಾದನು'', **ಇತಿ** = ಎಂಬುದಾಗಿ, **ಪ್ರಾಹ** = ಹೇಳಿದನು.

**ತಾತ್ಪರ್ಯ** :- ಮಾಲವ ರಾಜನ ಅಶ್ವತ್ಥಾಮ ಎಂಬ ಆನೆ ಭೀಮನಿಂದ ಹತವಾದದ್ದನ್ನು ನೋಡಿ ಶ್ರೀಕೃಷ್ಣನ ಪ್ರೇರಣೆಯಂತೆ ರಾಜನಾದ ಯುಧಿಷ್ಠಿರ ''ಅಶ್ವತ್ಥಾಮ ಹತನಾದ'' ಎಂದು ಹೇಳಿದ.

**ಅಶ್ವತ್ಥಾಮವಧಂ ಶ್ರುತ್ವಾ ನಾಹಂ ಯೋತ್ಸ್ಯ ಇತಿ ಸ್ವಯಮ್ ।**
**ಪುರೋಕ್ತಂ ಧರ್ಮಜಾಯ್ಯೆವ ತೇನ ದ್ರೋಣೋ ಯುಧಿಷ್ಠಿರಮ್ ॥೨೮೮॥**

**ಬ್ರೂಹಿ ಸತ್ಯಮಿತಿ ಪ್ರಾಹ ಸತ್ಯಮಿತ್ಯೇವ ಸೋऽಬ್ರವೀತ್ ।**
**ಉಪಾಂಶು ಕುಂಜರಶ್ಚೇತಿ ದ್ರೋಣೋऽತೋ ವ್ಯಥಿತೋऽಭವತ್ ॥೨೮೯॥**

**ಅರ್ಥ** :- **ಅಶ್ವತ್ಥಾಮವಧಂ ಶ್ರುತ್ವಾ** = ಅಶ್ವತ್ಥಾಮನ ವಧೆಯನ್ನು ಕೇಳಿದ ಮೇಲೆ, **ಅಹಂ** = ನಾನು, **ನ ಯೋತ್ಸ್ಯೇ** = ಯುದ್ಧ ಮಾಡುವುದಿಲ್ಲ, **ಇತಿ** = ಎಂಬುದಾಗಿ, **ತೇನ** = ಆ ದ್ರೋಣನಿಂದ, **ಧರ್ಮಜಾಯ** = ಯುಧಿಷ್ಠಿರನಿಗೆ, **ಪುರಾ** = ಹಿಂದೆ, **ಉಕ್ತಂ** = ಹೇಳಲ್ಪಟ್ಟಿತ್ತು. (**ಅತಃ** = ಆದ್ದರಿಂದ), **ದ್ರೋಣಃ** = ದ್ರೋಣನು, **ಯುಧಿಷ್ಠಿರಂ** = ಯುಧಿಷ್ಠಿರನನ್ನು ಕುರಿತು, **ಸತ್ಯಂ ಬ್ರೂಹಿ** = 'ಸತ್ಯವೇ ? ಹೇಳು', **ಇತಿ** = ಎಂದು, **ಪ್ರಾಹ** = ಹೇಳಿದನು, **ಸಃ** = ಆ ಯುಧಿಷ್ಠಿರನು, **ಸತ್ಯಮೇವ ಇತಿ** = ಸತ್ಯವೇ ಎಂದು, **ಅಬ್ರವೀತ್** = ಹೇಳಿದ, **ಕುಂಜರ ಇತಿ** = ಆನೆ ಎಂದು, **ಉಪಾಂಶ್ವಬ್ರವೀತ್** = ಮೆಲ್ಲನೆ ಹೇಳಿದ, **ಅತಃ** = ಆದ್ದರಿಂದ, **ದ್ರೋಣಃ** = ದ್ರೋಣನು, **ವ್ಯಥಿತೋಽಭವತ್** = ದುಃಖಿತನಾದನು.

**ತಾತ್ಪರ್ಯ** :- ಅಶ್ವತ್ಥಾಮನ ವಧೆಯನ್ನು ಕೇಳಿದ ನಂತರ ನಾನು ಯುದ್ಧ ಮಾಡುವುದಿಲ್ಲ ಎಂಬುದಾಗಿ ದ್ರೋಣ ತಾನೇ ಧರ್ಮರಾಜನಿಗೆ ಹಿಂದೆ ಹೇಳಿದ್ದ. ಆದ್ದರಿಂದ ದ್ರೋಣ ಯುಧಿಷ್ಠಿರನಿಗೆ ಕೇಳಿದ. 'ಸತ್ಯವೇ ? ಹೇಳು ಎಂದು ಧರ್ಮರಾಜ ಸತ್ಯವೆಂದೇ ಹೇಳಿದ. ಜೊತೆಗೆ ಮೆಲ್ಲನೆ ಆನೆ ಎಂದೂ ಕೂಡ ಹೇಳಿದ. ಆದ್ದರಿಂದ ದ್ರೋಣ ಬಹಳ ದುಃಖಿತನಾದ.

**ತಸ್ಯ ಭೀಮೋ ರಥೇಷಾಂ ಚ ಗೃಹೀತ್ವಾ ನ ತವೇದೃಶಮ್ ।**
**ಯೋಗ್ಯಂ ಗುಣವತೋ ನಿತ್ಯಂ ಪರಧರ್ಮೋಪಜೀವನಮ್ ॥ ೨೯೦ ॥**

**ಇತ್ಯಾಹ ಖಸ್ಥಾ ಮುನಯಶ್ಚಾಲಮೇಹೀತಿ ತಂ ತದಾ ।**
**ಊಚುಸ್ತದಖಿಲಂ ಜ್ಞಾತ್ವಾ ದ್ರೋಣಃ ಶಸ್ತ್ರಮವಾಸೃಜತ್ ॥ ೨೯೧ ॥**

**ಅರ್ಥ** :- **ಭೀಮಃ** = ಭೀಮನು, **ತಸ್ಯ** = ಆ ದ್ರೋಣನ, **ರಥೇಷಾಂ** = ರಥದ ಕಂಬವನ್ನು, **ಗೃಹೀತ್ವಾ** = ಹಿಡಿದುಕೊಂಡು, **ಗುಣವತಸ್ತವ** = ಗುಣವಂತರಾದ ನಿಮಗೆ, **ಈದೃಶಂ ಪರಧರ್ಮೋಪಜೀವನಂ** = ಹೀಗೆ ಪರಧರ್ಮದಿಂದ ಜೀವಿಸುವುದು, **ಯೋಗ್ಯಂ ನ** = ಸರಿಯಲ್ಲ, **ಇತಿ ಆಹ** = ಈ ರೀತಿಯಾಗಿ ಹೇಳಿದನು, **ಖಸ್ಥಾ ಮುನಯಃ** = ಆಕಾಶದಲ್ಲಿದ್ದ ಋಷಿ ಮುನಿಗಳು, **ಅಲಂ** = ಕ್ಷತ್ರಿಯರ ನಾಶಮಾಡಿದ್ದು ಸಾಕು, **ಏಹಿ ಇತಿ** = ಬಾ ಎಂಬುದಾಗಿ, **ಊಚುಃ** = ಹೇಳಿದರು, **ತದಾ** = ಆವಾಗ, **ತದಖಿಲಂ** =

ಅದೆಲ್ಲವನ್ನೂ, **ಜ್ಞಾತ್ವಾ** = ಯೋಚಿಸಿ, **ದ್ರೋಣಃ** = ದ್ರೋಣನು, **ಶಸ್ತ್ರಂ ಅವಾಸೃಜತ್** = ಶಸ್ತ್ರವನ್ನು ಪರಿತ್ಯಾಗ ಮಾಡಿದ.

**ತಾತ್ಪರ್ಯ** :- ಭೀಮನು ದ್ರೋಣನ ರಥದ ಕಂಬವನ್ನು ಹಿಡಿದುಕೊಂಡು ನಿಮ್ಮಂತಹ ಗುಣವಂತರಿಗೆ ಹೀಗೆ ಪರಧರ್ಮದಿಂದ ಜೀವಿಸುವುದು ಯೋಗ್ಯವಲ್ಲ ಎಂದು ನುಡಿದ. ಆಕಾಶದಲ್ಲಿದ್ದ ವಸಿಷ್ಠಾದಿ ಮುನಿಗಳು ಕ್ಷತ್ರಿಯರ ನಾಶಮಾಡಿದ್ದು ಸಾಕು ಎಂದರು. ಅದೆಲ್ಲವನ್ನೂ ಯೋಚಿಸಿ ದ್ರೋಣನು ಶಸ್ತ್ರತ್ಯಾಗ ಮಾಡಿದ.

**ಸ ನ್ಯಸ್ಯ ಕರ್ಮಾಣಿ ತದಾಽಖಿಲಾನಿ**
**ಯೋಗಾರೂಢಃ ಪರಮಂ ವಾಸುದೇವಮ್ ।**
**ಸರ್ವೇಶ್ವರಂ ನಿತ್ಯನಿರಸ್ತದೋಷಂ**
**ಧ್ಯಾಯನ್ ಮುಕ್ತ್ವಾ ದೇಹಮಗಾತ್ ಸ್ವಧಾಮ ॥ ೨೯೨ ॥**

**ಅರ್ಥ** :- **ಸಃ** = ಆ ದ್ರೋಣನು, **ತದಾ** = ಆವಾಗ, **ಅಖಿಲಾನಿ ಕರ್ಮಾಣಿ** = ಎಲ್ಲಾ ಕರ್ಮಗಳನ್ನು, **ನ್ಯಸ್ಯ** = ಬಿಟ್ಟು (ಹರಿಗೆ ಅರ್ಪಿಸಿ), **ಯೋಗಾರೂಢಃ** = ಯೋಗಾರೂಢನಾಗಿ, **ಸರ್ವೇಶ್ವರಂ** = ಎಲ್ಲರಿಗೊಡೆಯ ನಾದ, **ನಿತ್ಯನಿರಸ್ತದೋಷಂ** = ನಿತ್ಯದೋಷ ರಹಿತನಾದ, **ಪರಮಂ ವಾಸುದೇವಂ** = ಉತ್ತಮನಾದ ವಾಸುದೇವನನ್ನು, **ಧ್ಯಾಯನ್** = ಧ್ಯಾನಿಸುತ್ತಾ, **ದೇಹಂ ಮುಕ್ತ್ವಾ** = ದೇಹವನ್ನು ತ್ಯಜಿಸಿ, **ಸ್ವಧಾಮ** = ತನ್ನ ಲೋಕಕ್ಕೆ, **ಅಗಾತ್** = ಹೋದನು.

**ತಾತ್ಪರ್ಯ** :- ದ್ರೋಣ ಆವಾಗ ಎಲ್ಲಾ ಕರ್ಮಗಳನ್ನು ಪರಮಾತ್ಮನಿಗರ್ಪಿಸಿ ಯೋಗಾರೂಢನಾಗಿ ಸರ್ವೇಶ್ವರನಾದ ದೋಷರಹಿತನಾದ ಉತ್ತಮನಾದ ವಾಸುದೇವನನ್ನು ಧ್ಯಾನಿಸುತ್ತಾ ಶರೀರವನ್ನು ತ್ಯಜಿಸಿ ತನ್ನ ಲೋಕಕ್ಕೆ ತೆರಳಿದ.

**ತಂ ಕೇಶವಃ ಪಾಂಡವಾ ಗೌತಮಶ್ಚ**
**ಯಾಂತಂ ಸ್ವಲೋಕಂ ದದೃಶುರ್ವಿಹಾಯಸಾ ।**
**ಧೃಷ್ಟದ್ಯುಮ್ನಃ ಪಾಂಡವೈರ್ವಾರ್ಯಮಾಣೋಽ-**
**ಪ್ಯಗಾತ್ ಖಡ್ಗಂ ಚರ್ಮ ಚಾಽದಾಯ ತತ್ರ ॥ ೨೯೩ ॥**

**ಅರ್ಥ :- ಕೇಶವಃ ಪಾಂಡವಾ ಗೌತಮಶ್ಚ** = ಕೃಷ್ಣ ಪಾಂಡವರು ಮತ್ತು ಕೃಪ ಇವರು, **ವಿಹಾಯಸಾ** = ಆಕಾಶ ಮಾರ್ಗದಿಂದ, **ಸ್ವಲೋಕಂ ಯಾಂತಂ ತಂ** = ತನ್ನ ಲೋಕಕ್ಕೆ ಹೋಗುತ್ತಿದ್ದ ಆ ದ್ರೋಣನನ್ನು, **ದದೃಶುಃ** = ನೋಡಿದರು, **ಪಾಂಡವೈಃ** = ಪಾಂಡವರಿಂದ, **ವಾರ್ಯಮಾಣೋಽಪಿ** = ತಡೆಯಲ್ಪಟ್ಟವನಾದರೂ, **ದೃಷ್ಟದ್ಯುಮ್ನಃ** = ದೃಷ್ಟದ್ಯುಮ್ನನು, **ಖಡ್ಗಂ ಚರ್ಮ ಚ ಆದಾಯ** = ಕತ್ತಿ ಗುರಾಣಿಗಳನ್ನು ಹಿಡಿದುಕೊಂಡು, **ತತ್ರ** = ದ್ರೋಣನಿದ್ದಲ್ಲಿಗೆ, **ಅಗಾತ್** = ಹೋದನು.

**ತಾತ್ಪರ್ಯ :-** ಕೃಷ್ಣ ಪಾಂಡವರು ಕೃಪ ಇವರು ಆಕಾಶ ಮಾರ್ಗದಿಂದ ದ್ರೋಣ ತನ್ನ ಲೋಕಕ್ಕೆ ಹೋಗುತ್ತಿದ್ದದ್ದನ್ನು ನೋಡಿದರು. ಪಾಂಡವರು ತಡೆದರೂ ಕೂಡ ದೃಷ್ಟದ್ಯುಮ್ನ ಕತ್ತಿ ಗುರಾಣಿಗಳನ್ನು ಹಿಡಿದುಕೊಂಡು ದ್ರೋಣನಿದ್ದಲ್ಲಿಗೆ ಹೋದನು.

**ಛಿತ್ವಾಽಸಿನಾ ತಸ್ಯ ಶಿರಃ ಪುನಶ್ಚ**
**ರಥಂ ಸ್ವಕೀಯಂ ತ್ವರಯಾ ಸಮಾಸ್ಥಿತಃ ।**
**ದೃಷ್ಟ್ವಾ ಕೃಪಸ್ತಂ ಸುಭೃಶಂ ಭಯಾರ್ದಿತಃ**
**ಸಂಪ್ರಾದ್ರವದ್ ವಾಜಿನಮೇಕಮಾಸ್ಥಿತಃ ।। ೨೯೪ ।।**

**ಅರ್ಥ :- ದೃಷ್ಟದ್ಯುಮ್ನಃ** = ದೃಷ್ಟದ್ಯುಮ್ನನು, **ಅಸಿನಾ** = ಖಡ್ಗದಿಂದ, **ತಸ್ಯ ಶಿರಃ** = ಆ ದ್ರೋಣನ ತಲೆಯನ್ನು, **ಛಿತ್ವಾ** = ಕತ್ತರಿಸಿ, **ಪುನಃ** = ಮತ್ತೆ, **ಸ್ವಕೀಯಂ ರಥಂ** = ತನ್ನ ರಥವನ್ನು, **ಸಮಾಸ್ಥಿತಃ** = ಏರಿದನು, **ಕೃಪಃ ಚ** = ಕೃಪನಾದರೂ, **ತಂ ದೃಷ್ಟ್ವಾ** = ಅವನನ್ನು ನೋಡಿ, **ಸುಭೃಶಂ ಭಯಾರ್ದಿತಃ** = ಬಹಳ ಭಯಗೊಂಡವನಾಗಿ, **ಏಕಂ ವಾಜಿನಂ ಆಸ್ಥಿತಃ** = ಒಂದು ಕುದುರೆಯನ್ನು ಏರಿದವನಾಗಿ, **ಸಂಪ್ರಾದ್ರವತ್** = ಪಲಾಯನ ಮಾಡಿದ.

**ತಾತ್ಪರ್ಯ :-** ದೃಷ್ಟದ್ಯುಮ್ನ ದ್ರೋಣನ ತಲೆಯನ್ನು ಕತ್ತರಿಸಿ ಮತ್ತೆ ಬೇಗನೇ ತನ್ನ ರಥವನ್ನೇರಿದ. ಕೃಪ ಇದನ್ನು ನೋಡಿ ಬಹಳ ಭಯಗ್ರಸ್ತನಾಗಿ ಒಂದು ಕುದುರೆಯನ್ನೇರಿ ಓಡಿಹೋದ.

**ಸಂಛಿನ್ನೇ ದ್ರೋಣಶಿರಸಿ ಗರ್ಹಯಾಮಾಸ ವಾಸವಿಃ ।**
**ಯುಧಿಷ್ಠಿರಂ ಚ ಪಾಂಚಾಲ್ಯಂ ಸಾತ್ಯಕಿಶ್ಚಾಪಿ ಕೋಪಿತಃ ।। ೨೯೫ ।।**

**ಅರ್ಥ** :- **ದ್ರೋಣಶಿರಸಿ ಸಂಭಿನ್ನೇ** = ದ್ರೋಣನ ಶಿರಸ್ಸು ಭಿನ್ನವಾಗುತ್ತಿರಲು, **ವಾಸವಿಃ** = ಅರ್ಜುನನು, **ಯುಧಿಷ್ಠಿರಂ** = ಧರ್ಮರಾಜನನ್ನು, **ಪಾಂಚಾಲ್ಯಂ ಚ** = ದೃಷ್ಟದ್ಯುಮ್ನನನ್ನೂ, **ಗರ್ಹಯಾಮಾಸ** = ಆಕ್ಷೇಪಿಸಿದ, **ಸಾತ್ಯಕಿಶ್ಚಾಪಿ** = ಸಾತ್ಯಕಿಯೂ ಕೂಡ, **ಕೋಪಿತಃ** = ಸಿಟ್ಟುಗೊಳಿಸಲ್ಪಟ್ಟನು.

**ತಾತ್ಪರ್ಯ** :- ದ್ರೋಣನ ಶಿರಶ್ಛೇದವಾದಾಗ ಅರ್ಜುನ ಧರ್ಮರಾಜನನ್ನೂ ದೃಷ್ಟದ್ಯುಮ್ನನನ್ನೂ ಆಕ್ಷೇಪಿಸಿದ. ಸಾತ್ಯಕಿಯೂ ಕೂಡ ಕೋಪಗೊಂಡ.

**ಧೃಷ್ಟದ್ಯುಮ್ನಸ್ತು ತಾವಾಹ ಕಥಂ ಭೂರಿಶ್ರವಾ ಹತಃ ।**
**ಇತಿ ತಂ ಸಾತ್ಯಕಿಃ ಕ್ರುದ್ಧೋ ಗದಾಪಾಣಿಃ ಸಮಭ್ಯಯಾತ್ ॥ ೨೯೬ ॥**

**ಅರ್ಥ** :- **ದೃಷ್ಟದ್ಯುಮ್ನಸ್ತು** = ದೃಷ್ಟದ್ಯುಮ್ನನಾದರೂ, **ತೌ ಆಹ** = ಆ ಅರ್ಜುನ ಸಾತ್ಯಕಿಯರನ್ನು ಕುರಿತು, **ಆಹ** = ಕೇಳಿದ, **ಭೂರಿಶ್ರವಾಃ** = ಭೂರಿಶ್ರವನು, **ಕಥಂ ಹತಃ** = ಹೇಗೆ ಕೊಲ್ಲಲ್ಪಟ್ಟನು ? **ಇತಿ** = ಎಂಬುದಾಗಿ, **ಸಾತ್ಯಕಿಃ** = ಸಾತ್ಯಕಿಯು, **ಕ್ರುದ್ಧಃ** = ಕೋಪಗೊಂಡವನಾಗಿ, **ಗದಾಪಾಣಿಃ** = ಗದಾಪಾಣಿಯಾಗಿ, **ತಂ ಸಮಭ್ಯಯಾತ್** = ದೃಷ್ಟದ್ಯುಮ್ನನನ್ನು ಕುರಿತು ಹೋದನು.

**ತಾತ್ಪರ್ಯ** :- ದೃಷ್ಟದ್ಯುಮ್ನ ಅರ್ಜುನ ಸಾತ್ಯಕಿಯರಿಗೆ ಕೇಳಿದ ಭೂರಿಶ್ರವ ನಿಮ್ಮಿಂದ ಹೇಗೆ ಹತನಾದ ? ಆವಾಗ ಸಾತ್ಯಕಿ ಕೋಪಗೊಂಡವನಾಗಿ ಗದಾಪಾಣಿಯಾಗಿ ದೃಷ್ಟದ್ಯುಮ್ನನ ಮೇಲೇರಿ ಬಂದ.

**ಆಹ್ವಯಾಮಾಸ ಪಾಂಚಾಲ್ಯಸ್ತಂ ಧೃತಾಸಿರವಿಸ್ಮಯಃ ।**
**ತದಾ ಜಗ್ರಾಹ ಶೈನೇಯಂ ಭೀಮಃ ಕೃಷ್ಣಪ್ರಚೋದಿತಃ ।**
**ಶಮಯಾಮಾಸ ಪಾರ್ಥಂ ಚ ಪಾಂಚಾಲ್ಯಸ್ನೇಹಯಂತ್ರಿತಃ ॥ ೨೯೭ ॥**

**ಅರ್ಥ** :- **ಪಾಂಚಾಲ್ಯಃ** = ದೃಷ್ಟದ್ಯುಮ್ನನು, **ಧೃತಾಸಿಃ** = ಧರಿಸಲ್ಪಟ್ಟ ಖಡ್ಗವುಳ್ಳವನಾಗಿ, **ಅವಿಸ್ಮಯಃ** = ನಿರ್ಭೀತನಾಗಿ, **ತಂ ಆಹ್ವಯಾಮಾಸ** = ಆ ಸಾತ್ಯಕಿಯನ್ನು ಕರೆದನು, **ತದಾ** = ಆವಾಗ, **ಕೃಷ್ಣಪ್ರಚೋದಿತಃ** =

ಕೃಷ್ಣನಿಂದ ಪ್ರೇರಿಸಲ್ಪಟ್ಟ, **ಭೀಮಃ** = ಭೀಮನು, **ಶೈನೇಯಂ** = ಸಾತ್ಯಕಿಯನ್ನು, **ಜಗ್ರಾಹ** = ಹಿಡಿದುಕೊಂಡನು, **ಪಾಂಚಾಲ್ಯ ಸ್ನೇಹಯಂತ್ರಿತಃ** = ದೃಷ್ಟದ್ಯುಮ್ನನ ಮೇಲಿನ ಪ್ರೀತಿಯಿಂದ ನಿಯಂತ್ರಿತನಾಗಿ, **ಪಾರ್ಥಂ ಶಮಯಾಮಾಸ** = ಅರ್ಜುನನನ್ನು ಸಮಾಧಾನಪಡಿಸಿದ.

**ತಾತ್ಪರ್ಯ** :- ದೃಷ್ಟದ್ಯುಮ್ನ ಭಯರಹಿತನಾಗಿ ಖಡ್ಗವನ್ನು ಹಿಡಿದು ಸಾತ್ಯಕಿಯನ್ನು ಯುದ್ಧಕ್ಕೆ ಕರೆದ. ಆಗ ಕೃಷ್ಣನಿಂದ ಚೋದಿತನಾಗಿ ಭೀಮ ಸಾತ್ಯಕಿಯನ್ನು ಗಟ್ಟಿಯಾಗಿ ಹಿಡಿದ. ದೃಷ್ಟದ್ಯುಮ್ನನ ಮೇಲಿನ ಸ್ನೇಹದಿಂದ ಅರ್ಜುನನನ್ನು ಸಾಂತ್ವನಗೊಳಿಸಿದ.

**ತೇ ವಾಸುದೇವೇನ ತದಾऽನುಶಿಕ್ಷಿತಾಃ**
**ಸ್ನೇಹಂ ಪುನಃ ಪೂರ್ವವದಾಪುರುತ್ತಮಮ್ ।**
**ಯತ್ತಾಶ್ಚ ಯುದ್ಧಾಯ ಸಮುದ್ಯತಾಶ್ಚ**
**ತದಾऽऽಗಮದ್ ದ್ರೌಣಿರಪ್ಯಾತ್ತಧನ್ವಾ ॥ ೨೯೮ ॥**

**ಅರ್ಥ** :- **ವಾಸುದೇವೇನ** = ಶ್ರೀ ಕೃಷ್ಣನಿಂದ, **ತೇ** = ಅವರು, **ತದಾ** = ಆವಾಗ, **ಅನುಶಿಕ್ಷಿತಾಃ** = ತಿಳಿಹೇಳಲ್ಪಟ್ಟರು, **ಪುನಃ** = ಮತ್ತೆ, **ಪೂರ್ವವತ್** = ಹಿಂದಿನಂತೆ, **ಉತ್ತಮಂ ಸ್ನೇಹಂ** = ಒಳ್ಳೆಯ ಸ್ನೇಹವನ್ನು, **ಆಪುಃ** = ಹೊಂದಿದರು, **ಚ** = ಮತ್ತು, **ಯುದ್ಧಾಯ** = ಯುದ್ಧಕ್ಕೆ, **ಯತ್ತಾಃ ಸಮುದ್ಯತಾಃ** = ಆಯುಧ ಹಿಡಿದವರಾಗಿ ಸನ್ನದ್ಧರಾದರು, **ತದಾ** = ಆವಾಗ, **ಆತ್ತಧನ್ವಾ ದ್ರೌಣಿರಪಿ** = ಧನುರ್ಧಾರಿಯಾದ ಅಶ್ವತ್ಥಾಮನೂ ಕೂಡ, **ಆಗಮತ್** = ಬಂದನು.

**ತಾತ್ಪರ್ಯ** :- ಕೃಷ್ಣ ಅವರಿಗೆ ಆವಾಗ ತಿಳಿಹೇಳಿದ. ಅವರು ಹಿಂದಿನಂತೆ ಉತ್ತಮವಾದ ಪ್ರೀತಿಯನ್ನು ಹೊಂದಿದರು. ಆಯುಧ ಹಿಡಿದು ಯುದ್ಧಕ್ಕೆ ಸನ್ನದ್ಧರಾದರು. ಆವಾಗಲೇ ಧನುರ್ಧಾರಿಯಾಗಿ ಅಶ್ವತ್ಥಾಮ ಆಗಮಿಸಿದ.

**ಆಶ್ರುತ್ಯ ತಾತಂ ನಿಹತಂ ಪ್ರತಿಜ್ಞಾಂ**
**ಚಕಾರ ನಿಃಶೇಷರಿಪುಪ್ರಮಾಥನೇ ।**
**ನಾರಾಯಣಾಸ್ತ್ರಂ ವಿಸಸರ್ಜ ಕೋಪಾತ್**
**ತದಾ ಭೀತಾ ಭೀಮಮೃತೇ ಸಮಸ್ತಾಃ ॥ ೨೯೯ ॥**

**ಅರ್ಥ** :- **ತಾತಂ ನಿಹತಂ ಆಶ್ರುತ್ಯ** = ತಂದೆ ಹತನಾದದ್ದನ್ನು ಕೇಳಿ, **ದ್ರೌಣಿಃ** = ಅಶ್ವತ್ಥಾಮನು, **ನಿಃಶೇಷರಿಪು ಪ್ರಮಾಥನೇ** = ನಿಃಶೇಷವಾಗಿ ಶತ್ರುಗಳನ್ನು ಕೊಲ್ಲುವ ವಿಷಯದಲ್ಲಿ, **ಪ್ರತಿಜ್ಞಾಂ ಚಕಾರ** = ಪ್ರತಿಜ್ಞೆಯನ್ನು ಮಾಡಿದ, **ಕೋಪಾತ್** = ಕೋಪದಿಂದ, **ನಾರಾಯಣಾಸ್ತ್ರಂ ವಿಸಸರ್ಜ** = ನಾರಾಯಣಾಸ್ತ್ರವನ್ನು ಪ್ರಯೋಗಿಸಿದ, **ತದಾ** = ಆವಾಗ, **ಭೀಮಮೃತೇ** = ಭೀಮನನ್ನು ಹೊರತುಪಡಿಸಿ, **ಸರ್ವೇ** = ಎಲ್ಲರೂ, **ಭೀತಾಃ** = ಭಯಗೊಂಡರು.

**ತಾತ್ಪರ್ಯ** :- ತಂದೆ ಹತನಾದ ಸುದ್ದಿ ಕೇಳಿ ಅಶ್ವತ್ಥಾಮನು ನಿಃಶೇಷವಾಗಿ ಶತ್ರುಗಳನ್ನು ಸಂಹರಿಸುವ ಪ್ರತಿಜ್ಞೆಗೈದ. ಕೋಪದಿಂದ ನಾರಾಯಣಾಸ್ತ್ರವನ್ನು ಪ್ರಯೋಗಿಸಿದ. ಆವಾಗ ಭೀಮ ಹೊರತು ಎಲ್ಲರೂ ಭಯಗೊಂಡರು.

**ಯುಧಿಷ್ಠಿರಃ ಪ್ರಾಹ ವಿಷಣ್ಣಚೇತನಃ**
**ಶೈನೇಯಪೂರ್ವಾಃ ಪ್ರತಿಯಾಂತು ಸರ್ವೇ ।**
**ಸಭ್ರಾತೃಕೋಽಹಂ ದ್ರೌಣಿವರಾಸ್ತ್ರಮಗ್ನೋ**
**ಭವೇಯಮಿತ್ಯತ್ರ ಜಗಾದ ಕೇಶವಃ ॥ ೩೦೦ ॥**

**ಅರ್ಥ** :- **ವಿಷಣ್ಣ ಚೇತನಃ** = ವಿಷಾದ ತುಂಬಿದ ಮನಸ್ಸುಳ್ಳ, **ಯುಧಿಷ್ಠಿರಃ** = ಧರ್ಮರಾಜನು, **ಪ್ರಾಹ** = ಹೇಳಿದನು, **ಶೈನೇಯಪೂರ್ವಾಃ ಸರ್ವೇ** = ಸಾತ್ಯಕಿ ಮೊದಲಾದವರೆಲ್ಲರೂ, **ಪ್ರತಿಯಾಂತು** = ಹಿಂತಿರುಗಲಿ, **ಅಹಂ** = ನಾನು, **ಸಭ್ರಾತೃಕಃ** = ಸೋದರರ ಸಮೇತನಾಗಿ, **ದ್ರೌಣಿ ವರಾಸ್ತ್ರಮಗ್ನೋ ಭವೇಯಂ** = ಅಶ್ವತ್ಥಾಮನ ಉತ್ತಮವಾದ ಅಸ್ತ್ರದಿಂದ ಕಣ್ಮರೆಯಾಗುವೆನು, **ಇತಿ** = ಎಂಬುದಾಗಿ, **ಅತ್ರ ಕೇಶವಃ ಜಗಾದ** = ಆವಾಗ ಕೃಷ್ಣ ಹೇಳಿದ.

**ತಾತ್ಪರ್ಯ** :- ಧರ್ಮರಾಜನು ವಿಷಾದ ಉಂಟಾದ ಮನಸ್ಸುಳ್ಳವನಾಗಿ ಹೇಳಿದ. ಸಾತ್ಯಕಿ ಮೊದಲಾದವರೆಲ್ಲರೂ ಹೊರಟು ಹೋಗಿರಿ. ನಾನು ಸೋದರರ ಸಮೇತನಾಗಿ ಅಶ್ವತ್ಥಾಮನ ಉತ್ತಮಾಸ್ತ್ರದಿಂದ ಕಣ್ಮರೆಯಾಗುತ್ತೇನೆ ಎಂದು. ಆವಾಗ ಕೃಷ್ಣ ಹೇಳಿದ.

**ನಮಧ್ವಮಸ್ತ್ರಸ್ಯ ತತೋ ವಿಮೋಕ್ಷ್ಯಥೇ-**
**ತ್ಯಥ ಪ್ರಣೇಮುಶ್ಚ ಧನಂಜಯಾದಿಕಾಃ ।**
**ಸರ್ವೇ ನ ಭೀಮಸ್ತದಮುಷ್ಯ ಮೂರ್ಧ್ನಿ**
**ಪಪಾತ ಸೋऽಗ್ನಾವಿವ ಸಂಸ್ಥಿತೋऽಗ್ನಿಃ ॥ ೩೦೧ ॥**

**ಅರ್ಥ** :- **ಅಸ್ತ್ರಸ್ಯ ನಮಧ್ವಂ** = ಅಸ್ತ್ರಕ್ಕೆ ನಮಸ್ಕರಿಸಿರಿ, **ತತಃ** = ಅದರಿಂದ, **ವಿಮೋಕ್ಷ್ಯಥ** = ಮುಕ್ತರಾಗಿರಿ, **ಇತಿ** = ಎಂಬುದಾಗಿ. **ಧನಂಜಯಾದಿಕಾಃ ಸರ್ವೇ** = ಅರ್ಜುನ ಮೊದಲಾದವರೆಲ್ಲರೂ, **ಪ್ರಣೇಮುಃ** = ನಮಸ್ಕರಿಸಿದರು, **ಭೀಮಃ ನ** = ಭೀಮನು ನಮಸ್ಕರಿಸಲಿಲ್ಲ, **ತತ್** = ಆದ್ದರಿಂದ, **ಅಮುಷ್ಯ** = ಈ ಭೀಮನ, **ಮೂರ್ಧ್ನಿ ಪಪಾತ** = ತಲೆಯ ಮೇಲೆ ಬಿದ್ದಿತು, **ಸಃ** = ಅವನು, **ಅಗ್ನೌ ಅಗ್ನಿರಿವ** = ಅಗ್ನಿಯಲ್ಲಿ ಅಗ್ನಿಯಂತೆ, **ಸಂಸ್ಥಿತಃ** = ನಿಂತನು.

**ತಾತ್ಪರ್ಯ** :- 'ಎಲ್ಲರೂ ಅಸ್ತ್ರಕ್ಕೆ ನಮಸ್ಕರಿಸಿರಿ. ಆಗ ಅಸ್ತ್ರದಿಂದ ಬಿಡುಗಡೆ ಹೊಂದುವಿರಿ'. ಈ ರೀತಿಯಾಗಿ ಕೃಷ್ಣ ಹೇಳಿದಾಗ ಅರ್ಜುನ ಮೊದಲಾದವರೆಲ್ಲರೂ ನಮಸ್ಕರಿಸಿದರು. ಭೀಮ ನಮಸ್ಕರಿಸಲಿಲ್ಲ. ಆದ್ದರಿಂದ ಅಸ್ತ್ರ ಎಲ್ಲರನ್ನೂ ಬಿಟ್ಟು ಭೀಮನ ತಲೆಯ ಮೇಲೆ ಬಿದ್ದಿತು. ಆದರೆ ಬೆಂಕಿಯ ನಡುವೆ ಬೆಂಕಿಯಂತೆ ಅಸ್ತ್ರದ ನಡುವೆ ಭೀಮ ನಿಂತ.

**ಅದಹ್ಯಮಾನೇ ಭೀಮೇऽಪಿ ವಹ್ನೌ ವಹ್ನಿರಿವ ಸ್ಥಿತೇ ।**
**ಅವೇಷ್ಟಯದ್ ವಾರುಣೇನ ಪಾರ್ಥೋऽತ್ರಾऽತ್ಮಪ್ರಪತ್ತಯೇ ॥ ೩೦೨ ॥**

**ಅರ್ಥ** :- **ಭೀಮೇ** = ಭೀಮನು, **ವಹ್ನೌ ವಹ್ನಿರಿವ ಸ್ಥಿತೇ** = ಬೆಂಕಿಯ ನಡುವೆ ಬೆಂಕಿಯಂತೆ ಇರುತ್ತಿರಲು, **ಅದಹ್ಯಮಾನೇऽಪಿ** = ಸುಡದೆ ಇದ್ದಾಗ, **ಪಾರ್ಥಃ** = ಅರ್ಜುನನು, **ಅತ್ರ ಆತ್ಮಪ್ರಪತ್ತಯೇ** = ಆವಾಗ ತನ್ನ ಪಾಲಿನ ಸೇವೆ ಸಲ್ಲಿಸುವುದಕ್ಕಾಗಿ, **ವಾರುಣೇನಾವೇಷ್ಟಯತ್** = ವಾರುಣಾಸ್ತ್ರದಿಂದ ಭೀಮನನ್ನು ಸುತ್ತುವರಿಸಿದ.

**ತಾತ್ಪರ್ಯ** :- ಭೀಮ ಬೆಂಕಿಯ ನಡುವೆ ಬೆಂಕಿಯಂತೆ ಸುಡದೆ ಇರುತ್ತಿರಲು ಅರ್ಜುನನು ಆವಾಗ ತನ್ನ ಪಾಲಿನ ಸೇವೆ ಸಲ್ಲಿಸುವುದಕ್ಕಾಗಿ ವಾರುಣಾಸ್ತ್ರದಿಂದ ಭೀಮನನ್ನು ಸುತ್ತುವರಿಸಿದ.

**ನ ದೇಹೇ ಪತಿತಾಸ್ತ್ರಸ್ಯ ಬಹಿರ್ವೇಷ್ಟನತಃ ಫಲಮ್ ।**
**ತಥಾऽಪಿ ಸ್ನೇಹವಶಗೋ ವೇಷ್ಟಯಾಮಾಸ ಫಲ್ಗುನಃ ॥ ೩೦೩ ॥**

**ಅರ್ಥ :- ದೇಹೇ** = ದೇಹದಲ್ಲಿ, **ಪತಿತಾಸ್ತ್ರಸ್ಯ** = ಬಿದ್ದಿರುವ ಅಸ್ತ್ರಕ್ಕೆ, **ಬಹಿಃ** = ಹೊರಗಡೆ, **ವೇಷ್ಟನತಃ** = ನೀರನ್ನು ಸುತ್ತುವರಿಸುವುದರಿಂದ, **ನ ಫಲಂ** = ಏನೂ ಪ್ರಯೋಜನವಿಲ್ಲ, **ತಥಾಪಿ** = ಹಾಗಿದ್ದರೂ, **ಫಲ್ಗುನಃ** = ಅರ್ಜುನನು ಸ್ನೇಹಕ್ಕೆ ಪರವಶನಾಗಿ, **ವೇಷ್ಟಯಾಮಾಸ** = ಸುತ್ತುವರಿಸಿದ.

**ತಾತ್ಪರ್ಯ :-** ದೇಹದಲ್ಲಿ ಬಿದ್ದ ಬೆಂಕಿಗೆ ಹೊರಗೆ ಆವರಣ ಮಾಡಿ ಏನೂ ಲಾಭವಿಲ್ಲ. ಆದರೂ ಅಣ್ಣನ ಮೇಲಿನ ಪ್ರೀತಿಯಿಂದ ಅರ್ಜುನನು ಆವರಣವನ್ನು ಮಾಡಿದ.

**ಅಮೋಘತ್ವಂ ನಿಜಾಸ್ತ್ರಸ್ಯ ಭೀಮಸ್ಯಾವಧ್ಯತಾಮಪಿ ।**
**ಸಾಧಯನ್ ಸಾರ್ಜುನಃ ಕೃಷ್ಣೋ ಭೀಮಸ್ಯ ರಥಮಾರುಹತ್ ॥ ೩೦೪ ॥**

**ಅರ್ಥ :- ನಿಜಾಸ್ತ್ರಸ್ಯ** = ತನ್ನ ನಾರಾಯಣಾಸ್ತ್ರದ, **ಅಮೋಘತ್ವಂ** = ಅಮೋಘತ್ವವನ್ನು, **ಭೀಮಸ್ಯ** = ಭೀಮನ, **ಅವಧ್ಯತಾಂ ಅಪಿ** = ಅವಧ್ಯತ್ವವನ್ನೂ, **ಸಾಧಯನ್** = ಸಾಧಿಸತಕ್ಕವನಾಗಿ, **ಸಾರ್ಜುನಃ** = ಅರ್ಜುನನಿಂದ ಕೂಡಿದ, **ಕೃಷ್ಣಃ** = ಕೃಷ್ಣನು, **ರಥಂ** = ರಥವನ್ನು, **ಆರುಹತ್** = ಏರಿದನು.

**ತಾತ್ಪರ್ಯ :-** ನಾರಾಯಣಸ್ತ್ರವು ಅಮೋಘ. ಭೀಮನೂ ಅವಧ್ಯ. ಎರಡನ್ನೂ ಸರಿಪಡಿಸಲು ಕೃಷ್ಣ ಅರ್ಜುನನೊಂದಿಗೆ ರಥ ಏರಿದ.

**ವೇಷ್ಟಿತಂ ವಾರುಣಾಸ್ತ್ರೇಣ ಪ್ರವಿಷ್ಟಂ ಬಾಹ್ಯತಸ್ತದಾ ।**
**ಸಹಿತತ್ವಾತ್ ಕೇಶವೇನ ನರತ್ವಾದಥ ಫಲ್ಗುನಮ್ ॥ ೩೦೫ ॥**

**ತದಸ್ತ್ರಂ ನಾದಹತ್ ತಾಭ್ಯಾಂ ಸ್ವರಥಾದವರೋಪಿತೇ ।**
**ಭೀಮ ಆಚ್ಛಿನ್ನಹೇತೌ ಚ ತದಸ್ತ್ರಂ ಶಾಂತಿಮಾಗಮತ್ ॥ ೩೦೬ ॥**

**ಅರ್ಥ :- ತದಾ** = ಆವಾಗ, **ಪ್ರವಿಷ್ಟಂ** = ಪ್ರವೇಶ ಮಾಡಿದ, **ಬಾಹ್ಯತಃ** = ಹೊರಗಿನಿಂದ, **ವಾರುಣಾಸ್ತ್ರೇಣ** = ವಾರುಣಾಸ್ತ್ರದಿಂದ, **ವೇಷ್ಟಿತಂ** =

ಸುತ್ತುವರಿಯಲ್ಪಟ್ಟ, **ಫಲ್ಗುನಃ** = ಅರ್ಜುನನನ್ನು, **ಕೇಶವೇನ ಸಹಿತತ್ವಾತ್** = ಕೃಷ್ಣನಿಂದ ಕೂಡಿದ್ದುದರಿಂದ, **ಅಥ** = ಮತ್ತು, **ನರತ್ವಾತ್** = ನರಾವೇಶದಿಂದಲೂ, **ತತ್ ಅಸ್ತ್ರಂ** = ಆ ಅಸ್ತ್ರವು, **ನ ಅದಹತ್** = ಸುಡಲಿಲ್ಲ, **ತಾಭ್ಯಂ** = ಆ ಕೃಷ್ಣಾರ್ಜುನರಿಂದ, **ಭೀಮೇ** = ಭೀಮನು, **ಸ್ವರಥಾತ್** = ತನ್ನ ರಥದಿಂದ, **ಅವರೋಪಿತೇ** = ಇಳಿಸಲ್ಪಡುತ್ತಿರಲು, **ಚ** = ಮತ್ತು, **ಆಚ್ಛಿನ್ನ ಹೇತೌ** = ಸೆಳೆಯಲ್ಪಟ್ಟ ಆಯುಧ ಉಳ್ಳವನಾಗುತ್ತಿರಲು, **ತತ್ ಅಸ್ತ್ರಂ** = ಆ ಅಸ್ತ್ರವು, **ಶಾಂತಿಮ್ ಆಗಮತ್** = ಶಾಂತವಾಯಿತು.

**ತಾತ್ಪರ್ಯ** :- ಅರ್ಜುನ ರಥದಲ್ಲಿ ಪ್ರವೇಶ ಮಾಡುವಾಗ ನಾರಾಯಣಾಸ್ತ್ರದ ಬೆಂಕಿಯು ಅವನನ್ನು ಸುಡಲಿಲ್ಲ. ಏಕೆಂದರೆ ಅವನಿಗೂ ಹೊರಗಿನಿಂದ ನಾರಾಯಣಾಸ್ತ್ರದ ಆವರಣವಿತ್ತು. ಜೊತೆಗೆ ಕೃಷ್ಣನೂ ಇದ್ದ. ನರನ ಆವೇಶವೂ ಇತ್ತು. ಕೃಷ್ಣಾರ್ಜುನರು ಭೀಮನನ್ನು ರಥದಿಂದ ಕೆಳಗಿಳಿಸಿ ಆಯುಧವನ್ನು ಪಡೆದುಕೊಂಡರು. ಆಗ ನಾರಾಯಣಾಸ್ತ್ರ ಶಾಂತವಾಯಿತು.

**ಶುದ್ಧಕ್ಷತ್ರಿಯಧರ್ಮೇಷು ನಿರತತ್ವಾದ್ ವೃಕೋದರಃ ।**
**ವಾಹನಾದವತೀರ್ಯಾನ್ಯೈಃ ಪ್ರಣತೇಽಪಿ ನಿರಾಯುಧೈಃ ।**
**ಸಾಯುಧಃ ಸರಥೋಽಯುಧ್ಯದವಿಷಹ್ಯಮಪೀಶ್ವರೈಃ ॥ ೩೦೭ ॥**

**ಅರ್ಥ** :- **ಯತ್** = ಯಾವ ಕಾರಣದಿಂದ, **ವೃಕೋದರಃ** = ಭೀಮನು, **ಶುದ್ಧಕ್ಷತ್ರಿಧರ್ಮೇಷು** = ಶುದ್ಧವಾದ ಕ್ಷತ್ರಿಯ ಧರ್ಮಗಳಲ್ಲಿ, **ನಿರತಃ** = ನಿರತನಾಗಿದ್ದಾನೋ, **ತತ್** = ಆ ಕಾರಣದಿಂದ, **ಅನ್ಯೈಃ** = ಬೇರೆಯವರಿಂದ, **ನಿರಾಯುಧೈಃ** = ನಿರಾಯುಧರಾಗಿ, **ವಾಹನಾತ್** = ವಾಹನದಿಂದ, **ಅವತೀರ್ಯ** = ಇಳಿದು, **ಪ್ರಣತೇಽಪಿ** = ನಮಸ್ಕರಿಸಿದರೂ, **ಸಾಯುಧಃ** = ಆಯುಧ ಸಹಿತನಾಗಿ, **ಸರಥಃ** = ರಥದಲ್ಲಿದ್ದವನಾಗಿ, **ಈಶ್ವರೈಃ** = ಬ್ರಹ್ಮಾದಿಗಳಿಂದಲೂ, **ಅವಿಷಹ್ಯಂ** = ಸಹಿಸಲಸಾಧ್ಯವಾದ ಅಸ್ತ್ರದೊಂದಿಗೆ, **ಅಯುಧ್ಯತ್** = ಯುದ್ಧ ಮಾಡಿದನು.

**ತಾತ್ಪರ್ಯ** :- ಭೀಮನು ಶುದ್ಧ ಕ್ಷತ್ರಿಯ ಧರ್ಮನಿಷ್ಠನಾಗಿದ್ದಾನೆ. ಆದ್ದರಿಂದ ನಾರಾಯಣಾಸ್ತ್ರ ಬಂದಾಗ ಬೇರೆಯವರು ಆಯುಧ ತ್ಯಾಗ ಮಾಡಿ ವಾಹನದಿಂದಿಳಿದು ನಮಸ್ಕರಿಸಿದರೂ ಭೀಮನು ಮಾತ್ರ ಆಯುಧ ಸಹಿತನಾಗಿಯೇ ರಥದಲ್ಲಿಯೇ ಇದ್ದು ಯುದ್ಧ ಮಾಡಿದ.

**ಸ್ವಧರ್ಮಹಾನೌ ಮಿತ್ರಾಣಾಂ ಕರ್ತವ್ಯಂ ಯನ್ನಿಷೇಧನಮ್ ।**
**ಅತಃ ಸೋऽನ್ಯಾನಪಿ ಪ್ರಾಹ ಮಾ ಗಮಧ್ವಮಿತಿ ಸ್ಫುಟಮ್ ॥ ೩೦೮ ॥**

**ಅರ್ಥ :- ಮಿತ್ರಾಣಾಂ** = ಮಿತ್ರರಿಗೆ, **ಸ್ವಧರ್ಮಹಾನೌ** = ಅವರ ಧರ್ಮಕ್ಕೆ ಚ್ಯುತಿ ಬಂದಾಗ, **ಯತ್** = ಯಾವ ಕಾರಣದಿಂದ, **ನಿಷೇಧನಂ** = ನಿಷೇಧವು, **ಕರ್ತವ್ಯಂ** = ಮಾಡಲ್ಪಡಬೇಕೋ, **ಅತಃ** = ಆದ್ದರಿಂದ, **ಅನ್ಯಾನಪಿ** = ಬೇರೆಯವರನ್ನೂ ಕುರಿತು, **ಸಃ** = ಭೀಮನು, **ನ ನಮಧ್ವಂ ಇತಿ** = ನಮಸ್ಕರಿಸಬೇಡಿ ಎಂದು, **ಸ್ಫುಟಂ** = ಸ್ಪಷ್ಟವಾಗಿ, **ಪ್ರಾಹ** = ಹೇಳಿದನು.

**ತಾತ್ಪರ್ಯ :-** ಮಿತ್ರರು ತಮ್ಮ ಧರ್ಮವನ್ನು ಬಿಟ್ಟಾಗ ಅವರಿಗೂ ತಿಳಿಹೇಳಬೇಕು. ಆದ್ದರಿಂದ ಭೀಮನು ನಮಸ್ಕರಿಸಬೇಡಿ ಎಂದು ಸ್ಪಷ್ಟವಾಗಿ ತಿಳಿಸಿದ.

**ನಮಸ್ಕಾರ್ಯಮಪಿ ಹ್ಯಸ್ತ್ರಂ ನ ನಮ್ಯಂ ಜೀವನೇಚ್ಛಯಾ ।**
**ಸಮರೇ ಶತ್ರುಣಾ ಮುಕ್ತಂ ತಸ್ಮಾತ್ ತನ್ನ ಚಕಾರ ಸಃ ॥ ೩೦೯ ॥**

**ಅರ್ಥ :- ಅಸ್ತ್ರಂ** = ನಾರಾಯಣಾಸ್ತ್ರವು, **ನಮಸ್ಕಾರ್ಯಮಪಿ** = ನಮಸ್ಕಾರಕ್ಕೆ ಯೋಗ್ಯವಾಗಿದ್ದರೂ, **ಜೀವನೇಚ್ಛಯಾ** = ಬದುಕುವ ಆಸೆಯಿಂದ, **ನ ನಮ್ಯಂ ಹಿ** = ನಮನಕ್ಕೆ ಯೋಗ್ಯವಲ್ಲವಷ್ಟೆ, **ತಸ್ಮಾತ್** = ಆದ್ದರಿಂದ, **ಸಮರೇ** = ಯುದ್ಧದಲ್ಲಿ, **ಶತ್ರುಣಾ** = ಶತ್ರುವಿನಿಂದ, **ಮುಕ್ತಂ** = ಬಿಡಲ್ಪಟ್ಟ ಆ ಅಸ್ತ್ರಕ್ಕೆ, **ಸಃ** = ಭೀಮನು, **ತತ್ ನ ಚಕಾರ** = ನಮನವನ್ನು ಮಾಡಲಿಲ್ಲ.

**ತಾತ್ಪರ್ಯ :-** ನಾರಾಯಣಾಸ್ತ್ರವು ನಮಸ್ಕಾರಕ್ಕೆ ಯೋಗ್ಯವೇ. ಆದರೆ ಬದುಕಲಿಕ್ಕಾಗಿ ನಮಸ್ಕಾರ ಮಾಡಬಾರದು. ಯುದ್ಧದಲ್ಲಿ ಶತ್ರು ಪ್ರಯೋಗಿಸಿದ ಅಸ್ತ್ರಕ್ಕೆ ನಮಿಸಿದರೆ ಬದುಕಲೆಂದೇ ಮಾಡಿದಂತಾಗುತ್ತದೆ ಆದ್ದರಿಂದ ಭೀಮ ನಮಸ್ಕರಿಸಲಿಲ್ಲ.

**ಅಸ್ತ್ರಾಭಿಮಾನೀ ವಾಯುರ್ಹಿ ದೇವತಾऽಸ್ಯ ಹರಿಃ ಸ್ವಯಮ್ ।**
**ತಸ್ಮಾದ್ ಭೀಮಂ ಸ್ವರೂಪತ್ವಾನ್ನಾದಹಚ್ಚಾಗ್ನಿಮಗ್ನಿವತ್ ॥ ೩೧೦ ॥**

**ಅರ್ಥ** :- **ಅಸ್ತ್ರಾಭಿಮಾನೀ** = ನಾರಾಯಣಾಸ್ತ್ರದ ಅಭಿಮಾನಿಯು, **ವಾಯುಃ ಹಿ** = ವಾಯು ದೇವರಷ್ಟೆ!, **ಅಸ್ಯ** = ಈ ಅಸ್ತ್ರಕ್ಕೆ, **ದೇವತಾ** = ದೇವತೆಯು, **ಸ್ವಯಂ ಹರಿಃ** = ಸಾಕ್ಷಾತ್ ನಾರಾಯಣನು, **ತಸ್ಮಾತ್** = ಆದ್ದರಿಂದ, **ಭೀಮಂ** = ಭೀಮನನ್ನು, **ಸ್ವರೂಪತ್ವಾತ್** = ತನ್ನ ಸ್ವರೂಪವಾದ್ದರಿಂದ, **ಅಗ್ನಿಂ** = ಅಗ್ನಿಯನ್ನು, **ಅಗ್ನಿವತ್** = ಅಗ್ನಿಯು ಹೇಗೋ ಹಾಗೆ, **ನ ಅದಹತ್** = ಸುಡಲಿಲ್ಲ.

**ತಾತ್ಪರ್ಯ** :- ಆ ಅಸ್ತ್ರಕ್ಕೆ ವಾಯು ಅಭಿಮಾನಿ, ನಾರಾಯಣನು ದೇವತೆ ಆದ್ದರಿಂದ ಅಗ್ನಿಯನ್ನು ಅಗ್ನಿ ಸುಡದಿರುವಂತೆ ಭೀಮನು ಅಸ್ತ್ರ ಸ್ವರೂಪನೇ ಆದ್ದರಿಂದ ಅಸ್ತ್ರವು ಭೀಮನನ್ನು ಸುಡಲಿಲ್ಲ.

**ಮನಸೈವಾಽದರಂ ಚಕ್ರೇ ಭೀಮೋಽಸ್ತ್ರೇ ಚ ಹರೌ ತದಾ ।**
**ಕ್ಷತ್ರಧರ್ಮಾನುಸಾರೇಣ ನ ನನಾಮ ಚ ಬಾಹ್ಯತಃ ॥ ೩೧೧ ॥**

**ಅರ್ಥ** :- **ತದಾ** = ಆಗ, **ಭೀಮಃ** = ಭೀಮನು, **ಅಸ್ತ್ರೇ** = ಅಸ್ತ್ರದಲ್ಲಿ, **ಹರೌ ಚ** = ಹರಿಯಲ್ಲಿಯೂ, **ಮನಸಾ ಏವ** = ಮನಸ್ಸಿನಿಂದಲೇ, **ಆದರಂ ಚಕ್ರೇ** = ಆದರ ಮಾಡಿದನು, **ಕ್ಷತ್ರಧರ್ಮಾನುಸಾರೇಣ** = ಕ್ಷತ್ರ ಧರ್ಮಕ್ಕೆ ಅನುಸಾರವಾಗಿ, **ಬಾಹ್ಯತಃ** = ಹೊರಗಿನಿಂದ, **ನ ನನಾಮ** = ನಮಸ್ಕರಿಸಸಲಿಲ್ಲ.

**ತಾತ್ಪರ್ಯ** :- ಭೀಮನು ಅಸ್ತ್ರಕ್ಕೂ ಶ್ರೀಹರಿಗೂ ಮನಸ್ಸಿನಿಂದ ಗೌರವ ತೋರಿದ ಆದರೆ ಕ್ಷಾತ್ರಧರ್ಮಾನುಸಾರವಾಗಿ ಹೊರಗಿನಿಂದ ನಮಸ್ಕಾರ ಮಾಡಲಿಲ್ಲ.

**ವಾಸುದೇವಃ ಸ್ವಕೀಯಾಸ್ತ್ರಂ ಭೀಮಂ ಚಾಮೋಘ ಮೇವ ತು ।**
**ಸಾಧಯಿತ್ವಾಽನಂತಶಕ್ತಿಃ ಪುನರಶ್ವಾನಚೋದಯತ್ ॥ ೩೧೨ ॥**

**ಅರ್ಥ** :- **ಅನಂತಶಕ್ತಿಃ** = ಅಪಾರ ಶಕ್ತಿಯುಳ್ಳ, **ವಾಸುದೇವಃ** = ಕೃಷ್ಣನು, **ಸ್ವಕೀಯಾಸ್ತ್ರ** = ತನ್ನ ಅಸ್ತ್ರವನ್ನು, **ಅಮೋಘಮೇವ** = ಅಮೋಘವನ್ನಾಗಿಯೇ, **ಸಾಧಯಿತ್ವಾ** = ತೋರಿಸಿ, **ಭೀಮಂ ಚ** = ಭೀಮನನ್ನೂ, **ಅಮೋಘಮೇವ ಸಾಧಯಿತ್ವಾ** = ಅವಧ್ಯನನ್ನಾಗಿಯೇ

ತೋರಿಸಿ, **ಪುನಃ** = ಮತ್ತೆ, **ಅಶ್ವಾನ್** = ಕುದುರೆಗಳನ್ನು, **ಅಚೋದಯತ್** = ಪ್ರೇರಿಸಿದನು.

**ತಾತ್ಪರ್ಯ :-** ಕೃಷ್ಣನು ತನ್ನ ಅಪಾರ ಶಕ್ತಿಯಿಂದ ಭೀಮನನ್ನೂ ಅಸ್ತ್ರವನ್ನೂ ಅಮೋಘವೆಂದೇ ತೋರಿಸಿ ಪುನಃ ಕುದುರೆಗಳನ್ನು ಪ್ರೇರಿಸಿದ.

**ಪುನಃ ಪ್ರಯೋಕ್ತುಮಸ್ತ್ರಂ ತಂ ಧಾರ್ತರಾಷ್ಟ್ರೋಽಭ್ಯಚೋದಯತ್ ।**
**ದ್ರೌಣಿರ್ನ ಶಕ್ಯಮಿತ್ಯುಕ್ತ್ವಾ ಧೃಷ್ಟದ್ಯುಮ್ನಂ ಸಮಭ್ಯಯಾತ್ ॥ ೩೧೩ ॥**

**ಅರ್ಥ :- ಧಾರ್ತರಾಷ್ಟ್ರಃ** = ದುರ್ಯೋಧನನು, **ಪುನಃ** = ಮತ್ತೊಮ್ಮೆ, **ತದ್ ಅಸ್ತ್ರಂ** = ಆ ಅಸ್ತ್ರವನ್ನು, **ಪ್ರಯೋಕ್ತುಂ** = ಪ್ರಯೋಗಿಸಲು, **ಅಭ್ಯಚೋದಯತ್** = ಪ್ರೇರಿಸಿದನು. **ದ್ರೌಣಿಃ** = ಅಶ್ವತ್ಥಾಮನು, **ನಶಕ್ಯಂ** = ಶಕ್ಯವಿಲ್ಲ, **ಇತಿ** = ಎಂದು, **ಉಕ್ತ್ವಾ** = ಹೇಳಿ, ಧೃಷ್ಟದ್ಯುಮ್ನನನ್ನು, **ಸಮಭ್ಯಯಾತ್** = ಎದುರಿಸಿದನು.

**ತಾತ್ಪರ್ಯ :-** ದುರ್ಯೋಧನನು ಅಶ್ವತ್ಥಾಮರಿಗೆ ಇನ್ನೊಂದು ಬಾರಿ ಆ ಅಸ್ತ್ರವನ್ನು ಪ್ರಯೋಗ ಮಾಡಿರಿ ಎಂದಾಗ ಅಶ್ವತ್ಥಾಮನು ಶಕ್ಯವಿಲ್ಲೆಂದು ಹೇಳಿ ದೃಷ್ಟದ್ಯುಮ್ನನ ಬಳಿ ಯುದ್ಧಕ್ಕೆ ಹೋದ.

**ಆಯಾಂತಮೀಕ್ಷ್ಯೈವ ಗುರೋಃ ಸುತಂ ತಂ**
**ಧೃಷ್ಟದ್ಯುಮ್ನಂ ಸಾತ್ಯಕಿರನ್ವಯಾದ್ ರಣೇ ।**
**ಉಭೌ ಚ ತೌ ಸಾಯಕಾಭ್ಯಾಮವಿಧ್ಯ-**
**ನ್ನಿಪೇತತುಸ್ತೌ ಚ ವಿಮೂರ್ಛಿತೌ ರಣೇ ॥ ೩೧೪ ॥**

**ಅರ್ಥ :- ಆಯಾಂತಂ** = ಬರುತ್ತಿರುವ, **ತಂ ಗುರೋಃ ಸುತಂ** = ಆ ಅಶ್ವತ್ಥಾಮರನ್ನು, **ಈಕ್ಷ್ಯ ಏವ** = ನೋಡಿಯೇ, **ಸಾತ್ಯಕಿಃ** = ಸಾತ್ಯಕಿಯು, **ಧೃಷ್ಟದ್ಯುಮ್ನಂ** = ಧೃಷ್ಟದ್ಯುಮ್ನನನ್ನು, **ಅನ್ವಯಾತ್** = ಅನುಸರಿಸಿದನು, **ರಣೇ** = ಯುದ್ಧದಲ್ಲಿ, **ತೌ ಉಭೌ ಚ** = ಅವರಿಬ್ಬರನ್ನೂ, **ಸಾಯಕಾಭ್ಯಾಂ** = ಎರಡು ಬಾಣಗಳಿಂದ, (ಅಶ್ವತ್ಥಾಮರು) **ಅವಿಧ್ಯತ್** = ಗಾಯಗೊಳಿಸಿದರು, **ತೌ ಚ** = ಅವರಿಬ್ಬರೂ ಕೂಡ, **ರಣೇ** = ಯುದ್ಧದಲ್ಲಿ, **ವಿಮೂರ್ಛಿತೌ** = ಮೂರ್ಛೆಗೊಂಡವರಾಗಿ, **ನಿಪೇತತುಃ** = ಬಿದ್ದರು.

**ತಾತ್ಪರ್ಯ** :- ಅಶ್ವತ್ಥಾಮ ಧೃಷ್ಟದ್ಯುಮ್ನನ ಕಡೆ ಬರುತ್ತಿರುವುದನ್ನು ನೋಡಿ ಸಾತ್ಯಕಿ ಅವನ ಸಹಾಯಕ್ಕೆ ಬಂದ. ಅಶ್ವತ್ಥಾಮರು ಅವರಿಬ್ಬರನ್ನೂ ಮೂರ್ಛೆಗೊಳಿಸಿ ಬೀಳಿಸಿದರು.

**ಭೀಮಸ್ಯಾಭ್ಯಾಗತಸ್ಯಾಶ್ವಾನ್ ದ್ರೌಣಿರ್ವ್ಯದ್ರಾವಯದ್ ರಣೇ ।**
**ಸಂಸ್ಥಾಪಯತಿ ತಾನ್ ಭೀಮೇ ದದರ್ಶ ದ್ರೌಣಿಮರ್ಜುನಃ ॥ ೩೧೫ ॥**

**ಅರ್ಥ** :- **ಅಭ್ಯಾಗತಸ್ಯ** = ಬಂದಂತಹ, **ಭೀಮಸ್ಯ** = ಭೀಮನ, **ಅಶ್ವಾನ್** = ಕುದುರೆಗಳನ್ನು, **ರಣೇ** = ಯುದ್ಧದಲ್ಲಿ, **ದ್ರೌಣಿಃ** = ಅಶ್ವತ್ಥಾಮನು, **ವ್ಯದ್ರಾವಯತ್** = ಓಡಿಸಿದನು, **ತಾನ್** = ಅವುಗಳನ್ನು, **ಭೀಮೇ** = ಭೀಮನು, **ಸಂಸ್ಥಾಪಯತಿ** = ನಿಲ್ಲಿಸುತ್ತಿರಲು, **ಅರ್ಜುನಃ** = ಅರ್ಜುನನು, **ದ್ರೌಣಿಂ** = ಅಶ್ವತ್ಥಾಮನನ್ನು, **ದದರ್ಶ** = ನೋಡಿದನು.

**ತಾತ್ಪರ್ಯ** :- ಧೃಷ್ಟದ್ಯುಮ್ನ, ಸಾತ್ಯಕಿಯರು ಬಿದ್ದಾಗ ಭೀಮ ಬಂದ. ಅಶ್ವತ್ಥಾಮ ಭೀಮನ ಕುದುರೆಗಳನ್ನು ಓಡಿಸುತ್ತಿದ್ದ. ಭೀಮನು ಅವುಗಳನ್ನು ನಿಲ್ಲಿಸುತ್ತಿದ್ದ. ಇದನ್ನು ಅರ್ಜುನ ಕಂಡ.

**ತತೋಽರ್ಜುನಸ್ತಂ ಪ್ರತಿಯೋದ್ಧುಮಾಗಮದ್**
**ರೂಕ್ಷಾ ವಾಚಃ ಶ್ರಾವಯನ್ ಕ್ರುದ್ಧರೂಪಃ ।**
**ತತ್ರಾಽಗ್ನೇಯಂ ದ್ರೌಣಿರಮುಂಚದಸ್ತ್ರಂ**
**ತೇನ ವ್ಯಾಪ್ತಾ ಪೃತನಾ ಪಾಂಡವಾನಾಮ್ ॥ ೩೧೬ ॥**

**ಅರ್ಥ** :- **ತತಃ** = ಅನಂತರದಲ್ಲಿ, **ಅರ್ಜುನಃ** = ಅರ್ಜುನನು, **ಕ್ರುದ್ಧರೂಪಃ** = ಕೋಪಗೊಂಡ ರೂಪ ಉಳ್ಳವನಾಗಿ, **ತಂ ಪ್ರತಿ** = ಅಶ್ವತ್ಥಾಮನನ್ನು ಕುರಿತು, **ರೂಕ್ಷಾಃ** = ಕ್ರೂರವಾದ, **ವಾಚಃ** = ಮಾತುಗಳನ್ನು, **ಶ್ರಾವಯನ್** = ಕೇಳಿಸುತ್ತಾ, **ಯೋದ್ಧುಂ** = ಯುದ್ಧ ಮಾಡಲು, **ಆಗಮತ್** = ಬಂದನು, **ತತ್ರ** = ಆಗ, **ದ್ರೌಣಿಃ** = ಅಶ್ವತ್ಥಾಮನು, **ಆಗ್ನೇಯಂ ಅಸ್ತ್ರಂ** = ಆಗ್ನೇಯಾಸ್ತ್ರವನ್ನು, **ಅಮುಂಚತ್** = ಪ್ರಯೋಗಿಸಿದನು, **ತೇನ** = ಅದರಿಂದ, **ಪಾಂಡವಾನಾಂ** = ಪಾಂಡವರ, **ಪೃತನಾ** = ಸೈನ್ಯವು, **ವ್ಯಾಪ್ತಾ** = ಆವರಿಸಲ್ಪಟ್ಟಿತು.

**ತಾತ್ಪರ್ಯ :-** ಅರ್ಜುನನು ಸಿಟ್ಟಿನಿಂದ ಅಶ್ವತ್ಥಾಮರಿಗೆ ನಿಷ್ಠುರ ಮಾತುಗಳನ್ನಾಡಿದ. ಯುದ್ಧಕ್ಕೂ ಬಂದ. ಅಶ್ವತ್ಥಾಮ ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದಾಗ ಅದು ಪಾಂಡವ ಸೇನೆಯನ್ನಾಕ್ರಮಿಸಿತು.

**ಅಕ್ಷೋಹಿಣೀ ನಿಹತಾ ಚಾತ್ರ ಸೇನಾ**
**ಪಾರ್ಥಂ ಸಯಾನಂ ಹರಿರುಜ್ಜಹಾರ ।**
**ಜೀವಂತಮಾಲೋಕ್ಯ ಸುರೇಂದ್ರನಂದನಂ**
**ದ್ರೌಣಿಃ ತಮಾಗತ್ಯ ಕಾರ್ಮುಕಂ ಚಾಪಹಾಯ ।**
**ಯಯೌ ತಮಾಗತ್ಯ ಜಗಾದ ಕೃಷ್ಣೋ**
**ವೇದಾಂತಕೃತ್ ಪೂರ್ಣಷಾಡ್ಗುಣ್ಯದೇಹಃ ।। ೩೧೭-೩೧೮ ।।**

**ಅರ್ಥ :- ಅತ್ರ** = ಈ ಸಂದರ್ಭದಲ್ಲಿ, **ಅಕ್ಷೋಹಿಣೀ ಸೇನಾ** = ಒಂದು ಅಕ್ಷೋಹಿಣೀ ಸೈನ್ಯವು, **ನಿಹತಾ** = ನಾಶಗೊಳಿಸಲ್ಪಟ್ಟಿತು, **ಸಯಾನಂ** = ರಥಸಹಿತನಾದ, **ಪಾರ್ಥಂ** = ಅರ್ಜುನನನ್ನು, **ಹರಿಃ** = ಕೃಷ್ಣನು, **ಉದ್ದಧಾರ** = ರಕ್ಷಿಸಿದನು, **ಸುರೇಂದ್ರನಂದನಂ** = ಅರ್ಜುನನನ್ನು, **ಜೀವಂತಂ ಆಲೋಕ್ಯ** = ಬದುಕಿದ್ದನ್ನು ನೋಡಿ, **ದ್ರೌಣಿಃ** = ಅಶ್ವತ್ಥಾಮನು, **ಕೋಪಾತ್** = ಕೋಪದಿಂದ, **ಕಾರ್ಮುಕಂ ಚ** = ಬಿಲ್ಲನ್ನೂ, **ಅಪಹಾಯ** = ಬಿಸುಟು, **ಯಯೌ** = ಹೋದನು, **ತಂ ಆಗತ್ಯ** = ಅವನ ಬಳಿಗೆ ಬಂದು, **ವೇದಾಂತಕೃತ** = ವೇದಾಂತಕರ್ತರಾದ, **ಪೂರ್ಣಷಾಡ್ಗುಣ್ಯದೇಹಃ** = ಪರಿಪೂರ್ಣವಾದ ಷಡ್ಗುಣಮಯ ದೇಹ ಉಳ್ಳ, **ಕೃಷ್ಣಃ** = ವ್ಯಾಸರು, **ಜಗಾದ** = ಹೇಳಿದರು.

**ತಾತ್ಪರ್ಯ :-** ಆ ಆಗ್ನೇಯಾಸ್ತ್ರದಿಂದ ಒಂದು ಅಕ್ಷೋಹಿಣೀ ಸೈನ್ಯ ನಾಶವಾಯಿತು. ಆದರೆ ಅರ್ಜುನ ಸಾಯಲಿಲ್ಲ. ಕೃಷ್ಣ ಕಾಪಾಡಿದ. ಇದರಿಂದ ಅಶ್ವತ್ಥಾಮರು ಸಿಟ್ಟಿಗೆದ್ದು ಬಿಲ್ಲನ್ನೆಸೆದು ಹೋದರು. ಆಗ ವ್ಯಾಸರು ಬಂದು ಸಮಾಧಾನ ಮಾಡಿದರು.

**ಮಾ ಯಾಹಿ ಸಾಕ್ಷಾದ್ ಗಿರಿಶಃ ಸುರಾಣಾಂ**
**ಕಾರ್ಯಾಯ ಭೂಮೌ ಬಲವಾನಜಾಯಥಾಃ ।**
**ಮಹಚ್ಚ ಕಾರ್ಯಂ ಪುನರಸ್ತಿ ದೃಷ್ಟಂ**
**ತವಾಽಶು ತಚ್ಚ ಪ್ರತಿಪಾದಯೇತಿ ।। ೩೧೯ ।।**

**ಅರ್ಥ :- ಮಾ ಯಾಹಿ** = ಹೋಗಬೇಡ, **ತ್ವಂ** = ನೀನು, **ಸಾಕ್ಷಾತ್** = ಮುಖ್ಯವಾಗಿ, **ಬಲವಾನ್** = ಬಲಿಷ್ಠನಾದ, **ಗಿರಿಶಃ** = ರುದ್ರನು, **ಸುರಾಣಾಂ ಕಾರ್ಯಾಯ** = ದೇವತೆಗಳ ಕಾರ್ಯಕ್ಕಾಗಿ, **ಭೂಮೌ** = ಭೂಮಿಯಲ್ಲಿ, **ಅಜಾಯಥಾಃ** = ಅವತರಿಸಿದ್ದಿ, **ತವ** = ನಿನ್ನ, **ಮಹತ್ಕಾರ್ಯ** = ಮಹತ್ತರವಾದ ಕಾರ್ಯವು, **ದೃಷ್ಟಮ್** = ನೋಡಲ್ಪಟ್ಟಿದೆ, **ಪುನಶ್ಚ** = ಇನ್ನೂ, **ಅಸ್ತಿ** = ಇದೆ, **ತಚ್ಚ** = ಅದನ್ನೂ, **ಆಶು** = ಕೂಡಲೇ, **ಪ್ರತಿಪಾದಯ** = ಸಾಧಿಸು, **ಇತಿ** = ಎಂದು (**ಜಗಾದ** = ಹೇಳಿದರು).

**ತಥೋದಿತಃ ಪ್ರಾತರಿತಿ ಬ್ರುವಾಣೋ**
**ಯಯೌ ಪ್ರಣಮ್ಯಾಖಿಲವೇದಯೋನಿಮ್ ।**
**ಯಯುಸ್ತಮನ್ವೇವ ಸುಯೋಧನಾದಯೋ**
**ದುಃಖಾನತಾಸ್ತೇ ಶಿಬಿರಾಯ ಭೀತಾಃ ॥ ೩೨೦ ॥**

**ಅರ್ಥ :- ತಥಾ** = ಹಾಗೆ, **ಉದಿತಃ** = ಹೇಳಲ್ಪಟ್ಟ ಅಶ್ವತ್ಥಾಮರು, **ಪ್ರಾತಃ ಇತಿ** = ಬೆಳಿಗ್ಗೆ ಎಂದು, **ಬ್ರುವಾಣಃ** = ಹೇಳುವವರಾಗಿ, **ಅಖಿಲ ವೇದಯೋನಿಂ** = ಸಮಸ್ತ ವೇದೋಪದೇಶಕರಾದ ವ್ಯಾಸರನ್ನು, **ಪ್ರಣಮ್ಯ** = ನಮಸ್ಕರಿಸಿ, **ಯಯೌ** = ಹೋದರು, **ತಮ ಅನು ಏವ** = ಅವರನ್ನು ಅನುಸರಿಸಿಯೇ, **ಸುಯೋಧನಾದಯಃ** = ದುರ್ಯೋಧನ ಮೊದಲಾದವರು, **ಭೀತಾಃ** = ಹೆದರಿದವರಾಗಿ, **ದುಃಖಾನತಾಃ** = ದುಃಖದಿಂದ ತಲೆತಗ್ಗಿಸಿದವರಾಗಿ, **ಶಿಬಿರಾಯ** = ಶಿಬಿರಕ್ಕೆ, **ಯಯುಃ** = ಹೋದರು.

**ತಾತ್ಪರ್ಯ :-** ವ್ಯಾಸರು ಉಪದೇಶಿಸಿದಾಗ 'ಬೆಳಿಗ್ಗೆ ಮಾಡುತ್ತೇನೆ' ಎನ್ನುತ್ತಾ ಅವರಿಗೆ ನಮಸ್ಕರಿಸಿ ಅಶ್ವತ್ಥಾಮರು ಹೋದರು ದುರ್ಯೋಧನಾದಿಗಳು ಕೂಡ ಹೆದರಿ ತಲೆ ತಗ್ಗಿಸಿ ಅವರನ್ನು ಹಿಂಬಾಲಿಸಿದರು.

**ಪಾರ್ಥಾಶ್ಚ ಸರ್ವೇ ಮುದಿತಾ ಜನಾರ್ದನಂ**
**ಪರಂ ಸ್ತುವಂತಃ ಶಿಬಿರಾಯ ಜಗ್ಮುಃ ।**
**ತತ್ರಾಪಿ ರಾತ್ರಾವಮಿತಾನ್ ಹರೇರ್ಗುಣಾ-**
**ನನುಸ್ಮರಂತೋ ಮುಮುದುಃ ಸಮೇತಾಃ ॥ ೩೨೧ ॥**

**ಅರ್ಥ** :- **ಸರ್ವೇ** = ಎಲ್ಲಾ, **ಪಾರ್ಥಾಶ್ಚ** = ಪಾಂಡವರೂ ಕೂಡ, **ಮುದಿತಾಃ** = ಸಂತೋಷಗೊಂಡವರಾಗಿ, **ಪರಂ** = ಉತ್ತಮನಾದ, **ಜನಾರ್ದನ** = ಕೃಷ್ಣನನ್ನು, **ಸ್ತುವಂತಃ** = ಸ್ತುತಿಸುವವರಾಗಿ, **ಶಿಬಿರಾಯ** = ಶಿಬಿರಕ್ಕೆ, **ಜಗ್ಮುಃ** = ಹೋದರು, **ತತ್ರಾಪಿ** = ಅಲ್ಲಿಯೂ, **ರಾತ್ರೌ** = ರಾತ್ರಿಯಲ್ಲಿ, **ಸಮೇತಾಃ** = ಕೂಡಿದವರಾಗಿ, **ಹರೇಃ** = ಕೃಷ್ಣನ, **ಅಮತಾನ್** = ಅನಂತವಾದ, **ಗುಣಾನ್** = ಗುಣಗಳನ್ನು, **ಸ್ಮರಂತಃ** = ಸ್ಮರಿಸುವವರಾಗಿ, **ಮುಮುದುಃ** = ಸಂತೋಷಪಟ್ಟರು.

**ತಾತ್ಪರ್ಯ** :- ಪಾಂಡವರೆಲ್ಲರೂ ಸಂತಸದಿಂದ ಕೃಷ್ಣನನ್ನು ಹೊಗಳುತ್ತಾ ಶಿಬಿರಕ್ಕೆ ತೆರಳಿದರು. ಅಲ್ಲಿಯೂ ರಾತ್ರಿ ಎಲ್ಲರೂ ಸೇರಿ ಭಗವಂತನ ಗುಣಗಳನ್ನು ಸ್ಮರಿಸುತ್ತಾ ಸಂತೋಷ ಪಟ್ಟರು.

ಇತಿ ಶ್ರೀಮದಾನಂದತೀರ್ಥಭಗವತ್ಪಾದಕೃತೇ
ಶ್ರೀಮಹಾಭಾರತತಾತ್ಪರ್ಯನಿರ್ಣಯೇ ನಾರಾಯಣಾಸ್ತ್ರೋಪಶಮನಂ
ನಾಮ ಷಡ್ವಿಂಶೋऽಧ್ಯಾಯಃ

# ಅಧ್ಯಾಯ - 27

(ಕರ್ಣವಧೆ)

(ಕರ್ಣಸೇನಾಪತ್ಯ, ಭೀಮಸೇನನಿಂದ ಅಶ್ವತ್ಥಾಮನ ಪರಾಭವ, ಶಲ್ಯಸಾರಥ್ಯ, ಕರ್ಣನಿಂದ ಭಾರ್ಗವಾಸ್ತ್ರಪ್ರಯೋಗ, ಅರ್ಜುನಯುಧಿಷ್ಠಿರರ ವಿಚಿತ್ರಪ್ರಸಂಗ, ದುಃಶಾಸನವಧೆ, ಕರ್ಣಾರ್ಜುನರ ಯುದ್ಧ, ಕರ್ಣಾವಸಾನ)

### ಸೇನಾಪತಿಯಾಗಿ ಕರ್ಣ - ಹದಿನಾರನೆಯ ದಿನದ ಯುದ್ಧ

**ಅಥಾನುಜ್ಞಾಮುಪಾದಾಯ ದ್ರೌಣೇರ್ದುರ್ಯೋಧನೋ ನೃಪಃ ।**
**ಕರ್ಣಂ ಸೇನಾಪತಿಂ ಚಕ್ರೇ ಸೋಽಗಾದ್ಯುದ್ಧಾಯ ದಂಶಿತಃ ॥ ೧ ॥**

**ಅಥ ಅನುಜ್ಞಾಂ ಉಪಾದಾಯ ದ್ರೌಣೇಃ ದುರ್ಯೋಧನಃ ನೃಪಃ । ಕರ್ಣಂ ಸೇನಾಪತಿಂ ಚಕ್ರೇ ಸಃ ಅಗಾತ್ ಯುದ್ಧಾಯ ದಂಶಿತಃ ॥ ೧ ॥**

**ಅರ್ಥ** :- **ಅಥ** = ಅನಂತರ, **ನೃಪಃ** = ರಾಜನಾದ, **ದುರ್ಯೋಧನಃ** = ದುರ್ಯೋಧನನು, **ದ್ರೌಣೇಃ** = ದ್ರೋಣಪುತ್ರನಾದ, ಅಶ್ವತ್ಥಾಮನ, **ಅನುಜ್ಞಾಂ** = ಅನುಮತಿಯನ್ನು, **ಉಪಾದಾಯ** = ಪಡೆದುಕೊಂಡು, **ಕರ್ಣಂ** = ಕರ್ಣನನ್ನು, **ಸೇನಾಪತಿಂ** = ಸೇನಾಪತಿಯನ್ನಾಗಿ, **ಚಕ್ರೇ** = ಮಾಡಿದನು. **ಸಃ** = ಅವನು, **ದಂಶಿತಃ** = ಕವಚಬದ್ಧನಾಗಿ, **ಯುದ್ಧಾಯ** = ಯುದ್ಧಕ್ಕೆಂದು, **ಅಗಾತ್** = ಹೊರಟನು.

**ತಾತ್ಪರ್ಯ** :- ಬಳಿಕ ರಾಜನಾದ ದುರ್ಯೋಧನ ಅಶ್ವತ್ಥಾಮನ ಅನುಮತಿಯನ್ನು ಪಡೆದು ಕರ್ಣನನ್ನು ಸೇನಾಪತಿಯನ್ನಾಗಿ ಮಾಡಿದ. ಕರ್ಣನು ಕವಚಾದಿಗಳನ್ನು ಧರಿಸಿ ಯುದ್ಧಕ್ಕೆ ಹೊರಟ.

ಕುರುಪಾಂಡವಯುದ್ಧ - ಭೀಮನ ಪರಾಕ್ರಮ

ತತ್ರಾಭವದ್ಯುದ್ಧಮತೀವದಾರುಣಂ
ಪಾಂಡೋಃ ಸುತಾನಾಂ ಧೃತರಾಷ್ಟ್ರಜೈರ್ಗಜೇ ।
ತತ್ರೋದಯಾದ್ರಿಪ್ರತಿಮೇ ಪ್ರದೃಶ್ಯತೇ
ಭೀಮೋ ಯಥೋದ್ಯತ್ಸವಿತಾಽತಿನಿರ್ಮಲಃ ॥ ೨ ॥

ತತ್ರ ಅಭವತ್ ಯುದ್ಧಂ ಅತೀವದಾರುಣಂ ಪಾಂಡೋಃ ಸುತಾನಾಂ ಧೃತರಾಷ್ಟ್ರಜೈಃ ಗಜೇ । ತತ್ರ ಉದಯಾದ್ರಿಪ್ರತಿಮೇ ಪ್ರದೃಶ್ಯತೇ ಭೀಮಃ ಯಥಾ ಉದ್ಯತ್ಸವಿತಾ ಅತಿನಿರ್ಮಲಃ ॥ ೨ ॥

**ಅರ್ಥ** :– **ತತ್ರ** = ಆ ಕರ್ಣನ ಸೇನಾಪತ್ಯದಲ್ಲಿ, **ಧೃತರಾಷ್ಟ್ರಜೈಃ** = ಧೃತರಾಷ್ಟ್ರನ ಪುತ್ರರಾದ ಕೌರವರೊಂದಿಗೆ, **ಪಾಂಡೋಃ ಸುತಾನಾಂ** = ಪಾಂಡುವಿನ ಪುತ್ರರಿಗೆ, **ಅತೀವದಾರುಣಂ** = ಬಹಳ ಘೋರವಾದ, **ಯುದ್ಧಂ** = ಯುದ್ಧವು, **ಅಭವತ್** = ನಡೆಯಿತು. **ತತ್ರ** = ಆ ಯುದ್ಧದಲ್ಲಿ, **ಉದಯಾದ್ರಿಪ್ರತಿಮೇ** = ಉದಯಪರ್ವತಕ್ಕೆ ಸದೃಶವಾದ, **ಗಜೇ** (**ಸ್ಥಿತಃ**) = ಆನೆಯ ಮೇಲೆ ಮಂಡಿಸಿದವನಾಗಿ, **ಭೀಮಃ** = ಭೀಮನು, **ಪ್ರದೃಶ್ಯತೇ** = ಕಂಗೊಳಿಸಿದ, **ಅತಿನಿರ್ಮಲಃ** = ಅತ್ಯಂತನಿರ್ಮಲನಾದ, **ಉದ್ಯತ್ಸವಿತಾ** = ಉದಿಸುವ ಸೂರ್ಯನು, **ಯಥಾ** = ಹೇಗೋ, (**ತಥಾ**) = ಹಾಗೆ.

**ತಾತ್ಪರ್ಯ** :- ಕರ್ಣನ ಸೇನಾಪತ್ಯದಲ್ಲಿ ಕೌರವರೊಡನೆ ಪಾಂಡವರಿಗೆ ಅತ್ಯಂತ ದಾರುಣವಾದ ಸಮರ ನಡೆಯಿತು. ಆಗ ರಣರಂಗದಲ್ಲಿ ಉದಯಾದ್ರಿಯಂತಿದ್ದ ಆನೆಯ ಮೇಲೆ ಉದಿಸುವ ಅತ್ಯಂತ ನಿರ್ಮಲನಾದ ಸೂರ್ಯನಂತೆ ಭೀಮ ಕಂಗೊಳಿಸಿದ.

ಭೀಮನಿಂದ ಕ್ಷೇಮಧೂರ್ತಿಯ ವಧೆ

ತಂ ಕಾಲಯಂತಂ ನೃಪತೀನ್ ಕ್ಷೇಮಧೂರ್ತಿ-
ರಭ್ಯಾಗಮತ್ ತಸ್ಯ ಗಜಂ ಜಘಾನ ।
ತಂ ವೀರ್ಯಮತ್ತಂ ಪ್ರತಿಲಭ್ಯ ಭೀಮೋ
ನಿನಾಯ ಮೃತ್ಯೋಃ ಸದನಾಯ ಶೀಘ್ರಮ್ ॥ ೩ ॥

**ತಂ ಕಾಲಯಂತಂ ನೃಪತೀನ್ ಕ್ಷೇಮಧೂರ್ತಿಃ ಅಭ್ಯಾಗಮತ್ ತಸ್ಯ ಗಜಂ ಜಘಾನ । ತಂ ವೀರ್ಯಮತ್ತಂ ಪ್ರತಿಲಭ್ಯ ಭೀಮಃ ನಿನಾಯ ಮೃತ್ಯೋಃ ಸದನಾಯ ಶೀಘ್ರಮ್ ॥ ೩ ॥**

**ಅರ್ಥ** :- **ನೃಪತೀನ್** = ರಾಜರನ್ನು, **ಕಾಲಯಂತಂ** = ಸದೆಬಡಿಯುತ್ತಿದ್ದ, **ತಂ** = ಆ ಭೀಮನನ್ನು, **ಕ್ಷೇಮಧೂರ್ತಿಃ** = ಕ್ಷೇಮಧೂರ್ತಿಯು, **ಅಭ್ಯಾಗಮತ್** = ಎದುರಿಸಿ ಬಂದನು. (ಸಃ) = ಅವನು, **ತಸ್ಯ** = ಆ ಭೀಮನ, **ಗಜಂ** = ಆನೆಯನ್ನು, **ಜಘಾನ** = ಕೊಂದನು. **ಭೀಮಃ** = ಭೀಮನು, **ವೀರ್ಯಮತ್ತಂ** = ಸಾಮರ್ಥ್ಯದಿಂದ ಕೊಬ್ಬಿದ್ದ, **ತಂ** = ಅವನನ್ನು, **ಪ್ರತಿಲಭ್ಯ** = ಎದುರಿಸಿ, **ಶೀಘ್ರಂ** = ಬೇಗನೆ, **ಮೃತ್ಯೋಃ** = ಮೃತ್ಯುವಿನ (ಯಮನ), **ಸದನಾಯ** = ಮನೆಗೆ, **ನಿನಾಯ** = ಕಳುಹಿಸಿದನು.

**ತಾತ್ಪರ್ಯ** :- ರಾಜರನ್ನೆಲ್ಲ ಸದೆಬಡಿಯುತ್ತಿದ್ದ ಭೀಮನನ್ನು ಕ್ಷೇಮಧೂರ್ತಿ ಎದುರಿಸಿದ; ಭೀಮನ ಆನೆಯನ್ನು ಕೊಂದ. ಬಲದಿಂದ ಕೊಬ್ಬಿದ್ದ ಅವನನ್ನು ಎದುರಿಸಿ ಭೀಮಸೇನ ಕೂಡಲೇ ಯಮಪುರಿಗೆ ಅಟ್ಟಿದ.

**ನಿಹತ್ಯ ತಂ ಮಾರುತಿರಭ್ಯಕೃಂತತ್**
**ಶಿರಾಂಸಿ ಯೂನಾಂ ಪರಪಕ್ಷಪಾತಿನಾಮ್ ।**
**ವಿಕ್ಷೋಭಯಾಮಾಸ ಚ ಶತ್ರುಸೈನ್ಯಂ**
**ಸಿಂಹೋ ಯಥೈವ ಶ್ವಸೃಗಾಲಯೂಥಮ್ ॥ ೪ ॥**

**ನಿಹತ್ಯ ತಂ ಮಾರುತಿಃ ಅಭ್ಯಕೃಂತತ್ ಶಿರಾಂಸಿ ಯೂನಾಂ ಪರಪಕ್ಷಪಾತಿನಾಮ್ । ವಿಕ್ಷೋಭಯಾಮಾಸ ಚ ಶತ್ರುಸೈನ್ಯಂ ಸಿಂಹಃ ಯಥಾ ಏವ ಶ್ವಸೃಗಾಲ ಯೂಥಮ್ ॥ ೪ ॥**

**ಅರ್ಥ** :- **ಮಾರುತಿಃ** = ವಾಯುಪುತ್ರನಾದ ಭೀಮಸೇನನು, **ತಂ** = ಅವನನ್ನು, **ನಿಹತ್ಯ** = ಕೊಂದು, **ಪರಪಕ್ಷಪಾತಿನಾಂ** = ಶತ್ರುಪಕ್ಷದ, **ಯೂನಾಂ** = ತರುಣರ, **ಶಿರಾಂಸಿ** = ತಲೆಗಳನ್ನು, **ಅಭ್ಯಕೃಂತತ್** = ತರಿದುಹಾಕಿದ. **ಶತ್ರುಸೈನ್ಯಂ ಚ** = ಶತ್ರುಸೈನ್ಯವನ್ನು ಸಹ, **ವಿಕ್ಷೋಭಯಾಮಾಸ** = ಬಹಳವಾಗಿ ಕ್ಷೋಭೆಗೊಳಿಸಿದ. **ಸಿಂಹಃ** = ಸಿಂಹವು, **ಶ್ವಸೃಗಾಲಯೂಥಂ**

= ನಾಯಿನರಿಗಳ ಹಿಂಡನ್ನು, **ಯಥಾ** = ಹೇಗೋ, **(ತಥಾ) ಏವ** = ಹಾಗೆಯೇ.

**ತಾತ್ಪರ್ಯ** :- ಭೀಮಸೇನ ಅವನನ್ನು ಕೊಂದು ಶತ್ರುಪಕ್ಷದಲ್ಲಿದ್ದ ತರುಣರ ತಲೆಗಳನ್ನು ತರಿದು ಹಾಕಿದ ; ಸಿಂಹ ನರಿಗಳ ಹಿಂಡನ್ನು ಹೇಗೋ ಹಾಗೆ ಶತ್ರುಸೈನ್ಯವನ್ನು ಕ್ಷೋಭೆಗೊಳಿಸಿದ.

### ಭೀಮ ಅಶ್ವತ್ಥಾಮರ ಅದ್ಭುತಯುದ್ಧ

**ಸಂಕ್ಷೋಭ್ಯಮಾಣಂ ತದನೀಕಮೀಕ್ಷ್ಯ**
**ದ್ರೌಣೀ ರಥೇನ ಪ್ರತಿಜಗ್ಮಿವಾಂಸ್ತಮ್ ।**
**ತದ್ಯುದ್ಧಮಾಸೀದತಿಘೋರಮದ್ಭುತಂ**
**ಪುರಾ ಯಥಾ ನಾಸ ಚ ಕಸ್ಯಚಿತ್ ಕ್ವಚಿತ್ ॥ ೫ ॥**

**ಸಂಕ್ಷೋಭ್ಯಮಾಣಂ ತದನೀಕಂ ಈಕ್ಷ್ಯ ದ್ರೌಣಿಃ ರಥೇನ ಪ್ರತಿಜಗ್ಮಿವಾನ್ ತಮ್ । ತದ್ಯುದ್ಧಂ ಆಸೀತ್ ಅತಿಘೋರಂ ಅದ್ಭುತಂ ಪುರಾ ಯಥಾ ನ ಆಸ ಚ ಕಸ್ಯಚಿತ್ ಕ್ವಚಿತ್ ॥ ೫ ॥**

**ಅರ್ಥ** :- **ಸಂಕ್ಷೋಭ್ಯಮಾಣಂ** = ಬಹಳವಾಗಿ ಕ್ಷೋಭೆಗೊಳಗಾಗುತ್ತಿದ್ದ, **ತದನೀಕಂ** = ಆ ಸೇನೆಯನ್ನು, **ಈಕ್ಷ್ಯ** = ನೋಡಿ, **ದ್ರೌಣಿಃ** = ದ್ರೋಣಪುತ್ರನಾದ ಅಶ್ವತ್ಥಾಮನು, **ತಂ** = ಆ ಭೀಮನನ್ನು, **ರಥೇನ** = ರಥದಿಂದ, **ಪ್ರತಿಜಗ್ಮಿವಾನ್** = ಎದುರಿಸಿ ಹೊರಟನು. **ತದ್ಯುದ್ಧಂ** = ಅವರೀರ್ವರ ಆ ಯುದ್ಧವು, **ಯಥಾ** = ಹೇಗೆ, **ಅತಿಘೋರಂ** = ಅತಿಕ್ರೂರವೂ, **ಅದ್ಭುತಂ** = ಅದ್ಭುತವೂ, **ಆಸೀತ್** = ಆಗಿತ್ತೋ, **(ತಥಾ)** = ಹಾಗೆ, **ಪುರಾ** = ಹಿಂದೆ, **ಕಸ್ಯಚಿತ್ ಚ** = ಯಾರಿಗೂ, **ಕ್ವಚಿತ್** = ಎಲ್ಲೂ, **ನ ಆಸ** = ನಡೆದಿರಲಿಲ್ಲ.

**ತಾತ್ಪರ್ಯ** :- ಆ ಸೇನೆ ಹಾಗೆ ಉಲ್ಲೋಲಕಲ್ಲೋಲವಾದದ್ದನ್ನು ಕಂಡು ಅಶ್ವತ್ಥಾಮ ರಥದಿಂದ ಭೀಮನನ್ನು ಎದುರಿಸಿದ. ಅವರಿಬ್ಬರ ಅಂತಹ ಯುದ್ಧ ಹಿಂದೆಂದೂ ಎಲ್ಲೂ, ಯಾರಿಗೂ ನಡೆದಿರಲಿಲ್ಲ ; ಅದು ಅತ್ಯಂತ ಘೋರವೂ, ಅದ್ಭುತವೂ ಆಗಿತ್ತು.

ದೃಷ್ಟ್ವೈವ ತದ್ದೇವಗಂಧರ್ವವಿಪ್ರಾ
ಊಚುರ್ನೇದೃಗ್ದೃಷ್ಟಪೂರ್ವಂ ಸುಯುದ್ಧಮ್ ।
ನ ಚೋತ್ತರಂ ವಾಽಪಿ ಭವಿಷ್ಯತೀದೃಕ್
ಕಲಾಂ ಚ ಸರ್ವಾಣಿ ನ ಷೋಡಶೀಮಿಯುಃ ॥ ೬ ॥

ದೃಷ್ಟ್ವಾ ಏವ ತತ್ ದೇವಗಂಧರ್ವವಿಪ್ರಾಃ ಊಚುಃ ನ ಈದೃಕ್ ದೃಷ್ಟಪೂರ್ವಂ ಸುಯುದ್ಧಮ್ । ನ ಚ ಉತ್ತರಂ ವಾ ಅಪಿ ಭವಿಷ್ಯತಿ ಈದೃಕ್ ಕಲಾಂ ಚ ಸರ್ವಾಣಿ ನ ಷೋಡಶೀಂ ಇಯುಃ ॥ ೬ ॥

**ಅರ್ಥ** :– **ದೇವಗಂಧರ್ವವಿಪ್ರಾಃ** = ದೇವತೆಗಳು ಗಂಧರ್ವರು ವಿಪ್ರರು, **ತತ್** = ಆ ಯುದ್ಧವನ್ನು, **ದೃಷ್ಟ್ವಾ ಏವ** = ನೋಡುತ್ತಲೇ, **ಊಚುಃ** = ನುಡಿದರು, **ಈದೃಕ್** = ಇದಕ್ಕೆ ಸಮನಾದ, **ಸುಯುದ್ಧಂ** = ಮಹಾಯುದ್ಧವು, **ದೃಷ್ಟಪೂರ್ವಂ** = ಹಿಂದೆ ಕಂಡಿದ್ದು, **ನ (ಅಭೂತ್)** = ಆಗಿಲ್ಲ, **ಉತ್ತರಂ ವಾ ಅಪಿ** = ಮುಂದೆಯೂ ಸಹ ಈದೃಕ್, **(ಯುದ್ಧಂ)** = ಇಂತಹ ಯುದ್ಧವು, **ನ ಭವಿಷ್ಯತಿ ಚ** = ಆಗುವುದೂ ಇಲ್ಲ. **ಸರ್ವಾಣಿ** = **(ಯುದ್ಧಾನಿ)** = ಎಲ್ಲ ಯುದ್ಧಗಳೂ, **ಅಸ್ಯ ಯುದ್ಧಸ್ಯ** = ಈ ಯುದ್ಧದ, **ಷೋಡಶೀಂ** = ಹದಿನಾರನೆಯ, **ಕಲಾಂ ಚ** = ಭಾಗವನ್ನು ಸಹ, **ನ ಇಯುಃ** = ಹೊಂದಲಾರವು.

**ತಾತ್ಪರ್ಯ** :- ಅದನ್ನು ನೋಡುತ್ತಲೇ ದೇವತೆಗಳು, ಗಂಧರ್ವರು, ಮುನಿಗಳು ನುಡಿದರು : ಇಂತಹ ಮಹಾಯುದ್ಧವನ್ನು ಹಿಂದೆಂದೂ ನಾವು ಕಂಡಿರಲಿಲ್ಲ, ಇಂತಹುದು ಮುಂದೆಂದೂ ನಡೆಯುವುದೂ ಇಲ್ಲ. ಇತರ ಎಲ್ಲ ಯುದ್ಧಗಳೂ ಇದರ ಹದಿನಾರನೇ ಒಂದಂಶಕ್ಕೂ ಸಾಟಿಯಾಗವು.

ನೈತಾದೃಶೀ ಜ್ಞಾನಸಂಪದ್ಬಲಂ ವಾ
ದ್ವಯಂ ಕುತೋ ವಾಯುಮೃತೇ ಶಿವಂ ತಥಾ ।
ದ್ವಯೋಃ ಸಮಾಹಾರ ಇಹ ದ್ವಯೋರಪಿ
ಜ್ಞಾನಸ್ಯ ಬಾಹ್ವೋಶ್ಚ ಬಲಸ್ಯ ಸೂರ್ಜಿತಃ ॥ ೭ ॥

ನ ಏತಾದೃಶೀ ಜ್ಞಾನಸಂಪತ್ ಬಲಂ ವಾ ದ್ವಯಂ ಕುತಃ ವಾಯುಂ ಋತೇ ಶಿವಂ ತಥಾ । ದ್ವಯೋಃ ಸಮಾಹಾರಃ ಇಹ ದ್ವಯೋಃ ಅಪಿ ಜ್ಞಾನಸ್ಯ ಬಾಹ್ವೋಃ ಚ ಬಲಸ್ಯ ಸೂರ್ಜಿತಃ ॥ ೭ ॥

**ಅರ್ಥ** :- **ವಾಯುಂ** = ವಾಯುವನ್ನು, **(ಚ)** = ಮತ್ತು, **ಶಿವಂ** = ಶಿವನನ್ನು, **ಋತೇ** = ಹೊರತುಪಡಿಸಿ, **ಏತಾದೃಶೀ** = ಇಂತಹ, **ಜ್ಞಾನಸಂಪತ್** = ಜ್ಞಾನಸಂಪತ್ತು, **ವಾ** = ಅಥವಾ, **ಬಲಂ** = ಬಲವು, **ನ (ಅಸ್ತಿ)** = (ಎಲ್ಲೂ) ಇಲ್ಲ. **ತಥಾ** = ಹಾಗೆಯೇ, **ದ್ವಯಂ** = ಇವೆರಡೂ ಒಟ್ಟಾಗಿ, **ಕುತಃ** = ಎಲ್ಲಿ ತಾನೆ ಇರಲು ಸಾಧ್ಯ?, **ಜ್ಞಾನಸ್ಯ** = ಜ್ಞಾನದ, **ಚ** = ಹಾಗೂ, **ಬಾಹ್ವೋಃ** = ಬಾಹುವಿನ, **ಬಲಸ್ಯ** = ಬಲದ, **ದ್ವಯೋಃ** = ಇವೆರಡರ, **ಸೂರ್ಜಿತಃ** = ಅತ್ಯುತ್ಕೃಷ್ಟವಾದ, **ಸಮಾಹಾರಃ** = ಒಟ್ಟಿಗೆ ಸೇರುವಿಕೆಯು (ಏಕತ್ರ ಸಮ್ಮೇಲನವು), **ಇಹ** = ಇಲ್ಲಿ, **ದ್ವಯೋಃ (ಅಪಿ)** = ಭೀಮ-ಅಶ್ವತ್ಥಾಮರಿಗೆ ಮಾತ್ರ, **ಅಸ್ತಿ** = ಇದೆ (ಬೇರೆಡೆ ಎಲ್ಲೂ ಇಲ್ಲ ಎಂದು ಭಾವ).

**ತಾತ್ಪರ್ಯ** :- ಇಂತಹ ಜ್ಞಾನಸಂಪತ್ತಾಗಲೀ, ಬಲವಾಗಲೀ ವಾಯುವನ್ನೂ ಹಾಗೆಯೇ ಶಿವನನ್ನೂ ಹೊರತು ಬೇರೆಲ್ಲೂ ಇರವು. ಈ ಎರಡು ಒಟ್ಟು ಸೇರುವುದು ಇನ್ನೆಲ್ಲಿ ಸಾಧ್ಯ? ಇವರಿಬ್ಬರಲ್ಲೂ ಜ್ಞಾನಬಲ ಮತ್ತು ಬಾಹುಬಲ - ಎರಡರ ಪೂರ್ಣ ಸಮಾವೇಶ ಇದೆ.

**ಇತೀರ್ಯಮಾಣೇ ವಿಬುಧೈರ್ನರೋತ್ತಮೌ**
**ದಿಶಃ ಸಮಸ್ತಾ ಗಗನಂ ಚ ಪತ್ರಿಭಿಃ ।**
**ನಿರಂತರಂ ಚಕ್ರತುರುತ್ತಮೌಜಸೌ**
**ದೃಷ್ಟ್ವೈವ ತದ್ಭೀತಿಮಗುರ್ಮಹಾರಥಾಃ ॥ ೮ ॥**

**ಇತಿ ಈರ್ಯಮಾಣೇ ವಿಬುಧೈಃ ನರೋತ್ತಮೌ ದಿಶಃ ಸಮಸ್ತಾಃ ಗಗನಂ ಚ ಪತ್ರಿಭಿಃ । ನಿರಂತರಂ ಚಕ್ರತುಃ ಉತ್ತಮೌಜಸೌ ದೃಷ್ಟ್ವಾ ಏವ ತತ್ ಭೀತಿಂ ಅಗುಃ ಮಹಾರಥಾಃ ॥ ೮ ॥**

**ಅರ್ಥ** :- **ಇತಿ** = ಹೀಗೆಂದು, **ವಿಬುಧೈಃ** = ದೇವತೆಗಳಿಂದ, **ಈರ್ಯಮಾಣೇ** = ಹೇಳಲ್ಪಡುತ್ತಿರಲು, **ನರೋತ್ತಮೌ** = ಪುರುಷಶ್ರೇಷ್ಠರೂ, **ಉತ್ತಮೌಜಸೌ** = ಉತ್ತಮಪರಾಕ್ರಮಿಗಳೂ ಆದ ಅವರಿಬ್ಬರು, **ಪತ್ರಿಭಿಃ** = ಬಾಣಗಳಿಂದ, **ಸಮಸ್ತಾಃ ದಿಶಃ ಚ** = ಎಲ್ಲ ದಿಕ್ಕುಗಳನ್ನೂ ಸಹ, **ನಿರಂತರಂ** = ಅವಕಾಶರಹಿತವನ್ನಾಗಿ, **ಚಕ್ರತುಃ** = ಮಾಡಿದರು. **ತತ್** = ಅದನ್ನು (ಆ ಯುದ್ಧವನ್ನು), **ದೃಷ್ಟ್ವಾ ಏವ** = ನೋಡುತ್ತಲೇ,

**ಮಹಾರಥಿಕಾಃ** = ಮಹಾರಥಿಕರು, **ಭೀತಿಂ** = ಭಯವನ್ನು, **ಅಗುಃ** = ಹೊಂದಿದರು.

**ತಾತ್ಪರ್ಯ** :- ದೇವತೆಗಳು ಹೀಗೆ ನುಡಿಯುತ್ತಿದ್ದಂತೆಯೇ ಪುರುಷಶ್ರೇಷ್ಠರೂ, ಉತ್ತಮ ಪರಾಕ್ರಮಿಗಳೂ ಆದ ಭೀಮ-ಅಶ್ವತ್ಥಾಮರು ಬಾಣಗಳಿಂದ ಸಮಸ್ತ ದಿಕ್ಕುಗಳನ್ನು, ಗಗನವನ್ನು ಎಡೆಯಿಲ್ಲದಂತೆ ತುಂಬಿಸಿಬಿಟ್ಟರು. ಅದನ್ನು ನೋಡುತ್ತಲೇ ಮಹಾರಥಿಕರು ಭೀತಿಹೊಂದಿದರು.

### ಅಸ್ತ್ರಯುದ್ಧದಲ್ಲೂ ಅಶ್ವತ್ಥಾಮನ ಪರಾಜಯ

**ಶರಾಸನೇ ಮಾರುತಿನಾ ನಿರಾಕೃತೇ**
**ದ್ರೌಣಿರ್ಮಹಾಸ್ತ್ರಾಣಿ ಮುಮೋಚ ತಸ್ಮಿನ್ ।**
**ತಾನ್ಯಸ್ತ್ರವರ್ಯ್ಯೈರ್ಬಲವಾನವಿಸ್ಮಯಃ**
**ಸಂಶಾಮಯಾಮಾಸ ಸುತೋಽನಿಲಸ್ಯ ॥ ೯ ॥**

**ಶರಾಸನೇ ಮಾರುತಿನಾ ನಿರಾಕೃತೇ ದ್ರೌಣಿಃ ಮಹಾಸ್ತ್ರಾಣಿ ಮುಮೋಚ ತಸ್ಮಿನ್ । ತಾನಿ ಅಸ್ತ್ರವರ್ಯ್ಯೈಃ ಬಲವಾನ್ ಅವಿಸ್ಮಯಃ ಸಂಶಾಮಯಾಮಾಸ ಸುತಃ ಅನಿಲಸ್ಯ ॥ ೯ ॥**

**ಅರ್ಥ** :- **ಮಾರುತಿನಾ** = ವಾಯುಪುತ್ರನಾದ ಭೀಮನಿಂದ, **ಶರಾಸನೇ** = ಬಿಲ್ಲು, **ನಿರಾಕೃತೇ (ಸತಿ)** = ಕತ್ತರಿಸಿಹಾಕಲ್ಪಟ್ಟಾಗ, **ದ್ರೌಣಿಃ** ದ್ರೋಣಪುತ್ರನಾದ ಅಶ್ವತ್ಥಾಮನು, **ಮಹಾಸ್ತ್ರಾಣಿ** = ಮಹಾಸ್ತ್ರಗಳನ್ನು, **ಮುಮೋಚ** = ಪ್ರಯೋಗಿಸಿದನು. **ಅವಿಸ್ಮಯಃ** = ಚಕಿತನಾಗದ, **ಬಲವಾನ್** = ಬಲಶಾಲಿಯಾದ, **ಅನಿಲಸ್ಯ** = ವಾಯುವಿನ, **ಸುತಃ** = ಮಗನಾದ ಭೀಮನು, **ತಾನಿ** = ಅವುಗಳನ್ನು, **ಅಸ್ತ್ರವರ್ಯ್ಯೈಃ** = ಶ್ರೇಷ್ಠಅಸ್ತ್ರಗಳಿಂದ, **ಸಂಶಾಮಯಾಮಾಸ** = ಶಾಂತಗೊಳಿಸಿದ.

**ತಾತ್ಪರ್ಯ** :- ಅಶ್ವತ್ಥಾಮನ ಬಿಲ್ಲನ್ನು ಭೀಮಸೇನ ಕತ್ತರಿಸಿಹಾಕಿದಾಗ ಅಶ್ವತ್ಥಾಮ ಭೀಮನ ಮೇಲೆ ಮಹಾಸ್ತ್ರಗಳನ್ನು ಪ್ರಯೋಗಿಸತೊಡಗಿದ. ಮಹಾಬಲನಾದ ಭೀಮಸೇನ ಚಕಿತನಾಗದೇ ಅವುಗಳನ್ನೆಲ್ಲ ಮಹಾಸ್ತ್ರ ಗಳಿಂದಲೇ ಉಪಶಮನಗೊಳಿಸಿದ.

### ಭೀಮನ ಪೆಟ್ಟಿಗೆ ಅಶ್ವತ್ಥಾಮನ ಮೂರ್ಛೆ

**ಪುನಃ ಶರೈರೇವ ಪರಸ್ಪರಂ ತಾ-**
**ವಯುಧ್ಯತಾಂ ಚಿತ್ರಮಲಂ ಚ ಸುಷ್ಠು ।**
**ತದಾ ತು ಭೀಮಸ್ಯ ಶರೈರ್ಭೃಶಾರ್ದಿತಃ**
**ದ್ರೌಣಿಃ ಪಪಾತಾಶು ದೃಢಂ ವಿಚೇತನಃ ॥ ೧೦ ॥**

ಪುನಃ ಶರೈಃ ಏವ ಪರಸ್ಪರಂ ತೌ ಅಯುಧ್ಯತಾಂ ಚಿತ್ರಂ ಅಲಂ ಚ ಸುಷ್ಠು । ತದಾ ತು ಭೀಮಸ್ಯ ಶರೈಃ ಭೃಶಾರ್ದಿತಃ ದ್ರೌಣಿಃ ಪಪಾತ ಆಶು ದೃಢಂ ವಿಚೇತನಃ ॥ ೧೦ ॥

**ಅರ್ಥ** :- **ಪುನಃ** = ಮತ್ತೆ, **ತೌ** = ಅವರಿಬ್ಬರೂ, **ಶರೈಃ ಏವ** = ಬಾಣಗಳಿಂದಲೇ, **ಪರಸ್ಪರಂ** = ಒಬ್ಬರಿಗೊಬ್ಬರು, **ಚಿತ್ರಂ** = ವಿಚಿತ್ರವಾಗಿ, **ಚ** = ಹಾಗೂ, **ಸುಷ್ಠು** = ಉತ್ತಮವಾಗಿ, **ಅಲಂ** = ಬಹಳವಾಗಿ, **ಅಯುಧ್ಯತಾಮ್** = ಯುದ್ಧಮಾಡಿದರು. **ತದಾ ತು** = ಆಗಲಾದರೋ, **ಭೀಮಸ್ಯ** = ಭೀಮನ, **ಶರೈಃ** = ಬಾಣಗಳಿಂದ, **ಭೃಶಾರ್ದಿತಃ** = ಬಹಳವಾಗಿ ಪೀಡಿತನಾದ, **ದ್ರೌಣಿಃ** = ದ್ರೋಣಪುತ್ರನು, **ದೃಢಂ** = ಗಾಢವಾಗಿ, **ವಿಚೇತನಃ** (ಸನ್) = ಮೂರ್ಛೆಗೊಂಡವನಾಗಿ, **ಆಶು** = ಕೂಡಲೇ, **ಪಪಾತ** = ಕೆಳಕ್ಕೆ ಬಿದ್ದನು.

**ತಾತ್ಪರ್ಯ** :- ಮತ್ತೆ ಬಾಣಗಳಿಂದಲೇ ಅವರಿಬ್ಬರೂ ಅತ್ಯಂತ ಆಶ್ಚರ್ಯಕರವಾಗಿ ಪರಸ್ಪರ ಚೆನ್ನಾಗಿ ಕಾದಾಡಿದರು. ಆಗ ಭೀಮನ ಬಾಣಗಳಿಂದ ಬಹಳವಾಗಿ ಪೀಡಿತನಾದ ಅಶ್ವತ್ಥಾಮ ಕೂಡಲೇ ಗಾಢವಾದ ಮೂರ್ಛೆಗೊಳಗಾಗಿ ಬಿದ್ದ.

### ಭೀಮನಿಂದ ಗಜಸೇನೆಯ ವಿನಾಶ

**ಭೀಮಶ್ಚ ವಿಹ್ವಲತನುಃ ಸ ತು ಕಿಂಚಿದೇವ**
**ಪೂರ್ವಂ ಗತೇ ಗುರುಸುತೇ ಪ್ರಯಯೌ ಕ್ಷಣೇನ ।**
**ನಿರ್ಧೂತಯುದ್ಧಶ್ರಮ ಆತ್ತಧನ್ವಾ**
**ಯೋದ್ಧುಂ ಗಜೌಘಂ ಪ್ರತಿ ನಾದಿತಾಶಃ ॥ ೧೧ ॥**

ಭೀಮಃ ಚ ವಿಹ್ವಲತನುಃ ಸಃ ತು ಕಿಂಚಿತ್ ಏವ ಪೂರ್ವಂ ಗತೇ ಗುರುಸುತೇ ಪ್ರಯಯೌ ಕ್ಷಣೇನ । ನಿರ್ಧೂತಯುದ್ಧಶ್ರಮಃ ಆತ್ತಧನ್ವಾ ಯೋದ್ಧುಂ ಗಜೌಘಂ ಪ್ರತಿ ನಾದಿತಾಶಃ ॥ ೧೧ ॥

**ಅರ್ಥ** :- **ಕಿಂಚಿತ್** ಏವ = ಸ್ವಲ್ಪಮಾತ್ರವೇ, **ವಿಹ್ವಲತನುಃ** = ಚಂಚಲಗೊಂಡಿದ್ದ ದೇಹದವನಾದ, **ನಿರ್ಧೂತಯುದ್ಧಶ್ರಮಃ** = ಯುದ್ಧಶ್ರಮವಿಲ್ಲದವನಾದ, **ಸಃ ಭೀಮಃ ತು** = ಆ ಭೀಮನಾದರೋ, **ಆತ್ತಧನ್ವಾ** = **ಚ** = ಬಿಲ್ಲನ್ನು ಹಿಡಿದುಕೊಂಡವನಾಗಿ, **ಗುರುಸುತೇ** = ಗುರುಪುತ್ರನಾದ ಅಶ್ವತ್ಥಾಮನು, **ಪೂರ್ವಂ** = ಮೊದಲೇ, **ಗತೇ (ಸತಿ)** = ತೆರಳಿರಲು, **ಕ್ಷಣೇನ** = ಮರುಕ್ಷಣವೇ, **ನಾದಿತಾಶಃ (ಸನ್)** = ನಾದದಿಂದ ದಿಕ್ಕುಗಳೆನ್ನೆಲ್ಲ ತುಂಬಿಸಿದವನಾಗಿ, **ಯೋದ್ಧುಂ** = ಯುದ್ಧಮಾಡಲೆಂದು, **ಗಜೌಘಂ** = ಆನೆಗಳ ಹಿಂಡನ್ನು, **ಪ್ರತಿ** = ಕುರಿತು, **ಪ್ರಯಯೌ** = ವೇಗದಿಂದ ತೆರಳಿದ.

**ತಾತ್ಪರ್ಯ** :- ಅಶ್ವತ್ಥಾಮ ಮೂರ್ಛೆಗೊಂಡು ತೆರಳಿದ ಮೇಲೆ ಮೊದಲು ಸ್ವಲ್ಪಮಾತ್ರವೇ ದೇಹಬಳಲಿದ್ದ ಭೀಮಸೇನ ಕ್ಷಣದಲ್ಲೇ ಯುದ್ಧದ ಬಳಲಿಕೆಯನ್ನು ಪರಿಹರಿಸಿಕೊಂಡು ಧನುಸ್ಸನ್ನೆತ್ತಿಕೊಂಡು ಸಿಂಹನಾದದಿಂದ ದಿಕ್ಕುಗಳನ್ನು ಪ್ರತಿಧ್ವನಿಸುತ್ತಾ ಗಜಸೇನೆಯೊಂದಿಗೆ ಯುದ್ಧ ಮಾಡಲು ವೇಗದಿಂದ ತೆರಳಿದ.

**ತಸ್ಮಿನ್ ಗಜಾನ್ ಮರ್ದಯತಿ ಧಾರ್ತರಾಷ್ಟ್ರೋ ಯುಧಿಷ್ಠಿರಮ್ ।**
**ಆಯಾದ್ಯುದ್ಧಾಯ ತೌ ಯುದ್ಧಂ ರಾಜಾನೌ ಚಕ್ರತುಶ್ಚಿರಮ್ ॥ ೧೨ ॥**

**ತಸ್ಮಿನ್ ಗಜಾನ್ ಮರ್ದಯತಿ ಧಾರ್ತರಾಷ್ಟ್ರಃ ಯುಧಿಷ್ಠಿರಮ್ । ಆಯಾತ್ ಯುದ್ಧಾಯ ತೌ ಯುದ್ಧಂ ರಾಜಾನೌ ಚಕ್ರತುಃ ಚಿರಮ್ ॥ ೧೨ ॥**

**ಅರ್ಥ** :- **ಗಜಾನ್** = ಆನೆಗಳನ್ನು, **ತಸ್ಮಿನ್** = ಆ ಭೀಮಸೇನನು, **ಮರ್ದಯತಿ (ಸತಿ)** = ಪೀಡಿಸುತ್ತಿರಲು, **ಧಾರ್ತರಾಷ್ಟ್ರಃ** = ಧೃತರಾಷ್ಟ್ರನ ಮಗನಾದ ದುರ್ಯೋಧನನು, **ಯುದ್ಧಾಯ** = ಯುದ್ಧಕ್ಕೆಂದು, **ಯುಧಿಷ್ಠಿರಂ** = ಯುಧಿಷ್ಠಿರನನ್ನು ಕುರಿತು, **ಆಯಾತ್** = ತೆರಳಿದನು. **ತೌ ರಾಜಾನೌ** = ಈ ಇಬ್ಬರು ರಾಜರು, **ಚಿರಂ** = ಬಹುಕಾಲ, **ಯುದ್ಧಂ** = ಯುದ್ಧವನ್ನು, **ಚಕ್ರತುಃ** = ಮಾಡಿದರು.

**ತಾತ್ಪರ್ಯ** :- ಭೀಮಸೇನ ಆನೆಗಳನ್ನು ದಮನಗೊಳಿಸುತ್ತಿದ್ದಾಗ, ದುರ್ಯೋಧನ ಯುದ್ಧಕ್ಕೆಂದು ಧರ್ಮರಾಜನ ಮೇಲೆ ತೆರಳಿದ. ರಾಜರಾದ ಅವರಿಬ್ಬರು ಬಹುಕಾಲ ಯುದ್ಧ ಮಾಡಿದರು.

### ಯುಧಿಷ್ಠಿರನಿಂದ ದುರ್ಯೋಧನನ ಪರಾಭವ

**ತತ್ರ ತಂ ವಿರಥಂ ಚಕ್ರೇ ಸಹಸೈವ ಯುಧಿಷ್ಠಿರಃ ।**
**ಸ ಗದಾಮಾದದೇ ಗುರ್ವೀಂ ತಂ ಭೀಮೋಽಭ್ಯಪತದ್ಗದೀ ॥ ೧೩ ॥**

ತತ್ರ ತಂ ವಿರಥಂ ಚಕ್ರೇ ಸಹಸಾ ಏವ ಯುಧಿಷ್ಠಿರಃ । ಸಃ ಗದಾಂ ಆದದೇ ಗುರ್ವೀಂ ತಂ ಭೀಮಃ ಅಭ್ಯಪತತ್ ಗದೀ ॥ ೧೩ ॥

**ಅರ್ಥ :–** **ತತ್ರ** = ಆ ಯುದ್ಧದಲ್ಲಿ, **ಯುಧಿಷ್ಠಿರಃ** = ಧರ್ಮರಾಜನು, **ತಂ** = ಆ ದುರ್ಯೋಧನನನ್ನು, **ಸಹಸಾ ಏವ** = ಕೂಡಲೇ, **ವಿರಥಂ** = ರಥವಿಲ್ಲದವನನ್ನಾಗಿ, **ಚಕ್ರೇ** = ಮಾಡಿದ. **ಸಃ** = ಆ ದುರ್ಯೋಧನನು, **ಗುರ್ವೀಂ** = ದೊಡ್ಡದಾದ, **ಗದಾಂ** = ಗದೆಯನ್ನು, **ಆದದೇ** = ಕೈಗೆತ್ತಿಕೊಂಡನು. **ಗದೀ** = ಗದೆಯನ್ನು ಹಿಡಿದುಕೊಂಡ, **ಭೀಮಃ** = ಭೀಮನು, **ತಂ** = ಆ ದುರ್ಯೋಧನನನ್ನು ಕುರಿತು, **ಅಭ್ಯಪತತ್** = ಮೇಲೆರಗಿದನು.

**ತಾತ್ಪರ್ಯ :-** ಕೂಡಲೇ ಧರ್ಮರಾಜ ದುರ್ಯೋಧನನನ್ನು ವಿರಥನನ್ನಾಗಿ ಮಾಡಿದ. ದುರ್ಯೋಧನ ಆಗ ದೊಡ್ಡ ಗದೆಯನ್ನು ಕೈಗೆತ್ತಿಕೊಂಡ. ಆಗ ಗದಾಪಾಣಿಯಾಗಿ ಭೀಮಸೇನ ಅವನ ಮೇಲೆ ನುಗ್ಗಿದ.

### ಭೀಮನಿಗೆ ಅಂಜಿ ದುರ್ಯೋಧನನ ಪಲಾಯನ

**ದೃಷ್ಟ್ವಾ ಕೃಪಸ್ತಂ ಸ್ವರಥಮಾರೋಪ್ಯಾಪಯಯೌ ತತಃ ।**
**ತದೈವ ಕರ್ಣನಕುಲೌ ಭೃಶಂ ಬಾಣೈರಯುಧ್ಯತಾಮ್ ॥ ೧೪ ॥**

ದೃಷ್ಟ್ವಾ ಕೃಪಃ ತಂ ಸ್ವರಥಂ ಆರೋಪ್ಯ ಅಪಯಯೌ ತತಃ । ತದಾ ಏವ ಕರ್ಣನಕುಲೌ ಭೃಶಂ ಬಾಣೈಃ ಅಯುಧ್ಯತಾಮ್ ॥ ೧೪ ॥

**ಅರ್ಥ :–** **ಕೃಪಃ** = ಕೃಪನು, **ದೃಷ್ಟ್ವಾ** = ನೋಡಿ, **ತಂ** = ಆ ದುರ್ಯೋಧನನನ್ನು, **ಸ್ವರಥಂ** = ತನ್ನ ರಥದಲ್ಲಿ, **ಆರೋಪ್ಯ** = ಏರಿಸಿಕೊಂಡು, **ತತಃ** = ಅಲ್ಲಿಂದ, **ಅಪಯಯೌ** = ತೆರಳಿದನು. **ತದಾ ಏವ** = ಆಗಲೇ, **ಕರ್ಣನಕುಲೌ** = ಕರ್ಣ–ನಕುಲರು, **ಬಾಣೈಃ** = ಬಾಣಗಳಿಂದ, **ಭೃಶಂ** = ಬಹಳವಾಗಿ, **ಅಯುಧ್ಯತಾಮ್** = ಕಾದಾಡಿದರು.

**ತಾತ್ಪರ್ಯ** :- ಭೀಮನನ್ನು ನೋಡಿ ಕೃಪ ದುರ್ಯೋಧನನನ್ನು ತನ್ನ ರಥದಲ್ಲಿ ಏರಿಸಿಕೊಂಡು ಅಲ್ಲಿಂದ ತೆರಳಿಬಿಟ್ಟನು. ಆಗಲೇ ಕರ್ಣ ಮತ್ತು ನಕುಲರು ಬಾಣಗಳಿಂದ ಜೋರಾಗಿ ಕಾದತೊಡಗಿದರು.

ಕರ್ಣನಿಂದ ವಿರಥನಾದ ನಕುಲ

**ನಕುಲಂ ವಿರಥಂ ಕೃತ್ವಾ ಕರ್ಣೋಽಥ ಪ್ರಪಲಾಯಿನಮ್ ।**
**ಅನುದ್ರುತ್ಯ ಚ ವೇಗೇನ ಕಂಠೇ ಧನುರವಾಸೃಜತ್ ॥ ೧೫ ॥**

**ನಕುಲಂ ವಿರಥಂ ಕೃತ್ವಾ ಕರ್ಣಃ ಅಥ ಪ್ರಪಲಾಯಿನಮ್ । ಅನುದ್ರುತ್ಯ ಚ ವೇಗೇನ ಕಂಠೇ ಧನುಃ ಅವಾಸೃಜತ್ ॥ ೧೫ ॥**

**ಅರ್ಥ** :- **ಕರ್ಣಃ** = ಕರ್ಣನು, **ನಕುಲಂ** = ನಕುಲನನ್ನು, **ವಿರಥಂ** = ವಿರಥನನ್ನಾಗಿ, **ಕೃತ್ವಾ** = ಮಾಡಿ, **ಅಥ** = ಬಳಿಕ, **ಪ್ರಪಲಾಯಿನಂ** = ಪಲಾಯನ ಮಾಡತೊಡಗಿದ ನಕುಲನನ್ನು, **ವೇಗೇನ ಚ** = ವೇಗದಿಂದಲೂ, **ಅನುದ್ರುತ್ಯ** = ಬೆನ್ನುಹತ್ತಿ, **ಧನುಃ** = ಧನುಸ್ಸನ್ನು, **ಕಂಠೇ** = ಕಂಠದಲ್ಲಿ, **ಅವಾಸೃಜತ್** = ಸಿಲುಕಿಸಿದ.

**ತಾತ್ಪರ್ಯ** :- ನಕುಲನನ್ನು ಕರ್ಣ ವಿರಥನನ್ನಾಗಿ ಮಾಡಿದ ; ಬಳಿಕ ಪಲಾಯನ ಮಾಡತೊಡಗಿದ ಅವನನ್ನು ವೇಗದಿಂದ ಬೆನ್ನುಹತ್ತಿ ಅವನ ಕತ್ತಿಗೆ ಬಿಲ್ಲಿನಿಂದ ತಿವಿದ.

**ಉಕ್ತ್ವಾ ಚ ಪರುಷಾ ವಾಚಃ ಕುಂತ್ಯಾ ವಚನಗೌರವಾತ್ ।**
**ನ ಜಘಾನೈವ ನಕುಲಂ ವಿಸೃಜ್ಯ ಚ ಯಯೌ ಪರಾನ್ ॥ ೧೬ ॥**

**ಉಕ್ತ್ವಾ ಚ ಪರುಷಾಃ ವಾಚಃ ಕುಂತ್ಯಾಃ ವಚನಗೌರವಾತ್ । ನ ಜಘಾನ ಏವ ನಕುಲಂ ವಿಸೃಜ್ಯ ಚ ಯಯೌ ಪರಾನ್ ॥ ೧೬ ॥**

**ಅರ್ಥ** :- **ಪರುಷಾಃ** = ಕ್ರೂರವಾದ, **ವಾಚಃ ಚ** = ಮಾತುಗಳನ್ನೂ, **ಉಕ್ತ್ವಾ** = ಹೇಳಿ, **ಕುಂತ್ಯಾಃ** = ಕುಂತಿಯ, **ವಚನಗೌರವಾತ್** = ಮಾತಿನ ಗೌರವದ ನಿಮಿತ್ತದಿಂದ, **ನಕುಲಂ** = ನಕುಲನನ್ನು, **ನ ಜಘಾನ ಏವ** = ಕೊಲ್ಲದೆ ಬಿಟ್ಟ, **ಚ** = ಮತ್ತು, (ತಂ) = ಅವನನ್ನು, **ವಿಸೃಜ್ಯ** = ಬಿಟ್ಟು, **ಪರಾನ್** = ಇತರರನ್ನು ಕುರಿತು, **ಯಯೌ** = ಹೋದನು.

**ತಾತ್ಪರ್ಯ** :- ಕಟುವಾದ ಮಾತುಗಳಿಂದ ಅವನನ್ನು ಬೈದು ಕುಂತಿಗೆ ನೀಡಿದ ಮಾತಿಗೆ ಗೌರವ ನೀಡಿ ಕರ್ಣ ನಕುಲನನ್ನು ಕೊಲ್ಲದೇ ಬಿಟ್ಟು ಇತರರ ಮೇಲೆ ಏರಿಹೋದ.

ಸಾತ್ಯಕಿಯಿಂದ ವಿಂದಾನುವಿಂದರ ವಧೆ

**ವಿಂದಾನುವಿಂದಾವಥ ಕೈಕಯೌ ರಣೇ**
**ಸಮಾಸದತ್ ಸಾತ್ಯಕಿರುಗ್ರವಿಕ್ರಮಃ ।**
**ತಯೋರಮುಷ್ಯಾಭವದುಗ್ರವೈಶಸಂ**
**ಪ್ರವರ್ಷತೋರುತ್ತಮಸಾಯಕಾನ್ ಬಹೂನ್ ॥ ೧೭ ॥**

**ವಿಂದಾನುವಿಂದೌ ಅಥ ಕೈಕಯೌ ರಣೇ ಸಮಾಸದತ್ ಸಾತ್ಯಕಿಃ ಉಗ್ರವಿಕ್ರಮಃ । ತಯೋಃ ಅಮುಷ್ಯ ಅಭವತ್ ಉಗ್ರವೈಶಸಂ ಪ್ರವರ್ಷತೋಃ ಉತ್ತಮಸಾಯಕಾನ್ ಬಹೂನ್ ॥ ೧೭ ॥**

**ಅಥ ಉಗ್ರವಿಕ್ರಮಃ ಸಾತ್ಯಕಿಃ ಕೈಕಯೌ ವಿಂದಾನುವಿಂದೌ ರಣೇ ಸಮಾಸದತ್ । ಬಹೂನ್ ಉತ್ತಮಸಾಯಕಾನ್ ಪ್ರವರ್ಷತೋಃ ತಯೋಃ ಅಮುಷ್ಯ ಉಗ್ರವೈಶಸಂ ಅಭವತ್ ॥**

**ಅರ್ಥ** :- **ಅಥ** = ಆಮೇಲೆ, **ಉಗ್ರವಿಕ್ರಮಃ** = ಉಗ್ರಪರಾಕ್ರಮಿಯಾದ, **ಸಾತ್ಯಕಿಃ** = ಸಾತ್ಯಕಿಯು, **ಕೈಕಯೌ** = ಕೈಕಯದೇಶದ, **ವಿಂದಾನುವಿಂದೌ** = ವಿಂದ-ಅನುವಿಂದರನ್ನು, **ರಣೇ** = ಯುದ್ಧದಲ್ಲಿ, **ಸಮಾಸದತ್** = ಎದುರಿಸಿದ. **ಬಹೂನ್** = ಬಹಳವಾದ, **ಉತ್ತಮ ಸಾಯಕಾನ್** = ಉತ್ತಮವಾದ ಬಾಣಗಳನ್ನು, **ಪ್ರವರ್ಷತೋಃ** = ಮಳೆಗರೆಯತೊಡಗಿದ, **ತಯೋಃ** = ಅವರಿಬ್ಬರಿಗೆ, **ಅಮುಷ್ಯ** = ಅವನೊಂದಿಗೆ, **ಉಗ್ರವೈಶಸಂ** = ಉಗ್ರವಾದ ಯುದ್ಧವು, **ಅಭವತ್** = ನಡೆಯಿತು.

**ತಾತ್ಪರ್ಯ** :- ಕೈಕಯ ದೇಶದ ವಿಂದ ಮತ್ತು ಅನುವಿಂದರನ್ನು ಉಗ್ರ ಪರಾಕ್ರಮಿಯಾದ ಸಾತ್ಯಕಿ ಯುದ್ಧದಲ್ಲಿ ಎದುರಿಸಿದ. ಉತ್ತಮವಾದ ಬಹುಸಂಖ್ಯೆಯ ಬಾಣಗಳನ್ನು ಮಳೆಗರೆಯತೊಡಗಿದ; ಅವರಿಬ್ಬರಿಗೆ ಅವನೊಂದಿಗೆ ಉಗ್ರ ಹೋರಾಟ ನಡೆಯಿತು.

**ತಾಭ್ಯಾಂ ನಿರುದ್ಧಃ ಸಹಸಾ ಜಹಾರ**
**ತತ್ರಾನುವಿಂದಸ್ಯ ಶಿರೋಽಥ ವಿಂದಃ**
**ಯುಯೋಧ ಶೈನೇಯಮಥಾರಥಾವುಭೌ**
**ಪರಸ್ಪರಂ ಚಕ್ರತುರುತ್ತಮಾಹವೇ ॥ ೧೮ ॥**

**ತಾಭ್ಯಾಂ ನಿರುದ್ಧಃ ಸಹಸಾ ಜಹಾರ ತತ್ರ ಅನುವಿಂದಸ್ಯ ಶಿರಃ ಅಥ ವಿಂದಃ ಯುಯೋಧ ಶೈನೇಯಂ ಅಥ ಅರಥೌ ಉಭೌ ಪರಸ್ಪರಂ ಚಕ್ರತುಃ ಉತ್ತಮಾಹವೇ ॥ ೧೮ ॥**

**ಅರ್ಥ :- ತಾಭ್ಯಾಂ** = ಅವರಿಬ್ಬರಿಂದ (ವಿಂದ–ಅನುವಿಂದರಿಂದ), **ನಿರುದ್ಧಃ (ಸಾತ್ಯಕಿಃ)** = ತಡೆಯಲ್ಪಟ್ಟ ಸಾತ್ಯಕಿಯು, **ಸಹಸಾ** = ಕೂಡಲೇ, **ತತ್ರ** = ಅವರಿಬ್ಬರಲ್ಲಿ, **ಅನುವಿಂದಸ್ಯ** = ಅನುವಿಂದನ, **ಶಿರಃ** = ತಲೆಯನ್ನು, **ಜಹಾರ** = ಕತ್ತರಿಸಿದ. **ಅಥ** = ಬಳಿಕ, **ವಿಂದಃ** = ವಿಂದನು, **ಶೈನೇಯಂ** = ಸಾತ್ಯಕಿಯನ್ನು ಕುರಿತು, **ಯುಯೋಧ** = ಯುದ್ಧಮಾಡಿದ. **ಅಥ** = ಆಮೇಲೆ, **ಉತ್ತಮಾಹವೇ** = ಉತ್ತಮವಾದ ಯುದ್ಧದಲ್ಲಿ, **ಪರಸ್ಪರಂ** = ಒಬ್ಬರಿಗೊಬ್ಬರು, **ಅರಥೌ** = ರಥವಿಲ್ಲದವರಾಗಿ, **ಚಕ್ರತುಃ** = ಮಾಡಿಕೊಂಡರು.

**ತಾತ್ಪರ್ಯ :-** ಅವರಿಬ್ಬರಿಂದ ತಡೆಯಲ್ಪಟ್ಟ ಸಾತ್ಯಕಿ ಕೂಡಲೇ ಅನುವಿಂದನ ತಲೆಯನ್ನು ಕತ್ತರಿಸಿದ. ಬಳಿಕ ವಿಂದ ಸಾತ್ಯಕಿನೊಡನೆ ಯುದ್ಧಕ್ಕೆ ತೊಡಗಿದ. ಆ ಉತ್ತಮವಾದ ಯುದ್ಧದಲ್ಲಿ ಅವರಿಬ್ಬರೂ ಪರಸ್ಪರರನ್ನು ವಿರಥರನ್ನಾಗಿಸಿಕೊಂಡರು.

**ತತಶ್ಚ ಚರ್ಮಾಸಿಧರೌ ಪ್ರಚೇರತುಃ**
**ಶ್ಯೇನೌ ಯಥಾಽಽಕಾಶತಲೇ ಕೃತಶ್ರಮೌ ।**
**ನಿಕೃತ್ಯ ಚಾನ್ಯೋನ್ಯಮುಭೌ ಚ ಚರ್ಮಣೀ**
**ವರಾಸಿಪಾಣೀ ಯುಗಪತ್ ಸಮೀಯತುಃ ॥ ೧೯ ॥**

**ತತಃ ಚ ಚರ್ಮಾಸಿಧರೌ ಪ್ರಚೇರತುಃ ಶ್ಯೇನೌ ಯಥಾ ಆಕಾಶತಲೇ ಕೃತಶ್ರಮೌ । ನಿಕೃತ್ಯ ಚ ಅನ್ಯೋನ್ಯಂ ಉಭೌ ಚ ಚರ್ಮಣೀ ವರಾಸಿಪಾಣೀ ಯುಗಪತ್ ಸಮೀಯತುಃ ॥ ೧೯ ॥**

**ಅರ್ಥ** :- **ತತಃ ಚ** = ಬಳಿಕವೂ, **ಕೃತಶ್ರಮೌ** = ಅಸ್ತ್ರವಿದ್ಯಾ ಪರಿಣತರಾದ ಅವರಿಬ್ಬರೂ, **ಶ್ಯೇನೌ** = ಎರಡು ಗಿಡುಗಗಳು, **ಆಕಾಶತಲೇ** = ಆಕಾಶದಲ್ಲಿ, **ಯಥಾ** = ಹೇಗೋ, **(ತಥಾ)** = ಹಾಗೆ, **ಚರ್ಮಾಸಿಧರೌ** = ಗುರಾಣಿ-ಖಡ್ಗಗಳನ್ನು ಧರಿಸಿದವರಾಗಿ, **ಪ್ರಚೇರತುಃ** = ಸಂಚರಿಸಿದರು, **ಉಭೌ** = ಇಬ್ಬರೂ, **ಚರ್ಮಣೀ ಚ** = ಗುರಾಣಿಗಳನ್ನೂ, **ನಿಕೃತ್ಯ** = ಕತ್ತರಿಸಿ, **ವರಾಸಿಪಾಣೀ** = ಉತ್ತಮವಾದ ಖಡ್ಗಗಳನ್ನು ಕೈಯಲ್ಲಿ ಹಿಡಿದವರಾಗಿ, **ಅನ್ಯೋನ್ಯಂ** = ಪರಸ್ಪರ, **ಯುಗಪತ್** = ಒಂದೇ ಬಾರಿಗೆ, **ಸಮೀಯತುಃ ಚ** = ಮುನ್ನುಗಿದರೂ ಸಹ.

**ತಾತ್ಪರ್ಯ** :- ಬಳಿಕ ಉತ್ತಮ ಅಸ್ತ್ರವಿದ್ಯಾಪರಿಣತರಾದ ಅವರಿಬ್ಬರೂ ಕತ್ತಿ ಗುರಾಣಿಗಳನ್ನು ಹಿಡಿದು ಗಗನದಲ್ಲಿ ಗಿಡುಗಗಳಂತೆ ಕಾದತೊಡಗಿದರು. ಒಬ್ಬರು ಮತೊತಿಬ್ಬರ ಗುರಾಣಿಗಳನ್ನು ಕತ್ತರಿಸಿಕೊಂಡು ಉತ್ತಮವಾದ ಖಡ್ಗಗಳನ್ನು ಕೈಯಲ್ಲಿ ಹಿಡಿದು ಒಂದೇ ಬಾರಿಗೆ ಮುಂದೆ ನುಗ್ಗಿದರು.

**ತತ್ರಾಪಹಸ್ತೇನ ಶಿರಃ ಸಕುಂಡಲಂ**
**ಜಹಾರ ವಿಂದಸ್ಯ ಮೃಧೇ ಸ ಸಾತ್ಯಕಿಃ ।**
**ನಿಹತ್ಯ ತಂ ಬಂಧುಜನೈಃ ಸುಪೂಜಿತೋ**
**ಜಗಾಮ ಶತ್ರೂನಪರಾನ್ ಪ್ರಕಂಪಯನ್ ॥ ೨೦ ॥**

ತತ್ರ ಅಪಹಸ್ತೇನ ಶಿರಃ ಸಕುಂಡಲಂ ಜಹಾರ ವಿಂದಸ್ಯ ಮೃಧೇ ಸಃ ಸಾತ್ಯಕಿಃ । ನಿಹತ್ಯ ತಂ ಬಂಧುಜನೈಃ ಸುಪೂಜಿತಃ ಜಗಾಮ ಶತ್ರೂನ್ ಅಪರಾನ್ ಪ್ರಕಂಪಯನ್ ॥ ೨೦ ॥

**ಅರ್ಥ** :- **ಸಃ ಸಾತ್ಯಕಿಃ** = ಆ ಸಾತ್ಯಕಿಯು, **ತತ್ರ ಮೃಧೇ** = ಆ ಯುದ್ಧದಲ್ಲಿ, **ಅಪಹಸ್ತೇನ** = ಮುಂಗೈಯಿಂದ, **ವಿಂದಸ್ಯ** = ವಿಂದನ, **ಸಕುಂಡಲಃ** = ಕುಂಡಲಸಹಿತವಾದ, **ಶಿರಃ** = ತಲೆಯನ್ನು, **ಜಹಾರ** = ಹಾರಿಸಿದ. **ತಂ** = ಅವನನ್ನು, **ನಿಹತ್ಯ** = ಕೊಂದು, **ಬಂಧುಜನೈಃ** = ಬಂಧುಜನರಿಂದ, **ಸುಪೂಜಿತಃ** = ಚೆನ್ನಾಗಿ ಪೂಜಿತನಾದ ಅವನು, **ಅಪರಾನ್** = ಇತರ, **ಶತ್ರೂನ್** = ಶತ್ರುಗಳನ್ನು ಕುರಿತು, **ಪ್ರಕಂಪಯನ್** = ನಡುಕಹುಟ್ಟಿಸುತ್ತಾ, **ಜಗಾಮ** = ನಡೆದ.

**ತಾತ್ಪರ್ಯ** :- ಸಾತ್ಯಕಿ ಆಗ ಕುಂಡಲಸಮೇತವಾದ ವಿಂದನ ತಲೆಯನ್ನು ಮುಂಗೈಯಿಂದಲೇ ಯುದ್ಧದಲ್ಲಿ ಹಾರಿಸಿದ. ಅವರಿಬ್ಬರನ್ನೂ ಕೊಂದು ಬಂಧುಜನರಿಂದ ಬಹಳವಾಗಿ ಪೂಜಿತನಾಗಿ ಸಾತ್ಯಕಿ ನಡುಕ ಹುಟ್ಟಿಸುತ್ತಾ ಇತರ ಶತ್ರುಗಳತ್ತ ಮುಂದೆ ಸಾಗಿದ.

### ಕೃಪನಿಗೆ ಅಂಜಿದ ಧೃಷ್ಟದ್ಯುಮ್ನ

**ಕೃಪಮಾಯಾಂತಮೀಕ್ಷ್ಯೈವ ತಪಸಾ ಮಾಂ ಪ್ರಪೀಡಯೇತ್ ।**
**ಇತಿ ಮತ್ವಾ ಪಾರ್ಷತಸ್ತು ಭೀಮಂ ಶರಣಮೇಯಿವಾನ್ ॥ ೨೧ ॥**

**ಕೃಪಂ ಆಯಾಂತಂ ಈಕ್ಷ್ಯ ಏವ ತಪಸಾ ಮಾಂ ಪ್ರಪೀಡಯೇತ್ । ಇತಿ ಮತ್ವಾ ಪಾರ್ಷತಃ ತು ಭೀಮಂ ಶರಣಂ ಏಯಿವಾನ್ ॥ ೨೧ ॥**

**ಅರ್ಥ** :- **ಪಾರ್ಷತಃ ತು** = ಧೃಷ್ಟದ್ಯುಮ್ನನಾದರೋ, **ಆಯಾಂತಂ** = ಎದುರುಬರುತ್ತಿರುವ, **ಕೃಪಂ** = ಕೃಪನನ್ನು, **ಈಕ್ಷ್ಯ ಏವ** = ನೋಡಿಯೇ, **ಮಾಂ** = ನನ್ನನ್ನು, **ತಪಸಾ** = ತಪಸ್ಸಿನಿಂದ, **ಪ್ರಪೀಡಯೇತ್** = ಬಹಳವಾಗಿ ಪೀಡಿಸಬಹುದು, **ಇತಿ** = ಎಂದು, **ಮತ್ವಾ** = ತಿಳಿದು, **ಭೀಮಂ** = ಭೀಮನನ್ನು, **ಶರಣಂ** = ಶರಣು, **ಏಯಿವಾನ್** = ಹೊಂದಿದನು.

**ತಾತ್ಪರ್ಯ** :- ಧೃಷ್ಟದ್ಯುಮ್ನ ತನ್ನನ್ನು ಎದುರಿಸಲು ಕೃಪ ಬರುತ್ತಿದ್ದುದನ್ನು ನೋಡಿಯೇ ತಪಃಶಕ್ತಿಯಿಂದ ಅವನು ತನ್ನನ್ನು ಬಹಳವಾಗಿ ಪೀಡಿಸ ಬಹುದೆಂದು ತಿಳಿದು ಭೀಮನನ್ನು ಶರಣುಹೊಕ್ಕ.

### ಅರ್ಜುನನಿಂದ ವಿರಥನಾದ ಕರ್ಣ

**ಕರ್ಣಂ ಸಮಂತಾತ್ ಪ್ರತಿಕಾಲಯಂತಂ**
**ವರೂಥಿನೀಮಿಂದ್ರಸುತಃ ಸಮಭ್ಯಯಾತ್ ।**
**ಕ್ಷಣಾತ್ ತಮಾಜೌ ವಿರಥಂ ಚ ಚಕ್ರೇ**
**ತತೋಽಪಹಾರಂ ಸ ಚಕಾರ ಚಮ್ವಾಃ ॥ ೨೨ ॥**

**ಕರ್ಣಂ ಸಮಂತಾತ್ ಪ್ರತಿಕಾಲಯಂತಂ ವರೂಥಿನೀಂ ಇಂದ್ರಸುತಃ ಸಮಭ್ಯಯಾತ್ । ಕ್ಷಣಾತ್ ತಂ ಆಜೌ ವಿರಥಂ ಚ ಚಕ್ರೇ ತತಃ ಅಪಹಾರಂ ಸಃ ಚಕಾರ ಚಮ್ವಾಃ ॥ ೨೨ ॥**

**ಅರ್ಥ** :- **ಇಂದ್ರಸುತಃ** = ಇಂದ್ರಪುತ್ರನಾದ ಅರ್ಜುನನು, **ವರೂಥಿನೀಂ** = ಸೈನ್ಯವನ್ನು, **ಸಮಂತಾತ್** = ಎಲ್ಲೆಡೆಯಿಂದಲೂ, **ಪ್ರತಿಕಾಲಯಂತಂ** = ಸದೆಬಡಿಯುತ್ತಿದ್ದ, **ಕರ್ಣಂ** = ಕರ್ಣನನ್ನು ಕುರಿತು, **ಸಮಭ್ಯಯಾತ್** = ಎದುರಿಸಿದನು. **ತಂ** = ಅವನನ್ನು, **ಆಜೌ** = ಯುದ್ಧದಲ್ಲಿ, **ಕ್ಷಣಾತ್** = ಕ್ಷಣದಲ್ಲೇ, **ವಿರಥಂ ಚ** = ರಥವನ್ನು ಕಳೆದುಕೊಂಡವನನ್ನಾಗಿಯೂ, **ಚಕ್ರೇ** = ಮಾಡಿದ. **ತತಃ** = ಬಳಿಕ, **ಸಃ** = ಅವನು, **ಚಮ್ವಾಃ** = ಸೇನೆಯ, **ಅಪಹಾರಂ** = ಹಿಂತೆಗೆತವನ್ನು, **ಚಕಾರ** = ಮಾಡಿದ.

**ತಾತ್ಪರ್ಯ** :- ಎಲ್ಲೆಡೆಗಳಿಂದಲೂ ಸೈನ್ಯವನ್ನು ಸದೆಬಡಿಯುತ್ತಿದ್ದ ಕರ್ಣನನ್ನು ಅರ್ಜುನ ಎದುರಿಸಿ ತೆರಳಿದ. ಕ್ಷಣದಲ್ಲೇ ಅವನನ್ನು ವಿರಥನನ್ನಾಗಿ ಮಾಡಿದ. ಬಳಿಕ ಕರ್ಣ ಸೇನೆಯನ್ನು ಹಿಂತೆಗೆದುಕೊಂಡ.

### ಹದಿನೇಳನೆಯ ದಿನದ ಯುದ್ಧ

**ಪರಾಜಿತಃ ಸಂಯತಿ ಸೂರ್ಯಸೂನುಃ**
**ಸುತೇನ ಶಕ್ರಸ್ಯ ಸ ಧಾರ್ತರಾಷ್ಟ್ರಮ್ ।**
**ಜಗಾದ ಬಾಹುಂ ಪ್ರತಿಗೃಹ್ಯ ಪಾರ್ಥೋ**
**ಜಿಗಾಯ ಮಾಮನ್ಯಮನಸ್ಕಮಾಜೌ ॥ ೨೩ ॥**

ಪರಾಜಿತಃ ಸಂಯತಿ ಸೂರ್ಯಸೂನುಃ ಸುತೇನ ಶಕ್ರಸ್ಯ ಸಃ ಧಾರ್ತರಾಷ್ಟ್ರಮ್ । ಜಗಾದ ಬಾಹುಂ ಪ್ರತಿಗೃಹ್ಯ ಪಾರ್ಥಃ ಜಿಗಾಯ ಮಾಂ ಅನ್ಯಮನಸ್ಕಂ ಆಜೌ ॥ ೨೩ ॥

**ಅರ್ಥ** :- **ಶಕ್ರಸ್ಯ** = ಇಂದ್ರನ, **ಸುತೇನ** = ಮಗನಿಂದ, **ಸಂಯತಿ** = ಯುದ್ಧದಲ್ಲಿ, **ಪರಾಜಿತಃ** = ಸೋತ, **ಸಃ** = ಆ, **ಸೂರ್ಯಸೂನುಃ** = ಸೂರ್ಯಪುತ್ರನು, **ಧಾರ್ತರಾಷ್ಟ್ರಂ** = ಧೃತರಾಷ್ಟ್ರನ ಮಗನಾದ ದುರ್ಯೋಧನನನ್ನು ಕುರಿತು, **ಬಾಹುಂ** = (ಅವನ) ಬಾಹುವನ್ನು, **ಪ್ರತಿಗೃಹ್ಯ** = ಹಿಡಿದುಕೊಂಡು, **ಜಗಾದ** = ಹೇಳಿದ. **ಪಾರ್ಥಃ** = ಅರ್ಜುನನು, **ಆಜೌ** = ಯುದ್ಧದಲ್ಲಿ, **ಅನ್ಯಮನಸ್ಕಂ** = ಮನಸ್ಸು ಬೇರೆಡೆ ಇದ್ದ, **ಮಾಂ** = ನನ್ನನ್ನು, **ಜಿಗಾಯ** = ಗೆದ್ದನು.

**ತಾತ್ಪರ್ಯ** :- ಅರ್ಜುನನಿಂದ ಯುದ್ಧದಲ್ಲಿ ಪರಾಭವಗೊಂಡ ಕರ್ಣ ದುರ್ಯೋಧನನ ಕೈ ಹಿಡಿದು ಹೇಳಿದ : 'ನನ್ನ ಮನಸ್ಸು ಬೇರೆಡೆಯಿದ್ದಾಗ ಅರ್ಜುನ ನನ್ನನ್ನು ಸೋಲಿಸಿದ'.

ಶಲ್ಯ ಸಾರಥ್ಯಕ್ಕೆ ಕರ್ಣನ ಬಯಕೆ

**ಕಾಮಂ ರಥೋ ಮೇ ಧನುರಪ್ಯಭೇದ್ಯಂ**
**ದತ್ತಂ ಭೃಗೂಣಾಮಧಿಪೇನ ದಿವ್ಯಮ್ ।**
**ಯಂತಾ ನ ತಾದೃಙ್ಮಮ ಯಾದೃಶೋ ಹರಿಃ**
**ಶಲ್ಯೋ ಯದಿ ಸ್ಯಾತ್ ತ್ವದರಿಂ ನಿಹನ್ಯಾಮ್ ॥ ೨೪ ॥**

**ಕಾಮಂ ರಥಃ ಮೇ ಧನುಃ ಅಪಿ ಅಭೇದ್ಯಂ ದತ್ತಂ ಭೃಗೂಣಾಂ ಅಧಿಪೇನ ದಿವ್ಯಮ್ । ಯಂತಾ ನ ತಾದೃಕ್ ಮಮ ಯಾದೃಶಃ ಹರಿಃ ಶಲ್ಯಃ ಯದಿ ಸ್ಯಾತ್ ತ್ವದರಿಂ ನಿಹನ್ಯಾಮ್॥ ೨೪ ॥**

**ಅರ್ಥ** :- **ಮೇ** = ನನ್ನ, **ರಥಃ** = ರಥವು, **ಕಾಮಂ** = ಬಯಸಿದ್ದೇ (ಬೇಕಾದ್ದೇ) (ಆಗಿರುವುದು), **ಧನುಃ ಅಪಿ** = ಬಿಲ್ಲೂ ಸಹ, **ದಿವ್ಯಂ** = ದಿವ್ಯ (ಹಾಗೂ), **ಅಭೇದ್ಯಂ** = ಅಭೇದ್ಯ, **ಭೃಗೂಣಾಂ** = ಭೃಗುವಂಶದ, **ಅಧಿಪೇನ** = ಸ್ವಾಮಿಯಾದ ಪರಶುರಾಮರಿಂದ, **ದತ್ತಂ** = ನೀಡಲ್ಪಟ್ಟದ್ದು, **(ತಥಾಪಿ)** = ಆದರೂ, **ಯಾದೃಶಃ** = ಎಂತಹ, **ಹರಿಃ** = ಹರಿಯು, **(ಪಾರ್ಥಸ್ಯ)** = ಅರ್ಜುನನ, **ಯಂತಾ** = ಸಾರಥಿಯಾಗಿರುವನೋ, **ತಾದೃಕ್** = ಅಂತಹ, **(ಯಂತಾ)** = ಸಾರಥಿಯು, **ಮಮ** = ನನಗೆ, **ನ (ಅಸ್ತಿ)** = ಇಲ್ಲ. **ಯದಿ** = ಒಂದು ವೇಳೆ, **ಶಲ್ಯಃ** = ಶಲ್ಯನು, **(ಯಂತಾ)** = ಸಾರಥಿಯು, **ಸ್ಯಾತ್** = ಆದಲ್ಲಿ, **(ತರ್ಹಿ)** = ಆಗ, **ತ್ವದರಿಂ** = ನಿನ್ನ ಶತ್ರುವನ್ನು, **ನಿಹನ್ಯಾಮ್** = ಕೊಲ್ಲುವೆ.

**ತಾತ್ಪರ್ಯ** :- ನನಗೆ ಬೇಕಾದ ರಥ, ಅಭೇದ್ಯವಾದ ದಿವ್ಯಧನುಸ್ಸುಗಳನ್ನು ಪರಶುರಾಮರು ನೀಡಿರುವರು. ಆದರೆ ಕೃಷ್ಣನಂತಹ ಸಾರಥಿ ನನಗಿಲ್ಲ. ಶಲ್ಯ ನನಗೆ ಸಾರಥಿಯಾದಲ್ಲಿ ನಿನ್ನ ಶತ್ರುವನ್ನು ಕೊಲ್ಲಬಲ್ಲೆ.

ಶಲ್ಯನ ಬಳಿಗೆ ದುರ್ಯೋಧನ

**ಇತೀರಿತೇ ಸೌತ್ಯಕೃತೇ ಸ ಶಲ್ಯಂ**
**ಪ್ರೋವಾಚ ಸ ಕ್ರುದ್ಧ ಇವಾಭವತ್ ತದಾ ।**
**ದುರ್ಯೋಧನೋ ರಥಿನಃ ಸಾರಥೇಸ್ತು**
**ವ್ಯಾವರ್ಣಯನ್ನುತ್ತಮತಾಮಶಾಮಯತ್ ॥ ೨೫ ॥**

**ಇತಿ ಈರಿತೇ ಸೌತ್ಯಕೃತೇ ಸಃ ಶಲ್ಯಂ ಪ್ರೋವಾಚ ಸಃ ಕ್ರುದ್ಧಃ ಇವ ಅಭವತ್ ತದಾ । ದುರ್ಯೋಧನಃ ರಥಿನಃ ಸಾರಥೇಃ ತು ವ್ಯಾವರ್ಣಯನ್ ಉತ್ತಮತಾಂ ಅಶಾಮಯತ್ ॥ ೨೫ ॥**

**ಅರ್ಥ** :- **ಇತಿ** = ಹೀಗೆಂದು, **ಸೌತ್ಯಕೃತೇ** = ಕರ್ಣನು, **ಈರಿತೇ** (**ಸತಿ**) = ಹೇಳಲು, **ಸಃ** = ಅವನು (ದುರ್ಯೋಧನನು), **ಶಲ್ಯಂ** = ಶಲ್ಯನನ್ನು ಕುರಿತು, **ಪ್ರೋವಾಚ** = ಹೇಳಿದ. **ತದಾ** = ಆಗ, **ಸಃ** = ಅವನು (ಶಲ್ಯನು), **ಕ್ರುದ್ಧಃ ಇವ** = ಕೋಪಗೊಂಡವನಂತೆ, **ಅಭವತ್** = ಆದನು. **ದುರ್ಯೋಧನಃ** = ದುರ್ಯೋಧನನು, **ರಥಿನಃ ತು** = ರಥಿಕನಿಗಿಂತಲೂ, **ಸಾರಥೇಃ** = ಸಾರಥಿಯ, **ಉತ್ತಮತಾಂ** = ಶ್ರೇಷ್ಠತ್ವವನ್ನು, **ವ್ಯಾವರ್ಣಯನ್** = ಪ್ರಶಂಸೆ ಮಾಡುತ್ತಾ, **ಅಶಾಮಯತ್** = ಶಾಂತಗೊಳಿಸಿದ.

**ತಾತ್ಪರ್ಯ** :- ಕರ್ಣ ಹೀಗೆನ್ನಲು ದುರ್ಯೋಧನ ಸಾರಥ್ಯ ವಹಿಸಲೆಂದು ಶಲ್ಯನನ್ನು ಕೇಳಿಕೊಂಡ. ಅವನು ಆಗ ಕೆರಳಿದವನಂತೆ ನಟಿಸಿದ. ದುರ್ಯೋಧನ ರಥಿಕನಿಗಿಂತ ಸಾರಥಿಯ ಉತ್ತಮತ್ವವನ್ನು ಬಹುವಾಗಿ ಬಣ್ಣಿಸುತ್ತಾ ಅವನನ್ನು ಸಮಾಧಾನಪಡಿಸಿದ.

ರಥಿಗಿಂತ ಸಾರಥಿ ಮಿಗಿಲು

**ಬುದ್ಧ್ಯಾ ಬಲೇನ ಜ್ಞಾನೇನ ಧೈರ್ಯಾದ್ಯೈರಪಿ ಯೋऽಧಿಕಃ ।**
**ರಥಿನಃ ಸಾರಥಿಃ ಸ ಸ್ಯಾದರ್ಜುನಸ್ಯ ಯಥಾ ಹರಿಃ ।**
**ಯಥಾ ಶಿವಸ್ಯ ಬ್ರಹ್ಮಾऽಭೂತ್ ದಹತಸ್ತ್ರಿಪುರಂ ಪುರಾ ॥ ೨೬ ॥**

**ಬುದ್ಧ್ಯಾ ಬಲೇನ ಜ್ಞಾನೇನ ಧೈರ್ಯಾದ್ಯೈಃ ಅಪಿ ಯಃ ಅಧಿಕಃ । ರಥಿನಃ ಸಾರಥಿಃ ಸಃ ಸ್ಯಾತ್ ಅರ್ಜುನಸ್ಯ ಯಥಾ ಹರಿಃ । ಯಥಾ ಶಿವಸ್ಯ ಬ್ರಹ್ಮಾ ಅಭೂತ್ ದಹತಃ ತ್ರಿಪುರಂ ಪುರಾ ॥ ೨೬ ॥**

**ಅರ್ಥ** :- **ಬುದ್ಧ್ಯಾ** = ಬುದ್ಧಿಯಿಂದ, **ಬಲೇನ** = ಬಲದಿಂದ, **ಜ್ಞಾನೇನ** = ಜ್ಞಾನದಿಂದ, **ಧೈರ್ಯಾದ್ಯೈಃ ಅಪಿ** = ಧೈರ್ಯ ಮೊದಲಾದವುಗಳಿಂದಲೂ ಸಹ, **ಯಃ** = ಯಾವನು, **ರಥಿನಃ** = ರಥಿಗಿಂತಲೂ, **ಅಧಿಕಃ** = ಮಿಗಿಲಾಗಿರುವನೋ, **ಸಃ** = ಅವನೇ, **ಸಾರಥಿಃ ಸ್ಯಾತ್** = ಸಾರಥಿಯಾಗಬೇಕು. **ಯಥಾ** = ಹೇಗೆ, **ಅರ್ಜುನಸ್ಯ** = ಅರ್ಜುನನ (ಸಾರಥಿಯು), **ಹರಿಃ** = ಕೃಷ್ಣನೋ, **ಯಥಾ** = ಹೇಗೆ, **ಪುರಾ** = ಹಿಂದೆ, **ತ್ರಿಪುರಂ** = ತ್ರಿಪುರವನ್ನು, **ದಹತಃ** = ಸುಟ್ಟುಹಾಕಿದ, **ಶಿವಸ್ಯ** = ಶಿವನ (ಸಾರಥಿಯು), **ಬ್ರಹ್ಮಾ** = ಬ್ರಹ್ಮನು, **ಅಭೂತ್** = ಆದನೋ, **(ತಥಾ)** = ಅದರಂತೆ.

**ತಾತ್ಪರ್ಯ** :- ಬುದ್ಧಿ, ಬಲ, ಜ್ಞಾನ, ಧೈರ್ಯ ಮೊದಲಾದ ಗುಣಗಳಿಂದ ಯಾವನು ರಥಿಕನಿಗಿಂತ ಮಿಗಿಲಾಗಿರುವನೋ ಅವನೇ ರಥಿಗೆ ಸಾರಥಿಯಾಗ ಬೇಕು. ಅರ್ಜುನನಿಗೆ ಕೃಷ್ಣ ಇರುವಂತೆ. ಹಿಂದೆ ತ್ರಿಪುರದಹನಕ್ಕೆ ಹೊರಟ ಶಿವನಿಗೆ ಬ್ರಹ್ಮ ಇದ್ದಂತೆ.

### ಕರ್ಣನ ಸಾರಥಿಯಾಗಿ ಶಲ್ಯ - ಕರ್ಣನ ದುರಹಂಕಾರ

**ಇತ್ಯಾದಿವಾಕ್ಯೈಃ ಸಂಶಾಂತ ಇವ ಶಲ್ಯೋಽಥ ಸಾರಥಿಃ ।**
**ಬಭೂವ ತೇನ ಸಹಿತಃ ಸೇನಾಂ ವ್ಯೂಹ್ಯ ರವೇಃ ಸುತಃ ॥ ೨೭ ॥**

**ಗಚ್ಛನ್ ಯುದ್ಧಾಯ ದರ್ಪೇಣ ಪ್ರಾಹ ಮೇ ಯೋಽರ್ಜುನಂ ಪುಮಾನ್ ।**
**ದರ್ಶಯೇತ್ ತಸ್ಯ ದಾಸ್ಯಾಮಿ ಪ್ರೀತೋ ವಿತ್ತಮನರ್ಗಲಮ್ ॥ ೨೮ ॥**

ಇತ್ಯಾದಿವಾಕ್ಯೈಃ ಸಂಶಾಂತಃ ಇವ ಶಲ್ಯಃ ಅಥ ಸಾರಥಿಃ । ಬಭೂವ ತೇನ ಸಹಿತಃ ಸೇನಾಂ ವ್ಯೂಹ್ಯ ರವೇಃ ಸುತಃ ॥ ೨೭ ॥

ಗಚ್ಛನ್ ಯುದ್ಧಾಯ ದರ್ಪೇಣ ಪ್ರಾಹ ಮೇ ಯಃ ಅರ್ಜುನಂ ಪುಮಾನ್ । ದರ್ಶಯೇತ್ ತಸ್ಯ ದಾಸ್ಯಾಮಿ ಪ್ರೀತಃ ವಿತ್ತಂ ಅನರ್ಗಲಮ್ ॥ ೨೮ ॥

**ಅರ್ಥ** :- **ಅಥ** = ಬಳಿಕ, **ಇತ್ಯಾದಿವಾಕ್ಯೈಃ** = ಇವೇ ಮೊದಲಾದ ಮಾತುಗಳಿಂದ, **ಶಲ್ಯಃ** = ಶಲ್ಯನು, **ಸಂಶಾಂತಃ ಇವ** = ಶಾಂತನಾದವನಂತೆ, **ಸಾರಥಿಃ** = ಸಾರಥಿಯು, **ಬಭೂವ** = ಆದನು. **ರವೇಃ** = ಸೂರ್ಯನ, **ಸುತಃ** = ಮಗನಾದ ಕರ್ಣನು, **ಸೇನಾಂ** =

ಸೇನೆಯನ್ನು, **ವ್ಯೂಹ್ಯ** = ಒಂದುಗೂಡಿಸಿಕೊಂಡು, **ತೇನ** = ಅವನಿಂದ (ಶಲ್ಯನಿಂದ), **ಸಹಿತಃ** = ಕೂಡಿಕೊಂಡು, **ಯುದ್ಧಾಯ** = ಯುದ್ಧಕ್ಕೆಂದು, **ಗಚ್ಛನ್ (ಸನ್)** = ಹೊರಟವನಾಗಿ, **ದರ್ಪೇಣ** = ಸೊಕ್ಕಿನಿಂದ, **ಪ್ರಾಹ** = ಹೇಳಿದ, **ಯಃ** = ಯಾವ, **ಪುಮಾನ್** = ಪುರುಷನು, **ಮೇ** = ನನಗೆ, **ಅರ್ಜುನಂ** = ಅರ್ಜುನನನ್ನು, **ದರ್ಶಯೇತ್** = ತೋರಿಸುವನೋ, **ತಸ್ಯ** = ಅವನಿಗೆ, **ಪ್ರೀತಃ** = ಪ್ರೀತನಾಗಿ, **ಅನರ್ಗಲಂ** = ಅಪರಿಮಿತವಾದ, **ವಿತ್ತಂ** = ಸಂಪತ್ತನ್ನು, **ದಾಸ್ಯಾಮಿ** = ನೀಡುವೆನು.

**ತಾತ್ಪರ್ಯ** :- ಇವೇ ಮೊದಲಾದ ವಾಕ್ಯಗಳಿಂದ ಶಲ್ಯ ಸಮಾಧಾನ ಗೊಂಡಂತೆ ನಟಿಸಿ ಕರ್ಣನಿಗೆ ಸಾರಥಿಯಾದನು. ಅವನೊಂದಿಗೆ ಕರ್ಣ ಸೇನೆಯನ್ನು ವ್ಯೂಹವಾಗಿ ನಿಲ್ಲಿಸಿದ.

ಕರ್ಣ ಯುದ್ಧಕ್ಕೆ ತೆರಳುತ್ತಾ ಸೊಕ್ಕಿನಿಂದ ನುಡಿದ : ''ಯಾವ ಪುರುಷ ನನಗೆ ಅರ್ಜುನನನ್ನು ತೋರಿಸುವನೋ ಅವನಿಗೆ ಪ್ರೀತನಾಗಿ ಅಪರಿಮಿತ ಸಂಪತ್ತನ್ನು ನೀಡುವೆ''.

### ಶಲ್ಯನಿಂದ ಕರ್ಣನ ತೇಜೋವಧೆ

**ಇತ್ಯುಕ್ತವಂತಂ ಬಹುಶಃ ಪ್ರಾಹ ಶಲ್ಯಃ ಪ್ರಹಸ್ಯ ಚ ।**
**ನಿವಾತಕವಚಾ ಯೇನ ಹತಾ ದಗ್ಧಂ ಚ ಖಾಂಡವಮ್ ।**
**ಕೋ ನಾಮ ತಂ ಜಯೇನ್ಮರ್ತ್ಯೋ ದೃಷ್ಟೋ ವೋಽಪಿ ಸ ಗೋಗ್ರಹೇ ॥ ೨೯ ॥**

**ಇತಿ ಉಕ್ತವಂತಂ ಬಹುಶಃ ಪ್ರಾಹ ಶಲ್ಯಃ ಪ್ರಹಸ್ಯ ಚ । ನಿವಾತಕವಚಾಃ ಯೇನ ಹತಾಃ ದಗ್ಧಂ ಚ ಖಾಂಡವಮ್ । ಕಃ ನಾಮ ತಂ ಜಯೇತ್ ಮರ್ತ್ಯಃ ದೃಷ್ಟಃ ವಃ ಅಪಿ ಸಃ ಗೋಗ್ರಹೇ ॥ ೨೯ ॥**

**ಅರ್ಥ** :- **ಬಹುಶಃ** = ಬಹುಬಾರಿ, **ಇತಿ** = ಹೀಗೆಂದು, **ಉಕ್ತವಂತಂ** = ಹೇಳಿದ ಕರ್ಣನನ್ನು ಕುರಿತು, **ಶಲ್ಯಃ** = ಶಲ್ಯನು, **ಪ್ರಹಸ್ಯ** = ಪರಿಹಾಸ ಮಾಡಿ, **ಪ್ರಾಹ** = ನುಡಿದ, **ಯೇನ** = ಯಾವ ಅರ್ಜುನನಿಂದ, **ನಿವಾತಕವಚಾಃ** = ನಿವಾತಕವಚರು, **ಹತಾಃ** = ಹತರಾಗಿರುವರೋ, **ಖಾಂಡವಂ ಚ** = ಖಾಂಡವವೂ ಸಹ, **ದಗ್ಧಂ** = ಸುಟ್ಟುಹೋಯಿತೋ, **ಕಃ ನಾಮ ಮರ್ತ್ಯಃ** = ಯಾವನು ಮನುಷ್ಯನು

ತಾನೆ, **ತಂ** = ಅವನನ್ನು, **ಜಯೇತ್** = ಜಯಿಸಿಯಾನು?, **ಸಃ** = ಆ ಅರ್ಜುನನು, **ಗೋಗ್ರಹೇ ಅಪಿ** = (ಉತ್ತರ)ಗೋಗ್ರಹಣದಲ್ಲೂ, **ವಃ** = ನಿಮಗೆ, **ದೃಷ್ಟಃ** = ಕಂಡಿರುವನು.

**ತಾತ್ಪರ್ಯ** :- ಕರ್ಣ ಹಾಗೆಂದಾಗ ಶಲ್ಯ ಪರಿಹಾಸ ಮಾಡಿ ನುಡಿದ 'ಅರ್ಜುನನಿಂದ ನಿವಾತಕವಚರು ಹತರಾಗಿರುವರು, ಖಾಂಡವ ಬೂದಿ ಯಾಯಿತು. ಅಂಥವನನ್ನು ಯಾವ ಮಾನವ ತಾನೇ ಜಯಿಸಿಯಾನು. ಉತ್ತರ ಗೋಗ್ರಹಣದಲ್ಲೂ ನೀವು ಅವನನ್ನು ಕಂಡಿರುವಿರಿ.

**ಕಾಕಗೋಮಾಯುಧರ್ಮಾ ತ್ವಂ ಹಂಸಸಿಂಹೋಪಮಂ ರಣೇ ।**
**ಮಾ ಯಾಹಿ ಪಾರ್ಥಂ ಮಾ ಯಾಹಿ ಹತೋಽನೇನ ಯಮಕ್ಷಯಮ್ ।**
**ಇತ್ಯುಕ್ತೋ ರವಿಜೋ ಮದ್ರಾನ್ ನಿತರಾಂ ಪರ್ಯಕುತ್ಸಯತ್ ॥ ೩೦ ॥**

**ಕಾಕಗೋಮಾಯುಧರ್ಮಾ ತ್ವಂ ಹಂಸಸಿಂಹೋಪಮಂ ರಣೇ । ಮಾ ಯಾಹಿ ಪಾರ್ಥಂ ಮಾ ಯಾಹಿ ಹತಃ ಅನೇನ ಯಮಕ್ಷಯಮ್ । ಇತಿ ಉಕ್ತಃ ರವಿಜಃ ಮದ್ರಾನ್ ನಿತರಾಂ ಪರ್ಯಕುತ್ಸಯತ್ ॥ ೩೦ ॥**

**ಅರ್ಥ** :- **ಕಾಕಗೋಮಾಯುಧರ್ಮಾ** = ಕಾಗೆ–ನರಿಗಳ ಪ್ರವೃತ್ತಿಯ, **ತ್ವಂ** = ನೀನು, **ಹಂಸಸಿಂಹೋಪಮಂ** = ಹಂಸ–ಸಿಂಹಗಳಿಗೆ ಸದೃಶನಾದ, **ಪಾರ್ಥಂ** = ಅರ್ಜುನನನ್ನು ಕುರಿತು, **ರಣೇ** = ಯುದ್ಧದಲ್ಲಿ, **ಮಾ ಯಾಹಿ** = ತೆರಳದಿರು, **ಅನೇನ** = ಅವನಿಂದ, **ಹತಃ (ಸನ್)** = ಕೊಲ್ಲಲ್ಪಟ್ಟವನಾಗಿ, **ಯಮಕ್ಷಯಂ** = ಯಮನ ಮನೆಯನ್ನು, **ಮಾ ಯಾಹಿ** = ಸೇರದಿರು, **ಇತಿ** = ಹೀಗೆಂದು, **ಉಕ್ತಃ** = ಹೇಳಲ್ಪಟ್ಟ, **ರವಿಜಃ** = ಸೂರ್ಯಪುತ್ರನಾದ ಕರ್ಣನು, **ಮದ್ರಾನ್** = ಮದ್ರದೇಶದವರನ್ನು, **ನಿತರಾಂ** = ಬಹಳವಾಗಿ, **ಪರ್ಯಕುತ್ಸಯತ್** = ಹೀಯಾಳಿಸಿದ.

**ತಾತ್ಪರ್ಯ** :- ಕಾಗೆ ನರಿಗಳಂತಹ ನೀನು ಹಂಸ ಸಿಂಹಗಳಂತಹ ಅರ್ಜುನನನ್ನು ಯುದ್ಧದಲ್ಲಿ ಎದುರಿಸದಿರು ; ಅವನಿಂದ ಹತನಾಗಿ ಯಮಲೋಕಕ್ಕೆ ತೆರಳದಿರು ; ಶಲ್ಯ ಹೀಗೆನ್ನಲು ಕರ್ಣ ಮದ್ರದೇಶದ ಜನರನ್ನು ಬಹಳವಾಗಿ ಹೀಗಳೆಯತೊಡಗಿದ.

**ಶಲ್ಯೋಽಪಿ ಸರ್ವದೇಶೇಷು ನೀಚಮಧ್ಯೋತ್ತಮಾ ನರಾಃ ।**
**ಸಂತೀತ್ಯುಕ್ತ್ವಾಽಸ್ಯ ಸಾರಥ್ಯಂ ಚಕ್ರೇ ಪಾರ್ಥಹಿತೇಪ್ಸಯಾ ॥ ೩೧ ॥**

ಶಲ್ಯಃ ಅಪಿ ಸರ್ವದೇಶೇಷು ನೀಚಮಧ್ಯೋತ್ತಮಾಃ ನರಾಃ । ಸಂತಿ ಇತಿ ಉಕ್ತ್ವಾ ಅಸ್ಯ ಸಾರಥ್ಯಂ ಚಕ್ರೇ ಪಾರ್ಥಹಿತೇಪ್ಸಯಾ ॥ ೩೧ ॥

**ಅರ್ಥ** :- **ಶಲ್ಯಃ ಅಪಿ** = ಶಲ್ಯನೂ ಸಹ, **ಸರ್ವದೇಶೇಷು** = ಎಲ್ಲ ದೇಶಗಳಲ್ಲೂ, **ನೀಚಮಧ್ಯೋತ್ತಮಾಃ** = ನೀಚ-ಮಧ್ಯ-ಉತ್ತಮರಾದ, **ನರಾಃ** = ಜನರು, **ಸಂತಿ** = ಇರುವರು, **ಇತಿ** = ಎಂದು, **ಉಕ್ತ್ವಾ** = ಹೇಳಿ, **ಪಾರ್ಥಹಿತೇಪ್ಸಯಾ** = ಅರ್ಜುನನಿಗೆ ಹಿತವನ್ನುಂಟುಮಾಡುವ ಬಯಕೆಯಿಂದ, **ಅಸ್ಯ** = ಅವನ **ಸಾರಥ್ಯಂ** = ಸಾರಥ್ಯವನ್ನು, **ಚಕ್ರೇ** = ಮಾಡಿದನು.

**ತಾತ್ಪರ್ಯ** :- ಶಲ್ಯನು ಆಗ ಎಲ್ಲ ದೇಶಗಳಲ್ಲೂ ನೀಚ, ಮಧ್ಯಮ, ಮತ್ತು ಉತ್ತಮರಾದ ಜನರು ಇದ್ದೇ ಇರುವರು ಎಂದು ನುಡಿದು ಅರ್ಜುನನ ಹಿತವನ್ನು ಬಯಸಿ ಅವನ ಸಾರಥ್ಯವನ್ನು ಮಾಡತೊಡಗಿದನು.

### ದುರ್ಯೋಧನಾದಿಗಳ ರಕ್ಷಣೆಯಲ್ಲಿ ಕರ್ಣ

**ಕರ್ಣೋಽಥ ಶಲ್ಯನಿಯತೇನ ರಥೇನ ಪಾರ್ಥ-**
**ಸೇನಾಮವಾಪ್ಯ ವಿದುಧಾವ ಶರೈಃ ಸಮಂತಾತ್ ।**
**ಸಂರಕ್ಷಿತೋ ಯುಧಿ ಸುಯೋಧನಗೌತಮಾದ್ಯೈ-**
**ರಾಚಾರ್ಯಜೇನ ಚ ಮಹಾಸ್ತ್ರವಿದಾಂವರೇಣ ॥ ೩೨ ॥**

ಕರ್ಣಃ ಅಥ ಶಲ್ಯನಿಯತೇನ ರಥೇನ ಪಾರ್ಥಸೇನಾಂ ಅವಾಪ್ಯ ವಿದುಧಾವ ಶರೈಃ ಸಮಂತಾತ್ । ಸಂರಕ್ಷಿತಃ ಯುಧಿ ಸುಯೋಧನಗೌತಮಾದ್ಯೈಃ ಆಚಾರ್ಯಜೇನ ಚ ಮಹಾಸ್ತ್ರವಿದಾಂವರೇಣ ॥ ೩೨ ॥

**ಅರ್ಥ** :- **ಅಥ** = ಅನಂತರ, **ಯುಧಿ** = ಯುದ್ಧದಲ್ಲಿ, **ಸುಯೋಧನಗೌತಮಾದ್ಯೈಃ** = ದುರ್ಯೋಧನ-ಕೃಪ ಮೊದಲಾದವರಿಂದ, **ಮಹಾಸ್ತ್ರವಿದಾಂವರೇಣ** = ಮಹಾಸ್ತ್ರಗಳನ್ನು ಬಲ್ಲವರಲ್ಲಿ ಶ್ರೇಷ್ಠರಾದ, **ಆಚಾರ್ಯಜೇನ ಚ** = ಆಚಾರ್ಯಪುತ್ರರಾದ ಅಶ್ವತ್ಥಾಮರಿಂದಲೂ ಸಹ,

**ಸಂರಕ್ಷಿತಃ** = ಚೆನ್ನಾಗಿ ರಕ್ಷಿಸಲ್ಪಟ್ಟವನಾಗಿ, **ಕರ್ಣಃ** = ಕರ್ಣನು, **ಶಲ್ಯನಿಯತೇನ** = ಶಲ್ಯನಿಂದ ಪ್ರೇರಿತವಾದ, **ರಥೇನ** = ರಥದಿಂದ, **ಪಾರ್ಥಸೇನಾಂ** = ಪಾಂಡವಸೇನೆಯನ್ನು, **ಅವಾಪ್ಯ** = ತಲುಪಿ, **ಸಮಂತಾತ್** = ಎಲ್ಲೆಡೆಗಳಿಂದಲೂ, **ಶರೈಃ** = ಬಾಣಗಳಿಂದ, **ವಿದುಧಾವ** = ಸದೆಬಡಿದ.

**ತಾತ್ಪರ್ಯ** :- ಬಳಿಕ ಕರ್ಣ ಶಲ್ಯ ಓಡಿಸುತ್ತಿದ್ದ ರಥದಲ್ಲಿ ಕುಳಿತು ಪಾಂಡವ ಸೇನೆಯನ್ನು ತಲುಪಿ ಅದನ್ನು ಎಲ್ಲೆಡೆಗಳಿಂದಲೂ ಬಾಣಗಳಿಂದ ಸದೆಬಡಿಯತೊಡಗಿದ. ಅವನನ್ನು ಯುದ್ಧದಲ್ಲಿ ದುರ್ಯೋಧನ, ಕೃಪ ಮೊದಲಾದವರು ಮಹಾಸ್ತ್ರ ಬಲ್ಲವರಲ್ಲಿ ಶ್ರೇಷ್ಠನಾದ ಅಶ್ವತ್ಥಾಮರು ರಕ್ಷಿಸುತ್ತಿದ್ದರು.

### ಕರ್ಣ ಯುಧಿಷ್ಠಿರರ ಯುದ್ಧ

**ತಂ ಭೀಮಪಾರ್ಷತಶಿನಿಪ್ರವರಾಭಿಗುಪ್ತಾ**
**ಸಾ ಪಾಂಡವೇಯಪೃತನಾಽಭಿವವರ್ಷ ಬಾಣೈಃ ।**
**ತಾಂ ಸೂರ್ಯಸೂನುರಥ ಬಾಣವರೈರ್ವಿದಾರ್ಯ**
**ಸಂಪ್ರಾರ್ದಯಚ್ಛಿತಶರೈರಪಿ ಧರ್ಮಸೂನುಮ್ ॥ ೩೩ ॥**

**ತಂ ಭೀಮಪಾರ್ಷತಶಿನಿಪ್ರವರಾಭಿಗುಪ್ತಾ ಸಾ ಪಾಂಡವೇಯಪೃತನಾ ಅಭಿವವರ್ಷ ಬಾಣೈಃ । ತಾಂ ಸೂರ್ಯಸೂನುಃ ಅಥ ಬಾಣವರೈಃ ವಿದಾರ್ಯ ಸಂಪ್ರಾರ್ದಯತ್ ಶಿತಶರೈಃ ಅಪಿ ಧರ್ಮಸೂನುಮ್ ॥ ೩೩ ॥**

**ಅರ್ಥ** :- **ಭೀಮಪಾರ್ಷತಶಿನಿಪ್ರವರಾಭಿಗುಪ್ತಾ** = ಭೀಮ-ಧೃಷ್ಟದ್ಯುಮ್ನ-ಸಾತ್ಯಕಿ ಮೊದಲಾದವರಿಂದ ಚೆನ್ನಾಗಿ ಪಾಲಿತವಾದ, **ಸಾ** = **ಪಾಂಡವೇಯಪೃತನಾ** = ಆ ಪಾಂಡವಸೇನೆಯು, **ತಂ** = ಅವನನ್ನು, **ಬಾಣೈಃ** = ಬಾಣಗಳಿಂದ, **ಅಭಿವವರ್ಷ** = ಚೆನ್ನಾಗಿ ಮಳೆಗರೆಯಿತು. **ಅಥ** = ಅನಂತರ, **ಸೂರ್ಯಸೂನುಃ** = ಸೂರ್ಯನ ಮಗನಾದ ಕರ್ಣನು, **ತಾಂ** = ಆ ಸೇನೆಯುನ್ನು, **ಬಾಣವರೈಃ** = ಉತ್ತಮಬಾಣಗಳಿಂದ, **ವಿದಾರ್ಯ** = ಭೇದಿಸಿ, **ಶಿತಶರೈಃ** = ಹರಿತವಾದ ಬಾಣಗಳಿಂದ, **ಧರ್ಮಸೂನುಂ ಅಪಿ** = ಧರ್ಮನ ಮಗನಾದ ಯುಧಿಷ್ಠಿರನನ್ನೂ ಸಹ, **ಸಂಪ್ರಾರ್ದಯತ್** = ಬಹಳವಾಗಿ ಪೀಡಿಸಿದನು.

**ತಾತ್ಪರ್ಯ** :- ಕರ್ಣನನ್ನು ಭೀಮ, ಧೃಷ್ಟದ್ಯುಮ್ನ, ಸಾತ್ಯಕಿಗಳಿಂದ ಚೆನ್ನಾಗಿ ಪಾಲಿತವಾಗಿದ್ದ ಪಾಂಡವಸೇನೆ ಬಾಣಗಳ ಮಳೆಗರೆದು ಎದುರಿಸಿತು. ಆ ಸೇನೆಯನ್ನು ಕರ್ಣ ಉತ್ತಮ ಬಾಣಗಳಿಂದ ಸದೆಬಡಿಯುತ್ತಾ ಧರ್ಮರಾಜನನ್ನು ಹರಿತವಾದ ಬಾಣಗಳಿಂದ ಬಹಳವಾಗಿ ಪೀಡಿಸಿದ.

**ಕರ್ಣನಿಂದ ಯುಧಿಷ್ಠಿರನ ಪರಾಭವ**

**ಕೃತ್ವಾ ತಮಾಶು ವಿರಥಂ ಧನುರಸ್ಯ ಕಂಠೇ**
**ಸಜ್ಯಂ ನಿಧಾಯ ಪರುಷಾ ಗಿರ ಆಹ ಚೋಚ್ಚೈಃ ।**
**ದೃಷ್ಟ್ವೈವ ಮಾರುತಿರಮುಂ ಭೃಶಮಾತುತೋದ**
**ದುರ್ಯೋಧನಂ ವಿರಥಕಾರ್ಮುಕಮಾಶು ಕೃತ್ವಾ ॥ ೩೪ ॥**

**ಕೃತ್ವಾ ತಂ ಆಶು ವಿರಥಂ ಧನುಃ ಅಸ್ಯ ಕಂಠೇ ಸಜ್ಯಂ ನಿಧಾಯ ಪರುಷಾಃ ಗಿರಃ ಆಹ ಚ ಉಚ್ಚೈಃ । ದೃಷ್ಟ್ವಾ ಏವ ಮಾರುತಿಃ ಅಮುಂ ಭೃಶಂ ಆತುತೋದ ದುರ್ಯೋಧನಂ ವಿರಥಕಾರ್ಮುಕಂ ಆಶು ಕೃತ್ವಾ ॥ ೩೪ ॥**

**ಅರ್ಥ** :- **ತಂ** = ಆ ಧರ್ಮರಾಜನನ್ನು, **ಆಶು** = ಬೇಗನೆ, **ವಿರಥಂ** = ರಥವಿಲ್ಲದವನನ್ನಾಗಿ, **ಕೃತ್ವಾ** = ಮಾಡಿ, **ಅಸ್ಯ** = ಅವನ, **ಕಂಠೇ** = ಕಂಠದಲ್ಲಿ, **ಸಜ್ಯಂ** = ಹಗ್ಗದಿಂದ ಕೂಡಿದ, **ಧನುಃ** = ಬಿಲ್ಲನ್ನು, **ನಿಧಾಯ** = ಸಿಕ್ಕಿಸಿ, **ಪರುಷಾಃ** = ನಿಷ್ಠುರವಾದ, **ಗಿರಃ ಚ** = ಮಾತುಗಳನ್ನು ಸಹ, **ಉಚ್ಚೈಃ** = ಗಟ್ಟಿಯಾಗಿ, **ಆಹ** = ನುಡಿದ, **ಮಾರುತಿಃ** = ವಾಯುಪುತ್ರನಾದ ಭೀಮಸೇನನು, **ಅಮುಂ** = ಅವನನ್ನು (ಧರ್ಮರಾಜನನ್ನು), **ದೃಷ್ಟ್ವಾ ಏವ** = ನೋಡುತ್ತಲೇ, **ದುರ್ಯೋಧನಂ** = ದುರ್ಯೋಧನನನ್ನು, **ಆಶು** = ಬೇಗನೆ, **ವಿರಥಕಾರ್ಮುಕಂ** = ರಥ ಹಾಗೂ ಬಿಲ್ಲು ರಹಿತನನ್ನಾಗಿ, **ಕೃತ್ವಾ** = ಮಾಡಿ, **ಭೃಶಂ** = ಬಹಳವಾಗಿ, **ಆತುತೋದ** = ಪೀಡಿಸತೊಡಗಿದ.

**ತಾತ್ಪರ್ಯ** :- ಕೂಡಲೇ ಧರ್ಮರಾಜನನ್ನು ವಿರಥನನ್ನಾಗಿ ಮಾಡಿ ಅವನ ಕತ್ತಿನಲ್ಲಿ ಹೆದೆಯೇರಿಸಿದ್ದ ಧನುವನ್ನು ಸಿಕ್ಕಿಸಿ ಕ್ರೂರವಾದ ಮಾತುಗಳನ್ನು ಗಟ್ಟಿಯಾಗಿ ನುಡಿದ. ಅದನ್ನು ನೋಡುತ್ತಲೇ ಭೀಮಸೇನ ದುರ್ಯೋಧನನನ್ನು ಬೇಗನೇ ವಿರಥನನ್ನಾಗಿಯೂ, ಧನುಸ್ಸಿನಿಂದ ರಹಿತನನ್ನಾಗಿಯೂ ಮಾಡಿ ಬಹಳವಾಗಿ ಪೀಡಿಸತೊಡಗಿದ.

ಭೀಮನಿಂದ ದುರ್ಯೋಧನನ ಆಕ್ರಮಣ

ತಂ ಪ್ರಾಣಸಂಶಯಗತಂ ನೃಪತಿಂ ನಿರೀಕ್ಷ್ಯ
ಕರ್ಣಂ ಜಗಾದ ಯುಧಿ ಮದ್ರಪತಿಃ ಪ್ರದರ್ಶ್ಯ ।
ಯಸ್ಯಾರ್ಥಮೇಷ ಸಮರಸ್ತ್ವಮಿಯಂ ಚ ಸೇನಾ
ತಂ ತ್ವಂ ಯಮಸ್ಯ ಸದನಂ ಪ್ರಯಿಯಾಸುಮದ್ಯ ॥ ೩೫ ॥

ಭೀಮೇನ ಪೀಡಿತಮಮುಂ ಪರಿಪಾಹಿ ಶೀಘ್ರಂ
ಕಿಂ ತೇ ಯುಧಿಷ್ಠಿರಮಿಮಂ ಹಿ ಮುಧಾ ನಿಪೀಡ್ಯ ।
ಶ್ರುತ್ವಾಽಸ್ಯ ವಾಕ್ಯಮತಿಹಾಯ ಯುಧಿಷ್ಠಿರಂ ತಂ
ಕರ್ಣೋ ಯಯೌ ನೃಪತಿರಕ್ಷಣತತ್ಪರೋಽಲಮ್ ॥ ೩೬ ॥

ತಂ ಪ್ರಾಣಸಂಶಯಗತಂ ನೃಪತಿಂ ನಿರೀಕ್ಷ್ಯ ಕರ್ಣಂ ಜಗಾದ ಯುಧಿ ಮದ್ರಪತಿಃ ಪ್ರದರ್ಶ್ಯ । ಯಸ್ಯ ಅರ್ಥಂ ಏಷಃ ಸಮರಃ ತ್ವಂ ಇಯಂ ಚ ಸೇನಾ ತಂ ತ್ವಂ ಯಮಸ್ಯ ಸದನಂ ಪ್ರಯಿಯಾಸುಂ ಅದ್ಯ ॥ ೩೫ ॥

ಭೀಮೇನ ಪೀಡಿತಂ ಅಮುಂ ಪರಿಪಾಹಿ ಶೀಘ್ರಂ ಕಿಂ ತೇ ಯುಧಿಷ್ಠಿರಂ ಇಮಂ ಹಿ ಮುಧಾ ನಿಪೀಡ್ಯ । ಶ್ರುತ್ವಾ ಅಸ್ಯ ವಾಕ್ಯಂ ಅತಿಹಾಯ ಯುಧಿಷ್ಠಿರಂ ತಂ ಕರ್ಣಃ ಯಯೌ ನೃಪತಿರಕ್ಷಣತತ್ಪರಃ ಅಲಮ್ ॥ ೩೬ ॥

**ಅರ್ಥ** :- **ಪ್ರಾಣಸಂಶಯಗತಂ** = ಪ್ರಾಣದ ವಿಷಯದಲ್ಲಿ ಸಂಶಯಪ್ರಾಪ್ತನಾದ, **ತಂ** ಆ **ನೃಪತಿಂ** = ರಾಜನನ್ನು, **ಯುಧಿ** = ಯುದ್ಧದಲ್ಲಿ, **ನಿರೀಕ್ಷ್ಯ** = ನೋಡಿ, **ಮದ್ರಪತಿಃ** = ಮದ್ರರಾಜನಾದ ಶಲ್ಯನು, **ಪ್ರದರ್ಶ್ಯ** = (ದುರ್ಯೋಧನನನ್ನು) ತೋರಿಸಿ, **ಕರ್ಣಂ** = ಕರ್ಣನನ್ನು ಕುರಿತು, **ಜಗಾದ** = ಹೇಳಿದ, **ಯಸ್ಯ ಅರ್ಥಂ** = ಯಾರಿಗೋಸ್ಕರವಾಗಿ, **ಏಷಃ ಸಮರಃ** = ಈ ಯುದ್ಧ, **ತ್ವಂ** = ನೀನು, **ಇಯಂ ಚ ಸೇನಾ** = ಈ ಸೇನೆಯೂ ಸಹ (ಇರುವುದೋ), **ಅದ್ಯ** = ಈಗ, **ಯಮಸ್ಯ** = ಯಮನ, **ಸದನಂ** = ಮನೆಯನ್ನು ಕುರಿತು, **ಪ್ರತಿಯಿಯಾಸುಂ** = ತೆರಳಲಿರುವ, **ಭೀಮೇನ** = ಭೀಮನಿಂದ, **ಪೀಡಿತಂ** = ಪೀಡಿತನಾದ, **ತಂ ಅಮುಂ** = ಆ ದುರ್ಯೋಧನನನ್ನು, **ತ್ವಂ** = ನೀನು, **ಶೀಘ್ರಂ** = ಬೇಗನೆ, **ಪರಿಪಾಹಿ** = ಕಾಪಾಡು. **ಇಮಂ** = ಈ **ಯುಧಿಷ್ಠಿರಂ ಹಿ** = ಯುಧಿಷ್ಠಿರನನ್ನೇ, **ಮುಧಾ** = ವ್ಯರ್ಥವಾಗಿ, **ನಿಪೀಡ್ಯ**

= ಪೀಡಿಸಿ, **ತೇ** = ನಿನಗೆ, **ಕಿಂ** = ಏನು (ಏನು ಫಲ)?, **ಅಸ್ಯ** = ಅವನ (ಶಲ್ಯನ), **ವಾಕ್ಯಂ** = ಮಾತನ್ನು, **ಶ್ರುತ್ವಾ** = ಕೇಳಿ, **ಕರ್ಣಃ** = ಕರ್ಣನು, **ತಂ** = ಯುಧಿಷ್ಠಿರನನ್ನು, **ಅತಿಹಾಯ** = ತೊರೆದು, **ಅಲಂ** = ಚೆನ್ನಾಗಿ, **ನೃಪತಿರಕ್ಷಣತತ್ಪರಃ** = ರಾಜನಾದ ದುರ್ಯೋಧನನ ರಕ್ಷಣೆ ಮಾಡುವವನಾಗಿ, **ಯಯೌ** = (ಭೀಮನನ್ನು ಕುರಿತು) ಹೊರಟನು.

**ತಾತ್ಪರ್ಯ** :- ದುರ್ಯೋಧನ ಪ್ರಾಣಾಪಾಯಕ್ಕೆ ಗುರಿಯಾದದ್ದನ್ನು ನೋಡಿ ಶಲ್ಯ ಕರ್ಣನಿಗೆ ಅವನನ್ನು ತೋರಿಸಿ ಹೇಳಿದ - 'ಯಾರಿಗಾಗಿ ಈ ಯುದ್ಧ, ನೀನು, ಈ ಸೇನೆ ಎಲ್ಲವೂ ಇವೆಯೋ ಅವನೀಗ ಯಮಲೋಕಕ್ಕೆ ತೆರಳಲು ಸಿದ್ಧನಾಗಿರುವನು. ಭೀಮನಿಂದ ಪೀಡಿತನಾಗಿರುವ ಅವನನ್ನು ಕೂಡಲೇ ಸಂರಕ್ಷಿಸು. ಧರ್ಮರಾಜನನ್ನು ಹೀಗೆ ವ್ಯರ್ಥ ಪೀಡಿಸುವುದರಿಂದೇನು?'. ಅವನ ಮಾತನ್ನು ಕೇಳಿ ಕರ್ಣ ಧರ್ಮರಾಜನನ್ನು ಬಿಟ್ಟು ದುರ್ಯೋಧನನನ್ನು ರಕ್ಷಿಸಲೆಂದು ಧಾವಿಸಿದ.

### ಕರ್ಣನ ಮೇಲೆ ಕೆರಳಿದ ಭೀಮ

**ದೃಷ್ಟ್ವೈವ ತಂ ಪವನಸೂನುರಭಿ ತ್ವಿಯಾಯ**
**ಕ್ರೋಧಾದ್ದಿಧಕ್ಷುರಿವ ಕರ್ಣಮಮೇಯಧಾಮಾ ।**
**ರಾಜಾವನಾಯ ಶಿನಿಪುಂಗವಪಾರ್ಷತೌ ಚ**
**ಸಂದಿಶ್ಯ ಕರ್ಣಮಭಿಗಚ್ಛತ ಆಸ ರೂಪಮ್ ॥ ೩೭ ॥**

**ಅಂತೇ ಕೃತಾಂತನರಸಿಂಹತನೋರ್ಯಥೈವ**
**ವಿಷ್ಣೋರ್ಹರಂ ಗ್ರಸತ ಆತ್ತಸಮಸ್ತವಿಶ್ವಮ್ ।**
**ತದ್ವೇಗತಃ ಪ್ರತಿಚಚಾಲ ಧರಾ ಸಮಸ್ತಾ**
**ವಿದ್ರಾವಿತಾ ಚ ಸಕಲಾ ಪ್ರತಿವೀರಸೇನಾ ॥ ೩೮ ॥**

ದೃಷ್ಟ್ವಾ ಏವ ತಂ ಪವನಸೂನುಃ ಅಭಿ ತು ಇಯಾಯ ಕ್ರೋಧಾತ್ ದಿಧಕ್ಷುಃ ಇವ ಕರ್ಣಂ ಅಮೇಯಧಾಮಾ । ರಾಜಾವನಾಯ ಶಿನಿಪುಂಗವಪಾರ್ಷತೌ ಚ ಸಂದಿಶ್ಯ ಕರ್ಣಂ ಅಭಿಗಚ್ಛತಃ ಆಸ ರೂಪಮ್ ॥ ೩೭ ॥

ಅಂತೇ ಕೃತಾಂತನರಸಿಂಹತನೋಃ ಯಥೈವ ವಿಷ್ಣೋಃ ಹರಂ ಗ್ರಸತಃ ಆತ್ತಸಮಸ್ತವಿಶ್ವಮ್ । ತದ್ವೇಗತಃ ಪ್ರತಿಚಚಾಲ ಧರಾ ಸಮಸ್ತಾ ವಿದ್ರಾವಿತಾ ಚ ಸಕಲಾ ಪ್ರತಿವೀರಸೇನಾ ॥ ೩೮ ॥

**ಅರ್ಥ** :- **ತಂ** = ಅವನನ್ನು (ಕರ್ಣನನ್ನು), **ದೃಷ್ಟ್ವಾ ಏವ** = ನೋಡುತ್ತಲೇ, **ಪವನಸೂನುಃ** = ವಾಯುಪುತ್ರನಾದ ಭೀಮನು, **ಕ್ರೋಧಾತ್** = ಕೋಪದಿಂದ, **ದಿಧಕ್ಷುಃ ಇವ** = ಸುಟ್ಟುಬಿಡುವವನಂತೆ, **ಕರ್ಣಂ** = ಕರ್ಣನನ್ನು ಕುರಿತು, **ಅಭಿ ತು ಇಯಾಯ** = ಎದುರಿಸಿಬಂದ. **ಅಮೇಯ ಧಾಮಾ (ಸಃ)** = ಅಪರಿಮಿತತೇಜಸ್ಸಿನ ಅವನು, **ರಾಜಾವನಾಯ** = ರಾಜನಾದ ಧರ್ಮರಾಜನ ರಕ್ಷಣೆಗೆಂದು, **ಶಿನಿಪುಂಗವಪಾರ್ಷತೌ ಚ** = ಸಾತ್ಯಕಿ–ಧೃಷ್ಟದ್ಯುಮ್ನರನ್ನು ಸಹ, **ಸಂದಿಶ್ಯ** = ಕಳುಹಿಸಿ, **ಅಂತೇ** = ಪ್ರಳಯಕಾಲದಲ್ಲಿ, **ಆತ್ತಸಮಸ್ತವಿಶ್ವಂ** = ಇಡೀ ಜಗತ್ತನ್ನೇ ನುಂಗಿದ, **ಹರಂ** = ಶಿವನನ್ನು, **ಗ್ರಸತಃ** = ನುಂಗುವ, **ಕೃತಾಂತನರಸಿಂಹತನೋಃ** = ಪ್ರಳಯಕಾಲದ ನರಸಿಂಹರೂಪದ, **ವಿಷ್ಣೋಃ** = ವಿಷ್ಣುವಿನ, **ರೂಪಂ** = ರೂಪವು, **ಯಥೈವ** = ಹೇಗೋ, **ತಥೈವ** = ಹಾಗೆ, **ಕರ್ಣಂ** = ಕರ್ಣನನ್ನು ಕುರಿತು, **ಅಭಿಗಚ್ಛತಃ (ತಸ್ಯ)** = ಎದುರಿಸಿಹೋಗುತ್ತಿರುವ (ಭೀಮನ), **ರೂಪಂ** = ರೂಪವು, **ಆಸ** = ಇದ್ದಿತು. **ತದ್ವೇಗತಃ** = ಅವನ (ನಡಿಗೆಯ) ವೇಗದಿಂದಾಗಿ, **ಸಮಸ್ತಾ** = ಇಡೀ, **ಧರಾ** = ಭೂಮಿಯು, **ಪ್ರತಿಚಚಾಲ** = ನಡುಗಿತು, **ಸಕಲಾ** = ಇಡೀ, **ಪ್ರತಿವೀರಸೇನಾ ಚ** = ಶತ್ರುಸೇನೆಯು, **ಸಹ ವಿದ್ರಾವಿತಾ** = ದಿಕ್ಕೆಟ್ಟು ಓಡಿತು.

**ತಾತ್ಪರ್ಯ** :- ಕರ್ಣನನ್ನು ಕಂಡೊಡನೆಯೇ ಭೀಮಸೇನ ಅವನನನ್ನು ಕೋಪದಿಂದ ಸುಟ್ಟುಬಿಡುವವನಂತೆ ಎದುರಿಸಿಬಂದ. ಅಪಾರ ತೇಜಸ್ಸಿನ ಅವನು ಧರ್ಮರಾಜನ ರಕ್ಷಣೆಗೆಂದು ಸಾತ್ಯಕಿ ಧೃಷ್ಟದ್ಯುಮ್ನರನ್ನು ಕಳುಹಿಸಿ ಕರ್ಣನ ಬಳಿಗೆ ಧಾವಿಸಿದಾಗ ಅವನ ರೂಪ ಪ್ರಳಯಕಾಲದಲ್ಲಿ ಎಲ್ಲ ಜಗತ್ತನ್ನು ಲಯಗೈದ ಶಿವನನ್ನು ನುಂಗಲು ಬರುವ ಪ್ರಲಯಕಾಲದ ನರಸಿಂಹನ ರೂಪದಂತೆ ಇದ್ದಿತು. ಅವನ ವೇಗಕ್ಕೆ ಭೂಮಿಯೆಲ್ಲ ಗಡಗಡನೆ ನಡುಗಿತು. ಶತ್ರುಸೇನೆಯೆಲ್ಲ ಕಂಗೆಟ್ಟು ಓಡತೊಡಗಿತು.

ಭೀಮನ ಬಾಣಕ್ಕೆ ನಿಶ್ಚೇಷ್ಟನಾದ ಕರ್ಣ

**ವೈಕರ್ತನೇನ ಶರಸಂಚಯತಾಡಿತಃ ಸ**
**ಬಾಣಂ ಚ ವಜ್ರಸದೃಶಂ ಪ್ರಮುಮೋಚ ತಸ್ಮಿನ್ ।**
**ತೇನಾಹತೋ ಮೃತಕವತ್ ಸ ಪಪಾತ ಕರ್ಣೋ**
**ಭೀಮಃ ಕ್ಷುರಂ ಚ ಜಗೃಹೇಽಭಿಯಯೌ ಚ ಪದ್ಭ್ಯಾಮ್ ॥ ೩೯ ॥**

**ವೈಕರ್ತನೇನ ಶರಸಂಚಯತಾಡಿತಃ ಸಃ ಬಾಣಂ ಚ ವಜ್ರಸದೃಶಂ ಪ್ರಮುಮೋಚ ತಸ್ಮಿನ್ । ತೇನ ಆಹತಃ ಮೃತಕವತ್ ಸಃ ಪಪಾತ ಕರ್ಣಃ ಭೀಮಃ ಕ್ಷುರಂ ಚ ಜಗೃಹೇ ಅಭಿಯಯೌ ಚ ಪದ್ಭ್ಯಾಮ್ ॥ ೩೯ ॥**

**ಅರ್ಥ** :- **ವೈಕರ್ತನೇನ** = ಸೂರ್ಯಪುತ್ರನಾದ ಕರ್ಣನಿಂದ, **ಶರಸಂಚಯತಾಡಿತಃ ಸಃ** = ಬಾಣಗಳ ಸಮೂಹಗಳಿಂದ ಹೊಡೆಯಲ್ಪಟ್ಟ ಆ ಭೀಮನು, **ವಜ್ರಸದೃಶಂ** = ವಜ್ರಕ್ಕೆ ಸಮಾನವಾದ, **ಬಾಣಂ ಚ** = ಬಾಣವನ್ನು, **ತಸ್ಮಿನ್** = ಅವನ ಮೇಲೆ, **ಪ್ರಮುಮೋಚ** = ಬಿಟ್ಟನು. **ತೇನ** = ಅದರಿಂದ, **ಆಹತಃ** = ಚೆನ್ನಾಗಿ ಪೆಟ್ಟುತಿಂದ, **ಸಃ ಕರ್ಣಃ** = ಆ ಕರ್ಣನು, **ಮೃತಕವತ್** = ಶವದಂತೆ, **ಪಪಾತ** = ಬಿದ್ದ. **ಭೀಮಃ** = ಭೀಮನು, **ಕ್ಷುರಂ ಚ** = ಕತ್ತಿಯನ್ನೂ, **ಜಗೃಹೇ** = ಕೈಗೆತ್ತಿಕೊಂಡ, **ಪದ್ಭ್ಯಾಂ ಚ** = ಕಾಲ್ನಡಿಗೆಯಿಂದಲೇ, **ಅಭಿಯಯೌ** = (ಕರ್ಣನ ಬಳಿಗೆ) ತೆರಳಿದ.

**ತಾತ್ಪರ್ಯ** :- ಕರ್ಣನಿಂದ ಬಾಣಸಮೂಹಗಳಿಂದ ಹೊಡೆಯಲ್ಪಟ್ಟ ಭೀಮಸೇನ ವಜ್ರಸದೃಶವಾದ ಬಾಣವೊಂದನ್ನು ಅವನ ಮೇಲೆ ಪ್ರಯೋಗಿಸಿದ. ಆದರಿಂದ ಪೆಟ್ಟುತಿಂದ ಕರ್ಣ ಶವದಂತೆ ಬಿದ್ದ. ಭೀಮ ಕತ್ತಿಯನ್ನು ಕೈಗೆತ್ತಿಕೊಂಡು ಕಾಲ್ನಡೆಯಿಂದಲೇ ಕರ್ಣನ ಬಳಿಗೆ ತೆರಳಿದ.

**ನಿಂದಾಂ ಹರೇಸ್ತು ವಿದಧಾತಿ ಪರೋಕ್ಷಗೋಽಪಿ**
**ಯಸ್ತಂ ಪ್ರಗೃಹ್ಯ ಕರವಾಣಿ ವಿಜಿಹ್ವಮೇವ ।**
**ಏವಂ ಹಿ ವಾಯುತನಯಸ್ಯ ಮಹಾಪ್ರತಿಜ್ಞಾ**
**ಛೇತ್ತುಂ ಸ ತೇನ ರವಿಜಸ್ಯ ಸಸಾರ ಜಿಹ್ವಾಮ್ ॥ ೪೦ ॥**

**ನಿಂದಾಂ ಹರೇಃ ತು ವಿದಧಾತಿ ಪರೋಕ್ಷಗಃ ಅಪಿ ಯಃ ತಂ ಪ್ರಗೃಹ್ಯ ಕರವಾಣಿ ವಿಜಿಹ್ವಂ ಏವ । ಏವಂ ಹಿ ವಾಯುತನಯಸ್ಯ ಮಹಾಪ್ರತಿಜ್ಞಾ ಛೇತ್ತುಂ ಸಃ ತೇನ ರವಿಜಸ್ಯ ಸಸಾರ ಜಿಹ್ವಾಮ್ ॥ ೪೦ ॥**

**ಅರ್ಥ** :- **ಯಃ ತು** = ಯಾವನು, **ಪರೋಕ್ಷಗಃ ಅಪಿ** = ಹಿಂದಿನಿಂದೆಯೂ, **ಹರೇಃ** = ಶ್ರೀಹರಿಯ, **ನಿಂದಾಂ** = ನಿಂದೆಯನ್ನು, **ವಿದಧಾತಿ** = ಮಾಡುವನೋ, **ತಂ** = ಅವನನ್ನು, **ಪ್ರಗೃಹ್ಯ** = ಹಿಡಿದು, **ವಿಜಿಹ್ವಂ ಏವ** = ನಾಲಿಗೆ ಇಲ್ಲದವನನ್ನಾಗಿಯೇ, **ಕರವಾಣಿ** =

ಮಾಡುವೆನು, **ಏವಂ ಹಿ** = ಹೀಗೆಂದೇ, **ವಾಯುತನಯಸ್ಯ** = ವಾಯುಪುತ್ರನಾದ ಭೀಮಸೇನನ, **ಮಹಾಪ್ರತಿಜ್ಞಾ** = ಮಹಾಪ್ರತಿಜ್ಞೆ, **ತೇನ** = ಆದ್ದರಿಂದ, **ಸಃ** = ಆ ಭೀಮನು, **ರವಿಜಸ್ಯ** = ಸೂರ್ಯಪುತ್ರನಾದ ಕರ್ಣನ, **ಜಿಹ್ವಾಂ** = ನಾಲಿಗೆಯನ್ನು, **ಛೇತ್ತುಂ** = ಕತ್ತರಿಸಲೆಂದು, **ಸಸಾರ** = ಸಾಗಿದ.

**ತಾತ್ಪರ್ಯ** :- ಹಿಂದಿನಿಂದಲೇ ಆಗಲಿ ಶ್ರೀಹರಿಯ ನಿಂದೆಯನ್ನು ಯಾವನು ಮಾಡುವನೋ ಅವನನ್ನು ಹಿಡಿದು ನಾಲಿಗೆ ಕತ್ತರಿಸುವೆ ಎಂಬುದು ಭೀಮನ ಮಹಾಪ್ರತಿಜ್ಞೆ. ಆದ್ದರಿಂದ ಕರ್ಣನ ನಾಲಿಗೆಯನ್ನು ಕತ್ತರಿಸಲೆಂದು ಅವನ ಬಳಿಗೆ ಸಾಗಿದ.

### ಶಲ್ಯನ ಪ್ರಾರ್ಥನೆಯಿಂದ ಕರ್ಣನ ಮೋಚನ

**ಆಯಾಂತಮಂತಿಕಮಮುಂ ಪ್ರಸಮೀಕ್ಷ್ಯ ಶಲ್ಯೋ**
**ನೇತ್ಯಾಹ ಹೇತುಭಿರಹೋ ನ ಮೃಷಾ ಪ್ರತಿಜ್ಞಾ ।**
**ಕಾರ್ಯಾ ತ್ವಯೈವ ಪುರುಹೂತಸುತಸ್ಯ ಜಿಹ್ವಾಂ**
**ಮಾ ತೇನ ಪಾತಯ ಮರುತ್ಸುತ ಸೂತಸೂನೋಃ ॥ ೪೧ ॥**

**ಆಯಾಂತಂ ಅಂತಿಕಂ ಅಮುಂ ಪ್ರಸಮೀಕ್ಷ್ಯ ಶಲ್ಯಃ ನ ಇತಿ ಆಹ ಹೇತುಭಿಃ ಅಹೋ ನ ಮೃಷಾ ಪ್ರತಿಜ್ಞಾ । ಕಾರ್ಯಾ ತ್ವಯಾ ಏವ ಪುರುಹೂತಸುತಸ್ಯ ಜಿಹ್ವಾಂ ಮಾ ತೇನ ಪಾತಯ ಮರುತ್ಸುತ ಸೂತಸೂನೋಃ ॥ ೪೧ ॥**

**ಅರ್ಥ** :– **ಅಂತಿಕಂ** = ಸಮೀಪಕ್ಕೆ, **ಆಯಾಂತಂ** = ಬರುತ್ತಿರುವ, **ಅಮುಂ** = ಅವನನ್ನು, **ಶಲ್ಯಃ** = ಶಲ್ಯನು, **ಪ್ರಸಮೀಕ್ಷ್ಯ** = ನೋಡಿ, **ಅಹೋ** = ಓಹೋ, **ಮರುತ್ಸುತ** = ವಾಯುಪುತ್ರನೆ!, **ತ್ವಯಾ ಏವ** = ನಿನ್ನಿಂದಲೇ, **ಪುರುಹೂತಸುತಸ್ಯ** = ಇಂದ್ರನ ಮಗನಾದ ಅರ್ಜುನನ, **ಪ್ರತಿಜ್ಞಾ** = ಪ್ರತಿಜ್ಞೆಯು, **ಮೃಷಾ** = ಸುಳ್ಳಾಗಿಸುವುದು, **ನ ಕಾರ್ಯಾ** = ಬೇಡ, **ತೇನ** = ಆದ್ದರಿಂದ, **ಸೂತಸೂನೋಃ** = ಸೂತಪುತ್ರನಾದ ಕರ್ಣನ, **ಜಿಹ್ವಾಂ** = ನಾಲಿಗೆಯನ್ನು, **ಮಾ ಪಾತಯ** = ಕತ್ತರಿಸಬೇಡ. (**ಇತಿ**) **ಹೇತುಭಿಃ** = ಈ ಕಾರಣಗಳಿಂದ, **ನ ಇತಿ** = ಬೇಡ ಎಂದು, **ಆಹ** = ಹೇಳಿದ.

**ತಾತ್ಪರ್ಯ** :- ಭೀಮಸೇನ ಹತ್ತಿರಕ್ಕೆ ಬರುತ್ತಿದ್ದುದನ್ನು ಗಮನಿಸಿ ಶಲ್ಯ ಸಕಾರಣವಾಗಿ ಅದನ್ನು ತಡೆದು ಹೇಳಿದ 'ನೀನು ಇಂದ್ರಪುತ್ರನಾದ ಅರ್ಜುನನ ಪ್ರತಿಜ್ಞೆಯನ್ನು ಸುಳ್ಳಾಗಿಸುವುದು ಬೇಡ ; ಆದ್ದರಿಂದ ಭೀಮ ! ಈ ಸೂತಪುತ್ರನ ನಾಲಿಗೆಯನ್ನು ಕತ್ತರಿಸಬೇಡ'.

**ಇತ್ಯುಕ್ತ್ವಾ ಪ್ರಮುಖಾತ್ ತಸ್ಯ ರಥೇನೈವ ತು ಮದ್ರರಾಟ್ ।**
**ವೈಕರ್ತನಮಪೋವಾಹ ಸರ್ವಲೋಕಸ್ಯ ಪಶ್ಯತಃ ॥ ೪೨ ॥**

**ಇತಿ ಉಕ್ತ್ವಾ ಪ್ರಮುಖಾತ್ ತಸ್ಯ ರಥೇನ ಏವ ತು ಮದ್ರರಾಟ್ । ವೈಕರ್ತನಂ ಅಪೋವಾಹ ಸರ್ವಲೋಕಸ್ಯ ಪಶ್ಯತಃ ॥ ೪೨ ॥**

**ಅರ್ಥ** :- **ಇತಿ** = ಹೀಗೆಂದು, **ಮದ್ರರಾಟ್** = ಮದ್ರರಾಜನಾದ ಶಲ್ಯನು, **ಸರ್ವಲೋಕಸ್ಯ** = ಎಲ್ಲ ಜನರೂ, **ಪಶ್ಯತಃ** = ನೋಡುತ್ತಿರುವಂತೆಯೇ, **ಉಕ್ತ್ವಾ** = ಹೇಳಿ, **ವೈಕರ್ತನಂ ತು** = ಕರ್ಣನನ್ನಾದರೋ, **ರಥೇನ ಏವ** = ರಥದಿಂದಲೇ, **ತಸ್ಯ ಪ್ರಮುಖಾತ್** = ಆ ಭೀಮನ ಎದುರಿನಿಂದ, **ಅಪೋವಾಹ** = ದೂರಕ್ಕೆ ಕರೆದೊಯ್ದ.

**ತಾತ್ಪರ್ಯ** :- ಹೀಗೆಂದ ಶಲ್ಯ ಸಕಲಜನರು ನೋಡುತ್ತಿದ್ದಂತೆಯೇ ಕರ್ಣನನ್ನು ರಥದಿಂದ ಭೀಮನ ಎದುರಿನಿಂದ ದೂರಕ್ಕೆ ಕರೆದೊಯ್ದ.

### ಭೀಮನಿಂದ ಕೌರವ ಸೇನೆಯ ಪರಾಭವ

**ಜಿತ್ವಾ ಸೂರ್ಯಸುತಂ ಭೀಮಃ ಕೌರವಾಣಾಮನೀಕಿನೀಮ್ ।**
**ಸರ್ವಾಂ ವಿದ್ರಾವಯಾಮಾಸ ದ್ರೌಣಿದುರ್ಯೋಧನಾವೃತಾಮ್ ॥ ೪೩ ॥**

**ಜಿತ್ವಾ ಸೂರ್ಯಸುತಂ ಭೀಮಃ ಕೌರವಾಣಾಂ ಅನೀಕಿನೀಮ್ । ಸರ್ವಾಂ ವಿದ್ರಾವಯಾಮಾಸ ದ್ರೌಣಿದುರ್ಯೋಧನಾವೃತಾಮ್ ॥ ೪೩ ॥**

**ಅರ್ಥ** :- **ಭೀಮಃ** = ಭೀಮನು, **ಸೂರ್ಯಸುತಂ** = ಸೂರ್ಯಪುತ್ರನನ್ನು, **ಜಿತ್ವಾ** = ಗೆದ್ದು, **ದ್ರೌಣಿದುರ್ಯೋಧನಾವೃತಾಂ** = ಅಶ್ವತ್ಥಾಮ–ದುರ್ಯೋಧನರಿಂದ ಕೂಡಿದ್ದ, **ಕೌರವಾಣಾಂ** = ಕೌರವರ, **ಸರ್ವಾಂ** = ಎಲ್ಲ, **ಅನೀಕಿನೀಂ** = ಸೇನೆಯನ್ನು, **ವಿದ್ರಾವಯಾಮಾಸ** = ಹೊಡೆದೋಡಿಸಿದ.

**ತಾತ್ಪರ್ಯ** :- ಭೀಮಸೇನ ಕರ್ಣನನ್ನು ಸೋಲಿಸಿ, ಅಶ್ವತ್ಥಾಮ ದುರ್ಯೋಧನರಿಂದ ಕೂಡಿದ್ದ ಕೌರವಸೇನೆಯನ್ನೆಲ್ಲ ಹೊಡೆದೋಡಿಸ ತೊಡಗಿದ.

ಅಶ್ವತ್ಥಾಮನ ಪರಾಕ್ರಮ

**ಅಕ್ಷೌಹಿಣೀತ್ರಯಂ ತೇನ ತದಾ ವಿಲುಲಿತಂ ಕ್ಷಣಾತ್ ।**
**ತದೈವ ಗುರುಪುತ್ರೋಽಯಾತ್ ಪಾಂಡವಾನಾಮನೀಕಿನೀಮ್ ॥ ೪೪ ॥**

ಅಕ್ಷೌಹಿಣೀತ್ರಯಂ ತೇನ ತದಾ ವಿಲುಲಿತಂ ಕ್ಷಣಾತ್ । ತದಾ ಏವ ಗುರುಪುತ್ರಃ ಅಯಾತ್ ಪಾಂಡವಾನಾಂ ಅನೀಕಿನೀಮ್ ॥ ೪೪ ॥

**ಅರ್ಥ** :- **ತೇನ** = ಆ ಭೀಮನಿಂದ, **ತದಾ** = ಆಗ, **ಅಕ್ಷೌಹಿಣೀತ್ರಯಂ** = ಮೂರು ಅಕ್ಷೋಹಿಣಿಯು, **ಕ್ಷಣಾತ್** = ಕ್ಷಣದಲ್ಲೇ, **ವಿಲುಲಿತಮ್** = ಸಂಹರಿಸಲ್ಪಟ್ಟಿತು. **ತದಾ ಏವ** = ಆಗಲೇ, **ಗುರುಪುತ್ರಃ** = ಗುರುಪುತ್ರನಾದ ಅಶ್ವತ್ಥಾಮನು, **ಪಾಂಡವಾನಾಂ** = ಪಾಂಡವರ, **ಅನೀಕಿನೀಂ** = ಸೇನೆಯನ್ನು ಕುರಿತು, **ಅಯಾತ್** = ಬಂದ.

**ತಾತ್ಪರ್ಯ** :- ಭೀಮ ಆಗ ಕ್ಷಣಮಾತ್ರದಲ್ಲಿ ಮೂರು ಅಕ್ಷೋಹಿಣೀ ಸೇನೆಯನ್ನು ನಿಯಂತ್ರಿಸಿದ್ದ. ಆಗಲೇ ಅಶ್ವತ್ಥಾಮ ಪಾಂಡವರ ಸೇನೆಯೊಳಗೆ ನುಗ್ಗಿದ.

**ವಿಮೃದ್ಯ ಸಕಲಾಂ ಸೇನಾಂ ಕೃತ್ವಾ ಚ ವಿರಥಂ ನೃಪಮ್ ।**
**ಧೃಷ್ಟದ್ಯುಮ್ನಂ ಯಮೌ ಚೈವ ಸಾತ್ಯಕಿಂ ದ್ರೌಪದೀಸುತಾನ್ ।**
**ಕ್ಷಣೇನ ವಿರಥೀಕೃತ್ಯ ಸರ್ವಾಂಶ್ಚಕ್ರೇ ನಿರಾಯುಧಾನ್ ॥ ೪೫ ॥**

ವಿಮೃದ್ಯ ಸಕಲಾಂ ಸೇನಾಂ ಕೃತ್ವಾ ಚ ವಿರಥಂ ನೃಪಮ್ । ಧೃಷ್ಟದ್ಯುಮ್ನಂ ಯಮೌ ಚ ಏವ ಸಾತ್ಯಕಿಂ ದ್ರೌಪದೀಸುತಾನ್ । ಕ್ಷಣೇನ ವಿರಥೀಕೃತ್ಯ ಸರ್ವಾನ್ ಚಕ್ರೇ ನಿರಾಯುಧಾನ್ ॥ ೪೫ ॥

**ಅರ್ಥ** :- **(ಸಃ)** = ಅವನು, **ಸಕಲಾಂ** = ಎಲ್ಲ, **ಸೇನಾಂ** = (ಪಾಂಡವ)ಸೇನೆಯನ್ನು, **ವಿಮೃದ್ಯ** = ಮರ್ದಿಸಿ, **ನೃಪಂ** = ರಾಜನಾದ ಯುಧಿಷ್ಠಿರನನ್ನು, **ವಿರಥಂ ಚ** = ರಥವನ್ನು ಕಳೆದುಕೊಂಡವನನ್ನಾಗಿಯೂ,

**ಕೃತ್ವಾ** = ಮಾಡಿ, **ಧೃಷ್ಟದ್ಯುಮ್ನಂ** = ಧೃಷ್ಟದ್ಯುಮ್ನನನ್ನು, **ಯಮೌ** = ಅವಳಿಗಳಾದ ನಕುಲಸಹದೇವರನ್ನು, **ಸಾತ್ಯಕಿಂ** = ಸಾತ್ಯಕಿಯನ್ನು, **ದ್ರೌಪದೀಸುತಾನ್ ಚ** = ದ್ರೌಪದಿಯ ಪುತ್ರರನ್ನು ಸಹ, **ಕ್ಷಣೇನ ಏವ** = ಕ್ಷಣದಲ್ಲೇ, **ವಿರಥೀಕೃತ್ಯ** = ವಿರಥರನ್ನಾಗಿ ಮಾಡಿ, **ಸರ್ವಾನ್** = ಎಲ್ಲರನ್ನೂ, **ನಿರಾಯುಧಾನ್** = ಆಯುಧವಿಲ್ಲದವರನ್ನಾಗಿ, **ಚಕ್ರೇ** = ಮಾಡಿದನು.

**ತಾತ್ಪರ್ಯ :-** ಅಶ್ವತ್ಥಾಮ ಪಾಂಡವಸೇನೆಯನ್ನೆಲ್ಲ ಸದೆಬಡಿಯುತ್ತಾ ಧರ್ಮರಾಜನನ್ನು ವಿರಥನನ್ನಾಗಿ ಮಾಡಿದ. ಧೃಷ್ಟದ್ಯುಮ್ನನನ್ನು, ನಕುಲಸಹದೇವರನ್ನು, ಸಾತ್ಯಕಿಯನ್ನು ಮತ್ತು ದ್ರೌಪದೀಪುತ್ರರನ್ನು ಎದುರಿಸಿ, ಅವರನ್ನೆಲ್ಲ ಕ್ಷಣದಲ್ಲೇ ವಿರಥರನ್ನಾಗಿಸಿ, ಆಯುಧಹೀನರನ್ನಾಗಿ ಮಾಡಿದ.

**ತಾನ್ ಭಗ್ನದರ್ಪಾನ್ ರಣತೋಽಪಯಾತಾ-**
**ನನ್ವೇವ ಬಾಣಾವೃತಮಂತರಿಕ್ಷಮ್ ।**
**ಕುರ್ವನ್ ಯಯೌ ಧರ್ಮರಾಜಸ್ತಮಾಹ**
**ಕಿಂ ನಃ ಸ್ವಧರ್ಮೇ ನಿರತಾನ್ ವಿಹಂಸಿ ॥ ೪೬ ॥**

ತಾನ್ ಭಗ್ನದರ್ಪಾನ್ ರಣತಃ ಅಪಯಾತಾನ್ ಅನು ಏವ ಬಾಣಾವೃತಂ ಅಂತರಿಕ್ಷಮ್ । ಕುರ್ವನ್ ಯಯೌ ಧರ್ಮರಾಜಃ ತಂ ಆಹ ಕಿಂ ನಃ ಸ್ವಧರ್ಮೇ ನಿರತಾನ್ ವಿಹಂಸಿ ॥ ೪೬ ॥

**ಅರ್ಥ :-** **ಭಗ್ನದರ್ಪಾನ್** = ಹಮ್ಮು ಅಳಿದ, **ರಣತಃ** = ಯುದ್ಧದಿಂದ, **ಅಪಯಾತಾನ್** = ಹಿಂದಿರುಗಿದ, **ತಾನ್** = ಅವರನ್ನು, **ಅನು ಏವ** = ಅನುಸರಿಸಿ, **ಅಂತರಿಕ್ಷಂ** = ಅಂತರಿಕ್ಷವನ್ನು, **ಬಾಣಾವೃತಂ** = ಬಾಣಗಳಿಂದ ಆವರಿಸಿದ್ದನ್ನಾಗಿ, **ಕುರ್ವನ್** = ಮಾಡಿದವನಾಗಿ, **ಯಯೌ** = ಹೊರಟನು. **ಧರ್ಮರಾಜಃ** = ಧರ್ಮರಾಜನು, **ತಂ** = ಅವನನ್ನು (ಅಶ್ವತ್ಥಾಮನನ್ನು) ಕುರಿತು, **ಸ್ವಧರ್ಮೇ** = ಸ್ವಧರ್ಮದಲ್ಲಿ, **ನಿರತಾನ್** = ನಿರತರಾದ, **ನಃ** = ನಮ್ಮನ್ನು, **ಕಿಂ** = ಏಕೆ, **ವಿಹಂಸಿ** = ಪೀಡಿಸುವಿ, **(ಇತಿ)** = ಹೀಗೆಂದು, **ಆಹ** = ಹೇಳಿದ.

### ಯುಧಿಷ್ಠಿರನಿಂದ ಅಶ್ವತ್ಥಾಮರ ಪ್ರಾರ್ಥನೆ

**ಕ್ಷತ್ರಿಯಾನ್ ಪರಧರ್ಮಸ್ಥೋ ಮಾ ಹಿಂಸೀರಿತಿ ಚೋದಿತಃ ।**
**ಪ್ರಹಸ್ಯ ತಾನ್ ವಿಹಾಯೈವ ಯಯೌ ಯತ್ರಾಚ್ಯುತಾರ್ಜುನೌ ॥ ೪೭ ॥**

**ಕ್ಷತ್ರಿಯಾನ್ ಪರಧರ್ಮಸ್ಥಃ ಮಾ ಹಿಂಸೀಃ ಇತಿ ಚ ಉದಿತಃ । ಪ್ರಹಸ್ಯ ತಾನ್ ವಿಹಾಯ ಏವ ಯಯೌ ಯತ್ರ ಅಚ್ಯುತಾರ್ಜುನೌ ॥ ೪೭ ॥**

**ಅರ್ಥ** :- **ಪರಧರ್ಮಸ್ಥಃ** (ಸನ್) = ಪರಧರ್ಮದಲ್ಲಿ ತೊಡಗಿದವನಾಗಿ, **ಕ್ಷತ್ರಿಯಾನ್** = ಕ್ಷತ್ರಿಯರನ್ನು, **ಮಾ ಹಿಂಸೀಃ** = ಹಿಂಸಿಸಬೇಡ, **ಇತಿ ಚ** = ಹೀಗೆಂದು ಸಹ, **ಉದಿತಃ** = ಹೇಳಲ್ಪಟ್ಟ (ಅಶ್ವತ್ಥಾಮನು), **ಪ್ರಹಸ್ಯ** = ಜೋರಾಗಿ ನಕ್ಕು, **ತಾನ್** = ಅವರನ್ನು, **ವಿಹಾಯ ಏವ** = ಬಿಟ್ಟು, **ಯತ್ರ** = ಎಲ್ಲಿ, **ಅಚ್ಯುತಾರ್ಜುನೌ** = ಕೃಷ್ಣ–ಅರ್ಜುನರು, (**ತಿಷ್ಠತಃ**) = ಇದ್ದರೋ, (**ತತ್ರ**) = ಅಲ್ಲಿಗೆ, **ಯಯೌ** = ತೆರಳಿದ.

**ತಾತ್ಪರ್ಯ** :- ಯುಧಿಷ್ಠಿರ ಮೊದಲಾದವರೆಲ್ಲ ಭಗ್ನದರ್ಪರಾಗಿ ಯುದ್ಧದಿಂದ ಹಿಮ್ಮೆಟ್ಟುತ್ತಿದ್ದಂತೆಯೇ ಅಶ್ವತ್ಥಾಮ ಗಗನವನ್ನೆಲ್ಲ ಬಾಣಗಳಿಂದ ತುಂಬಿಸುತ್ತಾ ನಡೆದ; ಧರ್ಮರಾಜ ಕೇಳಿಕೊಂಡ : ''ಸ್ವಧರ್ಮದಲ್ಲಿ ತೊಡಗಿದ ಕ್ಷತ್ರಿಯರಾದ ನಮ್ಮನ್ನು ಪರಧರ್ಮದಲ್ಲಿ ತೊಡಗಿದ ನೀನು ಏತಕೆ ಪೀಡಿಸುತ್ತಿರುವಿ? ಹಾಗೆ ಪೀಡಿಸದಿರು''. ಧರ್ಮರಾಜ ಹೀಗೆನ್ನಲು ಅಶ್ವತ್ಥಾಮ ಜೋರಾಗಿ ನಕ್ಕು, ಅವರನ್ನು ಬಿಟ್ಟು ಕೃಷ್ಣಾರ್ಜುನರಿದ್ದಲ್ಲಿಗೆ ತೆರಳಿದ.

### ಅರ್ಜುನ ಅಶ್ವತ್ಥಾಮರ ಅಪೂರ್ವಯುದ್ಧ

**ಸಂಶಪ್ತಕೈಸ್ತತ್ರ ಸಂಯುಧ್ಯಮಾನಂ**
**ಸಮಾಹ್ವಯಾಮಾಸ ಸುರೇಂದ್ರಸೂನುಮ್ ।**
**ಸ ಬಾಣಯುಕ್ತಂ ಭುಜಗೇಂದ್ರಕಲ್ಪ-**
**ಮುನ್ನಮ್ಯ ಬಾಹುಂ ಯುಧಯೇ ಸುಶೂರಮ್ ॥ ೪೮ ॥**

**ಸಂಶಪ್ತಕೈಃ ತತ್ರ ಸಂಯುಧ್ಯಮಾನಂ ಸಮಾಹ್ವಯಾಮಾಸ ಸುರೇಂದ್ರಸೂನುಮ್ । ಸಃ ಬಾಣಯುಕ್ತಂ ಭುಜಗೇಂದ್ರಕಲ್ಪಂ ಉನ್ನಮ್ಯ ಬಾಹುಂ ಯುಧಯೇ ಸುಶೂರಮ್॥ ೪೮ ॥**

**ಅರ್ಥ** :- **ಸಃ** = ಅವನು, **ಬಾಣಯುಕ್ತಂ** = ಬಾಣದಿಂದ ಕೂಡಿದ್ದ, **ಭುಜಗೇಂದ್ರಕಲ್ಪಂ** = ಶೇಷನಿಗೆ ಸಮಾನವಾದ, **ಬಾಹುಂ** = ಬಾಹುವನ್ನು, **ಉನ್ನಮ್ಯ** = ಮೇಲೆತ್ತಿ, **ತತ್ರ** = ಅಲ್ಲಿ, **ಸಂಶಪ್ತಕೈಃ** = ಸಂಶಪ್ತಕರಿಂದ, **ಸಂಯುಧ್ಯಮಾನಂ** = ಬಹಳವಾಗಿ ಯುದ್ಧಮಾಡುತ್ತಿದ್ದ, **ಸುಶೂರಂ** = ಉತ್ತಮ ಶೂರನಾದ, **ಸುರೇಂದ್ರಸೂನುಂ** = ಇಂದ್ರಪುತ್ರನಾದ ಅರ್ಜುನನನ್ನು, **ಯುಧಯೇ** = ಯುದ್ಧಕ್ಕಾಗಿ, **ಸಮಾಹ್ವಯಾಮಾಸ** = ಆಹ್ವಾನಿಸಿದ.

**ತಾತ್ಪರ್ಯ** :- ಅಲ್ಲಿ ಸಂಶಪತಿಕರೊಂದಿಗೆ ಬಹಳವಾಗಿ ಹೋರಾಡುತ್ತಿದ್ದ ಇಂದ್ರಪುತ್ರನೂ, ಮಹಾಶೂರನೂ ಆದ ಅರ್ಜುನನನ್ನು ಅಶ್ವತ್ಥಾಮ ಮಹಾಸರ್ಪದಂತಿದ್ದ ಬಾಣಹಿಡಿದ ತೋಳನ್ನು ಮೇಲೆತ್ತಿ, ಯುದ್ಧಕ್ಕೆ ಕರೆದ.

**ಪಾರ್ಥಃ ಸಂಶಪ್ತಕಗಣ್ಯೈಃ ಸಂಸೃಷ್ಟಃ ಸಮರಾರ್ಥಿಭಿಃ ।**
**ಆಹೂತೋ ದ್ರೌಣಿನಾ ಚೈವ ಕಾರ್ಯಂ ಕೃಷ್ಣಮಪೃಚ್ಛತ ।**
**ಚೋದಯಾಮಾಸ ಚ ಹಯಾನ್ ಕೃಷ್ಣೋ ದ್ರೌಣಿರಥಂ ಪ್ರತಿ ॥ ೪೯ ॥**

ಪಾರ್ಥಃ ಸಂಶಪ್ತಕಗಣ್ಯೈಃ ಸಂಸೃಷ್ಟಃ ಸಮರಾರ್ಥಿಭಿಃ । ಆಹೂತಃ ದ್ರೌಣಿನಾ ಚ ಏವ ಕಾರ್ಯಂ ಕೃಷ್ಣಂ ಅಪೃಚ್ಛತ । ಚೋದಯಾಮಾಸ ಚ ಹಯಾನ್ ಕೃಷ್ಣಃ ದ್ರೌಣಿರಥಂ ಪ್ರತಿ ॥ ೪೯ ॥

**ಅರ್ಥ** :- **ಸಮರಾರ್ಥಿಭಿಃ** = ಯುದ್ಧವನ್ನು ಬಯಸಿದ್ದ, **ಸಂಶಪ್ತಕ ಗಣ್ಯೈಃ** = ಸಂಶಪ್ತಕರ ಸಮೂಹಗಳಿಂದ, **ಸಂಸೃಷ್ಟಃ** = ಕೂಡಿಕೊಂಡು, **ಪಾರ್ಥಃ** = ಅರ್ಜುನನು, **ದ್ರೌಣಿನಾ ಚ** = ದ್ರೋಣಪುತ್ರನಿಂದಲೂ, **ಆಹೂತಃ ಏವ** = ಆಹ್ವಾನಿಸಲ್ಪಟ್ಟವನಾಗಿ, **ಕೃಷ್ಣಂ** = ಕೃಷ್ಣನನ್ನು ಕುರಿತು, **ಕಾರ್ಯಂ** = ಮಾಡಬೇಕಾದ್ದನ್ನು, **ಅಪೃಚ್ಛತ** = ಕೇಳಿದ, **ಕೃಷ್ಣಃ ಚ** = ಕೃಷ್ಣನೂ, **ಹಯಾನ್** = ಕುದುರೆಗಳನ್ನು, **ದ್ರೌಣಿರಥಂ ಪ್ರತಿ** = ದ್ರೋಣಪುತ್ರನ ರಥವನ್ನು ಕುರಿತು, **ಚೋದಯಾಮಾಸ** = ಓಡಿಸಿದ.

**ತಾತ್ಪರ್ಯ** :- ಅರ್ಜುನ ಸಮರಾರ್ಥಿಗಳಾದ ಸಂಶಪತಿಕರ ಗುಂಪಿನೊಂದಿಗೆ ಕಾದುತ್ತಿದ್ದವನು ಅಶ್ವತ್ಥಾಮ ಯುದ್ಧಕ್ಕೆ ಕರೆದಾಗ ಆಗ ತನ್ನ ಕರ್ತವ್ಯವೇನೆಂದು ಕೃಷ್ಣನನ್ನು ಕೇಳಿದ. ಕೃಷ್ಣ ಕುದುರೆಗಳನ್ನು ಅಶ್ವತ್ಥಾಮರ ರಥದತ್ತ ಓಡಿಸಿದ.

**ಉಭೌ ಚ ತಾವಸ್ತ್ರವಿದಾಂ ಪ್ರಧಾನೌ**
**ಮಹಾಬಲೌ ಸಂಯತಿ ಜಾತದರ್ಪೌ ।**
**ಶರೈಃ ಸಮಸ್ತಾಃ ಪ್ರದಿಶೋ ದಿಶಶ್ಚ**
**ದ್ರೌಣೀಂದ್ರಸೂನೂ ತಿಮಿರಾಃ ಪ್ರಚಕ್ರತುಃ ॥ ೫೦ ॥**

ಉಭೌ ಚ ತೌ ಅಸ್ತ್ರವಿದಾಂ ಪ್ರಧಾನೌ ಮಹಾಬಲೌ ಸಂಯತಿ ಜಾತದರ್ಪೌ । ಶರೈಃ ಸಮಸಾತಿಃ ಪ್ರದಿಶಃ ದಿಶಃ ಚ ದ್ರೌಣೀಂದ್ರಸೂನೂ ತಿಮಿರಾಃ ಪ್ರಚಕ್ರತುಃ ॥ ೫೦ ॥

**ಅರ್ಥ** :– **ಅಸ್ತ್ರವಿದಾಂ** = ಅಸ್ತ್ರಬಲ್ಲವರಲ್ಲಿ, **ಪ್ರಧಾನೌ** = ಪ್ರಧಾನರೂ, **ಮಹಾಬಲೌ** = ಮಹಾಬಲರೂ, **ಸಂಯತಿ** = ಯುದ್ಧದಲ್ಲಿ, **ಜಾತದರ್ಪೌ** = ದರ್ಪದಿಂದ ಬೀಗುತ್ತಿದ್ದವರೂ ಆದ, **ತೌ ಉಭೌ** = ಆ ಇಬ್ಬರು, **ದ್ರೌಣೀಂದ್ರಸೂನೂ ಚ** = ದ್ರೋಣಪುತ್ರ–ಇಂದ್ರಪುತ್ರರು ಸಹ, **ಶರೈಃ** = ಬಾಣಗಳಿಂದ, **ಸಮಸ್ತಾಃ** = ಎಲ್ಲ, **ದಿಶಃ ಚ** = ದಿಕ್ಕುಗಳನ್ನೂ, **ತಿಮಿರಾಃ ಪ್ರಚಕ್ರತುಃ** = ಕತ್ತಲುಗೊಳಿಸಿದರು.

**ತಾತ್ಪರ್ಯ** :- ಅಸ್ತ್ರಜ್ಞರಲ್ಲಿ ಪ್ರಧಾನರಾದ, ಮಹಾಬಲಿಷ್ಠರಾದ, ದರ್ಪದಿಂದ ಬೀಗುತ್ತಿದ್ದ ಅರ್ಜುನ ಅಶ್ವತ್ಥಾಮರಿಬ್ಬರು ಯುದ್ಧದಲ್ಲಿ ಬಾಣಗಳಿಂದ ಎಲ್ಲ ದಿಕ್ಕುವಿದಿಕ್ಕುಗಳಲ್ಲಿ ಕತ್ತಲೆ ಕವಿಸಿದರು.

**ಅಶ್ವತ್ಥಾಮರ ಯುದ್ಧ ಕೌಶಲ - ಶರಪಂಜರದಲ್ಲಿ ಅರ್ಜುನ**

**ದ್ರೌಣಿಸ್ತದಾ ಸ್ಯಂದನವಾಜಿರೋಮ-**
**ಸ್ವರೋಮಕೂಪಧ್ವಜಕಾರ್ಮುಕೇಭ್ಯಃ ।**
**ಶರಾನಮೋಘಾನ್ ಸತತಂ ಸೃಜಾನೋ**
**ಬಬಂಧ ಪಾರ್ಥಂ ಶರಪಂಜರೇಣ ॥ ೫೧ ॥**

ದ್ರೌಣಿಃ ತದಾ ಸ್ಯಂದನವಾಜಿರೋಮಸ್ವರೋಮಕೂಪಧ್ವಜಕಾರ್ಮುಕೇಭ್ಯಃ । ಶರಾನ್ ಅಮೋಘಾನ್ ಸತತಂ ಸೃಜಾನಃ ಬಬಂಧ ಪಾರ್ಥಂ ಶರಪಂಜರೇಣ ॥ ೫೧ ॥

**ಅರ್ಥ** :– **ತದಾ** = ಆಗ, **ದ್ರೌಣಿಃ** = ದ್ರೋಣಪುತ್ರನಾದ ಅಶ್ವತ್ಥಾಮನು, **ಸ್ಯಂದನವಾಜಿರೋಮಸ್ವರೋಮಕೂಪಧ್ವಜಕಾರ್ಮುಕೇಭ್ಯಃ** = ರಥ, ಕುದುರೆಗಳ ರೋಮಗಳು, ತನ್ನ ರೋಮಕೂಪಗಳು, ಧ್ವಜ ಮತ್ತು

ಧನುಸ್ಸುಗಳಿಂದ, **ಸತತಂ** = ಸತತವಾಗಿ, **ಅಮೋಘಾನ್** = ಅಮೋಘವಾದ (ವ್ಯರ್ಥವಾಗದ), **ಶರಾನ್** = ಬಾಣಗಳನ್ನು, **ಸೃಜಾನ್** = ಸೃಷ್ಟಿ ಮಾಡುವವನಾಗಿ, **ಪಾರ್ಥಂ** = ಪಾರ್ಥನನ್ನು, **ಶರಪಂಜರೇಣ** = ಬಾಣಗಳ ಪಂಜರದಿಂದ, **ಬಬಂಧ** = ಕಟ್ಟಿಹಾಕಿದ.

**ತಾತ್ಪರ್ಯ** :- ಅಶ್ವತ್ಥಾಮ ಆಗ ರಥ, ಕುದುರೆಗಳ ರೋಮಗಳು, ತನ್ನ ರೋಮಕೂಪಗಳು, ಧ್ವಜ ಮತ್ತು ಧನುಸ್ಸುಗಳಿಂದ ಅಮೋಘವಾದ ಬಾಣಗಳನ್ನು ಸತತ ಪ್ರಯೋಗಿಸುತ್ತಾ ಅರ್ಜುನನನ್ನು ಶರಪಂಜರದಿಂದ ಕಟ್ಟಿಹಾಕಿದ.

### ಕೃಷ್ಣನಿಂದ ಅರ್ಜುನನ ಮೋಚನೆ

**ತಸ್ಮಿನ್ ನಿಬದ್ಧೇ ಹರಿರಪ್ರಮೇಯೋ**
**ವಿಬೋಧಯಾಮಾಸ ಸುರೇಂದ್ರಸೂನುಮ್ ।**
**ಆಲಿಂಗನೇನಾಸ್ಯ ದದೌ ಬಲಂ ಚ**
**ಸ ಉತ್ಥಿತೋऽಸ್ತ್ರಾಣ್ಯಮುಚನ್ಮಹಾಂತಿ ॥ ೫೨ ॥**

**ತಸ್ಮಿನ್ ನಿಬದ್ಧೇ ಹರಿಃ ಅಪ್ರಮೇಯಃ ವಿಬೋಧಯಾಮಾಸ ಸುರೇಂದ್ರಸೂನುಮ್ । ಆಲಿಂಗನೇನ ಅಸ್ಯ ದದೌ ಬಲಂ ಚ ಸಃ ಉತ್ಥಿತಃ ಅಸ್ತ್ರಾಣಿ ಅಮುಚತ್ ಮಹಾಂತಿ ॥ ೫೨ ॥**

**ಅರ್ಥ** :- **ಅಪ್ರಮೇಯಃ** = ಸಾಕಲ್ಯೇನ ಯಾರಿಂದಲೂ ತಿಳಿಯಲಾಗದ, **ಹರಿಃ** = ಶ್ರೀಹರಿಯು, **ತಸ್ಮಿನ್** = ಆ ಅರ್ಜುನನು, **ನಿಬದ್ಧೇ** (ಸತಿ) = ಚೆನ್ನಾಗಿ ಬದ್ಧನಾದಾಗ, **ಸುರೇಂದ್ರಸೂನುಂ** = ದೇವೇಂದ್ರಪುತ್ರನಾದ ಅರ್ಜುನನನ್ನು ಕುರಿತು, **ವಿಬೋಧಯಾಮಾಸ** = ತಿಳಿಹೇಳಿದ. **ಅಸ್ಯ** = ಅವನೊಂದಿಗೆ, **ಆಲಿಂಗನೇನ** = ಆಲಿಂಗನದಿಂದ, **ಬಲಂ ಚ** = ಬಲವನ್ನೂ, **ದದೌ** = ಕೊಟ್ಟನು. **ಉತ್ಥಿತಃ ಸಃ** = ಎದ್ದ ಅವನು, **ಮಹಾಂತಿ** = ದೊಡ್ಡದಾದ, **ಅಸ್ತ್ರಾಣಿ** = ಅಸ್ತ್ರಗಳನ್ನು, **ಅಮುಂಚತ್** = ಬಿಟ್ಟನು.

**ತಾತ್ಪರ್ಯ** :- ಅರ್ಜುನ ಹಾಗೆ ಶರಪಂಜರದಲ್ಲಿ ಬದ್ಧನಾದಾಗ, ಅಪ್ರಮೇಯನಾದ ಶ್ರೀಕೃಷ್ಣ ಅವನಿಗೆ ತಿಳಿಹೇಳಿದ. ಅವನನ್ನು

ಆಲಿಂಗಿಸಿಕೊಂಡು ಬಲವನ್ನೂ ನೀಡಿದ. ಅರ್ಜುನ ಅದರಿಂದ ಹೊರಬಂದು ಮಹಾಸ್ತ್ರಗಳನ್ನು ಪ್ರಯೋಗಿಸತೊಡಗಿದ.

### ತುಂಡಾದ ಗಾಂಡೀವ ಜ್ಯಾ

**ನಿವಾರ್ಯ ತಾನಸ್ತ್ರವರೈರ್ಗುರೋಃ ಸುತ-**
**ಶ್ಚಿಚ್ಛೇದ ಚ ಜ್ಯಾಂ ಯುಧಿ ಗಾಂಡಿವಸ್ಯ ।**
**ವವರ್ಷ ಪಾರ್ಥಂ ಚ ಶರೈರಥಾನ್ಯಾ**
**ಜ್ಯಾಽಽಸೀತ್ ತಯಾ ಗಾಂಡಿವಂ ಸೋಽಪ್ಯಯುಂಕ್ತ ॥ ೫೩ ॥**

**ನಿವಾರ್ಯ ತಾನ್ ಅಸ್ತ್ರವರೈಃ ಗುರೋಃ ಸುತಃ ಚಿಚ್ಛೇದ ಚ ಜ್ಯಾಂ ಯುಧಿ ಗಾಂಡಿವಸ್ಯ । ವವರ್ಷ ಪಾರ್ಥಂ ಚ ಶರೈಃ ಅಥ ಅನ್ಯಾ ಜ್ಯಾ ಆಸೀತ್ ತಯಾ ಗಾಂಡಿವಂ ಸಃ ಅಪಿ ಅಯುಂಕ್ತ ॥ ೫೩ ॥**

**ಅರ್ಥ :- ಗುರೋಃ ಸುತಃ** = ಗುರುವಿನ ಮಗನಾದ ಅಶ್ವತ್ಥಾಮನು, **ತಾನ್** = ಅವುಗಳನ್ನು, **ಅಸ್ತ್ರವರೈಃ** = ಶ್ರೇಷ್ಠವಾದ ಅಸ್ತ್ರಗಳಿಂದ, **ನಿವಾರ್ಯ** = ತಡೆದು, **ಯುಧಿ** = ಯುದ್ಧದಲ್ಲಿ, **ಗಾಂಡಿವಸ್ಯ** = ಗಾಂಡಿವದ, **ಜ್ಯಾಂ ಚ** = ಹಗ್ಗವನ್ನೂ, **ಚಿಚ್ಛೇದ** = ತುಂಡರಿಸಿದ. **ಪಾರ್ಥಂ ಚ** = ಪಾರ್ಥನನ್ನು ಕುರಿತು ಸಹ, **ಶರೈಃ** = ಬಾಣಗಳಿಂದ, **ವವರ್ಷ** = ಮಳೆಗರೆದ. **ಅಥ** = ಆಮೇಲೆ, **ಅನ್ಯಾ** = ಮತ್ತೊಂದು, **ಜ್ಯಾ** = ಜ್ಯಾವು (ಹಗ್ಗವು), **ಆಸೀತ್** = ಮೂಡಿಬಂತು, **ತಯಾ** = ಅದರಿಂದ, **ಸಃ** = ಆ ಅರ್ಜುನನು, **ಗಾಂಡಿವಂ ಅಪಿ** = ಗಾಂಡಿವವನ್ನೂ, **ಅಯುಂಕ್ತ** = ಕೂಡಿಸಿದ.

**ತಾತ್ಪರ್ಯ :-** ಅಶ್ವತ್ಥಾಮ ಅರ್ಜುನನ ಆ ಅಸ್ತ್ರಗಳನ್ನು ಶ್ರೇಷ್ಠವಾದ ಅಸ್ತ್ರಗಳಿಂದ ಪರಿಹರಿಸಿ, ಅವನ ಗಾಂಡೀವ ಧನುಸ್ಸಿನ ಹಗ್ಗವನ್ನು ಕತ್ತರಿಸಿದ. ಅರ್ಜುನನ ಮೇಲೆ ಬಾಣಗಳ ಮಳೆಯನ್ನೂ ಸುರಿಸಿದ. ಕೂಡಲೇ ಗಾಂಡೀವಕ್ಕೆ ಮತೊತಿಂದು ಜ್ಯಾ ಮೂಡಿಬಂತು. ಅರ್ಜುನ ಅದನ್ನು ಗಾಂಡೀವಕ್ಕೆ ಕಟ್ಟಿದ.

### ಸಾರಥಿಯೂ ಆದ ಅಶ್ವತ್ಥಾಮ

**ತತಃ ಶರೇಣ ಕುಪಿತಃ ಶಿತೇನ ದ್ರೌಣಿಸಾರಥೇಃ ।**
**ಶಿರೋ ಜಹಾರ ಕೌಂತೇಯಃ ಸಾರಥ್ಯಂ ಸೋಽಕರೋತ್ ಸ್ವಯಮ್ ॥೫೪॥**

ತತಃ ಶರೇಣ ಕುಪಿತಃ ಶಿತೇನ ದ್ರೌಣಿಸಾರಥೇಃ । ಶಿರಃ ಜಹಾರ ಕೌಂತೇಯಃ ಸಾರಥ್ಯಂ ಸಃ ಅಕರೋತ್ ಸ್ವಯಮ್ ॥ ೫೪ ॥

**ಅರ್ಥ** :– **ತತಃ** = ಬಳಿಕ, **ಕುಪಿತಃ** = ಕೋಪಗೊಂಡ, **ಕೌಂತೇಯಃ** = ಕುಂತೀಪುತ್ರನು, **ಶಿತೇನ** = ಹರಿತವಾದ, **ಶರೇಣ** = ಬಾಣದಿಂದ, **ದ್ರೌಣಿಸಾರಥೇಃ** = ಅಶ್ವತ್ಥಾಮನ ಸಾರಥಿಯ, **ಶಿರಃ** = ತಲೆಯನ್ನು, **ಜಹಾರ** = ಹಾರಿಸಿದ. **ಸಃ** = ಅವನು, **ಸಾರಥ್ಯಂ** = ಸಾರಥ್ಯವನ್ನು, **ಸ್ವಯಂ** = ತನೇ, **ಅಕರೋತ್** = ಮಾಡಿದ.

**ತಾತ್ಪರ್ಯ** :- ಬಳಿಕ ಕ್ರುದ್ಧನಾದ ಅರ್ಜುನ ತೀಕ್ಷ್ಣವಾದ ಬಾಣದಿಂದ ಅಶ್ವತ್ಥಾಮನ ಸಾರಥಿಯ ಶಿರಸ್ಸನ್ನು ಹಾರಿಸಿದ. ಆಗ ಅಶ್ವತ್ಥಾಮ ತಾನೇ ಸಾರಥ್ಯವನ್ನೂ ಮಾಡತೊಡಗಿದ.

### ಮತ್ತೊಮ್ಮೆ ಶರಪಂಜರದಲ್ಲಿ ಅರ್ಜುನ

**ಶರಾನ್ ವಿಸೃಜತಾ ತೇನ ಸಾರಥ್ಯಮಪಿ ಕುರ್ವತಾ ।**
**ಶರಕೂಟೇನ ಪಾರ್ಥಃ ಸ ಪುನರ್ಬದ್ಧೋ ದ್ವಿಜನ್ಮನಾ ॥ ೫೫ ॥**

ಶರಾನ್ ವಿಸೃಜತಾ ತೇನ ಸಾರಥ್ಯಂ ಅಪಿ ಕುರ್ವತಾ । ಶರಕೂಟೇನ ಪಾರ್ಥಃ ಸಃ ಪುನಃ ಬದ್ಧಃ ದ್ವಿಜನ್ಮನಾ ॥ ೫೫ ॥

**ಅರ್ಥ** :– **ಶರಾನ್** = ಬಾಣಗಳನ್ನು, **ವಿಸೃಜತಾ** = ಬಿಡುತ್ತಿದ್ದ, **ಸಾರಥ್ಯಂ ಅಪಿ** = ಸಾರಥ್ಯವನ್ನೂ, **ಕುರ್ವತಾ** = ಮಾಡುತ್ತಿದ, **ತೇನ ದ್ವಿಜನ್ಮನಾ** = ಆ ಬ್ರಾಹ್ಮಣನಿಂದ, **ಸಃ ಪಾರ್ಥಃ** = ಆ ಪಾರ್ಥನು, **ಶರಕೂಟೇನ** = ಬಾಣಗಳ ಸಮೂಹದಿಂದ, **ಪುನಃ** = ಮತ್ತೆ, **ಬದ್ಧಃ (ಅಭೂತ್)** = ಸಿಕ್ಕಿಕೊಂಡ.

**ತಾತ್ಪರ್ಯ** :- ಬಾಣಗಳನ್ನು ಬಿಡುತ್ತಾ, ಸಾರಥ್ಯವನ್ನೂ ಮಾಡುತ್ತಾ, ಅಶ್ವತ್ಥಾಮ ಬಾಣವೃಂದದಿಂದ ಮತ್ತೊಮ್ಮೆ ಅರ್ಜುನನನ್ನು ಬಂಧಿಸಿದ.

### ಕೃಷ್ಣನಿಂದ ಪುನಃ ಅರ್ಜುನನ ಮೋಚನ

**ಪುನರಾಲಿಂಗ್ಯ ಕೃಷ್ಣಸ್ತಮಧಾಚ್ಛತ್ರುವಿಘಾತಕಮ್ ।**
**ಬಲಮಸ್ಮಿಂಸ್ತತಃ ಪಾರ್ಥ ಉತ್ತಸ್ಥೌ ಶರಚಾಪಭೃತ್ ॥ ೫೬ ॥**

**ಪುನಃ ಆಲಿಂಗ್ಯ ಕೃಷ್ಣಃ ತಂ ಅಧಾತ್ ಶತ್ರುವಿಘಾತಕಮ್ । ಬಲಂ ಅಸ್ಮಿನ್ ತತಃ ಪಾರ್ಥಃ ಉತ್ತಸ್ಥೌ ಶರಚಾಪಭೃತ್ ॥ ೫೬ ॥**

**ಅರ್ಥ** :- **ಕೃಷ್ಣಃ** = ಕೃಷ್ಣನು, **ತಂ** = ಅವನನ್ನು, **ಪುನಃ** = ಮತ್ತೆ, **ಆಲಿಂಗ್ಯ** = ಆಲಿಂಗಿಸಿಕೊಂಡು, **ಶತ್ರುವಿಘಾತಕಂ** = ಶತ್ರುವನ್ನು ಸದೆಬಡಿಯುವಂತಹ, **ಬಲಂ** = ಬಲವನ್ನು, **ಅಸ್ಮಿನ್** = ಅವನಲ್ಲಿ, **ಅಧಾತ್** = ಇರಿಸಿದನು. **ತತಃ** = ಬಳಿಕ, **ಶರಚಾಪಭೃತ್** = ಬಾಣ–ಬಿಲ್ಲುಗಳನ್ನು ಧರಿಸಿದವನಾಗಿ, **ಪಾರ್ಥಃ** = ಪಾರ್ಥನು, **ಉತ್ತಸ್ಥೌ** = ಎದ್ದನು.

**ತಾತ್ಪರ್ಯ** :- ಶ್ರೀಕೃಷ್ಣ ಮತ್ತೊಮ್ಮೆ ಅವನನ್ನು ಆಲಿಂಗಿಸಿಕೊಂಡು, ಶತ್ರುವನ್ನು ಸದೆಬಡಿಯುವಂತಹ ಬಲವನ್ನು ಅವನಿಗೆ ನೀಡಿದ; ಬಳಿಕ ಅರ್ಜುನ ಬಂಧನದಿಂದ ಬಿಡುಗಡೆ ಹೊಂದಿ ಬಿಲ್ಲುಬಾಣಗಳನ್ನೆತ್ತಿಕೊಂಡ.

### ಮತ್ತೊಮ್ಮೆ ತುಂಡಾದ ಗಾಂಡೀವ ಜ್ಯಾ

**ವವರ್ಷ ಚ ಶರಾನ್ ಭೂಯೋ ದ್ರೋಣಪುತ್ರೇಽರಿಮರ್ದನಃ ।**
**ಪುನಸ್ತಸ್ಯ ತುತೋದ ಜ್ಯಾಂ ದ್ರೌಣಿಃ ಸಂಧಾಯ ತಾಂ ಪುನಃ ।**
**ಪಾರ್ಥೋ ದ್ರೋಣಸುತಸ್ಯಾಶ್ವರಶ್ಮೀಂಶ್ಚಿಚ್ಛೇದ ಸಾಯಕೈಃ ॥ ೫೭ ॥**

**ವವರ್ಷ ಚ ಶರಾನ್ ಭೂಯಃ ದ್ರೋಣಪುತ್ರೇ ಅರಿಮರ್ದನಃ । ಪುನಃ ತಸ್ಯ ತುತೋದ ಜ್ಯಾಂ ದ್ರೌಣಿಃ ಸಂಧಾಯ ತಾಂ ಪುನಃ । ಪಾರ್ಥಃ ದ್ರೋಣಸುತಸ್ಯ ಅಶ್ವರಶ್ಮೀನ್ ಚಿಚ್ಛೇದ ಸಾಯಕೈಃ ॥ ೫೭ ॥**

**ಅರ್ಥ** :- **ಅರಿಮರ್ದನಃ** = ಶತ್ರುಪೀಡಕನಾದ ಅರ್ಜುನನು = **ದ್ರೋಣಪುತ್ರೇ** = ದ್ರೋಣನ ಮಗನ ಮೇಲೆ, **ಶರಾನ್** = ಬಾಣಗಳನ್ನು, **ಭೂಯಃ** = ಬಹಳವಾಗಿ, **ವವರ್ಷ ಚ** = ಸುರಿಸಿದನೂ ಕೂಡ. **ದ್ರೌಣಿಃ** = ಅಶ್ವತ್ಥಾಮನು, **ಪುನಃ** = ಮತ್ತೆ, **ತಸ್ಯ** = ಅವನ **ಜ್ಯಾಂ** = (ಬಿಲ್ಲಿನ) ಹಗ್ಗವನ್ನು, **ತುತೋದ** = ತುಂಡರಿಸಿದ. **ಪಾರ್ಥಃ** = ಪಾರ್ಥನು, **ತಾಂ** = ಅದನ್ನು, **ಪುನಃ** = ಮತ್ತೆ, **ಸಂಧಾಯ** = ಕಟ್ಟಿಕೊಂಡು, **ದ್ರೋಣಸುತಸ್ಯ** = ದ್ರೋಣಪುತ್ರನ, **ಅಶ್ವರಶ್ಮೀನ್** = ಕುದುರೆಗಳ ಹಗ್ಗಗಳನ್ನು, **ಸಾಯಕೈಃ** = ಬಾಣಗಳಿಂದ, **ಚಿಚ್ಛೇದ** = ಕತ್ತರಿಸಿದ.

ತಾತ್ಪರ್ಯ :- ಶತ್ರುನಾಶಕನಾದ ಅರ್ಜುನ ಪುನಃ ಅಶ್ವತ್ಥಾಮರ ಮೇಲೆ ಬಾಣಗಳನ್ನು ಸುರಿಸತೊಡಗಿದ. ಅಶ್ವತ್ಥಾಮ ಅವನ ಗಾಂಡೀವದ ಹಗ್ಗವನ್ನು ಮತ್ತೊಮ್ಮೆ ತುಂಡರಿಸಿದ. ಅರ್ಜುನ ಅದನ್ನು ಮತ್ತೆ ಕಟ್ಟಿಕೊಂಡು, ಅಶ್ವತ್ಥಾಮನ ಕುದುರೆಗಳ ಹಗ್ಗಗಳನ್ನು ಬಾಣಗಳಿಂದ ಕತ್ತರಿಸಿಹಾಕಿದ.

### ಕೊನೆಗೂ ಸೋತ ಅಶ್ವತ್ಥಾಮ

**ವಿರಶ್ಮಯೋ ಹಯಾ ದ್ರೌಣೇಃ ಪುನಃ ಪಾರ್ಥಶರಾಹತಾಃ ।**
**ಅಪೋಹುರ್ದೂರಮೇತಸ್ಮಾತ್ ಸೋऽಪಿ ಸಂಸ್ಥಾಪ್ಯ ತಾನ್ ಪುನಃ ।**
**ಚಿಂತಯಾಮಾಸ ನೈತಸ್ಮಾದಧಿಕಂ ಶಕ್ಯತೇऽರ್ಜುನೇ ॥ ೫೮ ॥**

**ವಿರಶ್ಮಯಃ ಹಯಾಃ ದ್ರೌಣೇಃ ಪುನಃ ಪಾರ್ಥಶರಾಹತಾಃ । ಅಪೋಹುಃ ದೂರಂ ಏತಸ್ಮಾತ್ ಸಃ ಅಪಿ ಸಂಸ್ಥಾಪ್ಯ ತಾನ್ ಪುನಃ । ಚಿಂತಯಾಮಾಸ ನ ಏತಸ್ಮಾತ್ ಅಧಿಕಂ ಶಕ್ಯತೇ ಅರ್ಜುನೇ ॥ ೫೮ ॥**

**ಅರ್ಥ** :- **ಪಾರ್ಥಶರಾಹತಾಃ** = ಅರ್ಜುನನ ಬಾಣಗಳಿಂದ ಪೀಡಿತವಾದ, **ದ್ರೌಣೇಃ** = ಅಶ್ವತ್ಥಾಮನ, **ವಿರಶ್ಮಯಃ** = ಹಗ್ಗವಿಲ್ಲದಾದ, **ಹಯಾಃ** = ಕುದುರೆಗಳು, **ಪುನಃ** = ಮತ್ತೆ, **ಏತಸ್ಮಾತ್** = ಅವನಿಂದ, **ದೂರಃ** = ದೂರಕ್ಕೆ, **ಅಪೋಹುಃ** = ಓಡಿದವು. **ಸಃ ಅಪಿ** = ಅವನೂ ಸಹ (ಅಶ್ವತ್ಥಾಮನೂ ಸಹ), **ತಾನ್** = ಅವುಗಳನ್ನು, **ಪುನಃ** = ಮತ್ತೆ, **ಸಂಸ್ಥಾಪ್ಯ** = ಸ್ಥಾಪಿಸಿ (ಕಟ್ಟಿ), **ಅರ್ಜುನೇ** = ಅರ್ಜುನನ ಮೇಲೆ, **ಏತಸ್ಮಾತ್** = ಇದಕ್ಕಿಂತ, **ಅಧಿಕಂ** = ಹೆಚ್ಚು, **ನ ಶಕ್ಯತೇ** = ಸಾಧ್ಯವಾಗದು, (ಇತಿ) = ಹೀಗೆಂದು, **ಚಿಂತಯಾಮಾಸ** = ಆಲೋಚಿಸಿದ.

ತಾತ್ಪರ್ಯ :- ಹಗ್ಗವಿಲ್ಲದಾದ ಅಶ್ವತ್ತಾಮರ ಕುದುರೆಗಳು ಮರಳಿ ಅರ್ಜುನನ ಬಾಣಗಳಿಂದ ಪೀಡಿತವಾಗಿ ಅವನಿಂದ ದೂರಕ್ಕೆ ಓಡಿದವು. ಅಶ್ವತ್ತಾಮ ಅವುಗಳನ್ನು ಪುನಃ ನಿಯಂತ್ರಿಸಿ, ಆಲೋಚಿಸಿದ : ''ಅರ್ಜುನನ ಮೇಲೆ ಇದಕ್ಕಿಂತ ಹೆಚ್ಚಿನದು ಸಾಧ್ಯವಾಗದು''.

### ಅರ್ಜುನನ ಗೆಲುವಿನ ಗುಟ್ಟು

**ಸಾರಥಿತ್ವಾತ್ ಕೇಶವಸ್ಯ ಧ್ವಜಸ್ಥತ್ವಾದ್ಧನೂಮತಃ ।**
**ಗಾಂಡಿವತ್ವಾತ್ ಕಾರ್ಮುಕಸ್ಯ ಚೇಷುಧ್ಯೋರಕ್ಷಯತ್ವತಃ ॥ ೫೯ ॥**

**ಅವಧ್ಯತ್ವಾತ್ ತಥಾಽಶ್ವಾನಾಮಭೇದ್ಯತ್ವಾದ್ರಥಸ್ಯ ಚ ।**
**ಅತೋ ಯೋದ್ಧುಂ ಸಮರ್ಥೋಽಪಿ ನಾದ್ಯ ಯಾಮಿ ಧನಂಜಯಮ್ ॥ ೬೦ ॥**

**ಸಾರಥಿತ್ವಾತ್ ಕೇಶವಸ್ಯ ಧ್ವಜಸ್ಥತ್ವಾತ್ ಹನೂಮತಃ । ಗಾಂಡಿವತ್ವಾತ್ ಕಾರ್ಮುಕಸ್ಯ ಚ ಇಷುಧ್ಯೋಃ ಅಕ್ಷಯತ್ವತಃ ॥ ೫೯ ॥**

**ಅವಧ್ಯತ್ವಾತ್ ತಥಾ ಅಶ್ವಾನಾಂ ಅಭೇದ್ಯತ್ವಾತ್ ರಥಸ್ಯ ಚ । ಅತಃ ಯೋದ್ಧುಂ ಸಮರ್ಥಃ ಅಪಿ ನ ಅದ್ಯ ಯಾಮಿ ಧನಂಜಯಮ್ ॥ ೬೦ ॥**

**ಅರ್ಥ** :- **ಕೇಶವಸ್ಯ** = ಕೇಶವನ, **ಸಾರಥಿತ್ವಾತ್** = ಸಾರಥಿತ್ವದಿಂದ, **ಹನೂಮತಃ** = ಹನುಮಂತನ, **ಧ್ವಜಸ್ಥತ್ವಾತ್** = ಧ್ವಜದಲ್ಲಿರುವಿಕೆಯಿಂದ, **ಕಾರ್ಮುಕಸ್ಯ** = ಧನುಸ್ಸು, **ಗಾಂಡಿವತ್ವಾತ್ ಚ** = ಗಾಂಡಿವವಾಗಿರುವುದರಿಂದಲೂ, **ಇಷುಧ್ಯೋಃ** = ಬತ್ತಳಿಕೆಗಳ, **ಅಕ್ಷಯತ್ವತಃ** = ಅಕ್ಷಯತ್ವದಿಂದ, **ತಥಾ** = ಹಾಗೆಯೇ, **ಅಶ್ವಾನಾಂ** = ಕುದುರೆಗಳ, **ಅವಧ್ಯತ್ವಾತ್** = ಸಾವಿಲ್ಲದಿರುವುದರಿಂದ, **ರಥಸ್ಯ** = ರಥದ, **ಅಭೇದ್ಯತ್ವಾತ್ ಚ** = ಅಭೇದ್ಯತ್ವದಿಂದಲೂ, **ಅತಃ** = ಆದ್ದರಿಂದ, **(ಅಹಂ)** = ನಾನು, **ಯೋದ್ಧುಂ** = ಯುದ್ಧಮಾಡಲು, **ಸಮರ್ಥಃ ಅಪಿ** = ಸಮರ್ಥನಾದರೂ ಸಹ, **ಅದ್ಯ** = ಈಗ, **ಧನಂಜಯಂ** = ಅರ್ಜುನನನ್ನು ಕುರಿತು, **ನ ಯಾಮಿ** = ನಾನು (ಎದುರಿಸಿ) ಹೋಗಲಾರೆ.

**ತಾತ್ಪರ್ಯ** :- ಕೃಷ್ಣನು ಸಾರಥಿಯಾಗಿರುವನು; ಹನುಮಂತ ಧ್ವಜದಲ್ಲಿರುವನು; ಗಾಂಡೀವ ಧನುಸ್ಸಾಗಿರುವುದು; ಬತ್ತಳಿಕೆಗಳು ಅಕ್ಷಯವಾಗಿರುವವು; ಅದರಂತೆ ಅಶ್ವಗಳೂ ಅವಧ್ಯವಾಗಿರುವವು; ರಥವೂ ಅಭೇದ್ಯವಾದುದು. ಆದ್ದರಿಂದ ನಾನು ಹೋರಾಡಲು ಸಮರ್ಥನಾಗಿದ್ದರೂ, ನಾನೀಗ ಅರ್ಜುನನ ಮೇಲೆ ಹೋರಾಡಲು ತೆರಳೆನು''

### ಪಾಂಡ್ಯ ಅಶ್ವತ್ಥಾಮರ ಯುದ್ಧ

**ಏವಂ ಸ ಮತ್ವಾ ಪ್ರವಿವೇಶ ಸೇನಾಂ**
**ಪಾಂಡೋಃ ಸುತಾನಾಮಥ ತಂ ಸಮಭ್ಯಯಾತ್ ।**
**ಪಾಂಡ್ಯಸ್ತಯೋರಾಸ ಸುಯುದ್ಧಮದ್ಭುತಂ**
**ಪ್ರವರ್ಷತೋಃ ಸಾಯಕಪೂಗಮುಗ್ರಮ್ ॥ ೬೧ ॥**

ಏವಂ ಸಃ ಮತ್ವಾ ಪ್ರವಿವೇಶ ಸೇನಾಂ ಪಾಂಡೋಃ ಸುತಾನಾಂ ಅಥ ತಂ ಸಮಭ್ಯಯಾತ್ । ಪಾಂಡ್ಯಃ ತಯೋಃ ಆಸ ಸುಯುದ್ಧಂ ಅದ್ಭುತಂ ಪ್ರವರ್ಷತೋಃ ಸಾಯಕಪೂಗಂ ಉಗ್ರಮ್ ॥ ೬೦ ॥

**ಅರ್ಥ** :- **ಏವಂ** = ಹೀಗೆ, **ಮತ್ವಾ** = ತಿಳಿದು, **ಸಃ** = ಆ ಅಶ್ವತ್ಥಾಮನು, **ಪಾಂಡೋಃ** = ಪಾಂಡುವಿನ, **ಸುತಾನಾಂ** = ಪುತ್ರರ, **ಸೇನಾಂ** = ಸೇನೆಯನ್ನು, **ಪ್ರವಿವೇಶ** = ಪ್ರವೇಶಿಸಿದ. **ಅಥ** = ಬಳಿಕ, **ತಂ** = ಅವನನ್ನು, **ಪಾಂಡ್ಯಃ** = ಪಾಂಡ್ಯರಾಜನು, **ಸಮಭ್ಯಯಾತ್** = ಎದುರಿಸಿಬಂದ. **ಉಗ್ರಂ** = ಉಗ್ರವಾದ, **ಸಾಯಕಪೂಗಮ್** = ಬಾಣಸಮೂಹವನ್ನು, **ಪ್ರವರ್ಷತೋಃ** = ಮಳೆಗರೆಯುತ್ತಿದ್ದ, **ತಯೋಃ** = ಅವರಿಬ್ಬರಲ್ಲಿ, **ಅದ್ಭುತಂ** = ಅದ್ಭುತವಾದ, **ಸುಯುದ್ಧಂ** = ಘೋರಯುದ್ಧವು, **ಆಸ** = ಆಯಿತು.

**ತಾತ್ಪರ್ಯ** :- ಹೀಗೆ ಆಲೋಚಿಸಿ, ಅಶ್ವತ್ಥಾಮ ಪಾಂಡವರ ಸೇನೆಯನ್ನು ಪ್ರವೇಶಿಸಿದ. ಅವನನ್ನು ಎದುರಿಸಿ ಪಾಂಡ್ಯದೇಶದ ರಾಜ ಬಂದ. ಅವರಿಬ್ಬರಿಗೂ ಅದ್ಭುತವಾದ ಮಹಾಯುದ್ಧ ನಡೆಯಿತು. ಇಬ್ಬರೂ ಉಗ್ರವಾದ ಬಾಣಸಮೂಹವನ್ನು ಸುರಿಸಿದರು.

### ಅಶ್ವತ್ಥಾಮನಿಂದ ಪಾಂಡ್ಯನ ವಧೆ

**ಅಷ್ಟಾವಷ್ಟಶತಾನ್ಯೂಹುಃ ಶಕಟಾನಿ ಯದಾಯುಧಮ್ ।**
**ಅಹ್ನಸ್ತದಷ್ಟಭಾಗೇನ ದ್ರೌಣಿಶ್ಚಿಕ್ಷೇಪ ತತ್ರ ಹ ॥ ೬೨ ॥**

ಅಷ್ಟೌ ಅಷ್ಟಶತಾನಿ ಊಹುಃ ಶಕಟಾನಿ ಯತ್ ಆಯುಧಮ್ । ಅಹ್ನಃ ತತ್ ಅಷ್ಟಭಾಗೇನ ದ್ರೌಣಿಃ ಚಿಕ್ಷೇಪ ತತ್ರ ಹ ॥ ೬೨ ॥

**ಅರ್ಥ** :- **ಅಷ್ಟೌ** = ಎಂಟು, **ಅಷ್ಟಶತಾನಿ** = ಎಂಟುನೂರು, **ಶಕಟಾನಿ** = ಬಂಡಿಗಳು, **ಯತ್** = ಯಾವ, **ಆಯುಧಂ(ಆಯುಧಾನಿ)** = ಆಯುಧಗಳನ್ನು, **ಊಹುಃ** = ಹೊತ್ತವೋ, **ತತ್** = ಅಷ್ಟನ್ನು (ಅಷ್ಟು ಆಯುಧಗಳನ್ನು), **ದ್ರೌಣಿಃ** = ದ್ರೋಣಪುತ್ರನಾದ ಅಶ್ವತ್ಥಾಮನು, **ಅಹ್ನಃ** = ಹಗಲಿನ, **ಅಷ್ಟಭಾಗೇನ** = ಎಂಟನೆಯ ಒಂದು ಭಾಗದಲ್ಲಿ, **ತತ್ರ** = ಆ ಯುದ್ಧದಲ್ಲಿ, **ಚಿಕ್ಷೇಪ** = ಎಸೆದ, **ಹ** = ಆಶ್ಚರ್ಯ.

**ತಾತ್ಪರ್ಯ** :- ಎಂಟು ಎಂಟುನೂರು ಬಂಡಿಗಳು ಹೊರಬಲ್ಲ ಆಯುಧಗಳನ್ನು ಅಶ್ವತ್ಥಾಮ ಹಗಲಿನ ಎಂಟನೆಯ ಒಂದು ಭಾಗದಷ್ಟು ಕಾಲದಲ್ಲಿ ಪ್ರಯೋಗಿಸಿದ.

### ಅರ್ಜುನನಿಂದ ದಂಡಧಾರನ ವಧೆ

**ಅಥ ತಂ ವಿರಥಂ ಕೃತ್ವಾ ಛಿತ್ವಾ ಕಾರ್ಮುಕಮಾಹವೇ ।**
**ಸಕುಂಡಲಂ ಶಿರೋ ದ್ರೌಣಿರ್ಜಹಾರ ಮಕುಟೋಜ್ಜ್ವಲಮ್ ॥ ೬೩ ॥**

**ಅಥ ತಂ ವಿರಥಂ ಕೃತ್ವಾ ಛಿತ್ವಾ ಕಾರ್ಮುಕಂ ಆಹವೇ । ಸಕುಂಡಲಂ ಶಿರಃ ದ್ರೌಣಿಃ ಜಹಾರ ಮಕುಟೋಜ್ಜ್ವಲಮ್ ॥ ೬೩ ॥**

**ಅರ್ಥ** :- **ಅಥ** = ಬಳಿಕ, **ದ್ರೌಣಿಃ** = ಅಶ್ವತ್ಥಾಮನು, **ತಂ** = ಅವನನ್ನು, **ಆಹವೇ** = ಯುದ್ಧದಲ್ಲಿ, **ವಿರಥಂ** = ರಥವಿಲ್ಲದವನನ್ನಾಗಿ, **ಕೃತ್ವಾ** = ಮಾಡಿ, **ಕಾರ್ಮುಕಂ** = ಬಿಲ್ಲನ್ನು, **ಛಿತಾ ್ವ** = ಕತ್ತರಿಸಿ, **ಮಕುಟೋಜ್ಜ್ವಲಂ** = ಕಿರೀಟದಿಂದ ಶೋಭಿತವಾದ, **ಸಕುಂಡಲಂ** = ಕುಂಡಲಸಮೇತವಾದ, **ಶಿರಃ** = ಶಿರಸ್ಸನ್ನು, **ಜಹಾರ** = ಹಾರಿಸಿದ.

**ತಾತ್ಪರ್ಯ** :- ಬಳಿಕ ಅವನನ್ನು ಯುದ್ಧದಲ್ಲಿ ವಿರಥನನ್ನಾಗಿ ಮಾಡಿ, ಬಿಲ್ಲನ್ನು ಕತ್ತರಿಸಿ, ಅವನ ಕುಂಡಲ- ಸಮೇತವಾದ ಕಿರೀಟಶೋಭಿತವಾದ ಶಿರಸ್ಸನ್ನು ಅಶ್ವತ್ಥಾಮ ಕತ್ತರಿಸಿದ.

### ಅಶ್ವತ್ಥಾಮ ಧೃಷ್ಟದ್ಯುಮ್ನರ ಯುದ್ಧ

**ಅಥ ವಿದ್ರಾವಯಾಮಾಸ ಪೃತನಾಂ ಪಾಂಡವೀಂ ಶರೈಃ ।**
**ತದಾ ಜಘಾನ ಪಾರ್ಥೋಽಪಿ ದಂಡಧಾರಾಖ್ಯಮಾಗಧಮ್ ॥ ೬೪ ॥**

**ಅಥ ವಿದ್ರಾವಯಾಮಾಸ ಪೃತನಾಂ ಪಾಂಡವೀಂ ಶರೈಃ । ತದಾ ಜಘಾನ ಪಾರ್ಥಃ ಅಪಿ ದಂಡಧಾರಾಖ್ಯಮಾಗಧಮ್ ॥ ೬೪ ॥**

**ಅರ್ಥ** :- **ಅಥ** = ಬಳಿಕ, **ಪಾಂಡವೀಂ** = ಪಾಂಡವರಿಗೆ ಸಂಬಂಧಿಸಿದ, **ಪೃತನಾಂ** = ಸೇನೆಯನ್ನು, **ಶರೈಃ** = ಬಾಣಗಳಿಂದ, **ವಿದ್ರಾವಯಾಮಾಸ** = ಹೊಡೆದೋಡಿಸಿದ. **ತದಾ** = ಆಗ **ಪಾರ್ಥಃ**

ಅಪಿ = ಅರ್ಜುನನೂ ಸಹ, **ದಂಡಧಾರಾಖ್ಯಮಾಗಧಂ** = ದಂಡಧಾರ ಎಂಬ ಹೆಸರಿನ ಮಗಧದೇಶದವನನ್ನು, **ಜಘಾನ** = ಕೊಂದ.

**ತಾತ್ಪರ್ಯ** :- ಬಳಿಕ ಅಶ್ವತ್ಥಾಮ ಪಾಂಡವಸೇನೆಯನ್ನು ಬಾಣಗಳಿಂದ ಹೊಡೆದೋಡಿಸತೊಡಗಿದ. ಆಗ ಅರ್ಜುನನು ದಂಡಧಾರ ಎಂಬ ಮಗಧದೇಶದ ದೊರೆಯನ್ನು ಕೊಂದುಹಾಕಿದ.

**ವಿದ್ರಾವ್ಯಮಾಣಾಂ ಪೃತನಾಂ ನಿರೀಕ್ಷ್ಯ**
**ಗುರೋಃ ಸುತೇನಾಭ್ಯಗಮತ್ ತ್ವರಾವಾನ್ ।**
**ಧೃಷ್ಟದ್ಯುಮ್ನಸ್ತಂ ಸ ಊಚೇ ಸುಪಾಪಂ**
**ಹನಿಷ್ಯೇ ತ್ವಾಮದ್ಯ ಯುದ್ಧೇ ಗುರುಘ್ನಮ್ ॥ ೬೫ ॥**

**ವಿದ್ರಾವ್ಯಮಾಣಾಂ ಪೃತನಾಂ ನಿರೀಕ್ಷ್ಯ ಗುರೋಃ ಸುತೇನ ಅಭ್ಯಗಮತ್ ತ್ವರಾವಾನ್ । ಧೃಷ್ಟದ್ಯುಮ್ನಃ ತಂ ಸಃ ಊಚೇ ಸುಪಾಪಂ ಹನಿಷ್ಯೇ ತ್ವಾಂ ಅದ್ಯ ಯುದ್ಧೇ ಗುರುಘ್ನಮ್ ॥ ೬೫ ॥**

**ಅರ್ಥ** :- **ಗುರೋಃ** = ಗುರುವಿನ, **ಸತೇನ** = ಸುತನಾದ ಅಶ್ವತ್ಥಾಮನಿಂದ, **ವಿದ್ರಾವ್ಯಮಾಣಾಂ** = ಹೊಡೆದೋಡಿಸಲ್ಪಡುತ್ತಿದ್ದ, **ಪೃತನಾಂ** = ಸೇನೆಯನ್ನು, **ನಿರೀಕ್ಷ್ಯ** = ಕಂಡು, **ತ್ವರಾವಾನ್** = ತ್ವರೆಯಿಂದ ಕೂಡಿದ, **ಧೃಷ್ಟದ್ಯುಮ್ನಃ** = ಧೃಷ್ಟದ್ಯುಮ್ನನು, **ಅಭ್ಯಗಮತ್** = ಎದುರು ಬಂದ. **ಸಃ** = ಅವನು, **ಗುರುಘ್ನಂ** = ಗುರುವನ್ನು ಕೊಂದ, **ಸುಪಾಪಂ** = ಮಹಾಪಾಪಿಯಾದ, **ತ್ವಾಂ** = ನಿನ್ನನ್ನು, **ಅದ್ಯ** = ಇಂದು, **ಯುದ್ಧೇ** = ಯುದ್ಧದಲ್ಲಿ, **ಹನಿಷ್ಯೇ** = ಕೊಂದುಹಾಕುವೆ, (ಇತಿ) = ಹೀಗೆಂದು, **ತಂ** = ಅವನನ್ನು ಕುರಿತು, **ಊಚೇ** = ಹೇಳಿದ.

**ತಾತ್ಪರ್ಯ** :- ತಮ್ಮ ಸೇನೆ ಅಶ್ವತ್ಥಾಮನಿಂದ ಹೊಡೆದೋಡಿಸಲ್ಪಡುತ್ತಿದ್ದುದನ್ನು ಕಂಡು, ಧೃಷ್ಟದ್ಯುಮ್ನ ತ್ವರೆಯಿಂದ ಆಗಮಿಸಿದ. ಅಶ್ವತ್ಥಾಮ ಅವನಿಗೆ ನುಡಿದ : ''ಗುರುಹತ್ಯೆ ಮಾಡಿದ ಮಹಾಪಾಪಿಯಾದ ನಿನ್ನನ್ನು ಈಗ ಯುದ್ಧದಲ್ಲಿ ಕೊಂದುಹಾಕುವೆ''.

**ಇತ್ಯುಕ್ತೋ ದರ್ಶಯಾಮಾಸ ಪಾರ್ಷತಃ ಖಡ್ಗಮುತ್ತಮಮ್ ।**
**ಅಯಂ ತವ ಪಿತುರ್ಹಂತಾ ವದಿಷ್ಯತಿ ತವೋತ್ತರಮ್ ॥ ೬೬ ॥**

**ಇತಿ ಉಕ್ತಃ ದರ್ಶಯಾಮಾಸ ಪಾರ್ಷತಃ ಖಡ್ಗಂ ಉತ್ತಮಮ್ । ಅಯಂ ತವ ಪಿತುಃ ಹಂತಾ ವದಿಷ್ಯತಿ ತವ ಉತ್ತರಮ್ ॥ ೬೬ ॥**

**ಅರ್ಥ** :- **ಇತಿ** = ಹೀಗೆಂದು, **ಉಕ್ತಃ** = ಹೇಳಲ್ಪಟ್ಟ, **ಪಾರ್ಷತಃ** = ಧೃಷ್ಟದ್ಯುಮ್ನನು, **ಉತ್ತಮಂ** = ಉತ್ತಮವಾದ, **ಖಡ್ಗಂ** = ಖಡ್ಗವನ್ನು, **ದರ್ಶಯಾಮಾಸ** = ತೋರಿಸಿದ, **ತವ** = ನಿನ್ನ, **ಪಿತುಃ** = ತಂದೆಯ, **ಹಂತಾ** = ಕೊಂದ, **ಅಯಂ** = ಇದು (ಈ ಖಡ್ಗವು), **ತವ** = ನಿನಗೆ, **ಉತ್ತರಂ** = ಉತ್ತರವನ್ನು, **ವದಿಷ್ಯತಿ** = ನುಡಿಯಲಿದೆ.

**ತಾತ್ಪರ್ಯ** :- ಅಶ್ವತ್ಥಾಮ ಹೀಗೆನ್ನಲು ಧೃಷ್ಟದ್ಯುಮ್ನ ತನ್ನ ಉತ್ತಮವಾದ ಖಡ್ಗವನ್ನು ತೋರಿಸಿದ. ''ನಿನ್ನ ತಂದೆಯನ್ನು ಕೊಂದಿರುವ ಈ ಖಡ್ಗ ನಿನಗೆ ಉತ್ತರ ನೀಡುವುದು''.

**ಇತ್ಯುಕ್ತ್ವಾ ಧನುರಾದಾಯ ವವರ್ಷ ಚ ಶರಾನ್ ಬಹೂನ್ ।**
**ತಯೋಃ ಸಮಭವದ್ಯುದ್ಧಂ ತುಮುಲಂ ರೋಮಹರ್ಷಣಮ್ ॥ ೬೭ ॥**

**ಇತಿ ಉಕ್ತ್ವಾ ಧನುಃ ಆದಾಯ ವವರ್ಷ ಚ ಶರಾನ್ ಬಹೂನ್ । ತಯೋಃ ಸಮಭವತ್ ಯುದ್ಧಂ ತುಮುಲಂ ರೋಮಹರ್ಷಣಮ್ ॥ ೬೭ ॥**

**ಅರ್ಥ** :- **ಇತಿ** = ಹೀಗೆಂದು, **ಉಕ್ತ್ವಾ** = ಹೇಳಿ, **ಧನುಃ** = ಧನುಸ್ಸನ್ನು, **ಆದಾಯ** = ತೆಗೆದುಕೊಂಡು, **ಬಹೂನ್** = ಬಹಳವಾದ, **ಶರಾನ್ ಚ** = ಬಾಣಗಳನ್ನು ಸಹ, **ವವರ್ಷ** = ಮಳೆಗರೆದ. **ತಯೋಃ** = ಅವರಿಬ್ಬರ ನಡುವೆ, **ತುಮುಲಂ** = ಘೋರವಾದ, **ರೋಮಹರ್ಷಂ** = ರೋಮಹರ್ಷಕವಾದ, **ಯುದ್ಧಂ** = ಯುದ್ಧವು, **ಸಮಭವತ್** = ನಡೆಯಿತು.

**ತಾತ್ಪರ್ಯ** :- ಧೃಷ್ಟದ್ಯುಮ್ನ ಹೀಗೆ ನುಡಿದು, ಧನುಸ್ಸನ್ನು ತೆಗೆದುಕೊಂಡು, ಅನೇಕ ಬಾಣಗಳ ಮಳೆಗರೆದ. ಅವರಿಬ್ಬರ ಮಧ್ಯೆ ರೋಮಹರ್ಷಕವಾದ ದ್ವಂದ್ವಯುದ್ಧ ಸಮವಾಗಿಯೇ ನಡೆಯಿತು.

ವಿರಥನಾದ ಧೃಷ್ಟದ್ಯುಮ್ನ

**ತತ್ರ ತಂ ಪಾರ್ಷತಂ ದ್ರೌಣಿಃ ಕ್ಷಣೇನ ವಿರಥಾಯುಧಮ್ ।**
**ಕೃತ್ವಾಽಂತಾಯ ಶರಾಂಸ್ತೀಕ್ಷ್ಣಾನ್ ಮುಮೋಚ ನ ಚ ತಸ್ಯ ತೇ ।**
**ತ್ವಚಂ ಚ ಚಿಚ್ಛಿದುರ್ದ್ರೌಣೇಃ ಖಡ್ಗಹಸ್ತೋಽಭಿಜಗ್ಮಿವಾನ್ ॥ ೬೮ ॥**

**ಖಡ್ಗೇನ ಸಾಸ್ತ್ರೈಃ ಶಸ್ತ್ರೈರಪ್ಯನಿರ್ಭಿಣ್ಣತ್ವಚಂ ತದಾ ।**
**ಮೌರ್ವ್ಯಾ ಮಮಂಥ ಧನುಷಃ ಪಾತಯಿತ್ವಾ ಧರಾತಲೇ ॥ ೬೯ ॥**

ತತ್ರ ತಂ ಪಾರ್ಷತಂ ದ್ರೌಣಿಃ ಕ್ಷಣೇನ ವಿರಥಾಯುಧಮ್ । ಕೃತ್ವಾ ಅಂತಾಯ ಶರಾನ್ ತೀಕ್ಷ್ಣಾನ್ ಮುಮೋಚ ನ ಚ ತಸ್ಯ ತೇ । ತ್ವಚಂ ಚ ಚಿಚ್ಛಿದುಃ ದ್ರೌಣೇಃ ಖಡ್ಗಹಸ್ತಃ ಅಭಿಜಗ್ಮಿವಾನ್ ॥ ೬೮ ॥

ಖಡ್ಗೇನ ಸಾಸ್ತ್ರೈಃ ಶಸ್ತ್ರೈಃ ಅಪಿ ಅನಿರ್ಭಿಣ್ಣತ್ವಚಂ ತದಾ । ಮೌರ್ವ್ಯಾ ಮಮಂಥ ಧನುಷಃ ಪಾತಯಿತ್ವಾ ಧರಾತಲೇ ॥ ೬೯ ॥

**ಅರ್ಥ** :- **ತತ್ರ** = ಆ ಯುದ್ಧದಲ್ಲಿ, **ದ್ರೌಣಿಃ** = ದ್ರೋಣಪುತ್ರನಾದ ಅಶ್ವತ್ಥಾಮನು, **ತಂ ಪಾರ್ಷತಂ** = ಆ ಧೃಷ್ಟದ್ಯುಮ್ನನನ್ನು, **ಕ್ಷಣೇನ** = ಕ್ಷಣದಲ್ಲೇ, **ವಿರಥಾಯುಧಂ** = ರಥ ಆಯುಧಗಳನ್ನು ಕಳೆದುಕೊಂಡವನನ್ನಾಗಿ, **ಕೃತ್ವಾ** = ಮಾಡಿ, **ಅಂತಾಯ** = ಕೊಲ್ಲಲೆಂದು, **ತೀಕ್ಷ್ಣಾನ್** = ಹರಿತವಾದ, **ಶರಾನ್ ಚ** = ಬಾಣಗಳನ್ನೂ ಸಹ, **ಮುಮೋಚ** = ಬಿಟ್ಟನು. **ತೇ** = ಅವುಗಳು, **ತಸ್ಯ** = ಅವನ, **ತ್ವಚಂ ಚ** = ಚರ್ಮವನ್ನೂ, **ನ ಚಿಚ್ಛಿದುಃ** = ಕತ್ತರಿಸಲಿಲ್ಲ, (**ತದಾ**) = ಆಗ, **ಖಡ್ಗಹಸ್ತಃ** = ಖಡ್ಗಹಸ್ತನಾದ, **ದ್ರೌಣೇಃ** = ಅಶ್ವತ್ಥಾಮನು, **ಅಭಿಜಗ್ಮಿವಾನ್** = ಎದುರಿಸಿಬಂದ. **ತದಾ** = ಆಗ, **ಖಡ್ಗೇನ** = ಖಡ್ಗದಿಂದ, **ಸಾಸ್ತ್ರೈಃ ಶಸ್ತ್ರೈಃ ಅಪಿ** = ಅಸ್ತ್ರಸಹಿತವಾದ ಶಸ್ತ್ರಗಳಿಂದಲೂ ಸಹ, **ಅನಿರ್ಭಿಣ್ಣತ್ವಚಂ** = ಕುಂದದ ಚರ್ಮದವನಾದ, (**ಪಾರ್ಷತಂ**) = ಧೃಷ್ಟದ್ಯುಮ್ನನನ್ನು, **ಧರಾತಲೇ** = ಭೂಮಿಯ ಮೇಲೆ, **ಪಾತಯಿತ್ವಾ** = ಕೆಡವಿ, **ಧನುಷಃ** = ಬಿಲ್ಲಿನ, **ಮೌರ್ವ್ಯಾ** = ಹಗ್ಗದಿಂದ, **ಮಮಂಥ** = ಸೆಳೆದ.

**ತಾತ್ಪರ್ಯ** :- ಅಶ್ವತ್ಥಾಮ ಧೃಷ್ಟದ್ಯುಮ್ನನನ್ನು ಕ್ಷಣದಲ್ಲೇ ವಿರಥನನ್ನಾಗಿಯೂ, ಆಯುಧಹೀನನನ್ನಾಗಿಯೂ ಮಾಡಿ, ಅವನನ್ನು ಕೊಲ್ಲಲೆಂದು ಹರಿತವಾದ ಬಾಣಗಳನ್ನು ಪ್ರಯೋಗಿಸಿದ. ಆದರೆ ಅವು ಅವನ

ಚರ್ಮವನ್ನೂ ಸಹ ಕತ್ತರಿಸದಾದವು. ಅಶ್ವತ್ಥಾಮ ಖಡ್ಗವನ್ನು ಕೈಗೆತ್ತಿಕೊಂಡು ಅವನ ಮೇಲೆ ನುಗ್ಗಿದ. ಖಡ್ಗದಿಂದಲೂ, ಅಸ್ತ್ರಶಸ್ತ್ರಗಳಿಂದಲೂ ಅವನ ಚರ್ಮವೂ ಸಹ ಗಾಯಗೊಳ್ಳಲಿಲ್ಲ. ಆಗ ಅವನನ್ನು ನೆಲಕ್ಕೆ ಕೆಡವಿ, ಬಿಲ್ಲಿನ ಹಗ್ಗದಿಂದ ಸೆಳೆಯತೊಡಗಿದ.

### ಭೀಮಾರ್ಜುನರಿಂದ ಧೃಷ್ಟದ್ಯುಮ್ನನ ರಕ್ಷಣೆ

**ಆಕೃಷ್ಯಮಾಣಂ ಪಾರ್ಷತಂ ದೃಷ್ಟ್ವಾ ಕೃಷ್ಣಪ್ರಚೋದಿತಃ ।**
**ಪಾರ್ಥೋ ಭೀಮಶ್ಚೋಭಯತಃ ಶರೈರಭಿನಿಜಘ್ನತುಃ ॥ ೭೦ ॥**

**ಆಕೃಷ್ಯಮಾಣಂ ಪಾರ್ಷತಂ ದೃಷ್ಟ್ವಾ ಕೃಷ್ಣಪ್ರಚೋದಿತಃ । ಪಾರ್ಥಃ ಭೀಮಶ್ಚ ಉಭಯತಃ ಶರೈಃ ಅಭಿನಿಜಘ್ನತುಃ ॥ ೭೦ ॥**

**ಅರ್ಥ** :- **ಕೃಷ್ಣಪ್ರಚೋದಿತಃ** = ಕೃಷ್ಣನಿಂದ ಪ್ರಚೋದಿತನಾದ, **ಪಾರ್ಥಃ** = ಅರ್ಜುನನು, **ಭೀಮಃ ಚ** = ಮತ್ತು ಭೀಮನು, **ಆಕೃಷ್ಯ ಮಾಣಂ** = ಸೆಳೆದಾಡಲ್ಪಡುತ್ತಿದ್ದ, **ಪಾರ್ಷತಂ** = ಧೃಷ್ಟದ್ಯುಮ್ನನನ್ನು, **ದೃಷ್ಟ್ವಾ** = ನೋಡಿ, **ಉಭಯತಃ** = ಇಕ್ಕೆಲಗಳಿಂದಲೂ, **ಶರೈಃ** = ಬಾಣಗಳಿಂದ, **ಅಭಿಜಘ್ನತುಃ** = ಹೊಡೆಯತೊಡಗಿದರು.

**ತಾತ್ಪರ್ಯ** :- ಹಾಗೆ ಸೆಳೆದಾಡಲ್ಪಡುತ್ತಿದ್ದ ಧೃಷ್ಟದ್ಯುಮ್ನನನ್ನು ನೋಡಿ, ಕೃಷ್ಣಪ್ರೇರಿತನಾದ ಅರ್ಜುನನೂ, ಭೀಮನೂ ಇಕ್ಕೆಲಗಳಿಂದಲೂ ಬಾಣಗಳಿಂದ ಹೊಡೆಯತೊಡಗಿದರು.

**ಸ ತಾಭ್ಯಾಂ ವಜ್ರಸದೃಶೈಃ ಶರೈರಭಿಹತೋ ಭೃಶಮ್ ।**
**ವಿಸೃಜ್ಯ ಪಾರ್ಷತಂ ಸ್ವೀಯಮಾರುರೋಹ ರಥಂ ಪುನಃ ॥ ೭೧ ॥**

**ಸಃ ತಾಭ್ಯಾಂ ವಜ್ರಸದೃಶೈಃ ಶರೈಃ ಅಭಿಹತಃ ಭೃಶಮ್ । ವಿಸೃಜ್ಯ ಪಾರ್ಷತಂ ಸ್ವೀಯಂ ಆರುರೋಹ ರಥಂ ಪುನಃ ॥ ೭೧ ॥**

**ಅರ್ಥ** :- **ವಜ್ರಸದೃಶೈಃ** = ವಜ್ರಸಮಾನವಾದ, **ಶರೈಃ** = ಬಾಣಗಳಿಂದ, **ತಾಭ್ಯಾಂ** = ಅವರಿಬ್ಬರಿಂದ, **ಭೃಶಂ** = ಬಹಳವಾಗಿ, **ಅಭಿಹತಃ** = ಹೊಡೆಯಲ್ಪಟ್ಟ, **ಸಃ** = ಅವನು (ಅಶ್ವತ್ಥಾಮನು), **ಪಾರ್ಷತಂ**

= ಧೃಷ್ಟದ್ಯುಮ್ನನನ್ನು, **ವಿಸೃಜ್ಯ** = ಬಿಟ್ಟು, **ಸ್ವೀಯಂ** = ತನ್ನ, **ರಥಂ** = ರಥವನ್ನು, **ಪುನಃ** = ಮತ್ತೆ, **ಆರುರೋಹ** = ಏರಿದ.

**ತಾತ್ಪರ್ಯ** :- ವಜ್ರಸದೃಶವಾದ ಬಾಣಗಳಿಂದ ಅವರಿಬ್ಬರಿಂದ ಬಹಳವಾಗಿ ಹೊಡೆಯಲ್ಪಟ್ಟ ಅಶ್ವತ್ಥಾಮ ಧೃಷ್ಟದ್ಯುಮ್ನನನ್ನು ಬಿಟ್ಟು, ಮತ್ತೆ ತನ್ನ ರಥವನ್ನು ಏರಿದ.

### ಕೃತವರ್ಮ ಧೃಷ್ಟದ್ಯುಮ್ನರ ಯುದ್ಧ

**ಜಗಾಮ ಚ ತತೋಽನ್ಯತ್ರ ಪಾಂಚಾಲ್ಯೋಽಪಿ ರಥಂ ಪುನಃ ।**
**ಆರುಹ್ಯಾನ್ಯಂ ಸ್ವಾತ್ತಧನ್ವಾ ಕೃತವರ್ಮಾಣಮಭ್ಯಯಾತ್ ॥ ೭೨ ॥**

ಜಗಾಮ ಚ ತತಃ ಅನ್ಯತ್ರ, ಪಾಂಚಾಲ್ಯಃ ಅಪಿ ರಥಂ ಪುನಃ । ಆರುಹ್ಯ ಅನ್ಯಂ ಸ್ವಾತ್ತಧನ್ವಾ ಕೃತವರ್ಮಾಣಂ ಅಭ್ಯಯಾತ್ ॥ ೭೨ ॥

**ಅರ್ಥ** :- **ತತಃ** = ಬಳಿಕ, **ಅನ್ಯತ್ರ** = ಬೇರೆಡೆಗೆ, **ಜಗಾಮ ಚ** = ತೆರಳಿದ ಸಹ. **ಪಾಂಚಾಲ್ಯಃ ಅಪಿ** = ಧೃಷ್ಟದ್ಯುಮ್ನನು ಸಹ, **ಪುನಃ** = ಮತ್ತೆ, **ಅನ್ಯಂ** = ಬೇರೆ, **ರಥಂ** = ರಥವನ್ನು, **ಆರುಹ್ಯ** = ಏರಿ, **ಸ್ವಾತ್ತಧನ್ವಾ (ಸನ್)** = ಚೆನ್ನಾಗಿ ಧನುಸ್ಸನ್ನು ತೆಗೆದುಕೊಂಡವನಾಗಿ, **ಕೃತವರ್ಮಾಣಂ** = ಕೃತವರ್ಮನನ್ನು ಕುರಿತು, **ಅಭ್ಯಯಾತ್** = ಸಾಗಿದ.

**ತಾತ್ಪರ್ಯ** :- ಅಶ್ವತ್ಥಾಮ ಹಾಗೆ ರಥವೇರಿದ ಮೇಲೆ ಬೇರೆಡೆಗೆ ನಡೆದ. ಧೃಷ್ಟದ್ಯುಮ್ನನೂ ಮತ್ತೆ ಬೇರೊಂದು ರಥವನ್ನೇರಿ, ತನ್ನ ಧನುಸ್ಸನ್ನೆತ್ತಿಕೊಂಡು ಕೃತವರ್ಮನ ಮೇಲೆ ಸಾಗಿದ.

### ಕೃತವರ್ಮನ ಪರಾಭವ

**ತಯೋರಾಸೀತ್ ಸುತುಮುಲಂ ಯುದ್ಧಮದ್ಭುತದರ್ಶನಮ್ ।**
**ತತ್ರ ನಾತಿಪ್ರಯತ್ನೇನ ಪಾಂಚಾಲ್ಯೋ ವಿರಥಾಯುಧಮ್ ।**
**ಚಕಾರ ಕೃತವರ್ಮಾಣಂ ತಮಪೋವಾಹ ಗೌತಮಃ ॥ ೭೩ ॥**

ತಯೋಃ ಆಸೀತ್ ಸುತುಮುಲಂ ಯುದ್ಧಂ ಅದ್ಭುತದರ್ಶನಮ್ । ತತ್ರ ನಾತಿಪ್ರಯತ್ನೇನ ಪಾಂಚಾಲ್ಯಃ ವಿರಥಾಯುಧಮ್ । ಚಕಾರ ಕೃತವರ್ಮಾಣಂ ತಂ ಅಪೋವಾಹ ಗೌತಮಃ ॥ ೭೩ ॥

**ಅರ್ಥ** :- **ತಯೋಃ** = ಅವರಿಬ್ಬರ (ನಡುವೆ), **ಸುತುಮುಲಂ** = ಅತ್ಯಂತ ಘೋರವಾದ, **ಅದ್ಭುತದರ್ಶನಂ** = ಅದ್ಭುತನೋಟದ, **ಯುದ್ಧಂ** = ಯುದ್ಧವು, **ಆಸೀತ್** = ಆಯಿತು. **ತತ್ರ** = ಆ ಯುದ್ಧದಲ್ಲಿ, **ಪಾಂಚಾಲ್ಯಃ** = ಧೃಷ್ಟದ್ಯುಮ್ನನು, **ಕೃತವರ್ಮಾಣಂ** = ಕೃತವರ್ಮನನ್ನು, **ನಾತಿಪ್ರಯತ್ನೇನ** = ಹೆಚ್ಚಿನ ಪ್ರಯತ್ನವಿಲ್ಲದೆ, **ವಿರಥಾಯುಧಂ** = ರಥ-ಆಯುಧ ಕಳೆದುಕೊಂಡವನನ್ನಾಗಿ, **ಚಕಾರ** = ಮಾಡಿದ, **ತಂ** = ಅವನನ್ನು, **ಗೌತಮಃ** = ಕೃಪಾಚಾರ್ಯರು, **ಅಪೋವಾಹ** = ಬೇರೆಡೆ ಒಯ್ದರು.

**ತಾತ್ಪರ್ಯ** :- ಧೃಷ್ಟದ್ಯುಮ್ನ-ಕೃತವರ್ಮರಿಗೆ ನೋಡಲು ಅದ್ಭುತವಾದ ದ್ವಂದ್ವಯುದ್ಧ ನಡೆಯಿತು. ಆ ಯುದ್ಧದಲ್ಲಿ ಧೃಷ್ಟದ್ಯುಮ್ನ ಹೆಚ್ಚಿನ ಪ್ರಯತ್ನ ವಿಲ್ಲದೆ ಕೃತವರ್ಮನನ್ನು ವಿರಥನನ್ನಾಗಿಯೂ, ನಿರಾಯುಧನನ್ನಾಗಿಯೂ ಮಾಡಿದ. ಕೃಪ ಕೃತವರ್ಮನನ್ನು ಬೇರೆಡೆಗೆ ಕರೆದೊಯ್ದ.

### ದುರ್ಯೋಧನನಿಂದ ನಕುಲಸಹದೇವರ ಸೋಲು

**ಅಥ ದುರ್ಯೋಧನೋ ರಾಜಾ ಮಾದ್ರೇಯಾವಭ್ಯಯಾದ್ ರಥೀ ।**
**ತಾಭ್ಯಾಂ ತಸ್ಯಾಭವದ್ ಘೋರಂ ಯುದ್ಧಮದ್ಭುತದರ್ಶನಮ್ ।**
**ತತ್ರ ನಾತಿಪ್ರಯತ್ನೇನ ತೇನ ತೌ ವಿರಥೀಕೃತೌ ॥ ೭೪ ॥**

**ಅಥ ದುರ್ಯೋಧನಃ ರಾಜಾ ಮಾದ್ರೇಯೌ ಅಭ್ಯಯಾತ್ ರಥೀ । ತಾಭ್ಯಾಂ ತಸ್ಯ ಅಭವತ್ ಘೋರಂ ಯುದ್ಧಂ ಅದ್ಭುತದರ್ಶನಮ್ । ತತ್ರ ನಾತಿಪ್ರಯತ್ನೇನ ತೇನ ತೌ ವಿರಥೀಕೃತೌ ॥ ೭೪ ॥**

**ಅರ್ಥ** :- **ಅಥ** = ಬಳಿಕ, **ರಥೀ** = ರಥದಲ್ಲಿ ಕುಳಿತವನಾಗಿ, **ರಾಜಾ** = ರಾಜನಾದ, **ದುರ್ಯೋಧನಃ** = ದುರ್ಯೋಧನನು, **ಮಾದ್ರೇಯೌ** = ಮಾದ್ರಿಯ ಪುತ್ರರಿಬ್ಬರನ್ನು, **ಅಭ್ಯಯಾತ್** = ಎದುರಿಸಿದ. **ತಾಭ್ಯಾಂ** = ಅವರಿಬ್ಬರೊಂದಿಗೆ, **ತಸ್ಯ** = ಅವನ, **ಅದ್ಭುತದರ್ಶನಂ** = ಅದ್ಭುತನೋಟದ, **ಘೋರಂ** = ಘೋರವಾದ, **ಯುದ್ಧಂ** = ಯುದ್ಧವು, **ಅಭವತ್** = ಆಯಿತು. **ತತ್ರ** = ಅಲ್ಲಿ (ಆ ಯುದ್ಧದಲ್ಲಿ), **ತೇನ** = ಅವನಿಂದ, **ತೌ** = ಅವರಿಬ್ಬರು, **ನಾತಿಪ್ರಯತ್ನೇನ** = ಹೆಚ್ಚಿನ ಪ್ರಯತ್ನವಿಲ್ಲದೆ, **ವಿರಥೀಕೃತೌ** = ರಥವನ್ನು ಕಳೆದುಕೊಂಡವರಾದರು.

**ತಾತ್ಪರ್ಯ** :- ಮತ್ತೊಂದೆಡೆ ರಾಜನಾದ ದುರ್ಯೋಧನ ನಕುಲ ಸಹದೇವರನ್ನು ರಥದಲ್ಲಿ ಕುಳಿತು ಎದುರಿಸಿದ. ಅವರೊಬ್ಬರೊಂದಿಗೆ ನೋಡಲು ಅದ್ಭುತವಾದ ಭಯಂಕರಯುದ್ಧ ನಡೆಯಿತು. ಹೆಚ್ಚಿನ ಪ್ರಯತ್ನವಿಲ್ಲದೆ ಆ ಯುದ್ಧದಲ್ಲಿ ದುರ್ಯೋಧನ ನಕುಲಸಹದೇವರನ್ನು ವಿರಥರನ್ನಾಗಿಸಿದ.

### ದುರ್ಯೋಧನನಿಂದ ಯುಧಿಷ್ಠಿರನ ಸೋಲು

**ಸ್ವಯಂ ಯುಧಿಷ್ಠಿರೋ ರಾಜಾ ತದಾ ತಂ ಸಮವಾರಯತ್ ।**
**ವ್ಯಶ್ವಸೂತಧ್ವಜಂ ಚಕ್ರೇ ತಂ ಚ ದುರ್ಯೋಧನೋ ರಣೇ ॥ ೭೫ ॥**

**ಸ್ವಯಂ ಯುಧಿಷ್ಠಿರಃ ರಾಜಾ ತದಾ ತಂ ಸಮವಾರಯತ್ । ವ್ಯಶ್ವಸೂತಧ್ವಜಂ ಚಕ್ರೇ ತಂ ಚ ದುರ್ಯೋಧನಃ ರಣೇ ॥ ೭೫ ॥**

**ಅರ್ಥ** :- **ತದಾ** = ಆಗ, **ಸ್ವಯಂ** = ಸ್ವತಃ, **ರಾಜಾ** = ರಾಜನಾದ, **ಯುಧಿಷ್ಠಿರಃ** = ಯುಧಿಷ್ಠಿರನು, **ತಂ** = ಅವನನ್ನು, **ಸಮವಾರಯತ್** = ತಡೆದನು. **ದುರ್ಯೋಧನಃ** = ದುರ್ಯೋಧನನು, **ತಂ ಚ** = ಅವನನ್ನು ಸಹ, **ರಣೇ** = ಯುದ್ಧದಲ್ಲಿ, **ವ್ಯಶ್ವಸೂತಧ್ವಜಂ** = ಕುದುರೆ, ಸಾರಥಿ, ಧ್ವಜಗಳನ್ನು ಕಳೆದುಕೊಂಡವನನ್ನಾಗಿ, **ಚಕ್ರೇ** = ಮಾಡಿದ.

**ತಾತ್ಪರ್ಯ** :- ಆಗ ರಾಜನಾದ ಯುಧಿಷ್ಠಿರ ದುರ್ಯೋಧನನನ್ನು ತಾನೇ ಎದುರಿಸಿದ. ದುರ್ಯೋಧನ ಯುದ್ಧದಲ್ಲಿ ಅವನ ಕುದುರೆ, ಸಾರಥಿ, ಧ್ವಜಗಳನ್ನು ನಾಶಮಾಡಿದ.

### ಭೀಮನಿಂದ ಕರ್ಣ ದುರ್ಯೋಧನರ ಪರಾಭವ

**ಅಥಾಗತಂ ಸೂರ್ಯಸುತಂ ಪುನಶ್ಚ**
**ಜಗಾಮ ಭೀಮೋ ರಭಸೋ ರಥೇನ ।**
**ದುರ್ಯೋಧನಂ ಚಾಸ್ಯ ಸಮಕ್ಷಮೇವ**
**ಚಕಾರ ವೀರೋ ವಿರಥಂ ಕ್ಷಣೇನ ॥ ೭೬ ॥**

**ಅರ್ಥ** :- **ತಯೋಃ** = ಅವರಿಬ್ಬರ (ನಡುವೆ), **ಸುತುಮುಲಂ** = ಅತ್ಯಂತ ಘೋರವಾದ, **ಅದ್ಭುತದರ್ಶನಂ** = ಅದ್ಭುತನೋಟದ, **ಯುದ್ಧಂ** = ಯುದ್ಧವು, **ಆಸೀತ್** = ಆಯಿತು. **ತತ್ರ** = ಆ ಯುದ್ಧದಲ್ಲಿ, **ಪಾಂಚಾಲ್ಯಃ** = ಧೃಷ್ಟದ್ಯುಮ್ನನು, **ಕೃತವರ್ಮಾಣಂ** = ಕೃತವರ್ಮನನ್ನು, **ನಾತಿಪ್ರಯತ್ನೇನ** = ಹೆಚ್ಚಿನ ಪ್ರಯತ್ನವಿಲ್ಲದೆ, **ವಿರಥಾಯುಧಂ** = ರಥ–ಆಯುಧ ಕಳೆದುಕೊಂಡವನನ್ನಾಗಿ, **ಚಕಾರ** = ಮಾಡಿದ, **ತಂ** = ಅವನನ್ನು, **ಗೌತಮಃ** = ಕೃಪಾಚಾರ್ಯರು, **ಅಪೋವಾಹ** = ಬೇರೆಡೆ ಒಯ್ದರು.

**ತಾತ್ಪರ್ಯ** :- ಧೃಷ್ಟದ್ಯುಮ್ನ-ಕೃತವರ್ಮರಿಗೆ ನೋಡಲು ಅದ್ಭುತವಾದ ದ್ವಂದ್ವಯುದ್ಧ ನಡೆಯಿತು. ಆ ಯುದ್ಧದಲ್ಲಿ ಧೃಷ್ಟದ್ಯುಮ್ನ ಹೆಚ್ಚಿನ ಪ್ರಯತ್ನ ವಿಲ್ಲದೆ ಕೃತವರ್ಮನನ್ನು ವಿರಥನನ್ನಾಗಿಯೂ, ನಿರಾಯುಧನನ್ನಾಗಿಯೂ ಮಾಡಿದ. ಕೃಪ ಕೃತವರ್ಮನನ್ನು ಬೇರೆಡೆಗೆ ಕರೆದೊಯ್ದ.

### ದುರ್ಯೋಧನನಿಂದ ನಕುಲಸಹದೇವರ ಸೋಲು

**ಅಥ ದುರ್ಯೋಧನೋ ರಾಜಾ ಮಾದ್ರೇಯಾವಭ್ಯಯಾದ್ ರಥೀ ।**
**ತಾಭ್ಯಾಂ ತಸ್ಯಾಭವದ್ ಘೋರಂ ಯುದ್ಧಮದ್ಭುತದರ್ಶನಮ್ ।**
**ತತ್ರ ನಾತಿಪ್ರಯತ್ನೇನ ತೇನ ತೌ ವಿರಥೀಕೃತೌ ॥ ೭೪ ॥**

**ಅಥ ದುರ್ಯೋಧನಃ ರಾಜಾ ಮಾದ್ರೇಯೌ ಅಭ್ಯಯಾತ್ ರಥೀ । ತಾಭ್ಯಾಂ ತಸ್ಯ ಅಭವತ್ ಘೋರಂ ಯುದ್ಧಂ ಅದ್ಭುತದರ್ಶನಮ್ । ತತ್ರ ನಾತಿಪ್ರಯತ್ನೇನ ತೇನ ತೌ ವಿರಥೀಕೃತೌ ॥ ೭೪ ॥**

**ಅರ್ಥ** :- **ಅಥ** = ಬಳಿಕ, **ರಥೀ** = ರಥದಲ್ಲಿ ಕುಳಿತವನಾಗಿ, **ರಾಜಾ** = ರಾಜನಾದ, **ದುರ್ಯೋಧನಃ** = ದುರ್ಯೋಧನನು, **ಮಾದ್ರೇಯೌ** = ಮಾದ್ರಿಯ ಪುತ್ರರಿಬ್ಬರನ್ನು, **ಅಭ್ಯಯಾತ್** = ಎದುರಿಸಿದ. **ತಾಭ್ಯಾಂ** = ಅವರಿಬ್ಬರೊಂದಿಗೆ, **ತಸ್ಯ** = ಅವನ, **ಅದ್ಭುತದರ್ಶನಂ** = ಅದ್ಭುತನೋಟದ, **ಘೋರಂ** = ಘೋರವಾದ, **ಯುದ್ಧಂ** = ಯುದ್ಧವು, **ಅಭವತ್** = ಆಯಿತು. **ತತ್ರ** = ಅಲ್ಲಿ (ಆ ಯುದ್ಧದಲ್ಲಿ), **ತೇನ** = ಅವನಿಂದ, **ತೌ** = ಅವರಿಬ್ಬರು, **ನಾತಿಪ್ರಯತ್ನೇನ** = ಹೆಚ್ಚಿನ ಪ್ರಯತ್ನವಿಲ್ಲದೆ, **ವಿರಥೀಕೃತೌ** = ರಥವನ್ನು ಕಳೆದುಕೊಂಡವರಾದರು.

**ತಾತ್ಪರ್ಯ** :- ಮತ್ತೊಂದೆಡೆ ರಾಜನಾದ ದುರ್ಯೋಧನ ನಕುಲ ಸಹದೇವರನ್ನು ರಥದಲ್ಲಿ ಕುಳಿತು ಎದುರಿಸಿದ. ಅವರೊಬ್ಬರೊಂದಿಗೆ ನೋಡಲು ಅದ್ಭುತವಾದ ಭಯಂಕರಯುದ್ಧ ನಡೆಯಿತು. ಹೆಚ್ಚಿನ ಪ್ರಯತ್ನವಿಲ್ಲದೆ ಆ ಯುದ್ಧದಲ್ಲಿ ದುರ್ಯೋಧನ ನಕುಲಸಹದೇವರನ್ನು ವಿರಥರನ್ನಾಗಿಸಿದ.

### ದುರ್ಯೋಧನನಿಂದ ಯುಧಿಷ್ಠಿರನ ಸೋಲು

**ಸ್ವಯಂ ಯುಧಿಷ್ಠಿರೋ ರಾಜಾ ತದಾ ತಂ ಸಮವಾರಯತ್ ।**
**ವ್ಯಶ್ವಸೂತಧ್ವಜಂ ಚಕ್ರೇ ತಂ ಚ ದುರ್ಯೋಧನೋ ರಣೇ ॥ ೭೫ ॥**

ಸ್ವಯಂ ಯುಧಿಷ್ಠಿರಃ ರಾಜಾ ತದಾ ತಂ ಸಮವಾರಯತ್ । ವ್ಯಶ್ವಸೂತಧ್ವಜಂ ಚಕ್ರೇ ತಂ ಚ ದುರ್ಯೋಧನಃ ರಣೇ ॥ ೭೫ ॥

**ಅರ್ಥ** :- **ತದಾ** = ಆಗ, **ಸ್ವಯಂ** = ಸ್ವತಃ, **ರಾಜಾ** = ರಾಜನಾದ, **ಯುಧಿಷ್ಠಿರಃ** = ಯುಧಿಷ್ಠಿರನು, **ತಂ** = ಅವನನ್ನು, **ಸಮವಾರಯತ್** = ತಡೆದನು. **ದುರ್ಯೋಧನಃ** = ದುರ್ಯೋಧನನು, **ತಂ ಚ** = ಅವನನ್ನು ಸಹ, **ರಣೇ** = ಯುದ್ಧದಲ್ಲಿ, **ವ್ಯಶ್ವಸೂತಧ್ವಜಂ** = ಕುದುರೆ, ಸಾರಥಿ, ಧ್ವಜಗಳನ್ನು ಕಳೆದುಕೊಂಡವನನ್ನಾಗಿ, **ಚಕ್ರೇ** = ಮಾಡಿದ.

**ತಾತ್ಪರ್ಯ** :- ಆಗ ರಾಜನಾದ ಯುಧಿಷ್ಠಿರ ದುರ್ಯೋಧನನನ್ನು ತಾನೇ ಎದುರಿಸಿದ. ದುರ್ಯೋಧನ ಯುದ್ಧದಲ್ಲಿ ಅವನ ಕುದುರೆ, ಸಾರಥಿ, ಧ್ವಜಗಳನ್ನು ನಾಶಮಾಡಿದ.

### ಭೀಮನಿಂದ ಕರ್ಣ ದುರ್ಯೋಧನರ ಪರಾಭವ

**ಅಥಾಗತಂ ಸೂರ್ಯಸುತಂ ಪುನಶ್ಚ**
**ಜಗಾಮ ಭೀಮೋ ರಭಸೋ ರಥೇನ ।**
**ದುರ್ಯೋಧನಂ ಚಾಸ್ಯ ಸಮಕ್ಷಮೇವ**
**ಚಕಾರ ವೀರೋ ವಿರಥಂ ಕ್ಷಣೇನ ॥ ೭೬ ॥**

ಅಥ ಆಗತಂ ಸೂರ್ಯಸುತಂ ಪುನಃ ಚ ಜಗಾಮ ಭೀಮಃ ರಭಸಃ ರಥೇನ । ದುರ್ಯೋಧನಂ ಚ ಅಸ್ಯ ಸಮಕ್ಷಂ ಏವ ಚಕಾರ ವೀರಃ ವಿರಥಂ ಕ್ಷಣೇನ ॥ ೭೬ ॥

**ಅರ್ಥ** :- **ಅಥ** = ಬಳಿಕ, **ಪುನಃ ಚ** = ಮತ್ತೊಮ್ಮೆ ಸಹ, **ಆಗತಂ** = ಬಂದ, **ಸೂರ್ಯಸುತಂ** = ಸೂರ್ಯಪುತ್ರನನ್ನು ಕುರಿತು, **ಭೀಮಃ** = ಭೀಮನು, **ರಭಸಃ** = ವೇಗವಾಗಿ, **ರಥೇನ** = ರಥದಿಂದ, **ಜಗಾಮ** = ಹೋದನು. **ವೀರಃ** = (ಸಃ) = ವೀರನಾದ ಅವನು, **ಅಸ್ಯ** = ಅವನ, **ಸಮಕ್ಷಂ ಏವ** = ಕಣ್ಣೆದುರಿಗೇ, **ದುರ್ಯೋಧನಂ ಚ** = ದುರ್ಯೋಧನನನ್ನೂ, **ಕ್ಷಣೇನ** = ಕ್ಷಣದಲ್ಲೇ, **ವಿರಥಂ** = ರಥವನ್ನು ಕಳೆದುಕೊಂಡವನನ್ನಾಗಿ, **ಚಕಾರ** = ಮಾಡಿದ.

**ತಾತ್ಪರ್ಯ** :- ಆ ವೇಳೆಗೆ ಮರಳಿ ಬಂದ ಕರ್ಣನನ್ನು ಎದುರಿಸಿ, ವೀರನಾದ ಭೀಮಸೇನ ರಥದಿಂದ ವೇಗವಾಗಿ ತೆರಳಿದ; ಅವನ ಎದುರೇ ದುರ್ಯೋಧನನನ್ನು ಕ್ಷಣದಲ್ಲೇ ವಿರಥನನ್ನಾಗಿಸಿದ.

### ಭೀಮನಿಂದ ಸುಷೇಣನ ವಧೆ

**ನಿವಾರ್ಯ ಕರ್ಣಂ ಚ ಶರೈರಮುಷ್ಯ**
**ಸೂನೋಃ ಸುಷೇಣಸ್ಯ ಶಿರಶ್ಚಕರ್ತ ।**
**ಪಪಾತ ಭೂಮೌ ಸ ಪಿತುಃ ಸಮೀಪೇ**
**ಯಥಾ ಹತಃ ಸತ್ಯಸೇನೋಽಮುನೈವ ॥ ೭೭ ॥**

ನಿವಾರ್ಯ ಕರ್ಣಂ ಚ ಶರೈಃ ಅಮುಷ್ಯ ಸೂನೋಃ ಸುಷೇಣಸ್ಯ ಶಿರಃ ಚಕರ್ತ । ಪಪಾತ ಭೂಮೌ ಸಃ ಪಿತುಃ ಸಮೀಪೇ ಯಥಾ ಹತಃ ಸತ್ಯಸೇನಃ ಅಮುನಾ ಏವ ॥ ೭೭ ॥

**ಅರ್ಥ** :- (ಸಃ) = ಭೀಮನು, **ಕರ್ಣಂ** = ಕರ್ಣನನ್ನು, **ನಿವಾರ್ಯ** = ತಡೆದು, **ಶರೈಃ** = ಬಾಣಗಳಿಂದ, **ಅಮುಷ್ಯ** = ಅವನ, **ಸೂನೋಃ** = ಮಗನಾದ, **ಸುಷೇಣಸ್ಯ** = ಸುಷೇಣನ, **ಶಿರಃ** = ತಲೆಯನ್ನು, **ಚಕರ್ತ ಚ** = ಕತ್ತರಿಸಿದ ಸಹ. **ಸಃ** = ಅವನು (ಸುಷೇಣನು), **ಪಿತುಃ** = ತಂದೆಯ, **ಸಮೀಪೇ** = ಸಮೀಪದಲ್ಲಿ, **ಭೂಮೌ** = ಭೂಮಿಯಲ್ಲಿ, **ಪಪಾತ** = ಬಿದ್ದ. **ಯಥಾ** = ಹೇಗೆ, **ಅಮುನಾ ಏವ** = ಅವನಿಂದಲೇ,

(ಭೀಮನಿಂದಲೇ), **ಸತ್ಯಸೇನಃ** = ಸತ್ಯಸೇನನು, **ಹತಃ** = ಹತನಾದನೋ, **(ತಥಾ)** = ಅದರಂತೆ.

**ತಾತ್ಪರ್ಯ** :- ಭೀಮ ಕರ್ಣನನ್ನು ಬಾಣಗಳಿಂದ ತಡೆದು, ಅವನ ಮಗನಾದ ಸುಷೇಣನ ತಲೆಯನ್ನು ಕತ್ತರಿಸಿದ. ಅವನು ತಂದೆಯ ಬಳಿಯಲ್ಲಿ ಭೂಮಿಯ ಮೇಲೆ ಬಿದ್ದ. ಅದರಂತೆ ಸತ್ಯಸೇನನೂ ಅವನಿಂದಲೇ ಹತನಾಗಿದ್ದ.

**ಯಥೈವ ಕರ್ಣಾವರಜೌ ಪುರೈವ**
**ನಿಶಾಯುದ್ಧೇ ಕರ್ಣಪುರಃ ಪ್ರಪಾತಿತೌ ।**
**ಹತಂ ತಮೀಕ್ಷ್ಯೈವ ವಿಕರ್ತನಾತ್ಮಜಃ**
**ಕ್ರೋಧಾನ್ವಿತೋ ಭೀಮಸೇನಂ ವಿಹಾಯ ।**
**ಯಯೌ ಪ್ರಮೃದ್ಯೈವ ಚಮೂಂ ಯುಧಿಷ್ಠಿರಂ**
**ರಥೇ ಪರೇ ಸ್ವಶ್ವಯುತೇ ವ್ಯವಸ್ಥಿತಮ್ ॥ ೭೮ ॥**

**ಯಥಾ ಏವ ಕರ್ಣಾವರಜೌ ಪುರಾ ಏವ ನಿಶಾಯುದ್ಧೇ ಕರ್ಣಪುರಃ ಪ್ರಪಾತಿತೌ । ಹತಂ ತಂ ಈಕ್ಷ್ಯ ಏವ ವಿಕರ್ತನಾತ್ಮಜಃ ಕ್ರೋಧಾನ್ವಿತಃ ಭೀಮಸೇನಂ ವಿಹಾಯ । ಯಯೌ ಪ್ರಮೃದ್ಯ ಏವ ಚಮೂಂ ಯುಧಿಷ್ಠಿರಂ ರಥೇ ಪರೇ ಸ್ವಶ್ವಯುತೇ ವ್ಯವಸ್ಥಿತಮ್ ॥ ೭೮ ॥**

**ಅರ್ಥ** :- **ಯಥಾ ಏವ** = ಹೇಗೆ, **ಕರ್ಣಾವರಜೌ** = ಕರ್ಣನ ಇಬ್ಬರು ತಮ್ಮಂದಿರು, **ಪುರಾ ಏವ** = ಹಿಂದೆಯೇ, **ನಿಶಾಯುದ್ಧೇ** = ರಾತ್ರಿಯುದ್ಧದಲ್ಲಿ, **ಕರ್ಣಪುರಃ** = ಕರ್ಣನ ಎದುರೇ, **ಪ್ರಪಾತಿತೌ** = ಬೀಳಿಸಲ್ಪಟ್ಟರೋ, **(ತಥೈವ)** = ಅದರಂತೆ. **ವಿಕರ್ತನಾತ್ಮಜಃ** = ಸೂರ್ಯಪುತ್ರನಾದ ಕರ್ಣನು, **ಹತಂ** = ಹತನಾದ, **ತಂ** = ಅವನನ್ನು, **ಈಕ್ಷ್ಯ ಏವ** = ನೋಡುತ್ತಲೇ, **ಕ್ರೋಧಾನ್ವಿತಃ** = ಕೋಪದಿಂದ ಕೂಡಿದವನಾಗಿ, **ಭೀಮಸೇನಂ** = ಭೀಮಸೇನನನ್ನು, **ವಿಹಾಯ** = ಬಿಟ್ಟು, **ಚಮೂಂ** = ಸೇನೆಯನ್ನು, **ಪ್ರಮೃದ್ಯ ಏವ** = ಮರ್ದಿಸಿಯೇ, **ಸ್ವಶ್ವಯುತೇ** = ಒಳ್ಳೆಯ ಕುದುರೆಗಳಿಂದ ಕೂಡಿದ್ದ, **ಪರೇ** = ಬೇರೊಂದು, **ರಥೇ** = ರಥದಲ್ಲಿ, **ವ್ಯವಸ್ಥಿತಂ** = ಕುಳಿತಿದ್ದ, **ಯುಧಿಷ್ಠಿರಂ** = ಯುಧಿಷ್ಠಿರನನ್ನು ಕುರಿತು, **ಯಯೌ** = ಹೋದನು.

**ತಾತ್ಪರ್ಯ** :- ಕರ್ಣನ ತಮ್ಮಂದಿರಾದ ಇಬ್ಬರೂ ರಾತ್ರಿಯುದ್ಧದಲ್ಲಿ ಕರ್ಣನೆದುರೇ ಭೀಮನಿಂದ ಹಾಗೆಯೇ ಹತರಾಗಿದ್ದರು. ತನ್ನ ಮಗ ಹತನಾದದ್ದನ್ನು ನೋಡುತ್ತಲೇ ಕರ್ಣ ಕೋಪಗೊಂಡವನಾಗಿ ಭೀಮಸೇನನನ್ನು ಬಿಟ್ಟು ಸೇನೆಯನ್ನು ನಾಶಗೊಳಿಸುತ್ತಾ, ಒಳ್ಳೆಯ ಅಶ್ವಗಳನ್ನು ಹೂಡಿದ್ದ ಮತ್ತೊಂದು ರಥದಲ್ಲಿ ಕುಳಿತಿದ್ದ ಧರ್ಮರಾಜನ ಮೇಲೆ ಸಾಗಿದ.

ಯುಧಿಷ್ಠಿರಾದಿಗಳನ್ನು ಜಯಿಸಿದ ಕರ್ಣ

**ನ್ಯವಾರಯೇತಾಂ ಶಿನಿಪೌತ್ರಪಾರ್ಷತೌ**
**ಕೃಷ್ಣಾಸುತಾಃ ಸೋಮಕಸಂಘಯುಕ್ತಾಃ ।**
**ಸ ತಾನ್ ಸಮಸ್ತಾನ್ ವಿರಥಾನ್ ವಿಧಾಯ**
**ಯುಧಿಷ್ಠಿರಂ ಪ್ರಾಪ ಯುತಂ ಯಮಾಭ್ಯಾಮ್ ॥ ೭೯ ॥**

**ನ್ಯವಾರಯೇತಾಂ ಶಿನಿಪೌತ್ರಪಾರ್ಷತೌ ಕೃಷ್ಣಾಸುತಾಃ ಸೋಮಕಸಂಘಯುಕ್ತಾಃ । ಸಃ ತಾನ್ ಸಮಸ್ತಾನ್ ವಿರಥಾನ್ ವಿಧಾಯ ಯುಧಿಷ್ಠಿರಂ ಪ್ರಾಪ ಯುತಂ ಯಮಾಭ್ಯಾಮ್ ॥ ೭೯ ॥**

**ಅರ್ಥ** :- **ಸೋಮಕಸಂಘಯುಕ್ತಾಃ** = ಪಾಂಚಾಲರ ಗುಂಪಿನಿಂದ ಕೂಡಿದ್ದ, **ಕೃಷ್ಣಾಸುತಾಃ** = ದ್ರೌಪದಿಯ ಮಕ್ಕಳು, **ಶಿನಿಪಾರ್ಷತೌ** = ಸಾತ್ಯಕಿ, ಧೃಷ್ಟದ್ಯುಮ್ನರು, (ತಂ) = ಅವನನ್ನು, **ನ್ಯವಾರಯೇತಾಂ** = ತಡೆದರು. **ಸಃ** = ಅವನು, **ತಾನ್ ಸಮಸ್ತಾನ್** = ಅವರೆಲ್ಲರನ್ನು, **ವಿರಥಾನ್** = ರಥವಿಲ್ಲದವರನ್ನಾಗಿ, **ವಿಧಾಯ** = ಮಾಡಿ, **ಯಮಾಭ್ಯಾಂ** = ನಕುಲಸಹದೇವರೊಂದಿಗೆ, **ಯುತಂ** = ಕೂಡಿದ್ದ, **ಯುಧಿಷ್ಠಿರಂ** = ಯುಧಿಷ್ಠಿರನನ್ನು, **ಪ್ರಾಪ** = ಸೇರಿದ.

**ತಾತ್ಪರ್ಯ** :- ಸಾತ್ಯಕಿ, ಧೃಷ್ಟದ್ಯುಮ್ನ, ದ್ರೌಪದೀಪುತ್ರರು, ಪಾಂಚಾಲರ ಗುಂಪಿನಿಂದ ಸಮೇತರಾಗಿ ಕರ್ಣನನ್ನು ತಡೆದರು. ಕರ್ಣ ಅವರೆಲ್ಲರನ್ನೂ ವಿರಥರನ್ನಾಗಿ ಮಾಡಿ, ನಕುಲಸಹದೇವರೊಂದಿಗಿದ್ದ ಯುಧಿಷ್ಠಿರನನ್ನು ಎದುರಿಸಿದ.

**ನಿಹತ್ಯ ಸೋಽಶ್ವಾನ್ ಯುಧಿ ಧರ್ಮಸೂನೋ-**
**ರ್ನಿರಾಯುಧೌ ತೌ ಚ ಯಮೌ ಚಕಾರ ।**

**ತಾನೇಕಯಾನೋಪಗತಾನ್ ಪುನಶ್ಚ**
**ಮಮರ್ದ ಬಾಣೈಶ್ಚ ವಚೋಭಿರುಗ್ರೈಃ ॥ ೮೦ ॥**

**ನಿಹತ್ಯ ಸಃ ಅಶ್ವಾನ್ ಯುಧಿ ಧರ್ಮಸೂನೋಃ ನಿರಾಯುಧೌ ತೌ ಚ ಯಮೌ ಚಕಾರ । ತಾನ್ ಏಕಯಾನೋಪಗತಾನ್ ಪುನಃ ಚ ಮಮರ್ದ ಬಾಣೈಃ ಚ ವಚೋಭಿಃ ಉಗ್ರೈಃ ॥ ೮೦ ॥**

**ಅರ್ಥ** :- **ಸಃ** = ಅವನು (ಕರ್ಣನು), **ಯುಧಿ** = ಯುದ್ಧದಲ್ಲಿ, **ಧರ್ಮಸೂನೋಃ** = ಧರ್ಮನ ಮಗನಾದ ಯುಧಿಷ್ಠಿರನ, **ಅಶ್ವಾನ್** = ಕುದುರೆಗಳನ್ನು, **ನಿಹತ್ಯ** = ಸಂಹರಿಸಿ, **ತೌ ಯಮೌ** = ಆ ಇಬ್ಬರು ಜೋಡಿಗಳನ್ನು (ನಕುಲಸಹದೇವರನ್ನು), **ನಿರಾಯುಧೌ ಚ** = ಆಯುಧವಿಲ್ಲದವರನ್ನಾಗಿಯೂ, **ಚಕಾರ** = ಮಾಡಿದ. **ಪುನಃ ಚ** = ಮತ್ತೆಯೂ, **ಏಕಯಾನೋಪಗತಾನ್** = ಒಂದೇ ವಾಹನವನ್ನೇರಿ ಬಂದ, **ತಾನ್** = ಅವರನ್ನು, **ಬಾಣೈಃ** = ಬಾಣಗಳಿಂದ, **ಚ** = ಮತ್ತು, **ಉಗ್ರೈಃ** = ಕ್ರೂರವಾದ, **ವಚೋಭಿಃ** = ಮಾತುಗಳಿಂದ ಸಹ, **ಮಮರ್ದ** = ಹಿಂಸಿಸಿದ.

**ತಾತ್ಪರ್ಯ** :- ಕರ್ಣ ಯುದ್ಧದಲ್ಲಿ ಧರ್ಮರಾಜನ ಕುದುರೆಗಳನ್ನು ಸಂಹರಿಸಿದ. ನಕುಲಸಹದೇವರನ್ನು ನಿರಾಯುಧರನ್ನಾಗಿ ಮಾಡಿದ. ಆ ಮೂವರೂ ಒಂದೇ ರಥದಲ್ಲಿ ಕುಳಿತು ಎದುರಿಸಿ ಬಂದಾಗ, ಅವರನ್ನು ಬಾಣಗಳಿಂದಲೂ, ಕ್ರೂರವಾದ ಮಾತುಗಳಿಂದಲೂ ಹಿಂಸಿಸಿದ.

ದುರ್ಯೋಧನನನ್ನು ವಿರಥನನ್ನಾಗಿಸಿದ ಭೀಮ - ಶಿಬಿರದತ್ತ ಯುಧಿಷ್ಠಿರ

**ತದೈವ ಮೋಕ್ಷಾಯ ನೃಪಸ್ಯ ಭೀಮೋ**
**ದುರ್ಯೋಧನಂ ವಿರಥಂ ಸಂವಿಧಾಯ ।**
**ವಿವ್ಯಾಧ ಮರ್ಮಸ್ವತಿತೀಕ್ಷ್ಣಸಾಯಕೈಸ್ತಂ**
**ದರ್ಶಯಾಮಾಸ ರವೇಃ ಸುತಾಯ ॥ ೮೧ ॥**

**ಶಲ್ಯಸ್ತದಾ ಧರ್ಮಸುತಂ ವಿಹಾಯ**
**ಕರ್ಣೋ ಯಯೌ ತತ್ರ ಯುಧಿಷ್ಠಿರೋಽಪಿ ।**
**ಗತ್ವಾ ಶನೈಃ ಶಿಬಿರಂ ತತ್ರ ಶಿಶ್ಯೇ**
**ಕರ್ಣೋ ಯದಾ ರಾಜಗೃಧ್ನೀ ಜಗಾಮ ॥ ೮೨ ।**

**ತದಾ ಏವ ಮೋಕ್ಷಾಯ ನೃಪಸ್ಯ ಭೀಮಃ ದುರ್ಯೋಧನಂ ವಿರಥಂ ಸಂವಿಧಾಯ । ವಿವ್ಯಾಧ ಮರ್ಮಸು ಅತಿತೀಕ್ಷ್ಣಸಾಯಕೈಃ ತಂ ದರ್ಶಯಾಮಾಸ ರವೇಃ ಸುತಾಯ ॥ ೮೧ ॥**

**ಶಲ್ಯಃ ತದಾ ಧರ್ಮಸುತಂ ವಿಹಾಯ ಕರ್ಣಃ ಯಯೌ ತತ್ರ ಯುಧಿಷ್ಠಿರಃ ಅಪಿ । ಗತ್ವಾ ಶನೈಃ ಶಿಬಿರಂ ತತ್ರ ಶಿಶ್ಯೇ ಕರ್ಣಃ ಯದಾ ರಾಜಗೃಧ್ನೀ ಜಗಾಮ ॥ ೮೨ ।**

**ಅರ್ಥ** :- **ತದಾ ಏವ** = ಆಗಲೇ, **ಭೀಮಃ** = ಭೀಮನು, **ನೃಪಸ್ಯ** = ರಾಜನಾದ ಧರ್ಮರಾಜನ, **ಮೋಕ್ಷಾಯ** = ಬಿಡುಗಡೆಗೆ, **ದುರ್ಯೋಧನಂ** = ದುರ್ಯೋಧನನನ್ನು, **ವಿರಥಂ** = ರಥವನ್ನು, ಕಳೆದುಕೊಂಡವನನ್ನಾಗಿ, **ಸಂವಿಧಾಯ** = ಮಾಡಿ, **ತಂ** = ಅವನನ್ನು, **ಅತಿತೀಕ್ಷ್ಣಸಾಯಕೈಃ** = ಅತ್ಯಂತ ಹರಿತವಾದ ಬಾಣಗಳಿಂದ, **ಮರ್ಮಸು** = ಮರ್ಮಸ್ಥಾನಗಳಲ್ಲಿ, **ವಿವ್ಯಾಧ** = ಹೊಡೆದ.

**ಶಲ್ಯಃ** = ಶಲ್ಯನು, **ರವೇಃ ಸುತಾಯ** = ಸೂರ್ಯನ ಮಗನಿಗೆ, **(ತಂ)** = ಆ ದುರ್ಯೋಧನನನ್ನು, **ದರ್ಶಯಾಮಾಸ** = ತೋರಿಸಿದ. **ತದಾ** = ಆಗ, **ಕರ್ಣಃ** = ಕರ್ಣನು, **ಧರ್ಮಸುತಂ** = ಧರ್ಮನ ಮಗನಾದ ಯುಧಿಷ್ಠಿರನನ್ನು, **ವಿಹಾಯ** = ಬಿಟ್ಟು, **ತತ್ರ** = (ಎಲ್ಲಿ ದುರ್ಯೋಧನನಿದ್ದನೋ) ಅಲ್ಲಿಗೆ, **ಯಯೌ** = ಹೋದನು. **ಯದಾ** = ಯಾವಾಗ, **ಕರ್ಣಃ** = ಕರ್ಣನು, **ರಾಜಗೃಧ್ನೀ** = ರಾಜನ (ದುರ್ಯೋಧನನ) ರಕ್ಷಣೆಯನ್ನು ಬಯಸಿದವನಾಗಿ, **ಜಗಾಮ** = ಹೋದನೋ, **(ತದಾ)** = ಆಗ, **ಯುಧಿಷ್ಠಿರಃ ಅಪಿ** = ಯುಧಿಷ್ಠಿರನೂ ಸಹ, **ಶನೈಃ** = ಮೆಲ್ಲನೆ, **ಶಿಬಿರಂ** = ಶಿಬಿರವನ್ನು ಕುರಿತು, **ಗತ್ವಾ** = ಹೋಗಿ, **ತತ್ರ** = ಅಲ್ಲಿ, **ಶಿಶ್ಯೇ** = ಮಲಗಿದನು.

**ತಾತ್ಪರ್ಯ** :- ಧರ್ಮರಾಜನ ಬಿಡುಗಡೆಗೆಂದೇ ಆಗ ಭೀಮ ದುರ್ಯೋಧನನನ್ನು ವಿರಥನನ್ನಾಗಿ ಮಾಡಿ, ಅವನ ಮರ್ಮಸ್ಥಾನಗಳಲ್ಲಿ ಅತ್ಯಂತ ಹರಿತವಾದ ಬಾಣಗಳಿಂದ ಹೊಡೆದು ಪೀಡಿಸಿದ. ಅವನನ್ನು ಕರ್ಣನಿಗೆ ಆಗ ಶಲ್ಯ ತೋರಿಸಿದ. ಕರ್ಣ ಧರ್ಮರಾಜನನ್ನು ಬಿಟ್ಟು, ಅಲ್ಲಿಗೆ ತೆರಳಿದ. ದುರ್ಯೋಧನನನ್ನು ರಕ್ಷಿಸಲೆಂದು ಕರ್ಣ ಅತ್ತನಡೆದಾಗ, ಧರ್ಮರಾಜನು ಮೆಲ್ಲನೆ ಶಿಬಿರಕ್ಕೆ ತೆರಳಿ, ಅಲ್ಲಿ ಮಲಗಿಬಿಟ್ಟ.

### ಭೀಮನ ಅಪೂರ್ವ ಪರಾಕ್ರಮ

**ದ್ರೌಣಿಃ ಕೃಪಶ್ಚಾತ್ರ ತದೈವ ಜಗ್ಮತು-**
**ಸ್ತದಾ ಭೀಮೋ ದ್ರೌಣಿಕರ್ಣೌ ಜಗಾಮ ।**
**ಕೃಪೋ ನೃಪಂ ರಥಮಾರೋಪಯಚ್ಚ**
**ವಿದ್ಧಂ ಶರೈರ್ಭೀಮಬಾಹುಪ್ರಮುಕ್ತೈಃ ॥ ೮೩ ॥**

ದ್ರೌಣಿಃ ಕೃಪಃ ಚ ಅತ್ರ ತದಾ ಏವ ಜಗ್ಮತುಃ ತದಾ ಭೀಮಃ ದ್ರೌಣಿಕರ್ಣೌ ಜಗಾಮ । ಕೃಪಃ ನೃಪಂ ರಥಂ ಆರೋಪಯತ್ ಚ ವಿದ್ಧಂ ಶರೈಃ ಭೀಮಬಾಹುಪ್ರಮುಕ್ತೈಃ ॥ ೮೩ ॥

**ಅರ್ಥ :- ತದಾ ಏವ** = ಆಗಲೇ, **ದ್ರೌಣಿಃ** = ದ್ರೋಣಪುತ್ರನಾದ ಅಶ್ವತ್ಥಾಮ, **ಚ** = ಮತ್ತು, **ಕೃಪಃ** = ಕೃಪ, **ಅತ್ರ** = ಅತ್ತ, **ಜಗ್ಮತುಃ** = ನಡೆದರು. **ತದಾ** = ಆಗ, **ಭೀಮಃ** = ಭೀಮನು, **ದ್ರೌಣಿಕರ್ಣೌ** = ಅಶ್ವತ್ಥಾಮ-ಕರ್ಣರನ್ನು ಕುರಿತು, **ಜಗಾಮ** = ಹೋದನು, **ಕೃಪಃ** = ಕೃಪನು, **ಭೀಮಬಾಹುಪ್ರಮುಕ್ತೈಃ** = ಭೀಮನ ಬಾಹುವಿನಿಂದ ಬಿಡಲ್ಪಟ್ಟ, **ಶರೈಃ** = ಬಾಣಗಳಿಂದ, **ವಿದ್ಧಂ** = ಪೆಟ್ಟುತಿಂದ, **ನೃಪಂ** ರಾಜನನ್ನು (ದುರ್ಯೋಧನನನ್ನು), **ರಥಂ** = ರಥದಲ್ಲಿ, **ಆರೋಪಯತ್ ಚ** = ಏರಿಸಿಕೊಂಡನು ಸಹ.

**ತಾತ್ಪರ್ಯ :-** ಅಶ್ವತ್ಥಾಮಕೃಪರು ಆಗಲೇ ದುರ್ಯೋಧನನತ್ತ ನಡೆದರು. ಆಗ ಭೀಮ ಅಶ್ವತ್ಥಾಮ, ಕರ್ಣರನ್ನು ಎದುರಿಸಿದ. ಭೀಮನ ತೋಳಿನಿಂದ ಬಿಡಲ್ಪಡುತ್ತಿದ್ದ ಬಾಣಗಳಿಂದ ಪೆಟ್ಟು ತಿಂದಿದ್ದ ದುರ್ಯೋಧನನನ್ನು ಕೃಪ ತನ್ನ ರಥದಲ್ಲಿ ಏರಿಸಿಕೊಂಡ.

**ನೃಪಂ ಸಮಾದಾಯ ಕೃಪೇಽಪಯಾತೇ**
**ಭೀಮಾರ್ದಿತೌ ದ್ರೌಣಿಕರ್ಣೌ ಶರೌಘೈಃ ।**
**ವಿಹಾಯ ತಂ ಜಗ್ಮತುಃ ಸೋಮಕಾನಾಂ**
**ಚಮೂಂ ಶರೌಘೈರಭಿಪಾತಯಂತೌ ॥ ೮೪ ॥**

ನೃಪಂ ಸಮಾದಾಯ ಕೃಪೇ ಅಪಯಾತೇ ಭೀಮಾರ್ದಿತೌ ದ್ರೌಣಿಕರ್ಣೌ ಶರೌಘೈಃ । ವಿಹಾಯ ತಂ ಜಗ್ಮತುಃ ಸೋಮಕಾನಾಂ ಚಮೂಂ ಶರೌಘೈಃ ಅಭಿಪಾತಯಂತೌ ॥ ೮೪ ॥

**ಅರ್ಥ** :- **ನೃಪಂ** = ರಾಜನನ್ನು, **ಸಮಾದಾಯ** = ಕರೆದುಕೊಂಡು, **ಕೃಪೇ** = ಕೃಪನು, **ಅಪಯಾತೇ (ಸತಿ)** = ಹೋದಮೇಲೆ, **ಶರೌಘೈಃ** = ಬಾಣಸಮೂಹಗಳಿಂದ, **ಭೀಮಾರ್ದಿತೌ** = ಭೀಮನಿಂದ ಪೀಡಿತರಾದ, **ದ್ರೌಣಿಕರ್ಣೌ** = ಅಶ್ವತ್ಥಾಮ-ಕರ್ಣರು, **ತಂ** = ಅವನನ್ನು, **ವಿಹಾಯ** = ಬಿಟ್ಟು, **ಸೋಮಕಾನಾಂ** = ಪಾಂಚಾಲರ, **ಚಮೂಂ** = ಸೈನ್ಯವನ್ನು ಕುರಿತು, **ಶರೌಘೈಃ** = ಬಾಣಸಮೂಹಗಳಿಂದ, **ಅಭಿಪಾತಯಂತೌ** = ಹೊಡೆದುಬೀಳಿಸುತ್ತಾ, **ಜಗ್ಮತುಃ** = ಸಾಗಿದರು.

**ತಾತ್ಪರ್ಯ** :- ದುರ್ಯೋಧನನನ್ನು ಕರೆದುಕೊಂಡು ಕೃಪ ಹೊರಟು ಹೋದ ಮೇಲೆ, ಭೀಮನಿಂದ ಬಾಣಸಮೂಹಗಳಿಂದ ಪೀಡಿತರಾದ ಕರ್ಣ ಅಶ್ವತ್ಥಾಮರು ಭೀಮನನ್ನು ಬಿಟ್ಟು ಪಾಂಚಾಲಸೈನ್ಯವನ್ನು ಬಾಣಗಳ ಪ್ರವಾಹಗಳಿಂದ ಹೊಡೆದು ಬೀಳಿಸುತ್ತಾ ಸಾಗಿದರು.

### ಅರ್ಜುನನ ಪರಾಕ್ರಮ

**ಅಥಾತ್ರ ರಾಜಾನಮಚಕ್ಷಮಾಣೋ**
**ಧನಂಜಯೋ ವಾಸುದೇವಪ್ರಣುನ್ನಃ ।**
**ಅಭ್ಯಾಯಯೌ ಪಾರ್ಷತಃ ಸ್ವಾಂ ತು ಸೇನಾಂ**
**ಕರ್ಣಾಹತಾಂ ವೀಕ್ಷ್ಯ ಕುರೂನಪೀಡಯತ್ ॥ ೮೫ ॥**

**ಅಥ ಅತ್ರ ರಾಜಾನಂ ಅಚಕ್ಷಮಾಣಃ ಧನಂಜಯಃ ವಾಸುದೇವಪ್ರಣುನ್ನಃ । ಅಭ್ಯಾಯಯೌ ಪಾರ್ಷತಃ ಸ್ವಾಂ ತು ಸೇನಾಂ ಕರ್ಣಾಹತಾಂ ವೀಕ್ಷ್ಯ ಕುರೂನ್ ಅಪೀಡಯತ್ ॥ ೮೫ ॥**

**ಅರ್ಥ** :- **ಅಥ** = ಬಳಿಕ, **ಅತ್ರ** = ಅಲ್ಲಿ, **ರಾಜಾನಂ** = ರಾಜನಾದ ಯುಧಿಷ್ಠಿರನನ್ನು, **ಅಚಕ್ಷಮಾಣಃ** = ಕಾಣದವನಾಗಿ, **ವಾಸುದೇವಪ್ರಣುನ್ನಃ** = ವಾಸುದೇವನಿಂದ ಪ್ರೇರಿತನಾದ, **ಧನಂಜಯಃ** = ಅರ್ಜುನನು, **(ಶಿಬಿರಂ)** = ಶಿಬಿರವನ್ನು ಕುರಿತು, **ಅಭ್ಯಾಯಯೌ** = ಹೊರಟುನಿಂತ. **ಪಾರ್ಷತಃ** = ಧೃಷ್ಟದ್ಯುಮ್ನನು, **ಕರ್ಣಾಹತಾಂ** = ಕರ್ಣನಿಂದ ನಾಶವಾಗುತ್ತಿದ್ದ, **ಸ್ವಾಂ** = ತನ್ನ, **ಸೇನಾಂ ತು** = ಸೇನೆಯನ್ನಾದರೋ, **ವೀಕ್ಷ್ಯ** = ನೋಡಿ, **ಕುರೂನ್** = ಕೌರವರನ್ನು, **ಅಪೀಡಯತ್** = ಪೀಡಿಸಿದ.

**ತಾತ್ಪರ್ಯ** :- ಆಗ ಯುದ್ಧರಂಗದಲ್ಲಿ ರಾಜನಾದ ಯುಧಿಷ್ಠಿರನನ್ನು ಕಾಣದೇ, ಕೃಷ್ಣಪ್ರೇರಿತನಾದ ಅರ್ಜುನ ಶಿಬಿರದ ಕಡೆಗೆ ಹೊರಟುನಿಂತ. ಧೃಷ್ಟದ್ಯುಮ್ನ ತನ್ನ ಸೇನೆ ಕರ್ಣನಿಂದ ನಾಶ ಹೊಂದುತ್ತಿದ್ದುದನ್ನು ನೋಡಿ, ಕೌರವರನ್ನು ಪೀಡಿಸತೊಡಗಿದ.

**ನ್ಯವಾರಯತ್ ಸಮಾಯಾಂತಂ ಕಪಿಪ್ರವರಕೇತನಮ್ ।**
**ದ್ರೌಣಿರ್ದುಃಶಾಸನಶ್ಚೈವ ಧೃಷ್ಟದ್ಯುಮ್ನಮವಾರಯತ್ ॥ ೮೬ ॥**

ನ್ಯವಾರಯತ್ ಸಮಾಯಾಂತಂ ಕಪಿಪ್ರವರಕೇತನಮ್ । ದ್ರೌಣೀಃ ದುಃಶಾಸನಃ ಚ ಏವ ಧೃಷ್ಟದ್ಯುಮ್ನಂ ಅವಾರಯತ್ ॥ ೮೬ ॥

**ಅರ್ಥ** :- **ದ್ರೌಣಿಃ** = ಅಶ್ವತ್ಥಾಮನು, **ಸಮಾಯಾಂತಂ** = ಸಾಗಿಬರುತ್ತಿದ್ದ, **ಕಪಿಪ್ರವರಕೇತನಂ** = ಕಪಿಶ್ರೇಷ್ಠ(ಹನುಮಂತ)ಧ್ವಜನಾದ ಅರ್ಜುನನನ್ನು, **ನ್ಯವಾರಯತ್** = ತಡೆದನು. **ದುಃಶಾಸನಃ ಚ ಏವ** = ದುಃಶಾಸನನೂ ಸಹ, **ಧೃಷ್ಟದ್ಯುಮ್ನಂ** = ಧೃಷ್ಟದ್ಯುಮ್ನನನ್ನು, **ಅವಾರಯತ್** = ತಡೆದನು.

**ತಾತ್ಪರ್ಯ** :- ಸಾಗಿಬರುತ್ತಿದ್ದ ಕಪಿಧ್ವಜನಾದ ಅರ್ಜುನನನ್ನು ಅಶ್ವತ್ಥಾಮ ತಡೆದ. ಧೃಷ್ಟದ್ಯುಮ್ನನನ್ನು ದುಃಶಾಸನ ತಡೆದ.

**ಉಭಾವತಿರಥೌ ತೌ ತು ಶಸ್ತ್ರಾಸ್ತ್ರೈರಭ್ಯವರ್ಷತಾಮ್ ।**
**ದುಃಶಾಸನಃ ಪಾರ್ಷತಶ್ಚ ಕುರ್ವಂತೌ ಬಾಣಜಂ ತಮಃ ॥ ೮೭ ॥**

ಉಭೌ ಅತಿರಥೌ ತೌ ತು ಶಸ್ತ್ರಾಸ್ತ್ರೈಃ ಅಭ್ಯವರ್ಷತಾಮ್ । ದುಃಶಾಸನಃ ಪಾರ್ಷತಃ ಚ ಕುರ್ವಂತೌ ಬಾಣಜಂ ತಮಃ ॥ ೮೭ ॥

**ಅರ್ಥ** :- **ದುಃಶಾಸನಃ ಪಾರ್ಷತೌ ಚ** = ದುಃಶಾಸನ ಮತ್ತು ಧೃಷ್ಟದ್ಯುಮ್ನರು, **ಅತಿರಥೌ** = ಅತಿರಥರು, **ತೌ ಉಭೌ ತು** = ಅವರಿಬ್ಬರಾದರೋ, **ಬಾಣಜಂ** = ಬಾಣದಿಂದ ಉಂಟಾದ, **ತಮಃ** = ಕತ್ತಲೆಯನ್ನು, **ಕುರ್ವಂತೌ** = **(ಸಂತೌ)** = ಕವಿಸುವವರಾಗಿ, **ಶಸ್ತ್ರಾಸ್ತ್ರೈಃ** = ಶಸ್ತ್ರ-ಅಸ್ತ್ರಗಳಿಂದ, **ಅಭ್ಯವರ್ಷತಾಮ್** = ಮಳೆಗರೆದರು.

**ತಾತ್ಪರ್ಯ** :- ಅತಿರಥರಾದ ದುಃಶಾಸನ ಮತ್ತು ಧೃಷ್ಟದ್ಯುಮ್ನರು ಬಾಣಗಳಿಂದ ಕತ್ತಲೆ ಕವಿಸುತ್ತಾ ಶಸ್ತ್ರಾಸ್ತ್ರಗಳ ಮಳೆಯನ್ನು ಕರೆಯ ತೊಡಗಿದರು.

**ತತ್ರ ದುಃಶಾಸನೇನಾಜೌ ಸ್ತಂಭಿತೋ ದ್ರುಪದಾತ್ಮಜಃ ।**
**ಯತಮಾನೋಽಪಿ ನಿರ್ಯತ್ನಃ ಕೃತೋ ಯುದ್ಧೇ ನಿರಾಯುಧಃ ॥ ೮೮ ॥**

ತತ್ರ ದುಃಶಾಸನೇನ ಆಜೌ ಸ್ತಂಭಿತಃ ದ್ರುಪದಾತ್ಮಜಃ । ಯತಮಾನಃ ಅಪಿ ನಿರ್ಯತ್ನಃ ಕೃತಃ ಯುದ್ಧೇ ನಿರಾಯುಧಃ ॥ ೮೮ ॥

**ಅರ್ಥ** :- **ತತ್ರ ಆಜೌ** = ಆ ಯುದ್ಧದಲ್ಲಿ, **ದುಃಶಾಸನೇನ** = ದುಃಶಾಸನನಿಂದ, **ಸ್ತಂಭಿತಃ** = ಜಡವಾಗಿಸಲ್ಪಟ್ಟ, **ದ್ರುಪದಾತ್ಮಜಃ** = ದ್ರುಪದಪುತ್ರನಾದ ಧೃಷ್ಟದ್ಯುಮ್ನನು, **ಯತಮಾನಃ ಅಪಿ** = ಪ್ರಯತ್ನ ಮಾಡುವವನಾದರೂ ಸಹ, **ನಿರ್ಯತ್ನಃ (ಸನ್)** = ಪ್ರಯತ್ನವಿಲ್ಲದವನಾಗಿ, **ಯುದ್ಧೇ** = ಯುದ್ಧದಲ್ಲಿ, **ನಿರಾಯುಧಃ** = ಆಯುಧವಿಲ್ಲದವನಾಗಿ, **ಕೃತಃ** = ಮಾಡಲ್ಪಟ್ಟನು.

**ತಾತ್ಪರ್ಯ** :- ಆ ಯುದ್ಧದಲ್ಲಿ ದುಃಶಾಸನ ಧೃಷ್ಟದ್ಯುಮ್ನನನ್ನು ಸ್ತಂಭೀಭೂತನನ್ನಾಗಿಸಿದ. ಎಷ್ಟು ಪ್ರಯತ್ನಿಸಿದರೂ, ಧೃಷ್ಟದ್ಯುಮ್ನನ ಪ್ರಯತ್ನ ಸಫಲವಾಗದೆ ಯುದ್ಧದಲ್ಲಿ ನಿರಾಯುಧನಾಗಿಸಲ್ಪಟ್ಟ.

### ಮತ್ತೊಮ್ಮೆ ಅರ್ಜುನ ಅಶ್ವತ್ಥಾಮರ ಯುದ್ಧ

**ತದಾಽಭವದ್ಯುದ್ಧಮತೀವದಾರುಣಂ**
**ದ್ರೌಣೇಸ್ತನೂಜೇನ ತು ವಜ್ರಪಾಣೇಃ ।**
**ತತ್ರಾಪಿ ಬದ್ಧಃ ಶರಪಂಜರೇಣ**
**ಪಾರ್ಥೋಽಪನುತ್ತಾಽಪಿ ಹಿ ಗಾಂಡಿವಜ್ಯಾ ॥ ೮೯ ॥**

ತದಾ ಅಭವತ್ ಯುದ್ಧಂ ಅತೀವದಾರುಣಂ ದ್ರೌಣೇಃ ತನೂಜೇನ ತು ವಜ್ರಪಾಣೇಃ । ತತ್ರ ಅಪಿ ಬದ್ಧಃ ಶರಪಂಜರೇಣ ಪಾರ್ಥಃ ಅಪನುತ್ತಾ ಅಪಿ ಹಿ ಗಾಂಡಿವಜ್ಯಾ ॥ ೮೯ ॥

**ಅರ್ಥ** :- **ತದಾ** = ಆಗ, **ವಜ್ರಪಾಣೇಃ** = ವಜ್ರಪಾಣಿಯಾದ ಇಂದ್ರನ, **ತನೂಜೇನ** = ಮಗನಾದ ಅರ್ಜುನನಿಂದ, **ದ್ರೌಣೇಃ** = ಅಶ್ವತ್ಥಾಮನ (ಮೇಲೆ), **ಅತೀವದಾರುಣಂ** = ಅತ್ಯಂತಘೋರವಾದ, **ಯುದ್ಧಂ ತು** = ಯುದ್ಧವಾದರೋ, **ಅಭವತ್** = ಆಯಿತು. **ತತ್ರ ಅಪಿ** = ಅಲ್ಲಿಯೂ ಸಹ (ಆ ಯುದ್ಧದಲ್ಲೂ), **ಪಾರ್ಥಃ** = ಅರ್ಜುನನು, **ಶರಪಂಜರೇಣ** = ಬಾಣಪಂಜರದಿಂದ, **ಬದ್ಧಃ (ಅಭವತ್)** = ಬಂಧಿತನಾದನು. **ಗಾಂಡಿವಜ್ಯಾ ಅಪಿ** = ಗಾಂಡಿವದ ಹಗ್ಗವೂ ಸಹ, **ಅಪನುತ್ತಾ ಹಿ** = ತುಂಡಾಯಿತು.

**ತಾತ್ಪರ್ಯ** :- ಆಗ ಅತ್ಯಂತದಾರುಣವಾದ ಯುದ್ಧ ಅರ್ಜುನನಿಗೂ, ಅಶ್ವತ್ಥಾಮನಿಗೂ ನಡೆಯಿತು. ಆ ಯುದ್ಧದಲ್ಲೂ ಅಶ್ವತ್ಥಾಮ ಅರ್ಜುನನನ್ನು ಶರಪಂಜರದಿಂದ ಬಂಧಿಸಿದ. ಅವನ ಗಾಂಡೀವದ ಹಗ್ಗವನ್ನೂ ಕತ್ತರಿಸಿದ.

### ಅರ್ಜುನನಿಂದ ಅಶ್ವತ್ಥಾಮನ ಪರಾಭವ

**ಪಾರ್ಥೋಽಪಿ ಕೃಷ್ಣೇಧಿತಬಾಹುವೀರ್ಯೋ**
**ನಿಹತ್ಯ ಸೂತಂ ಗುರುಪುತ್ರಕಸ್ಯ ।**
**ಛಿತ್ವಾ ಚ ರಶ್ಮೀಂಸ್ತುರಗಾನಮುಷ್ಯ**
**ವಿದ್ರಾವಯಾಮಾಸ ಶರೈಃ ಸುದೂರಮ್ ॥ ೯೦ ॥**

ಪಾರ್ಥಃ ಅಪಿ ಕೃಷ್ಣೇಧಿತಬಾಹುವೀರ್ಯಃ ನಿಹತ್ಯ ಸೂತಂ ಗುರುಪುತ್ರಕಸ್ಯ । ಛಿತ್ವಾ ಚ ರಶ್ಮೀನ್ ತುರಗಾನ್ ಅಮುಷ್ಯ ವಿದ್ರಾವಯಾಮಾಸ ಶರೈಃ ಸುದೂರಮ್ ॥ ೯೦ ॥

**ಅರ್ಥ** :- **ಕೃಷ್ಣೇಧಿತಬಾಹುವೀರ್ಯಃ** = ಕೃಷ್ಣನಿಂದ ವರ್ಧಿಸಲ್ಪಟ್ಟ ಬಾಹುವೀರ್ಯನಾದ, **ಪಾರ್ಥಃ ಅಪಿ** = ಅರ್ಜುನನೂ, **ಗುರುಪುತ್ರಕಸ್ಯ** = ಗುರುಪುತ್ರನ, **ಸೂತಂ** = ಸಾರಥಿಯನ್ನು, **ನಿಹತ್ಯ** = ಕೊಂದು, **ಶರೈಃ** = ಬಾಣಗಳಿಂದ, **ಅಮುಷ್ಯ** = ಅವನ, **ರಶ್ಮೀನ್ ಚ** = (ಕುದುರೆಗಳ) ಹಗ್ಗಗಳನ್ನೂ, **ಛಿತ್ವಾ** = ತುಂಡರಿಸಿ, **(ಅಮುಷ್ಯ) ತುರಗಾನ್** = ಅವನ ಕುದುರೆಗಳನ್ನು, **ಸುದೂರಂ** = ಬಹಳ ದೂರ, **ವಿದ್ರಾವಯಾಮಾಸ** = ಓಡಿಸಿದ.

**ತಾತ್ಪರ್ಯ** :- ಬಳಿಕ ಅರ್ಜುನ ಶ್ರೀಕೃಷ್ಣನಿಂದ ಬಾಹುಬಲ ಹೆಚ್ಚಿಸಲ್ಪಟ್ಟವನಾಗಿ ಅಶ್ವತ್ಥಾಮನ ಸಾರಥಿಯನ್ನು ಕೊಂದು, ಅವನ ಕುದುರೆಗಳ ಹಗ್ಗಗಳನ್ನು ಕತ್ತರಿಸಿ, ಬಾಣಗಳಿಂದ ದೂರಕ್ಕೆ ಓಡಿಸಿದ.

### ಕರ್ಣನ ಪರಾಕ್ರಮ

**ಅತೀತ್ಯ ಪುತ್ರಂ ತು ಗುರೋಃ ಸಮಾಗತೇ**
**ಪಾರ್ಥೇ ಕರ್ಣೋ ದ್ರಾವಯಾಮಾಸ ಸೇನಾಮ್ ।**
**ಪಾಂಡೋಃ ಸುತಾನಾಂ ಶರವರ್ಷಧಾರೋ**
**ದುರ್ಯೋಧನಶ್ಚಾನುಯಯೌ ತಮೇವ ॥ ೯೧ ॥**

**ಅತೀತ್ಯ ಪುತ್ರಂ ತು ಗುರೋಃ ಸಮಾಗತೇ ಪಾರ್ಥೇ ಕರ್ಣಃ ದ್ರಾವಯಾಮಾಸ ಸೇನಾಮ್ । ಪಾಂಡೋಃ ಸುತಾನಾಂ ಶರವರ್ಷಧಾರಃ ದುರ್ಯೋಧನಃ ಚ ಅನುಯಯೌ ತಂ ಏವ ॥ ೯೧ ॥**

**ಅರ್ಥ** :– **ಗುರೋಃ** = ಗುರುವಿನ, **ಪುತ್ರಂ ತು** = ಪುತ್ರನನ್ನಾದರೋ, **ಅತೀತ್ಯ** = ಅತಿಕ್ರಮಿಸಿ, **ಪಾರ್ಥೇ** = ಪಾರ್ಥನು, **ಸಮಾಗತೇ (ಸತಿ)** = ಮುಂದೆ ಬಂದಾಗ, **ಶರವರ್ಷಧಾರಃ** = ಬಾಣಗಳ ಮಳೆಗರೆಯುವವ ನಾಗಿ, **ಕರ್ಣಃ** = ಕರ್ಣನು, **ಪಾಂಡೋಃ** = ಪಾಂಡುವಿನ, **ಸುತಾನಾಂ** = ಪುತ್ರರ, **ಸೇನಾಂ** = ಸೇನೆಯನ್ನು, **ದ್ರಾವಯಾಮಾಸ** = ಓಡಿಸತೊಡಗಿದ. **ದುರ್ಯೋಧನಃ ಚ** = ದುರ್ಯೋಧನನೂ, **ತಂ ಏವ** = ಅವನನ್ನೇ, **ಅನುಯಯೌ** = ಅನುಸರಿಸಿ ಹೊರಟ.

**ತಾತ್ಪರ್ಯ** :- ಅಶ್ವತ್ಥಾಮನನ್ನು ಗೆದ್ದು ಪಾರ್ಥ ಮುಂದೆ ಬಂದಾಗ, ಕರ್ಣ ಪಾಂಡುಪುತ್ರರ ಸೇನೆಗಳನ್ನು ಬಾಣಗಳ ಮಳೆಗರೆಯುತ್ತಾ ಓಡಿಸತೊಡಗಿದ; ಅವನನ್ನೇ ಹಿಂಬಾಲಿಸಿ ದುರ್ಯೋಧನನೂ ನಡೆದ.

### ಕರ್ಣ ಧೃಷ್ಟದ್ಯುಮ್ನರ ಯುದ್ಧ

**ಕರ್ಣಮಾಯಾಂತಮಾಲೋಕ್ಯ ದ್ರಾವಯಂತಂ ನಿಜಾಂ ಚಮೂಮ್ ।**
**ಧನುರನ್ಯತ್ ಸಮಾದಾಯ ಧೃಷ್ಟದ್ಯುಮ್ನೋ ನ್ಯವಾರಯತ್ ॥ ೯೨ ॥**

ಕರ್ಣಂ ಆಯಾಂತಂ ಆಲೋಕ್ಯ ದ್ರಾವಯಂತಂ ನಿಜಾಂ ಚಮೂಮ್ । ಧನುಃ ಅನ್ಯತ್ ಸಮಾದಾಯ ಧೃಷ್ಟದ್ಯುಮ್ನಃ ನ್ಯವಾರಯತ್ ॥ ೯೨ ॥

**ಅರ್ಥ** :- **ನಿಜಾಂ ಚಮೂಂ** = ತನ್ನ ಸೇನೆಯನ್ನು, **ದ್ರಾವಯಂತಂ** = ಓಡಿಸುತ್ತಿರುವ, **ಕರ್ಣಂ** = ಕರ್ಣನನ್ನು, **ಆಯಾಂತಂ** = ಬರುತ್ತಿರುವವನ್ನಾಗಿ, **ಆಲೋಕ್ಯ** = ನೋಡಿ, **ಧೃಷ್ಟದ್ಯುಮ್ನಃ** = ಧೃಷ್ಟದ್ಯುಮ್ನನು, **ಅನ್ಯತ್** = ಬೇರೊಂದು, **ಧನುಃ** = ಧನುಸ್ಸನ್ನು, **ಸಮಾದಾಯ** = ತೆಗೆದುಕೊಂಡು, **ನ್ಯವಾರಯತ್** = ತಡೆದನು.

**ತಾತ್ಪರ್ಯ** :- ಕರ್ಣನು ಬರುತ್ತಿರುವುದನ್ನು, ತನ್ನ ಸೇನೆಯನ್ನು ಓಡಿಸುತ್ತಿದ್ದುದನ್ನು ಕಂಡು ಧೃಷ್ಟದ್ಯುಮ್ನ ಬೇರೊಂದು ಧನುಸ್ಸನ್ನು ತೆಗೆದುಕೊಂಡು ಅವನನ್ನು ತಡೆದ.

**ತಯೋರಾಸೀನ್ಮಹದ್ಯುದ್ಧಂ ಚಿರಂ ಸಮಮವಿಶ್ರಮಮ್ ।**
**ತದೈವ ಸಾತ್ಯಕಿರ್ವೀರೋ ದುರ್ಯೋಧನಮವಾರಯತ್ ॥ ೯೩ ॥**

ತಯೋಃ ಆಸೀತ್ ಮಹದ್ಯುದ್ಧಂ ಚಿರಂ ಸಮಂ ಅವಿಶ್ರಮಮ್ । ತದಾ ಏವ ಸಾತ್ಯಕಿಃ ವೀರಃ ದುರ್ಯೋಧನಂ ಅವಾರಯತ್ ॥ ೯೩ ॥

**ಅರ್ಥ** :- **ತಯೋಃ** = ಅವರಿಬ್ಬರ (ನಡುವೆ), **ಚಿರಂ** = ಬಹುಕಾಲ, **ಅವಿಶ್ರಮಂ** = ಬಿಡುವಿಲ್ಲದ, **ಮಹದ್ಯುದ್ಧಂ** = ಮಹಾಯುದ್ಧವು, **ಸಮಂ** = ಸಮವಾಗಿ, **ಆಸೀತ್** ಆಯಿತು. **ತದಾ ಏವ** = ಆಗಲೇ, **ವೀರಃ** = ವೀರನಾದ, **ಸಾತ್ಯಕಿಃ** = ಸಾತ್ಯಕಿಯು, **ದುರ್ಯೋಧನಂ** = ದುರ್ಯೋಧನನನ್ನು, **ಅವಾರಯತ್** = ತಡೆದನು.

**ತಾತ್ಪರ್ಯ** :- ಅವರಿಬ್ಬರಿಗೂ ಬಹುಕಾಲ ಬಿಡುವಿಲ್ಲದ ಮಹಾಯುದ್ಧ ಸಮವಾಗಿಯೇ ನಡೆಯಿತು. ಆಗಲೇ ವೀರನಾದ ಸಾತ್ಯಕಿ ದುರ್ಯೋಧನ ನನ್ನು ತಡೆದ.

### ದುರ್ಯೋಧನನಿಂದ ಸಾತ್ಯಕಿ ಧೃಷ್ಟದ್ಯುಮ್ನರ ಪರಾಭವ

**ನಿವಾರಿತಃ ಸಾತ್ಯಕಿನಾ ರಣೇ ದುರ್ಯೋಧನೋ ನೃಪಃ ।**
**ನಿಹತ್ಯ ಸಾತ್ಯಕೇರಶ್ವಾನ್ ದ್ರೌಪದೇಶ್ಚಾಪಮಚ್ಛಿನತ್ ॥ ೯೪ ॥**

**ನಿವಾರಿತಃ ಸಾತ್ಯಕಿನಾ ರಣೇ ದುರ್ಯೋಧನಃ ನೃಪಃ । ನಿಹತ್ಯ ಸಾತ್ಯಕೇಃ ಅಶ್ವಾನ್ ದ್ರೌಪದೇಃ ಚಾಪಂ ಅಚ್ಛಿನತ್ ॥ ೯೪ ॥**

**ಅರ್ಥ** :- **ರಣೇ** = ಯುದ್ಧದಲ್ಲಿ, **ಸಾತ್ಯಕಿನಾ** = ಸಾತ್ಯಕಿಯಿಂದ, **ನಿವಾರಿತಃ** = ತಡೆಯಲ್ಪಟ್ಟ, **ನೃಪಃ** = ರಾಜನಾದ, **ದುರ್ಯೋಧನಃ** = ದುರ್ಯೋಧನನು, **ಸಾತ್ಯಕೇಃ** = ಸಾತ್ಯಕಿಯ, **ಅಶ್ವಾನ್** = ಕುದುರೆಗಳನ್ನು, **ನಿಹತ್ಯ** = ಕೊಂದು, **ದ್ರೌಪದೇಃ** = ಧೃಷ್ಟದ್ಯುಮ್ನನ, **ಚಾಪಂ** = ಧನುಸ್ಸನ್ನು, **ಅಚ್ಛಿನತ್** = ತುಂಡರಿಸಿದ.

**ತಾತ್ಪರ್ಯ** :- ಯುದ್ಧದಲ್ಲಿ ಸಾತ್ಯಕಿಯಿಂದ ತಡೆಯಲ್ಪಟ್ಟ ದುರ್ಯೋಧನ ಸಾತ್ಯಕಿಯ ಕುದುರೆಗಳನ್ನು ಸಂಹರಿಸಿ, ಧೃಷ್ಟದ್ಯುಮ್ನನ ಧನುಸ್ಸನ್ನು ತುಂಡರಿಸಿದ.

**ತದಂತರೈವ ಕರ್ಣೋಽಪಿ ಪಾರ್ಷತಾಶ್ವಾನಪಾತಯತ್ ।**
**ತಯೋರ್ವಿರಥಯೋರೇವಂ ಭಗ್ನಂ ತತ್ ಪಾಂಡವಂ ಬಲಮ್ ॥ ೯೫ ॥**

**ತದಂತರಾ ಏವ ಕರ್ಣಃ ಅಪಿ ಪಾರ್ಷತಾಶ್ವಾನ್ ಅಪಾತಯತ್ । ತಯೋಃ ವಿರಥಯೋಃ ಏವಂ ಭಗ್ನಂ ತತ್ ಪಾಂಡವಂ ಬಲಮ್ ॥ ೯೫ ॥**

**ಅರ್ಥ** :- **ಕರ್ಣಃ ಅಪಿ** = ಕರ್ಣನೂ ಸಹ, **ತದಂತರಾ ಏವ** = ಆ ನಡುವೆಯೇ, **ಪಾರ್ಷತಾಶ್ವಾನ್** = ಧೃಷ್ಟದ್ಯುಮ್ನನ ಕುದುರೆಗಳನ್ನು, **ಅಪಾತಯತ್** = ಕೆಡವಿದ. **ಏವಂ** = ಹೀಗೆ, **ತಯೋಃ** = ಅವರಿಬ್ಬರು, **ವಿರಥಯೋಃ** = ರಥವನ್ನು ಕಳೆದುಕೊಂಡಾಗ, **ತತ್** = ಆ **ಪಾಂಡವಂ ಬಲಂ** = ಪಾಂಡವರ ಸೇನೆಯು, **ಭಗ್ನಂ (ಅಭೂತ್)** = ಚೆಲ್ಲಾಪಿಲ್ಲಿಯಾಯಿತು.

**ತಾತ್ಪರ್ಯ** :- ಈ ಮಧ್ಯೆ ಕರ್ಣನೂ ಧೃಷ್ಟದ್ಯುಮ್ನನ ಅಶ್ವಗಳನ್ನು ಕೊಂದು ಕೆಡವಿದ. ಸಾತ್ಯಕಿ ಧೃಷ್ಟದ್ಯುಮ್ನರು ವಿರಥರಾಗುತ್ತಲೇ ಪಾಂಡವಸೇನೆ ಚೆಲ್ಲಾಪಿಲ್ಲಿಯಾಯಿತು.

### ಭೀಮನ ಅದ್ಭುತ ಪರಾಕ್ರಮ

**ಬಲಂ ಸ್ವಕೀಯಂ ಬಹುಧಾ ವಿಭಿನ್ನಂ**
**ಸಮೀಕ್ಷ್ಯ ಭೀಮೋ ಮೃಗರಾಜಕೇತುಃ ।**

**ಕೃತ್ವಾ ಧರಾಕಂಪಕಮುಗ್ರನಾದಂ**
**ರಣೇಽಭ್ಯಯಾತ್ ಕೌರವರಾಜಸೈನ್ಯಮ್ ॥ ೯೬ ॥**

ಬಲಂ ಸ್ವಕೀಯಂ ಬಹುಧಾ ವಿಭಿನ್ನಂ ಸಮೀಕ್ಷ್ಯ ಭೀಮಃ ಮೃಗರಾಜಕೇತುಃ । ಕೃತ್ವಾ ಧರಾಕಂಪಕಂ ಉಗ್ರನಾದಂ ರಣೇ ಅಭ್ಯಯಾತ್ ಕೌರವರಾಜಸೈನ್ಯಮ್ ॥ ೯೬ ॥

**ಅರ್ಥ** :- **ಸ್ವಕೀಯಂ** = ತಮ್ಮ, **ಬಲಂ** = ಸೇನೆಯು, **ಬಹುಧಾ** = ಬಹುರೀತಿಯಲ್ಲಿ, **ವಿಭಿನ್ನಂ** = ನಾಶವಾಗಿದ್ದನ್ನು, **ಸಮೀಕ್ಷ್ಯ** = ನೋಡಿ, **ಮೃಗರಾಜಕೇತುಃ** = ಸಿಂಹಧ್ವಜನಾದ, **ಭೀಮಃ** = ಭೀಮನು, **ಧರಾಕಂಪಂ** = ಭೂಮಿಯು ಕಂಪಿಸುವಂತಹ, **ಉಗ್ರನಾದಂ** = ಉಗ್ರಶಬ್ದವನ್ನು, **ಕೃತ್ವಾ** = ಮಾಡಿ, **ಕೌರವರಾಜಸೈನ್ಯಂ** = ಕೌರವರಾಜನ ಸೇನೆಯನ್ನು, **ರಣೇ** = ಯುದ್ಧದಲ್ಲಿ, **ಅಭ್ಯಯಾತ್** = ಎದುರಿಸಿದ.

**ತಾತ್ಪರ್ಯ** :- ತಮ್ಮ ಸೇನೆ ಬಹುರೀತಿಯಲ್ಲಿ ನಾಶವಾಗುತ್ತಿದ್ದುದನ್ನು ನೋಡಿ, ಸಿಂಹಧ್ವಜನಾದ ಭೀಮಸೇನ ಭೂಮಿಕಂಪಿಸುವಂತಹ ಸಿಂಹನಾದ ವನ್ನು ಮಾಡಿ, ಕೌರವರಾಜನ ಸೇನೆಯನ್ನು ಯುದ್ಧದಲ್ಲಿ ಎದುರಿಸಿದ :

### ಭೀಮನಿಂದ ಸೈನ್ಯದ ಪಲಾಯನ - ದುರ್ಯೋಧನನ ಪರಾಜಯ

**ನಾದೇನ ಬಾಣೈಶ್ಚ ವೃಕೋದರೇಣ**
**ಭಗ್ನಂ ತದಾ ಕೌರವಸೈನ್ಯಮಾಶು ।**
**ದಿಶೋ ವಿದುದ್ರಾವ ಸುಯೋಧನೋಽಪಿ**
**ಕೃತೋ ರಣೇ ತೇನ ವಿವಾಹನಾಯುಧಃ ॥ ೯೭ ॥**

ನಾದೇನ ಬಾಣೈಃ ಚ ವೃಕೋದರೇಣ ಭಗ್ನಂ ತದಾ ಕೌರವಸೈನ್ಯಂ ಆಶು । ದಿಶಃ ವಿದುದ್ರಾವ ಸುಯೋಧನಃ ಅಪಿ ಕೃತಃ ರಣೇ ತೇನ ವಿವಾಹನಾಯುಧಃ ॥ ೯೭ ॥

**ಅರ್ಥ** :- **ವೃಕೋದರೇಣ** = ಭೀಮನಿಂದ, **ನಾದೇನ** = ಸಿಂಹನಾದದಿಂದ, **ಬಾಣೈಃ ಚ** = ಬಾಣಗಳಿಂದಲೂ, **ತದಾ** = ಆಗ, **ಆಶು** = ಬೇಗನೆ, **ಭಗ್ನಂ** = ಪರಾಜಿತವಾದ, **ಕೌರವಸೈನ್ಯಂ** = ಕೌರವಸೈನ್ಯವು, **ದಿಶಃ ವಿದುದ್ರಾವ** = ದಿಕ್ಕಾಪಾಲಾಗಿ ಓಡಿತು. **ತೇನ** = ಆ ಭೀಮನಿಂದ, **ಸುಯೋಧನಃ ಅಪಿ** = ದುರ್ಯೋಧನನೂ ಸಹ,

**ರಣೇ** = ಯುದ್ಧದಲ್ಲಿ, **ವಿವಾಹನಾಯುಧಃ** = ವಾಹನ (ರಥ) ಆಯುಧಗಳನ್ನು ಕಳೆದುಕೊಂಡವನಾಗಿ, **ಕೃತಃ** = ಮಾಡಲ್ಪಟ್ಟನು.

**ತಾತ್ಪರ್ಯ** :- ಭೀಮಸೇನನ ಸಿಂಹನಾದದಿಂದಲೂ, ಬಾಣಗಳಿಂದಲೂ ಆಗ ಕುರುಸೇನೆ ಕೂಡಲೇ ಭಗ್ನವಾಗಿ, ದಿಕ್ಕಾಪಾಲಾಗಿ ಓಡತೊಡಗಿತು. ಯುದ್ಧದಲ್ಲಿ ದುರ್ಯೋಧನ ಭೀಮಸೇನನಿಂದ ರಥವನ್ನೂ ಆಯುಧಗಳನ್ನೂ ಕಳೆದುಕೊಂಡ.

**ದೃಷ್ಟ್ವೈವ ತತ್ ಪಾಂಡವಾನಾಂ ಚ ಸೇನಾ**
**ಸಮಾವೃತ್ತಾ ಕ್ಷಿಪ್ರಮವಾರ್ಯವೇಗಾ ।**
**ತಯಾ ಪುನಃ ಕೌರವಾಣಾಂ ಬಲಂ ತ-**
**ದ್ಭಗ್ನಂ ದೂರಾದ್ದೂರತರಂ ಪ್ರದುದ್ರುವೇ ॥ ೯೮ ॥**

ದೃಷ್ಟ್ವಾ ಏವ ತತ್ ಪಾಂಡವಾನಾಂ ಚ ಸೇನಾ ಸಮಾವೃತ್ತಾ ಕ್ಷಿಪ್ರಂ ಅವಾರ್ಯವೇಗಾ । ತಯಾ ಪುನಃ ಕೌರವಾಣಾಂ ಬಲಂ ತತ್ ಭಗ್ನಂ ದೂರಾತ್ ದೂರತರಂ ಪ್ರದುದ್ರುವೇ ॥ ೯೮ ॥

**ಅರ್ಥ** :- **ತತ್** = ಅದನ್ನು, **ದೃಷ್ಟ್ವಾ** ಏವ = ನೋಡುತ್ತಲೇ, **ಅವಾರ್ಯವೇಗಾ** = ತಡೆಯಲಾಗದ ವೇಗವುಳ್ಳದ್ದಾದ, **ಪಾಂಡವಾನಾಂ** = ಪಾಂಡವರ, **ಸೇನಾ ಚ** = ಸೇನೆಯೂ ಸಹ, **ಕ್ಷಿಪ್ರಂ** = ಬೇಗನೆ, **ಸಮಾವೃತ್ತಾ** = ಮರಳಿ ಬಂದಿತು. **ತಯಾ** = ಆ ಪಾಂಡವ ಸೇನೆಯಿಂದ, **ಪುನಃ** = ಮತ್ತೆ, **ಭಗ್ನಂ** = ಪರಾಜಿತವಾದ, **ಕೌರವಾಣಾಂ** = ಕೌರವರ, **ತತ್ ಬಲಂ** = ಆ ಸೇನೆಯು, **ದೂರಾತ್ ದೂರತರಂ** = ದೂರದಿಂದಲೂ ದೂರಕ್ಕೆ, **ಪ್ರದುದ್ರುವೇ** = ಓಡಿಹೋಯಿತು.

**ತಾತ್ಪರ್ಯ** :- ಅದನ್ನು ನೋಡುತ್ತಲೇ ಪಾಂಡವಸೇನೆ ತಡೆಯಲಾಗದ ವೇಗದಿಂದ ಮರಳಿ ಯುದ್ಧಕ್ಕೆ ಕೂಡಲೇ ಆಗಮಿಸಿತು. ಅದರಿಂದ ಕೌರವರ ಆ ಸೇನೆ ಪರಾಭವಗೊಂಡು ದೂರದಿಂದ ದೂರಕ್ಕೆ ಜೋರಾಗಿ ಓಡಿ ಹೋಯಿತು.

### ಕೆರಳಿದ ಕರ್ಣ

**ಹನ್ಯಮಾನಂ ದಿಶೋ ಯಾಂತಂ ಪಾಂಚಾಲ್ಯೈರ್ಭೀಮಸಂಶ್ರಯಾತ್ ।**
**ಸುಯೋಧನಬಲಂ ದೃಷ್ಟ್ವಾ ಜಜ್ವಾಲಾಧಿರಥಿಃ ಕ್ರುಧಾ ॥ ೯೯ ॥**

**ಹನ್ಯಮಾನಂ ದಿಶಃ ಯಾಂತಂ ಪಾಂಚಾಲ್ಯೈಃ ಭೀಮಸಂಶ್ರಯಾತ್ ।**
**ಸುಯೋಧನಬಲಂ ದೃಷ್ಟ್ವಾ ಜಜ್ವಾಲ ಆಧಿರಥಿಃ ಕ್ರುಧಾ ॥ ೯೯ ॥**

**ಅರ್ಥ** :- **ಭೀಮಸಂಶ್ರಯಾತ್** = ಭೀಮನ ಬಲವಾದ ಆಶ್ರಯದಿಂದ, **ಪಾಂಚಾಲ್ಯೈಃ** = ಪಾಂಚಾಲರಿಂದ, **ದಿಶಃ ಪ್ರಯಾಂತಂ** = ದಿಕ್ಕಾಪಾಲಾಗಿ ಹೋದ, **ಹನ್ಯಮಾನಂ** = ಪೆಟ್ಟುತಿಂದ, **ಸುಯೋಧನಬಲಂ** = ದುರ್ಯೋಧನನ ಸೇನೆಯನ್ನು, **ದೃಷ್ಟ್ವಾ** = ಕಂಡು, **ಆಧಿರಥಿಃ** = ಕರ್ಣನು, **ಕ್ರುಧಾ** = ಕೋಪದಿಂದ, **ಜಜ್ವಾಲ** = ಉರಿಯತೊಡಗಿದ.

**ತಾತ್ಪರ್ಯ** :- ಭೀಮನನ್ನು ಆಶ್ರಯಿಸಿದ ಪಾಂಚಾಲರಿಂದ ಪೆಟ್ಟು ತಿಂದು ದಿಕ್ಕಾಪಾಲಾಗಿ ದುರ್ಯೋಧನನ ಸೇನೆ ಓಡುತ್ತಿದ್ದುದನ್ನು ಕಂಡು ಕರ್ಣ ಕೋಪದಿಂದ ಉರಿಯತೊಡಗಿದ.

### ಕರ್ಣನಿಂದ ಭಾರ್ಗವಾಸ್ತ್ರ ಪ್ರಯೋಗ

**ಸೋಽಮೋಘಂ ರಾಮದೈವತ್ಯಮಸ್ತ್ರಂ ಭಾರ್ಗವಸಂಜ್ಞಿತಮ್ ।**
**ಸರ್ವಾಸ್ತ್ರನಾಶಕಂ ದಿವ್ಯಮಪ್ರತಿದ್ವಂದ್ವಮಾದದೇ ॥ ೧೦೦ ॥**

**ಸಃ ಅಮೋಘಂ ರಾಮದೈವತ್ಯಂ ಅಸ್ತ್ರಂ ಭಾರ್ಗವಸಂಜ್ಞಿತಮ್ । ಸರ್ವಾಸ್ತ್ರನಾಶಕಂ ದಿವ್ಯಂ ಅಪ್ರತಿದ್ವಂದ್ವಂ ಆದದೇ ॥ ೧೦೦ ॥**

**ಅರ್ಥ** :- **ಸಃ** = ಅವನು, **ಅಮೋಘಂ** = ವ್ಯರ್ಥವಾಗದ, **ಸರ್ವಾಸ್ತ್ರನಾಶಕಂ** = ಎಲ್ಲ ಅಸ್ತ್ರಗಳನ್ನು ನಾಶಮಾಡುವ, **ದಿವ್ಯಂ** = ದಿವ್ಯವಾದ, **ಅಪ್ರತಿದ್ವಂದ್ವಂ** = ಪ್ರತ್ಯಸ್ತ್ರವಿಲ್ಲದ, **ರಾಮದೈವತ್ಯಂ** = ಪರಶುರಾಮದೇವತಾಕವಾದ, **ಭಾರ್ಗವಸಂಜ್ಞಿತಂ** = ಭಾರ್ಗವ ಎಂಬ ಹೆಸರಿನ, **ಅಸ್ತ್ರಂ** = ಅಸ್ತ್ರವನ್ನು, **ಆದದೇ** = ತೆಗೆದುಕೊಂಡ.

**ತಾತ್ಪರ್ಯ** :- ಕರ್ಣನು ಪರಶುರಾಮದೇವತಾಕವಾದ ಭಾರ್ಗವ ಎಂಬ ಹೆಸರಿನ ಅಮೋಘವಾದ ದಿವ್ಯಾಸ್ತ್ರವನ್ನು ತೆಗೆದುಕೊಂಡ ; ಅದು ಇತರ ಸಕಲ ಅಸ್ತ್ರಗಳನ್ನೂ ನಾಶಮಾಡಬಲ್ಲ ಪ್ರತ್ಯಸ್ತ್ರವೇ ಇರದ ದಿವ್ಯಾಸ್ತ್ರ.

### ಅಸ್ತ್ರಕ್ಕೆ ಮಣಿಯದ ಭೀಮ

**ತಚ್ಚ ಭೀಮಪುರೋಗೇಷು ಸೈನ್ಯೇಷ್ವಮುಚದುಲ್ಬಣಮ್ ।**
**ತದಸ್ತ್ರಂ ವರ್ಜಯಾಮಾಸ ಭೀಮಂ ರಾಮಪ್ರಸಾದತಃ ॥ ೧೦೧ ॥**

**ತತ್ ಚ ಭೀಮಪುರೋಗೇಷು ಸೈನ್ಯೇಷು ಅಮುಚತ್ ಉಲ್ಬಣಮ್ । ತತ್ ಅಸ್ತ್ರಂ ವರ್ಜಯಾಮಾಸ ಭೀಮಂ ರಾಮಪ್ರಸಾದತಃ ॥ ೧೦೧ ॥**

**ಅರ್ಥ** :– **ತತ್ ಉಲ್ಬಣಂ** = ಆ ಕ್ರೂರವಾದ (ಅಸ್ತ್ರವನ್ನು), **ಭೀಮಪುರೋಗೇಷು** = ಭೀಮ ಮೊದಲಾದವರಿರುವ, **ಸೈನ್ಯೇಷು** = ಸೈನ್ಯಗಳ ಮೇಲೆ, **ಅಮುಚತ್ ಚ** = ಪ್ರಯೋಗಿಸಿದನು ಸಹ. **ತತ್ ಅಸ್ತ್ರಂ** = ಆ ಅಸ್ತ್ರವು, **ರಾಮಪ್ರಸಾದತಃ** = (ಪರಶು)ರಾಮನ ಪ್ರಸಾದದಿಂದ, **ಭೀಮಂ** = ಭೀಮನನ್ನು, **ವರ್ಜಯಾಮಾಸ** = ಬಿಟ್ಟಿತು.

**ತಾತ್ಪರ್ಯ** :- ಕರ್ಣ ಉಲ್ಬಣವಾದ ಆ ಭಾರ್ಗವಾಸ್ತ್ರವನ್ನು ಭೀಮ ಮೊದಲಾದವರಿದ್ದ ಸೇನೆಯ ಮೇಲೆ ಪ್ರಯೋಗಿಸಿದ ; ಆ ಅಸ್ತ್ರ ಪರಶುರಾಮನ ಅನುಗ್ರಹದಿಂದಾಗಿ ಭೀಮನನ್ನು ಬಿಟ್ಟುಬಿಟ್ಟಿತು.

### ಓಡಿ ಬದುಕಿದ ಪಾಂಡವ ವೀರರು

**ಅನ್ಯೇ ತು ದುದ್ರುವುಃ ಕೇಚಿಚ್ಛಿಷ್ಟಾಃ ಪ್ರಾಪುರ್ಯಮಕ್ಷಯಮ್ ।**
**ನ ಹ್ಯಸ್ತ್ರಂ ದ್ರಾವಮಾಣಾಂಸ್ತದ್ಧಂತಿ ತೇನ ಸಪಾರ್ಷತಾಃ ॥ ೧೦೨ ॥**

**ಅನ್ಯೇ ತು ದುದ್ರುವುಃ ಕೇಚಿತ್ ಶಿಷ್ಟಾಃ ಪ್ರಾಪುಃ ಯಮಕ್ಷಯಮ್ । ನ ಹಿ ಅಸ್ತ್ರಂ ದ್ರಾವಮಾಣಾನ್ ತತ್ ಹಂತಿ ತೇನ ಸಪಾರ್ಷತಾಃ ॥ ೧೦೨ ॥**

**ಪಾಂಚಾಲಾ ದ್ರೌಪದೇಯಾಶ್ಚ ಶೈನೇಯಾದ್ಯಾಶ್ಚ ಸರ್ವಶಃ ।**
**ಪಲಾಯನೇನೋರ್ವರಿತಾ ಅರ್ಜುನೋऽಪ್ಯಸ್ತ್ರಮುದ್ಯತಮ್ ॥ ೧೦೩ ॥**

**ಪಾಂಚಾಲಾಃ ದ್ರೌಪದೇಯಾಃ ಚ ಶೈನೇಯಾದ್ಯಾಃ ಚ ಸರ್ವಶಃ । ಪಲಾಯನೇನ ಉರ್ವರಿತಾಃ ಅರ್ಜುನಃ ಅಪಿ ಅಸ್ತ್ರಂ ಉದ್ಯತಮ್ ॥ ೧೦೩ ॥**

**ವೀಕ್ಷ್ಯ ಪ್ರತ್ಯಸ್ತ್ರಹೀನಂ ತದಪ್ರಾಪ್ಯೈವ ರವೇಃ ಸುತಮ್ ।**
**ವಾಸುದೇವಮಿದಂ ಪ್ರಾಹ ವರ್ಜಯಿತ್ವೈವ ಸೂತಜಮ್ ॥ ೧೦೪ ॥**

ವೀಕ್ಷ್ಯ ಪ್ರತ್ಯಸ್ತ್ರಹೀನಂ ತತ್ ಅಪ್ರಾಪ್ಯ ಏವ ರವೇಃ ಸುತಮ್ । ವಾಸುದೇವಂ ಇದಂ ಪ್ರಾಹ ವರ್ಜಯಿತ್ವಾ ಏವ ಸೂತಜಮ್ ॥ ೧೦೪ ॥

**ಅನ್ಯತ್ರ ಯಾಮಿ ನೈವಾಸ್ಮಾದಸ್ತ್ರಾಜ್ಜೀವನಮನ್ಯಥಾ ।**
**ಇತ್ಯೂಚಿವಾಂಸಂ ಪಾರ್ಥಂ ತಂ ಕೃಷ್ಣೋಽಪ್ರಾಪ್ಯೈವ ಸೂತಜಮ್ ॥ ೧೦೫ ॥**

ಅನ್ಯತ್ರ ಯಾಮಿ ನ ಏವ ಅಸ್ಮಾತ್ ಅಸ್ತ್ರಾತ್ ಜೀವನಂ ಅನ್ಯಥಾ । ಇತಿ ಊಚಿವಾಂಸಂ ಪಾರ್ಥಂ ತಂ ಕೃಷ್ಣಃ ಅಪ್ರಾಪ್ಯ ಏವ ಸೂತಜಮ್ ॥ ೧೦೫ ॥

ಯುಧಿಷ್ಠಿರನ ಬಳಿಗೆ ತೆರಳಲು ಭೀಮನಿಗೆ ಅರ್ಜುನನ ಪ್ರಾರ್ಥನೆ

**ಅನ್ಯೇನೈವ ಪಥಾ ಭೀಮಂ ಪ್ರಾಪಯಾಮಾಸ ವಿಶ್ವಕೃತ್ ।**
**ತತ್ರಾರ್ಜುನೋಽವದದ್ಭೀಮಂ ಯಾಹಿ ದ್ರಷ್ಟುಂ ಯುಧಿಷ್ಠಿರಮ್ ॥ ೧೦೬ ॥**

ಅನ್ಯೇನ ಏವ ಪಥಾ ಭೀಮಂ ಪ್ರಾಪಯಾಮಾಸ ವಿಶ್ವಕೃತ್ । ತತ್ರ ಅರ್ಜುನಃ ಅವದತ್ ಭೀಮಂ ಯಾಹಿ ದ್ರಷ್ಟುಂ ಯುಧಿಷ್ಠಿರಮ್ ॥ ೧೦೬ ॥

**ಪ್ರವೃತ್ತಿಂ ವಿದ್ಧಿ ಭೂಪಸ್ಯ ಮಾಂ ತು ಸಂಶಪ್ತಕಾ ಯುಧೇ ।**
**ಆಹ್ವಯಂತಿ ಹತೋಚ್ಛೇಷಾಸ್ತಾನಹಂ ಯಾಮಿ ತದ್ಯುಧೇ ॥ ೧೦೭ ॥**

ಪ್ರವೃತ್ತಿಂ ವಿದ್ಧಿ ಭೂಪಸ್ಯ ಮಾಂ ತು ಸಂಶಪ್ತಕಾಃ ಯುಧೇ । ಆಹ್ವಯಂತಿ ಹತೋಚ್ಛೇಷಾಃ ತಾನ್ ಅಹಂ ಯಾಮಿ ತತ್ ಯುಧೇ ॥ ೧೦೭ ॥

**ಅರ್ಥ** :- **ಅನ್ಯೇ ತು** = ಬೇರೆಯವರಾದರೋ, **ದುದ್ರುವುಃ** = ಓಡಿದರು, **ಶಿಷ್ಟಾಃ ಕೇಚಿತ್** = ಉಳಿದ ಕೆಲವರು, **ಯಮಕ್ಷಯಂ** = ಯಮನ ಮನೆಯನ್ನು, **ಪ್ರಾಪುಃ** = ಸೇರಿದರು. **ಹಿ** = ಯಾವ ಕಾರಣದಿಂದ, **ತತ್ ಅಸ್ತ್ರಂ** = ಆ ಅಸ್ತ್ರವು, **ದ್ರಾವಮಾಣಾನ್** = ಪಲಾಯನಮಾಡುವವರನ್ನು, **ನ ಹಂತಿ** = ಕೊಲ್ಲುವುದಿಲ್ಲವೋ, **ತೇನ** = ಆ ಕಾರಣದಿಂದ, **ಸಪಾರ್ಷತಾಃ** = ಧೃಷ್ಟದ್ಯುಮ್ನನಿಂದ ಕೂಡಿದ, **ಪಾಂಚಾಲಾಃ** = ಪಾಂಚಾಲರು, **ದ್ರೌಪದೇಯಾಃ ಚ** = ದ್ರೌಪದಿಯ ಪುತ್ರರೂ, **ಶೈನೇಯಾದ್ಯಾಃ** = ಸಾತ್ಯಕಿ ಮೊದಲಾದ, **ಸರ್ವಶಃ ಚ** = ಎಲ್ಲರೂ, **ಪಲಾಯನೇನ** = ಪಲಾಯನದಿಂದ, **ಉರ್ವರಿತಾಃ** = ಬದುಕುಳಿದರು. **ಅರ್ಜುನಃ ಅಪಿ** = ಅರ್ಜುನನೂ ಸಹ, **ರವೇಃ ಸುತಂ**

= ರವಿಯ ಪುತ್ರನಾದ ಕರ್ಣನನ್ನು, **ಅಪ್ರಾಪ್ಯ ಏವ** = ಎದುರಿಸದಲೆ, **ಪ್ರತ್ಯಸ್ತ್ರಹೀನಂ** = ಪ್ರತ್ಯಸ್ತ್ರವಿಲ್ಲದ, **ಉದ್ಯತಂ** = ಮೇಲೆಬರುತ್ತಿರುವ, **ತತ್ ಅಸ್ತ್ರಂ** = ಆ ಅಸ್ತ್ರವನ್ನು, **ವೀಕ್ಷ್ಯ** = ನೋಡಿ, **ವಾಸುದೇವಂ** = ವಾಸುದೇವನನ್ನು ಕುರಿತು, **ಇದಂ** = ಇದನ್ನು, **ಪ್ರಾಹ** = ಹೇಳಿದನು. **ಸೂತಜಂ** = ಸೂತಪುತ್ರನಾದ ಕರ್ಣನನ್ನು, **ವರ್ಜಯಿತ್ವಾ ಏವ** = ಬಿಟ್ಟು, **ಅನ್ಯತ್ರ** = ಬೇರೆಡೆಗೆ, **ಯಾಮಿ** = ತೆರಳುವೆನು. **ಅನ್ಯಥಾ** = ಇಲ್ಲವಾದಲ್ಲಿ, **ಅಸ್ಮಾತ್** = ಈ, **ಅಸ್ತ್ರಾತ್** = ಅಸ್ತ್ರದಿಂದ, **ಜೀವನಂ ನ ಏವ** = ಬದುಕೇ ಇಲ್ಲ. **ಇತಿ** = ಹೀಗೆಂದು, **ಊಚಿವಾಂಸಂ** = ಹೇಳುತ್ತಿದ್ದ, **ತಂ** = ಆ, **ಪಾರ್ಥಂ** = ಪಾರ್ಥನನ್ನು, **ವಿಶ್ವಕೃತ್** = ಸರ್ವಕರ್ತೃವಾದ, **ಕೃಷ್ಣಃ** = ಕೃಷ್ಣನು, **ಸೂತಜಂ** = ಸೂತ್ರಪುತ್ರನಾದ ಕರ್ಣನನ್ನು, **ಅಪ್ರಾಪ್ಯ ಏವ** = ಸೇರದಲೇ, **ಅನ್ಯೇನ** = ಬೇರೊಂದು, **ಪಥಾ ಏವ** = ಮಾರ್ಗದಿಂದ, **ಭೀಮಂ** = ಭೀಮನನ್ನು (ಭೀಮನೊಂದಿಗೆ), **ಪ್ರಾಪಯಾಮಾಸ** = ಸೇರಿಸಿದನು. **ತತ್ರ** = ಅಲ್ಲಿ, **ಅರ್ಜುನಃ** = ಅರ್ಜುನನು, **ಭೀಮಂ** = ಭೀಮನನ್ನು ಕುರಿತು, **ಅವದತ್** = ಹೇಳಿದ, **ಯುಧಿಷ್ಠಿರಂ** = ಯುಧಿಷ್ಠಿರನನ್ನು, **ದ್ರಷ್ಟುಂ** = ಕಾಣಲು, **ಯಾಹಿ** = ಹೋಗು, **ಭೂಪಸ್ಯ** = ರಾಜನಾದ ಯುಧಿಷ್ಠಿರನ, **ಪ್ರವೃತ್ತಿಂ** = ವಾರ್ತೆಯನ್ನು, **ವಿದ್ಧಿ** = ತಿಳಿದುಕೊ. **ಮಾಂ ತು** = ನನ್ನನ್ನಾದರೋ, **ಹತೋಚ್ಛೇಷಾಃ** = ಅಳಿದುಳಿದ, **ಸಂಶಪ್ತಕಾಃ** = ಸಂಶಪ್ತಕರು, **ಯುಧೇ** = ಯುದ್ಧಕ್ಕಾಗಿ, **ಆಹ್ವಯಂತಿ** = ಆಹ್ವಾನಿಸುತ್ತಿರುವರು. **ತತ್** = ಆದ್ದರಿಂದ, **ಅಹಂ** = ನಾನು, **ಯುಧೇ** = ಯುದ್ಧಕ್ಕೆಂದು, **ತಾನ್** = ಅವರನ್ನು ಕುರಿತು, **ಯಾಮಿ** = ಹೋಗುವೆನು. (೧೦೨-೧೦೭)

**ತಾತ್ಪರ್ಯ** :- ಕೆಲವರು ಓಡಿದರು, ಮತ್ತೆ ಉಳಿದ ಕೆಲವರು ಯಮಲೋಕವನ್ನು ತಲುಪಿದರು. ಆ ಅಸ್ತ್ರ ಪಲಾಯನ ಮಾಡುವವರನ್ನು ಕೊಲ್ಲುವಂತಹುದಲ್ಲ. ಧೃಷ್ಟದ್ಯುಮ್ನ ಮೊದಲಾದ ಪಾಂಚಾಲರು, ದ್ರೌಪದಿಯ ಮಕ್ಕಳು, ಸಾತ್ಯಕಿ ಮೊದಲಾದವರು ಪಲಾಯನ ಮಾಡಿದ್ದರಿಂದಾಗಿ ಬದುಕುಳಿದರು. ಅರ್ಜುನನೂ ಸಹ ಆ ಅಸ್ತ್ರ ಬರುತ್ತಿದ್ದುದನ್ನು ಕಂಡು ಅದಕ್ಕೆ ಪ್ರತ್ಯಸ್ತ್ರವಿಲ್ಲ ಎಂಬುದನ್ನು ತಿಳಿದು ಅವನನ್ನು ಎದುರಿಸದೇ ಕೃಷ್ಣನಿಗೆ ಕೇಳಿಕೊಂಡ 'ಈ ಕರ್ಣನನ್ನು ಬಿಟ್ಟು ನಾನು ಬೇರೆಡೆಗೆ ತೆರಳುವೆನು, ಇಲ್ಲವಾದಲ್ಲಿ ಈ ಅಸ್ತ್ರದಿಂದ ಬದುಕಲಾಗದು'. ಹೀಗೆ

ಅರ್ಜುನನು ನುಡಿಯಲು ಸರ್ವಕರ್ತೃವಾದ ಕೃಷ್ಣ ಅವನನ್ನು ಕರ್ಣನಿಂದ ತಪ್ಪಿಸಿ ಮತ್ತೊಂದು ದಾರಿಯಿಂದಲೇ ಭೀಮನ ಬಳಿಗೆ ತಲುಪಿಸಿದ. ಅಲ್ಲಿ ಅರ್ಜುನ ಭೀಮನಿಗೆ ಕೇಳಿಕೊಂಡ 'ನೀನು ಧರ್ಮರಾಜನನ್ನು ಕಾಣಲು ತೆರಳು. ಅವನ ಸಮಾಚಾರವನ್ನು ತಿಳಿದು ಬಾ. ನನ್ನನ್ನು ಯುದ್ಧದಲ್ಲಿ ಅಳಿದುಳಿದ ಸಂಶಪ್ತಕರು ಕರೆಯುತ್ತಿರುವರು. ಆದ್ದರಿಂದ ನಾನು ಅವರ ಮೇಲೆ ಯುದ್ಧಕ್ಕೆ ತೆರಳುವೆ'.(೧೦೨-೧೦೭)

### ತೆರಳಲು ಒಪ್ಪದ ಭೀಮ

**ಇತ್ಯೂಚಿವಾಂಸಂ ತಮುವಾಚ ಭೀಮೋ**
**ಜಾನನ್ ಸ್ವಬಾಹ್ವೋರ್ಬಲಮಪ್ರಮೇಯಮ್ ।**
**ಸಂಶಪ್ತಕಾನ್ ಸೂತಜಂ ಕೌರವಾಂಶ್ಚ**
**ಯೋತ್ಸ್ಯೇऽಹಮೇಕಸ್ತ್ವಮುಪೈಹಿ ಭೂಪಮ್ ॥ ೧೦೮ ॥**

**ಇತಿ ಊಚಿವಾಂಸಂ ತಂ ಉವಾಚ ಭೀಮಃ ಜಾನನ್ ಸ್ವಬಾಹ್ವೋಃ ಬಲಂ ಅಪ್ರಮೇಯಮ್ । ಸಂಶಪ್ತಕಾನ್ ಸೂತಜಂ ಕೌರವಾನ್ ಚ ಯೋತ್ಸ್ಯೇ ಅಹಂ ಏಕಃ ತ್ವಂ ಉಪೈಹಿ ಭೂಪಮ್ ॥ ೧೦೮ ॥**

**ಅರ್ಥ** :– **ಇತಿ** = ಹೀಗೆಂದು, **ಊಚಿವಾಂಸಂ** = ಹೇಳುತ್ತಿರುವ, **ತಂ** = ಅವನನ್ನು ಕುರಿತು, **ಅಪ್ರಮೇಯಂ** = ಸಾಕಲ್ಯೇನ ಅರಿಯಲಾಗದ, **ಸ್ವಬಾಹ್ವೋಃ** = ತನ್ನ ಎರಡು ಬಾಹುಗಳ, **ಬಲಂ** = ಬಲವನ್ನು, **ಜಾನನ್** = ಅರಿತವನಾದ, **ಭೀಮಃ** = ಭೀಮನು, **ಉವಾಚ** = ಹೇಳಿದ. **ಸಂಶಪ್ತಕಾನ್** = ಸಂಶಪ್ತಕರನ್ನು, **ಸೂತಜಂ** = ಸೂತಪುತ್ರನನ್ನು, **ಕೌರವಾನ್ ಚ** = ಕೌರವರನ್ನೂ (ಕುರಿತು), **ಅಹಂ ಏಕಃ** = ನಾನೊಬ್ಬನೇ, **ಯೋತ್ಸ್ಯೇ** = ಯುದ್ಧಮಾಡುವೆ, **ತ್ವಂ** = ನೀನು, **ಭೂಪಂ** = ರಾಜನಾದ ಯುಧಿಷ್ಠಿರನನ್ನು, **ಉಪೈಹಿ** = ಸೇರು.

**ತಾತ್ಪರ್ಯ** :- ಅರ್ಜುನ ಹೀಗೆ ನುಡಿಯಲು ಸಾಕಲ್ಯೇನ ಅರಿಯಲಾಗದ ತನ್ನ ಬಾಹುಬಲವನ್ನು ಅರಿತಿದ್ದ ಭೀಮಸೇನ ಅವನಿಗೆ ತಿಳಿಸಿದ 'ಸಂಶಪ್ತಕರನ್ನು, ಸೂತಪುತ್ರನಾದ ಕರ್ಣನನ್ನು, ಕೌರವರನ್ನು ನಾನೊಬ್ಬನೇ ಎದುರಿಸಿ ಯುದ್ಧ ಮಾಡುವೆ, ನೀನು ರಾಜನ ಬಳಿಗೆ ತೆರಳು'.

### ಕೃಷ್ಣನಿಂದ ಭೀಮನ ಪ್ರಶಂಸೆ

**ತ್ಯಕ್ತ್ವಾ ರಣಂ ನಾಹಮಿತೋ ವ್ರಜೇಯಂ**
**ನ ಮಾಂ ವದೇತ್ ಕಶ್ಚನ ಯುದ್ಧಭೀತಮ್ ।**
**ಇತಿ ಬ್ರುವಾಣಂ ತಮನಂತಶಕ್ತಿಃ**
**ಪ್ರೀತಃ ಕೃಷ್ಣಃ ಪ್ರಶಶಂಸಾಧಿಕೇಷ್ಟಮ್ ॥ ೧೦೯ ॥**

**ತ್ಯಕ್ತ್ವಾ ರಣಂ ನ ಅಹಂ ಇತಃ ವ್ರಜೇಯಂ ನ ಮಾಂ ವದೇತ್ ಕಶ್ಚನ ಯುದ್ಧಭೀತಮ್ । ಇತಿ ಬ್ರುವಾಣಂ ತಂ ಅನಂತಶಕ್ತಿಃ ಪ್ರೀತಃ ಕೃಷ್ಣಃ ಪ್ರಶಶಂಸ ಅಧಿಕೇಷ್ಟಮ್ ॥ ೧೦೯ ॥**

**ಅರ್ಥ** :- **ಅಹಂ** = ನಾನು, **ರಣಂ** = ಯುದ್ಧವನ್ನು, **ತ್ಯಕ್ತ್ವಾ** = ತೊರೆದು, **ಇತಃ** = ಇಲ್ಲಿಂದ, **ನ ವ್ರಜೇಯಂ** = ತೆರಳಲಾರೆ. **ಕಶ್ಚನ** = ಯಾವನೂ, **ಮಾಂ** = ನನ್ನನ್ನು, **ಯುದ್ಧಭೀತಂ** = ಯುದ್ಧಕ್ಕೆ ಅಂಜಿದವನನ್ನಾಗಿ, **ನ ವದೇತ್** = ಆಡಿಕೊಳ್ಳಬಾರದು. **ಇತಿ ಬ್ರುವಾಣಂ** = ಹೀಗೆ ಹೇಳಿದ, **ಅಧಿಕೇಷ್ಟಂ** = ಪರಮಪ್ರಿಯನಾದ, **ತಂ** = ಅವನನ್ನು, **ಅನಂತಶಕ್ತಿಃ** = ಅನಂತಶಕ್ತಿಯುಳ್ಳ, **ಕೃಷ್ಣಃ** = ಶ್ರೀಕೃಷ್ಣನು, **ಪ್ರಶಶಂಸ** = ಬಹಳವಾಗಿ ಕೊಂಡಾಡಿದ.

**ತಾತ್ಪರ್ಯ** :- 'ನಾನು ಯುದ್ಧವನ್ನು ತೊರೆದು ಇಲ್ಲಿಂದ ತೆರಳಲಾರೆ, ನನ್ನನ್ನು ಯಾರೂ ಯುದ್ಧಕ್ಕೆ ಅಂಜಿದವನು ಎಂದು ಆಡಿಕೊಳ್ಳುವಂತಾಗ ಬಾರದು' ಹೀಗೆ ನುಡಿದ ಪರಮಪ್ರಿಯನಾದ ಭೀಮನನ್ನು ಅನಂತಶಕ್ತಿ ಸಂಪನ್ನನಾದ ಶ್ರೀಕೃಷ್ಣ ಅತ್ಯಂತಪ್ರೀತಿಯಿಂದ ಬಹಳವಾಗಿ ಕೊಂಡಾಡಿದ.

### ಶಿಬಿರದಲ್ಲಿ ಅರ್ಜುನ

**ಯಯೌ ಯುಧಿಷ್ಠಿರಂ ದ್ರಷ್ಟುಂ ಶಿಬಿರಂ ಸಾರ್ಜುನೋ ಹರಿಃ ।**
**ದೃಷ್ಟ್ವಾ ತೌ ನೃಪತಿಃ ಕರ್ಣಂ ಹತಂ ಮತ್ವಾ ಶಶಂಸ ಹ ॥ ೧೧೦ ॥**

**ಯಯೌ ಯುಧಿಷ್ಠಿರಂ ದ್ರಷ್ಟುಂ ಶಿಬಿರಂ ಸಾರ್ಜುನೋ ಹರಿಃ । ದೃಷ್ಟ್ವಾ ತೌ ನೃಪತಿಃ ಕರ್ಣಂ ಹತಂ ಮತ್ವಾ ಶಶಂಸ ಹ ॥ ೧೧೦ ॥**

**ಅರ್ಥ** :- **ಸಾರ್ಜುನಃ** = ಅರ್ಜುನಸಹಿತನಾದ, **ಹರಿಃ** = ಹರಿಯು, **ಯುಧಿಷ್ಠಿರಂ** = ಯುಧಿಷ್ಠಿರನನ್ನು, **ದ್ರಷ್ಟುಂ** = ಕಾಣಲೆಂದು, **ಶಿಬಿರಂ**

= ಶಿಬಿರವನ್ನು ಕುರಿತು, **ಯಯೌ** = ಹೋದನು. **ತೌ** = ಅವರಿಬ್ಬರನ್ನು, **ದೃಷ್ಟ್ವಾ** = ನೋಡಿ, **ನೃಪತಿಃ** = ರಾಜನಾದ ಧರ್ಮರಾಜನು, **ಕರ್ಣಂ** = ಕರ್ಣನನ್ನು, **ಹತಂ** = ಸತ್ತವನನ್ನಾಗಿ, **ಮತ್ವಾ** = ತಿಳಿದು, **ಶಶಂಸ ಹ** = ಹೊಗಳಿದ!

**ತಾತ್ಪರ್ಯ** :- ಶ್ರೀಕೃಷ್ಣ ಅರ್ಜುನನೊಂದಿಗೆ ಯುಧಿಷ್ಠಿರನನ್ನು ಕಾಣಲೆಂದು ಶಿಬಿರಕ್ಕೆ ತೆರಳಿದ. ಧರ್ಮರಾಜ ಅವರಿಬ್ಬರನ್ನು ಕಂಡು ಕರ್ಣ ಸತ್ತನೆಂದು ತಿಳಿದು ಹೊಗಳತೊಡಗಿದ.

### ಅರ್ಜುನನ ನಿಂದೆ

**ಅಭಿವಾದ್ಯ ಹನಿಷ್ಯಾಮೀತ್ಯುಕ್ತಃ ಪಾರ್ಥೇನ ಸ ಕ್ರುಧಾ ।**
**ಭೃಶಂ ವಿನಿಂದ್ಯ ಬೀಭತ್ಸುಮಾಹ ಕೃಷ್ಣಾಯ ಗಾಂಡಿವಮ್ ।**
**ದೇಹಿ ಪುತ್ರಂ ಸ ರಾಧಾಯಾ ಹನಿಷ್ಯತಿ ನ ಸಂಶಯಃ ॥ ೧೧೧ ॥**

**ಅಭಿವಾದ್ಯ ಹನಿಷ್ಯಾಮಿ ಇತಿ ಉಕ್ತಃ ಪಾರ್ಥೇನ ಸಃ ಕ್ರುಧಾ । ಭೃಶಂ ವಿನಿಂದ್ಯ ಬೀಭತ್ಸುಂ ಆಹ ಕೃಷ್ಣಾಯ ಗಾಂಡಿವಮ್ । ದೇಹಿ ಪುತ್ರಂ ಸಃ ರಾಧಾಯಾಃ ಹನಿಷ್ಯತಿ ನ ಸಂಶಯಃ ॥ ೧೧೧ ॥**

**ಅರ್ಥ** :- **ಪಾರ್ಥೇನ** = ಅರ್ಜುನನಿಂದ, **ಅಭಿವಾದ್ಯ** = ನಮಸ್ಕರಿಸಲ್ಪಟ್ಟು, **'ಹನಿಷ್ಯಾಮಿ'** = '(ಕರ್ಣನನ್ನು ಮುಂದೆ) ಕೊಲ್ಲುವೆ', **ಇತಿ** = ಎಂದು, **ಉಕ್ತಃ** = ಹೇಳಲ್ಪಟ್ಟ, **ಸಃ** = ಅವನು (ಧರ್ಮರಾಜನು), **ಕ್ರುಧಾ** = ಕೋಪದಿಂದ, **ಭೃಶಂ** = ಬಹಳವಾಗಿ, **ವಿನಿಂದ್ಯ** = ನಿಂದಿಸಿ, **ಬೀಭತ್ಸುಂ** = ಅರ್ಜುನನನ್ನು ಕುರಿತು, **ಆಹ** = ಹೇಳಿದ, **ಕೃಷ್ಣಾಯ** = ಕೃಷ್ಣನಿಗೆ, **ಗಾಂಡಿವಂ** = ಗಾಂಡಿವವನ್ನು, **ದೇಹಿ** = ಕೊಡು. **ಸಃ** = ಅವನು, **ರಾಧಾಯಾಃ** = ರಾಧೆಯ, **ಪುತ್ರಂ** = ಪುತ್ರನನ್ನು, **ಹನಿಷ್ಯತಿ** = ಕೊಲ್ಲುವನು, **ನ ಸಂಶಯಃ** = (ಇದರಲ್ಲಿ) ಸಂಶಯವಿಲ್ಲ. (**ಇತಿ**) = (ಎಂದು).

**ತಾತ್ಪರ್ಯ** :- ಅರ್ಜುನ ಅವನಿಗೆ ನಮಸ್ಕರಿಸಿ ನುಡಿದ 'ಮುಂದೆ ಕರ್ಣನನ್ನು ಕೊಲ್ಲುವೆ'. ಅವನು ಹಾಗೆನ್ನಲು ಧರ್ಮರಾಜ ಅರ್ಜುನನನ್ನು ಬಹಳವಾಗಿ ನಿಂದಿಸಿ ನುಡಿದ 'ಗಾಂಡೀವವನ್ನು ಕೃಷ್ಣನಿಗೆ ಕೊಡು, ಅವನು ಆ ರಾಧೇಯನನ್ನು ಕೊಲ್ಲುವನು, ಇದರಲ್ಲಿ ಸಂಶಯವಿಲ್ಲ'.

ಯುಧಿಷ್ಠಿರನಿಂದ ಭೀಮನ ಪ್ರಶಂಸೆ

**ಅಥ ವಾ ಭೀಮ ಏವ್ವೆನಂ ನಿವೃತ್ತೇ ತ್ವಯಿ ಪಾತಯೇತ್ ।**
**ತ್ವಂ ತು ಕುಂತ್ಯಾ ವೃಥಾ ಸೂತಃ ಕ್ಲೀಬೋ ಮಿಥ್ಯಾಪ್ರತಿಶ್ರವಃ ॥ ೧೧೨ ॥**

ಅಥ ವಾ ಭೀಮಃ ಏವ ಏನಂ ನಿವೃತ್ತೇ ತ್ವಯಿ ಪಾತಯೇತ್ । ತ್ವಂ ತು ಕುಂತ್ಯಾ ವೃಥಾ ಸೂತಃ ಕ್ಲೀಬಃ ಮಿಥ್ಯಾಪ್ರತಿಶ್ರವಃ ॥ ೧೧೨ ॥

**ಅರ್ಥ** :- **ಅಥವಾ** = ಅಥವಾ, **ತ್ವಯಿ** = ನೀನು, **(ಯುದ್ಧಾತ್)** = ಯುದ್ಧದಿಂದ, **ನಿವೃತ್ತೇ** **(ಸತಿ)** = ನಿವೃತ್ತನಾದಲ್ಲಿ, **ಭೀಮಃ ಏವ** = ಭೀಮನೇ, **ಏನಂ** ಅವನನ್ನು, **ಪಾತಯೇತ್** = ಬೀಳಿಸುವನು. **ತ್ವಂ ತು** = ನೀನಂತೂ, **ಕುಂತ್ಯಾ** = ಕುಂತಿಯಿಂದ, **ವೃಥಾ** = ವ್ಯರ್ಥವಾಗಿ, **ಸೂತಃ** = ಹಡೆಯಲ್ಪಟ್ಟವನು. **ಕ್ಲೀಬಃ** = ನಪುಂಸಕನು, **ಮಿಥ್ಯಾಪ್ರತಿಶ್ರವಃ** = ಸುಳ್ಳುಪ್ರತಿಜ್ಞೆಯವನು.

**ತಾತ್ಪರ್ಯ** :- 'ಅಥವಾ ನೀನು ಯುದ್ಧ ತೊರೆದಲ್ಲಿ ಭೀಮನೇ ಅವನನ್ನು ಹೊಡೆದು ಬೀಳಿಸುವನು. ಕುಂತಿ ನಿನ್ನನ್ನು ಹಡೆದದ್ದು ವ್ಯರ್ಥ, ನೀನು ಷಂಡ, ಸುಳ್ಳುಪ್ರತಿಜ್ಞೆಯವನು.

**ಅಹಂ ತು ಸೂತಪುತ್ರೇಣ ಕ್ಲಿಷ್ಟೋ ಮಾರುತಿತೇಜಸಾ ।**
**ಜೀವಾಮೀತ್ಯಗ್ರಜೇನೋಕ್ತ ಉದ್ಬಬರ್ಹಾಸಿಮುತ್ತಮಮ್ ॥ ೧೧೩ ॥**

ಅಹಂ ತು ಸೂತಪುತ್ರೇಣ ಕ್ಲಿಷ್ಟಃ ಮಾರುತಿತೇಜಸಾ । ಜೀವಾಮಿ ಇತಿ ಅಗ್ರಜೇನ ಉಕ್ತಃ ಉದ್ಬಬರ್ಹ ಅಸಿಂ ಉತ್ತಮಮ್ ॥ ೧೧೩ ॥

**ಅರ್ಥ** :- **ಅಹಂ ತು** = ನಾನಾದರೋ, **ಸೂತಪುತ್ರೇಣ** = ಸೂತಪುತ್ರನಾದ ಕರ್ಣನಿಂದ, **ಕ್ಲಿಷ್ಟಃ** = ಕಷ್ಟಕ್ಕೊಳಗಾಗಿ, **ಮಾರುತಿತೇಜಸಾ** = ಭೀಮನ ಪರಾಕ್ರಮದಿಂದ, **ಜೀವಾಮಿ** = ಬದುಕಿರುವೆ. **ಇತಿ** = ಹೀಗೆಂದು, **ಅಗ್ರಜೇನ** = ಅಣ್ಣನಿಂದ, **ಉಕ್ತಃ** = ಹೇಳಲ್ಪಟ್ಟ (ಅರ್ಜುನನು), **ಉತ್ತಮಂ** = ಉತ್ತಮವಾದ, **ಅಸಿಂ** = ಖಡ್ಗವನ್ನು, **ಉದ್ಬಬರ್ಹ** = ಎಳೆದ.

**ತಾತ್ಪರ್ಯ** :- ನಾನಾದರೂ ಆ ಸೂತಪುತ್ರನಾದ ಕರ್ಣನಿಂದ ಸಂಕ್ಲೇಶಕ್ಕೊಳಗಾಗಿ ಭೀಮನ ಪರಾಕ್ರಮದಿಂದಾಗಿ ಬದುಕುಳಿದಿರುವೆ'.

ಅಣ್ಣನಾದಧರ್ಮರಾಜ ಹೀಗೆನ್ನಲು ಅರ್ಜುನ ಉತ್ತಮವಾದ ಖಡ್ಗವನ್ನು ಒರೆಯಿಂದೆಳೆದ.

### ಯುಧಿಷ್ಠಿರನ ವಧೆಗೆಂದು ಧಾವಿಸಿದ ಅರ್ಜುನ

**ವಾಸುದೇವಸ್ತಮಾಹೇದಂ ಕಿಮೇತದಿತಿ ಸರ್ವವಿತ್ ।**
**ತಮಾಹ ಗಾಂಡಿವಂ ದಾತುಂ ಯೋ ವದೇತ್ ತದ್ವಧೋ ಮಯಾ ।**
**ಪ್ರತಿಜ್ಞಾತಸ್ತತೋ ಹನ್ಮಿ ನೃಪಮಿತ್ಯಾಹ ತಂ ಹರಿಃ ॥ ೧೧೪ ॥**

**ವಾಸುದೇವಃ ತಂ ಆಹ ಇದಂ ಕಿಂ ಏತತ್ ಇತಿ ಸರ್ವವಿತ್ । ತಂ ಆಹ ಗಾಂಡಿವಂ ದಾತುಂ ಯಃ ವದೇತ್ ತದ್ವಧಃ ಮಯಾ । ಪ್ರತಿಜ್ಞಾತಃ ತತಃ ಹನ್ಮಿ ನೃಪಂ ಇತಿ ಆಹ ತಂ ಹರಿಃ ॥ ೧೧೪ ॥**

**ಅರ್ಥ :-** **ಸರ್ವವಿತ್** = ಎಲ್ಲವನ್ನೂ ಬಲ್ಲ, **ವಾಸುದೇವಃ** = ಕೃಷ್ಣನು, **ತಂ** = ಅರ್ಜುನನನ್ನು ಕುರಿತು, **ಇದಂ** = ಇದನ್ನು, **ಕಿಂ ಏತತ್** = 'ಇದೇನು', **ಇತಿ** = ಎಂದು, **ಆಹ** = ಕೇಳಿದ. **ಗಾಂಡಿವಂ** = ಗಾಂಡಿವವನ್ನು, **ದಾತುಂ** = ಕೊಡಲು, **ಯಃ** = ಯಾವನು, **ವದೇತ್** = ಹೇಳುವನೋ, **ತದ್ವಧಃ** = ಅವನ ವಧೆಯು, **ಮಯಾ** = ನನ್ನಿಂದ, **ಪ್ರತಿಜ್ಞಾತಃ** = ಪ್ರತಿಜ್ಞಾತವಾಗಿದೆ. **ತತಃ** = ಆದ್ದರಿಂದ, **ನೃಪಂ** = ರಾಜನನ್ನು, **ಹನ್ಮಿ** = ಕೊಲ್ಲುವೆ, **ಇತಿ** = ಎಂದು, **ತಂ** = ಕೃಷ್ಣನನ್ನು ಕುರಿತು, **ಆಹ** = ಹೇಳಿದ. **ತಂ** = ಅವನನ್ನು ಕುರಿತು, **ಹರಿಃ** = ಶ್ರೀಹರಿಯು, **ಆಹ** = ಹೇಳಿದ.

**ತಾತ್ಪರ್ಯ :-** ಸರ್ವಜ್ಞನಾದ ಕೃಷ್ಣ ಅವನನ್ನು ಕೇಳಿದ 'ಇದೇನು?' ಎಂದು. ಅರ್ಜುನ ತಿಳಿಸಿದ : 'ಗಾಂಡೀವವನ್ನು ಮತ್ತೊಬ್ಬರಿಗೆ ಕೊಡಲು ಯಾವನು ಹೇಳುವನೋ ಅವನನ್ನು ಕೊಲ್ಲುವುದಾಗಿ ನಾನು ಪ್ರತಿಜ್ಞೆ ಮಾಡಿರುವೆ, ಆದ್ದರಿಂದ ಅವನನ್ನೀಗ ಕೊಂದುಹಾಕುವೆ' ಅವನು ಹೀಗೆನ್ನಲು ಕೃಷ್ಣ ತಿಳಿಸಿದ

### ಅರ್ಜುನನಿಗೆ ಶ್ರೀಕೃಷ್ಣನ ಉಪದೇಶ - ಸತ್ಯ ಶಬ್ದದ ನಿರ್ವಚನ

**ಸತ್ಯಸ್ಯ ವಚನಂ ಶ್ರೇಯಃ ಸತ್ಯಜ್ಞಾನಂ ತು ದುಷ್ಕರಮ್ ।**
**ಯತ್ ಸತಾಂ ಹಿತಮತ್ಯಂತಂ ತತ್ ಸತ್ಯಮಿತಿ ನಿಶ್ಚಯಃ ॥ ೧೧೫ ॥**

**ಸತ್ಯಸ್ಯ ವಚನಂ ಶ್ರೇಯಃ ಸತ್ಯಜ್ಞಾನಂ ತು ದುಷ್ಕರಮ್ । ಯತ್ ಸತಾಂ ಹಿತಂ ಅತ್ಯಂತಂ ತತ್ ಸತ್ಯಂ ಇತಿ ನಿಶ್ಚಯಃ ॥ ೧೧೫ ॥**

**ಅರ್ಥ** :- **ಸತ್ಯಸ್ಯ** = ಸತ್ಯದ, **ವಚನಂ** = ಮಾತು, **ಶ್ರೇಯಃ** = ಪುಣ್ಯಕರವಾದದ್ದು. **ಸತ್ಯಜ್ಞಾನಂ ತು** = ಸತ್ಯದ ಅರಿವು ಮಾತ್ರ, **ದುಷ್ಕರಂ** = ಬಹಳ ಕಷ್ಟ. **ಯತ್** = ಯಾವುದು, **ಸತಾಂ** = ಸಜ್ಜನರ (ಪಾಲಿಗೆ), **ಅತ್ಯಂತಂ** = ಅತ್ಯಂತ, **ಹಿತಂ** = ಹಿತವೋ, **ತತ್** (ಏವ) = ಅದೇ, **ಸತ್ಯಂ** = ಸತ್ಯ, **ಇತಿ** = ಎಂದು, **ನಿಶ್ಚಯಃ** = ನಿರ್ಣಯವು.

**ತಾತ್ಪರ್ಯ** :- ಸತ್ಯದ ನುಡಿ ಶ್ರೇಯಸ್ಕರವಾದದ್ದು, ಆದರೆ ಸತ್ಯವನ್ನು ಅರಿಯುವುದು ಮಾತ್ರ ತುಂಬಾ ಕಷ್ಟ. ಯಾವುದು ಸಜ್ಜನರಿಗೆ ಅತ್ಯಂತ ಹಿತವೋ ಅದೇ ಸತ್ಯವೆಂಬುದು ನಿರ್ಣಯ.

### ಧರ್ಮಶಬ್ದದ ನಿರ್ವಚನ

**ಧರ್ಮಸ್ಯ ಚರಣಂ ಶ್ರೇಯೋ ಧರ್ಮಜ್ಞಾನಂ ತು ದುಷ್ಕರಮ್ ।**
**ಯಃ ಸತಾಂ ಧಾರಕೋ ನಿತ್ಯಂ ಸ ಧರ್ಮ ಇತಿ ನಿಶ್ಚಯಃ ॥ ೧೧೬ ॥**

**ಧರ್ಮಸ್ಯ ಚರಣಂ ಶ್ರೇಯಃ ಧರ್ಮಜ್ಞಾನಂ ತು ದುಷ್ಕರಮ್ । ಯಃ ಸತಾಂ ಧಾರಕಃ ನಿತ್ಯಂ ಸಃ ಧರ್ಮಃ ಇತಿ ನಿಶ್ಚಯಃ ॥ ೧೧೬ ॥**

**ಅರ್ಥ** :- **ಧರ್ಮಸ್ಯ** = ಧರ್ಮದ, **ಚರಣಂ** = ಆಚರಣೆಯು, **ಶ್ರೇಯಃ** = ಪುಣ್ಯಕರವಾದುದು. **ಧರ್ಮಜ್ಞಾನಂ ತು** = ಧರ್ಮದ ಅರಿವು ಮಾತ್ರ, **ದುಷ್ಕರಂ** = ಬಹಳ ಕಷ್ಟವಾದುದು. **ಯಃ** = ಯಾವುದು, **ನಿತ್ಯಂ** = ನಿತ್ಯವೂ, **ಸತಾಂ** = ಸಜ್ಜನರ (ಪಾಲಿಗೆ), **ಧಾರಕಃ** = ಪೋಷಕವೋ (ಹಿತರೂಪವೋ), **ಸಃ** = ಅದು, **ಧರ್ಮಃ** = ಧರ್ಮವು, **ಇತಿ** = ಎಂದು, **ನಿಶ್ಚಯಃ** = ನಿರ್ಣಯವು.

**ತಾತ್ಪರ್ಯ** :- ಧರ್ಮದ ಆಚರಣೆ ಶ್ರೇಯಸ್ಕರವಾದುದು. ಆದರೆ, ಧರ್ಮದ ಪರಿಜ್ಞಾನ ತುಂಬಾ ದುಷ್ಕರವಾದುದು. ಯಾವುದು ಸಜ್ಜನರ ರಕ್ಷಣೆಗೆ ಸದಾ ಕಾರಣವೋ, ಅದೇ ಧರ್ಮ ಎಂಬುದು ನಿರ್ಣಯ.

### ಸತ್ಯಹೇಳಿ ನರಕ ಕಂಡ ಬ್ರಾಹ್ಮಣ

**ಕೌಶಿಕಾಖ್ಯೋ ಬ್ರಾಹ್ಮಣೋ ಹಿ ಲೀನಂ ಗ್ರಾಮಜನಂ ಕ್ವಚಿತ್ ।**
**ತಸ್ಕರೇಷ್ವಭಿಧಾಯ್ಯೆವ ನಿರಯಂ ಪ್ರತ್ಯಪದ್ಯತ ॥ ೧೧೭ ॥**

ಕೌಶಿಕಾಖ್ಯಃ ಬ್ರಾಹ್ಮಣಃ ಹಿ ಲೀನಂ ಗ್ರಾಮಜನಂ ಕ್ವಚಿತ್ । ತಸ್ಕರೇಷು ಅಭಿಧಾಯ ಏವ ನಿರಯಂ ಪ್ರತ್ಯಪದ್ಯತ ॥ ೧೧೭ ॥

**ಅರ್ಥ :- ಕೌಶಿಕಾಖ್ಯಃ** = ಕೌಶಿಕ ಎಂಬ ಹೆಸರಿನ **ಬ್ರಾಹ್ಮಣಃ** = ಬ್ರಾಹ್ಮಣನು **ಕ್ವಚಿತ್** = ಒಂದೆಡೆ **ಲೀನಂ** = ಅಡಗಿದ್ದ **ಗ್ರಾಮಜನಂ** = ಗ್ರಾಮಜನರನ್ನು ಕುರಿತು **ತಸ್ಕರೇಷು** = ಕಳ್ಳರಲ್ಲಿ **ಅಭಿಧಾಯ ಏವ** = ತಿಳಿಸಿಕೊಟ್ಟಿದ್ದರಿಂದಲೇ **ನಿರಯಂ ಹಿ** = ನರಕವನ್ನೇ **ಪ್ರತ್ಯಪದ್ಯತ** = ಹೊಂದಿದ.

**ತಾತ್ಪರ್ಯ :-** ಕೌಶಿಕನೆಂಬ ಬ್ರಾಹ್ಮಣ ಒಮ್ಮೆ ಅಡಗಿದ್ದ ಗ್ರಾಮದ ಜನರನ್ನು ಕಳ್ಳರಿಗೆ ತಿಳಿಸಿಕೊಟ್ಟದ್ದರಿಂದಾಗಿಯೇ ನರಕವನ್ನು ಹೊಂದಿದ.

### ಸ್ವರ್ಗಕ್ಕೆ ನಡೆದ ಬೇಟೆಗಾರ

**ಕಶ್ಚಿದ್ವ್ಯಾಧೋ ಮೃಗಂ ಹತ್ವಾ ಮಾತಾಪಿತೃನಿಮಿತ್ತತಃ ।**
**ಭಕ್ಷಾರ್ಥಮಭ್ಯಗಾತ್ ಸ್ವರ್ಗಮಸುರೋಽಸೌ ಮೃಗೋ ಯತಃ ।**
**ಉಪದ್ರವಾಯ ಲೋಕಸ್ಯ ತಪಶ್ಚರತಿ ದುರ್ಮತಿಃ ॥ ೧೧೮ ॥**

ಕಶ್ಚಿತ್ ವ್ಯಾಧಃ ಮೃಗಂ ಹತ್ವಾ ಮಾತಾಪಿತೃನಿಮಿತ್ತತಃ । ಭಕ್ಷಾರ್ಥಂ ಅಭ್ಯಗಾತ್ ಸ್ವರ್ಗಂ ಅಸುರಃ ಅಸೌ ಮೃಗಃ ಯತಃ । ಉಪದ್ರವಾಯ ಲೋಕಸ್ಯ ತಪಃ ಚರತಿ ದುರ್ಮತಿಃ ॥ ೧೧೮ ॥

**ಅರ್ಥ :- ಕಶ್ಚಿತ್** = ಯಾವನೋ ಒಬ್ಬ, **ವ್ಯಾಧಃ** = ಬೇಡನು, **ಮಾತಾಪಿತೃನಿಮಿತ್ತತಃ** = ತಾಯಿ-ತಂದೆಯರ, **ಭಕ್ಷಾರ್ಥಂ** = ಭಕ್ಷಣೆಗೋಸ್ಕರ (ಆಹಾರಕ್ಕೆಂದು), **ಮೃಗಂ** = ಮೃಗವನ್ನು, **ಹತ್ವಾ** = ಕೊಂದು, **ಸ್ವರ್ಗಂ** = ಸ್ವರ್ಗವನ್ನು ಕುರಿತು, **ಅಭ್ಯಗಾತ್** = ಹೋದನು. **ಯತಃ** = ಯಾವ ಕಾರಣದಿಂದ, **ಅಸೌ** = ಆ, **ಮೃಗಃ** = ಮೃಗವು, **ಅಸುರಃ** = ಅಸುರನೋ, **ಲೋಕಸ್ಯ** = ಲೋಕದ, **ಉಪದ್ರವಾಯ** =

ಉಪದ್ರವಕ್ಕೋಸ್ಕರ, **ತಪಃ** = ತಪಸ್ಸನ್ನು, **ಚರತಿ** = ಆಚರಿಸುತ್ತಿದ್ದನೋ, **(ಅತಃ ಏವ)** = ಆ ಕಾರಣದಿಂದಲೇ, **(ಸಃ) ದುರ್ಮತಿಃ** = (ಅವನು) ದುರ್ಬುದ್ಧಿಯವನು.

**ತಾತ್ಪರ್ಯ** :- ಒಬ್ಬ ಬೇಡ ತಂದೆ ತಾಯಿಗಳ ಭಕ್ಷಣೆಗೋಸ್ಕರವಾಗಿ ಮೃಗವನ್ನು ಕೊಂದು ಸ್ವರ್ಗವನ್ನು ಪಡೆದುಕೊಂಡನು. ಆ ಮೃಗ, ಲೋಕದ ಉಪದ್ರವಕ್ಕೋಸ್ಕರ ತಪಸ್ಸು ಮಾಡುತ್ತಿದ್ದ ಒಬ್ಬ ಅಸುರನಾಗಿದ್ದೇ ಅದಕ್ಕೆ ಕಾರಣ.

**ತಸ್ಮಾತ್ ಸದ್ಧಾರಕೋ ಧರ್ಮ ಇತಿ ಕೃತ್ವಾ ವಿನಿಶ್ಚಯಮ್ ।**
**ಮಾ ನೃಪಂ ಜಹಿ ಸತ್ಯಾಂ ತ್ವಂ ಕುರು ವಾಚಂ ತಿರಸ್ಕುರು ॥ ೧೧೯ ॥**

**ತಸ್ಮಾತ್ ಸದ್ಧಾರಕಃ ಧರ್ಮಃ ಇತಿ ಕೃತ್ವಾ ವಿನಿಶ್ಚಯಮ್ । ಮಾ ನೃಪಂ ಜಹಿ ಸತ್ಯಾಂ ತ್ವಂ ಕುರು ವಾಚಂ ತಿರಸ್ಕುರು ॥ ೧೧೯ ॥**

**ಅರ್ಥ** :- **ತಸ್ಮಾತ್** = ಆದ್ದರಿಂದ, **ಸದ್ಧಾರಕಃ** = ಸಜ್ಜನರ ಪೋಷಕವಾದುದು (ಉಪಕಾರವಾದುದು), **ಧರ್ಮಃ** = ಧರ್ಮ **ಇತಿ** = ಹೀಗೆಂದು, **ವಿನಿಶ್ಚಯಂ** = ಸರಿಯಾಗಿ ನಿಶ್ಚಯವನ್ನು, **ಕೃತ್ವಾ** = ಮಾಡಿಕೊಂಡು, **ನೃಪಂ** = ರಾಜನಾದ ಯುಧಿಷ್ಠಿರನನ್ನು, **ಮಾ ಜಹಿ** = ಕೊಲ್ಲದಿರು. **ತ್ವಂ** = ನೀನು, **ವಾಚಂ** = ('ಕೊಲ್ಲುವೆ' ಎಂಬ ನಿನ್ನ) ಮಾತನ್ನು, **ಸತ್ಯಾಂ** = ಸತ್ಯವನ್ನಾಗಿ, **ಕುರು** = ಮಾಡು. **(ನೃಪಂ)** = ರಾಜನನ್ನು, **ತಿರಸ್ಕುರು** = ತೆಗಳು.

**ತಾತ್ಪರ್ಯ** :- ಆದ್ದರಿಂದ ಸಜ್ಜನರ ಉಳಿವಿಗೆ ಕಾರಣವಾಗುವುದೇ ಧರ್ಮ ಎಂದು ಸರಿಯಾಗಿ ನಿಶ್ಚಯಮಾಡಿಕೊಂಡು ಧರ್ಮರಾಜನನ್ನು ಕೊಲ್ಲದಿರು. ಅವನನ್ನು ನೀನು ಎಂಬುದಾಗಿ ಅವಮಾನಿಸು. ಆ ಮೂಲಕ ನಿನ್ನ ವಚನವನ್ನು ಸತ್ಯಮಾಡಿಕೋ.

ಅರ್ಜುನನಿಂದ ಯುಧಿಷ್ಠಿರನ ನಿಂದೆ ; ಭೀಮನ ಪ್ರಶಂಸೆ

**ಇತ್ಯುಕ್ತೋ ಬಹುಧಾಽನಿಂದತ್ ಕ್ರೋಧಾದೇವಾರ್ಜುನೋ ನೃಪಮ್ ।**
**ತ್ವಂ ನೃಶಂಸಃ ಕೃತಘ್ನಶ್ಚ ನಿರ್ವೀರ್ಯಃ ಪರುಷಂವದಃ ।**
**ತ್ವತ್ತಃ ಸುಖಂ ನಾಸ್ತಿ ಕಿಂಚಿನ್ನ ಮಾಂ ಗರ್ಹಿತುಮರ್ಹಸಿ ॥ ೧೨೦ ॥**

ಭೀಮೋ ಮಾಂ ಗರ್ಹಿತುಂ ಯೋಗ್ಯೋ ಯೋ ಹ್ಯಸ್ಮಾಕಂ ಸದಾ ಗತಿಃ ।
ಯೋ ಯುಧ್ಯತೇ ಸರ್ವವೀರೈರದ್ಯಾಪಿ ತ್ವಂ ತು ನಿಂದಕಃ ।
ಇತ್ಯಾದ್ಯುಕ್ತ್ವಾ ಽಽತ್ಮನಾಶಾಯ ವಿಕೋಶಂ ಕೃತವಾನಸಿಮ್ ॥ ೧೨೧ ॥

ಇತಿ ಉಕ್ತಃ ಬಹುಧಾ ಅನಿಂದತ್ ಕ್ರೋಧಾತ್ ಏವ ಅರ್ಜುನಃ ನೃಪಮ್ । ತ್ವಂ ನೃಶಂಸಃ ಕೃತಘ್ನಃ ಚ ನಿರ್ವೀರ್ಯಃ ಪರುಷಂವದಃ । ತ್ವತ್ತಃ ಸುಖಂ ನ ಅಸ್ತಿ ಕಿಂಚಿತ್ ನ ಮಾಂ ಗರ್ಹಿತುಂ ಅರ್ಹಸಿ ॥ ೧೨೦ ॥

ಭೀಮಃ ಮಾಂ ಗರ್ಹಿತುಂ ಯೋಗ್ಯಃ ಯಃ ಹಿ ಅಸ್ಮಾಕಂ ಸದಾ ಗತಿಃ । ಯಃ ಯುಧ್ಯತೇ ಸರ್ವವೀರೈಃ ಅದ್ಯ ಅಪಿ ತ್ವಂ ತು ನಿಂದಕಃ । ಇತ್ಯಾದಿ ಉಕ್ತ್ವಾ ಆತ್ಮನಾಶಾಯ ವಿಕೋಶಂ ಕೃತವಾನ್ ಅಸಿಮ್ ॥ ೧೨೧ ॥

ಇತಿ ಉಕ್ತಃ ಅರ್ಜುನಃ ನೃಪಮ್ ಕ್ರೋಧಾತ್ ಏವ ಬಹುಧಾ ಅನಿಂದತ್ । ತ್ವಂ ನೃಶಂಸಃ ಕೃತಘ್ನಃ ಚ ನಿರ್ವೀರ್ಯಃ ಪರುಷಂವದಃ । ತ್ವತ್ತಃ ಸುಖಂ ಕಿಂಚಿತ್ ನ ಅಸ್ತಿ । (ತ್ವಂ) ಮಾಂ ಗರ್ಹಿತುಂ ನ ಅರ್ಹಸಿ ।

**ಅರ್ಥ** :– **ಇತಿ** ಹೀಗೆಂದು **ಉಕ್ತಃ** ಹೇಳಲ್ಪಟ್ಟ **ಅರ್ಜುನಃ** ಅರ್ಜುನನು **ನೃಪಂ** ರಾಜನನ್ನು **ಕ್ರೋಧಾತ್ ಏವ** ಕ್ರೋಧದಿಂದಲೇ **ಬಹುಧಾ** ಅನೇಕರೀತಿಯಲ್ಲಿ **ಅನಿಂದತ್** ನಿಂದಿಸಿದ. **ತ್ವಂ** ನೀನು **ನೃಶಂಸಃ** ಕಟುಕನು, **ಕೃತಘ್ನಃ** ಕೃತಘ್ನನು, **ನಿರ್ವೀರ್ಯಃ** ನಿರ್ವೀರ್ಯನು, **ಚ** ಮತ್ತು **ಪರುಷಂವದಃ** ಕ್ರೂರಮಾತನ್ನಾಡುವವನು. **ತ್ವತ್ತಃ** ನಿನ್ನಿಂದ **ಕಿಂಚಿತ್** ಸ್ವಲ್ಪವೂ **ಸುಖಂ** ಸುಖವು **ನ ಅಸ್ತಿ** ಇಲ್ಲ. **(ತ್ವಂ)** ನೀನು **ಮಾಂ** ನನ್ನನ್ನು **ಗರ್ಹಿತುಂ** ನಿಂದಿಸಲು **ನ ಅರ್ಹಸಿ** ಅರ್ಹನಾಗಿಲ್ಲ.

**ಯಃ** = ಯಾವನು, **ಅಸ್ಮಾಕಂ** = ನಮಗೆ, **ಸದಾ** = ಯಾವಾಗಲೂ, **ಗತಿಃ** = ಗತಿಯೋ, **ಯಃ** = ಯಾವನು, **ಅದ್ಯ ಅಪಿ** = ಈಗಲೂ, **ಸರ್ವವೀರೈಃ** = ಎಲ್ಲ ವೀರರೊಂದಿಗೆ, **ಯುಧ್ಯತೇ** = ಯುದ್ಧ ಮಾಡುತ್ತಿರುವನೋ, **ಸಃ ಭೀಮಃ** = ಆ ಭೀಮನು, **ಮಾಂ** = ನನ್ನನ್ನು, **ಗರ್ಹಿತುಂ** = ನಿಂದಿಸಲು, **ಯೋಗ್ಯಃ ಹಿ** = ಯೋಗ್ಯನಾಗಿರುವನು. **ತ್ವಂ ತು** = ನೀನಾದರೋ, **ನಿಂದಕಃ** = ನಿಂದಕನು. **ಇತ್ಯಾದಿ** = ಇವೇ ಮುಂತಾಗಿ, **ಉಕ್ತ್ವಾ** = ಹೇಳಿ, **ಆತ್ಮನಾಶಾಯ** = ತನ್ನ ವಧೆಗಾಗಿ, **ಅಸಿಂ** = ಖಡ್ಗವನ್ನು, **ವಿಕೋಶಂ** = ಒರೆಯಿಂದ ಹೊರಗೆ ಎಳೆಯಲ್ಪಟ್ಟದ್ದನ್ನಾಗಿ, **ಕೃತವಾನ್** = ಮಾಡಿದ.

**ತಾತ್ಪರ್ಯ** :- ಕೃಷ್ಣ ಹೀಗೆ ತಿಳಿಸಲು ಅರ್ಜುನ ಕೋಪದಿಂದಲೇ ಧರ್ಮರಾಜನನ್ನು ಅನೇಕ ತೆರನಾಗಿ ನಿಂದಿಸತೊಡಗಿದ 'ನೀನು ಕಟುಕ, ಕೃತಘ್ನ, ನಿರ್ವೀರ್ಯ, ಕಡುನುಡಿಗಳನ್ನು ಆಡುವವನು, ನಿನ್ನಿಂದ ಸ್ವಲ್ಪವೂ ಸುಖವಿಲ್ಲ. ನೀನು ನನ್ನನ್ನು ನಿಂದಿಸಲು ಅರ್ಹತೆ ಪಡೆದಿಲ್ಲ. ನಮಗೆ ಸದಾ ಗತಿಯಾಗಿರುವ ಭೀಮನೇ ನನ್ನನ್ನು ನಿಂದಿಸಲು ಯೋಗ್ಯ. ಅವನು ಈಗಲೂ ಸಕಲ ವೀರರೊಂದಿಗೆ ಯುದ್ಧ ಮಾಡುತ್ತಿರುವನು. ನೀನು ಎಲ್ಲರನ್ನೂ ನಿಂದಿಸುವವನಷ್ಟೇ'. ಇದೇ ಮೊದಲಾಗಿ ನುಡಿದು ಅರ್ಜುನ ಆತ್ಮಹತ್ಯೆ ಮಾಡಿಕೊಳ್ಳಲೆಂದು ಖಡ್ಗವನ್ನು ಪುನಃ ವರೆಯಿಂದ ಹೊರತೆಗೆದ.

**ಪುನಃ ಕೃಷ್ಣೇನ ಪೃಷ್ಟಃ ಸನ್ ಸ್ವಾಭಿಪ್ರಾಯಮುವಾಚ ಸಃ ।**
**ತಚ್ಛ್ರುತ್ವಾ ಗರ್ಹಯಿತ್ವೈನಂ ಪುನರಾಹ ಜನಾರ್ದನಃ ॥ ೧೨೨ ॥**

ಪುನಃ ಕೃಷ್ಣೇನ ಪೃಷ್ಟಃ ಸನ್ ಸ್ವಾಭಿಪ್ರಾಯಂ ಉವಾಚ ಸಃ । ತಚ್ಛ್ರುತ್ವಾ ಗರ್ಹಯಿತ್ವಾ ಏನಂ ಪುನಃ ಆಹ ಜನಾರ್ದನಃ ॥ ೧೨೨ ॥

**ಅರ್ಥ** :- **ಪುನಃ** = ಬಳಿಕ, **ಕೃಷ್ಣೇನ** = ಕೃಷ್ಣನಿಂದ, **ಪೃಷ್ಟಃ ಸನ್** = ಕೇಳಲ್ಪಟ್ಟವನಾಗಿ, **ಸಃ** = ಅವನು, **ಸ್ವಾಭಿಪ್ರಾಯಂ** = ತನ್ನ ಅಭಿಪ್ರಾಯವನ್ನು, **ಉವಾಚ** = ತಿಳಿಸಿದ. **ತಚ್ಛ್ರುತ್ವಾ** = ಅದನ್ನು ಕೇಳಿ, **ಏನಂ** = ಅವನನ್ನು, **ಗರ್ಹಯಿತ್ವಾ** = ಬೈದು, **ಪುನಃ** = ಮತ್ತೆ, **ಜನಾರ್ದನಃ** = ಕೃಷ್ಣನು, **ಆಹ** = ಹೇಳಿದ.

**ತಾತ್ಪರ್ಯ** :- ಮತ್ತೆ ಕೃಷ್ಣ ಕೇಳಿದಾಗ ಅರ್ಜುನ ತನ್ನ ಮನೋಗತವನ್ನು ತಿಳಿಸಿದ. ಅದನ್ನು ಕೇಳುತ್ತಲೇ ಕೃಷ್ಣ ಅವನನ್ನು ಬೈದು ಮತ್ತೆ ತಿಳಿಸಿದ.

### ಆತ್ಮಹತ್ಯೆ ಮಹಾಪಾಪ

**ಮತಿಪೂರ್ವಂ ದೇಹನಾಶಾತ್ ಪಾಪಂ ಮಹದವಾಪ್ಯತೇ ।**
**ಧರ್ಮಾರ್ಥಕಾಮಮೋಕ್ಷಾಣಾಂ ಸಾಧನಂ ದೇಹತೋಽಸ್ತಿ ಯತ್ ॥ ೧೨೩**

ಮತಿಪೂರ್ವಂ ದೇಹನಾಶಾತ್ ಪಾಪಂ ಮಹತ್ ಅವಾಪ್ಯತೇ । ಧರ್ಮಾರ್ಥ ಕಾಮಮೋಕ್ಷಾಣಾಂ ಸಾಧನಂ ದೇಹತಃ ಅಸ್ತಿ ಯತ್ ॥ ೧೨೩

**ಅರ್ಥ** :- **ಮತಿಪೂರ್ವಂ** = ಬುದ್ಧಿಪೂರ್ವಕವಾಗಿ, **ದೇಹನಾಶಾತ್** = ದೇಹನಾಶವನ್ನು ಮಾಡಿಕೊಳ್ಳುವುದರಿಂದ, **ಮಹತ್ ಪಾಪಂ** = ದೊಡ್ಡ ಪಾಪವು, **ಅವಾಪ್ಯತೇ** = ಒದಗುವುದು. **ಯತ್** = ಯಾವ ಕಾರಣದಿಂದ, **ಧರ್ಮಾರ್ಥ ಕಾಮಮೋಕ್ಷಾಣಾಂ** = ಧರ್ಮ-ಅರ್ಥ-ಕಾಮ-ಮೋಕ್ಷಗಳ, **ಸಾಧನಂ** = ಸಾಧನೆಯು, **ದೇಹತಃ** = ದೇಹದಿಂದ (ಮಾತ್ರ), **ಅಸ್ತಿ** = ಇದೆಯೋ, (**ತಸ್ಮಾತ್**) = ಆದ್ದರಿಂದ (ದೇಹನಾಶವು ದೊಡ್ಡಪಾಪ)

**ತಾತ್ಪರ್ಯ** :- ಬುದ್ಧಿಪೂರ್ವಕವಾಗಿ ದೇಹನಾಶಮಾಡಿಕೊಳ್ಳುವುದು ಮಹಾಪಾತಕಕ್ಕೆ ಕಾರಣ. ದೇಹದಿಂದ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳ ಸಾಧನೆ ಆಗುವುದಲ್ಲವೇ.

### ಗುರುನಿಂದೆಯೇ ಗುರುಹತ್ಯೆ - ಆತ್ಮಪ್ರಶಂಸೆಯೇ ಆತ್ಮಹತ್ಯೆ

**ಅತೋ ಮಾ ತ್ಯಜ ದೇಹಂ ತು ಕುರು ಚಾತ್ಮಪ್ರಶಂಸನಮ್ ।**
**ವಧೋ ಗುರೂಣಾಂ ತ್ವಂಕಾರಃ ಸ್ವಪ್ರಶಂಸೈವ ಚಾತ್ಮನಃ ॥ ೧೨೪ ॥**

**ಅತಃ ಮಾ ತ್ಯಜ ದೇಹಂ ತು ಕುರು ಚ ಆತ್ಮಪ್ರಶಂಸನಮ್ । ವಧಃ ಗುರೂಣಾಂ ತ್ವಂಕಾರಃ ಸ್ವಪ್ರಶಂಸಾ ಏವ ಚ ಆತ್ಮನಃ ॥ ೧೨೪ ॥**

**ಅರ್ಥ** :- **ಅತಃ** = ಆದ್ದರಿಂದ, **ದೇಹಂ ತು** = ದೇಹವನ್ನಾದರೋ, **ಮಾ ತ್ಯಜ** = ಬಿಡಬೇಡ. **ಆತ್ಮಪ್ರಶಂಸನಂ ಚ** = ಆತ್ಮಪ್ರಶಂಸೆಯನ್ನು, **ಕುರು** = ಮಾಡು. **ತ್ವಂಕಾರಃ** = 'ನೀನು' ಎಂದು (ಮುಂತಾಗಿ) ಕರೆಯುವುದು, **ಗುರೂಣಾಂ** = ಗುರುಗಳ (ಹಿರಿಯರ), **ವಧಃ** = ವಧೆ, **ಸ್ವಪ್ರಶಂಸಾ ಏವ** = ಸ್ವಪ್ರಶಂಸೆಯೇ, **ಆತ್ಮನಃ ಚ (ವಧಃ)** = ಆತ್ಮಹತ್ಯೆ.

**ತಾತ್ಪರ್ಯ** :- ಆದ್ದರಿಂದ ನೀನು ದೇಹವನ್ನು ತೊರೆಯಬೇಡ, ಆದರೆ ಆತ್ಮಪ್ರಶಂಸೆಯನ್ನು ಮಾಡಿಕೋ. ನೀನು ಎಂದು ಕರೆಯುವುದೇ ಗುರುಹಿರಿಯರ ವಧೆ, ಸ್ವಪ್ರಶಂಸೆಯೇ ಆತ್ಮಹತ್ಯೆ.

**ಇತ್ಯುಕ್ತಃ ಸ ತ್ವಹಂಕಾರಾಚ್ಛಶಂಸ ಸ್ವಗುಣಾನಲಮ್ ॥ ೧೨೫ ॥**

**ಇತಿ ಉಕ್ತಃ ಸಃ ತು ಅಹಂಕಾರಾತ್ ಶಶಂಸ ಸ್ವಗುಣಾನ್ ಅಲಮ್ ॥ ೧೨೫ ॥**

**ಅರ್ಥ :- ಇತಿ** = ಹೀಗೆಂದು, **ಉಕ್ತಃ** = ಹೇಳಲ್ಪಟ್ಟ, **ಸಃ ತು** = ಅವನಾದರೋ, **ಅಹಂಕಾರಾತ್** = ಅಹಂಕಾರದಿಂದ, **ಸ್ವಗುಣಾನ್** = ತನ್ನ ಗುಣಗಳನ್ನು, **ಅಲಂ** = ಅತಿಶಯವಾಗಿ, **ಶಶಂಸ** = ಹೇಳಿದ.

**ತಾತ್ಪರ್ಯ** :- ಕೃಷ್ಣ ಹೀಗೆನ್ನಲು ಅರ್ಜುನ ಅಹಂಕಾರದಿಂದ ತನ್ನಗುಣಗಳನ್ನು ಬಹಳವಾಗಿ ಹೇಳಿಕೊಂಡ.

**ಗುರುನಿಂದಾಽಽತ್ಮಪೂಜಾ ಚ ನ ಧರ್ಮಾಯ ಭವೇತ್ ಕ್ವಚಿತ್ ।**
**ತಥಾಽಪ್ಯರ್ಜುನಹಾರ್ದಂ ತತ್ ಸಂಪ್ರಕಾಶ್ಯ ಜನಾರ್ದನಃ ।**
**ತಸ್ಯ ಲಜ್ಜಾಂ ಸಮುತ್ಪಾದ್ಯ ನಾಶಯಿತ್ವಾ ಚ ತಂ ಮದಮ್ ॥ ೧೨೬ ॥**

**ಗುರುನಿಂದಾ ಆತ್ಮಪೂಜಾ ಚ ನ ಧರ್ಮಾಯ ಭವೇತ್ ಕ್ವಚಿತ್ । ತಥಾ ಅಪಿ ಅರ್ಜುನಹಾರ್ದಂ ತತ್ ಸಂಪ್ರಕಾಶ್ಯ ಜನಾರ್ದನಃ । ತಸ್ಯ ಲಜ್ಜಾಂ ಸಮುತ್ಪಾದ್ಯ ನಾಶಯಿತ್ವಾ ಚ ತಂ ಮದಮ್ ॥ ೧೨೬ ॥**

**ಅರ್ಥ :- ಗುರುನಿಂದಾ** = ಗುರುಗಳ ನಿಂದೆ, **ಆತ್ಮಪೂಜಾ ಚ** = ಮತ್ತು ಆತ್ಮಪ್ರಶಂಸನೆ, **ಧರ್ಮಾಯ** = ಧರ್ಮಸಾಧನೆಗಾಗಿ, **ಕ್ವಚಿತ್** = ಎಲ್ಲೂ, **ನ ಭವೇತ್** = ಆಗಲಾರವು. **ತಥಾ ಅಪಿ** = ಆದರೂ, **ಜನಾರ್ದನಃ** = ಶ್ರೀಕೃಷ್ಣನು, **ತತ್** = ಆ **ಅರ್ಜುನಹಾರ್ದಂ** = ಅರ್ಜುನನ ಆಂತರ್ಯವನ್ನು, **ಸಂಪ್ರಕಾಶ್ಯ** = ಚೆನ್ನಾಗಿ ಪ್ರಕಟಪಡಿಸಿ, **ತಸ್ಯ** = ಅವನಿಗೆ, **ಲಜ್ಜಾಂ** = ಲಜ್ಜೆಯನ್ನು, **ಸಮುತ್ಪಾದ್ಯ** = ಹುಟ್ಟಿಸಿ, **ತಂ** = ಆ, **ಮದಂ ಚ** = ಅಹಂಕಾರವನ್ನು ಸಹ, **ನಾಶಯಿತ್ವಾ** = ನಾಶಪಡಿಸಿ

**ತಾತ್ಪರ್ಯ** :- ಗುರುಗಳ ನಿಂದೆ ಹಾಗೂ ಆತ್ಮಪ್ರಶಂಸೆ ಎಂದೂ ಧರ್ಮಸಾಧನೆಗೆ ಕಾರಣವಾಗವು. ಆದರೂ, ಅರ್ಜುನನ ಆಂತರ್ಯವನ್ನು ಶ್ರೀಕೃಷ್ಣ ಹಾಗೆ ಪ್ರಕಟಪಡಿಸಿದ. ಅವನಿಗೆ ಲಜ್ಜೆಯನ್ನು ಹುಟ್ಟಿಸಿ, ಅವನಿಗೆ ಹುಟ್ಟಿದ ಅಹಂಕಾರವನ್ನು ಪರಿಹರಿಸಿದ.

ಅರ್ಜುನನ ಅಹಂಕಾರ ಖಂಡನೆ

**ನಾಹಂ ವೇದ ಪರಂ ಧರ್ಮಂ ಕೃಷ್ಣ ಏವ ಗತಿರ್ಮಮ ।**
**ಇತಿ ಭಾವಂ ಸಮುತ್ಪಾದ್ಯ ದೋಷಾನ್ ನಾಶಯಿತುಂ ಹರಿಃ ।**
**ಕಾರಯಾಮಾಸ ತತ್ ಸರ್ವಮರ್ಜುನೇನ ಜಗತ್ಪತಿಃ ॥ ೧೨೭ ॥**

ನ ಅಹಂ ವೇದ ಪರಂ ಧರ್ಮಂ ಕೃಷ್ಣಃ ಏವ ಗತಿಃ ಮಮ । ಇತಿ ಭಾವಂ ಸಮುತ್ಪಾದ್ಯ ದೋಷಾನ್ ನಾಶಯಿತುಂ ಹರಿಃ । ಕಾರಯಾಮಾಸ ತತ್ ಸರ್ವಂ ಅರ್ಜುನೇನ ಜಗತ್ಪತಿಃ ॥ ೧೨೭ ॥

**ಅರ್ಥ :-** **ಅಹಂ** = ನಾನು, **ಪರಂ** = ಮುಖ್ಯವಾದ, **ಧರ್ಮಂ** = ಧರ್ಮವನ್ನು, **ನ ವೇದ** = ತಿಳಿದವನಲ್ಲ, **ಕೃಷ್ಣಃ ಏವ** = ಕೃಷ್ಣನು ಮಾತ್ರ, **ಮಮ** = ನನ್ನ, **ಗತಿಃ** = ಗತಿಯು, **ಇತಿ** = ಎಂಬ, **ಭಾವಂ** = ಭಾವವನ್ನು, **ಸಮುತ್ಪಾದ್ಯ** = ಹುಟ್ಟಿಸಿ, **ದೋಷಾನ್** = ದೋಷಗಳನ್ನು, **ನಾಶಯಿತುಂ** = ನಾಶಪಡಿಸಲು, **ಜಗತ್ಪತಿಃ** = ಜಗದೊಡೆಯನಾದ, **ಹರಿಃ** = ಶ್ರೀಹರಿಯು, **ತತ್ ಸರ್ವಂ** = ಅದೆಲ್ಲವನ್ನೂ, **ಅರ್ಜುನೇನ** = ಅರ್ಜುನನಿಂದ, **ಕಾರಯಾಮಾಸ** = ಮಾಡಿಸಿದ.

**ತಾತ್ಪರ್ಯ :-** ನಾನು ಮುಖ್ಯ ಧರ್ಮವನ್ನು ತಿಳಿದವನಲ್ಲ, ನನಗೆ ಕೃಷ್ಣನೇ ಗತಿ ಎಂಬ ಭಾವವನ್ನು ಚೆನ್ನಾಗಿ ಹುಟ್ಟಿಸಿ ಅವನ ದೋಷಗಳನ್ನು ಪರಿಹರಿಸಲೆಂದು ಜಗದೊಡೆಯನಾದ ಕೃಷ್ಣ ಅರ್ಜುನನಿಂದ ಅದೆಲ್ಲವನ್ನೂ ಮಾಡಿಸಿದ.

ಮತ್ತೆ ಒಂದಾದ ಅರ್ಜುನ ಯುಧಿಷ್ಠಿರರು

**ತತ ಏತದವಿಜ್ಞಾನಾತ್ ಕುಪಿತೋ ನೃಪತಿರ್ಭೃಶಮ್ ।**
**ಆಹಾಸ್ತು ರಾಜಾ ಭೀಮಸ್ತ್ವಂ ಯುವಾ ಮಾಂ ಜಹಿ ಚ ಸ್ವಯಮ್ ।**
**ವನಂ ವಾ ವಿಫಲೋ ಯಾಮೀತ್ಯುಕ್ತ್ವೋತ್ತಸ್ಥೌ ಸ್ವತಲ್ಪತಃ ॥ ೧೨೮ ॥**

ತತಃ ಏತದವಿಜ್ಞಾನಾತ್ ಕುಪಿತಃ ನೃಪತಿಃ ಭೃಶಮ್ । ಆಹ ಅಸ್ತು ರಾಜಾ ಭೀಮಃ ತ್ವಂ ಯುವಾ ಮಾಂ ಜಹಿ ಚ ಸ್ವಯಮ್ । ವನಂ ವಾ ವಿಫಲಃ ಯಾಮಿ ಇತಿ ಉಕ್ತ್ವಾ ಉತ್ತಸ್ಥೌ ಸ್ವತಲ್ಪತಃ ॥ ೧೨೮ ॥

**ಇತಿ ಉಕ್ತಃ ಸಃ ತು ಅಹಂಕಾರಾತ್ ಶಶಂಸ ಸ್ವಗುಣಾನ್ ಅಲಮ್ ॥ ೧೨೫ ॥**

**ಅರ್ಥ** :- **ಇತಿ** = ಹೀಗೆಂದು, **ಉಕ್ತಃ** = ಹೇಳಲ್ಪಟ್ಟ, **ಸಃ ತು** = ಅವನಾದರೋ, **ಅಹಂಕಾರಾತ್** = ಅಹಂಕಾರದಿಂದ, **ಸ್ವಗುಣಾನ್** = ತನ್ನ ಗುಣಗಳನ್ನು, **ಅಲಂ** = ಅತಿಶಯವಾಗಿ, **ಶಶಂಸ** = ಹೇಳಿದ.

**ತಾತ್ಪರ್ಯ** :- ಕೃಷ್ಣ ಹೀಗೆನ್ನಲು ಅರ್ಜುನ ಅಹಂಕಾರದಿಂದ ತನ್ನಗುಣಗಳನ್ನು ಬಹಳವಾಗಿ ಹೇಳಿಕೊಂಡ.

**ಗುರುನಿಂದಾऽऽತ್ಮಪೂಜಾ ಚ ನ ಧರ್ಮಾಯ ಭವೇತ್ ಕ್ವಚಿತ್ ।**
**ತಥಾऽಪ್ಯರ್ಜುನಹಾರ್ದಂ ತತ್ ಸಂಪ್ರಕಾಶ್ಯ ಜನಾರ್ದನಃ ।**
**ತಸ್ಯ ಲಜ್ಜಾಂ ಸಮುತ್ಪಾದ್ಯ ನಾಶಯಿತ್ವಾ ಚ ತಂ ಮದಮ್ ॥ ೧೨೬ ॥**

**ಗುರುನಿಂದಾ ಆತ್ಮಪೂಜಾ ಚ ನ ಧರ್ಮಾಯ ಭವೇತ್ ಕ್ವಚಿತ್ । ತಥಾ ಅಪಿ ಅರ್ಜುನಹಾರ್ದಂ ತತ್ ಸಂಪ್ರಕಾಶ್ಯ ಜನಾರ್ದನಃ । ತಸ್ಯ ಲಜ್ಜಾಂ ಸಮುತ್ಪಾದ್ಯ ನಾಶಯಿತ್ವಾ ಚ ತಂ ಮದಮ್ ॥ ೧೨೬ ॥**

**ಅರ್ಥ** :- **ಗುರುನಿಂದಾ** = ಗುರುಗಳ ನಿಂದೆ, **ಆತ್ಮಪೂಜಾ ಚ** = ಮತ್ತು ಆತ್ಮಪ್ರಶಂಸನೆ, **ಧರ್ಮಾಯ** = ಧರ್ಮಸಾಧನೆಗಾಗಿ, **ಕ್ವಚಿತ್** = ಎಲ್ಲೂ, **ನ ಭವೇತ್** = ಆಗಲಾರವು. **ತಥಾ ಅಪಿ** = ಆದರೂ, **ಜನಾರ್ದನಃ** = ಶ್ರೀಕೃಷ್ಣನು, **ತತ್** = ಆ **ಅರ್ಜುನಹಾರ್ದಂ** = ಅರ್ಜುನನ ಆಂತರ್ಯವನ್ನು, **ಸಂಪ್ರಕಾಶ್ಯ** = ಚೆನ್ನಾಗಿ ಪ್ರಕಟಪಡಿಸಿ, **ತಸ್ಯ** = ಅವನಿಗೆ, **ಲಜ್ಜಾಂ** = ಲಜ್ಜೆಯನ್ನು, **ಸಮುತ್ಪಾದ್ಯ** = ಹುಟ್ಟಿಸಿ, **ತಂ** = ಆ, **ಮದಂ ಚ** = ಅಹಂಕಾರವನ್ನು ಸಹ, **ನಾಶಯಿತ್ವಾ** = ನಾಶಪಡಿಸಿ

**ತಾತ್ಪರ್ಯ** :- ಗುರುಗಳ ನಿಂದೆ ಹಾಗೂ ಆತ್ಮಪ್ರಶಂಸೆ ಎಂದೂ ಧರ್ಮಸಾಧನೆಗೆ ಕಾರಣವಾಗವು. ಆದರೂ, ಅರ್ಜುನನ ಆಂತರ್ಯವನ್ನು ಶ್ರೀಕೃಷ್ಣ ಹಾಗೆ ಪ್ರಕಟಪಡಿಸಿದ. ಅವನಿಗೆ ಲಜ್ಜೆಯನ್ನು ಹುಟ್ಟಿಸಿ, ಅವನಿಗೆ ಹುಟ್ಟಿದ ಅಹಂಕಾರವನ್ನು ಪರಿಹರಿಸಿದ.

ಅರ್ಜುನನ ಅಹಂಕಾರ ಖಂಡನೆ

**ನಾಹಂ ವೇದ ಪರಂ ಧರ್ಮಂ ಕೃಷ್ಣ ಏವ ಗತಿರ್ಮಮ ।**
**ಇತಿ ಭಾವಂ ಸಮುತ್ಪಾದ್ಯ ದೋಷಾನ್ ನಾಶಯಿತುಂ ಹರಿಃ ।**
**ಕಾರಯಾಮಾಸ ತತ್ ಸರ್ವಮರ್ಜುನೇನ ಜಗತ್ಪತಿಃ ॥ ೧೨೭ ॥**

ನ ಅಹಂ ವೇದ ಪರಂ ಧರ್ಮಂ ಕೃಷ್ಣಃ ಏವ ಗತಿಃ ಮಮ । ಇತಿ ಭಾವಂ ಸಮುತ್ಪಾದ್ಯ ದೋಷಾನ್ ನಾಶಯಿತುಂ ಹರಿಃ । ಕಾರಯಾಮಾಸ ತತ್ ಸರ್ವಂ ಅರ್ಜುನೇನ ಜಗತ್ಪತಿಃ ॥ ೧೨೭ ॥

**ಅರ್ಥ** :- **ಅಹಂ** = ನಾನು, **ಪರಂ** = ಮುಖ್ಯವಾದ, **ಧರ್ಮಂ** = ಧರ್ಮವನ್ನು, **ನ ವೇದ** = ತಿಳಿದವನಲ್ಲ, **ಕೃಷ್ಣಃ ಏವ** = ಕೃಷ್ಣನು ಮಾತ್ರ, **ಮಮ** = ನನ್ನ, **ಗತಿಃ** = ಗತಿಯು, **ಇತಿ** = ಎಂಬ, **ಭಾವಂ** = ಭಾವವನ್ನು, **ಸಮುತ್ಪಾದ್ಯ** = ಹುಟ್ಟಿಸಿ, **ದೋಷಾನ್** = ದೋಷಗಳನ್ನು, **ನಾಶಯಿತುಂ** = ನಾಶಪಡಿಸಲು, **ಜಗತ್ಪತಿಃ** = ಜಗದೊಡೆಯನಾದ, **ಹರಿಃ** = ಶ್ರೀಹರಿಯು, **ತತ್ ಸರ್ವಂ** = ಅದೆಲ್ಲವನ್ನೂ, **ಅರ್ಜುನೇನ** = ಅರ್ಜುನನಿಂದ, **ಕಾರಯಾಮಾಸ** = ಮಾಡಿಸಿದ.

**ತಾತ್ಪರ್ಯ** :- ನಾನು ಮುಖ್ಯ ಧರ್ಮವನ್ನು ತಿಳಿದವನಲ್ಲ, ನನಗೆ ಕೃಷ್ಣನೇ ಗತಿ ಎಂಬ ಭಾವವನ್ನು ಚೆನ್ನಾಗಿ ಹುಟ್ಟಿಸಿ ಅವನ ದೋಷಗಳನ್ನು ಪರಿಹರಿಸಲೆಂದು ಜಗದೊಡೆಯನಾದ ಕೃಷ್ಣ ಅರ್ಜುನನಿಂದ ಅದೆಲ್ಲವನ್ನೂ ಮಾಡಿಸಿದ.

ಮತ್ತೆ ಒಂದಾದ ಅರ್ಜುನ ಯುಧಿಷ್ಠಿರರು

**ತತ ಏತದವಿಜ್ಞಾನಾತ್ ಕುಪಿತೋ ನೃಪತಿರ್ಭೃಶಮ್ ।**
**ಆಹಾಸ್ತು ರಾಜಾ ಭೀಮಸ್ತ್ವಂ ಯುವಾ ಮಾಂ ಜಹಿ ಚ ಸ್ವಯಮ್ ।**
**ವನಂ ವಾ ವಿಫಲೋ ಯಾಮೀತ್ಯುಕ್ತ್ವೋತ್ತಸ್ಥೌ ಸ್ವತಲ್ಪತಃ ॥ ೧೨೮ ॥**

ತತಃ ಏತದವಿಜ್ಞಾನಾತ್ ಕುಪಿತಃ ನೃಪತಿಃ ಭೃಶಮ್ । ಆಹ ಅಸ್ತು ರಾಜಾ ಭೀಮಃ ತ್ವಂ ಯುವಾ ಮಾಂ ಜಹಿ ಚ ಸ್ವಯಮ್ । ವನಂ ವಾ ವಿಫಲಃ ಯಾಮಿ ಇತಿ ಉಕ್ತ್ವಾ ಉತ್ತಸ್ಥೌ ಸ್ವತಲ್ಪತಃ ॥ ೧೨೮ ॥

**ಅರ್ಥ** :- **ತತಃ** = ಆದ್ದರಿಂದ, **ಏತದವಿಜ್ಞಾನಾತ್** = ಇದರ (ಕೃಷ್ಣನ ಮಹಿಮೆಯ) ಜ್ಞಾನವಿಲ್ಲದೆ, **ಭೃಶಂ** = ಬಹಳವಾಗಿ, **ಕುಪಿತಃ** = ಕೋಪಗೊಂಡ, **ನೃಪತಿಃ** = ರಾಜನು, **ಆಹ** = ಹೇಳಿದ, **ಭೀಮಃ** = ಭೀಮನು, **ರಾಜಾ** = ರಾಜನು, **ಅಸ್ತು** = ಆಗಲಿ, **ತ್ವಂ** = ನೀನು, **ಯುವಾ ಭವ** = ಯುವರಾಜನಾಗು. **ಚ** = ಮತ್ತು, **ಮಾಂ** = ನನ್ನನ್ನು, **ಜಹಿ** = ಕೊಂದುಬಿಡು. **ವಿಫಲಃ** = ಅಪ್ರಯೋಜಕನಾದ (ನಾನು), **ಸ್ವಯಂ ವಾ** = ಸ್ವತಃ, **ವನಂ** = ಕಾಡನ್ನು ಕುರಿತು, **ಯಾಮಿ** = ಹೋಗುವೆನು. **ಇತಿ** = ಹೀಗೆಂದು, **ಉಕ್ತ್ವಾ** = ಹೇಳಿ, **ಸ್ವತಲ್ಪತಃ** = ತನ್ನ ಹಾಸಿಗೆಯಿಂದ, **ಉತ್ತಸ್ಥೌ** = ಮೇಲೆದ್ದ.

**ತಾತ್ಪರ್ಯ** :- ಬಳಿಕ ಇದಾವುದರ ಪರಿವೆಯಿಲ್ಲದ ಧರ್ಮರಾಜ ಬಹಳವಾಗಿ ಕೆರಳಿದ, ಹಾಗೂ ಹೇಳಿದ: 'ಭೀಮ ಮಹಾರಾಜನಾಗಲಿ, ನೀನು ಯುವರಾಜನಾಗು; ನನ್ನನ್ನು ನೀನೇ ಕೊಂದುಬಿಡು. ಇಲ್ಲವಾದಲ್ಲಿ ಅಪ್ರಯೋಜಕನಾದ ನಾನು ಕಾಡಿಗೆ ತೆರಳುವೆನು' ಎನ್ನುತ್ತಾ ತಾನು ಹಾಸಿಗೆಯಿಂದ ಮೇಲೆದ್ದ.

### ಶ್ರೀಕೃಷ್ಣನಿಂದ ಬದುಕಿದ ಅರ್ಜುನ ಧರ್ಮರಾಜರು

**ತಂ ವಾಸುದೇವಃ ಪ್ರತಿಗೃಹ್ಯ ಹೇತು-**
**ಮುಕ್ತ್ವಾ ಸರ್ವಂ ಶಮಯಾಮಾಸ ನೇತಾ ।**
**ಪಾರ್ಥಶ್ಚ ಭೂಪಸ್ಯ ಪಪಾತ ಪಾದಯೋಃ**
**ಕ್ಷಮಾಪಯನ್ ಸೋಽಪಿ ಸುಪ್ರೀತಿಮಾಪ ॥ ೧೨೯ ॥**

ತಂ ವಾಸುದೇವಃ ಪ್ರತಿಗೃಹ್ಯ ಹೇತುಂ ಉಕ್ತ್ವಾ ಸರ್ವಂ ಶಮಯಾಮಾಸ ನೇತಾ । ಪಾರ್ಥಃ ಚ ಭೂಪಸ್ಯ ಪಪಾತ ಪಾದಯೋಃ ಕ್ಷಮಾಪಯನ್ ಸಃ ಅಪಿ ಸುಪ್ರೀತಿಂ ಆಪ ॥ ೧೨೯ ॥

**ಅರ್ಥ** :- **ನೇತಾ** = ನಾಯಕನಾದ, **ವಾಸುದೇವಃ** = ವಾಸುದೇವನು, **ತಂ** = ಅವನನ್ನು, **ಪ್ರತಿಗೃಹ್ಯ** = ಹಿಡಿದುಕೊಂಡು, **ಹೇತುಂ** = ಕಾರಣವನ್ನು, **ಉಕ್ತ್ವಾ** = ಹೇಳಿ, **ಸರ್ವಂ** = ಎಲ್ಲವನ್ನೂ, **ಶಮಯಾಮಾಸ** = ಶಮನಗೊಳಿಸಿದ. **ಪಾರ್ಥಃ ಚ** = ಅರ್ಜುನನೂ ಸಹ, **ಕ್ಷಮಾಪಯನ್** = ಕ್ಷಮೆಯನ್ನು ಕೇಳಿ, **ಭೂಪಸ್ಯ** = ರಾಜನ, **ಪಾದಯೋಃ** = ಎರಡು

ಪಾದಗಳಲ್ಲಿ, **ಪಪಾತ** = ಬಿದ್ದನು. **ಸಃ ಅಪಿ** = ಅವನೂ ಸಹ, **ಸುಪ್ರೀತಿಂ** = ಬಹಳ ಪ್ರೀತಿಯನ್ನು, **ಆಪ** = ಹೊಂದಿದ.

**ತಾತ್ಪರ್ಯ** :- ಲೋಕನಾಯಕನಾದ ಶ್ರೀಕೃಷ್ಣ ಅವನನ್ನು ತಡೆದು ನಿಲ್ಲಿಸಿ ಎಲ್ಲ ಕಾರಣವನ್ನು ತಿಳಿಸಿ ಸಮಾಧಾನಪಡಿಸಿದ. ಅರ್ಜುನ ಧರ್ಮರಾಜನ ಎರಡೂ ಪಾದಗಳಿಗೆರಗಿ ಕ್ಷಮೆ ಬೇಡಿದ. ಧರ್ಮರಾಜ ತುಂಬಾ ಸಂತುಷ್ಟನಾದ.

### ಅರ್ಜುನ ಯುಧಿಷ್ಠಿರರು ಮಾಡಿದ ಕೃಷ್ಣಸ್ತುತಿ

**ತೌ ಭ್ರಾತರೌ ವಾಸುದೇವಪ್ರಸಾದಾ-**
**ನ್ಮಹಾಪದೋ ಮುಕ್ತಿಮಾಪ್ಯಾತಿಹೃಷ್ಟೌ ।**
**ಭಕ್ತ್ಯಾ ಸಮಸ್ತಾಧಿಪತಿಂ ಶಶಂಸತು-**
**ಸ್ತ್ವಯಾ ಸಮಃ ಕೋ ನು ಹರೇ ಹಿತೋ ನಃ ॥ ೧೩೦ ॥**

**ತೌ ಭ್ರಾತರೌ ವಾಸುದೇವಪ್ರಸಾದಾತ್ ಮಹಾಪದಃ ಮುಕ್ತಿಂ ಆಪ್ಯ ಅತಿಹೃಷ್ಟೌ । ಭಕ್ತ್ಯಾ ಸಮಸ್ತಾಧಿಪತಿಂ ಶಶಂಸತುಃ ತ್ವಯಾ ಸಮಃ ಕಃ ನು ಹರೇ ಹಿತಃ ನಃ ॥ ೧೩೦ ॥**

**ಅರ್ಥ** :- **ತೌ ಭ್ರಾತರೌ** = ಆ ಇಬ್ಬರು ಸಹೋದರರು, **ವಾಸುದೇವ ಪ್ರಸಾದಾತ್** = ವಾಸುದೇವನ ಪ್ರಸಾದದಿಂದಾಗಿ, **ಮಹಾಪದಃ** = ಮಹಾ ಆಪತ್ತಿನಿಂದ, **ಮುಕ್ತಿಂ** = ಬಿಡುಗಡೆಯನ್ನು, **ಆಪ್ಯ** = ಹೊಂದಿ, **ಅತಿಹೃಷ್ಟೌ** = ಅತ್ಯಂತ ಸಂತೋಷಗೊಂಡು, **ಭಕ್ತ್ಯಾ** = ಭಕ್ತಿಯಿಂದ, **ಸಮಸ್ತಾಧಿಪತಿಂ** = ಸಕಲರ ಅಧಿಪತಿಯನ್ನು, **ಶಶಂಸತುಃ** = ಕೊಂಡಾಡಿದರು. **ಹರೇ** = ಎಲೈ ಹರಿಯೆ!, **ನಃ** = ನಮಗೆ **ತ್ವಯಾ ಸಮಃ** = ನಿನ್ನ ಸಮನಾದ, **ಹಿತಃ** = ಹಿತನಾದವನು, **ಕಃ ನು** = ಯಾವನು ತಾನೆ ಇರುವನು?

**ತಾತ್ಪರ್ಯ** :- ಆ ಇಬ್ಬರು ಸೋದರರು ಶ್ರೀಕೃಷ್ಣನ ಅನುಗ್ರಹದಿಂದ ಮಹಾಪತ್ತಿನಿಂದ ಬಿಡುಗಡೆ ಹೊಂದಿದವರಾಗಿ ತುಂಬಾ ಸಂತೋಷಿಸಿದರು. ಭಕ್ತಿಯಿಂದ ಸಕಲೇಶ್ವರನಾದ ಕೃಷ್ಣನನ್ನು ಬಹಳವಾಗಿ ಕೊಂಡಾಡಿದರು - 'ಹರಿಯೇ, ನಮಗೆ ನಿನಗಿಂತ ಮಿಗಿಲಾದ ಮತ್ತೊಬ್ಬ ಹಿತೈಷಿ ಯಾರಿರುವರು'.

ಕರ್ಣವಧೆಗಾಗಿ ಅರ್ಜುನನ ಪಯಣ

**ತತಃ ಪ್ರಣಮ್ಯ ಬೀಭತ್ಸುರಗ್ರಜಂ ಪರಿರಂಭಿತಃ ।**
**ತೇನಾಭಿನಂದಿತಃ ಪ್ರೀತ್ಯಾ ಚಾಶೀರ್ಭಿಃ ಪ್ರಯಯೌ ಯುಧೇ ॥ ೧೩೧ ॥**

**ತತಃ ಪ್ರಣಮ್ಯ ಬೀಭತ್ಸುಃ ಅಗ್ರಜಂ ಪರಿರಂಭಿತಃ । ತೇನ ಅಭಿನಂದಿತಃ ಪ್ರೀತ್ಯಾ ಚ ಆಶೀರ್ಭಿಃ ಪ್ರಯಯೌ ಯುಧೇ ॥ ೧೩೧ ॥**

**ಅರ್ಥ** :- **ತತಃ** = ಬಳಿಕ, **ಬೀಭತ್ಸುಃ** = ಅರ್ಜುನನು, **ಅಗ್ರಜಂ** = ಅಣ್ಣನನ್ನು, **ಪ್ರಣಮ್ಯ** = ನಮಸ್ಕರಿಸಿ, **ತೇನ** = ಅವನಿಂದ, **ಪರಿರಂಭಿತಃ** = ಆಲಿಂಗಿತನಾಗಿ, **ಪ್ರೀತ್ಯಾ** = ಪ್ರೀತಿಯಿಂದ, **ಅಶೀರ್ಭಿಃ** = ಅಶೀರ್ವಚನಗಳಿಂದ, **ಅಭಿನಂದಿತಃ ಚ** = ಅಭಿನಂದಿತನೂ ಆಗಿ, **ಯುಧೇ** = ಯುದ್ಧಕ್ಕಾಗಿ, **ಪ್ರಯಯೌ** = ಹೊರಟನು.

**ತಾತ್ಪರ್ಯ** :- ಅರ್ಜುನ ಆ ಬಳಿಕ ಅಣ್ಣನಾದ ಧರ್ಮರಾಜನಿಗೆ ನಮಸ್ಕರಿಸಿ ಅವನಿಂದ ಪ್ರೀತಿಯಿಂದ ಆಲಿಂಗಿತನಾಗಿ ಅವನ ಆಶೀರ್ವಚನಗಳಿಂದ ಅಭಿನಂದಿತನಾಗಿ ಯುದ್ಧಕ್ಕೆ ತೆರಳಿದ.

ಕೃಷ್ಣನಿಂದ ಅರ್ಜುನನ ತೇಜೋವರ್ಧನೆ

**ತಂ ಶಂಕಿತಂ ಕರ್ಣಜಯೇ ಸ್ವಿನ್ನಗಾತ್ರಂ ಹರಿಸ್ತದಾ ।**
**ಸಂಕೀರ್ತ್ಯ ಪೂರ್ವಕರ್ಮಾಣಿ ನರಾವೇಶಂ ವಿಶೇಷತಃ ।**
**ವ್ಯಂಜಯಾಮಾಸ ಧೈರ್ಯಂ ಚ ತಸ್ಯಾಸೀತ್ ತೇನ ಸುಸ್ಥಿರಮ್ ॥ ೧೩೨ ॥**

**ತಂ ಶಂಕಿತಂ ಕರ್ಣಜಯೇ ಸ್ವಿನ್ನಗಾತ್ರಂ ಹರಿಃ ತದಾ । ಸಂಕೀರ್ತ್ಯ ಪೂರ್ವಕರ್ಮಾಣಿ ನರಾವೇಶಂ ವಿಶೇಷತಃ । ವ್ಯಂಜಯಾಮಾಸ ಧೈರ್ಯಂ ಚ ತಸ್ಯ ಆಸೀತ್ ತೇನ ಸುಸ್ಥಿರಮ್ ॥ ೧೩೨ ॥**

**ಅರ್ಥ** :- **ತದಾ** = ಆಗ, **ಹರಿಃ** = ಶ್ರೀಕೃಷ್ಣನು, **ಕರ್ಣಜಯೇ** = ಕರ್ಣನನ್ನು ಜಯಿಸುವ ವಿಷಯದಲ್ಲಿ, **ಶಂಕಿತಂ** = ಸಂದೇಹಗೊಂಡ, **ಸ್ವಿನ್ನಗಾತ್ರಂ** = ಬೆವತುಹೋದ, **ತಂ** = ಅವನನ್ನು, **ಪೂರ್ವಕರ್ಮಾಣಿ** = ಹಿಂದಿನ ಕರ್ಮಗಳನ್ನು, **ಸಂಕೀರ್ತ್ಯ** = ಕೊಂಡಾಡಿ, **ನರಾವೇಶಂ** = ನಾರಾವೇಶವನ್ನು, **ವಿಶೇಷತಃ** = ವಿಶೇಷವಾಗಿ, **ವ್ಯಂಜಯಾಮಾಸ**

= ಅಭಿವ್ಯಕ್ತಿಗೊಳಿಸಿದ. **ತೇನ** = ಅದರಿಂದ, **ತಸ್ಯ** = ಅವನಿಗೆ, **ಸುಸ್ಥಿರಂ** = ಅತ್ಯಂತ ಸ್ಥಿರವಾದ, **ಧೈರ್ಯಂ ಚ** = ಧೈರ್ಯವೂ, **ಆಸೀತ್** = ಉಂಟಾಯಿತು.

**ತಾತ್ಪರ್ಯ** :- ಕರ್ಣನನ್ನು ಗೆಲ್ಲುವ ಬಗ್ಗೆ ಅರ್ಜುನ ಸಂದೇಹಗೊಂಡು ಬೆವತುಹೋದಾಗ, ಕೃಷ್ಣ ಅರ್ಜುನನಿಗೆ ಅವನ ಹಿಂದಿನ ಸಾಧನೆಗಳನ್ನು ವಿವರಿಸಿ ಅವನೊಳಗಿದ್ದ ನರಾವೇಶವನ್ನು ಅಭಿವ್ಯಕ್ತಿಗೊಳಿಸಿದ. ಅದರಿಂದಾಗಿ ಅವನ ಧೈರ್ಯ ಸ್ಥಿರಗೊಂಡಿತು.

### ಭೀಮನಿಂದ ಶತ್ರುನಾಶ

**ಭೀಮಸ್ತದಾ ಶತ್ರುಬಲಂ ಸಮಸ್ತಂ**
**ವಿದ್ರಾವಯಾಮಾಸ ಜಘಾನ ಚಾಜೌ ।**
**ವೀರಾನ್ ರಣಾಯಾಭಿಮುಖಾನ್ ಸ್ವಯಂತ್ರಾ**
**ಕುರ್ವಂಶ್ಚ ವಾರ್ತಾಂ ರಮಮಾಣ ಏವ ॥ ೧೩೩ ॥**

ಭೀಮಃ ತದಾ ಶತ್ರುಬಲಂ ಸಮಸ್ತಂ ವಿದ್ರಾವಯಾಮಾಸ ಜಘಾನ ಚ ಆಜೌ । ವೀರಾನ್ ರಣಾಯ ಅಭಿಮುಖಾನ್ ಸ್ವಯಂತ್ರಾ ಕುರ್ವನ್ ಚ ವಾರ್ತಾಂ ರಮಮಾಣಃ ಏವ ॥ ೧೩೩ ॥

**ಅರ್ಥ** :– **ತದಾ** = ಆಗ, **ಭೀಮಃ** = ಭೀಮನು, **ಸ್ವಯಂತ್ರಾ** = ತನ್ನ ಸಾರಥಿಯೊಂದಿಗೆ, **ವಾರ್ತಾಂ ಕುರ್ವನ್ ಚ** = ವಿನೋದವಾರ್ತೆಯನ್ನಾಡುವವನಾಗಿಯೂ, **ರಮಮಾಣಃ ಏವ** = ಕ್ರೀಡಿಸುವವನಾಗಿಯೇ, **ಸಮಸ್ತಂ** = ಇಡೀ, **ಶತ್ರುಬಲಂ** = ಶತ್ರುಸೇನೆಯನ್ನು, **ವಿದ್ರಾವಯಾಮಾಸ** = ಹೊಡೆದೋಡಿಸಿದ. **ಆಜೌ** = ರಣದಲ್ಲಿ, **ರಣಾಯ** = ಯುದ್ಧಕ್ಕೆಂದು, **ಅಭಿಮುಖಾನ್** = ಎದುರುಬಂದ, **ವೀರಾನ್** = ವೀರರನ್ನು, **ಜಘಾನ ಚ** = ಕೊಂದೂ ಹಾಕಿದ.

**ತಾತ್ಪರ್ಯ** :- ಆಗ ಭೀಮಸೇನ ಸಕಲ ಶತ್ರುಸೇನೆಯನ್ನೂ ಹೊಡೆದೋಡಿಸುತ್ತಿದ್ದ. ಯುದ್ಧಕ್ಕೆಂದು ಆಗಮಿಸಿದ ವೀರರುಗಳನ್ನು ಯುದ್ಧದಲ್ಲಿ ಕೊಂದುಹಾಕಿದ. ತನ್ನ ಸಾರಥಿಯೊಂದಿಗೆ ವಿನೋದದ ವಾರ್ತೆಯನ್ನು ಆಡುತ್ತಲೇ ಅದನ್ನೆಲ್ಲ ಮಾಡಿದ.

### ಭೀಮನಿಂದ ಶಕುನಿಯ ಪರಾಭವ

ತದಾಽಽಸದತ್ ತಂ ಶಕುನಿಃ ಸಸೈನ್ಯೋ
ದುರ್ಯೋಧನಸ್ಯಾವರಜೈರುಪೇತಃ ।
ತಂ ಭೀಮಸೇನೋ ವಿರಥಂ ನಿರಾಯುಧಂ
ವಿಧಾಯ ಬಾಣೈರ್ಭುವಿ ಚ ನ್ಯಪಾತಯತ್ ॥ ೧೩೪ ॥

ತದಾ ಆಸದತ್ ತಂ ಶಕುನಿಃ ಸಸೈನ್ಯಃ ದುರ್ಯೋಧನಸ್ಯ ಅವರಜೈಃ ಉಪೇತಃ । ತಂ ಭೀಮಸೇನಃ ವಿರಥಂ ನಿರಾಯುಧಂ ವಿಧಾಯ ಬಾಣೈಃ ಭುವಿ ಚ ನ್ಯಪಾತಯತ್ ॥ ೧೩೪ ॥

**ಅರ್ಥ** :- **ತದಾ** = ಆಗ, **ದುರ್ಯೋಧನಸ್ಯ** = ದುರ್ಯೋಧನನ, **ಅವರಜೈಃ** = ತಮ್ಮಂದಿರಿಂದ, **ಉಪೇತಃ** = ಕೂಡಿದ, **ಸಸೈನ್ಯಃ** = ಸೇನೆಯ ಸಮೇತನಾಗಿ, **ಶಕುನಿಃ** = ಶಕುನಿಯು, **ತಂ** = ಅವನನ್ನು (ಭೀಮಸೇನನನ್ನು), **ಆಸದತ್** = ಧಾವಿಸಿದ. **ತಂ** = ಅವನನ್ನು, **ಭೀಮಸೇನಃ** = ಭೀಮಸೇನನು, **ವಿರಥಂ** = ರಥವನ್ನು ಕಳೆದುಕೊಂಡವನನ್ನಾಗಿ, **ನಿರಾಯುಧಂ** = ಆಯುಧವಿಲ್ಲದವನನ್ನಾಗಿ, **ವಿಧಾಯ** = ಮಾಡಿ, **ಬಾಣೈಃ** = ಬಾಣಗಳಿಂದ, **ಭುವಿ** = ಭೂಮಿಯಲ್ಲಿ, **ನ್ಯಪಾತಯತ್** = ಬೀಳಿಸಿದ.

**ತಾತ್ಪರ್ಯ** :- ಆಗ ಶಕುನಿ ತನ್ನ ಸೇನೆಯೊಂದಿಗೂ, ದುರ್ಯೋಧನನ ತಮ್ಮಂದಿರೊಂದಿಗೂ ಕೂಡಿಕೊಂಡು ಭೀಮಸೇನನ ಮೇಲೆ ಧಾವಿಸಿದ. ಭೀಮ ಅವನನ್ನು ಕೂಡಲೇ ವಿರಥನನ್ನಾಗಿಯೂ, ನಿರಾಯುಧನನ್ನಾಗಿಯೂ ಮಾಡಿ ಬಾಣಗಳಿಂದ ಹೊಡೆದು ನೆಲಕ್ಕೆ ಕೆಡವಿದ.

### ಭೀಮ ಶಕುನಿಯನ್ನು ಕೊಲ್ಲದಿರಲು ಕಾರಣ

ನ ಜಘ್ನಿವಾಂಸ್ತಂ ಸಹದೇವಭಾಗಂ
ಪ್ರಕಲ್ಪಿತಂ ಸ್ವೇನ ತದಾಽಕ್ಷಗೋಷ್ಠ್ಯಾಮ್ ।
ತಂ ಮೂರ್ಛಿತಂ ಶ್ವಾಸಮಾತ್ರಾವಶೇಷಂ
ದುರ್ಯೋಧನಃ ಸ್ವರಥೇನಾಪನಿನ್ಯೇ ॥ ೧೩೫ ॥

ನ ಜಘ್ನಿವಾನ್ ತಂ ಸಹದೇವಭಾಗಂ ಪ್ರಕಲ್ಪಿತಂ ಸ್ವೇನ ತದಾ ಅಕ್ಷಗೋಷ್ಠ್ಯಾಮ್ । ತಂ ಮೂರ್ಚ್ಛಿತಂ ಶ್ವಾಸಮಾತ್ರಾವಶೇಷಂ ದುರ್ಯೋಧನಃ ಸ್ವರಥೇನ ಅಪನಿನ್ಯೇ ॥ ೧೩೫ ॥

**ಅರ್ಥ :- ಅಕ್ಷಗೋಷ್ಠ್ಯಾಂ** = ದ್ಯೂತದ ಸಭೆಯಲ್ಲಿ, **ಸ್ವೇನ** = ತನ್ನಿಂದಲೇ, **ಸಹದೇವಭಾಗಂ** = ಸಹದೇವನ ಪಾಲು (ಎಂದು), **ಪ್ರಕಲ್ಪಿತಂ** = ನಿರ್ಧರಿಸಲ್ಪಟ್ಟ, **ತಂ** = ಅವನನ್ನು, **ತದಾ** = ಆಗ, **ನ ಜಘ್ನಿವಾನ್** = ಕೊಲ್ಲಲಿಲ್ಲ. **ಮೂರ್ಚ್ಛಿತಂ** = ಮೂರ್ಚ್ಛಿತನಾದ, **ಶ್ವಾಸಮಾತ್ರಾವಶೇಷಂ** = ಶ್ವಾಸ ಮಾತ್ರ ಉಳಿದಿದ್ದ, **ತಂ** = ಅವನನ್ನು, **ದುರ್ಯೋಧನಃ** = ದುರ್ಯೋಧನನು, **ಸ್ವರಥೇನ** = ತನ್ನ ರಥದಿಂದ, **ಅಪನಿನ್ಯೇ** = ದೂರಕ್ಕೆ ಒಯ್ದ.

**ತಾತ್ಪರ್ಯ :-** ಅವನು ಸಹದೇವನ ಪಾಲು ಎಂಬುದಾಗಿ ತಾನೇ ದ್ಯೂತದ ಸಭೆಯಲ್ಲಿ ವ್ಯವಸ್ಥೆ ಮಾಡಿದ್ದರಿಂದ ಭೀಮ ಶಕುನಿಯನ್ನು ಕೊಲ್ಲಲಿಲ್ಲ. ಮೂರ್ಛಿತನಾಗಿ ಉಸಿರು ಮಾತ್ರ ಉಳಿದುಕೊಂಡಿದ್ದ ಶಕುನಿಯನ್ನು ದುರ್ಯೋಧನ ತನ್ನ ರಥದಲ್ಲಿ ದೂರಕ್ಕೆ ಕರೆದೊಯ್ದ.

### ಭೀಮನಿಂದ ಹತ್ತು ಜನ ಕೌರವರ ಪಲಾಯನ

**ದುರ್ಯೋಧನಸ್ಯಾವರಜಾ ದಶಾತ್ರ**
**ಪ್ರದುದ್ರುವುರ್ಭೀಮಸೇನಂ ವಿಹಾಯ ।**
**ತದಾಽರ್ಜುನಂ ವಾಸುದೇವಂ ಚ ದೃಷ್ಟ್ವಾ**
**ಪ್ರೀತಃ ಶ್ರುತ್ವಾ ಧರ್ಮರಾಜಪ್ರವೃತ್ತಿಮ್ ॥ ೧೩೬ ॥**

ದುರ್ಯೋಧನಸ್ಯ ಅವರಜಾಃ ದಶ ಅತ್ರ ಪ್ರದುದ್ರುವುಃ ಭೀಮಸೇನಂ ವಿಹಾಯ । ತದಾ ಅರ್ಜುನಂ ವಾಸುದೇವಂ ಚ ದೃಷ್ಟ್ವಾ ಪ್ರೀತಃ ಶ್ರುತ್ವಾ ಧರ್ಮರಾಜಪ್ರವೃತ್ತಿಮ್ ॥ ೧೩೬ ॥

**ಅರ್ಥ :- ಅತ್ರ** = ಆ ಯುದ್ಧದಲ್ಲಿ, **ದುರ್ಯೋಧನಸ್ಯ** = ದುರ್ಯೋಧನನ, **ದಶ** = ಹತ್ತು, **ಅವರಜಾಃ** = ತಮ್ಮಂದಿರು, **ಭೀಮಸೇನಂ** = ಭೀಮಸೇನನನ್ನು, **ವಿಹಾಯ** = ಬಿಟ್ಟು, **ಪ್ರದುದ್ರುವುಃ** = ಓಡಿದರು. **ತದಾ** = ಆಗ, **ಅರ್ಜುನಂ** = ಅರ್ಜುನನನ್ನು, **ವಾಸುದೇವಂ ಚ** =

ವಾಸುದೇವನನ್ನೂ, **ದೃಷ್ಟ್ವಾ** = ನೋಡಿ, **ಧರ್ಮರಾಜಪ್ರವೃತ್ತಿಂ** = ಧರ್ಮರಾಜನ ಕ್ಷೇಮವಾರ್ತೆಯನ್ನು, **ಶ್ರುತ್ವಾ** = ಕೇಳಿ, **ಪ್ರೀತಃ (ಅಭವತ್?)** = ಪ್ರೀತನಾದನು.

**ತಾತ್ಪರ್ಯ :-** ಆ ಯುದ್ಧದಲ್ಲಿ ದುರ್ಯೋಧನನ ಹತ್ತು ಜನ ತಮ್ಮಂದಿರು ಭೀಮನನ್ನು ಬಿಟ್ಟು ದೂರಕ್ಕೆ ವೇಗದಿಂದ ಓಡಿದರು. ಭೀಮಸೇನ ಆಗ ಅರ್ಜುನ ಕೃಷ್ಣರನ್ನು ನೋಡಿ ಹಾಗೂ ಧರ್ಮರಾಜನ ಕ್ಷೇಮವಾರ್ತೆಯನ್ನು ಕೇಳಿ ಸಂತುಷ್ಟನಾದ.

ಭೀಮ ದುಃಶಾಸನರ ಯುದ್ಧ

**ಪುನಶ್ಚ ನಿಘ್ನಂತಮರಿಪ್ರವೀರಾನ್**
**ವಿದ್ರಾವಯಂತಂ ಚ ನಿಜಾಂ ವರೂಥಿನೀಮ್ ।**
**ಸಸಾರ ದುಃಶಾಸನ ಆತ್ತಧನ್ವಾ**
**ಭೀಮೋಽಪಿ ತಂ ಸಿಂಹ ಇವಾಭಿಪೇದಿವಾನ್ ॥ ೧೩೭ ॥**

ಪುನಃ ಚ ನಿಘ್ನಂತಂ ಅರಿಪ್ರವೀರಾನ್ ವಿದ್ರಾವಯಂತಂ ಚ ನಿಜಾಂ ವರೂಥಿನೀಮ್ । ಸಸಾರ ದುಃಶಾಸನಃ ಆತ್ತಧನ್ವಾ ಭೀಮಃ ಅಪಿ ತಂ ಸಿಂಹಃ ಇವ ಅಭಿಪೇದಿವಾನ್ ॥ ೧೩೭ ॥

**ಅರ್ಥ :-** **ಪುನಃ ಚ** = ಮತ್ತೆ, **ಅರಿಪ್ರವೀರಾನ್** = ಶತ್ರುವೀರರನ್ನು, **ನಿಘ್ನಂತಂ** = ಕೊಲ್ಲುತ್ತಿರುವ, **ನಿಜಾಂ** = ತಮ್ಮ, **ವರೂಥಿನೀಂ ಚ** = ಸೇನೆಯನ್ನು ಸಹ, **ವಿದ್ರಾವಯಂತಂ** = ಹೊಡೆದೋಡಿಸುತ್ತಿರುವ, **(ಭೀಮಂ)** = ಭೀಮನನ್ನು, **ಆತ್ತಧನ್ವಾ** = ಧನುಸ್ಸನ್ನು ಹಿಡಿದ, **ದುಃಶಾಸನಃ** = ದುಃಶಾಸನನು, **ಸಸಾರ** = ಎದುರಿಸಿ ಬಂದ. **ಭೀಮಃ ಅಪಿ** = ಭೀಮನೂ ಸಹ, **ತಂ** = ಅವನನ್ನು, **ಸಿಂಹಃ ಇವ** = ಸಿಂಹದಂತೆ, **ಅಭಿಪೇದಿವಾನ್** = ಆಕ್ರಮಿಸಿದ.

**ತಾತ್ಪರ್ಯ :-** ಮತ್ತೆ ಶತ್ರು ಮಹಾವೀರರನ್ನು ಕೊಲ್ಲುತ್ತಲೂ, ತಮ್ಮ ಸೇನೆಯನ್ನು ಹೊಡೆದೋಡಿಸುತ್ತಲೂ ಇದ್ದ ಭೀಮನನ್ನು ದುಶ್ಶಾಸನ ಧನುಸ್ಸನ್ನು ಕೈಗೆತ್ತಿಕೊಂಡು ಎದುರಿಸಿದ. ಭೀಮ ಸಿಂಹದಂತೆ ಅವನನ್ನು ಆಕ್ರಮಿಸಿದ.

ಭೀಮನಿಂದ ನೆಲಕಚ್ಚಿದ ದುಃಶಾಸನ

**ತಂ ರೂಕ್ಷವಾಚೋ ಮುಹುರರ್ಪಯಂತಂ**
**ವಿಧಾಯ ಭೀಮೋ ವಿರಥಂ ಕ್ಷಣೇನ ।**
**ಪ್ರಗೃಹ್ಯ ಭೂಮೌ ವಿನಿಪಾತ್ಯ ವಕ್ಷೋ**
**ವಿದಾರಯಾಮಾಸ ಗದಾಪ್ರಹಾರತಃ ॥ ೧೩೮ ॥**

ತಂ ರೂಕ್ಷವಾಚಃ ಮುಹುಃ ಅರ್ಪಯಂತಂ ವಿಧಾಯ ಭೀಮಃ ವಿರಥಂ ಕ್ಷಣೇನ ।
ಪ್ರಗೃಹ್ಯ ಭೂಮೌ ವಿನಿಪಾತ್ಯ ವಕ್ಷಃ ವಿದಾರಯಾಮಾಸ ಗದಾಪ್ರಹಾರತಃ ॥ ೧೩೮ ॥

**ಅರ್ಥ** :- **ರೂಕ್ಷವಾಚಃ** = ಕ್ರೂರನುಡಿಗಳನ್ನು, **ಮುಹುಃ** = ಮತ್ತೆ ಮತ್ತೆ, **ಅರ್ಪಯಂತಂ** = ನುಡಿಯುತ್ತಿದ್ದ, **ತಂ** = ಅವನನ್ನು, **ಭೀಮಃ** = ಭೀಮನು, **ಕ್ಷಣೇನ** = ಕ್ಷಣದಲ್ಲೇ, **ವಿರಥಂ** = ರಥವನ್ನು ಕಳೆದುಕೊಂಡವನನ್ನಾಗಿ, **ವಿಧಾಯ** = ಮಾಡಿ, **ಪ್ರಗೃಹ್ಯ** = ಹಿಡಿದು, **ಭೂಮೌ** = ಭೂಮಿಯಲ್ಲಿ, **ನಿಪಾತ್ಯ** = ಕೆಡವಿ, **ಗದಾಪ್ರಹಾರತಃ** = ಗದಾಪ್ರಹಾರದಿಂದ, **ವಕ್ಷಃ** = ಎದೆಯನ್ನು, **ವಿದಾರಯಾಮಾಸ** = ಸೀಳಿದ.

**ತಾತ್ಪರ್ಯ** :- ಕ್ರೂರನುಡಿಗಳನ್ನು ಮತ್ತೆ ಮತ್ತೆ ನುಡಿಯುತ್ತಿದ್ದ ಆ ದುಶ್ಶಾಸನನನ್ನು ಭೀಮ ಕ್ಷಣದಲ್ಲೇ ವಿರಥನನ್ನಾಗಿ ಮಾಡಿ ಹಿಡಿದು ಭೂಮಿಯ ಮೇಲೆ ಬೀಳಿಸಿ ಗದಾಪ್ರಹಾರದಿಂದ ಅವನ ಎದೆಯನ್ನು ಸೀಳಿದ.

ದುಃಶಾಸನನ ಎದೆಬಗೆದ ಭೀಮ

**ಆಕ್ರಮ್ಯ ಕಂಠಂ ಚ ಪದೋದರೇಽಸ್ಯ**
**ನಿವಿಶ್ಯ ಪಶ್ಯನ್ ಮುಖಮಾತ್ತರೋಷಃ ।**
**ವಿಕೋಶಮಾಕಾಶನಿಭಂ ವಿಧಾಯ**
**ಮಹಾಸಿಮಸ್ಯೋರಸಿ ಸಂಚಖಾನ ॥ ೧೩೯ ॥**

ಆಕ್ರಮ್ಯ ಕಂಠಂ ಚ ಪದಾ ಉದರೇ ಅಸ್ಯ ನಿವಿಶ್ಯ ಪಶ್ಯನ್ ಮುಖಂ ಆತ್ತರೋಷಃ ।
ವಿಕೋಶಂ ಆಕಾಶನಿಭಂ ವಿಧಾಯ ಮಹಾಸಿಂ ಅಸ್ಯ ಉರಸಿ ಸಂಚಖಾನ ॥ ೧೩೯ ॥

**ಅರ್ಥ** :- **ಪದಾ** = ಪಾದದಿಂದ, **ಕಂಠಂ ಚ** = ಕಂಠವನ್ನೂ, **ಆಕ್ರಮ್ಯ** = ಆಕ್ರಮಿಸಿ, **ಅಸ್ಯ** = ಅವನ, **ಉದರೇ** = ಹೊಟ್ಟೆಯ

ಮೇಲೆ, **ನಿವಿಶ್ಯ** = ಕುಳಿತು, **ಆತ್ತರೋಷಃ (ಸನ್)** = ರೋಷವುಳ್ಳವನಾಗಿ, **ಮುಖಂ** = ಮುಖವನ್ನು, **ಪಶ್ಯನ್** = ನೋಡುತ್ತಾ, **ಆಕಾಶನಿಭಂ** = ಆಕಾಶಸದೃಶವಾದ, **ಮಾಹಾಸಿಂ** = ಮಹಾಖಡ್ಗವನ್ನು, **ವಿಕೋಶಂ ವಿಧಾಯ** = ಒರೆಯಿಂದ ಹೊರಗೆಳೆದು, **ಅಸ್ಯ** = ಅವನ, **ಉರಸಿ** = ಎದೆಯಲ್ಲಿ, **ಸಂಚಖಾನ** = ಚುಚ್ಚಿದ.

**ತಾತ್ಪರ್ಯ** :- ಕಾಲಿನಿಂದ ದುಶ್ಶಾಸನನ ಕತ್ತನ್ನು ಒತ್ತಿ ಅವನ ಹೊಟ್ಟೆಯ ಮೇಲೆ ಕುಳಿತು ಬಹಳ ಕೋಪದಿಂದ ಕೂಡಿದವನಾಗಿ ಅವನ ಮುಖವನ್ನೇ ದಿಟ್ಟಿಸುತ್ತಾ ಆಕಾಶವರ್ಣದಿಂದ ಕೂಡಿದ್ದ ತನ್ನ ಮಹಾಖಡ್ಗವನ್ನು ಒರೆಯಿಂದ ತೆಗೆದು ಅವನ ಎದೆಯಲ್ಲಿ ಜೋರಾಗಿ ಚುಚ್ಚಿದ.

ರಕ್ತಪಾನದ ನಾಟಕ

**ಕೃತ್ವಾऽಸ್ಯ ವಕ್ಷಸ್ಯುರುಸತ್ತಟಾಕಂ**
**ಪಪೌ ನಿಕಾಮಂ ತೃಷಿತೋऽಮೃತೋಪಮಮ್ ।**
**ತಚ್ಛೋಣಿತಾಂಭೋ ಭ್ರಮದಕ್ಷಮೇನಂ**
**ಸಂಸ್ಮಾರಯಾಮಾಸ ಪುರಾ ಕೃತಾನಿ ॥ ೧೪೦ ॥**

ಕೃತ್ವಾ ಅಸ್ಯ ವಕ್ಷಸಿ ಉರುಸತ್ತಟಾಕಂ ಪಪೌ ನಿಕಾಮಂ ತೃಷಿತಃ ಅಮೃತೋಪಮಮ್ । ತಚ್ಛೋಣಿತಾಂಭಃ ಭ್ರಮದಕ್ಷಂ ಏನಂ ಸಂಸ್ಮಾರಯಾಮಾಸ ಪುರಾ ಕೃತಾನಿ ॥ ೧೪೦ ॥

ತೃಷಿತಃ ಉರುಸತ್ತಟಾಕಂ ಕೃತ್ವಾ ನಿಕಾಮಂ ಪಪೌ (ಇವ) (ಭೀಮಃ) ಅಸ್ಯ ವಕ್ಷಸಿ ಉರುಸತ್ತಟಾಕಂ ಕೃತ್ವಾ ತಚ್ಛೋಣಿತಾಂಭಃ ಅಮೃತೋಪಮಮ್ (ಕೃತ್ವಾ) ನಿಕಾಮಂ ಪಪೌ (ಇವ) ಭ್ರಮದಕ್ಷಂ ಏನಂ ಪುರಾ ಕೃತಾನಿ ಸಂಸ್ಮಾರಯಾಮಾಸ ॥ ೧೪೦ ॥

**ಅರ್ಥ** :- **ತೃಷಿತಃ** = ಬಾಯಾರಿದವನು, **ಉರುಸತ್ತಟಾಕಂ** = ದೊಡ್ಡದಾದ ಕೆರೆಯನ್ನು, **ಕೃತ್ವಾ** = ನಿರ್ಮಿಸಿ, **ಪಪೌ (ಇವ)** = ಕುಡಿದಂತೆ, **(ಭೀಮಃ)** = ಭೀಮನು, **ಅಸ್ಯ** = ದುಃಶಾಸನನ, **ವಕ್ಷಸಿ** = ಎದೆಯಲ್ಲಿ, **ಉರುಸತ್ತಾಟಕಂ** = (ರಕ್ತದ) ದೊಡ್ಡ ಮಡುವನ್ನು, **ಕೃತ್ವಾ** = ನಿರ್ಮಿಸಿ, **ತಚ್ಛೋಣಿತಾಂಭಃ** = ಅಲ್ಲಿನ ರಕ್ತವೆಂಬ ನೀರನ್ನು, **ಅಮೃತೋಪಮಂ** = ಅಮೃತದಂತೆ, **ಕೃತ್ವಾ** = ಮಾಡಿ, **ನಿಕಾಮಂ** = ಯಥೇಷ್ಟವಾಗಿ, **ಪಪೌ** = ಕುಡಿದನು. **ಭ್ರಮದಕ್ಷಂ** = ತಿರುಗಿದ

ಕಣ್ಣುಳ್ಳವನಾದ, **ಏನಂ** = ಈ ದುಃಶಾಸನನನ್ನು ಕುರಿತು, **ಪುರಾ** = ಹಿಂದೆ, **ಕೃತಾನಿ** = ಮಾಡಿದವುಗಳನ್ನು, **ಸಂಸ್ಮಾರಯಾಮಾಸ** = ನೆನಪಿಸತೊಡಗಿದ.

**ತಾತ್ಪರ್ಯ** :- ಅವನ ಎದೆಯಲ್ಲಿ ದೊಡ್ಡ ರಕ್ತದ ಮಡುವನ್ನು ನಿರ್ಮಿಸಿ ಬಾಯಾರಿದವನು ಅಮೃತ ಕುಡಿಯುವಂತೆ ಅವನ ರಕ್ತವನ್ನು ಯಥೇಚ್ಛವಾಗಿ ಪಾನ ಮಾಡಿದ. ದುಶ್ಶಾಸನನ ಕಣ್ಣುಗಳು ತಿರುಗುತ್ತಿದ್ದಂತೆ ಅವನು ಹಿಂದೆ ಮಾಡಿದ್ದ ದುಷ್ಕಾರ್ಯಗಳನ್ನು ಭೀಮ ನೆನಪಿಸತೊಡಗಿದ.

**ವಾಕ್ಸಾಯಕಾಂಶ್ಚಾಸ್ಯ ಪುರಾ ಸಮರ್ಪಿತಾನ್**
**ಸಂಸ್ಮಾರಯಾಮಾಸ ಪುನಃ ಪುನರ್ಭೃಶಮ್ ।**
**ದಂತಾಂತರಂ ನ ಪ್ರವಿವೇಶ ತಸ್ಯ**
**ರಕ್ತಂ ಹ್ಯಪೇಯಂ ಪುರುಷಸ್ಯ ಜಾನತಃ ॥ ೧೪೧ ॥**

ವಾಕ್ಸಾಯಕಾನ್ ಚ ಅಸ್ಯ ಪುರಾ ಸಮರ್ಪಿತಾನ್ ಸಂಸ್ಮಾರಯಾಮಾಸ ಪುನಃ ಪುನಃ ಭೃಶಮ್ । ದಂತಾಂತರಂ ನ ಪ್ರವಿವೇಶ ತಸ್ಯ ರಕ್ತಂ ಹಿ ಅಪೇಯಂ ಪುರುಷಸ್ಯ ಜಾನತಃ ॥ ೧೪೧ ॥

**ಅರ್ಥ** :– **ಪುರಾ** = ಹಿಂದೆ, **ಸಮರ್ಪಿತಾನ್** = ನುಡಿಯಲ್ಪಟ್ಟ, **ಅಸ್ಯ** = ಅವನ (ದುಃಶಾಸನನ), **ವಾಕ್ಸಾಯಕಾನ್ ಚ** = ಮಾತೆಂಬ ಬಾಣಗಳನ್ನೂ, **ಭೃಶಂ** = ಬಹಳವಾಗಿ, **ಪುನಃ ಪುನಃ** = ಮತ್ತೆ ಮತ್ತೆ, **ಸಂಸ್ಮಾರಯಾಮಾಸ** = ನೆನಪಿಸಿದ. **ಪುರುಷಸ್ಯ** = ಮನುಷ್ಯನ, **ರಕ್ತಂ** = ರಕ್ತವು, **ಅಪೇಯಂ** = ಪಾನ ಮಾಡಲು ಯೋಗ್ಯವಲ್ಲ, **(ಇತಿ) ಹಿ** = ಎಂದು (ಧರ್ಮಶಾಸ್ತ್ರದಲ್ಲಿ) ಪ್ರಸಿದ್ಧವಾದದನ್ನು, **ಜಾನತಃ** = ತಿಳಿದಿದ್ದ, **ತಸ್ಯ** = ಆ ಭೀಮನ, **ದಂತಾಂತರಂ** = ಹಲ್ಲಿನ ಒಳಗೆ, **ನ ಪ್ರವಿವೇಶ** = ಪ್ರವೇಶಿಸಲಿಲ್ಲ.

**ತಾತ್ಪರ್ಯ** :- ದುಶ್ಶಾಸನ ಹಿಂದೆ ನುಡಿದಿದ್ದ ಅವನ ಬಾಣದಂತಹ ಚುಚ್ಚು ಮಾತುಗಳನ್ನೆಲ್ಲ ಮತ್ತೆ ಮತ್ತೆ ಬಹಳವಾಗಿ ನೆನಪಿಸಿದ ; ಹಾಗೂ ನರಶೋಣಿತ ಪಾನಯೋಗ್ಯವಲ್ಲ ಎಂದು ಭೀಮ ತಿಳಿದವನಾದ್ದರಿಂದ ದುಶ್ಶಾಸನನ ರಕ್ತ ಅವನ ಹಲ್ಲಿನ ಒಳಗೆ ಪ್ರವೇಶಿಸಲಿಲ್ಲ.

ಭೀಮ ಕಂಡ ಮನ್ಯುಸೂಕ್ತ

**ತಥಾಽಪಿ ಶತ್ರುಪ್ರತಿಭೀಷಣಾಯ**
**ಪಪಾವಿವಾಸ್ವಾದ್ಯ ಪುನಃ ಪುನರ್ಭೃಶಮ್ ।**
**ಸ್ಮರನ್ ನೃಸಿಂಹಂ ಭಗವಂತಮೀಶ್ವರಂ**
**ಸ ಮನ್ಯುಸೂಕ್ತಂ ಚ ದದರ್ಶ ಭಕ್ತ್ಯಾ ॥ ೧೪೨ ॥**

**ತಥಾ ಅಪಿ ಶತ್ರುಪ್ರತಿಭೀಷಣಾಯ ಪಪೌ ಇವ ಆಸ್ವಾದ್ಯ ಪುನಃ ಪುನಃ ಭೃಶಮ್ । ಸ್ಮರನ್ ನೃಸಿಂಹಂ ಭಗವಂತಂ ಈಶ್ವರಂ ಸಃ ಮನ್ಯುಸೂಕ್ತಂ ಚ ದದರ್ಶ ಭಕ್ತ್ಯಾ ॥ ೧೪೨ ॥**

**ಅರ್ಥ** :- **ತಥಾ ಅಪಿ** = ಆದರೂ, **ಶತ್ರುಪ್ರತಿಭೀಷಣಾಯ** = ಶತ್ರುಗಳಿಗೆ ಪ್ರತಿಯಾಗಿ ಭಯ ಹುಟ್ಟಿಸಲೆಂದು, **ಪುನಃ ಪುನಃ** = ಮತ್ತೆ ಮತ್ತೆ, **ಭೃಶಂ** = ಬಹಳವಾಗಿ, **ಆಸ್ವಾದ್ಯ** = ಆಸ್ವಾದಿಸಿ, **ಪಪೌ ಇವ** = ಕುಡಿದಂತೆ, (ಆಸ) = ಆದನು (ಮಾಡಿದನು). **ಭಗವಂತಂ** = ಭಗವಂತನೂ, **ಈಶ್ವರಂ** = ಈಶ್ವರನೂ ಅದ, **ನೃಸಿಂಹಂ** = ನರಸಿಂಹನನ್ನು, **ಸ್ಮರನ್** = ಸ್ಮರಿಸುವವನಾಗಿ, **ಸಃ** = ಅವನು, **ಮನ್ಯುಸೂಕ್ತಂ ಚ** = ಮನ್ಯುಸೂಕ್ತವನ್ನು ಸಹ, **ಭಕ್ತ್ಯಾ** = ಭಕ್ತಿಯಿಂದ, **ದದರ್ಶ** = ಪ್ರತ್ಯಕ್ಷವಾಗಿ ಕಂಡನು.

**ತಾತ್ಪರ್ಯ** :- ಆದರೂ ಶತ್ರುಗಳಿಗೆ ಭೀತಿ ಹುಟ್ಟಿಸಲೆಂದು ಭೀಮಸೇನ ಅವನ ರಕ್ತವನ್ನು ಮತ್ತೆ ಮತ್ತೆ ಆಸ್ವಾದಿಸಿ ಕುಡಿದಂತೆ ತೋರಿಸಿದ. ಭಗವಂತನೂ, ಸರ್ವೇಶ್ವರನೂ ಆದ ನರಸಿಂಹನನ್ನು ಸ್ಮರಿಸುತ್ತಾ ಭೀಮಸೇನ ಭಕ್ತಿಯಿಂದ ಮನ್ಯುಸೂಕ್ತವನ್ನು ಸಾಕ್ಷಾತ್ಕಾರ ಮಾಡಿಕೊಂಡ.

**'ಯಸ್ತೇ ಮನ್ಯೋ' ಇತ್ಯತೋ ನಾರಸಿಂಹಂ**
**ಸೋಮಂ ತಸ್ಮೈ ಚಾರ್ಪಯಚ್ಛೋಣಿತಾಖ್ಯಮ್ ।**
**ಯುದ್ಧಾಖ್ಯಯಜ್ಞೇ ಸೋಮಬುದ್ಧ್ಯಾಽರಿವಕ್ಷ**
**ಇಹೇತಿ ಸಾಮ್ನಾ ಗದಯಾ ವಿಭಿಂದನ್ ॥ ೧೪೩ ॥**

**'ಯಸ್ತೇ ಮನ್ಯೋ' ಇತ್ಯತಃ ನಾರಸಿಂಹಂ ಸೋಮಂ ತಸ್ಮೈ ಚ ಅರ್ಪಯತ್ ಶೋಣಿತಾಖ್ಯಮ್ । ಯುದ್ಧಾಖ್ಯಯಜ್ಞೇ ಸೋಮಬುದ್ಧ್ಯಾ ಅರಿವಕ್ಷಃ ಇಹ ಇತಿ ಸಾಮ್ನಾ ಗದಯಾ ವಿಭಿಂದನ್ ॥ ೧೪೩ ॥**

**ಅರ್ಥ** :- **'ಯಸ್ತೇ ಮನ್ಯೋ' ಇತ್ಯತಃ** = 'ಯಸ್ತೇ ಮನ್ಯೋ' ಎಂಬ, **ನಾರಸಿಂಹಂ** = ನರಸಿಂಹದೇವತಾಕವಾದ, **(ಸೂಕ್ತಂ ದದರ್ಶ)** = ಸೂಕ್ತವನ್ನು ಕಂಡನು. **ಯುದ್ಧಾಖ್ಯಯಜ್ಞೇ** = ಯುದ್ಧವೆಂಬ ಯಜ್ಞದಲ್ಲಿ, **ಸೋಮಬುದ್ಧ್ಯಾ** = (ಶತ್ರುವಿನ ಎದೆಯನ್ನು) ಸೋಮವೆಂಬ ಬುದ್ಧಿಯಿಂದ, **ಇಹ ಇತಿ** = 'ಇಹ' ಎಂಬ, **ಸಾಮ್ನಾ** = ಸಾಮದಿಂದ, **ಅರಿವಕ್ಷಃ** = ಶತ್ರುವಿನ ಎದೆಯನ್ನು, **ಗದಯಾ** = ಗದೆಯಿಂದ, **ವಿಭಿಂದನ್** = ಜಜ್ಜಿ ಹಾಕಿದವನಾಗಿ, **ತಸ್ಮೈ** = ಆ ನರಸಿಂಹನಿಗೆ, **ಶೋಣಿತಾಖ್ಯಂ** = ರಕ್ತವೆಂಬ, **ಸೋಮಂ ಚ** = ಸೋಮವನ್ನೂ, **ಆರ್ಪಯತ್** = ಅರ್ಪಿಸಿದ.

**ತಾತ್ಪರ್ಯ** :- 'ಯಸ್ತೇ ಮನ್ಯೋ' ಎಂಬ ಮನ್ಯುನಾಮಕ ನರಸಿಂಹನೇ ದೇವತೆಯಾದ ಮನ್ಯುಸೂಕ್ತವನ್ನು ಕಾಣುತ್ತ ರಕ್ತವೆಂಬ ಸೋಮರಸವನ್ನು ಆ ಯುದ್ಧವೆಂಬ ಯಜ್ಞದಲ್ಲಿ ಭೀಮಸೇನ ನರಸಿಂಹನಿಗೆ ಸಮರ್ಪಿಸಿದ. ಆಗ ಶತ್ರುವಿನ ಎದೆಯನ್ನು ಸೋಮವೆಂದು ಬಗೆದು 'ಇಹ' ಎಂಬ ಸಾಮ ಮಂತ್ರದಿಂದ ಗದೆಯಿಂದ ಜಜ್ಜಿಹಾಕಿದ.

### ಭೀಮನಿಂದ ದುರ್ಯೋಧನಾದಿಗಳ ಭರ್ತ್ಸನೆ

**ಉವಾಚ ವಾಚಂ ಪುರುಷಪ್ರವೀರಃ**
**ಸತ್ಯಾಂ ಪ್ರತಿಜ್ಞಾಂ ಲೋಕಮಧ್ಯೇ ವಿಧಾಯ ।**
**ಯಾಃ ಸಪತಯಸ್ತಾ ಅಪತಯೋ ಹಿ ಜಾತಾ**
**ಯಾ ಸಾಽಪತಿಃ ಸಾ ಸಪತಿಶ್ಚ ಜಾತಾ ॥ ೧೪೪ ॥**

ಉವಾಚ ವಾಚಂ ಪುರುಷಪ್ರವೀರಃ ಸತ್ಯಾಂ ಪ್ರತಿಜ್ಞಾಂ ಲೋಕಮಧ್ಯೇ ವಿಧಾಯ । ಯಾಃ ಸಪತಯಃ ತಾಃ ಅಪತಯಃ ಹಿ ಜಾತಾಃ ಯಾ ಸಾ ಅಪತಿಃ ಸಾ ಸಪತಿಃ ಚ ಜಾತಾ ॥ ೧೪೪ ॥

**ಅರ್ಥ** :- **ಪುರುಷಪ್ರವೀರಃ** = ಪುರುಷಶ್ರೇಷ್ಠನಾದ ಭೀಮನು, **ಪ್ರತಿಜ್ಞಾಂ** = (ತನ್ನ) ಪ್ರತಿಜ್ಞೆಯನ್ನು, **ಲೋಕಮಧ್ಯೇ** = ಲೋಕದ ಮಧ್ಯೆ, **ಸತ್ಯಾಂ ವಿಧಾಯ** = ಸತ್ಯ ಮಾಡಿ, **ವಾಚಂ** = ಮಾತನ್ನು, **ಉವಾಚ** = ನುಡಿದ. **ಯಾಃ** = ಯಾವ ಸ್ತ್ರೀಯರು, **(ಪೂರ್ವಂ)** = ಹಿಂದೆ, **ಸಪತಯಃ** = ಪತಿಯನ್ನು ಹೊಂದಿದ್ದರೋ, **ತಾಃ** = ಅವರು, **(ಇದಾನೀಂ)** = ಈಗ, **ಅಪತಯಃ ಹಿ** = ಪತಿಹೀನರಾಗಿಯೇ, **ಜಾತಾಃ** = ಆದರು.

**ಯಾ ಸಾ** = ಯಾವ ಅವಳು (ದ್ರೌಪದಿಯು), **ಅಪತಿಃ (ಆಸ)** = ಪತಿರಹಿತಳಾಗಿದ್ದಳೋ, **ಸಾ** = ಅವಳು, **ಸಪತಿಃ ಚ** = ಪತಿಸಹಿತಳೆನ್ನಿಸಿ ಕೊಂಡವಳೂ, **ಜಾತಾ** = ಆದಳು.

**ತಾತ್ಪರ್ಯ** :- ಪುರುಷಶ್ರೇಷ್ಠನಾದ ಭೀಮಸೇನ ತನ್ನ ಪ್ರತಿಜ್ಞೆಯನ್ನು ಲೋಕದ ಮಧ್ಯೆ ಸತ್ಯವನ್ನಾಗಿ ಮಾಡಿ ಈ ಮಾತನ್ನು ನುಡಿದ : ಯಾವ ಸ್ತ್ರೀಯರು ಹಿಂದೆ ಪತಿಗಳನ್ನು ಹೊಂದಿದವರಾಗಿದ್ದರೋ, ಅವರೆಲ್ಲ ಈಗ ಪತಿಹೀನರಾದರು. ಆದರೆ ಪತಿರಹಿತಳೆನ್ನಿಸಿದ್ದವಳು ಈಗ ಪತಿಸಹಿತಳೆನ್ನಿಸಿ ಕೊಂಡಿರುವಳು.

**ಪಶ್ಯಂತು ಚಿತ್ರಾಂ ಪರಮಸ್ಯ ಶಕ್ತಿಂ**
**ಯೇ ವೈ ತಿಲಾಃ ಷಂಡತಿಲಾ ಬಭೂವುಃ ।**
**ಏನಂ ಗೃಹೀತಂ ಚ ಮಯಾ ಯದೀಹ**
**ಕಶ್ಚಿತ್ ಪುಮಾನ್ ಮೋಚಯತು ಸ್ವವೀರ್ಯಾತ್ ॥ ೧೪೫ ॥**

**ಪಶ್ಯಂತು ಚಿತ್ರಾಂ ಪರಮಸ್ಯ ಶಕ್ತಿಂ ಯೇ ವೈ ತಿಲಾಃ ಷಂಡತಿಲಾಃ ಬಭೂವುಃ । ಏನಂ ಗೃಹೀತಂ ಚ ಮಯಾ ಯದಿ ಇಹ ಕಶ್ಚಿತ್ ಪುಮಾನ್ ಮೋಚಯತು ಸ್ವವೀರ್ಯಾತ್ ॥ ೧೪೫ ॥**

**ಅರ್ಥ** :- **ಪರಮಸ್ಯ** = ಸರ್ವೋತ್ತಮನಾದ ಶ್ರೀಹರಿಯ, **ಚಿತ್ರಾಂ** = ವಿಚಿತ್ರವಾದ, **ಶಕ್ತಿಂ** = ಶಕ್ತಿಯನ್ನು, **ಪಶ್ಯಂತು** = ನೋಡಿರಿ. **ಯೇ ವೈ** = ಯಾರು, **(ಪೂರ್ವಂ)** = ಹಿಂದೆ, **ತಿಲಾಃ** = ಗಟ್ಟಿ ಎಳ್ಳು ಎನ್ನಿಸಿಕೊಂಡಿದ್ದರೋ, **(ತೇ)** = ಅವರು, **ಷಂಡತಿಲಾಃ** = ಜೊಳ್ಳೆಳ್ಳುಗಳು, **ಬಭೂವುಃ** = ಆದರು. **ಯದಿ** = ಒಂದು ವೇಳೆ, **ಮಯಾ** = ನನ್ನಿಂದ, **ಇಹ** = ಇಲ್ಲಿ, **ಗೃಹೀತಂ ಚ** = ಹಿಡಿಯಲ್ಪಟ್ಟಿರುವ, **ಏನಂ** = ಇವನನ್ನು, **ಕಶ್ಚಿತ್ ಪುಮಾನ್** = ಯಾವನೇ ಪುರುಷನು, **ಸ್ವವೀರ್ಯಾತ್** = ತನ್ನ ಸಾಮರ್ಥ್ಯದಿಂದ, **ಮೋಚಯತು** = ಬಿಡಿಸಲಿ.

**ತಾತ್ಪರ್ಯ** :- ಸರ್ವೋತ್ತಮನಾದ ಶ್ರೀಹರಿಯ ಅದ್ಭುತ ಶಕ್ತಿಯನ್ನು ನೋಡಿರಿ, ಯಾರು ಹಿಂದೆ ಗಟ್ಟಿ ಎಳ್ಳು ಎನ್ನಿಸಿಕೊಂಡಿದ್ದರೋ ಅವರೆಲ್ಲ ಈಗ ಜೊಳ್ಳೆಳ್ಳುಗಳಾಗಿರುವರು. ನನ್ನಿಂದ ಹಿಡಿಯಲ್ಪಟ್ಟಿರುವ ಇವನನ್ನು ಯಾವನಾದರೂ ಗಂಡಸು ತನ್ನ ಸಾಮರ್ಥ್ಯದಿಂದ ಬಿಡಿಸಿಕೊಳ್ಳಬಹುದು.

ಭೀಮನಿಂದ ಹುಲಿಕುಣಿತ

**ಇತಿ ಬ್ರುವಾಣಃ ಪುನರೇವ ರಕ್ತಂ**
**ಪಪೌ ಸುಧಾಂ ದೇವವರೋ ಯಥಾ ದಿವಿ ।**
**ಪುನಶ್ಚ ಸಪ್ರಾಣಮಮುಂ ವಿಸೃಜ್ಯ**
**ನದನ್ ನನರ್ತಾರಿಬಲೇ ನಿರಾಯುಧಃ ॥ ೧೪೬ ॥**

**ಇತಿ ಬ್ರುವಾಣಃ ಪುನಃ ಏವ ರಕ್ತಂ ಪಪೌ ಸುಧಾಂ ದೇವವರಃ ಯಥಾ ದಿವಿ । ಪುನಃ ಚ ಸಪ್ರಾಣಂ ಅಮುಂ ವಿಸೃಜ್ಯ ನದನ್ ನನರ್ತ ಅರಿಬಲೇ ನಿರಾಯುಧಃ ॥ ೧೪೬ ॥**

**ಅರ್ಥ** :- **ಇತಿ** = ಹೀಗೆಂದು, **ಬ್ರುವಾಣಃ** = ಹೇಳುವವನಾಗಿ, **ಪುನಃ ಏವ** = ಮತ್ತೆ ಮತ್ತೆ, **ರಕ್ತಂ** = ರಕ್ತವನ್ನು, **ಪಪೌ** = ಕುಡಿದನು, **ದಿವಿ** = ದೇವಲೋಕದಲ್ಲಿ, **ದೇವವರಃ** = ದೇವಶ್ರೇಷ್ಠನಾದ ಇಂದ್ರನು, **ಸುಧಾಂ** = ಸುಧೆಯನ್ನು, **ಯಥಾ** = ಹೇಗೋ, **(ತಥಾ)** = ಹಾಗೆ. **ಪುನಃ ಚ** = ಮತ್ತೆ ಕೂಡ, **ಸಪ್ರಾಣಃ** = (ಇನ್ನೂ) ಪ್ರಾಣವುಳ್ಳ, **ಅಮುಂ** = ಅವನನ್ನು, **ವಿಸೃಜ್ಯ** = ತೊರೆದು, **ಅರಿಬಲೇ** ಶತ್ರುಸೇನೆಯಲ್ಲಿ, **ನಿರಾಯುಧಃ** = ನಿರಾಯುಧನಾದ ಭೀಮನು, **ನದನ್** = ಸಿಂಹನಾದ ಮಾಡುತ್ತಾ, **ನನರ್ತ** = ನರ್ತಿಸಿದ.

**ತಾತ್ಪರ್ಯ** :- ಹೀಗೆ ನುಡಿಯುತ್ತಾ ಭೀಮಸೇನ ದೇವಶ್ರೇಷ್ಠರು ಅಮೃತ ಸವಿಯುವಂತೆ ಆ ರಕ್ತವನ್ನು ಪಾನ ಮಾಡತೊಡಗಿದ. ಬಳಿಕ ಅವನಿನ್ನು ಉಸಿರಾಡುತ್ತಿದ್ದಂತೆಯೇ ಭೀಮ ಅವನನ್ನು ಬಿಟ್ಟು ಶತ್ರುಸೇನೆಯಲ್ಲಿ ನಿರಾಯುಧನಾಗಿ ಸಿಂಹನಾದ ಮಾಡುತ್ತಾ ಕುಣಿಯತೊಡಗಿದ.

**ಪ್ರತ್ಯನೃತ್ಯನ್ ಪುರಾ ಯೇಽಸ್ಮಾನ್ ಪುನರ್ಗೌರಿತಿ ಗೌರಿತಿ ।**
**ತಾನ್ ವಯಂ ಪ್ರತಿನೃತ್ಯಾಮಃ ಪುನರ್ಗೌರಿತಿ ಗೌರಿತಿ ॥ ೧೪೭ ॥**

**ಪ್ರತಿ ಅನೃತ್ಯನ್ ಪುರಾ ಯೇ ಅಸ್ಮಾನ್ ಪುನಃ ಗೌಃ ಇತಿ ಗೌಃ ಇತಿ । ತಾನ್ ವಯಂ ಪ್ರತಿನೃತ್ಯಾಮಃ ಪುನಃ ಗೌಃ ಇತಿ ಗೌಃ ಇತಿ ॥ ೧೪೭ ॥**

**ಅರ್ಥ** :- **ಯೇ** = ಯಾರು, **ಪುರಾ** = ಹಿಂದೆ, **ಅಸ್ಮಾನ್ ಪ್ರತಿ** = ನಮ್ಮನ್ನು ಕುರಿತು, **ಪುನಃ** = ಮತ್ತೆ ಮತ್ತೆ, **ಗೌಃ ಇತಿ ಗೌಃ ಇತಿ** = ಗೋವು, ಗೋವು ಎಂದು, **ಅನೃತ್ಯನ್** = ನರ್ತಿಸಿದರೋ, **ತಾನ್**

= ಅವರನ್ನು, **ವಯಂ** = ನಾವು, **ಪುನಃ** = ಮತ್ತೆ, **ಗೌಃ ಇತಿ ಗೌಃ ಇತಿ** = ಗೋವು ಗೋವು ಎಂದು, **ಪ್ರತಿನೃತ್ಯಾಮಃ** = ಪ್ರತಿಯಾಗಿ ನರ್ತಿಸುವೆವು.

**ತಾತ್ಪರ್ಯ** :- ''ನಮ್ಮನ್ನು ಪಶು, ಪಶು ಎಂದು ಮತ್ತೆ ಮತ್ತೆ ಅಣಕಿಸಿ ಕುಣಿದವರನ್ನು ನಾವೀಗ ಪ್ರತಿಯಾಗಿ ಪಶು, ಪಶು ಎಂದು ಅಣಕಿಸಿ ಕುಣಿದಾಡುವೆವು''.

ಭೀಮನ ರುದ್ರನರ್ತನಕ್ಕೆ ಕರ್ಣಾದಿಗಳ ಭಯ

**ಇತಿ ಬ್ರುವನ್ ನೃತ್ಯಮಾನೋಽರಿಮಧ್ಯ**
**ಆಸ್ಫೋಟಯಂಚ್ಛತ್ರುಗಣಾನಜೋಹವೀತ್ ।**
**ಶಶಾಕ ಚ ದ್ರಷ್ಟುಮಮುಂ ನ ಕಶ್ಚಿ-**
**ದ್ವೈಕರ್ತನದ್ರೌಣಿಸುಯೋಧನಾದಿಷು ॥ ೧೪೮ ॥**

**ಇತಿ ಬ್ರುವನ್ ನೃತ್ಯಮಾನಃ ಅರಿಮಧ್ಯೇ ಆಸ್ಫೋಟಯನ್ ಶತ್ರುಗಣಾನ್ ಅಜೋಹವೀತ್ । ಶಶಾಕ ಚ ದ್ರಷ್ಟುಂ ಅಮುಂ ನ ಕಶ್ಚಿತ್ ವೈಕರ್ತನದ್ರೌಣಿ ಸುಯೋಧನಾದಿಷು ॥ ೧೪೮ ॥**

**ಅರ್ಥ** :- **ಇತಿ** = ಹೀಗೆ, **ಬ್ರುವನ್** = ಹೇಳುವವನಾಗಿ, **ಅರಿಮಧ್ಯೇ** = ಶತ್ರುಗಳ ಮಧ್ಯದಲ್ಲಿ, **ನೃತ್ಯಮಾನಃ** = ನರ್ತಿಸುವವನಾಗಿ, **ಆಸ್ಫೋಟಯನ್** = ಗರ್ಜಿಸುತ್ತಾ, **ಶತ್ರುಗಣಾನ್** = ಶತ್ರುಸಮೂಹವನ್ನು, **ಅಜೋಹವೀತ್** = ಯುದ್ಧಕ್ಕೆ ಆಹ್ವಾನಿಸಿದ. **ಅಮುಂ** = ಅವನನ್ನು, **ದ್ರಷ್ಟುಂ** = ಕಾಣಲು, **ವೈಕರ್ತನದ್ರೌಣಿಸುಯೋಧನಾದಿಷು** = ಕರ್ಣ-ಅಶ್ವತ್ಥಾಮ-ದುರ್ಯೋಧನ ಮೊದಲಾದವರಲ್ಲಿ, **ಕಶ್ಚಿತ್ ಚ** = ಯಾವ ಒಬ್ಬನೂ ಸಹ, **ನ ಶಶಾಕ** = ಸಮರ್ಥನಾಗಲಿಲ್ಲ.

**ತಾತ್ಪರ್ಯ** :- ಹೀಗೆ ನುಡಿಯುತ್ತಾ, ಶತ್ರುಗಳ ಮಧ್ಯೆ ಕುಣಿದಾಡುತ್ತಾ ಭೀಮಸೇನ ಗರ್ಜಿಸುತ್ತಾ ಶತ್ರು ಸಮೂಹವನ್ನು ಯುದ್ಧಕ್ಕೆ ಆಹ್ವಾನಿಸಿದ. ಆಗ ಆ ಭೀಮನನ್ನು ನೋಡಲೂ ಸಹ ಕರ್ಣ, ಅಶ್ವತ್ಥಾಮ, ದುರ್ಯೋಧನ ಮೊದಲಾದವರಲ್ಲಿ ಯಾವ ಒಬ್ಬನೂ ಸಮರ್ಥನಾಗಲಿಲ್ಲ.

ಕರ್ಣನ ದುರವಸ್ಥೆ

**ಭಯಾಚ್ಚ ಕರ್ಣಸ್ಯ ಪಪಾತ ಕಾರ್ಮುಕಂ**
**ನಿಮೀಲಯಾಮಾಸ ತದಾऽಕ್ಷಿಣೀ ಚ ।**
**ಸಂಬೋಧಿತೋ ಮದ್ರರಾಜೇನ ಯುದ್ಧೇ**
**ಸ್ಥಿತಃ ಕಥಂಚಿತ್ ಸ ತು ಪಾರ್ಥಭಾಗಃ ॥ ೧೪೯ ॥**

**ಭಯಾತ್ ಚ ಕರ್ಣಸ್ಯ ಪಪಾತ ಕಾರ್ಮುಕಂ ನಿಮೀಲಯಾಮಾಸ ತದಾ ಅಕ್ಷಿಣೀ ಚ । ಸಂಬೋಧಿತಃ ಮದ್ರರಾಜೇನ ಯುದ್ಧೇ ಸ್ಥಿತಃ ಕಥಂಚಿತ್ ಸಃ ತು ಪಾರ್ಥಭಾಗಃ ॥ ೧೪೯ ॥**

**ಅರ್ಥ** :- **ಭಯಾತ್** = ಭಯದಿಂದಾಗಿ, **ಕರ್ಣಸ್ಯ** = ಕರ್ಣನ, **ಕಾರ್ಮುಕಂ ಚ** = ಬಿಲ್ಲೂ ಸಹ, **ಪಪಾತ** = ಕೆಳಗೆ ಬಿತ್ತು. **ಸಃ ತು** = ಅವನಾದರೋ, **ತದಾ** = ಆಗ, **ಅಕ್ಷಿಣೀ ಚ** = ಎರಡು ಕಣ್ಣುಗಳನ್ನೂ, **ನಿಮೀಲಯಾಮಾಸ** = ಮುಚ್ಚಿಕೊಂಡ. **ಮದ್ರರಾಜೇನ** = ಮದ್ರರಾಜನಾದ ಶಲ್ಯನಿಂದ, **ಸಂಬೋಧಿತಃ** = ಎಚ್ಚರಗೊಂಡವಾನದ, **ಪಾರ್ಥಭಾಗಃ** = ಅರ್ಜುನನಿಗೆ ಮೀಸಲಾದ ಅವನು, **ಯುದ್ಧೇ** = ಯುದ್ಧದಲ್ಲಿ, **ಕಥಂಚಿತ್** = ಹೇಗೋ (ಸಾಯದೆ), **ಸ್ಥಿತಃ (ಅಭೂತ್)** = ಸ್ಥಿರನಾದ.

**ತಾತ್ಪರ್ಯ** :- ಭಯದಿಂದಾಗಿ ಕರ್ಣನ ಬಿಲ್ಲು ಕೈಜಾರಿಬಿತ್ತು, ಅವನಾಗ ಎರಡು ಕಣ್ಣುಗಳನ್ನೂ ಮುಚ್ಚಿಕೊಂಡ; ಮದ್ರರಾಜನಾದ ಶಲ್ಯ ಬಹಳವಾಗಿ ಎಚ್ಚರಿಸಿದಾಗ ಅವನು ಅರ್ಜುನನ ಪಾಲು ಎಂದು ಮೀಸಲಾಗಿದ್ದ ಕಾರಣದಿಂದಾಗಿ ಹೇಗೋ ಸಾಯದೇ ಬದುಕಿಕೊಂಡ.

**ದ್ರೌಣಿರ್ವಿಹಾಯೈನಮಪಾಜಗಾಮ**
**ದೂರಂ ತದಾ ಭೀಮಸೇನೋ ಜಗಾದ ।**
**ಪೀತಃ ಸೋಮೋ ಯುದ್ಧಯಜ್ಞೇ ಮಯಾऽದ್ಯ**
**ವಧ್ಯಃ ಪಶುರ್ಮೇ ಹರಯೇ ಸುಯೋಧನಃ ॥ ೧೫೦ ॥**

**ದ್ರೌಣಿಃ ವಿಹಾಯ ಏನಂ ಅಪಾಜಗಾಮ ದೂರಂ ತದಾ ಭೀಮಸೇನಃ ಜಗಾದ । ಪೀತಃ ಸೋಮಃ ಯುದ್ಧಯಜ್ಞೇ ಮಯಾ ಅದ್ಯ ವಧ್ಯಃ ಪಶುಃ ಮೇ ಹರಯೇ ಸುಯೋಧನಃ ॥ ೧೫೦ ॥**

**ಅರ್ಥ** :- **ದ್ರೌಣಿಃ** = ಅಶ್ವತ್ಥಾಮನು, **ಏನಂ** = ಈ ಭೀಮನನ್ನು, **ವಿಹಾಯ** = ಬಿಟ್ಟು, **ದೂರಂ** = ದೂರಕ್ಕೆ, **ಅಪಾಜಗಾಮ** = ಹಿಂದೆ ಸರಿದ. **ತದಾ** = ಆಗ, **ಭೀಮಸೇನಃ** = ಭೀಮಸೇನನು, **ಜಗಾದ** = ಹೇಳಿದ, **ಮಯಾ** = ನನ್ನಿಂದ, **ಅದ್ಯ** = ಇಂದು, **ಯುದ್ಧಯಜ್ಞೇ** = ಯುದ್ಧವೆಂಬ ಯಜ್ಞದಲ್ಲಿ, **ಸೋಮಃ** = ಸೋಮರಸವು, **ಪೀತಃ** = ಪಾನಮಾಡಲ್ಪಟ್ಟಿತು. **ಹರಯೇ** = ಶ್ರೀಹರಿಪ್ರೀತಿಗಾಗಿ, **ಪಶುಃ** = ಪಶುವಾದ, **ಸುಯೋಧನಃ** = ದುರ್ಯೋಧನನು, **ಮೇ** = ನನ್ನಿಂದ, **ವಧ್ಯಃ** = ವಧೆಗೆ ಅರ್ಹನಾಗಿರುವನು.

**ತಾತ್ಪರ್ಯ** :- ಅಶ್ವತ್ಥಾಮ ಭೀಮನನ್ನು ಬಿಟ್ಟು ದೂರಕ್ಕೆ ತೆರಳಿದ. ಭೀಮಸೇನ ತಿಳಿಸಿದ 'ರಣಯಜ್ಞದಲ್ಲಿ ನಾನಿಂದು ಸೋಮಪಾನ ಮಾಡಿದೆ. ಇನ್ನು ಶ್ರೀಹರಿಪ್ರೀತಿಗಾಗಿ ದುರ್ಯೋಧನನನ್ನು ಕೊಲ್ಲಬೇಕಾಗಿದೆ'.

### ದುಃಶಾಸನನ ಮರಣ

**ಇತಿ ಬ್ರುವನ್ ಮೃತಮುತ್ಸೃಜ್ಯ ಶತ್ರುಂ**
**ದುರ್ಯೋಧನಂ ಚಾಶು ರುಷಾಽಭಿದುದ್ರುವೇ ।**
**ಆಯಾಂತಮೀಕ್ಷ್ಯೈವ ತಮುಗ್ರಪೌರುಷಂ**
**ದುದ್ರಾವ ಭೀತಃ ಸ ಸುಯೋಧನೋ ಭೃಶಮ್॥ ೧೫೧ ॥**

**ಇತಿ ಬ್ರುವನ್ ಮೃತಂ ಉತ್ಸೃಜ್ಯ ಶತ್ರುಂ ದುರ್ಯೋಧನಂ ಚ ಆಶು ರುಷಾ ಅಭಿದುದ್ರುವೇ । ಆಯಾಂತಂ ಈಕ್ಷ್ಯ ಏವ ತಂ ಉಗ್ರಪೌರುಷಂ ದುದ್ರಾವ ಭೀತಃ ಸಃ ಸುಯೋಧನಃ ಭೃಶಮ್॥ ೧೫೧ ॥**

**ಅರ್ಥ** :- **ಇತಿ** = ಹೀಗೆ, **ಬ್ರುವನ್** = ಹೇಳುವವನಾಗಿ, **ಮೃತಂ** = ಮೃತನಾದ, **ಶತ್ರುಂ** = ಶತ್ರುವನ್ನು, **ಉತ್ಸೃಜ್ಯ** = ಬಿಟ್ಟು, **ರುಷಾ** = ಕೋಪದಿಂದ, **ದುರ್ಯೋಧನಂ ಚ** = ದುರ್ಯೋಧನನನ್ನು ಕುರಿತು ಸಹ, **ಆಶು** = ಬೇಗನೆ, **ಅಭಿದುದ್ರುವೇ** = ಓಡಿ ನುಗ್ಗಿದ. **ಆಯಾಂತಂ** = ಎದುರು ಬರುತ್ತಿರುವ, **ತಂ ಉಗ್ರಪೌರುಷಂ** = ಆ ಉಗ್ರಪರಾಕ್ರಮಿಯನ್ನು, **ಈಕ್ಷ್ಯ ಏವ** = ನೋಡಿಯೇ, **ಭೃಶಂ** = ಬಹಳವಾಗಿ, **ಭೀತಃ** = ಭೀತನಾದ, **ಸಃ ದುರ್ಯೋಧನಃ** = ಆ ದುರ್ಯೋಧನನು, **ದುದ್ರಾವ** = ಓಡಿಹೋದ.

**ತಾತ್ಪರ್ಯ :-** ಹೀಗೆ ಹೇಳುತ್ತಲೇ ಸತ್ತುಹೋಗಿದ್ದ ದುಶ್ಶಾಸನನನ್ನು ಬಿಟ್ಟು ಶತ್ರುವಾದ ದುರ್ಯೋಧನನ ಮೇಲೆ ಕೂಡಲೇ ಭೀಮಸೇನ ಕೋಪದಿಂದ ನುಗ್ಗಿದ. ಉಗ್ರಪರಾಕ್ರಮಿಯಾದ ಭೀಮ ಹಾಗೆ ಬರುತ್ತಿದ್ದುದನ್ನು ಕಾಣುತ್ತಲೇ ಬಹಳವಾಗಿ ಭಯಗೊಂಡ ದುರ್ಯೋಧನ ದೂರಕ್ಕೆ ಓಡಿದ.

### ಶೂನ್ಯವಾದ ರಣರಂಗ

**ಬಲದ್ವಯಂ ಚಾಪಯಯೌ ವಿಹಾಯ**
**ಭಯಾದ್ಭೀಮಂ ಕೃಷ್ಣಪಾರ್ಥೌ ವಿನೈವ ।**
**ಆಯೋಧನಂ ಶೂನ್ಯಮಭೂನ್ಮುಹೂರ್ತಂ**
**ನನರ್ತ ಭೀಮೋ ವ್ಯಾಘ್ರಪದೇನ ಹರ್ಷಾತ್ ॥ ೧೫೨ ॥**

ಬಲದ್ವಯಂ ಚ ಅಪಯಯೌ ವಿಹಾಯ ಭಯಾತ್ ಭೀಮಂ ಕೃಷ್ಣಪಾರ್ಥೌ ವಿನಾ ಏವ । ಆಯೋಧನಂ ಶೂನ್ಯಂ ಅಭೂತ್ ಮುಹೂರ್ತಂ ನನರ್ತ ಭೀಮಃ ವ್ಯಾಘ್ರಪದೇನ ಹರ್ಷಾತ್ ॥ ೧೫೨ ॥

**ಅರ್ಥ :-** **ಭೀಮಂ** = ಭೀಮನನ್ನು, **ಕೃಷ್ಣಪಾರ್ಥೌ** = ಕೃಷ್ಣ–ಪಾರ್ಥರನ್ನು, **ವಿನಾ** = ಬಿಟ್ಟು, **ಬಲದ್ವಯಂ ಚ** = ಎರಡು ಸೇನೆಯೂ, **(ಆಯೋಧನಂ)** = ಯುದ್ಧಭೂಮಿಯನ್ನು, **ವಿಹಾಯ** = ತೊರೆದು, **ಭಯಾತ್** ಏವ = ಭಯದಿಂದಾಗಿಯೇ, **ಅಪಯಯೌ** = ಓಡಿಹೋಯಿತು. **ಮುಹೂರ್ತಂ** = ಮುಹೂರ್ತಕಾಲ, **ಆಯೋಧನಂ** = ರಣಭೂಮಿಯು, **ಶೂನ್ಯಂ ಅಭೂತ್** = ಶೂನ್ಯವಾಯಿತು. **ಭೀಮಃ** = ಭೀಮನು, **ಹರ್ಷಾತ್** = ಆನಂದದಿಂದ, **ವ್ಯಾಘ್ರಪದೇನ** = ಹುಲಿಹೆಜ್ಜೆಯಿಂದ, **ನನರ್ತ** = ಕುಣಿದ.

**ತಾತ್ಪರ್ಯ :-** ಶ್ರೀಕೃಷ್ಣಾರ್ಜುನರ ಹೊರತು ಎರಡೂ ಸೇನೆಗಳು ಭಯದಿಂದ ಭೀಮನನ್ನು ಬಿಟ್ಟು ಪಲಾಯನ ಮಾಡಿದ್ದವು. ರಣರಂಗ ಒಂದು ಮುಹೂರ್ತ ಕಾಲ ಶೂನ್ಯವಾಗಿತ್ತು. ಆಗ ಭೀಮ ಆನಂದದಿಂದ ಹುಲಿಹೆಜ್ಜೆ ಹಾಕಿ ಕುಣಿದ.

**ಸಂಕಲ್ಪ್ಯ ಶತ್ರೂನ್ ಗೋವದೇವಾಜಿಮಧ್ಯೇ**
**ಶಾರ್ದೂಲವತ್ ತಚ್ಚರಿತಂ ನಿಶಾಮ್ಯ ।**

**ಜಹಾಸ ಕೃಷ್ಣಶ್ಚ ಧನಂಜಯಶ್ಚ**
**ಶಶಂಸತುಶ್ಚೈನಮಭಿಪ್ರಹೃಷ್ಟೌ ॥ ೧೫೩ ॥**

**ಸಂಕಲ್ಪ್ಯ ಶತ್ರೂನ್ ಗೋವತ್ ಏವ ಆಜಿಮಧ್ಯೇ ಶಾರ್ದೂಲವತ್ ತಚ್ಚರಿತಂ ನಿಶಾಮ್ಯ । ಜಹಾಸ ಕೃಷ್ಣಃ ಚ ಧನಂಜಯಃ ಚ ಶಶಂಸತುಃ ಚ ಏನಂ ಅಭಿಪ್ರಹೃಷ್ಟೌ ॥ ೧೫೩ ॥**

**ಅರ್ಥ :- ಆಜಿಮಧ್ಯೇ ಏವ** = ಯುದ್ಧದ ಮಧ್ಯದಲ್ಲೇ, **ಶತ್ರೂನ್** = ಶತ್ರುಗಳನ್ನು, **ಗೋವತ್** = ಗೋವಿನಂತೆ, **ಸಂಕಲ್ಪ್ಯ** = ಸಂಕಲ್ಪಿಸಿ, **ಶಾರ್ದೂಲವತ್** = ಹುಲಿಯಂತೆ, **ತಚ್ಚರಿತಂ** = ಅವನು ಮಾಡಿದ ಕರ್ಮವನ್ನು, **ನಿಶಾಮ್ಯ** = ನೋಡಿ, **ಕೃಷ್ಣಃ ಚ** = ಕೃಷ್ಣನು, **ಜಹಾಸ** = ನಕ್ಕ, **ಧನಂಜಯಃ ಚ** = ಧನಂಜಯನೂ ಸಹ (ನಕ್ಕ). **ಅಭಿಪ್ರಹೃಷ್ಟೌ (ತೌ)** = ಬಹು ಸಂತೋಷಗೊಂಡ ಅವರಿಬ್ಬರೂ, **ಏನಂ** = ಅವನನ್ನು, **ಶಶಂಸತುಃ ಚ** = ಕೊಂಡಾಡಿದರು ಸಹ.

**ತಾತ್ಪರ್ಯ :-** ಯುದ್ಧದ ಮಧ್ಯದಲ್ಲಿ ಶತ್ರುಗಳನ್ನು ಪಶುಗಳಂತೆ ಸಂಕಲ್ಪಿಸಿ ಹುಲಿಯಂತೆ ಭೀಮ ಕುಣಿದದ್ದನ್ನು ಕಂಡು ಕೃಷ್ಣ ಸಂತೋಷದಿಂದ ನಕ್ಕ, ಅರ್ಜುನನೂ ನಕ್ಕ. ಅತ್ಯಂತ ಸಂತೋಷದಿಂದ ಅವರಿಬ್ಬರೂ ಭೀಮನನ್ನು ಕೊಂಡಾಡಿದರು.

ಭೀಮನಿಂದ ಇಪ್ಪತ್ತು ಕೌರವರ ವಧೆ

**ಯದಾ ಸ ರಂಗಃ ಪವಮಾನಸೂನುನಾ**
**ಶೂನ್ಯಃ ಕೃತಸ್ತತ್ರ ಮುಹೂರ್ತಮಾತ್ರಾತ್ ।**
**ದುರ್ಯೋಧನಸ್ಯಾವರಜಾಃ ಶರೌಘೈ-**
**ರವೀವೃಷನ್ ಭೀಮಮುದಾರಸತ್ತ್ವಮ್ ॥ ೧೫೪ ॥**

**ಯದಾ ಸಃ ರಂಗಃ ಪವಮಾನಸೂನುನಾ ಶೂನ್ಯಃ ಕೃತಃ ತತ್ರ ಮುಹೂರ್ತ ಮಾತ್ರಾತ್ । ದುರ್ಯೋಧನಸ್ಯ ಅವರಜಾಃ ಶರೌಘೈಃ ಅವೀವೃಷನ್ ಭೀಮಂ ಉದಾರಸತ್ತ್ವಮ್ ॥ ೧೫೪ ॥**

**ಅರ್ಥ :- ಯದಾ** = ಯಾವಾಗ, **ಸಃ** = ಆ **ರಂಗಃ** = ರಣರಂಗವು, **ಪವಮಾನಸೂನುನಾ** = ವಾಯುಪುತ್ರನಾದ ಭೀಮನಿಂದ,

**ಶೂನ್ಯಃ ಕೃತಃ** = ಶೂನ್ಯವಾಗಿಸಲ್ಪಟ್ಟಿತೋ, **ತತ್ರ** = ಆಗ (ಅಲ್ಲಿ), **ಮುಹೂರ್ತಮಾತ್ರಾತ್ (ಪರತಃ)** = ಮುಹೂರ್ತಕಾಲದ ಬಳಿಕ, **ದುರ್ಯೋಧನಸ್ಯ** = ದುರ್ಯೋಧನನ, **ಅವರಜಾಃ** = ತಮ್ಮಂದಿರು, **ಉದಾರಸತ್ತ್ವಂ** = ಉತ್ಕೃಷ್ಟಜ್ಞಾನಬಲಸಂಪನ್ನನಾದ, **ಭೀಮಂ** = ಭೀಮನನ್ನು, **ಶರೌಘೈಃ** = ಬಾಣಗಳ ಸಮೂಹಗಳಿಂದ, **ಅವೀವೃಷನ್** = ಬಹಳವಾಗಿ ಮಳೆಗರೆದರು.

**ತಾತ್ಪರ್ಯ** :- ಭೀಮಸೇನನಿಂದ ಆ ರಣರಂಗ ಒಂದು ಮುಹೂರ್ತ ಕಾಲ ಶೂನ್ಯವಾಗಿತ್ತು. ಬಳಿಕ ದುರ್ಯೋಧನನ ತಮ್ಮಂದಿರು ಬಾಣಗಳ ಪ್ರವಾಹಗಳನ್ನು ಸುರಿಸುತ್ತಾ ಮಹಾಪರಾಕ್ರಮಿಯಾದ ಭೀಮನನ್ನು ಎದುರಿಸಿದರು.

**ತಾನ್ ಮಾರುತಿರ್ಬಾಣವರೈರ್ನಿಕೃತ್ತ-**
**ಶೀರ್ಷಾನ್ ಯಮಾಯಾನಯದಾಶು ವೀರಃ ।**
**ತಸ್ಮಿನ್ ದಿನೇ ವಿಂಶತಿಧಾರ್ತರಾಷ್ಟ್ರಾ**
**ಹತಾಸ್ತದನ್ಯೇ ಸಮರಾತ್ ಪ್ರದುದ್ರುವುಃ ॥ ೧೫೫ ॥**

**ತಾನ್ ಮಾರುತಿಃ ಬಾಣವರೈಃ ನಿಕೃತ್ತಶೀರ್ಷಾನ್ ಯಮಾಯ ಅನಯತ್ ಆಶು ವೀರಃ । ತಸ್ಮಿನ್ ದಿನೇ ವಿಂಶತಿಧಾರ್ತರಾಷ್ಟ್ರಾಃ ಹತಾಃ ತದನ್ಯೇ ಸಮರಾತ್ ಪ್ರದುದ್ರುವುಃ ॥ ೧೫೫ ॥**

**ಅರ್ಥ** :- **ವೀರಃ** = ವೀರನಾದ, **ಮಾರುತಿಃ** = ಮಾರುತಿಯು, **ಬಾಣವರೈಃ** = ಶ್ರೇಷ್ಠಬಾಣಗಳಿಂದ, **ನಿಕೃತ್ತಶೀರ್ಷಾನ್** = ಕತ್ತರಿಸಲ್ಪಟ್ಟ ತಲೆಯುಳ್ಳವರಾದ, **ತಾನ್** = ಅವರನ್ನು, **ಯಾಮಾಯ** = ಯಮಲೋಕಕ್ಕೆ, **ಆಶು** = ಬೇಗನೆ, **ಅನಯತ್** = ಕಳುಹಿಸಿದನು. **ತಸ್ಮಿನ್ ದಿನೇ** = ಆ ದಿನದಲ್ಲಿ, **ವಿಂಶತಿಧಾರ್ತರಾಷ್ಟ್ರಾಃ** = ಇಪ್ಪತ್ತು ಧೃತರಾಷ್ಟ್ರಪುತ್ರರು, **ಹತಾಃ** = ಸತ್ತವರಾದರು. **ತದನ್ಯೇ** = ಬೇರೆಯವರು, **ಸಮರಾತ್** = ಯುದ್ಧದಿಂದ, **ಪ್ರದುದ್ರುವುಃ** = ಓಡಿಹೋದರು.

**ತಾತ್ಪರ್ಯ** :- ಭೀಮಸೇನ ಉತ್ತಮ ಬಾಣಗಳಿಂದ ಅವರೆಲ್ಲರ ತಲೆಕತ್ತರಿಸಿ ಯಮಲೋಕಕ್ಕೆ ಕೂಡಲೇ ಅಟ್ಟಿದ. ಆ ದಿನದಲ್ಲಿ ಭೀಮನಿಂದ

ಒಟ್ಟು ಇಪ್ಪತ್ತು ಜನ ಕೌರವರು ಹತರಾದರು. ಉಳಿದವರು ಯುದ್ಧದಿಂದ ಓಡಿಹೋದರು.

ನಕುಲ ವೃಷಸೇನರ ಯುದ್ಧ

**ಕರ್ಮಾಣ್ಯನನ್ಯೌಪಯಿಕಾನಿ ಭೀಮೇ**
**ಕುರ್ವತ್ಯೇವಂ ಭೀತಭೀತೇಽರಿಸಂಘೇ ।**
**ನಿಮೀಲಿತಾಕ್ಷೇ ಚ ಭಯೇನ ಕರ್ಣೇ**
**ಕರ್ಣಾತ್ಮಜೋ ನಕುಲಂ ಪ್ರತ್ಯಧಾವತ್ ॥ ೧೫೬ ॥**

ಕರ್ಮಾಣಿ ಅನನ್ಯೌಪಯಿಕಾನಿ ಭೀಮೇ ಕುರ್ವತಿ ಏವಂ ಭೀತಭೀತೇ ಅರಿಸಂಘೇ । ನಿಮೀಲಿತಾಕ್ಷೇ ಚ ಭಯೇನ ಕರ್ಣೇ ಕರ್ಣಾತ್ಮಜಃ ನಕುಲಂ ಪ್ರತಿ ಅಧಾವತ್ ॥ ೧೫೬ ॥

**ಅರ್ಥ** :- ಏವಂ = ಹೀಗೆ, **ಅನನ್ಯೌಪಯಿಕಾನಿ** = ಅನ್ಯರಿಗೆ ಸರ್ವಥಾ ಸಾಧ್ಯವಿಲ್ಲದ, **ಕರ್ಮಾಣಿ** = ಕರ್ಮಗಳನ್ನು, **ಭೀಮೇ** = ಭೀಮನು, **ಕುರ್ವತಿ** (ಸತಿ) = ಮಾಡುತ್ತಿರಲು, **ಅರಿಸಂಘೇ ಚ** = ಶತ್ರುಸಮೂಹವೂ ಸಹ, **ಭೀತಭೀತೇ** (ಸತಿ) = ಭಯಕ್ಕಿಂತಲೂ ಭಯಗೊಂಡಿರಲು, **ಭಯೇನ** = ಭಯದಿಂದ, **ಕರ್ಣೇ** = ಕರ್ಣನು, **ನಿಮೀಲಿತಾಕ್ಷೇ** (ಸತಿ) = ಕಣ್ಣು ಮುಚ್ಚಿರಲು, **ಕರ್ಣಾತ್ಮಜಃ** = ಕರ್ಣನ ಮಗನು, **ನಕುಲಂ ಪ್ರತಿ** = ನಕುಲನನ್ನು ಕುರಿತು, **ಅಧಾವತ್** = ಮೇಲೇರಿ ಬಂದ.

**ತಾತ್ಪರ್ಯ** :- ಇತರರಿಗೆ ಸರ್ವಥಾ ಅಶಕ್ಯವಾದ ಕಾರ್ಯಗಳನ್ನು ಭೀಮ ಹಾಗೆ ಮಾಡುತ್ತಿದ್ದಾಗ ಶತ್ರುಸಮೂಹ ಬಹಳವಾಗಿ ಭಯಗೊಂಡಿತು. ಕರ್ಣನೂ ಭಯದಿಂದ ಕಣ್ಣುಗಳನ್ನು ಮುಚ್ಚಿಕೊಂಡ. ಆಗ ಕರ್ಣಪುತ್ರನಾದ ವೃಷಸೇನ ನಕುಲನ ಮೇಲೆ ನುಗ್ಗಿದ.

**ಮಾದ್ರೀಸುತೋ ವೃಷಸೇನಂ ಶರೌಘೈ-**
**ರವಾರಯತ್ ತಂ ವಿರಥಂ ಚಕಾರ ।**
**ಕರ್ಣಾತ್ಮಜಃ ಸೋಽಪ್ಯಸಿಚರ್ಮಪಾಣಿ-**
**ಸ್ತಸ್ಯಾನುಗಾಂಸ್ತ್ರಿಸಹಸ್ರಂ ಜಘಾನ ॥ ೧೫೭ ॥**

ಮಾದ್ರೀಸುತಃ ವೃಷಸೇನಂ ಶರೌಘೈಃ ಅವಾರಯತ್ ತಂ ವಿರಥಂ ಚಕಾರ । ಕರ್ಣಾತ್ಮಜಃ ಸಃ ಅಪಿ ಅಸಿಚರ್ಮಪಾಣಿಃ ತಸ್ಯ ಅನುಗಾನ್ ತ್ರಿಸಹಸ್ರಂ ಜಘಾನ ॥ ೧೫೭ ॥

**ಅರ್ಥ** :- **ಮಾದ್ರೀಸುತಃ** = ಮಾದ್ರಿಯ ಮಗನು, **ವೃಷಸೇನಂ** = ವೃಷಸೇನನನ್ನು, **ಶರೌಘೈಃ** = ಬಾಣಸಮೂಹಗಳಿಂದ, **ಅವಾರಯತ್** = ತಡೆದನು. **ಕರ್ಣಾತ್ಮಜಃ** = ಕರ್ಣನ ಮಗನು, **ತಂ** = ಅವನನ್ನು, **ವಿರಥಂ** = ರಥವನ್ನು ಕಳೆದುಕೊಂಡವನನ್ನಾಗಿ, **ಚಕಾರ** = ಮಾಡಿದನು. **ಅಸಿಚರ್ಮಪಾಣಿಃ** = ಖಡ್ಗ-ಗುರಾಣಿಗಳನ್ನು ಕೈಯಲ್ಲಿ ಹೊಂದಿದ, **ಸಃ ಅಪಿ** = ಆ ನಕುಲನು ಸಹ, **ತಸ್ಯ** = ಆ ವೃಷಸೇನನ, **ತ್ರಿಸಹಸ್ರಂ** = ಮೂರು ಸಾವಿರ, **ಅನುಗಾನ್** = ಅನುಚರರನ್ನು, **ಜಘಾನ** = ಕೊಂದನು.

**ತಾತ್ಪರ್ಯ** :- ನಕುಲ ವೃಷಸೇನನನ್ನು ಬಾಣಗಳ ಪ್ರವಾಹದಿಂದ ತಡೆದ. ವೃಷಸೇನ ಅವನನ್ನು ವಿರಥನನ್ನಾಗಿಸಿದ. ಆಗ ನಕುಲ ಕತ್ತಿ ಗುರಾಣಿಗಳನ್ನು ಕೈಗೆತ್ತಿಕೊಂಡು ವೃಷಸೇನನ ಮೂರು ಸಾವಿರ ಅನುಯಾಯಿ ಸೈನಿಕರನ್ನು ಕೊಂದುಹಾಕಿದ.

### ಅರ್ಜುನನಿಂದ ವೃಷಸೇನನ ವಧೆ

**ಕರ್ಣಾತ್ಮಜಸ್ತಸ್ಯ ಸಂಛಿದ್ಯ ಚರ್ಮ**
**ಭೀಮಾರ್ಜುನಾದೀನಪಿ ಬಾಣಸಂಘೈಃ ।**
**ಅವೀವೃಷತ್ ತಸ್ಯ ಪಾರ್ಥಃ ಶರೇಣ**
**ಗ್ರೀವಾಬಾಹೂರೂನ್ ಯುಗಪಚ್ಚಕರ್ತ ॥ ೧೫೮ ॥**

ಕರ್ಣಾತ್ಮಜಃ ತಸ್ಯ ಸಂಛಿದ್ಯ ಚರ್ಮ ಭೀಮಾರ್ಜುನಾದೀನ್ ಅಪಿ ಬಾಣಸಂಘೈಃ । ಅವೀವೃಷತ್ ತಸ್ಯ ಪಾರ್ಥಃ ಶರೇಣ ಗ್ರೀವಾಬಾಹೂರೂನ್ ಯುಗಪತ್ ಚಕರ್ತ ॥ ೧೫೮ ॥

**ಅರ್ಥ** :- **ಕರ್ಣಾತ್ಮಜಃ** = ಕರ್ಣನ ಪುತ್ರನು, **ತಸ್ಯ** = ಅವನ, **ಚರ್ಮ** = ಗುರಾಣಿಯನ್ನು, **ಸಂಛಿದ್ಯ** = ಕತ್ತರಿಸಿ, **ಭೀಮಾರ್ಜುನಾದೀನ್ ಅಪಿ** = ಭೀಮ-ಅರ್ಜುನ ಮೊದಲಾದವರನ್ನು ಸಹ, **ಬಾಣಸಂಘೈಃ** = ಬಾಣಸಮೂಹಗಳಿಂದ, **ಅವೀವೃಷತ್** = ಮಳೆಗರೆದ. **ಪಾರ್ಥಃ** =

ಅರ್ಜುನನು, **ತಸ್ಯ** = ಅವನ, **ಗ್ರೀವಾಬಾಹೂರೂನ್** = ಕತ್ತು, ತೋಳು, ತೊಡೆಗಳನ್ನು, **ಶರೇಣ** = ಒಂದೇ ಬಾಣದಿಂದ, **ಯುಗಪತ್** = ಒಮ್ಮೆಗೇ, **ಚಕರ್ತ** = ಕತ್ತರಿಸಿದನು.

**ತಾತ್ಪರ್ಯ** :- ವೃಷಸೇನ ಅವನ ಗುರಾಣಿಯನ್ನು ಕತ್ತರಿಸಿ, ಭೀಮ, ಅರ್ಜುನ ಮೊದಲಾದವರ ಮೇಲೂ ಬಾಣಗಳ ಗುಂಪನ್ನು ಸುರಿಸಿದನು. ಅರ್ಜುನ ಒಂದೇ ಬಾಣದಿಂದ ಆ ವೃಷಸೇನನ ಕತ್ತು, ತೋಳು ಹಾಗೂ ತೊಡೆಗಳನ್ನು ಒಂದೇಸಲಕ್ಕೆ ಕತ್ತರಿಸಿಹಾಕಿದ.

### ಕರ್ಣಾರ್ಜುನರ ಯುದ್ಧ

**ಏಕೇನ ಬಾಣೇನ ಸುತೇ ಹತೇ ಸ್ವೇ**
**ವೈಕರ್ತನೋ ವಾಸವಿಮಭ್ಯಧಾವತ್ ।**
**ತಯೋರಭೂದ್ದ್ವೈರಥಯುದ್ಧಮದ್ಭುತಂ**
**ಸರ್ವಾಸ್ತ್ರವಿದ್ವರಯೋರುಗ್ರರೂಪಮ್ ॥ ೧೫೯ ॥**

**ಏಕೇನ ಬಾಣೇನ ಸುತೇ ಹತೇ ಸ್ವೇ ವೈಕರ್ತನಃ ವಾಸವಿಂ ಅಭ್ಯಧಾವತ್ । ತಯೋಃ ಅಭೂತ್ ದ್ವೈರಥಯುದ್ಧಂ ಅದ್ಭುತಂ ಸರ್ವಾಸ್ತ್ರವಿದ್ವರಯೋಃ ಉಗ್ರರೂಪಮ್ ॥ ೧೫೯ ॥**

**ಅರ್ಥ** :– **ಏಕೇನ** = ಒಂದೇ, **ಬಾಣೇನ** = ಬಾಣದಿಂದ, **ಸ್ವೇ** = ತನ್ನ, **ಸುತೇ** = ಮಗನು, **ಹತೇ (ಸತಿ)** = ಹತನಾಗಲು, **ವೈಕರ್ತನಃ** = ಸೂರ್ಯಪುತ್ರನಾದ ಕರ್ಣನು, **ವಾಸವಿಂ** = ಇಂದ್ರಪುತ್ರನಾದ ಅರ್ಜುನನನ್ನು, **ಅಭ್ಯಧಾವತ್** = ಎದುರಿಸಿ ಬಂದನು. **ಸರ್ವಾಸ್ತ್ರ ವಿದ್ವರಯೋಃ** = ಎಲ್ಲ ಅಸ್ತ್ರಗಳನ್ನು ಬಲ್ಲವರಲ್ಲಿ ಶ್ರೇಷ್ಠರಾದ, **ತಯೋಃ** = ಅವರಿಬ್ಬರ, **ಅದ್ಭುತಂ** = ಅದ್ಭುತವಾದ, **ಉಗ್ರರೂಪಂ** = ಭಯಂಕರ ವಾದ, **ದ್ವೈರಥ್ಯಯುದ್ಧಂ** = ದ್ವಂದ್ವಯುದ್ಧವು, **ಅಭೂತ್** = ಆಯಿತು.

**ತಾತ್ಪರ್ಯ** :- ತನ್ನ ಮಗ ಅರ್ಜುನನಿಂದ ಹತನಾದಾಗ ಕರ್ಣ ಅರ್ಜುನನ ಮೇಲೆ ನುಗ್ಗಿದ. ಸಕಲಾಸ್ತ್ರಕೋವಿದರಲ್ಲಿ ಅಗ್ರೇಸರರಾದ ಅವರಿಬ್ಬರಿಗೂ ಅತ್ಯಂತ ಅದ್ಭುತವಾದ, ಭಯಂಕರವಾದ ದ್ವಂದ್ವಯುದ್ಧ ನಡೆಯಿತು.

ಯುದ್ಧ ನೋಡಲು ಗಗನದಲ್ಲಿ ಸುರಾಸುರರ ಸಮೂಹ

**ಪಕ್ಷಗ್ರಹಾಸ್ತತ್ರ ಸುರಾಸುರಾಸ್ತಯೋ-**
**ರನ್ಯೇ ಚ ಜೀವಾ ಗಗನಂ ಸಮಾಸ್ಥಿತಾಃ ।**
**ಮಹಾನ್ ವಿವಾದೋಽಪ್ಯಭವತ್ ತಯೋಃ ಕೃತೇ**
**ತದಾ ಗಿರೀಶೋಽವದದಬ್ಜಯೋನಿಮ್ ॥ ೧೬೦ ॥**

ಪಕ್ಷಗ್ರಹಾಃ ತತ್ರ ಸುರಾಸುರಾಃ ತಯೋಃ ಅನ್ಯೇ ಚ ಜೀವಾಃ ಗಗನಂ ಸಮಾಸ್ಥಿತಾಃ । ಮಹಾನ್ ವಿವಾದಃ ಅಪಿ ಅಭವತ್ ತಯೋಃ ಕೃತೇ ತದಾ ಗಿರೀಶಃ ಅವದತ್ ಅಬ್ಜಯೋನಿಮ್ ॥ ೧೬೦ ॥

**ಅರ್ಥ** :- **ತತ್ರ** = ಆ ಯುದ್ಧದಲ್ಲಿ, **ತಯೋಃ** = ಅವರಿಬ್ಬರ, **ಪಕ್ಷಗ್ರಹಾಃ** = ಪಕ್ಷವನ್ನು ವಹಿಸಿದ, **ಸುರಾಸುರಾಃ** = ಸುರರು, ಅಸುರರು, **(ಆಸುಃ)** = ಇದ್ದರು. **ಅನ್ಯೇ** = ಬೇರೆ, **ಜೀವಾಃ ಚ** = ಜೀವರೂ, **ಗಗನಂ** = ಗಗನವನ್ನು ಕುರಿತು, **ಸಮಾಸ್ಥಿತಾಃ** = ನೆರೆದರು. **ತಯೋಃ ಕೃತೇ** = ಅವರಿಬ್ಬರಿಗೋಸ್ಕರ, **ಮಹಾನ್** = ದೊಡ್ಡ, **ವಿವಾದಃ ಅಪಿ** = ವಿವಾದವೂ ಸಹ, **ಅಭವತ್** = ಆಯಿತು. **ತದಾ** = ಆಗ, **ಗಿರೀಶಃ** = ಶಿವನು, **ಅಬ್ಜಯೋನಿಂ** = ಪದ್ಮಸಂಭವರಾದ ಬ್ರಹ್ಮದೇವರನ್ನು ಕುರಿತು, **ಅವದತ್** = ಹೇಳಿದರು.

**ತಾತ್ಪರ್ಯ** :- ಅವರಿಬ್ಬರ ಪಕ್ಷವನ್ನು ಆಗ ದೇವತೆಗಳು, ಅಸುರರು ಹಿಡಿದರು. ಇತರ ಜೀವಿಗಳೂ ಗಗನದಲ್ಲಿ ನೆರೆದವು. ಅವರಿಬ್ಬರಿಗಾಗಿ ಅವರಲ್ಲಿ ದೊಡ್ಡ ವಿವಾದ ಹುಟ್ಟಿಬಿಟ್ಟಿತು. ಆಗ ಶಿವ ಬ್ರಹ್ಮನನ್ನು ಕೇಳಿಕೊಂಡ :

**ಸುರಾಸುರಾಣಾಂ ಭೀಮದುರ್ಯೋಧನೌ ದ್ವೌ**
**ಸಮಾಶ್ರಯೌ ತತ್ಪ್ರಿಯೌ ಕರ್ಣಪಾರ್ಥೌ ।**
**ಪ್ರಾಣೋಪಮೌ ತೇನ ಚೈತತ್ಕೃತೇ ತೇ**
**ಸುರಾಸುರಾಃ ಕರ್ತುಮಿಚ್ಛಂತಿ ಯುದ್ಧಮ್ ॥ ೧೬೧ ॥**

ಸುರಾಸುರಾಣಾಂ ಭೀಮದುರ್ಯೋಧನೌ ದ್ವೌ ಸಮಾಶ್ರಯೌ ತತ್ಪ್ರಿಯೌ ಕರ್ಣಪಾರ್ಥೌ । ಪ್ರಾಣೋಪಮೌ ತೇನ ಚ ಏತತ್ಕೃತೇ ತೇ ಸುರಾಸುರಾಃ ಕರ್ತುಂ ಇಚ್ಛಂತಿ ಯುದ್ಧಮ್ ॥ ೧೬೧ ॥

**ಅರ್ಥ** :- **ಭೀಮದುರ್ಯೋಧನೌ ದ್ವೌ** = ಭೀಮ-ದುರ್ಯೋಧನರಿಬ್ಬರು, **ಸುರಾಸುರಾಣಾಂ** = ಸುರ-ಅಸುರರ (ಪಾಲಿಗೆ), **ಸಮಾಶ್ರಯೌ** = ಆಶ್ರಯರಾಗಿರುವರು. **ಕರ್ಣಪಾರ್ಥೌ** = ಕರ್ಣ-ಅರ್ಜುನರಿಬ್ಬರು, **ತತ್ಪ್ರಿಯೌ** = ಅವರಿಬ್ಬರಿಗೆ ಪ್ರಿಯರು, **ಪ್ರಾಣೋಪಮೌ** = ಪ್ರಾಣಸಮಾನರು. **ತೇನ ಚ** = ಇದರಿಂದಾಗಿ, **ಸಹ ಏತತ್ಕೃತೇ** = ಇವರಿಬ್ಬರಿಗೋಸ್ಕರ, **ತೇ ಸುರಾಸುರಾಃ** = ಈ ಸುರ-ಅಸುರರು, **ಯುದ್ಧಂ** = ಯುದ್ಧವನ್ನು, **ಕರ್ತುಂ** = ಮಾಡಲು, **ಇಚ್ಛಂತಿ** = ಇಚ್ಛಿಸುವರು.

**ತಾತ್ಪರ್ಯ** :- ಸುರಾಸುರರಿಗೆ ಭೀಮ, ದುರ್ಯೋಧನರು ಆಸರೆಯಾಗಿರುವರು. ಕರ್ಣಾರ್ಜುನರು ಅವರಿಬ್ಬರಿಗೆ ಪ್ರಿಯರು, ಪ್ರಾಣ ಸಮಾನರು. ಆದರಿಂದ ಇವರಿಬ್ಬರಿಗಾಗಿ ಈ ಸುರಾಸುರರು ಯುದ್ಧ ಮಾಡಲು ಬಯಸಿರುವರು :

**ತದಾ ವಿನಾಶೋ ಜಗತಾಂ ಮಹಾನ್ ಸ್ಯಾತ್**
**ತೇನಾನಯೋಃ ಸಮಮೇವಾಸ್ತು ಯುದ್ಧಮ್ ।**
**ಇತೀರಿತೇ ವಾಸವಃ ಪದ್ಮಯೋನಿಂ**
**ಜಗಾದ ಕೃಷ್ಣೋ ಯತ್ರ ಜಯಶ್ಚ ತತ್ರ ॥ ೧೬೨ ॥**

ತದಾ ವಿನಾಶಃ ಜಗತಾಂ ಮಹಾನ್ ಸ್ಯಾತ್ ತೇನ ಅನಯೋಃ ಸಮಂ ಏವ ಅಸ್ತು ಯುದ್ಧಮ್ । ಇತಿ ಈರಿತೇ ವಾಸವಃ ಪದ್ಮಯೋನಿಂ ಜಗಾದ ಕೃಷ್ಣಃ ಯತ್ರ ಜಯಃ ಚ ತತ್ರ ॥ ೧೬೨ ॥

**ಅರ್ಥ** :- **ತದಾ** = ಆಗ, **ಜಗತಾಂ** = ಜಗತ್ತಿನ, **ಮಹಾನ್ ವಿನಾಶಃ** = ದೊಡ್ಡ ವಿನಾಶವು, **ಸ್ಯಾತ್** = ಆದೀತು. **ತೇನ** = ಆದ್ದರಿಂದ, **ಅನಯೋಃ** = ಇವರಿಬ್ಬರಿಗೂ, **ಯುದ್ಧಂ** = ಯುದ್ಧವು, **ಸಮಂ ಏವ** = ಸಮವಾಗಿಯೇ, **ಅಸ್ತು** = ಆಗಲಿ. **ಇತಿ** = ಹೀಗೆ, **ಈರಿತೇ** (ಸತಿ) = ಹೇಳಲ್ಪಟ್ಟಾಗ, **ವಾಸವಃ** = ಇಂದ್ರನು, **ಪದ್ಮಯೋನಿಂ** = ಬ್ರಹ್ಮದೇವರನ್ನು ಕುರಿತು, **ಜಗಾದ** = ಅರಿಕೆ ಮಾಡಿಕೊಂಡ, **ಯತ್ರ** = ಎಲ್ಲಿ, **ಕೃಷ್ಣಃ** = ಕೃಷ್ಣನೋ, **ತತ್ರ ಚ** = ಅಲ್ಲಿಯೇ, **ಜಯಃ** = ಜಯವು.

**ತಾತ್ಪರ್ಯ** :- ಆಗ ಜಗತ್ತಿಗೆ ಮಹಾವಿನಾಶ ಉಂಟಾದೀತು, ಆದ್ದರಿಂದ ಇವರಿಬ್ಬರಿಗೂ ಸಮನಾದ ಯುದ್ಧವೇ ಆಗಲಿ. ಶಿವ ಹೀಗೆನ್ನಲು ಇಂದ್ರ ಬ್ರಹ್ಮದೇವರನ್ನು ಕೇಳಿಕೊಂಡ - ''ಕೃಷ್ಣನಿರುವಲ್ಲಿಯೇ ಜಯ ವಿರುವುದು'' ಖಚಿತ.

ಅರ್ಜುನನ ಗೆಲುವಿಗೆ ಬ್ರಹ್ಮನಲ್ಲಿ ಇಂದ್ರನ ಪ್ರಾರ್ಥನೆ

**ಕಾಮೋ ನ ಕೃಷ್ಣಸ್ಯ ಮೃಷಾ ಭವೇದ್ಧಿ**
**ಕಾಮೋಽಸ್ಯ ಪಾರ್ಥಸ್ಯ ಜಯಂ ಪ್ರದಾತುಮ್ ।**
**ಇತ್ಯೂಚಿವಾನ್ ವಾಸವಃ ಫಲ್ಗುನಸ್ಯ**
**ಜಯೋಽಸ್ತು ಕರ್ಣಸ್ಯ ವಧಸ್ತಥೇತಿ ।**
**ಉಕ್ತ್ವಾಽನಮತ್ ಕಂಜಭವಸ್ತಥೇತಿ**
**ಪ್ರಾಹಾಸುರಾನ್ ದೇವತಾಶ್ಚಾಬಭಾಷೇ ॥ ೧೬೩ ॥**

**ಕಾಮಃ ನ ಕೃಷ್ಣಸ್ಯ ಮೃಷಾ ಭವೇತ್ ಹಿ ಕಾಮಃ ಅಸ್ಯ ಪಾರ್ಥಸ್ಯ ಜಯಂ ಪ್ರದಾತುಮ್ । ಇತಿ ಊಚಿವಾನ್ ವಾಸವಃ ಫಲ್ಗುನಸ್ಯ ಜಯಃ ಅಸ್ತು ಕರ್ಣಸ್ಯ ವಧಃ ತಥಾ ಇತಿ । ಉಕ್ತ್ವಾ ಅನಮತ್ ಕಂಜಭವಃ ತಥಾ ಇತಿ ಪ್ರಾಹ ಅಸುರಾನ್ ದೇವತಾಃ ಚ ಆಬಭಾಷೇ ॥ ೧೬೩ ॥**

**ಅರ್ಥ** :- **ಕೃಷ್ಣಸ್ಯ** = ಕೃಷ್ಣನ, **ಕಾಮಃ** = ಸಂಕಲ್ಪವು, **ಮೃಷಾ ನ ಭವೇತ್** = ಸುಳ್ಳಾಗದು, **ಹಿ** = ಇದು ನಿಶ್ಚಿತ. **ಅಸ್ಯ** = ಅವನ, **ಕಾಮಃ** = ಸಂಕಲ್ಪವು, **ಪಾರ್ಥಸ್ಯ** = ಪಾರ್ಥನ (ಪಾಲಿಗೆ), **ಜಯಂ** = ಜಯವನ್ನು, **ಪ್ರದಾತುಂ** = ಕೊಡಲೆಂದು, **ಅಸ್ತಿ** = ಇದೆ. **ಇತಿ** = ಹೀಗೆ, **ಊಚಿವಾನ್** = ಹೇಳಿದ, **ವಾಸವಃ** = ಇಂದ್ರನು, **ಫಲ್ಗುನಸ್ಯ** = ಅರ್ಜುನನ, **ಜಯಃ** = ಜಯವು, **ಅಸ್ತು** = ಆಗಲಿ, **ತಥಾ** = ಹಾಗೆಯೇ, **ಕರ್ಣಸ್ಯ** = ಕರ್ಣನ, **ವಧಃ** = ವಧೆಯು, **(ಅಸ್ತು)** = ಆಗಲಿ. **ಇತಿ** = ಹೀಗೆ, **ಉಕ್ತ್ವಾ** = ಹೇಳಿ, **(ಕಂಜಭವಂ)** = ಬ್ರಹ್ಮನನ್ನು, **ಅನಮತ್** = ನಮಿಸಿದ. **ಕಂಜಭವಃ** = ಬ್ರಹ್ಮದೇವರು, **ತಥಾ ಇತಿ** = ಹಾಗೆಯೇ (ಆಗಲಿ) ಎಂದು, **ಪ್ರಾಹ** = ಹೇಳಿದ. **(ಸಃ)** = ಬ್ರಹ್ಮನು, **ಅಸುರಾನ್** = ಅಸುರರನ್ನು, **ದೇವತಾಃ ಚ** = ಮತ್ತು ದೇವತೆಗಳನ್ನು ಕುರಿತು, **ಆಬಭಾಷೇ** = ಹೇಳಿದ.

**ತಾತ್ಪರ್ಯ** :- ಶ್ರೀಕೃಷ್ಣನ ಸಂಕಲ್ಪವೆಂದೂ ಸುಳ್ಳಾಗದು. ಅರ್ಜುನನಿಗೆ ಜಯ ನೀಡುವುದು ಅವನ ಸಂಕಲ್ಪ. ಹೀಗೆ ಹೇಳಿದ ಇಂದ್ರ ''ಅರ್ಜುನನಿಗೆ ಜಯವಾಗಲಿ, ಹಾಗೆಯೇ ಕರ್ಣ ಹತನಾಗಲಿ'' ಎಂದು ನುಡಿದು ಇಂದ್ರ ಬ್ರಹ್ಮನಿಗೆ ನಮಸ್ಕರಿಸಿದ. ಬ್ರಹ್ಮ 'ಹಾಗೆಯೇ ಆಗಲಿ' ಎಂದು ತಿಳಿಸಿದ. ಬಳಿಕ ಅಸುರರಿಗೂ ದೇವತೆಗಳಿಗೂ ಹೇಳಿದ.

**ನ ಕರ್ಣಾರ್ಜುನಯೋರರ್ಥೇ ವಿರೋಧಂ ಕುರುತ ಕ್ವಚಿತ್ ।**
**ಭೀಮದುರ್ಯೋಧನಾರ್ಥೇ ವಾ ಪಶ್ಯಂತ್ವೇವ ಚ ಸಂಯುಗಮ್ ।**
**ಇತ್ಯುಕ್ತೇ ಶಾಂತಿಮಾಪನ್ನಾ ದದೃಶುಃ ಸಂಯುಗಂ ತಯೋಃ ॥ ೧೬೪ ॥**

ನ ಕರ್ಣಾರ್ಜುನಯೋಃ ಅರ್ಥೇ ವಿರೋಧಂ ಕುರುತ ಕ್ವಚಿತ್ । **ಭೀಮದುರ್ಯೋಧನಾರ್ಥೇ ವಾ ಪಶ್ಯಂತು ಏವ ಚ ಸಂಯುಗಮ್ । ಇತಿ ಉಕ್ತೇ ಶಾಂತಿಂ ಆಪನ್ನಾಃ ದದೃಶುಃ ಸಂಯುಗಂ ತಯೋಃ ॥ ೧೬೪ ॥**

**ಅರ್ಥ** :- **ಕರ್ಣಾರ್ಜುನಯೋಃ ಅರ್ಥೇ** = ಕರ್ಣ-ಅರ್ಜುನರಿಗೋಸ್ಕರವಾಗಲಿ, **ಭೀಮದುರ್ಯೋಧನಾರ್ಥೇ ವಾ** = ಭೀಮ-ದುರ್ಯೋಧನರಿಗೋಸ್ಕರವಾಗಲಿ, **ವಿರೋಧಂ** = ವಿರೋಧವನ್ನು, **ಕ್ವಚಿತ್** = ಎಲ್ಲಿಯೂ, **ನ ಕುರುತ** = ಮಾಡದಿರಿ. **ಸಂಯುಗಂ ಚ ಏವ** = ಯುದ್ಧವನ್ನು ಮಾತ್ರ, **ಪಶ್ಯಂತು** = ನೋಡುತ್ತಿರಿ. **ಇತಿ** = ಹೀಗೆ, **ಉಕ್ತೇ (ಸತಿ)** = ಹೇಳಲ್ಪಡಲು, **ಶಾಂತಿಂ** = ಶಾಂತಿಯನ್ನು, **ಆಪನ್ನಾಃ** = ಹೊಂದಿದವರಾಗಿ, **ತಯೋಃ** = ಅವರಿಬ್ಬರ, **ಸಂಯುಗಂ** = ಯುದ್ಧವನ್ನು, **ದದೃಶುಃ** = ನೋಡಿದರು.

**ತಾತ್ಪರ್ಯ** :- ''ಕರ್ಣಾರ್ಜುನರಿಗೋಸ್ಕರವಾಗಲೀ, ಭೀಮ-ದುರ್ಯೋಧನರ ಸಲುವಾಗಿ ಆಗಲೀ ನೀವು ಎಲ್ಲೂ ಜಗಳವಾಡಕೂಡದು. ಅವರ ಯುದ್ಧವನ್ನು ಮಾತ್ರ ನೋಡುತ್ತಿರಿ''. ಬ್ರಹ್ಮ ಹೀಗೆ ನುಡಿಯಲು ಅವರೆಲ್ಲ ಶಾಂತಿ ಹೊಂದಿದವರಾಗಿ ಅವರಿಬ್ಬರ ಯುದ್ಧವನ್ನು ನೋಡ ತೊಡಗಿದರು.

### ಕರ್ಣಾರ್ಜುನರ ಯುದ್ಧ

**ವವರ್ಷತುಸ್ತೌ ಚ ಮಹಾಸ್ತ್ರಶಸ್ತ್ರೈ-**
**ರ್ಭೀಮೋ ರಥಸ್ಥೋಽವರಜಂ ಜುಗೋಪ ।**

**ಶೈನೇಯಪಾಂಚಾಲಮುಖಾಶ್ಚ ಪಾರ್ಥ-**
**ಮಾವಾರ್ಯ ತಸ್ಥುಃ ಪ್ರಸಭಂ ನದಂತಃ ॥ ೧೬೫ ॥**

ವವರ್ಷತುಃ ತೌ ಚ ಮಹಾಸ್ತ್ರಶಸ್ತ್ರೈಃ ಭೀಮಃ ರಥಸ್ಥಃ ಅವರಜಂ ಜುಗೋಪ । ಶೈನೇಯಪಾಂಚಾಲಮುಖಾಃ ಚ ಪಾರ್ಥಂ ಆವಾರ್ಯ ತಸ್ಥುಃ ಪ್ರಸಭಂ ನದಂತಃ ॥ ೧೬೫ ॥

**ಅರ್ಥ** :- **ತೌ ಚ** = ಅವರಿಬ್ಬರೂ ಸಹ, **ಮಹಾಸ್ತ್ರಶಸ್ತ್ರೈಃ** = ದೊಡ್ಡ ಅಸ್ತ್ರ–ಶಸ್ತ್ರಗಳಿಂದ, **ವವರ್ಷತುಃ** = ಮಳೆಗರೆದರು. **ರಥಸ್ಥಃ** = ರಥದಲ್ಲಿರುವವನಾಗಿ, **ಭೀಮಃ** = ಭೀಮನು, **ಅವರಜಂ** = ತಮ್ಮನನ್ನು, **ಜುಗೋಪ** = ರಕ್ಷಿಸಿದ. **ಶೈನೇಯಪಾಂಚಾಲಮುಖಾಃ ಚ** = ಸಾತ್ಯಕಿ, ಧೃಷ್ಟದ್ಯುಮ್ನ ಮೊದಲಾದವರೂ ಸಹ, **ಪಾರ್ಥಂ** = ಅರ್ಜುನನನ್ನು, **ಆವಾರ್ಯ** = ಸುತ್ತುಗಟ್ಟಿ, **ಪ್ರಸಭಂ** = ಬಲವಾಗಿ, **ನದಂತಃ (ಸಂತಃ)** = ಸಿಂಹನಾದಮಾಡುವವರಾಗಿ, **ತಸ್ಥುಃ** = ನಿಂತರು.

**ತಾತ್ಪರ್ಯ** :- ಕರ್ಣಾರ್ಜುನರಿಬ್ಬರೂ ಮಹಾಸ್ತ್ರಗಳ ಹಾಗೂ ಮಹಾಶಸ್ತ್ರಗಳ ಮಳೆಯನ್ನು ಸುರಿಸಿದರು. ರಥದಲ್ಲಿದ್ದ ಭೀಮ ಅರ್ಜುನನನ್ನು ರಕ್ಷಿಸತೊಡಗಿದ. ಸಾತ್ಯಕಿ, ಧೃಷ್ಟದ್ಯುಮ್ನ ಮೊದಲಾದವರೆಲ್ಲ ಅರ್ಜುನನನ್ನು ಸುತ್ತುಗಟ್ಟಿ ಬಲವಾಗಿ ಸಿಂಹನಾದ ಮಾಡುತ್ತಾ ನಿಂತರು.

**ದುರ್ಯೋಧನದ್ರೌಣಿಮುಖಾಶ್ಚ ಕರ್ಣಂ**
**ರರಕ್ಷುರಾವಾರ್ಯ ತದಾಽಽಸ ಯುದ್ಧಮ್ ।**
**ತತ್ರಾರ್ಜುನಂ ಬಾಣವರೈಃ ಸ ಕರ್ಣಃ**
**ಸಮರ್ದಯಾಮಾಸ ವಿಶೇಷಯನ್ ರಣೇ ।**
**ತದಾ ನದನ್ ಭೀಮಸೇನೋ ಜಗಾದ**
**ಗದಾಂ ಸಮಾದಾಯ ಸಮಾತ್ತರೋಷಃ ॥ ೧೬೬ ॥**

ದುರ್ಯೋಧನದ್ರೌಣಿಮುಖಾಃ ಚ ಕರ್ಣಂ ರರಕ್ಷುಃ ಆವಾರ್ಯ ತದಾ ಆಸ ಯುದ್ಧಮ್ । ತತ್ರ ಅರ್ಜುನಂ ಬಾಣವರೈಃ ಸಃ ಕರ್ಣಃ ಸಮರ್ದಯಾಮಾಸ ವಿಶೇಷಯನ್ ರಣೇ । ತದಾ ನದನ್ ಭೀಮಸೇನಃ ಜಗಾದ ಗದಾಂ ಸಮಾದಾಯ ಸಮಾತ್ತರೋಷಃ ॥ ೧೬೬ ॥

**ಅರ್ಥ** :- **ದುರ್ಯೋಧನದ್ರೌಣಿಮುಖಾಃ ಚ** = ದುರ್ಯೋಧನ-ಅಶ್ವತ್ಥಾಮ ಮೊದಲಾದವರು ಸಹ, **ಕರ್ಣಂ** = ಕರ್ಣನನ್ನು, **ಆವಾರ್ಯ** = ಸುತ್ತುಗಟ್ಟಿ, **ರರಕ್ಷುಃ** = ರಕ್ಷಿಸಿದರು. **ತದಾ** = ಆಗ, **ಯುದ್ಧಂ** = ಯುದ್ಧವು, **ಆಸ** = ಆಯಿತು. **ತತ್ರ** = ಅಲ್ಲಿ, **ಸಃ ಕರ್ಣಃ** = ಆ ಕರ್ಣನು, **ಅರ್ಜುನಂ** = ಅರ್ಜುನನನ್ನು, **ಬಾಣವರ್ಯೈಃ** = ಶ್ರೇಷ್ಠ ಬಾಣಗಳಿಂದ, **ಸಮರ್ದಯಾಮಾಸ** = ಬಹಳವಾಗಿ ಪೀಡಿಸಿದ. **ತದಾ** = ಆಗ, **ಭೀಮಸೇನಃ** = ಭೀಮಸೇನನು, **ರಣೇ** = ಯುದ್ಧದಲ್ಲಿ, **ವಿಶೇಷಯನ್** = (ಕರ್ಣನಿಗಿಂತಲೂ) ವಿಶೇಷವನ್ನು ಮಾಡುತ್ತಾ, **ನದನ್** = ಸಿಂಹನಾದವನ್ನು ಮಾಡುವವನಾಗಿ, **ಸಮಾತ್ತರೋಷಃ** = ರೋಷದಿಂದ, **ಗದಾಂ** = ಗದೆಯನ್ನು, **ಸಮಾದಾಯ** = ತೆಗೆದುಕೊಂಡು, **(ಪಾರ್ಥಂ)** = ಅರ್ಜುನನನ್ನು ಕುರಿತು, **ಜಗಾದ** = ಹೇಳಿದ.

**ತಾತ್ಪರ್ಯ** :- ದುರ್ಯೋಧನ, ಅಶ್ವತ್ಥಾಮ ಮೊದಲಾದವರು ಕರ್ಣನನ್ನು ರಕ್ಷಿಸಲೆಂದು ಅವನ ಸುತ್ತ ನೆರೆದರು; ಆಗ ಯುದ್ಧ ನಡೆಯಿತು. ಆ ಯುದ್ಧದಲ್ಲಿ ಕರ್ಣ ಬಾಣಗಳ ಗುಂಪುಗಳಿಂದ ಅರ್ಜುನನನ್ನು ಮೀರಿಸುತ್ತಾ ಬಹಳವಾಗಿ ಪೀಡಿಸತೊಡಗಿದ. ಆಗ ಭೀಮಸೇನ ಗರ್ಜಿಸುತ್ತಾ ಕೋಪದಿಂದ ಗದೆಯನ್ನು ಕೈಗೆತ್ತಿಕೊಂಡು ನುಡಿದ:

### ಭೀಮನಿಂದ ಅರ್ಜುನನಿಗೆ ಸ್ಫೂರ್ತಿ

**ಅಹಂ ಚೈನಂ ಗದಯಾ ಪೋಥಯಾಮಿ**
**ತ್ವಂ ವಾ ಜಹೀಮಂ ಸಮುಪಾತ್ತವೀರ್ಯಃ ।**
**ಕೃಷ್ಣೋಽಪಿ ತಂ ಬೋಧಯಾಮಾಸ ಸಮ್ಯಕ್**
**ನರಾವೇಶಂ ವ್ಯಂಜಯನ್ ಭೂಯ ಏವ ॥ ೧೬೭ ॥**

**ಅಹಂ ಚ ಏನಂ ಗದಯಾ ಪೋಥಯಾಮಿ ತ್ವಂ ವಾ ಜಹಿ ಇಮಂ ಸಮುಪಾತ್ತವೀರ್ಯಃ । ಕೃಷ್ಣಃ ಅಪಿ ತಂ ಬೋಧಯಾಮಾಸ ಸಮ್ಯಕ್ ನರಾವೇಶಂ ವ್ಯಂಜಯನ್ ಭೂಯಃ ಏವ ॥ ೧೬೭ ॥**

**ಅರ್ಥ** :- **ಅಹಂ ಚ** = ನಾನೇ, **ಏನಂ** = ಇವನನ್ನು, **ಗದಯಾ** = ಗದೆಯಿಂದ, **ಪೋಥಯಾಮಿ** = ಹೊಡೆದುಬಿಡುವೆ. **ಸಮುಪಾತ್ತ ವೀರ್ಯಃ** = (**ಸನ್**) = ಪರಾಕ್ರಮವನ್ನು ಹೊಂದಿದವನಾಗಿ, **ತ್ವಂ ವಾ**

= ನೀನಾದರೋ, **ಇಮಂ** = ಇವನನ್ನು, **ಜಹಿ** = ಕೊಂದುಬಿಡು. **ಕೃಷ್ಣಃ ಅಪಿ** = ಕೃಷ್ಣನೂ ಸಹ, **ನರಾವೇಶಂ** = ನರಾವೇಶವನ್ನು, **ಭೂಯಃ ಏವ** = ಬಹಳವಾಗಿಯೇ, **ವ್ಯಂಜಯನ್** = ಅಭಿವ್ಯಕ್ತಿಯನ್ನು ಮಾಡುತ್ತಾ, **ತಂ** = ಅವನನ್ನು (ಅರ್ಜುನನನ್ನು), **ಸಮ್ಯಕ್** = ಚೆನ್ನಾಗಿ, **ಬೋಧಯಾಮಾಸ** = ತಿಳಿಹೇಳಿದ.

**ತಾತ್ಪರ್ಯ** :- ''ನಾನೇ ಗದೆಯಿಂದ ಕರ್ಣನನ್ನು ಕೊಂದುಬಿಡುವೆ, ಅಥವಾ ನೀನೇ ಈಗಲೇ ಇವನನ್ನು ಪರಾಕ್ರಮ ತೋರಿಸಿ ಕೊಂದುಬಿಡು''. ಭೀಮ ಹೀಗೆ ನುಡಿಯಲು ಕೃಷ್ಣನೂ ಅರ್ಜುನನೊಳಗಿನ ನರಾವೇಶವನ್ನು ಇನ್ನೂ ವಿಶೇಷವಾಗಿ ಅಭಿವ್ಯಕ್ತಿಗೊಳಿಸಲೆಂದು ತಿಳುವಳಿಕೆ ನೀಡಿದ.

### ಅರ್ಜುನನ ಅದ್ಭುತ ಪರಾಕ್ರಮ

**ಸಮೃದ್ಧವೀರ್ಯಃ ಸ ತದಾ ಧನಂಜಯಃ**
**ಸುಯೋಧನದ್ರೌಣಿಕೃಪಾನ್ ಸಭೋಜಾನ್ ।**
**ಸಾಕಂ ಚ ಬಾಣೈರ್ವಿರಥಾಂಶ್ಚಕಾರ**
**ವಿವ್ಯಾಧ ತಾನಪ್ಯರಿಹಾ ಸುಪುಂಖೈಃ ॥ ೧೬೮ ॥**

**ಸಮೃದ್ಧವೀರ್ಯಃ ಸಃ ತದಾ ಧನಂಜಯಃ ಸುಯೋಧನದ್ರೌಣಿಕೃಪಾನ್ ಸಭೋಜಾನ್ । ಸಾಕಂ ಚ ಬಾಣೈಃ ವಿರಥಾನ್ ಚಕಾರ ವಿವ್ಯಾಧ ತಾನ್ ಅಪಿ ಅರಿಹಾ ಸುಪುಂಖೈಃ ॥ ೧೬೮ ॥**

**ಅರ್ಥ** :- **ತದಾ** = ಆಗ, **ಸಃ ಧನಂಜಯಃ** = ಆ ಧನಂಜಯನು, **ಸಮೃದ್ಧವೀರ್ಯಃ (ಸನ್)** = ಸಾಮರ್ಥ್ಯವನ್ನು ಹೆಚ್ಚಿಸಿಕೊಂಡವನಾಗಿ, **ಸಾಕಂ** = ಒಮ್ಮೆಲೆ, **ಬಾಣೈಃ** = ಬಾಣಗಳಿಂದ, **ಸಭೋಜಾನ್** = ಭೋಜಸಹಿತರಾದ, **ಸುಯೋಧನದ್ರೌಣಿಕೃಪಾನ್ ಚ** = ದುರ್ಯೋಧನ-ಅಶ್ವತ್ಥಾಮ- ಕೃಪಾಚಾರ್ಯರನ್ನು ಸಹ, **ವಿರಥಾನ್** = ರಥವನ್ನು ಕಳೆದುಕೊಂಡವರನ್ನಾಗಿ, **ಚಕಾರ** = ಮಾಡಿದ. **ಅರಿಹಾ** = ಶತ್ರುನಾಶಕನಾದ ಅರ್ಜುನನು, **ಸುಪುಂಖೈಃ (ಬಾಣೈಃ)** = ಒಳ್ಳೆಯ ಗರಿಗಳುಳ್ಳ ಬಾಣಗಳಿಂದ, **ತಾನ್ ಅಪಿ** = ದುರ್ಯೋಧನಾದಿಗಳನ್ನೂ ಸಹ, **ವಿವ್ಯಾಧ** = ಹೊಡೆದ.

**ತಾತ್ಪರ್ಯ** :- ಅರ್ಜುನ ಆಗ ವಿಶೇಷವಾಗಿ ಸಾಮರ್ಥ್ಯ ಹೆಚ್ಚಿಸಿ ಕೊಂಡವನಾಗಿ ದುರ್ಯೋಧನ, ಅಶ್ವತ್ಥಾಮ, ಕೃಪ, ಕೃತವರ್ಮರನ್ನು

ಬಾಣಗಳಿಂದ ವಿರಥರನ್ನಾಗಿ ಮಾಡಿದ. ಶತ್ರುನಾಶಕನಾದ ಅವನು ಒಳ್ಳೆಯ ಗರಿಗಳನ್ನು ಹೊಂದಿದ್ದ ಬಾಣಗಳಿಂದ ಹೊಡೆದ.

### ಅಶ್ವತ್ಥಾಮನಿಂದ ದುರ್ಯೋಧನನಿಗೆ ನೀತಿಬೋಧೆ

**ತೇ ಕಿಂಚಿದ್ದೂರತಸ್ತಸ್ಥುಃ ಪಶ್ಯಂತೋ ಯುದ್ಧಮದ್ಭುತಮ್ ।**
**ಅಮಾನುಷಂ ತತ್ ಪಾರ್ಥಸ್ಯ ದೃಷ್ಟ್ವಾ ಕರ್ಮ ಗುರೋಃ ಸುತಃ ।**
**ಗೃಹೀತ್ವಾ ಪಾಣಿನಾ ಪಾಣಿಂ ದುರ್ಯೋಧನಮಭಾಷತ ॥ ೧೬೯ ॥**

**ತೇ ಕಿಂಚಿತ್ ದೂರತಃ ತಸ್ಥುಃ ಪಶ್ಯಂತಃ ಯುದ್ಧಂ ಅದ್ಭುತಮ್ । ಅಮಾನುಷಂ ತತ್ ಪಾರ್ಥಸ್ಯ ದೃಷ್ಟ್ವಾ ಕರ್ಮ ಗುರೋಃ ಸುತಃ । ಗೃಹೀತ್ವಾ ಪಾಣಿನಾ ಪಾಣಿಂ ದುರ್ಯೋಧನಂ ಅಭಾಷತ ॥ ೧೬೯ ॥**

**ಅರ್ಥ** :– **ತೇ** = ಅವರು, **ಅದ್ಭುತಂ** = ಅದ್ಭುತವಾದ, **ಯುದ್ಧಂ** = ಯುದ್ಧವನ್ನು, **ಪಶ್ಯಂತಃ (ಸಂತಃ)** = ನೋಡುವವರಾಗಿ, **ಕಿಂಚಿತ್** = ಸ್ವಲ್ಪ, **ದೂರತಃ** = ದೂರದಲ್ಲಿ, **ತಸ್ಥುಃ** = ನಿಂತರು. **ಪಾರ್ಥಸ್ಯ** = ಅರ್ಜುನನ, **ತತ್** = ಆ, **ಅಮಾನುಷಂ** = ಅಮಾನುಷವಾದ, **ಕರ್ಮ** = ಕರ್ಮವನ್ನು, **ದೃಷ್ಟ್ವಾ** = ನೋಡಿ, **ಗುರೋಃ ಸುತಃ** = ಗುರುವಿನ ಪುತ್ರನಾದ ಅಶ್ವತ್ಥಾಮನು, **ಪಾಣಿನಾ** = ಕೈಯಿಂದ, **ಪಾಣಿಂ** = ಕೈಯನ್ನು, **ಗೃಹೀತ್ವಾ** = ಹಿಡಿದುಕೊಂಡು, **ದುರ್ಯೋಧನಂ** = ದುರ್ಯೋಧನನನ್ನು ಕುರಿತು, **ಅಭಾಷತ** = ಹೇಳಿದ.

**ತಾತ್ಪರ್ಯ** :- ಅವರೆಲ್ಲ ಅದ್ಭುತವಾದ ಆ ಯುದ್ಧವನ್ನು ನೋಡುತ್ತಾ ಸ್ವಲ್ಪ ದೂರದಲ್ಲಿ ನಿಂತರು. ಅರ್ಜುನನ ಅತಿಮಾನುಷವಾದ ಆ ಕಾರ್ಯವನ್ನು ನೋಡಿ ಅಶ್ವತ್ಥಾಮ ತನ್ನ ಕೈಯಿಂದ ದುರ್ಯೋಧನನ ಕೈ ಹಿಡಿದುಕೊಂಡು ಅವನಿಗೆ ಹೇಳಿದ.

**ದೃಷ್ಟಂ ಹಿ ಭೀಮಸ್ಯ ಬಲಂ ತ್ವಯಾಽದ್ಯ**
**ತಥೈವ ಪಾರ್ಥಸ್ಯ ಯಥಾ ಜಿತಾ ವಯಮ್ ।**
**ಅಲಂ ವಿರೋಧೇನ ಸಮೇತ್ಯ ಪಾಂಡವೈಃ**
**ಪ್ರಶಾಧಿ ರಾಜ್ಯಂ ಚ ಮಯಾ ಸಮೇತಃ ॥ ೧೭೦ ॥**

ದೃಷ್ಟಂ ಹಿ ಭೀಮಸ್ಯ ಬಲಂ ತ್ವಯಾ ಅದ್ಯ ತಥಾ ಏವ ಪಾರ್ಥಸ್ಯ ಯಥಾ ಜಿತಾಃ ವಯಮ್ । ಅಲಂ ವಿರೋಧೇನ ಸಮೇತ್ಯ ಪಾಂಡವೈಃ ಪ್ರಶಾಧಿ ರಾಜ್ಯಂ ಚ ಮಯಾ ಸಮೇತಃ ॥ ೧೭೦ ॥

**ಅರ್ಥ** :- **ತ್ವಯಾ** = ನಿನ್ನಿಂದ, **ಅದ್ಯ** = ಈಗ, **ಭೀಮಸ್ಯ** = ಭೀಮನ, **ತಥಾ ಏವ** = ಹಾಗೆಯೇ, **ಪಾರ್ಥಸ್ಯ** = ಅರ್ಜುನನ, **ಬಲಂ** = ಬಲವು, **ದೃಷ್ಟಂ** = **ಹಿ** = ನಿಶ್ಚಯವಾಗಿಯೂ ನೋಡಲ್ಪಟ್ಟಿದೆ. **ಯಥಾ** = ಹೇಗೆ, **ವಯಂ** = ನಾವೆಲ್ಲಾ, **ಜಿತಾಃ** = ಸೋತವರು, **(ಇತಿ ದೃಷ್ಟಂ)** = ಎಂದು ನೋಡಲ್ಪಟ್ಟಿದೆ. **ವಿರೋಧೇನ ಅಲಂ** = ವಿರೋಧ ಸಾಕು. **ಪಾಂಡವೈಃ** = ಪಾಂಡವರಿಂದ, **ಸಮೇತ್ಯ** = ಕೂಡಿಕೊಂಡು, **ಮಯಾ** = ನನ್ನಿಂದ, **ಸಮೇತಃ (ಸನ್)** = ಕೂಡಿಕೊಂಡವನಾಗಿ, **ರಾಜ್ಯಂ ಚ** = ರಾಜ್ಯವನ್ನೂ, **ಪ್ರಶಾಧಿ** = ಪಾಲಿಸು.

**ತಾತ್ಪರ್ಯ** :- ''ನೀನೀಗ ಭೀಮನ ಬಲವನ್ನು ಹಾಗೆಯೇ ಅರ್ಜುನನ ಬಲವನ್ನು ನೋಡಿದೆ; ಅವರಿಂದ ನಾವೆಲ್ಲಾ ಹೇಗೆ ಸೋತೆವು ಎಂಬುದನ್ನು ನೋಡಿದೆ. ಇನ್ನು ಪಾಂಡವರೊಂದಿಗೆ ವಿರೋಧ ಸಾಕು. ಅವರೊಂದಿಗೆ ಜೊತೆಗೂಡಿ ರಾಜ್ಯವನ್ನು ಪಾಲಿಸು. ನಾನು ನಿನ್ನೊಂದಿಗಿರುವೆ.

### ಪಾಂಡವರು ಶಾಂತಿಪ್ರಿಯರು

**ಧನಂಜಯಸ್ತಿಷ್ಠತಿ ವಾರಿತೋ ಮಯಾ**
**ಜನಾರ್ದನೋ ನೈವ ವಿರೋಧಮಿಚ್ಛತಿ ।**
**ವೃಕೋದರಸ್ತದ್ವಚನೇ ಸ್ಥಿತಃ ಸದಾ**
**ಯುಧಿಷ್ಠಿರಃ ಶಾಂತಮನಾಸ್ತಥಾ ಯಮೌ ॥ ೧೭೧ ॥**

ಧನಂಜಯಃ ತಿಷ್ಠತಿ ವಾರಿತಃ ಮಯಾ ಜನಾರ್ದನಃ ನ ಏವ ವಿರೋಧಂ ಇಚ್ಛತಿ । ವೃಕೋದರಃ ತದ್ವಚನೇ ಸ್ಥಿತಃ ಸದಾ ಯುಧಿಷ್ಠಿರಃ ಶಾಂತಮನಾಃ ತಥಾ ಯಮೌ ॥ ೧೭೧ ॥

**ಅರ್ಥ** :- **ಮಯಾ** = ನನ್ನಿಂದ, **ವಾರಿತಃ** = ತಡೆಯಲ್ಪಟ್ಟ, **ಧನಂಜಯಃ** = ಅರ್ಜುನನು, **ತಿಷ್ಠತಿ** = (ಯುದ್ಧವನ್ನು ತೊರೆದು) ನಿಲ್ಲುವನು. **ಜನಾರ್ದನಃ** = ಕೃಷ್ಣನು, **ವಿರೋಧಂ** = ವಿರೋಧವನ್ನು,

**ನ ಇಚ್ಛತಿ ಏವ** = ಬಯಸುವುದೇ ಇಲ್ಲ. **ವೃಕೋದರಃ** = ಭೀಮನು, **ಸದಾ** = ಯಾವಾಗಲೂ, **ತದ್ವಚನೇ** = ಆ ಕೃಷ್ಣನ ಮಾತಿನಲ್ಲಿ, **ಸ್ಥಿತಃ** = ಇರುವವನು. **ಯುಧಿಷ್ಠಿರಃ** = ಯುಧಿಷ್ಠಿರನು, **ಶಾಂತಮನಾಃ** = ಶಾಂತಮನಸ್ಸಿನವನು. **ತಥಾ** = ಹಾಗೆಯೇ, **ಯಮೌ** = ಅವಳಿಗಳಾದ ನಕುಲ–ಸಹದೇವರು.

**ತಾತ್ಪರ್ಯ** :- ''ನಾನು ತಡೆದರೆ ಅರ್ಜುನ ಯುದ್ಧ ನಿಲ್ಲಿಸುವನು. ಕೃಷ್ಣನಂತೂ ಸರ್ವಥಾ ವಿರೋಧವನ್ನು ಬಯಸನು. ಭೀಮನು ಸದಾ ಕೃಷ್ಣನ ಮಾತಿನಂತೆ ನಡೆಯುವವನು. ಯುಧಿಷ್ಠಿರ ಶಾಂತಮನಸ್ಕ, ನಕುಲ, ಸಹದೇವರೂ ಅಂಥವರೇ''.

**ಹಿತಾರ್ಥಮೇತತ್ ತವ ವಾಕ್ಯಮೀರಿತಂ**
**ಗೃಹಾಣ ಮೇ ನೈವ ಭಯಾದುದೀರಿತಮ್ ।**
**ಅಹಂ ಹ್ಯವಧ್ಯೋ ಮಮ ಚೈವ ಮಾತುಲೋ**
**ನ ಶಂಕಿತುಂ ಮೇ ವಚನಂ ತ್ವಮರ್ಹಸಿ ॥ ೧೭೨ ॥**

**ಹಿತಾರ್ಥಂ ಏತತ್ ತವ ವಾಕ್ಯಂ ಈರಿತಂ ಗೃಹಾಣ ಮೇ ನ ಏವ ಭಯಾತ್ ಉದೀರಿತಮ್ । ಅಹಂ ಹಿ ಅವಧ್ಯಃ ಮಮ ಚ ಏವ ಮಾತುಲಃ ನ ಶಂಕಿತುಂ ಮೇ ವಚನಂ ತ್ವಂ ಅರ್ಹಸಿ ॥ ೧೭೨ ॥**

**ಅರ್ಥ** :– **ಮೇ** = ನನ್ನಿಂದ, **ತವ** = ನಿನ್ನ, **ಹಿತಾರ್ಥಂ** = ಹಿತಕ್ಕೋಸ್ಕರವಾಗಿ, **ಈರಿತಂ** = ಹೇಳಲ್ಪಟ್ಟ, **ಏತತ್** = ಈ **ವಾಕ್ಯಂ** = ವಾಕ್ಯವನ್ನು, **ಗೃಹಾಣ** = ಸ್ವೀಕರಿಸು. **(ಏತತ್) ಭಯಾತ್** = ಇದು ಭಯದಿಂದ, **ನ ಉದೀರಿತಂ ಏವ** = ಹೇಳಿದ್ದಲ್ಲ. **ಹಿ** = ಯಾವ ಕಾರಣದಿಂದ, **ಅಹಂ** = ನಾನು, **ಅವಧ್ಯಃ** = ವಧಿಸಲಾಗದವನೋ, **ಮಮ** = ನನ್ನ, **ಮಾತುಲಃ ಚ** = ಸೋದರಮಾವನೂ ಸಹ, **(ಅವಧ್ಯಃ) ಏವ ಹಿ** = ಅವಧ್ಯನೇ ಆಗಿರುವನೋ. **(ತಸ್ಮಾತ್)** = ಆ ಕಾರಣದಿಂದ, **ಮೇ** = ನನ್ನ, **ವಚನಂ** = ವಚನವನ್ನು, **ಶಂಕಿತುಂ** = (ಭಯದಿಂದ ಹೇಳಲ್ಪಟ್ಟದ್ದೆಂದು) ಶಂಕಿಸಲು, **ನ ಅರ್ಹಸಿ** = ಅರ್ಹನಲ್ಲ.

**ತಾತ್ಪರ್ಯ** :- ನಾನು ನಿನ್ನ ಹಿತಕ್ಕೆಂದು ಈ ಮಾತು ಆಡಿದೆ, ಅರ್ಥಮಾಡಿಕೋ. ನಾನು ಭಯದಿಂದ ಇದನ್ನು ನುಡಿದದ್ದಲ್ಲ. ನಾನಂತೂ

ಅವಧ್ಯ; ನನ್ನ ಸೋದರಮಾವನಾದ ಕೃಪನೂ ಹಾಗೆಯೇ. ನನ್ನ ಮಾತಿನಲ್ಲಿ ನೀನು ಸಂದೇಹಪಡಬೇಕಿಲ್ಲ.

ದುರ್ಯೋಧನನ ನಿರಾಕರಣೆ

**ಇತೀರಿತಃ ಪ್ರಾಹ ಸುಯೋಧನಸ್ತಂ**
**ದುಃಶಾಸನಸ್ಯಾದ್ಯ ಪಪೌ ಹಿ ಶೋಣಿತಮ್ ।**
**ಶಾರ್ದೂಲಚೇಷ್ಟಾಮಕರೋಚ್ಚ ಭೀಮೋ**
**ನ ಮೇ ಕಥಂಚಿತ್ ತದನೇನ ಸಂಧಿಃ ॥ ೧೭೩ ॥**

**ಇತಿ ಈರಿತಃ ಪ್ರಾಹ ಸುಯೋಧನಃ ತಂ ದುಃಶಾಸನಸ್ಯ ಅದ್ಯ ಪಪೌ ಹಿ ಶೋಣಿತಮ್ । ಶಾರ್ದೂಲಚೇಷ್ಟಾಂ ಅಕರೋತ್ ಚ ಭೀಮಃ ನ ಮೇ ಕಥಂಚಿತ್ ತದನೇನ ಸಂಧಿಃ ॥ ೧೭೩ ॥**

**ಅರ್ಥ** :– **ಇತಿ** = ಹೀಗೆ, **ಈರಿತಃ** = ಹೇಳಲ್ಪಟ್ಟ, **ಸುಯೋಧನಃ** = ದುರ್ಯೋಧನನು, **ತಂ** = ಅವನನ್ನು ಕುರಿತು, **ಪ್ರಾಹ** = ಹೇಳಿದ. **ಹಿ** = ಯಾವ ಕಾರಣದಿಂದ, **ಭೀಮಃ** = ಭೀಮನು, **ಅದ್ಯ** = ಈಗ, **ದುಃಶಾಸನಸ್ಯ** = ದುಃಶಾಸನನ, **ಶೋಣಿತಂ** = ರಕ್ತವನ್ನು, **ಪಪೌ** = ಕುಡಿದನೋ, **ಶಾರ್ದೂಲಚೇಷ್ಟಾಂ ಚ** = ಹುಲಿಯ ಚೇಷ್ಟೆಯನ್ನು ಸಹ, **ಅಕರೋತ್** = ಮಾಡಿದನೋ, **(ತಸ್ಮಾತ್)** = ಆ ಕಾರಣದಿಂದ, **ಮೇ** = ನನಗೆ, **ತದನೇನ** = ಇವನೊಂದಿಗೆ, **ಕಥಂಚಿತ್** = ಯಾವ ರೀತಿಯಲ್ಲೂ, **ಸಂಧಿಃ** = ಸಂಧಿಯು, ನ **(ಸ್ಯಾತ್)** = ಆಗದು.

**ತಾತ್ಪರ್ಯ** :- ಅಶ್ವತ್ಥಾಮ ಹೀಗೆನ್ನಲು ದುರ್ಯೋಧನ ತಿಳಿಸಿದ - ಭೀಮ ಈಗ ದುಶ್ಶಾಸನನ ರಕ್ತ ಕುಡಿದ; ಹುಲಿಯಂತೆ ವರ್ತಿಸಿದ; ಆದ್ದರಿಂದ ಇವನೊಂದಿಗೆ ನನಗೆ ಎಂದೂ, ಯಾವ ರೀತಿಯಲ್ಲೂ ಸಂಧಿ ಸಾಧ್ಯವಿಲ್ಲ.

ಕರ್ಣಾರ್ಜುನರ ಮಹಾಯುದ್ಧ

**ಇತ್ಯುಕ್ತೋ ದ್ರೌಣಿರಾಸೀತ್ ಸ ತೂಷ್ಣೀಂ ಕರ್ಣಧನಂಜಯೌ ।**
**ಮಹಾಸ್ತ್ರಶಸ್ತ್ರವರ್ಷೇಣ ಚಕ್ರತುಃ ಖಮನಂತರಮ್ ॥ ೧೭೪ ॥**

**ಇತಿ ಉಕ್ತಃ ದ್ರೌಣಿಃ ಆಸೀತ್ ಸಃ ತೂಷ್ಣೀಂ ಕರ್ಣಧನಂಜಯೌ । ಮಹಾಸ್ತ್ರ ಶಸ್ತ್ರವರ್ಷೇಣ ಚಕ್ರತುಃ ಖಂ ಅನಂತರಮ್ ॥ ೧೭೪ ॥**

**ಅರ್ಥ :-** **ಇತಿ** = ಹೀಗೆ, **ಉಕ್ತಃ** = ಹೇಳಲ್ಪಟ್ಟ, **ಸಃ ದ್ರೌಣಿಃ** = ಆ ಅಶ್ವತ್ಥಾಮನು, **ತೂಷ್ಣೀಂ ಆಸೀತ್** = ಸುಮ್ಮನಾದ. **ಕರ್ಣಧನಂಜಯೌ** = ಕರ್ಣ-ಅರ್ಜುನರು, **ಮಹಾಸ್ತ್ರಶಸ್ತ್ರವರ್ಷೇಣ** = ಮಹಾಸ್ತ್ರಶಸ್ತ್ರಗಳ ಸುರಿಮಳೆಯಿಂದ, **ಖಂ** = ಆಕಾಶವನ್ನು, **ಅನಂತರಂ** = ಅವಕಾಶ ವಿಲ್ಲದ್ದನ್ನಾಗಿ, **ಚಕ್ರತುಃ** = ಮಾಡಿದರು.

**ತಾತ್ಪರ್ಯ :-** ದುರ್ಯೋಧನ ಹೀಗೆನ್ನಲು ಅಶ್ವತ್ಥಾಮ ಸುಮ್ಮನಾದ. ಕರ್ಣಾರ್ಜುನರು ಮಹಾಸ್ತ್ರಶಸ್ತ್ರಗಳ ಸುರಿಮಳೆಯಿಂದ ಆಕಾಶವನ್ನು ಎಡೆಯಿಲ್ಲದ್ದನ್ನಾಗಿ ಮಾಡಿದರು.

**ಆಗ್ನೇಯವಾರುಣೈಂದ್ರಾದೀನ್ಯೇತಾನ್ಯನ್ಯೋನ್ಯಮೃತ್ಯವೇ ।**
**ಬ್ರಹ್ಮಾಸ್ತ್ರಮಪ್ಯುಭೌ ತತ್ರ ಪ್ರಯುಜ್ಯಾನದತಾಂ ರಣೇ ।**
**ಅನ್ಯೋನ್ಯಾಸ್ತ್ರಪ್ರತೀಘಾತಂ ಕೃತ್ವೋಭೌ ಚ ವಿರೇಜತುಃ ॥ ೧೭೫ ॥**

**ಆಗ್ನೇಯವಾರುಣೈಂದ್ರಾದೀನಿ ಏತಾನಿ ಅನ್ಯೋನ್ಯಮೃತ್ಯವೇ । ಬ್ರಹ್ಮಾಸ್ತ್ರಂ ಅಪಿ ಉಭೌ ತತ್ರ ಪ್ರಯುಜ್ಯ ಅನದತಾಂ ರಣೇ । ಅನ್ಯೋನ್ಯಾಸ್ತ್ರಪ್ರತೀಘಾತಂ ಕೃತ್ವಾ ಉಭೌ ಚ ವಿರೇಜತುಃ ॥ ೧೭೫ ॥**

**ಅರ್ಥ :-** **ಅನ್ಯೋನ್ಯಮೃತ್ಯವೇ** = ಪರಸ್ಪರರ ಮೃತ್ಯುವಿಗಾಗಿ, **ಏತಾನಿ** = **ಆಗ್ನೇಯವಾರುಣೈಂದ್ರಾದೀನಿ** = ಈ ಆಗ್ನೇಯ-ವಾರುಣ-ಐಂದ್ರ ಮೊದಲಾದವುಗಳನ್ನು, **ಬ್ರಹ್ಮಾಸ್ತ್ರಂ ಅಪಿ** = ಬ್ರಹ್ಮಾಸ್ತ್ರವನ್ನೂ ಸಹ, **ಉಭೌ** = ಇಬ್ಬರೂ, **ತತ್ರ ರಣೇ** = ಆ ಯುದ್ಧದಲ್ಲಿ, **ಪ್ರಯುಜ್ಯ** = ಪ್ರಯೋಗಿಸಿ, **ಅನದತಾಂ** = ಸಿಂಹನದ ಮಾಡಿದರು. **ಉಭೌ ಚ** = ಇಬ್ಬರೂ ಸಹ, **ಅನ್ಯೋನ್ಯಾಸ್ತ್ರಪ್ರತೀಘಾತಂ** = ಪರಸ್ಪರರ ಅಸ್ತ್ರಗಳ ಪರಿಹಾರವನ್ನು, **ಕೃತ್ವಾ** = ಮಾಡಿ, **ವಿರೇಜತುಃ** = ವಿರಾಜಿಸಿದರು.

**ತಾತ್ಪರ್ಯ :-** ಅವರಿಬ್ಬರು ಪರಸ್ಪರರನ್ನು ಕೊಲ್ಲಲೆಂದು ಆಗ್ನೇಯಾಸ್ತ್ರ, ವಾರುಣಾಸ್ತ್ರ, ಐಂದ್ರಾಸ್ತ್ರ ಮೊದಲಾದವುಗಳನ್ನು ಪ್ರಯೋಗಿಸಿದರು. ಕೊನೆಗೆ ಇಬ್ಬರೂ ಯುದ್ಧದಲ್ಲಿ ಬ್ರಹ್ಮಾಸ್ತ್ರವನ್ನೂ ಪ್ರಯೋಗಿಸಿ ಸಿಂಹನಾದ ಮಾಡಿದರು. ಇಬ್ಬರೂ ಪರಸ್ಪರರ ಅಸ್ತ್ರಗಳ ಪ್ರತೀಕಾರವನ್ನು ಮಾಡಿ ಮೆರೆಯ ತೊಡಗಿದರು.

### ಗುರಿತಪ್ಪಿದ ಸರ್ಪಾಸ್ತ್ರ

ಕ್ರಮೇಣ ವೃದ್ಧೋರುಬಲೇನ ತತ್ರ
ಸುರೇಂದ್ರಪುತ್ರೇಣ ವಿರೋಚನಾತ್ಮಜಃ ।
ನಿರಾಕೃತೋ ನಾಗಮಯಂ ಶರೋತ್ತಮಂ
ಬ್ರಹ್ಮಾಸ್ತ್ರಯುಕ್ತಂ ವಿಸಸರ್ಜ ವಾಸವೌ ॥ ೧೭೬ ॥

ಕ್ರಮೇಣ ವೃದ್ಧೋರುಬಲೇನ ತತ್ರ ಸುರೇಂದ್ರಪುತ್ರೇಣ ವಿರೋಚನಾತ್ಮಜಃ । ನಿರಾಕೃತಃ ನಾಗಮಯಂ ಶರೋತ್ತಮಂ ಬ್ರಹ್ಮಾಸ್ತ್ರಯುಕ್ತಂ ವಿಸಸರ್ಜ ವಾಸವೌ ॥ ೧೭೬ ॥

**ಅರ್ಥ** :- **ಕ್ರಮೇಣ** = ಕ್ರಮವಾಗಿ, **ತತ್ರ** = ಆ ಯುದ್ಧದಲ್ಲಿ, **ವೃದ್ಧೋರುಬಲೇನ** = ವರ್ಧಿಸಿದ ಹೆಚ್ಚಿನ ಬಲವುಳ್ಳ, **ಸುರೇಂದ್ರಪುತ್ರೇಣ** = ಸುರೇಂದ್ರಪುತ್ರನಾದ ಅರ್ಜುನನಿಂದ, **ವಿರೋಚನಾತ್ಮಜಃ** = ಸೂರ್ಯಪುತ್ರನಾದ ಕರ್ಣನು, **ನಿರಾಕೃತಃ (ಸನ್)** = ನಿರಾಕೃತನಾದವನಾಗಿ, **ಬ್ರಹ್ಮಾಸ್ತ್ರಯುಕ್ತಂ** = ಬ್ರಹ್ಮಾಸ್ತ್ರದಿಂದ ಕೂಡಿದ, **ನಾಗಮಯಂ** = ನಾಗಮಯವಾದ, **ಶರೋತ್ತಮಂ** = ಉತ್ತಮಬಾಣವನ್ನು, **ವಾಸವೌ** = ಅರ್ಜುನನ ಮೇಲೆ, **ವಿಸಸರ್ಜ** = ಬಿಟ್ಟ.

**ತಾತ್ಪರ್ಯ** :- ಅರ್ಜುನನ ಬಲ ಕ್ರಮವಾಗಿ ಹೆಚ್ಚುತ್ತಾ ಹೋಯಿತು. ಅವನೊಂದಿಗೆ ಕಾದಲಾಗದ ಕರ್ಣ ಬ್ರಹ್ಮಾಸ್ತ್ರದಿಂದ ಕೂಡಿದ್ದ ನಾಗಮಯವಾದ ಉತ್ತಮ ಬಾಣವೊಂದನ್ನು ಅರ್ಜುನನ ಮೇಲೆ ಪ್ರಯೋಗಿಸಿದ.

### ಶ್ರೀಕೃಷ್ಣನಿಂದ ಅರ್ಜುನನ ರಕ್ಷಣೆ

ತಂ ವಾಸುದೇವೋ ರಥಮಾನಮಯ್ಯ
ಮೋಘಂ ಚಕಾರಾರ್ಜುನತಃ ಕಿರೀಟಮ್ ।
ಚೂರ್ಣೀಕೃತಂ ತೇನ ಸುರೇಂದ್ರಸೂನೋ-
ರ್ದಿವಂ ಯಯೌ ಬಾಣಗತಶ್ಚ ನಾಗಃ ॥ ೧೭೭ ॥

ತಂ ವಾಸುದೇವಃ ರಥಂ ಆನಮಯ್ಯ ಮೋಘಂ ಚಕಾರ ಅರ್ಜುನತಃ ಕಿರೀಟಮ್ । ಚೂರ್ಣೀಕೃತಂ ತೇನ ಸುರೇಂದ್ರಸೂನೋಃ ದಿವಂ ಯಯೌ ಬಾಣಗತಃ ಚ ನಾಗಃ ॥ ೧೭೭ ॥

**ಅರ್ಥ** :- **ವಾಸುದೇವಃ** = ಶ್ರೀಕೃಷ್ಣನು, **ರಥಂ** = ರಥವನ್ನು, **ಆನಮಯ್ಯ** = ಕೆಳಕ್ಕೆ ಮಾಡಿ, **ಅರ್ಜುನತಃ** = ಅರ್ಜುನನ ದೆಸೆಯಿಂದ, **ತಂ** = ಆ ಅಸ್ತ್ರವನ್ನು, **ಮೋಘಂ** = ವ್ಯರ್ಥವನ್ನಾಗಿ, **ಚಕಾರ** = ಮಾಡಿದನು. **ತೇನ** = ಅದರಿಂದ, **ಸುರೇಂದ್ರಸೂನೋಃ** = ಸುರೇಂದ್ರ ಪುತ್ರನಾದ ಅರ್ಜುನನ, **ಕಿರೀಟಂ** = ಕಿರೀಟವು, **ಚೂರ್ಣೀಕೃತಂ** = ಪುಡಿಮಾಡಲ್ಪಟ್ಟಿತು. **ಬಾಣಗತಃ** = ಬಾಣದಲ್ಲಿನ, **ನಾಗಃ ಚ** = ನಾಗವು ಸಹ, **ದಿವಂ** = ಅಂತರಿಕ್ಷವನ್ನು ಕುರಿತು, **ಯಯೌ** = ಹೋಯಿತು.

**ತಾತ್ಪರ್ಯ** :- ಕೃಷ್ಣ ರಥವನ್ನು ಕೆಳಕ್ಕೆ ಒತ್ತಿ ಆ ಅಸ್ತ್ರವನ್ನು ವ್ಯರ್ಥ ಗೊಳಿಸಿದ. ಅದು ಇಂದ್ರಪುತ್ರನಾದ ಅರ್ಜುನನ ಕಿರೀಟವನ್ನು ಪುಡಿಗೈದಿತು. ಬಾಣದೊಳಗಿದ್ದ ನಾಗ ಗಗನಕ್ಕೆ ನೆಗೆಯಿತು.

**ನಮಿತೇ ವಾಸುದೇವೇನ ರಥೇ ಪಂಚಾಂಗುಲಂ ಭುವಿ ।**
**ಅಪಾಂಗದೇಶಮುದ್ದಿಶ್ಯ ಮುಕ್ತೇ ನಾಗೇ ಕಿರೀಟಿನಃ ॥ ೧೭೮ ॥**

ನಮಿತೇ ವಾಸುದೇವೇನ ರಥೇ ಪಂಚಾಂಗುಲಂ ಭುವಿ । ಅಪಾಂಗದೇಶಂ ಉದ್ದಿಶ್ಯ ಮುಕ್ತೇ ನಾಗೇ ಕಿರೀಟಿನಃ ॥ ೧೭೮ ॥

**ಭಂಕ್ತ್ವಾ ಕಿರೀಟಂ ವಿಯತಿ ಗಚ್ಛತಿ ಪ್ರಭುಣೋದಿತಃ ।**
**ಬಾಣೈಸ್ತಕ್ಷಕಪುತ್ರಂ ತಂ ವಾಸವಿಃ ಪೂರ್ವವೈರಿಣಮ್ ॥ ೧೭೯ ॥**

ಭಂಕ್ತ್ವಾ ಕಿರೀಟಂ ವಿಯತಿ ಗಚ್ಛತಿ ಪ್ರಭುಣಾ ಉದಿತಃ । ಬಾಣೈಃ ತಕ್ಷಕಪುತ್ರಂ ತಂ ವಾಸವಿಃ ಪೂರ್ವವೈರಿಣಮ್ ॥ ೧೭೯ ॥

**ಹತ್ವಾ ನಿಪಾತಯಾಮಾಸ ಭೂಮೌ ಕರ್ಣಸ್ಯ ಪಶ್ಯತಃ ।**
**ಬ್ರಹ್ಮಾಸ್ತ್ರಸ್ಯಾತಿವೇಗಿತ್ವಂ ಪ್ರಾಪ್ತಂ ಕರ್ಣೇನ ಭಾರ್ಗವಾತ್ ॥ ೧೮೦ ॥**

ಹತ್ವಾ ನಿಪಾತಯಾಮಾಸ ಭೂಮೌ ಕರ್ಣಸ್ಯ ಪಶ್ಯತಃ । ಬ್ರಹ್ಮಾಸ್ತ್ರಸ್ಯ ಅತಿವೇಗಿತ್ವಂ ಪ್ರಾಪ್ತಂ ಕರ್ಣೇನ ಭಾರ್ಗವಾತ್ ॥ ೧೮೦ ॥

**ಅರ್ಥ** :- **ವಾಸುದೇವೇನ** = ಕೃಷ್ಣನಿಂದ, **ಭುವಿ** = ಭೂಮಿಯಲ್ಲಿ, **ಪಂಚಾಂಗುಲಂ** = ಐದು ಅಂಗುಲದಷ್ಟು, **ರಥೇ** = ರಥವು, **ನಮಿತೇ (ಸತಿ)** = ಕೆಳಕ್ಕೆ ಒತ್ತಲ್ಪಟ್ಟಾಗ, **ಕಿರೀಟಿನಃ** = ಅರ್ಜುನನ, **ಅಪಾಂಗದೇಶಂ**

= ಅಪಾಂಗಪ್ರದೇಶವನ್ನು, **ಉದ್ದಿಶ್ಯ** = ಉದ್ದಿಶವಾಗಿಟ್ಟಿಕೊಂಡು, **ಮುಕ್ತೇ** = ಬಿಡಲ್ಪಟ್ಟ, **ನಾಗೇ** = ನಾಗಬಾಣವು, **ಕಿರೀಟಿನಃ** = ಅರ್ಜುನನ, **ಕಿರೀಟಂ** = ಕಿರೀಟವನ್ನು, **ಭಂಕ್ತ್ವಾ** = ಛೇದಿಸಿ, **ವಿಯತಿ** = ಆಕಾಶದಲ್ಲಿ, **ಗಚ್ಛತಿ (ಸತಿ)** = ಹೋಗುತ್ತಿರಲು, **ಪ್ರಭುಣಾ** = ಪ್ರಭುವಾದ ಕೃಷ್ಣನಿಂದ, **ಉದಿತಃ** = ಹೇಳಲ್ಪಟ್ಟ, **ವಾಸವಿಃ** = ಅರ್ಜುನನು, **ಬಾಣೈಃ** = ಬಾಣಗಳಿಂದ, **ತಂ ಪೂರ್ವವೈರಿಣಂ** = ಆ ಪೂರ್ವಶತ್ರುವಾದ, **ತಕ್ಷಕಪುತ್ರಂ** = ತಕ್ಷಕಪುತ್ರನನ್ನು, **ಹತ್ವಾ** = ಕೊಂದು, **ಕರ್ಣಸ್ಯ** = ಕರ್ಣನು, **ಪಶ್ಯತಃ (ಸತಃ)** = ನೋಡುತ್ತಿರುವಂತೆಯೇ, **ಭೂಮೌ** = ಭೂಮಿಯಲ್ಲಿ, **ನಿಪಾತಯಾಮಾಸ** = ಬೀಳಿಸಿದ. **ಬ್ರಹ್ಮಾಸ್ತ್ರಸ್ಯ** = ಬ್ರಹ್ಮಾಸ್ತ್ರದ, **ಅತಿವೇಗಿತ್ವಂ** = ಅತಿವೇಗಿತ್ವವು, **ಭಾರ್ಗವಾತ್** = ಪರಶುರಾಮದೇವರ ಮೂಲಕ, **ಕರ್ಣೇನ** = ಕರ್ಣನಿಂದ, **ಪ್ರಾಪ್ತಂ** = ಪ್ರಾಪ್ತವಾದುದು.

**ತಾತ್ಪರ್ಯ** :- ಶ್ರೀಕೃಷ್ಣನಿಂದ ಅರ್ಜುನನ ರಥ ಭೂಮಿಯಲ್ಲಿ ಐದು ಅಂಗುಲದಷ್ಟು ಒತ್ತಲ್ಪಟ್ಟಾಗ ಅವನ ಅಪಾಂಗ ಪ್ರದೇಶದತ್ತ ಪ್ರಯೋಗಿಸಲ್ಪಟ್ಟಿದ್ದ ಆ ನಾಗ ಅರ್ಜುನನ ಕಿರೀಟವನ್ನು ಪುಡಿಮಾಡಿ ಗಗನದಲ್ಲಿ ತೆರಳುತ್ತಿದ್ದಾಗ ಪ್ರಭುವಾದ ಕೃಷ್ಣನಿಂದ ಹೇಳಲ್ಪಟ್ಟ ಅರ್ಜುನ ಪೂರ್ವ ವೈರಿಯಾದ ಆ ತಕ್ಷಕಪುತ್ರನನ್ನು ಬಾಣಗಳಿಂದ ಕೊಂದು ಕರ್ಣ ನೋಡುತ್ತಿದ್ದಂತೆಯೇ ಭೂಮಿಗೆ ಕೆಡವಿದ. ಪರಶುರಾಮನಿಂದ ಕರ್ಣ ಬ್ರಹ್ಮಾಸ್ತ್ರವನ್ನು ಅತ್ಯಂತ ವೇಗದಿಂದ ಪ್ರಯೋಗಿಸುವುದನ್ನು ತಿಳಿದಿದ್ದ.

### ಕರ್ಣನಿಗೆ ಅಸ್ತ್ರಗಳ ವಿಸ್ಮೃತಿ

**ಪುನಶ್ಚ ಪಾರ್ಥೇನ ಮಹಾಸ್ತ್ರಯುದ್ಧಂ**
**ಪ್ರಕುರ್ವತಃ ಸೂರ್ಯಸುತಸ್ಯ ಚಕ್ರಮ್ ।**
**ರಥಸ್ಯ ಭೂಮಿರ್ಗ್ರಸತಿ ಸ್ಮ ಶಾಪಾ-**
**ದಸ್ತ್ರಾಣಿ ದಿವ್ಯಾನಿ ಚ ವಿಸ್ಮೃತಿಂ ಯಯುಃ ॥ ೧೮೧ ॥**

ಪುನಃ ಚ ಪಾರ್ಥೇನ ಮಹಾಸ್ತ್ರಯುದ್ಧಂ ಪ್ರಕುರ್ವತಃ ಸೂರ್ಯಸುತಸ್ಯ ಚಕ್ರಮ್ । ರಥಸ್ಯ ಭೂಮಿಃ ಗ್ರಸತಿ ಸ್ಮ ಶಾಪಾತ್ ಅಸ್ತ್ರಾಣಿ ದಿವ್ಯಾನಿ ಚ ವಿಸ್ಮೃತಿಂ ಯಯುಃ ॥ ೧೮೧ ॥

**ಅರ್ಥ** :- **ಪುನಃ ಚ** = ಮತ್ತೆ, **ಪಾರ್ಥೇನ** = ಅರ್ಜುನನೊಂದಿಗೆ, **ಮಹಾಸ್ತ್ರಯುದ್ಧಂ** = ಮಹಾಸ್ತ್ರಯುದ್ಧವನ್ನು, **ಪ್ರಕುರ್ವತಃ** = ಮಾಡತೊಡಗಿದ, **ಸೂರ್ಯಸುತಸ್ಯ** = ಸೂರ್ಯಪುತ್ರನಾದ ಕರ್ಣನ, **ರಥಸ್ಯ** = ರಥದ, **ಚಕ್ರಂ** = ಚಕ್ರವನ್ನು, **ಶಾಪಾತ್** = ಶಾಪದಿಂದಾಗಿ, **ಭೂಮಿಃ** = ಭೂಮಿಯು, **ಗ್ರಸತಿ ಸ್ಮ** = ನುಂಗತೊಡಗಿತು. (**ಶಾಪಾತ್**) = ಶಾಪದಿಂದಾಗಿ, **ದಿವ್ಯಾನಿ** = ದಿವ್ಯವಾದ, **ಅಸ್ತ್ರಾಣಿ ಚ** = ಅಸ್ತ್ರಗಳೂ ಸಹ, **ವಿಸ್ಮೃತಿಂ** = ಸ್ಮರಣೆಗೆ ಬಾರದೆ, **ಯಯುಃ** = ಹೋದವು.

**ತಾತ್ಪರ್ಯ** :- ಮತ್ತೆ ಅರ್ಜುನನೊಂದಿಗೆ ಕರ್ಣ ಮಹಾಸ್ತ್ರಯುದ್ಧವನ್ನು ಮಾಡತೊಡಗಿದಾಗ ಅವನ ರಥದ ಚಕ್ರವನ್ನು ಭೂಮಿ ನುಂಗತೊಡಗಿತು. ಆಗಲೇ ಪರಶುರಾಮರ ಶಾಪದಿಂದ ಅವನಿಗೆ ದಿವ್ಯಾಸ್ತ್ರಗಳೂ ಸ್ಮರಣೆಗೆ ಬಾರದಾದವು.

ಭೂಮಿ ನುಂಗಿದ ರಥಚಕ್ರ

**ಉದ್ಧರ್ತುಕಾಮೋ ರಥಚಕ್ರಮೇವ**
**ಪಾರ್ಥಂ ಯಯಾಚೇಽವಸರಂ ಪ್ರದಾತುಮ್ ।**
**ನೇತ್ಯಾಹ ಕೃಷ್ಣೋಽಂಜಲಿಕಂ ಸುಘೋರಂ**
**ತ್ರಿನೇತ್ರದತ್ತಂ ಜಗೃಹೇ ಚ ಪಾರ್ಥಃ ॥ ೧೮೨ ॥**

**ಉದ್ಧರ್ತುಕಾಮಃ ರಥಚಕ್ರಂ ಏವ ಪಾರ್ಥಂ ಯಯಾಚೇ ಅವಸರಂ ಪ್ರದಾತುಮ್ । ನ ಇತಿ ಆಹ ಕೃಷ್ಣಃ ಅಂಜಲಿಕಂ ಸುಘೋರಂ ತ್ರಿನೇತ್ರದತ್ತಂ ಜಗೃಹೇ ಚ ಪಾರ್ಥಃ ॥ ೧೮೨ ॥**

**ಅರ್ಥ** :- **ರಥಚಕ್ರಂ** = ರಥದ ಚಕ್ರವನ್ನು, **ಉದ್ಧರ್ತುಕಾಮಃ** = ಎತ್ತಲು ಬಯಸಿದ ಕರ್ಣನು, **ಪಾರ್ಥಂ** = ಅರ್ಜುನನನ್ನು, **ಅವಸರಂ** = ಅವಕಾಶವನ್ನು, **ಪ್ರದಾತುಂ** = ನೀಡಲು, **ಯಯಾಚೇ** = ಬೇಡಿದನು. **ಕೃಷ್ಣಃ** = ಕೃಷ್ಣನು, **ನ ಇತಿ** = ಇಲ್ಲ ಎಂದು, **ಆಹ** = ಹೇಳಿದ. **ಪಾರ್ಥಃ ಚ** = ಅರ್ಜುನನೂ ಸಹ, **ತ್ರಿನೇತ್ರದತ್ತಂ** = ಮುಕ್ಕಣ್ಣನು ನೀಡಿದ್ದ, **ಸುಘೋರಂ** = ಅತ್ಯಂತ ಭಯಂಕರವಾದ, **ಅಂಜಲಿಕಂ** (**ನಾಮ**) = ಅಂಜಲಿಕ ಎಂಬ ಅಸ್ತ್ರವನ್ನು, **ಜಗೃಹೇ** = ಕೈಗೆತ್ತಿಕೊಂಡ.

**ತಾತ್ಪರ್ಯ** :- ರಥಚಕ್ರವನ್ನು ಎತ್ತಲು ಬಯಸಿದ ಕರ್ಣ ಅದಕ್ಕೆ ಅವಕಾಶ ನೀಡಲು ಅರ್ಜುನನನ್ನು ಬೇಡಿಕೊಂಡ. ಕೃಷ್ಣ 'ಆಗದು' ಎಂದ. ಅರ್ಜುನ ಶಿವ ನೀಡಿದ್ದ ಅತ್ಯಂತ ಭಯಂಕರವಾದ ಅಂಜಲಿಕಾಸ್ತ್ರವನ್ನು ಕೈಗೆತ್ತಿಕೊಂಡ.

### ಅರ್ಜುನನಿಂದ ಕರ್ಣವಧೆ

**ಸತ್ಯೇನ ಧರ್ಮೇಣ ಚ ಸನ್ನಿಯೋಜ್ಯ**
**ಮುಮೋಚ ಕರ್ಣಸ್ಯ ವಧಾಯ ಬಾಣಮ್ ।**
**ಚಿಚ್ಛೇದ ತೇನೈವ ಚ ತಸ್ಯ ಶೀರ್ಷಂ**
**ಸಂಧಿತ್ಸತೋ ಬಾಣವರಂ ಸುಘೋರಮ್ ॥ ೧೮೩ ॥**

ಸತ್ಯೇನ ಧರ್ಮೇಣ ಚ ಸನ್ನಿಯೋಜ್ಯ ಮುಮೋಚ ಕರ್ಣಸ್ಯ ವಧಾಯ ಬಾಣಮ್ । ಚಿಚ್ಛೇದ ತೇನ ಏವ ಚ ತಸ್ಯ ಶೀರ್ಷಂ ಸಂಧಿತ್ಸತಃ ಬಾಣವರಂ ಸುಘೋರಮ್ ॥ ೧೮೩ ॥

**ಅರ್ಥ** :- **ಸತ್ಯೇನ** = ಸತ್ಯದಿಂದ, **ಧರ್ಮೇಣ ಚ** = ಧರ್ಮದಿಂದಲೂ, **ಬಾಣಂ** = ಬಾಣವನ್ನು, **ಸನ್ನಿಯೋಜ್ಯ** = ಜೊತೆಗೂಡಿಸಿ, **ಕರ್ಣಸ್ಯ** = ಕರ್ಣನ, **ವಧಾಯ** = ವಧೆಗೆಂದು, **ಮುಮೋಚ** = ಬಿಟ್ಟನು. **ಸುಘೋರಂ** = ಅತ್ಯಂತ ಘೋರವಾದ, **ಬಾಣವರಂ** = ಶ್ರೇಷ್ಠಬಾಣವನ್ನು, **ಸಂಧಿತ್ಸತಃ** = ಹೂಡಲು ಬಯಸಿದ್ದ, **ತಸ್ಯ** = ಆ ಕರ್ಣನ, **ಶೀರ್ಷಂ** = ತಲೆಯನ್ನು, **ತೇನ ಏವ** = ಆ ಬಾಣದಿಂದಲೇ, **ಚಿಚ್ಛೇದ** = ಕತ್ತರಿಸಿದ.

**ತಾತ್ಪರ್ಯ** :- ಅರ್ಜುನ ಸತ್ಯದೊಂದಿಗೂ, ಧರ್ಮದೊಂದಿಗೂ ಆ ಅಂಜಲಿಕಾಸ್ತ್ರವನ್ನು ಜೊತೆಗೂಡಿಸಿ ಅದನ್ನು ಕರ್ಣನ ವಧೆಗೆಂದು ಪ್ರಯೋಗಿಸಿದ. ಉತ್ತಮ ಬಾಣವೊಂದನ್ನು ಹೂಡಬಯಸಿದ್ದ ಕರ್ಣನ ತಲೆಯನ್ನು ಅದರಿಂದಲೇ ಕತ್ತರಿಸಿ ಹಾಕಿದ.

**ಅಪರಾಹ್ಣೇಽಪರಾಹ್ಣಸ್ಯ ಸೂರ್ಯಜಸ್ಯೇಂದ್ರಸೂನುನಾ ।**
**ಛಿನ್ನಮಂಜಲಿಕೇನಾಜೌ ಸೋತ್ಸೇಧಮಪತಚ್ಛಿರಃ ॥ ೧೮೪ ॥**

ಅಪರಾಹ್ಣೇ ಅಪರಾಹ್ಣಸ್ಯ ಸೂರ್ಯಜಸ್ಯ ಇಂದ್ರಸೂನುನಾ । ಛಿನ್ನಂ ಅಂಜಲಿಕೇನ ಆಜೌ ಸೋತ್ಸೇಧಂ ಅಪತತ್ ಶಿರಃ ॥ ೧೮೪ ॥

**ಅರ್ಥ** :– **ಅಪರಾಹ್ಣಸ್ಯ** = ಮರುದಿನದ, **ಅಪರಾಹ್ಣೇ** = ಅಪರಾಹ್ಣ ಕಾಲದಲ್ಲಿ, **ಆಜೌ** = ಯುದ್ಧದಲ್ಲಿ, **ಇಂದ್ರಸೂನುನಾ** = ಇಂದ್ರಪುತ್ರನಾದ ಅರ್ಜುನನಿಂದ, **ಆಂಜಲಿಕೇನ** = ಆಂಜಲಿಕಾಸ್ತ್ರದಿಂದ, **ಛಿನ್ನಂ** = ತುಂಡರಿಸಲ್ಪಟ್ಟ, **ಸೋತ್ಸೇಧಂ** = ಮೇಲಕ್ಕೆ ಚಿಮ್ಮಿದ, **ಸೂರ್ಯಜಸ್ಯ** = ಸೂರ್ಯನ ಮಗನಾದ ಕರ್ಣನ, **ಶಿರಃ** = ತಲೆಯು, **ಅಪತತ್** = ಕೆಳಗೆ ಬಿತ್ತು.

**ತಾತ್ಪರ್ಯ** :- ಎರಡನೆಯ ದಿನದ ಅಪರಾಹ್ಣ ಕಾಲದಲ್ಲಿ ಯುದ್ಧದಲ್ಲಿ ಇಂದ್ರಪುತ್ರನಾದ ಅರ್ಜುನ ಸೂರ್ಯಪುತ್ರನಾದ ಕರ್ಣನ ತಲೆಯನ್ನು ಕತ್ತರಿಸಿದ. ಅದು ವೇಗದಿಂದ ಮೇಲಕ್ಕೆ ಚಿಮ್ಮಿ ಕೆಳಕ್ಕೆ ಬಿತ್ತು.

**ತಸ್ಮಿನ್ ಹತೇ ದೀನಮುಖಃ ಸುಯೋಧನೋ**
**ಯಯೌ ಸಮಾಹೃತ್ಯ ಬಲಂ ಸಶಲ್ಯಃ ।**
**ಯುಧಿಷ್ಠಿರಃ ಕರ್ಣವಧಂ ನಿಶಮ್ಯ**
**ತದಾ ಸಮಾಗತ್ಯ ದದರ್ಶ ತತ್ತನುಮ್ ॥ ೧೮೫ ॥**

**ತಸ್ಮಿನ್ ಹತೇ ದೀನಮುಖಃ ಸುಯೋಧನಃ ಯಯೌ ಸಮಾಹೃತ್ಯ ಬಲಂ ಸಶಲ್ಯಃ । ಯುಧಿಷ್ಠಿರಃ ಕರ್ಣವಧಂ ನಿಶಮ್ಯ ತದಾ ಸಮಾಗತ್ಯ ದದರ್ಶ ತತ್ತನುಮ್ ॥ ೧೮೫ ॥**

**ಅರ್ಥ** :– **ತಸ್ಮಿನ್ ಹತೇ (ಸತಿ)** = ಅವನು ಸತ್ತಾಗ, **ದೀನಮುಖಃ** = ದೀನಮುಖದವನಾಗಿ, **ಸಶಲ್ಯಃ** = ಶಲ್ಯನ ಸಮೇತನಾದ, **ಸುಯೋಧನಃ** = ದುರ್ಯೋಧನನು, **ಬಲಂ** = ಸೇನೆಯನ್ನು, **ಸಮಾಹೃತ್ಯ** = ಹಿಂತೆಗೆದುಕೊಂಡು, **ಯಯೌ** = ಹೊರಟನು. **ತದಾ** = ಆಗ, **ಯುಧಿಷ್ಠಿರಃ** = ಧರ್ಮರಾಜನು, **ಕರ್ಣವಧಂ** = ಕರ್ಣವಧೆಯನ್ನು, **ನಿಶಮ್ಯ** = ಕೇಳಿ, **ಸಮಾಗತ್ಯ** = ಅಲ್ಲಿಗೆ ಬಂದು, **ತತ್ತನುಂ** = ಅವನ ದೇಹವನ್ನು, **ದದರ್ಶ** = ನೋಡಿದ.

**ತಾತ್ಪರ್ಯ** :- ಕರ್ಣ ಹತನಾಗಲು ದುರ್ಯೋಧನ ಮಂಕು ಮುಖದವನಾಗಿ ಸೇನೆಯನ್ನು ಹಿಂತೆಗೆದುಕೊಂಡು ಶಲ್ಯನೊಂದಿಗೆ ತೆರಳಿದ. ಧರ್ಮರಾಜ ಕರ್ಣವಧೆಯನ್ನು ಕೇಳಿ ಅಲ್ಲಿಗೆ ಧಾವಿಸಿ ಬಂದು ಅವನ ದೇಹವನ್ನು ನೋಡಿದ.

ಪಾಂಡವರ ಹರ್ಷ

**ಶಶಂಸ ಕೃಷ್ಣಂ ಚ ಧನಂಜಯಂ ಚ**
**ಭೀಮಂ ಚ ಯೇಽನ್ಯೇ ಚ ಯುಧಿ ಪ್ರವೀರಾಃ ।**
**ಗತ್ವಾ ಚ ತೇ ಶಿಬಿರಂ ಮೋದಮಾನಾ**
**ಊಷುಃ ಸಕೃಷ್ಣಾಸ್ತದನುವ್ರತಾಸ್ತದಾ ॥ ೧೮೬ ॥**

ಶಶಂಸ ಕೃಷ್ಣಂ ಚ ಧನಂಜಯಂ ಚ ಭೀಮಂ ಚ ಯೇ ಅನ್ಯೇ ಚ ಯುಧಿ ಪ್ರವೀರಾಃ । ಗತ್ವಾ ಚ ತೇ ಶಿಬಿರಂ ಮೋದಮಾನಾಃ ಊಷುಃ ಸಕೃಷ್ಣಾಃ ತದನುವ್ರತಾಃ ತದಾ ॥ ೧೮೬ ॥

**ಅರ್ಥ** :- **ಕೃಷ್ಣಂ ಚ** = ಕೃಷ್ಣನನ್ನೂ, **ಧನಂಜಯಂ ಚ** = ಅರ್ಜುನನನ್ನೂ, **ಭೀಮಂ ಚ** = ಭೀಮನನ್ನೂ, **ಯುಧಿ** = ಯುದ್ಧದಲ್ಲಿ, **ಅನ್ಯೇ ಯೇ** = ಬೇರೆ ಯಾವ, **ಪ್ರವೀರಃ ಚ** = ನಿಪುಣರಿದ್ದರೋ, **(ತಾನ್ ಚ)** = ಅವರನ್ನೂ, **ಶಶಂಸ** = ಪ್ರಶಂಸಿಸಿದ. **ತದಾ** = ಆಗ, **ಸಕೃಷ್ಣಾಃ** = ಕೃಷ್ಣನ ಸಹಿತರಾದ, **ತದನುವ್ರತಾಃ** = ಅವನನ್ನೇ ಅನುಸರಿಸಿ ನಡೆಯುವವರಾದ, **ತೇ ಚ** = ಆ ಪಾಂಡವರೂ ಸಹ, **ಶಿಬಿರಂ** = ಶಿಬಿರವನ್ನು ಕುರಿತು, **ಗತ್ವಾ** = ಹೋಗಿ, **ಮೋದಮಾನಾಃ** = (ಸಂತಃ) = ಆನಂದಿಸುವವರಾಗಿ, **ಊಷುಃ** = ವಾಸಿಸಿದರು.

॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ
ಶ್ರೀಮಹಾಭಾರತತಾತ್ಪರ್ಯನಿರ್ಣಯೇ ಕರ್ಣವಧೋ
ನಾಮ ಸಪ್ತವಿಂಶೋಽಧ್ಯಾಯಃ ॥ ೨೭ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಪ್ರಣೀತ
ಮಹಾಭಾರತತಾತ್ಪರ್ಯನಿರ್ಣಯದಲ್ಲಿ 'ಕರ್ಣವಧ' ಎಂಬ
ಇಪ್ಪತ್ತೇಳನೆಯ ಅಧ್ಯಾಯ ಮುಗಿಯಿತು ॥ ೨೭ ॥

# ಅಧ್ಯಾಯ - 28

ಹದಿನೆಂಟನೆ ದಿನದ ಯುದ್ಧ - ಶಲ್ಯವಧ

**ಓಂ ॥ ಪ್ರಭಾತಾಯಾಂ ತು ಶರ್ವರ್ಯಾಂ**
**ಗುರುಪುತ್ರಾನುಮೋದಿತಃ ।**
**ಶಲ್ಯಂ ಸೇನಾಪತಿಂ ಕೃತ್ವಾ ಯೋದ್ಧುಂ**
**ದುರ್ಯೋಧನೋಽಭ್ಯಯಾತ್ ॥ ೧ ॥**

ಪದಚ್ಛೇದ :- ಪ್ರಭಾತಾಯಾಮ್, ತು, ಶರ್ವರ್ಯಾಮ್, ಗುರುಪುತ್ರಾನು ಮೋದಿತಃ । ಶಲ್ಯಮ್, ಸೇನಾಪತಿಮ್, ಕೃತ್ವಾ, ಯೋದ್ಧುಮ್, ದುರ್ಯೋಧನಃ ಅಭ್ಯಯಾತ್ ॥

ಅನ್ವಯಾರ್ಥ :- **ಶರ್ವಯಾಂ ತು** = ಆ ರಾತ್ರಿಯಾದರೂ, **ಪ್ರಭಾತಾಯಾಂ** = ಬೆಳಗಾಗುತ್ತಿರಲು, **ದುರ್ಯೋಧನಃ** = ದುರ್ಯೋಧನನು, **ಗುರುಪುತ್ರಾನುಮೋದಿತಃ** = ಗುರುಪುತ್ರನಾದ ಅಶ್ವತ್ಥಾಮನಿಂದ ಅನುಮತಿ ಪಡೆದನಾವನಾಗಿ, **ಶಲ್ಯಂ** = ಶಲ್ಯವನ್ನು, **ಸೇನಾಪತಿಂ** = ಸೇನಾಪತಿಯನ್ನಾಗಿ, **ಕೃತ್ವಾ** = ಮಾಡಿ, **ಯೋದ್ಧುಂ** = ಯುದ್ಧ ಮಾಡಲು, **ಅಭ್ಯಯಾತ್** = ಹೊರಟನು.

ತಾತ್ಪರ್ಯ :- ಯುದ್ಧದ ಹದಿನೇಳನೆಯ ದಿನದ ರಾತ್ರಿ ಮುಗಿದು ಬೆಳಗಾಗುತ್ತಿದ್ದಂತೆ ದುರ್ಯೋಧನನು ಅಶ್ವತ್ಥಾಮನ ಅನುಮತಿ ಪಡೆದು ಶಲ್ಯವನ್ನು ಸೇನಾಪತಿಯನ್ನಾಗಿ ಮಾಡಿ ಯುದ್ಧಕ್ಕೆ ಹೊರಟನು.

**ತಮಭ್ಯಯುಃ ಪಾಂಡವಾಶ್ಚ ಹೃಷ್ಟಾ ಯುದ್ಧಾಯ ದಂಸಿತಾಃ ।**
**ತತ್ರಾಽಸೀತ್ ಸುಮಹದ್ ಯುದ್ಧಂ ಪಾಂಡವಾನಾಂ ಪರೈಃ ಸಹ ॥ ೨ ॥**

ಪದಚ್ಛೇದ :- **ತಮ್, ಅಭ್ಯಯುಃ, ಪಾಂಡವಾಃ, ಚ, ಹೃಷ್ಟಾಃ, ಯುದ್ಧಾಯ, ದಂಶಿತಾಃ । ತತ್ರ, ಆಸೀತ್, ಸುಮಹತ್, ಯುದ್ಧಮ್, ಪಾಂಡವಾನಾಮ್, ಪರೈಃ, ಸಹ ॥**

**ಅನ್ವಯಾರ್ಥ :- ಪಾಂಡವಾಶ್ಚ** = ಪಾಂಡವರಾದರೂ, **ಹೃಷ್ಟಾಃ** = ಸಂತುಷ್ಟರಾಗಿ, **ದಂಶಿತಾಃ** = ಉತ್ಸಾಹಗೊಂಡವರಾಗಿ, **ತವ್** = ಆ ದುರ್ಯೋಧನನನ್ನು, **ಅಭ್ಯಯುಃ** = ಸಮೀಪಿಸಿದರು, **ತತ್ರ** = ಅಲ್ಲಿ, **ಪಾಂಡವಾನಾಮ್** = ಪಾಂಡವರಿಗೆ, **ಪರೈಃ ಸಹ** = ಕೌರವರ ಜೊತೆಗೆ, **ಸುಮಹತ್** = ಬಹುದೊಡ್ಡದಾದ, **ಯುದ್ಧಮ್** = ಯುದ್ಧವು, **ಆಸೀತ್** = ನಡೆಯಿತು.

**ತಾತ್ಪರ್ಯ :-** ಪಾಂಡವರು ಅತ್ಯಂತ ಸಂತುಷ್ಟರಾಗಿ ಹಾಗೂ ಉತ್ಸಾಹಭರಿತರಾಗಿ ದುರ್ಯೋಧನನನ್ನು ಸಮೀಪಿಸಿದರು. ಕೌರವ ಪಾಂಡವರಿಗೆ ಬಹುದೊಡ್ಡ ಯುದ್ಧ ಅಲ್ಲಿ ನಡೆಯಿತು.

**ಅಗ್ರೇ ಭೀಮಃ ಪಾಂಡವಾನಾಂ ಮಧ್ಯೇ ರಾಜಾ ಯುಧಿಷ್ಠಿರಃ ।**
**ಪೃಷ್ಠೇ ಗಾಂಡೀವಧನ್ವಾಽಽಸೀದ್ ವಾಸುದೇವಾಭಿರಕ್ಷಿತಃ ॥ ೩ ॥**

ಪದಚ್ಛೇದ :- **ಅಗ್ರೇ, ಭೀಮಃ, ಪಾಂಡವಾನಾಮ್, ಮಧ್ಯೇ, ರಾಜಾ, ಯುಧಿಷ್ಠಿರಃ । ಪೃಷ್ಠೇ, ಗಾಂಡೀವಧನ್ವಾ, ಆಸೀತ್, ವಾಸುದೇವಾಭಿರಕ್ಷಿತಃ ॥**

**ಅನ್ವಯಾರ್ಥ :- ಪಾಂಡವಾನಾಮ್** = ಪಾಂಡವರ ಸೈನ್ಯದ, **ಅಗ್ರೇ** = ಮುಂಭಾಗದಲ್ಲಿ, **ಭೀಮಃ** = ಭೀಮಸೇನನು, **ಮಧ್ಯೇ** = ಮಧ್ಯಭಾಗದಲ್ಲಿ, **ರಾಜಾ** = ರಾಜನಾದ, **ಯುಧಿಷ್ಠಿರಃ** = ಯುಧಿಷ್ಠಿರನು, **ಪೃಷ್ಠೇ** = ಹಿಂಭಾಗದಲ್ಲಿ, **ವಾಸುದೇವಾಭಿರಕ್ಷಿತಃ** = ಶ್ರೀಕೃಷ್ಣನಿಂದ ರಕ್ಷಿತನಾದ, **ಗಾಂಡೀವಧನ್ವಾ** = ಗಾಂಡೀವಧಾರಿಯಾದ ಅರ್ಜುನನು, **ಆಸೀತ್** = ಇದ್ದನು.

**ತಾತ್ಪರ್ಯ :-** ಯುದ್ಧದ ಸಂದರ್ಭದಲ್ಲಿ ಪಾಂಡವರ ಸೈನ್ಯದ ಮುಂಭಾಗದಲ್ಲಿ ಭೀಮನಿದ್ದನು. ಮಧ್ಯಭಾಗದಲ್ಲಿ ಯುಧಿಷ್ಠಿರನಿದ್ದನು. ಹಿಂಭಾಗದಲ್ಲಿ ಕೃಷ್ಣನಿಂದ ರಕ್ಷಿತನಾದ ಗಾಂಡೀವಧಾರಿಯಾದ ಅರ್ಜುನನಿದ್ದನು.

**ಚಕ್ರರಕ್ಷೌ ಯಮೌ ರಾಜ್ಞೋ ದೃಷ್ಟದ್ಯುಮ್ನಶ್ಚ ಸಾತ್ಯಕಿಃ ।**
**ನೃಪಸ್ಯ ಪಾರ್ಶ್ವಯೋರಾಸ್ತಾಮಗ್ರೇಽನ್ಯೇಷಾಂ ಗುರೋಃ ಸುತಃ ॥ ೪ ॥**

ಪದಚ್ಛೇದ :- ಚಕ್ರರಕ್ಷೌ, ಯಮೌ, ರಾಜ್ಞಃ, ಧೃಷ್ಟದ್ಯುಮ್ನಃ, ಚ, ಸಾತ್ಯಕಿಃ । ನೃಪಸ್ಯ, ಪಾರ್ಶ್ವಯೋಃ, ಆಸ್ತಾಮ್, ಅಗ್ರೇ, ಅಪಿ, ಅನ್ಯೇಷಾಮ್, ಗುರೋಃ, ಸುತಃ ॥

**ಅನ್ವಯಾರ್ಥ** :- **ಯಮೌ** = ನಕುಲಸಹದೇವರು, **ರಾಜ್ಞಃ** = ಧರ್ಮರಾಜನ, **ಚಕ್ರರಕ್ಷೌ** = ಚಕ್ರರಕ್ಷಕರಾಗಿ, **ಧೃಷ್ಟದ್ಯುಮ್ನಃ** = ಧೃಷ್ಟದ್ಯುಮ್ನನು, **ಚ** = ಮತ್ತು, **ಸಾತ್ಯಕಿಃ** = ಸಾತ್ಯಕಿಯು, **ನೃಪಸ್ಯ** = ರಾಜನ, **ಪಾರ್ಶ್ವಯೋಃ** = ಅಕ್ಕಪಕ್ಕದಲ್ಲಿ, **ಆಸ್ತಾಮ್** = ಇದ್ದರು, **ಅನ್ಯೇಷಾಮ್** = ಕೌರವಸೈನ್ಯದ, **ಅಗ್ರೇ** = ಮುಂಭಾಗದಲ್ಲಿ, **ಗುರೋಃಸುತಃ** = ದ್ರೋಣಪುತ್ರನಾ ಅಶ್ವತ್ಥಾಮನಿದ್ದನು.

**ತಾತ್ಪರ್ಯ** :- ನಕುಲಸಹದೇವರಿಬ್ಬರು ಧರ್ಮರಾಜನ ಚಕ್ರರಕ್ಷಕ ರಾಗಿದ್ದರು. ಧೃಷ್ಟದ್ಯುಮ್ನ, ಸಾತ್ಯಕಿ ಇವರಿಬ್ಬರೂ ರಾಜನ ಅಕ್ಕಪಕ್ಕದಲ್ಲಿದ್ದರು. ಇನ್ನು ಕೌರವಸೈನ್ಯದ ಮುಂಭಾಗದಲ್ಲಿ ದ್ರೋಣಪುತ್ರನಾದ ಅಶ್ವತ್ಥಾಮನಿದ್ದನು.

**ಮಧ್ಯೇ ಶಲ್ಯಃ ಪೃಷ್ಠತೋಽಭೂದ್ ಭ್ರಾತೃಭಿಶ್ಚ ಸುಯೋಧನಃ ।**
**ಚಕ್ರರಕ್ಷೌ ತು ಶಲ್ಯಸ್ಯ ಶಕುನಿಸ್ತತ್ಸುತಸ್ತಥಾ ।**
**ಕೃಪಶ್ಚ ಕೃತವರ್ಮಾ ಚ ಪಾರ್ಶ್ವಯೋಃ ಸಮವಸ್ಥಿತೌ ॥ ೫ ॥**

ಪದಚ್ಛೇದ :- ಮಧ್ಯೇ, ಶಲ್ಯಃ, ಪೃಷ್ಠತಃ, ಅಭೂತ್, ಭ್ರಾತೃಭಿಃ, ಚ, ಸುಯೊಧನಃ । ಚಕ್ರರಕ್ಷೌ, ತು, ಶಲ್ಯಸ್ಯ, ಶಕುನಿಃ, ತತ್ಸುತಃ, ತಥಾ ॥ ಕೃಪಃ, ಚ, ಕೃತವರ್ಮಾ, ಚ, ಪಾರ್ಶ್ವಯೊಃ, ಸಮವಸ್ಥಿತೌ ॥

**ಅನ್ವಯಾರ್ಥ** :- **ಶಲ್ಯಃ** = ಶಲ್ಯನು, **ಮಧ್ಯೇ** = ಮಧ್ಯದಲ್ಲಿ, **ಪೃಷ್ಠತಃ** = ಹಿಂಭಾಗದಲ್ಲಿ, **ಭ್ರಾತೃಭಿಶ್ಚ** = ಸಹೋದರರಿಂದ ಕೂಡಿದ, **ಸುಯೋಧನಃ** = ದುರ್ಯೋಧನನು ಇದ್ದನು, **ಶಲ್ಯಸ್ಯ ತು** = ಶಲ್ಯನಿಗಾದರೂ, **ಚಕ್ರರಕ್ಷೌ** = ಚಕ್ರರಕ್ಷಕರಾಗಿ, **ಶಕುನಿಃ** = ಶಕುನಿಯು, **ತಥಾ** = ಹಾಗೆಯೇ, **ತತ್ಸುತಃ** = ಅವನ ಮಗನೂ ಇದ್ದನು, **ಕೃಪಃ** = ಕೃಪನು, **ಚ** = ಮತ್ತು, **ಕೃತವರ್ಮಾ** = ಕೃತವರ್ಮನು, **ಪಾರ್ಶ್ವಯೊಃ** = ಅಕ್ಕ ಪಕ್ಕದಲ್ಲಿ, **ಸಮವಸ್ಥಿತೌ** = ಇದ್ದರು.

**ತಾತ್ಪರ್ಯ** :- ಈ ಕೌರವಸೈನ್ಯದ ಮಧ್ಯಭಾಗದಲ್ಲಿ ಶಲ್ಯನಿದ್ದಾನೆ. ಹಿಂಭಾಗದಲ್ಲಿ ತನ್ನ ಸಹೋದರರಿಂದ ಕೂಡಿದ ದುರ್ಯೋಧನನಿದ್ದಾನೆ. ಶಲ್ಯನಿಗೆ ಚಕ್ರರಕ್ಷಕನಾಗಿ ಶಕುನಿ ಹಾಗೂ ಅವನ ಮಗನಿದ್ದಾನೆ. ಅಕ್ಕ ಪಕ್ಕದಲ್ಲಿ ಕೃಪನು ಹಾಗೂ ಕೃತವರ್ಮ ಇದ್ದರು.

**ತತ್ರಾಭವನ್ಮಹದ್ ಯುದ್ಧಂ ಭೀಮಸ್ಯ ದ್ರೌಣಿನಾ ಸಹ ।**
**ರಾಜ್ಞಃ ಶಲ್ಯೇನ ಚ ತಥಾ ಘೋರರೂಪಂ ಭಯಾನಕಮ್ ॥ ೬ ॥**

ಪದಚ್ಛೇದ :– ತತ್ರ, ಅಭವತ್, ಮಹತ್, ಯುದ್ಧಮ್, ಭೀಮಸ್ಯ, ದ್ರೌಣಿನಾ, ಸಹ । ರಾಜ್ಞಃ, ಶಲ್ಯೇನ, ಚ, ತಥಾ, ಘೋರರೂಪಮ್, ಭಯಾನಕಮ್ ॥

**ಅನ್ವಯಾರ್ಥ** :- **ತತ್ರ** = ಅಲ್ಲಿ, **ಭೀಮಸ್ಯ** = ಭೀಮನಿಗೆ, **ದ್ರೌಣಿನಾ ಸಹ** = ಅಶ್ವತ್ಥಾಮನೊಡನೆ, **ಮಹತ್** = ದೊಡ್ಡದಾದ, **ಯುದ್ಧಮ್** = ಯುದ್ಧವು, **ಅಭವತ್** = ಆಯಿತು, **ಚ** = ಮತ್ತು, **ರಾಜ್ಞಃ** = ಧರ್ಮರಾಜನಿಗೆ, **ಶಲ್ಯೇನ** = ಶಲ್ಯನ ಜೊತೆಗೆ, **ಭಯಾನಕಮ್** = ಭಯಂಕರವಾದ, **ಘೋರರೂಪಮ್** = ಘೋರರೂಪವಾದ, **ಯುದ್ಧಮ್** = ಯುದ್ಧವು, **ಅಭವತ್** = ಆಯಿತು.

**ತಾತ್ಪರ್ಯ** :- ಭೀಮನಿಗೂ ಅಶ್ವತ್ಥಾಮನಿಗೂ ದೊಡ್ಡ ಯುದ್ಧ ನಡೆಯಿತು. ಹಾಗೆಯೇ ಧರ್ಮರಾಜನಿಗೂ ಶಲ್ಯನಿಗೂ ಭಯಂಕರವಾದ ಯುದ್ಧ ನಡೆಯಿತು.

**ತತ್ರ ನಾತಿಪ್ರಯತ್ನೇ ದ್ರೌಣಿರ್ಭೀಮೇನ ಸಾಯಕೈಃ ।**
**ವಿರಥೀಕೃತಸ್ತಥಾ ಧರ್ಮಸೂನುಃ ಶಲ್ಯೇನ ತತ್ಕ್ಷಣಾತ್ ॥ ೭ ॥**

ಪದಚ್ಛೇದ :– ತತ್ರ, ನ, ಅತಿಪ್ರಯತ್ನೇನ, ದ್ರೌಣಿಃ, ಭೀಮೇನ, ಸಾಯಕೈಃ । ವಿರಥೀಕೃತಃ, ತಥಾ, ದರ್ಮಸೂನುಃ, ಶಲ್ಯೇನ, ತತ್ ಕ್ಷಣಾತ್ ॥

**ಅನ್ವಯಾರ್ಥ** :- **ತತ್ರ** = ಅಲ್ಲಿ, **ನಾತಿಪ್ರಯತ್ನೇನ** = ಹೆಚ್ಚು ಆಯಾಸವಿಲ್ಲದೇ, **ಭೀಮೇನ** = ಭೀಮನಿಂದ, **ದ್ರೌಣಿಃ** = ಅಶ್ವತ್ಥಾಮನು, **ಸಾಯಕೈಃ** = ಬಾಣಗಳಿಂದ, **ವಿರಥೀಕೃತಃ** = ರಥರಹಿತನಾದನು, **ತಥಾ** = ಹಾಗೆಯೇ, **ದರ್ಮಸೂನುಃ** = ಧರ್ಮರಾಜನು, **ಶಲ್ಯೇನ** = ಶಲ್ಯನಿಂದ, **ತತ್ ಕ್ಷಣಾತ್** = ಆ ಕ್ಷಣದಲ್ಲಿ, **ವಿರಥೀಕೃತಃ** = ರಥರಹಿತನಾದನು.

**ತಾತ್ಪರ್ಯ** :- ಭೀಮನು ಆಯಾಸವಿಲ್ಲದೇ ಅಶ್ವತ್ಥಾಮನನ್ನು ರಥ ರಹಿತನನ್ನಾಗಿ ಮಾಡಿದನು. ಹಾಗೆಯೇ ಶಲ್ಯನು ಧರ್ಮರಾಜನನ್ನು ವಿರಥನನ್ನಾಗಿ ಮಾಡಿದನು.

**ಆಸಸಾದ ತದಾ ಶಲ್ಯಂ ಕಪಿಪ್ರವರಕೇತನಃ ।**
**ತಯೋರಾಸೀನ್ಮಹದ್ ಯುದ್ಧಮದ್ಭುತಂ ರೋಮಹರ್ಷಣಮ್ ॥ ೮ ॥**

ಪದಚ್ಛೇದ :- ಆಸಸಾದ, ತದಾ, ಶಲ್ಯದ್, ಕಪಿಪ್ರವರಕೇತನಃ । ತಯೋಃ, ಆಸೀತ್, ಮಹತ್, ಯುದ್ಧಮ್, ಅದ್ಭುತಮ್, ರೋಮಹರ್ಷಣಮ್ ॥

**ಅನ್ವಯಾರ್ಥ** :- **ತದಾ** = ಆಗ, **ಕಪಿಪ್ರವರಕೇತನಃ** = ಹನುಮಂತನನ್ನು ಧ್ವಜಪತಾಕೆಯನ್ನಾಗಿಸಿಕೊಂಡ ಅರ್ಜುನನು, **ಶಲ್ಯಮ್** = ಶಲ್ಯನನ್ನು, **ಆಸಸಾದ** = ಸಮೀಪಿಸಿದನು, **ತಯೋಃ** = ಅವರಿಬ್ಬರಿಗೆ, **ರೋಮ ಹರ್ಷಣಮ್** = ರೋಮಾಂಚಕರವಾದ, **ಅದ್ಭುತಮ್** = ಅದ್ಭುತವಾದ, **ಮಹತ್** = ದೊಡ್ಡದಾದ, **ಯುದ್ಧಮ್** = ಯುದ್ಧವು, **ಆಸೀತ್** = ಆಯಿತು.

**ತಾತ್ಪರ್ಯ** :- ಆಗ ಅರ್ಜುನನು ಶಲ್ಯನನ್ನು ಸಮೀಪಿಸಿದ. ಅವರಿಬ್ಬರ ಯುದ್ಧವು ಭಯಂಕರ ಹಾಗೂ ಅದ್ಭುತವಾಗಿತ್ತು.

**ರಥಮನ್ಯಂ ಸಮಾಸ್ಥಾಯ ದ್ರೌಣಿರ್ಭೀಮಂ ಸಮಭ್ಯಯಾತ್ ।**
**ದುರ್ಯೋಧನಶ್ಚ ಭೀಮಸ್ಯ ಶರೈರಾವಾರಯದ್ ದಿಶಃ ॥ ೯ ॥**

ಪದಚ್ಛೇದ :- ರಥಮ್, ಅನ್ಯಮ್, ಸಮಾಸ್ಥಾಯ, ದ್ರೌಣಿಃ, ಭೀಮಮ್, ಸಮಭ್ಯಯಾತ್ । ದುರ್ಯೋಧನಃ, ಚ, ಭೀಮಸ್ಯ, ಶರೈಃ, ಆವಾರಯತ್, ದಿಶಃ ॥

**ಅನ್ವಯಾರ್ಥ** :- **ದ್ರೌಣಿಃ** = ಅಶ್ವತ್ಥಾಮನು, **ಅನ್ಯಮ್** = ಬೇರೆಯಾದ, **ರಥಮ್** = ರಥವನ್ನು, **ಸಮಾಸ್ಥಾಯ** = ಏರಿ, **ಭೀಮಮ್** = ಭೀಮನನ್ನು, **ಸಮಭ್ಯಯಾತ್** = ಇದಿರಿಸಿದನು, **ದುರ್ಯೋಧನಶ್ಚ** = ಚನಾದರೋ, **ಶರೈಃ** = ಬಾಣಗಳಿಂದ, **ಭೀಮಸ್ಯ** = ಭೀಮನ, **ದಿಶಃ** = ಸುತ್ತದಿಕ್ಕುಗಳನ್ನು, **ಆವಾರಯತ್** = ಆವರಿಸಿದರು.

**ತಾತ್ಪರ್ಯ** :- ಅಶ್ವತ್ಥಾಮನು ಬೇರೆ ಬೇರೆ ರಥವನ್ನು ಏರಿ ಭೀಮನನ್ನು ಇದಿರಿಸಿದ. ದುರ್ಯೋಧನನು ಬಾಣಗಳಿಂದ ಭೀಮನ ಸುತ್ತ ಎಲ್ಲಾ ದಿಕ್ಕುಗಳನ್ನು ಆವರಿಸಿದ.

**ತಾವುಭೌ ಶರವರ್ಷೇಣ ವಾರಯಾಮಾಸ ಮಾರುತಿಃ ।**
**ತಾಭ್ಯಾಂ ತಸ್ಯಾಭವದ್ ಯುದ್ಧಂ ಸುಘೋರಮತಿಮಾನುಷಮ್ ॥ ೧೦ ॥**

ಪದಚ್ಛೇದ :- ತೌ, ಉಭೌ, ಶರವರ್ಷೇಣ, ವಾರಯಾಮಾಸ, ಮಾರುತಿಃ । ತಾಭ್ಯಾಮ್, ತಸ್ಯ, ಅಭವತ್, ಯುದ್ಧಮ್, ಸುಘೋರಮ್, ಅತಿಮಾನುಷಮ್ ॥

**ಅನ್ವಯಾರ್ಥ** :- **ಮಾರುತಿಃ** = ಭೀಮನು, **ತೌ ಉಭೌ** = ಅಶ್ವತ್ಥಾಮದುರ್ಯೋಧನರಿಬ್ಬರನ್ನು, **ಶರವರ್ಷೇಣ** = ಬಾಣಗಳ ಮಳೆಯಿಂದ, **ವಾರಯಾಮಾಸ** = ತಡೆದನು, **ತಾಭ್ಯಾಂ** = ಅವರೊಡನೆ, **ತಸ್ಯ** = ಭೀಮನಿಗೆ, **ಸುಘೋರಮ್** = ಅತ್ಯಂತ ಘೋರವಾದ, **ಅತಿ ಮಾನುಷಮ್** = ಅತಿಮಾನುಷವಾದ, **ಯುದ್ಧಮ್** = ಯುದ್ಧವು, **ಅಭವತ್** = ನಡೆಯಿತು.

**ತಾತ್ಪರ್ಯ** :- ಭೀಮನು ಅಶ್ವತ್ಥಾಮ ಹಾಗೂ ದುರ್ಯೋಧನ ಇವರಿಬ್ಬರನ್ನು ಬಾಣಗಳ ಮಳೆಯಿಂದ ತಡೆದನು. ಹೀಗೆ ಅವರಿಬ್ಬರ ಜೊತೆ ಭೀಮನು ಘೋರರೂಪವಾದ ಅತಿಮಾನುಷವಾದ ಯುದ್ಧ ನಡೆಸಿದನು.

**ದುರ್ಯೋಧನಸ್ಯಾವರಜಾನ್ ದ್ರೌಪದೇಯಾ ಯುಯುತ್ಸುನಾ ।**
**ಶಿಖಂಡ್ಯಾದ್ಯೈರ್ಮಾತುಲೈಶ್ಚ ಸಹ ಸರ್ವಾನ್ ನ್ಯವಾರಯನ್ ॥ ೧೧ ॥**

ಪದಚ್ಛೇದ :- ದುರ್ಯೋಧನಸ್ಯ, ಅವರಜಾನ್, ದ್ರೌಪದೇಯಾಃ, ಯುಯುತ್ಸುನಾ । ಶಿಖಂಡಾದ್ಯೈಃ, ಮಾತುಲೈಃ, ಚ, ಸಹ, ಸರ್ವಾನ್, ನ್ಯವಾರಯತ್ ॥

**ಅನ್ವಯಾರ್ಥ** :- **ದುರ್ಯೋಧನಸ್ಯ** = ದುರ್ಯೋಧನನ, **ಅವರಜಾನ್** = ಎಲ್ಲಾ ತಮ್ಮಂದಿರನ್ನು, **ದ್ರೌಪದೇಯಾಃ** = ದ್ರೌಪದೀಮಕ್ಕಳಾದ ಪಾಂಡವರು, **ಯುಯುತ್ಸುನಾ** = ಯುಯುತ್ಸುವಿನೊಡನೆ, **ಚ** = ಮತ್ತು, **ಶಿಖಂಡಾದ್ಯೈಃ** = ಶಿಖಂಡಿಯೇ ಮೊದಲಾದ, **ಮಾತುಲೈಃ ಸಹ** = ಸೋದರಮಾವಂದಿರ ಜೊತೆಗೆ, **ಸರ್ವಾನ್** = ಎಲ್ಲರನ್ನು, **ನ್ಯವಾರಯತ್** = ಇದಿರಿಸಿದರು.

**ತಾತ್ಪರ್ಯ** :- ದುರ್ಯೋಧನನ ಎಲ್ಲಾ ತಮ್ಮಂದಿರನ್ನು ದ್ರೌಪದೀ ಮಕ್ಕಳಾದ ಪಾಂಡವರು ಯುಯುತ್ಸುವಿನೊಡನೆ ಹಾಗೂ ಶಿಖಂಡಿಯೇ ಮೊದಲಾದ ಸೋದರಮಾವಂದಿರ ಜೊತೆಗೆ ಇದಿರಿಸಿದರು.

**ಸಹದೇವಸ್ತು ಶಕುನಿಮುಲೂಕಂ ನಕುಲಸ್ತದಾ ।**
**ಧೃಷ್ಟದ್ಯುಮ್ನಶ್ಚ ಹಾರ್ದಿಕ್ಯಂ ಸಾತ್ಯಕಿಃ ಕೃಪಮೇವ ಚ ॥ ೧೨ ॥**

ಪದಚ್ಛೇದ :- ಸಹದೇವಃ, ತು, ಶಕುನಿಮ್, ಉಲೂಕಮ್, ನಕುಲಃ, ತಥಾ । ಧೃಷ್ಟದ್ಯುಮ್ನಃ, ಚ, ಹಾರ್ದಿಕ್ಯಮ್, ಸಾತ್ಯಕಿಃ, ಕೃಪಮ್, ಏವ, ಚ ॥

**ಅನ್ವಯಾರ್ಥ** :- **ಸಹದೇವಸ್ತು** = ಸಹದೇವನಾದರೂ, **ಶಕುನಿಮ್** = ಶಕುನಿಯನ್ನು, **ಉಲೂಕಮ್** = ಉಲೂಕನನ್ನು, **ನಕುಲಃ** = ನಕುಲನು, **ತಥಾ** = ಹಾಗೆಯೇ, **ಧೃಷ್ಟದ್ಯುಮ್ನಶ್ಚ** = ಧೃಷ್ಟದ್ಯುಮ್ನನಾದರೂ, **ಹಾರ್ದಿಕ್ಯಮ್** = ಕೃತವರ್ಮನನ್ನು, **ಸಾತ್ಯಕಿಃ** = ಸಾತ್ಯಕಿಯು, **ಕೃಪಮೇವ ಚ** = ಕೃಪನನ್ನೂ, **ನ್ಯವಾರಯತ್** = ಇದಿರಿಸಿದನು.

**ತಾತ್ಪರ್ಯ** :- ಸಹದೇವನು ಶಕುನಿಯನ್ನು, ಹಾಗೂ ನಕುಲನು ಉಲೂಕನನ್ನು, ಧೃಷ್ಟದ್ಯುಮ್ನನು ಕೃತವರ್ಮನನ್ನು, ಸಾತ್ಯಕಿಯು ಕೃಪನನ್ನೂ ಇದಿರಿಸಿದನು.

**ತೇಷಾಂ ತದಭವದ್ ಯುದ್ಧಂ ಚಿತ್ರಂ ಲಘು ಚ ಸುಷ್ಠು ಚ ।**
**ಶಲ್ಯಸ್ತು ಶರಸಂಘಾತೈಃ ಪಾರ್ಥಸ್ಯಾವಾರಯದ್ ದಿಶಃ ॥ ೧೩ ॥**

ಪದಚ್ಛೇದ :- ತೇಷಾಮ್, ತತ್, ಅಭವತ್, ಯುದ್ಧಮ್, ಚಿತ್ರಮ್, ಲಘು, ಚ, ಸುಷ್ಠು ಚ । ಶಲ್ಯಃ, ತು, ಶರಸಂಘಾತೈಃ, ಪಾರ್ಥಸ್ಯ, ಆವಾರಯತ್, ದಿಶಃ ॥

**ಅನ್ವಯಾರ್ಥ** :- **ತೇಷಾಮ್** = ಅವರಿಗೆ, **ಚಿತ್ರಮ್** = ವಿಚಿತ್ರವಾದ, **ಲಘು** = ವೇಗಪೂರ್ಣವಾದ, **ಚ** = ಮತ್ತು, **ಸುಷ್ಠು** = ಒಳ್ಳೆಯದಾದ, **ಯುದ್ಧಮ್** = ಯುದ್ಧವು, **ಅಭವತ್** = ಆಯಿತು, **ಶಲ್ಯಸ್ತು** = ಶಲ್ಯನಾದರೂ, **ಶರಸಂಘಾತೈಃ** = ಬಾಣಗಳ ಸಮೂಹಗಳಿಂದ, **ಪಾರ್ಥಸ್ಯ** = ಅರ್ಜುನನ ಸುತ್ತ, **ದಿಶಃ** = ಎಲ್ಲಾ ದಿಕ್ಕುಗಳನ್ನು, **ಆವಾರಯತ್** = ಆವರಿಸಿದನು.

**ತಾತ್ಪರ್ಯ** :- ಅವರೆಲ್ಲರಿಗೂ ವಿಚಿತ್ರವಾದ ವೇಗಪೂರ್ಣವಾದ ಒಳ್ಳೆಯದಾದ ಯುದ್ಧ ನಡೆಯಿತು. ಶಲ್ಯನಾದರೂ ಬಾಣಗಳ ಸಮೂಹ ಗಳಿಂದ ಅರ್ಜುನನ ಸುತ್ತ ಎಲ್ಲಾ ದಿಕ್ಕುಗಳನ್ನು ಆವರಿಸಿದನು.

**ಸೋऽಪಿ ವಿವ್ಯಾಧ ವಿಶಿಖೈಃ ಶಲ್ಯಮಾಹವಶೋಭಿನಮ್ ।**
**ತಯೋಃ ಸುಸಮಮೇವಾऽಸೀಚ್ಚಿರಂ ದೇವಾಸುರೋಪಮಮ್ ॥ ೧೪ ॥**

ಪದಚ್ಛೇದ :– ಸಃ, ಅಪಿ, ವಿವ್ಯಾಧ, ವಿಶಿಖೈಃ, ಶಲ್ಯಮ್, ಆಹವಶೋಭಿನಮ್ । ತಯೋಃ, ತು, ಸುಮಮ್, ಏವ, ಆಸೀತ್, ಚಿರಮ್, ದೇವಾಸುರೋಪಮಮ್ ॥

**ಅನ್ವಯಾರ್ಥ** :- **ಸೋऽಪಿ** = ಅರ್ಜುನನಾದರೋ, **ಆಹವಶೋಭಿನಮ್** = ಯುದ್ಧದಲ್ಲಿ ಮೆರೆಯುತ್ತಿದ್ದ, **ಶಲ್ಯಮ್** = ಶಲ್ಯನನ್ನು, **ವಿಶಿಖೈಃ** = ಬಾಣಗಳಿಂದ, **ವಿವ್ಯಾಧ** = ಹೊಡೆದನು, **ತಯೋಸ್ತು** = ಅವರೊಳಗೆ, **ದೇವಾಸುರೋಪಮಮ್** = ದೇವಾಸುರಯುದ್ಧದಂತೆ, **ಚಿರಮ್** = ಬಹುಕಾಲದವರೆಗೆ, **ಸಮಮೇವ** = ಸಮವಾಗಿಯೇ, **ಆಸೀತ್** = ಯುದ್ಧವು ಆಯಿತು.

**ತಾತ್ಪರ್ಯ** :- ಯುದ್ಧದಲ್ಲಿ ಮೆರೆಯುತ್ತಿದ್ದ ಶಲ್ಯನನ್ನು ಅರ್ಜುನನು ಬಾಣಗಳಿಂದ ಹೊಡೆದನು. ಅವರಿಬ್ಬರ ಯುದ್ಧ ದೇವಾಸುರರ ಯುದ್ಧದಂತೆ ಬಹುಕಾಲದವರೆಗೆ ಸಮವಾಗಿಯೇ ಆಯಿತು.

**ತತಃ ಶರಂ ವಜ್ರನಿಭಂ ಮದ್ರರಾಜಃ ಸಮಾದದೇ ।**
**ತೇನ ವಿವ್ಯಾಧ ಬೀಭತ್ಸುಂ ಹೃದಯೇ ಸ ಮುಮೋಹ ಚ ॥ ೧೫ ॥**

ಪದಚ್ಛೇದ :– ತತಃ, ಶರಂ, ವಜ್ರನಿಭಮ್, ಮದ್ರರಾಜಃ, ಸಮಾದದೇ । ತೇನ, ವಿವ್ಯಾಧ, ಭೀಭತ್ಸುಂ, ಹೃದಯೇ, ಸಃ, ಮುಮೋಹ, ಚ ॥

**ಅನ್ವಯಾರ್ಥ** :- **ತತಃ** = ಅನಂತರ, **ಮದ್ರರಾಜಃ** = ಶಲ್ಯನು, **ವಜ್ರನಿಭಮ್** = ವಜ್ರಾಯುಧಕ್ಕೆ ಸಮಾನವಾದ, **ಶರಮ್** = ಬಾಣವನ್ನು, **ಸಮಾದದೇ** = ಎತ್ತಿಕೊಂಡನು, **ತೇನ** = ಅದರಿಂದ, **ಭೀಭತ್ಸುಂ** = ಅರ್ಜುನನನ್ನು, **ಹೃದಯೇ** = ಹೃದಯದಲ್ಲಿ, **ವಿವ್ಯಾಧ** = ಹೊಡೆದನು, **ಸ ಚ** = ಅರ್ಜುನನಾದರೋ, **ಮುಮೋಹ ಚ** = ಮೂರ್ಛಿತನಾದನು.

**ತಾತ್ಪರ್ಯ** :- ಅನಂತರ ಶಲ್ಯನು ಅರ್ಜುನನ ಮೇಲೆ ವಜ್ರಾಯುಧಕ್ಕೆ ಸಮಾನವಾದ ಬಾಣವನ್ನು ಎತ್ತಿ ಅವನ ಹೃದಯಕ್ಕೆ ಹೊಡೆದನು. ಅರ್ಜುನನು ಮೂರ್ಛಿತನಾದನು.

**ಉಪಲಭ್ಯ ಪುನಃ ಸಂಜ್ಞಾಂ ವಾಸವಿಃ ಶತ್ರುತಾಪನಃ ।**
**ಚಿಚ್ಛೇದ ಕಾರ್ಮುಕಂ ಸಂಖೇ ಮದ್ರಾರಾಜಸ್ಯ ಧೀಮತಃ ॥ ೧೬ ॥**

ಪದಚ್ಛೇದ :– ಉಪಲಭ್ಯ, ಪುನಃ, ಸಂಜ್ಞಾಮ್, ವಾಸವಿಃ, ಶತ್ರುತಾಪನಃ । ಚಿಚ್ಛೇದ, ಕಾರ್ಮುಕಮ್, ಸಂಖ್ಯೇ, ಮದ್ರರಾಜಸ್ಯ, ಧೀಮತಃ ॥

**ಅನ್ವಯಾರ್ಥ** :- **ಶತ್ರುತಾಪನಃ** = ಶತ್ರುತಾಪಕನಾದ, **ವಾಸವಿಃ** = ಅರ್ಜುನನು, **ಪುನಃ** = ಮತ್ತೆ, **ಸಂಜ್ಞಾಂ** = ಎಚ್ಚರವನ್ನು, **ಉಪಲಭ್ಯ** = ಹೊಂದಿ, **ಸಂಖ್ಯೇ** = ಯುದ್ಧದಲ್ಲಿ, **ಧೀಮತಃ** = ಬುದ್ಧಿವಂತನಾದ, **ಮದ್ರರಾಜಸ್ಯ** = ಶಲ್ಯನ, **ಕಾರ್ಮುಕಮ್** = ಬಿಲ್ಲನ್ನು, **ಚಿಚ್ಛೇದ** = ತುಂಡರಿಸಿದನು.

**ತಾತ್ಪರ್ಯ** :- ಶತ್ರುತಾಪಕನಾದ ಅರ್ಜುನನು ಮತ್ತೆ ಎದ್ದು ಯುದ್ಧದಲ್ಲಿ ಬುದ್ಧಿವಂತನಾದ ಶಲ್ಯನ ಬಿಲ್ಲನ್ನು ತುಂಡರಿಸಿದನು.

**ಸೋಽನ್ಯತ್ ಕಾರ್ಮುಕಮಾದಾಯ ಮುಮೋಚಾಸ್ತ್ರಾಣಿ ಫಲ್ಗುನೇ ।**
**ಸೌರಂ ಯಾಮ್ಯಂ ಚ ಪಾರ್ಜನ್ಯಂ ತಾನ್ಯೈಂದ್ರೇಣ ಜಘಾನ ಸಃ ॥ ೧೭ ॥**

ಪದಚ್ಛೇದ :– ಸಃ, ಅನ್ಯತ್, ಕಾರ್ಮುಕಮ್, ಆದಾಯ, ಮುಮೋಚ, ಅಸ್ತ್ರಾಣಿ, ಫಲ್ಗುನೇ । ಸೌರಮ್, ಯಾಮ್ಯಮ್, ಚ, ಪಾರ್ಜನ್ಯಮ್, ತಾನ್, ಐಂದ್ರೇಣ, ಜಘಾನ, ಸಃ ॥

**ಅನ್ವಯಾರ್ಥ** :- **ಸಃ** = ಶಲ್ಯನು, **ಅನ್ಯತ್ ಕಾರ್ಮುಕಂ** = ಇನ್ನೊಂದು ಬಿಲ್ಲನ್ನು, **ಆದಾಯ** = ಸ್ವೀಕರಿಸಿ, **ಸೌರಮ್** = ಸೂರ್ಯಸಂಬಂಧಿಯಾದ, **ಯಾಮ್ಯಮ್** = ಯಮಸಂಬಂಧಿಯಾದ, **ಪಾರ್ಜನ್ಯಮ್** = ಪರ್ಜನ್ಯ ಸಂಬಂಧಿಯಾದ, **ಅಸ್ತ್ರಾಣಿ** = ಅಸ್ತ್ರಗಳನ್ನು, **ಫಲ್ಗುನೇ** = ಅರ್ಜುನನ ಮೇಲೆ, **ಮುಮೋಚ** = ಬಿಟ್ಟನು, **ಸಃ** = ಅರ್ಜುನನು, **ತಾನಿ** = ಆ ಅಸ್ತ್ರಗಳನ್ನು, **ಐಂದ್ರೇಣ** = ಇಂದ್ರಾಸ್ತ್ರದಿಂದ, **ಜಘಾನ** = ಪರಿಹರಿಸಿದನು.

**ತಾತ್ಪರ್ಯ** :- ಶಲ್ಯನು ಇನ್ನೊಂದು ಬಿಲ್ಲನ್ನು ಎತ್ತಿಕೊಂಡು ಸೂರ್ಯ ಯಮ ಪರ್ಜನ್ಯ ಅಸ್ತ್ರಗಳನ್ನು ಅರ್ಜುನನ ಮೇಲೆ ಎಸೆದನು. ಅಜುನನು ಆ ಅಸ್ತ್ರಗಳನ್ನು ಇಂದ್ರಾಸ್ತ್ರದಿಂದ ಪರಿಹರಿಸಿದನು.

**ಪುನರ್ನ್ಯಕೃಂತತ್ ತಚ್ಚಾಪಮಿಂದ್ರಸೂನುರಮರ್ಷಿತಃ ।**
**ಶಲ್ಯೋ ಗದಾಂ ಸಮಾವಿಧ್ಯ ಚಿಕ್ಷೇಪಾರ್ಜುನವಕ್ಷಸಿ ॥ ೧೮ ॥**

ಪದಚ್ಛೇದ :- ಪುನಃ, ನ್ಯಕೃಂತತ್, ತತ್, ಚಾಪಮ್, ಇಂದ್ರಸೂನುಃ, ಅಮರ್ಷಿತಃ । ಶಲ್ಯಃ, ಗದಾಮ್, ಸಮಾದಾಯ, ಚಿಕ್ಷೇಪ, ಅರ್ಜುನವಕ್ಷಸಿ ॥

**ಅನ್ವಯಾರ್ಥ** :- **ಇಂದ್ರಸೂನುಃ** = ಅರ್ಜುನನು, **ಪುನಃ** = ಮತ್ತೆ, **ಅಮರ್ಷಿತಃ** = ಕುಪಿತನಾಗಿ, **ತಚ್ಚಾಪಮ್** = ಆ ಶಲ್ಯನ ಬಿಲ್ಲನ್ನು, **ನ್ಯಕೃಂತತ್** = ತುಂಡರಿಸಿದನು, **ಶಲ್ಯಃ** = ಶಲ್ಯನು, **ಗದಾವ್** = ಗದೆಯನ್ನು, **ಸಮಾದಾಯ** = ಎತ್ತಿಕೊಂಡು, **ಅರ್ಜುನವಕ್ಷಸಿ** = ಅರ್ಜುನನ ಎದೆಯಲ್ಲಿ, **ಚಿಕ್ಷೇಪ** = ಎಸೆದನು.

**ತಾತ್ಪರ್ಯ** :- ಅರ್ಜುನನು ಮತ್ತೆ ಕುಪಿತನಾಗಿ ಶಲ್ಯನ ಬಿಲ್ಲನ್ನು ತುಂಡರಿಸಿದನು. ಶಲ್ಯನಾದರೋ ಗದೆಯನ್ನು ಎತ್ತಿಕೊಂಡು ಅರ್ಜುನನ ಎದೆಯಲ್ಲಿ ಎಸೆದನು.

**ತದಾ ಮುಮೋಹ ಬೀಭತ್ಸುಸ್ತತ ಉಚ್ಚುಕ್ರುಶುಃ ಪರೇ ।**
**ಪ್ರಾಪ್ಯ ಸಂಜ್ಞಾಂ ಪುನಃ ಪಾರ್ಥಃ ಶಲ್ಯಂ ವಿವ್ಯಾಧ ವಕ್ಷಸಿ ।**
**ಸ ವಿಹ್ವಲಿತಸವಾಂಗಃ ಶಿಶ್ರಿಯೇ ಧ್ವಜಮುತ್ತಮಮ್ ॥ ೧೯ ॥**

ಪದಚ್ಛೇದ :- ತದಾ, ಮುಮೋಹ, ಭೀಭತ್ಸುಃ, ತತಃ, ಉಚ್ಚುಕ್ರುಶುಃ, ಪರೇ । ಪ್ರಾಪ್ಯ, ಸಂಜ್ಞಾಮ್, ಪುನಃ, ಪಾರ್ಥಃ, ಶಲ್ಯಮ್, ವಿವ್ಯಾಧ, ವಕ್ಷಸಿ । ಸಃ, ವಿಹ್ವಲಿತಸರ್ವಾಂಗಃ, ಶಿಶ್ರಿಯೇ, ಧ್ವಜಮ್, ಉತ್ತಮಮ್ ॥

**ಅನ್ವಯಾರ್ಥ** :- **ತದಾ** = ಆಗ, **ಭೀಭತ್ಸುಃ** = ಅರ್ಜುನನು, **ಮುಮೋಹ** = ಮೂರ್ಛಿತನಾದನು, **ತತಃ** = ಅನಂತರ, **ಪರೇ** = ಶತ್ರುಗಳು, **ಉಚ್ಚುಕ್ರುಶುಃ** = ಜಯಘೋಷ ಮಾಡಿದರು, **ಪುನಃ** = ಮತ್ತೆ, **ಪಾರ್ಥಃ** = ಅರ್ಜುನನು, **ಸಂಜ್ಞಾಮ್ ಪ್ರಾಪ್ಯ** = ಎಚ್ಚೆತ್ತು, **ಶಲ್ಯಮ್** = ಶಲ್ಯನನ್ನು, **ವಕ್ಷಸಿ** = ಎದೆಯಲ್ಲಿ, **ವಿವ್ಯಾಧ** = ಹೊಡೆದನು, **ಸಃ** = ಆ ಶಲ್ಯನು, **ವಿಹ್ವಲಿತಸವಾಂಗಃ** = ನಡುಗಿದ ಮೈಯುಳ್ಳವನಾಗಿ, **ಉತ್ತಮವ್** = ಉತ್ತಮವಾದ, **ಧ್ವಜಮ್** = ಧ್ವಜವನ್ನು, **ಶಿಶ್ರಿಯೇ** = ಆಶ್ರಯಿಸಿದನು.

**ತಾತ್ಪರ್ಯ** :- ಆ ಅರ್ಜುನನು ಮೂರ್ಛಿತನಾದನು. ಶತ್ರುಗಳು ಜಯಘೋಷ ಮಾಡಿದರು. ಮತ್ತೆ ಅರ್ಜುನನು ಎದ್ದು ಶಲ್ಯನ ಎದೆಗೆ ಹೊಡೆದನು. ಶಲ್ಯನಾದರೋ ನಡುಗಿದವನಾಗಿ ತನ್ನ ರಥದ ಧ್ವಜವನ್ನು ಆಶ್ರಯಿಸಿ ನಿಂತನು.

**ಸಮಾಶ್ವಸ್ತಃ ಪುನರ್ಬಾಣಂ ಯಮದಂಡನಿಭಂ ರಣೇ ॥ ೨೦ ॥**

**ಮುಮೋಚ ಪಾರ್ಥಸ್ಯ ಸ ಚ ನಿರ್ಬಿಭೇದ ಸ್ತನಾಂತರಮ್ ।**
**ತೇನ ವಿಹ್ವಲಿತಃ ಪಾರ್ಥೋ ಧ್ವಜಯಷ್ಟಿಂ ಸಮಾಶ್ರಿತಃ ॥ ೨೧ ॥**

ಪದಚ್ಛೇದ :- ಸಮಾಶ್ವಸ್ತಃ, ಪುನಃ, ಬಾಣಮ್, ಯಮದಂಡನಿಭಮ್, ರಣೇ । ಮುಮೋಚ, ಪಾರ್ಥಸ್ಯ, ಸಃ, ಚ, ನಿರ್ಬಿಭೇದ, ಸ್ತನಾಂತರಮ್ । ತೇನ, ವಿಹ್ವಲಿತಃ, ಪಾರ್ಥಃ, ಧ್ವಜಯಷ್ಟಿಮ್, ಸಮಾಶ್ರಿತಃ ॥

**ಅನ್ವಯಾರ್ಥ** :- **ಸಮಾಶ್ವಸ್ತಃ** = ಶಲ್ಯನು ಸಮಾಧಾನಗೊಂಡವನಾಗಿ, **ಪುನಃ** = ಮತ್ತೆ, **ಯಮದಂಡನಿಭಮ್** = ಯಮದಂಡಕ್ಕೆ ಸಮಾನವಾದ, **ಬಾಣಮ್** = ಬಾಣವನ್ನು, **ರಣೇ** = ಯುದ್ಧದಲ್ಲಿ, **ಪಾರ್ಥಸ್ಯ** = ಅರ್ಜುನನಿಗೆ, **ಮುಮೋಚ** = ಬಿಟ್ಟನು. **ಸ ಚ** = ಆ ಬಾಣವು, **ಸ್ತನಾಂತರಮ್** = ಎದೆಯನ್ನು, **ನಿರ್ಬಿಭೇದ** = ಒಡೆಯಿತು, **ತೇನ** = ಅದರಿಂದ, **ವಿಹ್ವಲಿತಃ** = ನಡುಗಿದ, **ಪಾರ್ಥಃ** = ಅರ್ಜುನನು, **ಧ್ವಜಯಷ್ಟಿಮ್** = ಧ್ವಜಸ್ತಂಭವನ್ನು, **ಸಮಾಶ್ರಿತಃ** = ಆಶ್ರಯಿಸಿ ನಿಂತನು.

**ತಾತ್ಪರ್ಯ** :- ಶಲ್ಯನು ಸಮಾಧಾನಗೊಂಡು ಪುನಃ ಯಮದಂಡಕ್ಕೆ ಸಮಾನವಾದ ಬಾಣವನ್ನು ಯುದ್ಧದಲ್ಲಿ ಅರ್ಜುನನಿಗೆ ಎಸೆದನು. ಆ ಬಾಣ ಅವನ ಎದೆಯನ್ನು ಒಡೆಯಿತು. ಅದರಿಂದ ಕಂಪಿತನಾದ ಅರ್ಜುನನು ರಥದ ಧ್ವಜಸ್ತಂಭವನ್ನು ಆಶ್ರಯಿಸಿ ನಿಂತನು.

**ಸಮಾಶ್ವಸ್ತಃ ಪ್ರಚಿಚ್ಛೇದ ಮದ್ರರಾಜಸ್ಯ ಕಾರ್ಮುಕಮ್ ।**
**ಛತ್ರಂ ಧ್ವಜಂ ಚ ತರಸಾ ಸಾರಥಿಂ ಚ ನ್ಯಪಾತಯತ್ ॥ ೨೨ ॥**

ಪದಚ್ಛೇದ :- ಸಮಾಶ್ವಸ್ತಃ, ಪ್ರಚಿಚ್ಛೇದ, ಮದ್ರರಾಜಸ್ಯ, ಕಾರ್ಮುಕಮ್ । ಛತ್ರಮ್, ಧ್ವಜಮ್, ಚ ತರಸಾ, ಸಾರಥಿಮ್, ಚ ನ್ಯಪಾತಯತ್ ॥

**ಅನ್ವಯಾರ್ಥ** :- **ಸಮಾಶ್ವಸ್ತಃ** = ಅರ್ಜುನನು ಸಮಾಧಾನಗೊಂಡವನಾಗಿ, **ಮದ್ರರಾಜಸ್ಯ** = ಶಲ್ಯನ, **ಕಾರ್ಮುಕಮ್** = ಬಿಲ್ಲನ್ನು, **ಪ್ರಚಿಚ್ಛೇದ** = ತುಂಡರಿಸಿದನು, **ಚ** = ಮತ್ತು, **ಛತ್ರಮ್** = ಛತ್ರವನ್ನು, **ಧ್ವಜಮ್** = ಧ್ವಜವನ್ನು, **ಸಾರಥಿಂ ಚ** = ಸಾರಥಿಯನ್ನೂ ಕೂಡ, **ನ್ಯಪಾತಯತ್** = ಕೆಳಗೆ ಉರುಳಿಸಿದನು.

**ತಾತ್ಪರ್ಯ** :- ಅರ್ಜುನನು ಸಮಾಧಾನಗೊಂಡು ಶಲ್ಯನ ಬಿಲ್ಲನ್ನು ತುಂಡರಿಸಿದನು. ಹಾಗೆಯೇ ಛತ್ರವನ್ನು ಧ್ವಜವನ್ನು ಸಾರಥಿಯನ್ನೂ ಕೂಡ ಕೆಳಗೆ ಉರುಳಿಸಿದನು.

**ತದಾಽನ್ಯಂ ರಥಮಾಸ್ಥಾಯ ಧರ್ಮರಾಜಃ ಶರೋತ್ತಮೈಃ ।**
**ಚತುರ್ಭಿಶ್ಚತುರೋ ವಾಹಾನ್ ಶಲ್ಯಸ್ಯ ನಿಜಘಾನ ಹ ॥ ೨೩ ॥**

ಪದಚ್ಛೇದ :– ತದಾ, ಅನ್ಯಮ್, ರಥಮ್, ಆಸ್ಥಾಯ, ಧರ್ಮರಾಜಃ, ಶರೋತ್ತಮೈಃ । ಚತುರ್ಭಿಃ, ಚತುರಃ, ವಾಹಾನ್, ಶಲ್ಯಸ್ಯ, ನಿಜಘಾನ, ಹ ॥

**ಅನ್ವಯಾರ್ಥ** :- **ತದಾ** = ಆಗ, **ಧರ್ಮರಾಜಃ** = ಧರ್ಮರಾಜನು, **ಅನ್ಯಮ್** = ಬೇರೆ, **ರಥಮ್** = ರಥವನ್ನು, **ಆಸ್ಥಾಯ** = ಏರಿ, **ಚತುರ್ಭಿಃ** = ನಾಲ್ಕು, **ಶರೋತ್ತಮೈಃ** = ಉತ್ತಮಬಾಣಗಳಿಂದ, **ಶಲ್ಯಸ್ಯ** = ಶಲ್ಯನ, **ಚತುರಃ ವಾಹಾನ್** = ನಾಲ್ಕು ಕುದುರೆಗಳನ್ನು, **ನಿಜಘಾನ ಹ** = ಸಂಹರಿಸಿದನು.

**ತಾತ್ಪರ್ಯ** :- ಅಷ್ಟರಲ್ಲಿ ಧರ್ಮರಾಜನು ಬೇರೊಂದು ರಥವನ್ನೇರಿ ಉತ್ತಮವಾದ ನಾಲ್ಕು ಬಾಣಗಳಿಂದ ಶಲ್ಯನ ನಾಲ್ಕು ಕುದುರೆಗಳನ್ನು ಸಂಹರಿಸಿದನು.

**ಶಲ್ಯೋಽನ್ಯಂ ರಥಮಾಸ್ಥಾಯ ಸರ್ವಾಂಸ್ತಾನ್ ಶರವೃಷ್ಟಿಭಿಃ ।**
**ಛಾದಯಾಮಾಸ ರಾಜಾನಂ ವಿರಥಂ ಚ ಚಕಾರ ಹ ॥ ೨೪ ॥**

ಪದಚ್ಛೇದ :– ಶಲ್ಯಃ, ಅನ್ಯಮ್, ರಥಮ್, ಆಸ್ಥಾಯ, ಸರ್ವಾನ್, ತಾನ್, ಶರವೃಷ್ಟಿಭಿಃ । ಛಾದಯಾಮಾಸ, ರಾಜಾನಮ್, ವಿರಥಮ್, ಚ, ಚಕಾರ, ಹ ॥

**ಅನ್ವಯಾರ್ಥ** :- **ಶಲ್ಯಃ** = ಶಲ್ಯನು, **ಅನ್ಯಂ ರಥಮ್** = ಇನ್ನೊಂದು ರಥವನ್ನು, **ಆಸ್ಥಾಯ** = ಏರಿ, **ಶರವೃಷ್ಟಿಭಿಃ** = ಬಾಣಗಳ ಮಳೆಯಿಂದ, **ತಾನ್ ಸರ್ವಾನ್** = ಅವರೆಲ್ಲರನ್ನು, **ಛಾದಯಾಮಾಸ** = ಆವರಿಸಿದನು, **ಚ** = ಮತ್ತು, **ರಾಜಾನಮ್** = ಧರ್ಮರಾಜನನ್ನು, **ವಿರಥಮ್** = ರಥರಹಿತನನ್ನಾಗಿ, **ಚಕಾರ** = ಮಾಡಿದನು.

**ತಾತ್ಪರ್ಯ** :- ಶಲ್ಯನೂ ಕೂಡ ಇನ್ನೊಂದು ರಥವನ್ನು ಏರಿ ಬಾಣಗಳ ಮಳೆಯಿಂದ ಅವರೆಲ್ಲರನ್ನು ಆವರಿಸಿದನು. ಹಾಗೆಯೇ ಧರ್ಮರಾಜನನ್ನು ವಿರಥನನ್ನಾಗಿ ಮಾಡಿದನು.

**ನಿಹತ್ಯಾಶ್ವಾನ್ ಸಾತ್ಯಕೇಶ್ಚ ಧೃಷ್ಟದ್ಯುಮ್ನಸ್ಯ ಚಾಭಿಭೂಃ ।**
**ಚಾಪೇ ಚ್ಛಿತ್ವಾ ಚ ಯಮಯೋರ್ದಧ್ಮೌ ಶಂಖಂ ಮಹಾಸ್ವನಮ್ ॥ ೨೫ ॥**

**ಪದಚ್ಛೇದ** :- **ನಿಹತ್ಯ, ಅಶ್ವಾನ್, ಸಾತ್ಯಕೇಃ, ಚ, ಧೃಷ್ಟದ್ಯುಮ್ನಸ್ಯ, ಚ, ಅಭಿಭೂಃ । ಚಾಪೇ, ಛಿತ್ವಾ, ಯಮಯೋಃ, ದಧ್ಮೌ, ಶಂಖಮ್, ಮಹಾಸ್ವನಮ್ ॥**

**ಅನ್ವಯಾರ್ಥ** :- **ಅಭಿಭೂಃ** = ಶತ್ರುಗಳನದನು ಸೋಲಿಸುವ ಶಲ್ಯನು, **ಧೃಷ್ಟದ್ಯುಮ್ನಸ್ಯ** = ಧೃಷ್ಟದ್ಯುಮ್ನನ, **ಚ** = ಮತ್ತು, **ಸಾತ್ಯಕೇಃ** = ಸಾತ್ಯಕಿಯ, **ಅಶ್ವಾನ್** = ಕುದುರೆಗಳನ್ನು, **ನಿಹತ್ಯ** = ಕೊಂದು, **ಯಮಯೋಃ** = ನಕುಲಸಹದೇವರ, **ಚಾಪೇ** = ಬಿಲ್ಲುಗಳನ್ನು, **ಚ್ಛಿತ್ವಾ** = ತುಂಡರಿಸಿ, **ಮಹಾಸ್ವನಮ್** = ದೊಡ್ಡ ಧ್ವನಿಯುಳ್ಳ, **ಶಂಖಮ್** = ಶಂಖವನ್ನು, **ದಧ್ಮೌ** = ಮೊಳಗಿತು.

**ತಾತ್ಪರ್ಯ** :- ಶತ್ರುತಾಪಕನಾದ ಶಲ್ಯನು ಸಾತ್ಯಕಿ ಹಾಗೂ ಧೃಷ್ಟದ್ಯುಮ್ನರ ಕುದುರೆಗಳನ್ನು ಕೊಂದು ನಕುಲಸಹದೇವರ ಬಿಲ್ಲುಗಳನ್ನು ತುಂಡರಿಸಿ ಜೋರಾಗಿ ಶಂಖನಾದವನ್ನು ಮಾಡಿದನು.

**ತತಸ್ತು ಶಲ್ಯಂ ಸಮುದೀರ್ಯಮಾಣಂ**
**ದೃಷ್ಟ್ವಾ ರಣೇ ಭೀಮಸೇನಸ್ತರಸ್ವೀ ।**
**ನ್ಯವಾರಯದ್ ಬಾಣವರ್ಯೈರನೇಕೈ-**
**ಶ್ಚಕಾರ ಚೈನಂ ವಿರಥಂ ಕ್ಷಣೇನ ॥ ೨೬ ॥**

ಪದಚ್ಛೇದ :- ತತಃ, ಶಲ್ಯಮ್, ಸಮುದೀರ್ಯಮಾಣಮ್, ದೃಷ್ಟ್ವಾ, ರಣೇ, ಭೀಮಸೇನಃ, ತರಸ್ವೀ । ನ್ಯವಾರಯತ್, ಬಾಣವರ್ಯೈಃ, ಅನೇಕೈಃ, ಚಕಾರ, ಚ, ಏನಮ್, ವಿರಥಮ್, ಕ್ಷಣೇನ ॥

**ಅನ್ವಯಾರ್ಥ** :- **ತತಸ್ತು** = ಅನಂತರವಾದರೋ, **ರಣೇ** = ಯುದ್ಧದಲ್ಲಿ, **ಸಮುದೀರ್ಯಮಾಣಮ್** = ಎಲ್ಲರಿಂದಲೂ ಹೊಗಳಿಸಿಗೊಳ್ಳಲ್ಪಟ್ಟ, **ಶಲ್ಯಮ್** = ಶಲ್ಯನನ್ನು, **ಭೀಮಸೇನಃ** = ಭೀಮಸೇನನು, **ತರಸ್ವೀ** = ವೇಗಶಾಲಿಯಾಗಿ, **ಅನೇಕೈಃ** = ಅನೇಕವಾದ, **ಬಾಣವರ್ಯೈಃ** = ಶ್ರೇಷ್ಠ ಬಾಣಗಳಿಂದ, **ನ್ಯವಾರಯತ್** = ಅವನನ್ನು ತಡೆದನು, **ಚ** = ಮತ್ತು, **ಕ್ಷಣೇನ** = ಕ್ಷಣಕಾಲದಲ್ಲಿ, **ಏನಮ್** = ಶಲ್ಯನನ್ನು, **ವಿರಥಮ್** = ವಿರಥನನ್ನಾಗಿ, **ಚಕಾರ** = ಮಾಡಿದನು.

**ತಾತ್ಪರ್ಯ** :- ಅನಂತರ ಯುದ್ಧದಲ್ಲಿ ಎಲ್ಲರಿಂದಲೂ ಹೊಗಳಿಕೆಗೆ ಪಾತ್ರನಾದ ಶಲ್ಯನನ್ನು ಭೀಮಸೇನನು ನೋಡಿ ವೇಗವಾಗಿ ಅನೇಕ ಬಾಣಗಳಿಂದ ಅವನನ್ನು ತಡೆದ. ಹಾಗೆಯೇ ಕ್ಷಣದಲ್ಲಿ ವಿರಥನನ್ನಾಗಿಯೂ ಮಾಡಿದ.

**ಆಸ್ಥಾಯ ಚಾನ್ಯಂ ರಥಮಾಪತಂತಂ**
**ಪುನಶ್ಚ ಶಲ್ಯಂ ಭೃಶಮೇವ ಮರ್ಮಸು ।**
**ನಿರ್ಭಿದ್ಯ ಬಾಣೈರ್ವಿರಥಂ ಚಕಾರ**
**ಪುನಸ್ತೃತೀಯಂ ಚ ರಥಂ ರುರೋಜ ॥ ೨೭ ॥**

ಪದಚ್ಛೇದ :- ಆಸ್ಥಾಯ, ಚ, ಅನ್ಯಮ್, ರಥಮ್, ಆಪತಂತಮ್, ಪುನಃ, ಚ, ಶಲ್ಯಮ್, ಭೃಶಮ್ ಏವ, ಮರ್ಮಸು । ನಿರ್ಭಿದ್ಯ, ಬಾಣಮ್, ವಿರಥಮ್, ಚಕಾರ, ಪುನಃ, ತೃತೀಯಮ್, ಚ, ರಥಮ್, ರುರೋಜ ॥

**ಅನ್ವಯಾರ್ಥ** :- **ಅನ್ಯಮ್** = ಬೇರೆ, **ರಥಮ್** = ರಥವನ್ನು, **ಆಸ್ಥಾಯ** = ಏರಿ, **ಪುನಃ** = ಮತ್ತೆ, **ಆಪತಂತಮ್** = ಬರುತ್ತಿರುವ, **ಶಲ್ಯಮ್** = ಶಲ್ಯನನ್ನು ಭೀಮನು, **ಭೃಶಮೇವ** = ಚೆನ್ನಾಗಿ, **ಮರ್ಮಸು** = ಮರ್ಮಸ್ಥಾನಗಳಲ್ಲಿ, **ನಿರ್ಭಿದ್ಯ** = ಹೊಡೆದು, **ಬಾಣೈಃ** = ಬಾಣಗಳಿಂದ, **ವಿರಥಮ್** = ವಿರಥನನ್ನಾಗಿ, **ಚಕಾರ** = ಮಾಡಿದನು, **ಪುನಃ** = ಮತ್ತೆ,

**ತೃತೀಯಂ** = ಮೂರನೆಯದ್ದಾದ, **ರಥಂ ಚ** = ರಥವನ್ನೂ ಕೂಡ, **ರುರೋಜ** = ಮುರಿದನು.

**ತಾತ್ಪರ್ಯ** :- ಮತ್ತೊಂದು ರಥವನ್ನು ಏರಿ ಪುನಃ ಬಂದ ಶಲ್ಯನನ್ನು ಭೀಮಸೇನನು ಬಾಣಗಳಿಂದ ಮರ್ಮಸ್ಥಾನದಲ್ಲಿ ಹೊಡೆದು ವಿರಥನನ್ನಾಗಿ ಮಾಡಿದನು. ಮತ್ತೆ ಅವನ ಮೂರನೆಯ ರಥವನ್ನು ಮುರಿದನು.

**ಆತ್ತಾನ್ಯಾತ್ತಾನ್ಯಾಯುಧಾನ್ಯಸ್ಯ ಭಿಮಃ**
**ಸರ್ವಾಣಿ ಚಿಚ್ಛೇದ ಬಿಭೇದ ಚಾಸ್ಯ ।**
**ಮರ್ಮಾಣಿ ಬಾಣೈರ್ನಿತರಾಂ ಪುನಶ್ಚ**
**ಸ ಮುಷ್ಟಿಮುದ್ಯಮ್ಯ ಜಗಾಮ ಧರ್ಮಜಮ್ ॥ ೨೮ ॥**

ಪದಚ್ಛೇದ :– ಆತ್ತಾನಿ, ಆತ್ತಾನಿ, ಆಯುಧಾನಿ, ಅಸ್ಯ, ಭೀಮಃ, ಸರ್ವಾಣಿ, ಚಿಚ್ಛೇದ, ಬಿಭೇದ, ಮರ್ಮಾಣಿ, ಬಾಣೈಃ, ನಿತರಾಮ್, ಪುನಃ, ಚ, ಸಃ, ಮುಷ್ಟಿಮ್, ಉದ್ಯಮ್ಯ, ಜಗಾಮ, ಧರ್ಮಜಮ್ ॥

**ಅನ್ವಯಾರ್ಥ** :- **ಅಸ್ಯ** = ಈ ಶಲ್ಯನ, **ಆತ್ತಾನಿ ಆತ್ತಾನಿ** = ಎತ್ತಿದ, **ಸರ್ವಾಣಿ** = ಎಲ್ಲಾ, **ಆಯುಧಾನಿ** = ಆಯುಧಗಳನ್ನು, **ಭೀಮಃ** = ಭೀಮನು, **ಚಿಚ್ಛೇದ** = ತುಂಡರಿಸಿದನು, **ಚ** = ಮತ್ತು, **ಅಸ್ಯ** = ಈ ಶಲ್ಯನ, **ಮರ್ಮಾಣಿ** = ಮರ್ಮಗಳನ್ನು, **ಬಾಣೈಃ** = ಬಾಣಗಳಿಂದ, **ನಿತರಾಮ್** = ಅತ್ಯಂತವಾಗಿ, **ಬಿಭೇದ** = ಗಾಯಗೊಳಿಸಿದನು, **ಪುನಶ್ಚ** = ಮತ್ತೆ, **ಸಃ** = ಆ ಶಲ್ಯನು, **ಮುಷ್ಟಿಮ್** = ಮುಷ್ಟಿಯನ್ನು, **ಉದ್ಯಮ್ಯ** = ಎತ್ತಿ, **ಧರ್ಮಜಮ್** = ಧರ್ಮರಾಜನ ಬಳಿ, **ಜಗಾಮ** = ಹೊರಟನು.

**ತಾತ್ಪರ್ಯ** :- ಶಲ್ಯನು ಎತ್ತಿಕೊಂಡ ಎಲ್ಲಾ ಆಯುಧಗಳನ್ನು ಭೀಮಸೇನನು ತುಂಡರಿಸಿದನು. ಪುನಃ ಬಾಣಗಳಿಂದ ಅವನ ಮರ್ಮಗಳನ್ನು ಅತ್ಯಂತವಾಗಿ ಗಾಯಗೊಳಿಸಿದನು. ಪುನಃ ಶಲ್ಯನು ಮುಷ್ಟಿಯನ್ನು ಎತ್ತಿ ಧರ್ಮರಾಜನ ಕಡೆ ನಡದನು.

**ತಂ ಭೀಮಭಿನ್ನಮರ್ಮಾಣಂ ವಿವರ್ಮಾಣಂ ನಿರಾಯುಧಮ್ ।**
**ಶ್ವಾಸಮಾತ್ರಾವಶಿಷ್ಟಂ ಚ ಮರಣಾಯೈವ ಕೇವಲಮ್ ॥ ೨೯ ॥**

**ಆತ್ಮಾನಮಭಿಗಚ್ಛಂತಂ ದೃಷ್ಟ್ವಾಽನ್ಯಂ ರಥಮಾಸ್ಥಿತಃ ।**
**ಹಂತುಕಾಮೋ ರಣೇ ವೀರಮಮೋಘಾಂ ಶಕ್ತಿಮಾದದೇ ॥ ೩೦ ॥**

ಪದಚ್ಛೇದ :- ತಮ್, ಭೀಮಮ್, ಭೀಮಭಿನ್ನವರ್ಮಾಣಮ್, ವಿಮರ್ಮಾಣಮ್, ನಿರಾಯುಧಮ್ । ಶ್ವಾಸಮಾತ್ರಾವಶಿಷ್ಟಮ್, ಚ, ವ್ಮರಣಾಯ, ಏವ, ಕೇವಲಮ್ ॥ ಆತ್ಮಾನಮ್, ಅಭಿಗಚ್ಛಂತಮ್, ದೃಷ್ಟ್ವಾ, ಅನ್ಯಮ್, ರಥಮ್, ಆಸ್ಥಿತಃ । ಹಂತುಕಾಮಃ, ರಣೇ, ವೀರಮ್, ಅಮೋಘಾಮ್, ಶಕ್ತಿಮ್, ಆದದೇ ॥

**ಅನ್ವಯಾರ್ಥ** :- **ಭೀಮಭಿನ್ನವರ್ಮಾಣಮ್** = ಭೀಮನಿಂದ ಭೇದಿಸಲ್ಪಟ್ಟ, **ವಿಮರ್ಮಾಣಮ್** = ಕವಚರಹಿತನಾದ, **ನಿರಾಯುಧಮ್** = ಆಯುಧರಹಿತನಾದ, **ಚ** = ಮತ್ತು, **ಶ್ವಾಸಮಾತ್ರಾವಶಿಷ್ಟಮ್** = ಶ್ವಾಸಮಾತ್ರ ಉಳಿದಿರುವ, **ಕೇವಲಮ್ ಮರಣಾಯೈವ** = ಕೇವಲ ಮರಣಕ್ಕಾಗಿಯೇ, **ಆತ್ಮಾನಮ್ ಅಭಿಗಚ್ಛಂತಮ್** = ತನ್ನೆದರು ಬರುತ್ತಿರು, **ವೀರಮ್** = ವೀರನಾದ, **ತಮ್** = ಆ ಶಲ್ಯನನ್ನು, **ದೃಷ್ಟ್ವಾ** = ನೋಡಿ ಧರ್ಮರಾಜನು, **ಅನ್ಯಂ ರಥಮ್** = ಬೇರೆ ರಥವನ್ನು, **ಆಸ್ಥಿತಃ** = ಏರಿದವನಾಗಿ, **ರಣೇ** = ಯುದ್ಧದಲ್ಲಿ, **ಹಂತುಕಾಮಃ** = ಕೊಲ್ಲುವ ಇಚ್ಛೆಯುಳ್ಳವನಾಗಿ, **ಅಮೋಘಾಮ್** = ಅಮೋಘವಾದ, **ಶಕ್ತಿಮ್** = ಶಕ್ತಿ ಎಂಬ ಆಯುಧವನ್ನು, **ಆದದೇ** = ಸ್ವೀಕರಿಸಿದನು.

**ತಾತ್ಪರ್ಯ** :- ಮರ್ಮಸ್ಥಾನಗಳನ್ನು ಕಳೆದುಕೊಂಡ ಕವಚರಹಿತನಾದ, ನಿರಾಯುಧನಾದ, ಶ್ವಾಸಮಾತ್ರ ಉಳಿದ ಶಲ್ಯನು ಮರಣಕ್ಕಾಗಿಯೇ ತನ್ನ ಹತ್ತಿರ ಬರುತ್ತಿದ್ದಾನೆಂದು ನೋಡಿ ಧರ್ಮರಾಜನು ಕೊಲ್ಲುವ ಇಚ್ಛೆಯುಳ್ಳವನಾಗಿ ರಥವನ್ನೇರಿ ಶಕ್ತಿ ಎಂಬ ಅಮೋಘವಾದ ಆಯುಧವನ್ನು ಎತ್ತಿದನು.

**ದಿವ್ಯಾಸ್ತ್ರೈರಪಿ ಸಂಯೋಜ್ಯ ತಾಂ ತದಾ ಧರ್ಮನಂದನಃ ।**
**ಸತ್ಯಧರ್ಮಫಲೈಶ್ಚೈವ ಚಿಕ್ಷೇಪಾಸ್ಯ ಹೃದಿ ತ್ವರನ್ ॥ ೩೧ ॥**

**ಸ ಭಿನ್ನಹೃದಯೋ ಭೂಮೌ ಪಪಾತಾಭಿಮುಖೋ ನೃಪಮ್ ।**
**ಸತ್ಯಧರ್ಮರತಃ ಶಲ್ಯ ಇಂದ್ರಸ್ಯಾತಿಥಿತಾಮಗಾತ್ ॥ ೩೨ ॥**

ಪದಚ್ಛೇದ :- ದಿವ್ಯಾಸ್ತ್ರೈಃ, ಅಭಿಸಂಯೋಜ್ಯ, ತಾಮ್, ತದಾ, ಧರ್ಮನಂದನಃ । ಸತ್ಯಧರ್ಮಫಲೈಃ, ಚ, ಏವ, ಚಿಕ್ಷೇಪ, ಅಸ್ಯ, ಹೃದಿ, ತ್ವರನ್ ॥

ಸಃ, ಭಿನ್ನಹೃದಯಃ, ಭೂಮೌ, ಪಪಾತ, ಅಭಿಮುಖೋ, ನೃಪಮ್ । ಸತ್ಯಧರ್ಮರತಃ, ಶಲ್ಯಃ, ಇಂದ್ರಸ್ಯ, ಅತಿಥಿತಾಮ್, ಅಗಾತ್ ॥

**ಅನ್ವಯಾರ್ಥ** :- **ತದಾ** = ಆಗ, **ಧರ್ಮನಂದನಃ** = ಧರ್ಮರಾಜನು, **ತಾಮ್** = ಆ ಶಕ್ತ್ಯಾಯುಧವನ್ನು, **ದಿವ್ಯಾಸ್ತ್ರೈಃ** = ದಿವ್ಯವಾದ ಅಸ್ತ್ರಗಳಿಂದ, **ಚ** = ಮತ್ತು, **ಸತ್ಯಧರ್ಮಫಲೈಃ** = ಸತ್ಯಧರ್ಮಗಳ ಪುಣ್ಯಗಳಿಂದ, **ಅಭಿಸಂಯೋಜ್ಯ** = ಕೂಡಿಸಿ, **ಅಸ್ಯ** = ಶಲ್ಯನ, **ಹೃದಿ** = ಎದೆಯಲ್ಲಿ, **ತ್ವರನ್** = ವೇಗವಾಗಿ, **ಚಿಕ್ಷೇಪ** = ಎಸೆದನು, **ಸಃ** = ಆ ಶಲ್ಯನು, **ಭಿನ್ನಹೃದಯಃ** = ಭಿನ್ನವಾದ ಹೃದಯವುಳ್ಳವನಾಗಿ, **ನೃಪಮ್ ಅಭಿಮುಖಃ** = ಧರ್ಮರಾಜನ ಎದುರಲ್ಲಿ, **ಭೂಮೌ** = ಭೂಮಿಯಲ್ಲಿ, **ಪಪಾತ** = ಬಿದ್ದನು, **ಸತ್ಯಧರ್ಮರತಃ** = ಸತ್ಯಧರ್ಮರತನಾದ, **ಶಲ್ಯಃ** = ಶಲ್ಯನು, **ಇಂದ್ರಸ್ಯ** = ಇಂದ್ರನ, **ಅತಿಥಿತಾಮ್** = ಅತಿಥಿತ್ವವನ್ನು, **ಅಗಾತ್** = ಹೊಂದಿದನು.

**ತಾತ್ಪರ್ಯ** :- ಧರ್ಮರಾಜನು ಆ ಶಕ್ತ್ಯಾಯುಧವನ್ನು ದಿವ್ಯವಾದ ಅಸ್ತ್ರಗಳಿಂದ ಹಾಗೂ ಸತ್ಯಧರ್ಮಗಳ ಪುಣ್ಯಗಳಿಂದಲೂ ಕೂಡಿಸಿ ಶಲ್ಯನ ಎದೆಯ ಮೇಲೆ ವೇಗವಾಗಿ ಎಸೆದನು. ಶಲ್ಯನು ಎದೆ ಒಡೆದು ಧರ್ಮರಾಜನ ಎದುರಿನಲ್ಲಿಯೇ ಭೂಮಿಮೇಲೆ ಬಿದ್ದನು. ಹೀಗೆ ಸತ್ಯಧರ್ಮರತನಾದ ಶಲ್ಯನು ಸ್ವರ್ಗದಲ್ಲಿ ಇಂದ್ರನ ಅತಿಥಿಯಾದನು.

ದುರ್ಯೋಧನನ ಪಲಾಯನ

**ಮದ್ರರಾಜೇ ಹತೇ ವೀರೇ ಸುಶರ್ಮಾಽರ್ಜುನಮಭ್ಯಯಾತ್ ।**
**ಸಂಸಪ್ತಕಾವಶಿಷ್ಟೈಸ್ತಮನಯನ್ಮೃತ್ಯವೇಽರ್ಜುನಃ ॥ ೩೩ ॥**

ಪದಚ್ಛೇದ :- ಮದ್ರರಾಜೇ, ಹತೇ, ವೀರೇ, ಸುಶರ್ಮಾ, ಅರ್ಜುನಮ್, ಅಭ್ಯಯಾತ್ । ಸಂಶಪ್ತಕಾವಶಿಷ್ಟೈಃ, ತಮ್, ಅನಯತ್, ಮೃತ್ಯವೇ, ಅರ್ಜುನಃ ॥

**ಅನ್ವಯಾರ್ಥ** :- **ವೀರೇ** = ವೀರನಾದ, **ಮದ್ರರಾಜೇ** = ಶಲ್ಯನು, **ಹತೇ** = ಹತನಾಗುತ್ತಿರಲು, **ಸಂಶಪ್ತಕಾವಶಿಷ್ಟೈಃ** = ಸಂಶಪ್ತಕರಲ್ಲಿ ಉಳಿದವರ ಜೊತೆ,

**ಸುಶರ್ಮಾ** = ಸುಶರ್ಮನು, **ಅರ್ಜುನಮ್** = ಅರ್ಜುನನನ್ನು, **ಅಭ್ಯಯಾತ್** = ಎದುರಿಸಿದನು, **ತಮ್** = ಅವನನ್ನು, **ಅರ್ಜುನಃ** = ಅರ್ಜುನನು, **ಮೃತ್ಯವೇ** = ಮೃತ್ಯುವಿಗೆ, **ಅನಯತ್** = ಕಳುಹಿಸಿ ಕೊಟ್ಟನು.

**ತಾತ್ಪರ್ಯ** :- ವೀರನಾದ ಶಲ್ಯನು ಹತನಾದ ಮೇಲೆ ಸಂಶಪ್ತಕರಲ್ಲಿ ಅಳಿದುಳಿದವರ ಜೊತೆ ಸುಶರ್ಮನು ಅರ್ಜುನನ ಜೊತೆ ಯುದ್ಧಕ್ಕೆ ಬಂದನು. ಅರ್ಜುನನು ಅವನನ್ನು ಮೃತ್ಯುವಿಗೆ ಕಳುಹಿಸಿ ಕೊಟ್ಟನು.

**ದುರ್ಯೋಧನಸ್ಯಾವರಜಾನವಶಿಷ್ಟಾನ್ ವೃಕೋದರಃ ।**
**ಸರ್ವಾನ್ ಜಘಾನ ಸೇನಾಂ ಚ ನಿಶ್ಶೇಷಮಕರೋದ್ ರಣೇ ॥ ೩೪ ॥**

**ಪದಚ್ಛೇದ** :- ದುರ್ಯೋಧನಸ್ಯ, ಅವರಜಾನ್, ಅವಶಿಷ್ಟಾನ್, ವೃಕೋದರಃ । ಸರ್ವಾನ್, ಜಘಾನ, ಸೇನಾಮ್, ಚ, ನಿಶ್ಶೇಷಾಮ್, ಅಕರೋತ್, ರಣೇ ॥

**ಅನ್ವಯಾರ್ಥ** :- **ಅವಶಿಷ್ಟಾನ್** = ಅಳಿದುಳಿದ, **ದುರ್ಯೋಧನಸ್ಯ** = ದುರ್ಯೋಧನನ, **ಸರ್ವಾನ್ ಅವರಜಾನ್** = ಎಲ್ಲ ತಮ್ಮಂದಿರನ್ನು, **ವೃಕೋದರಃ** = ಭೀಮನು, **ಜಘಾನ** = ಕೊಂದನು, **ಸೇನಾಂ ಚ** = ಸೇನೆಯನ್ನೂ, **ರಣೇ** = ಯುದ್ಧದಲ್ಲಿ, **ನಿಶ್ಶೇಷಾಮ್ ಅಕರೋತ್** = ನಿಶ್ಶೇಷಗೊಳಿಸಿದನು.

**ತಾತ್ಪರ್ಯ** :- ಅಳಿದುಳಿದ ದುರ್ಯೋಧನನ ತಮ್ಮಂದಿರನ್ನು ಭೀಮನು ಕೊಂದನು. ಅವರ ಸೇನೆಯನ್ನೂ ಸಹ ನಿಶ್ಶೇಷಗೊಳಿಸಿದನು.

**ಉಲೂಕಂ ಸಹದೇವೋಽಥ ಶಕುನಿಂ ಚಾತಿಪಾಪಿನಮ್ ।**
**ಜಘಾನ ದ್ರೌಣಿಹಾರ್ದಿಕ್ಯಕೃಪಾನ್ ಭೀಮಾರ್ಜುನೌ ತತಃ ॥ ೩೫ ॥**

**ಬಹುಶೋ ವಿರಥೀಕೃತ್ಯ ಪೀಡಯಿತ್ವಾ ಪುನಃಪುನಃ ।**
**ದ್ರಾವಯಾಮಾಸತುಸ್ತೇ ತು ಭೀಷಿತಾ ವಿವಿಶುರ್ವನಮ್ ॥ ೩೬ ॥**

**ಪದಚ್ಛೇದ** :- ಉಲೂಕಮ್, ಸಹದೇವಃ, ಅಥ, ಶಕುನಿಮ್, ಚ, ಅತಿಪಾಪಿನಮ್ । ಜಘಾನ, ದ್ರೌಣಿಹಾರ್ದಿಕ್ಯಕೃಪಾನ್, ಭೀಮಾರ್ಜುನೌ, ತತಃ ॥

ಬಹುಶಃ, ವಿರಥೀಕೃತ್ಯ, ಪೀಡಯಿತ್ವಾ, ಪುನಃ, ಪುನಃ । ದ್ರಾವಯಾಮಾಸತುಃ, ತೇ, ಭೀಷಿತಾಃ, ವಿವಿಶುಃ, ವನಮ್ ॥

**ಅನ್ವಯಾರ್ಥ** :- **ಸಹದೇವಃ** = ಸಹದೇವನು, **ಉಲೂಕಮ್** = ಉಲೂಕನನ್ನು, **ಜಘಾನ** = ಸಂಹರಿಸಿದನು, **ಅಥ** = ಅನಂತರ, **ಅತಿಪಾಪಿನಮ್** = ಅತಿಪಾಪಿಯಾದ, **ಶಕುನಿಂ ಚ** = ಶಕುನಿಯನ್ನೂ ಕೂಡ, **ಜಘಾನ** = ಸಂಹರಿಸಿದನು, **ತತಃ** = ಅನಂತರ, **ಭೀಮಾರ್ಜುನೌ** = ಭೀಮಾರ್ಜುನರು, **ದ್ರೌಣಿಹಾರ್ದಿಕ್ಯಕೃಪಾನ್** = ಅಶ್ವತ್ಥಾಮ, ಕೃತವರ್ಮ, ಕೃಪರನ್ನು, **ಬಹುಶಃ** = ಬಹಳವಾಗಿ, **ವಿರಥೀಕೃತ್ಯ** = ವಿರಥರನ್ನಾಗಿ ಮಾಡಿ, **ಪುನಃ ಪುನಃ** = ಮತ್ತೆ ಮತ್ತೆ, **ಪೀಡಯಿತ್ವಾ** = ಪೀಡಿಸಿ, **ದ್ರಾವಯಾಮಾಸತುಃ** = ಓಡಿಸಿದರು, **ತೇ ತು** = ಅವರಾದರೋ, **ಭೀಷಿತಾಃ** = ಹೆದರಿದವರಾಗಿ, **ವನಮ್** = ಕಾಡನ್ನು, **ವಿವಿಶುಃ** = ಪ್ರವೇಶಿಸಿದರು.

**ತಾತ್ಪರ್ಯ** :- ಸಹದೇವನು ಉಲೂಕನನ್ನು ಸಂಹರಿಸಿದನು. ಅನಂತರ ಅತಿಪಾಪಿಯಾದ ಶಕುನಿಯನ್ನೂ ಕೊಂದನು. ಭೀಮಾರ್ಜುನರು ಅಶ್ವತ್ಥಾಮ, ಕೃತವರ್ಮ, ಕೃಪರನ್ನು ವಿರಥರನ್ನಾಗಿ ಮಾಡಿ ಪುನಃ, ಪುನಃ ಪೀಡಿಸಿ ಓಡಿಸಿದರು. ಅವರು ಭಯಪಟ್ಟು ಅರಣ್ಯವನ್ನು ಪ್ರವೇಶಿಸಿದರು.

**ಶೈನೇಯೇನ ಗೃಹೀತೋಽಥ**
**ಸಂಜಯೋಽನಂತಶಕ್ತಿನಾ ।**
**ವ್ಯಾಸೇನ ಮೋಚಿತೋಽಥೈಕಃ**
**ಪಾರ್ಥಾನ್ ದುರ್ಯೋಧನೋಽಭ್ಯಯಾತ್ ॥ ೩೭ ॥**

ಪದಚ್ಛೇದ :- ಶೈನೇಯೇನ, ಗೃಹೀತಃ, ಅಥ, ಸಂಜಯಃ, ಅನಂತಶಕ್ತಿನಾ । ವ್ಯಾಸೇನ, ಮೋಚಿತಃ, ಅಥ, ಏಕಃ, ಪಾರ್ಥಾನ್, ದುರ್ಯೋಧನಃ, ಅಭ್ಯಯಾತ್ ॥

**ಅನ್ವಯಾರ್ಥ** :- **ಅಥ** = ಅನಂತರ, **ಸಂಜಯಃ** = ಸಂಜಯನು, **ಶೈನೇಯೇನ** = ಸಾತ್ಯಕಿಯಿಂದ, **ಗೃಹೀತಃ** = ಹಿಡಿಯಲ್ಪಟ್ಟನು, **ಅನಂತಶಕ್ತಿನಾ** = ಸರ್ವಶಕ್ತರಾದ, **ವ್ಯಾಸೇನ** = ವೇದವ್ಯಾಸರಿಂದ, **ಮೋಚಿತಃ** = ಬಿಡಿಸಲ್ಪಟ್ಟನು, **ಅಥ** = ಅನಂತರ, **ಏಕಃ** = ಏಕಾಕಿಯಾದ, **ದುರ್ಯೋಧನಃ** = ದುರ್ಯೋಧನನು, **ಪಾರ್ಥನ್** = ಪಾಂಡವರನ್ನು, **ಅಭ್ಯಯಾತ್** = ಎದುರಿಸಿದನು.

**ತಾತ್ಪರ್ಯ** :- ಸಂಜಯನನ್ನು ಸಾತ್ಯಕಿಯು ಸೆರೆಹಿಡಿದನು. ಆಗ ಸರ್ವಸಮರ್ಥರಾದ ವೇದವ್ಯಾಸರು ಬಂದು ಅವನನ್ನು ಬಿಡಿಸಿದರು. ಅನಂತರ ದುರ್ಯೋಧನನು ಪಾಂಡವರನ್ನು ಎದುರಿಸಿದನು.

**ತೇಷಾಮಭೂತ್ ತಸ್ಯ ಚ ಘೋರರೂಪಂ**
**ಯುದ್ಧಂ ಸ ಬಾಣೈರ್ಬಹುಶೋಽರ್ಜುನಂ ಚ ।**
**ಚಕಾರ ಮೂರ್ಛಾಭಿಗತಂ ಯುಧಿಷ್ಠಿರಂ**
**ಯಮಾವಯತ್ನಾದ್ ವಿರಥಾಂಶ್ಚಕಾರ ॥ ೩೮ ॥**

**ಪದಚ್ಛೇದ :– ತೇಷಾಮ್, ಅಭೂತ್, ತಸ್ಯ, ಚ, ಘೋರರೂಪಮ್, ಯುದ್ಧಮ್, ಚ, ಬಾಣಮ್, ಬಹುಶಃ, ಅರ್ಜುನಮ್, ಚ । ಚಕಾರ, ಮೂರ್ಛಾಭಿಗತಮ್, ಯುಧಿಷ್ಠಿರಮ್, ಯಮೌ, ಅಯತ್ನಾತ್, ವಿರಥಾನ್, ಚಕಾರ ॥**

**ಅನ್ವಯಾರ್ಥ** :- **ತೇಷಾಮ್** = ಆ ಪಾಂಡವರ, **ತಸ್ಯ ಚ** = ಆ ದುರ್ಯೋಧನನ, **ಘೋರರೂಪಮ್** = ಘೋರರೂಪವಾದ, **ಯುದ್ಧಮ್** = ಯುದ್ಧವು, **ಅಭೂತ್** = ನಡೆಯಿತು, **ಸಃ** = ಆ ದುರ್ಯೋಧನನು, **ಬಾಣೈಃ** = ಬಾಣಗಳಿಂದ, **ಅರ್ಜುನವ್ ಚ** = ಅರ್ಜುನನನ್ನೂ ಕೂಡ, **ಮೂರ್ಛಾಭಿಗತಮ್** = ಮೂರ್ಛೆ ಹೊಂದಿದವನಾಗಿ, **ಚಕಾರ** = ಮಾಡಿದನು, **ಯುಧಿಷ್ಠಿರಮ್** = ಯುಧಿಷ್ಠಿರನನ್ನು, **ಯಮೌ** = ನಕುಲಸಹದೇವರನ್ನು, **ಅಯತ್ನಾತ್** = ಪ್ರಯಾಸವಿಲ್ಲದೇ, **ವಿರಥಾನ್** = ವಿರಥರನ್ನಾಗಿ, **ಚಕಾರ** = ಮಾಡಿದನು.

**ತಾತ್ಪರ್ಯ** :- ಪಾಂಡವರಿಗೂ ದುರ್ಯೋಧನನಿಗೂ ಘೋರ ರೂಪವಾದ ಯುದ್ಧ ನಡೆಯಿತು. ದುರ್ಯೋಧನ ಬಾಣಗಳಿಂದ ಅನೇಕಬಾರಿ ಅರ್ಜುನನನ್ನು ಮೂರ್ಛೆಗೊಳಿಸಿದನು. ಯುಧಿಷ್ಠಿರನನ್ನು ನಕುಲ ಸಹದೇವರನ್ನು ಪ್ರಯಾಸವಿಲ್ಲದೇ ವಿರಥರನ್ನಾಗಿ ಮಾಡಿದ.

**ತಂ ಭೀಮಸೇನೋ ವಿರಥಂ ಚಕಾರ**
**ಗಜಂ ಸಮಾರುಹ್ಯ ಪುನಃ ಸಮಭ್ಯಯಾತ್ ।**
**ಪುನಶ್ಚ ಶೈನೇಯಶಿಖಂಡಿಪಾರ್ಷತಾನ್**
**ಯಮೌ ನೃಪಂ ಚ ವ್ಯದಧಾನ್ನಿರಾಯುಧಾನ್ ॥ ೩೯ ॥**

**ಪದಚ್ಛೇದ :- ತಮ್, ಭೀಮಸೇನಃ, ವಿರಥಮ್, ಚಕಾರ, ಗಜಮ್, ಸಮಾರುಹ್ಯ, ಪುನಃ, ಸಮಭ್ಯಯಾತ್ । ಪುನಃ, ಚ, ಶೈನೇಯಶಿಖಂಡಿಪಾರ್ಷತಾನ್, ಯಮೌ, ನೃಪಮ್, ಚ, ವ್ಯದಧಾತ್, ನಿರಾಯುಧಾನ್ ॥**

**ಅನ್ವಯಾರ್ಥ :- ಭೀಮಸೇನಃ** = ಭೀಮಸೇನನು, **ತಮ್** = ಆ ದುರ್ಯೋಧನನ್ನು, **ವಿರಥಮ್** = ವಿರಥನನ್ನಾಗಿ, **ಚಕಾರ** = ಮಾಡಿದನು, **ಪುನಃ** = ಮತ್ತೆ ದುರ್ಯೋಧನನು, **ಗಜಮ್** = ಆನೆಯನ್ನು, **ಸಮಾರುಹ್ಯ** = ಏರಿ, **ಸಮಭ್ಯಯಾತ್** = ಎದುರಿಗೆ ಬಂದನು, **ಪುನಶ್ಚ** = ಮತ್ತು, **ಶೈನೇಯಶಿಖಂಡಿಪಾರ್ಷತಾನ್** = ಸಾತ್ಯಕಿ, ಶಿಖಂಡಿ, ಧೃಷ್ಟದ್ಯುಮ್ನರನ್ನು, **ಯಮೌ** = ನಕುಲಸಹದೇವರನ್ನು, **ನೃಪಂ ಚ** = ಧರ್ಮರಾಜನನ್ನೂ, **ನಿರಾಯುಧಾನ್** = ನಿರಾಯುಧರನ್ನಾಗಿ, **ವ್ಯದಧಾತ್** = ಮಾಡಿದನು.

**ತಾತ್ಪರ್ಯ :-** ಭೀಮಸೇನನು ದುರ್ಯೋಧನನ್ನು ವಿರಥನನ್ನಾಗಿ ಮಾಡಿದನು. ದುರ್ಯೋಧನನು ಮತ್ತೆ ಆನೆಯನ್ನೇರಿ ಎದುರಿಗೆ ಬಂದನು. ಪುನಃ ಸಾತ್ಯಕಿ, ಶಿಖಂಡಿ, ಧೃಷ್ಟದ್ಯುಮ್ನರನ್ನು ನಕುಲಸಹದೇವರನ್ನು ಧರ್ಮರಾಜನನ್ನೂ ನಿರಾಯುಧರನ್ನಾಗಿ ಮಾಡಿದನು.

**ಗಜೇ ಚ ಭೀಮೇನ ಶರೈರ್ನಿಪಾತಿತೇ**
**ಸಮಾರುಹದ್ ವಾಜಿವರಂ ಸುನಿರ್ಭಯಃ ।**
**ಸ ತೇನ ಚ ಪ್ರಾಸಕರೋ ರಣೇಽರಿಹಾ**
**ಚಚಾರ ಶೈನ್ಯೆಯಮತಾಡಯಚ್ಚ ॥ ೪೦ ॥**

**ಪದಚ್ಛೇದ :- ಗಜೇ, ತು, ಭೀಮೇನ, ಶರೈಃ, ನಿಪಾತಿತೇ, ಸಮಾರುಹತ್, ವಾಜಿವರಮ್, ಸುನಿರ್ಭಯಃ । ಸಃ, ತೇನ, ಚ, ಪ್ರಾಸಕರಃ, ರಣೇ, ಅರಿಹಾ, ಚಚಾರ, ಶೈನೇಯಮ್, ಅತಾಡಯತ್, ಚ ॥**

**ಅನ್ವಯಾರ್ಥ :- ಭೀಮೇನ** = ಭೀಮನಿಂದ, **ಗಜೇ ತು** = ಆನೆಯಾದರೋ, **ಶರೈಃ** = ಬಾಣಗಳಿಂದ, **ನಿಪಾತಿತೇ** = ಕೆಡವುತ್ತಿರಲು, **ಅರಿಹಾ** = ಶತ್ರುಗಳನ್ನು ಕೊಲ್ಲಬಲ್ಲ, **ಸುನಿರ್ಭಯಃ** = ಭಯವಿಲ್ಲದ, **ಸಃ** = ಆ ದುರ್ಯೋಧನನು, **ವಾಜಿವರಮ್** = ಶ್ರೇಷ್ಠ ಕುದುರೆಯನ್ನು, **ಸಮಾರುಹತ್** = ಏರಿದನು, **ಪ್ರಾಸಕರಃ** = ಪ್ರಾ ಎಂಬ ಆಯುಧವನ್ನು

ಕೈಯಲ್ಲಿ ಹಿಡಿದುಕೊಂಡು, **ರಣೇ** = ರಣರಂಗದಲ್ಲಿ, **ಚಚಾರ** = ಓಡಾಡಿದನು, **ತೇನ ಚ** = ಆ ಆಯುಧದಿಂದ, **ಶೈನೇಯವ್** = ಸಾತ್ಯಕಿಯನ್ನು, **ಅತಾಡಯಚ್ಚ** = ಹೊಡೆದನು.

**ತಾತ್ಪರ್ಯ** :- ಆ ಆನೆಯನ್ನು ಭೀಮನು ಕೆಡವಿದನು, ಕೂಡಲೇ ದುರ್ಯೋಧನನು ಭೀತನಾಗದೇ ಕುದುರೆಯನ್ನೇರಿದ. ಪ್ರಾಸಾಯುಧವನ್ನು ಕೈಯಲ್ಲಿ ಧರಿಸಿ ರಣರಂಗದಲ್ಲಿ ಓಡಾಡಿದನು. ಆ ಆಯುಧದಿಂದ ಸಾತ್ಯಕಿಗೆ ಹೊಡೆದನು.

**ಮುಮೋಹ ತೇನಾಭಿಹತಃ ಸ ಸಾತ್ಯಕಿ-**
**ರ್ಯಮಾವಪಿ ಪ್ರಾಸನಿಪೀಡಿತೌ ರಥೇ ।**
**ನಿಷೀದತುರ್ಧರ್ಮಸುತಂ ಪ್ರಯಾಂತಂ**
**ಸಮೀಕ್ಷ್ಯ ಭೀಮೋಽಸ್ಯ ಜಘಾನ ವಾಜಿನಮ್ ॥ ೪೧ ॥**

**ಪದಚ್ಛೇದ** :- **ಮುಮೋಹ, ತೇನ, ಅಭಿಹಿತಃ, ಸಃ, ಸಾತ್ಯಕಿಃ, ಯಮೌ, ಅಪಿ, ಪ್ರಾಸನಿಪೀಡಿತೌ, ರಥೇ । ನಿಷೀದತುಃ, ಧರ್ಮಸುತಮ್, ಪ್ರಯಾಂತಮ್, ಸಮೀಕ್ಷ್ಯ, ಭೀಮಃ, ಅಸ್ಯ, ಜಘಾನ, ವಾಜಿನಮ್ ॥**

**ಅನ್ವಯಾರ್ಥ** :- **ತೇನ** = ದುರ್ಯೋಧನನಿಂದ, **ಅಭಿಹಿತಃ** = ಹೊಡಿಸಿಗೊಳ್ಳಲ್ಪಟ್ಟ, **ಸ ಸಾತ್ಯಕಿಃ** = ಆ ಸಾತ್ಯಕಿಯು, **ಮುಮೋಹ** = ಮೂರ್ಛೆ ಹೊಂದಿದನು, **ಯಮಾವಪಿ** = ನಕುಲ ಸಹದೇವರಾದರೋ, **ಪ್ರಾಸನಿಪೀಡಿತೌ** = ಪ್ರಾಸಾಯುಧದಿಂದ ಪೀಡಿತರಾಗಿ, **ರಥೇ** = ರಥದಲ್ಲಿ, **ನಿಷೀದತುಃ** = ಕುಳಿತರು, **ಧರ್ಮಸುತಮ್** = ಧರ್ಮರಾಜನ ಹತ್ತಿರ, **ಪ್ರಯಾಂತಮ್** = ಬರುತ್ತಿರುವ ದುರ್ಯೋಧನನನ್ನು, **ಭೀಮಃ** = ಭೀಮನು, **ಸಮೀಕ್ಷ್ಯ** = ನೋಡಿ, **ಅಸ್ಯ** = ಈ ಭೀಮನ, **ವಾಜಿನವ್** = ಕುದುರೆಯನ್ನು, **ಜಘಾನ** = ಕೊಂದನು.

**ತಾತ್ಪರ್ಯ** :- ದುರ್ಯೋಧನ ಹೊಡೆದಾಗ ಸಾತ್ಯಕಿ ಮೂರ್ಛೆ ಹೊಂದಿದ. ನಕುಲ ಸಹದೇವರೂ ಪ್ರಾಸಾಯುಧದಿಂದ ಪೀಡಿತರಾಗಿ ರಥದಲ್ಲಿ ಕುಳಿತು ಬಿಟ್ಟರು. ದುರ್ಯೋಧನ ಧರ್ಮರಾಜನ ಹತ್ತಿರ ಹೋಗುತ್ತಿದ್ದುದನ್ನು ನೋಡಿ ಅವನ ಕುದುರೆಯನ್ನು ಸಂಹರಿಸಿದನು.

**ಪ್ರಾಸೇ ನಿಕೃತ್ತೇ ಚ ವೃಕೋದರೇಣ**
**ವಿವಾಹನಃ ಸೋಽಪಯಯೌ ಸುಯೋಧನಃ ।**
**ಆದಾಯ ಗುರ್ವೀಂ ಚ ಗದಾಂ ಪ್ರಯಾತೋ**
**ದ್ವೈಪಾಯನಸ್ಯೋರುಸರೋ ವಿವೇಶ ॥ ೪೨ ॥**

ಪದಚ್ಛೇದ :- ಪ್ರಾಸೇ, ನಿಕೃತ್ತೇ, ಚ, ವೃಕೋದರೇಣ, ವಿವಾಹನಃ, ಸಃ, ಉಪಯಯೌ, ಸುಯೋಧನಃ । ಆದಾಯ, ಗುರ್ವೀಮ್, ಚ, ಗದಾಮ್, ಪ್ರಯಾತಃ, ದ್ವೈಪಾಯನಸ್ಯ, ಉರುಸರಃ, ವಿವೇಶ ॥

**ಅನ್ವಯಾರ್ಥ** :- **ವೃಕೋದರೇಣ** = ಭೀಮನಿಂದ, **ಪ್ರಾಸೇ** = ಪ್ರಾಸಾಯುಧವು, **ನಿಕೃತ್ತೇ** = ಕಡೆಯುತ್ತಿರಲು, **ಸಃ ಸುಯೋಧನಃ** = ಆ ದುರ್ಯೋಧನನು, **ವಿವಾಹನಃ** = ವಾಹನರಹಿತನಾಗಿ, **ಉಪಯಯೌ** = ಹೋದನು, **ಗುರ್ವೀಮ್** = ಭಾರವಾದ, **ಗದಾಂ ಚ** = ಗದೆಯನ್ನು, **ಆದಾಯ** = ಹಿಡಿದುಕೊಂಡು, **ಪ್ರಯಾತಃ** = ಹೊರಟು ಹೋದನು, **ದ್ವೈಪಾಯನಸ್ಯ** = ದ್ವೈಪಾಯನರ, **ಉರುಸರಃ** = ದೊಡ್ಡ ಸರೋವರವನ್ನು, **ವಿವೇಶ** = ಪ್ರವೇಶಿಸಿದನು.

**ತಾತ್ಪರ್ಯ** :- ಭೀಮನು ದುರ್ಯೋಧನನ ಪ್ರಾಸಾಯುಧವನ್ನು ಕಡಿದಾಗ ವಾಹನರಹಿತನಾಗಿ ಭಾರವಾದ ಗದೆಯನ್ನು ಹಿಡಿದು ಹೊರ ಹೋದ. ಪ್ರಯಾಣ ಮಾಡಿ ದ್ವೈಪಾಯನರ ದೊಡ್ಡ ಸರೋವರವನ್ನು ಪ್ರವೇಶಿಸಿದನು.

**ಏವಮಕ್ಷೋಹಿಣೀಷಟ್ಕಂ ಭೀಮೇನ ನಿಹತಂ ರಣೇ ।**
**ಪಂಚ ಪಾರ್ಥೇನ ನಿಹತಾ ಅರ್ಧಂ ಕಾಲಿಂಗಕಾನೃತೇ ॥ ೪೩ ॥**

ಪದಚ್ಛೇದ :- ಏವಮ್, ಅಕ್ಷೌಹಿಣೀಷಟ್ಕಮ್, ಭೀಮೇನ, ನಿಹತಮ್, ರಣೇ । ಪಂಚ, ಪಾರ್ಥೇನ, ನಿಹತಾಃ, ಅರ್ಧಮ್, ಕಾಲಿಂಗಕಾನ್, ಋತೇ ॥

**ಅನ್ವಯಾರ್ಥ** :- **ಏವಮ್** = ಹೀಗೆ, **ಅಕ್ಷೌಹಿಣೀಷಟ್ಕಮ್** = ಆರು ಅಕ್ಷೌಹಿಣೀಸೈನ್ಯವು, **ರಣೇ** = ಯುದ್ಧದಲ್ಲಿ, **ಭೀಮೇನ** = ಭೀಮನಿಂದ, **ನಿಹತಮ್** = ಕೊಲ್ಲಲ್ಪಟ್ಟಿತು, **ಪಂಚ** = ಐದು ಅಕ್ಷೌಹಿಣೀಸೈನ್ಯವು, **ಪಾರ್ಥೇನ**

= ಅರ್ಜುನನಿಂದ, **ನಿಹತಾಃ** = ಕೊಲ್ಲಲ್ಪಟ್ಟವು, **ಕಾಲಿಂಗಕಾನ್ ಋತೇ** = ಭೀಮ ಕೊಂದ ಒಂದು ಅಕ್ಷೌಹಿಣೀಕಳಿಂಗಸೈನ್ಯವನ್ನು ಹೊರತು ಪಡಿಸಿ ಹತ್ತು ಅಕ್ಷೌಹಿಣೀಸೈನ್ಯದಲ್ಲಿ, **ಅರ್ಧಮ್** = ಅರ್ಧಾಂಶವು ಅರ್ಜುನನಿಂದ ಕೊಲ್ಲಲ್ಪಟ್ಟಿದೆ.

**ತಾತ್ಪರ್ಯ** :- ಹೀಗೆ ಆರು ಅಕ್ಷೌಹಿಣೀಸೈನ್ಯವನ್ನು ಯುದ್ಧದಲ್ಲಿ ಭೀಮ ಕೊಂದ. ಐದು ಅಕ್ಷೌಹಿಣೀಸೈನ್ಯವನ್ನು ಅರ್ಜುನನು ಕೊಂದನು. ಅರ್ಜುನನು ಕೌರವಸೈನ್ಯದಲ್ಲಿ ಅರ್ಧಾಂಶವನ್ನು ಕೊಂದನೆಂದು ಭಾರತ ಹೇಳಿದ್ದು ಭೀಮನು ಕೊಂದ ಅಕ್ಷೌಹಿಣೀಕಳಿಂಗಸೈನ್ಯವನ್ನು ಹೊರತು ಪಡಿಸಿ ಹತ್ತು ಅಕ್ಷೌಹಿಣೀಸೈನ್ಯದಲ್ಲಿ ಅರ್ಧಾಂಶ ಎಂಬ ಅಭಿಪ್ರಾಯದಿಂದ.

**ಏಕಾದಶಾಕ್ಷೋಹಿಣೀಭ್ಯಃ ಶಿಷ್ಟಮನ್ಯೈರ್ನಿಸೂದಿತಮ್ ।**
**ಅಕ್ಷೋಹಿಣೀಚತುಷ್ಕಂ ಚ ಪಾರ್ಥಾನಾಂ ದ್ರೌಣಿನಾ ಹತಮ್ ॥ ೪೪ ॥**

ಪದಚ್ಛೇದ :- ಏಕಾದಶಾಕ್ಷೋಹಿಣೀಭ್ಯಃ, ಶಿಷ್ಟಮ್, ಅನ್ಯೈಃ, ನಿಸೂದಿತಮ್ । **ಅಕ್ಷೋಹಿಣೀಚತುಷ್ಕಮ್, ಚ, ಪಾರ್ಥಾನಾಮ್, ದ್ರೌಣಿನಾ, ಹತಮ್ ॥**

**ಅನ್ವಯಾರ್ಥ** :- **ಏಕಾದಶಾಕ್ಷೋಹಿಣೀಭ್ಯಃ** = ಹನ್ನೊಂದು ಅಕ್ಷೋಹಿಣೀಸೈನ್ಯದಲ್ಲಿ, **ಶಿಷ್ಟಮ್** = ಭೀಮಾರ್ಜುನರು ಕೊಂದು ಉಳಿದ ಕೆಲವನ್ನು, **ಅನ್ಯೈಃ** = ಸಾತ್ಯಕಿ ಮುಂತಾದವರಿಂದ, **ನಿಸೂದಿತಮ್** = ಕೊಲ್ಲಲ್ಪಟ್ಟಿತು, **ಪಾರ್ಥಾನಾಮ್** = ಪಾಂಡವರ, **ಅಕ್ಷೋಹಿಣೀಚತುಷ್ಕಮ್** = ನಾಲ್ಕು ಅಕ್ಷೌಹಿಣೀಸೈನ್ಯವು, **ದ್ರೌಣಿನಾ** = ಅಶ್ವತ್ಥಾಮನಿಂದ, **ಹತಮ್** = ಹತವಾಯಿತು.

**ತಾತ್ಪರ್ಯ** :- ಹನ್ನೊಂದು ಅಕ್ಷೋಹಿಣೀಸೈನ್ಯದಲ್ಲಿ ಭೀಮಾರ್ಜುನರು ಕೊಂದು ಉಳಿದ ಕೆಲವನ್ನು ಸಾತ್ಯಕಿ ಮುಂತಾದವರು ಕೊಂದರು. ಪಾಂಡವರ ಸೈನ್ಯದಲ್ಲಿ ನಾಲ್ಕು ಅಕ್ಷೌಹಿಣೀಸೈನ್ಯವು ಅಶ್ವತ್ಥಾಮನಿಂದ ಹತವಾಯಿತು.

**ಅನ್ಯೈರನ್ಯಾಃ ಸಮಸ್ತೈಶ್ಚ ದ್ರೋಣಕರ್ಣಮಹಾವ್ರತಾಃ ।**
**ದುರ್ಯೋಧನೋ ಭೌಮಸೂನುಃ ಪ್ರಾಯಃ ಸೇನಾಹನಃ ಕ್ರಮಾತ್ ॥೪೫॥**

ಪದಚ್ಛೇದ :- ಅನ್ಯೈಃ, ಅನ್ಯಾಃ, ಸಮಸ್ತೈಃ, ಚ, ದ್ರೋಣಕರ್ಣಮಹಾವ್ರತಾಃ । ದುರ್ಯೋಧನಃ, ಭೌಮಸೂನುಃ, ಪ್ರಾಯಃ, ಸೇನಾಹನಃ, ಕ್ರಮಾತ್ ॥

**ಅನ್ವಯಾರ್ಥ** :- **ಅನ್ಯಾಃ** = ಉಳಿದ ಮೂರು ಅಕ್ಷೋಹಿಣೀಸೈನ್ಯವು, **ಅನ್ಯೈಃ ಸಮಸ್ತೈಃ** = ಬೇರೆ ದ್ರೋಣಕರ್ಣಾದಿಗಳೆಲ್ಲರಿಂದ ಹತವಾಯಿತು, **ದ್ರೋಣಕರ್ಣಮಹಾವ್ರತಾಃ** = ದ್ರೋಣ, ಕರ್ಣ, ಭೀಷ್ಮರು, **ದುರ್ಯೋಧನಃ** = ದುರ್ಯೋಧನನು, **ಭೌಮಸೂನುಃ** = ಭಗದತ್ತನು, **ಪ್ರಾಯಃ** = ಮುಖ್ಯವಾಗಿ, **ಕ್ರಮಾತ್** = ಕ್ರಮವಾಗಿ, **ಸೇನಾಹನಃ** = ಸೈನ್ಯನಾಶಕರು.

**ತಾತ್ಪರ್ಯ** :- ಉಳಿದ ಮೂರು ಅಕ್ಷೋಹಿಣೀಸೈನ್ಯವನ್ನು ದ್ರೋಣ ಕರ್ಣಾದಿಗಳೆಲ್ಲರೂ ನಾಶ ಮಾಡಿದರು. ದ್ರೋಣ, ಕರ್ಣ, ಭೀಷ್ಮ, ದುರ್ಯೋಧನ, ಭಗದತ್ತ ಇವರು ಕ್ರಮವಾಗಿ ಸೈನ್ಯನಾಶಕರಾಗಿದ್ದಾರೆ.

### ಗದಾಯುದ್ಧ

**ಜಯಂ ಲಬ್ಧ್ವಾ ನದತ್ಸೂಚ್ಚೈಃ ಪಾಂಡವೇಷು ಮಹಾತ್ಮಸು ।**
**ದುರ್ಯೋಧನೋ ಜಲಸ್ತಂಭಂ ಕೃತ್ವಾ ಮಂತ್ರಾನ್ ಜಜಾಪ ಹ ॥ ೪೬ ॥**

ಪದಚ್ಛೇದ :- ಜಯಮ್, ಲಬ್ಧ್ವಾ, ನದತ್ಸು, ಉಚ್ಚೈಃ, ಪಾಂಡವೇಷು, ಮಹಾತ್ಮಸು । ದುರ್ಯೋಧನಃ, ಜಲಸ್ತಂಭಮ್, ಕೃತ್ವಾ, ಮಂತ್ರಾನ್, ಜಜಾಪ, ಹ ॥

**ಅನ್ವಯಾರ್ಥ** :- **ಮಹಾತ್ಮಸು** = ಮಹಾತ್ಮರಾದ, **ಪಾಂಡವೇಷು** = ಪಾಂಡವರು, **ಜಯಮ್** = ಜಯವನ್ನು, **ಲಬ್ಧ್ವಾ** = ಹೊಂದಿ, **ಉಚ್ಚೈಃ** = ಜೋರಾಗಿ, **ನದತ್ಸು** = ಸಿಂಹನಾದ ಮಾಡುತ್ತಿರಲು, **ದುರ್ಯೋಧನಃ** = ದುರ್ಯೋಧನನು, **ಜಲಸ್ತಂಭಮ್** = ಜಲಸ್ತಂಭವನ್ನು, **ಕೃತ್ವಾ** = ಮಾಡಿ, **ಮಂತ್ರಾನ್** = ಮಂತ್ರಗಳನ್ನು ಜಜಾಪ, **ಹ** = ಜಪಿಸಿದನು.

**ಮಂತ್ರಾ ದುರ್ವಾಸಸಾ ದತ್ತಾ ಮೃತಸಂಜೀವನಪ್ರದಾಃ ॥ ೪೭ ॥**

**ಜಲೇ ಸ್ಥಿತ್ವಾ ಜಪನ್ ಸಪ್ತದಿನೈಃ ಸರ್ವಾನ್ ಮೃತಾನಪಿ ।**
**ಉದ್ಧರೇದ್ ಧಾರ್ತರಾಷ್ಟ್ರೋಽಯಂ ಸ್ಯುರವಧ್ಯಾಶ್ಚ ತೇ ಪುನಃ ॥ ೪೮ ॥**

ಪದಚ್ಛೇದ :- ಮಂತ್ರಾಃ, ದೂರ್ವಾಸಸಾ, ದತ್ತಾಃ, ಮೃತಸಂಜೀವನಪ್ರದಾಃ ॥

**ಜಲೇ, ಸ್ಥಿತ್ವಾ, ಜಪನ್, ಸಪ್ತದಿನೈಃ, ಸರ್ವಾನ್, ಮೃತಾನ್, ಅಪಿ । ಉದ್ಧರೇತ್, ಧಾರ್ತರಾಷ್ಟ್ರಃ, ಅಯಮ್, ಸ್ಯುಃ, ಅವಧ್ಯಾಃ, ಚ, ತೇ, ಪುನಃ ।।**

**ಅನ್ವಯಾರ್ಥ :-** **ಮಂತ್ರಾಃ** = ಮಂತ್ರಗಳು, **ದೂರ್ವಾಸಸಾ** = ದೂರ್ವಾಸರಿಂದ, **ದತ್ತಾಃ** = ಉಪದಿಷ್ಟವಾಗಿವೆ, **ಮೃತಸಂಜೀವನಪ್ರದಾಃ** = ಆ ಮಂತ್ರಗಳು ಸತ್ತವರನ್ನು ಬದುಕಿಸಬಲ್ಲವುಗಳು, **ಅಯಮ್ ಧಾರ್ತರಾಷ್ಟ್ರಃ** = ಈ ದುರ್ಯೋಧನನು, **ಜಲೇ** = ನೀರಿನಲ್ಲಿ, **ಸ್ಥಿತ್ವಾ** = ಇದ್ದು, **ಸಪ್ತದಿನೈಃ** = ಏಳು ದಿವಸಗಳಿಂದ, **ಜಪನ್** = ಮಂತ್ರವನ್ನು ಜಪಿಸುತ್ತಾ, **ಸರ್ವಾನ್** = ಎಲ್ಲಾ, **ಮೃತಾನಪಿ** = ಸತ್ತವರನ್ನು, **ಉದ್ಧರೇತ್** = ಬದುಕಿಸಬಹುದು, **ಪುನಃ** = ಮತ್ತೆ, **ತೇ** = ಅವರು, **ಅವಧ್ಯಾಶ್ಚ ಸ್ಯುಃ** = ಅವಧ್ಯರೆನಿಸುತ್ತಾರೆ.

**ತಾತ್ಪರ್ಯ :-** ಆ ಮಂತ್ರಗಳನ್ನು ದೂರ್ವಾಸರು ಉಪದೇಶಿಸಿದ್ದಾರೆ. ಅವುಗಳು ಸತ್ತವರನ್ನು ಬದುಕಿಸಬಲ್ಲವು. ನೀರಿನಲ್ಲಿದ್ದು ಏಳು ದಿವಸಗಳ ಕಾಲ ದುರ್ಯೋಧನನು ಮಂತ್ರ ಜಪಿಸಿದರೆ ಸತ್ತವರೆಲ್ಲಾ ಬದುಕುತ್ತಾರೆ. ಮತ್ತೆ ಬದುಕಿ ಬಂದವರು ಅವಧ್ಯರೆನಿಸುತ್ತಾರೆ.

**ಇತಿ ವಿದ್ಯಾಬಲಂ ತಸ್ಯ ಜ್ಞಾತ್ವಾ ಪಾಂಡುಸುತಾಸ್ತತಃ ।**
**ಅನ್ವೇಷಂತಃ ಶುಶ್ರುವುಶ್ಚ ವ್ಯಾಧೇಭ್ಯಸ್ತಂ ಜಲೇ ಸ್ಥಿತಮ್ ।। ೪೯ ।।**

**ಪದಚ್ಛೇದ :-** **ಇತಿ, ವಿದ್ಯಾಬಲಮ್, ತಸ್ಯ, ಜ್ಞಾತ್ವಾ, ಪಾಂಡುಸುತಾಃ, ತತಃ । ಅನ್ವಿಷ್ಯಂತಃ, ಶುಶ್ರುವುಃ, ಚ, ವ್ಯಾಧೇಭ್ಯಃ, ತಮ್, ಜಲೇ, ಸ್ಥಿತಮ್ ।।**

**ಅನ್ವಯಾರ್ಥ :-** **ಇತಿ** = ಈ ರೀತಿಯಾಗಿ, **ತಸ್ಯ** = ಆ ದುರ್ಯೋಧನನ, **ವಿದ್ಯಾಬಲಮ್** = ಮಂತ್ರಬಲವನ್ನು, **ಜ್ಞಾತ್ವಾ** = ತಿಳಿದು, **ಪಾಂಡುಸುತಾಃ** = ಪಾಂಡವರು, **ತತಃ** = ಅನಂತರ, **ಅನ್ವಿಷ್ಯಂತಃ** = ಹುಡುಕುತ್ತಾ, **ವ್ಯಾಧೇಭ್ಯಃ** = ಬೇಡರಿಂದ, **ತಮ್** = ಅವನನ್ನು, **ಜಲೇ ಸ್ಥಿತಮ್** = ನೀರಿನಲ್ಲಿದ್ದವನನ್ನಾಗಿ, **ಶುಶ್ರುವುಃ** = ಕೇಳಿದರು.

**ತಾತ್ಪರ್ಯ :-** ಹೀಗೆ ದುರ್ಯೋಧನನ ಮಂತ್ರಬಲವನ್ನು ತಿಳಿದ ಪಾಂಡವರು ಅವನನ್ನು ಹುಡುಕುತ್ತಾ ಬೇಡರಿಂದ ನೀರಿನಲ್ಲಿದ್ದಾನೆಂದು ಕೇಳಿ ತಿಳಿದರು.

**ಅಗಚ್ಛಂಶ್ಚ ತತಸ್ತತ್ರ ಪುರಸ್ಕೃತ್ಯ ಜನಾರ್ದನಮ್ ।**
**ತದಾ ಜಲಾತ್ ಸಮುನ್ಮಜ್ಜ್ಯತ್ರಿಭಿರ್ದ್ರೌಣಿಪುರಸ್ಸರೈಃ ।**
**ಮಂತ್ರಯಂತಂ ಸ್ಮ ದದೃಶುಸ್ತಾನ್ ದೃಷ್ಟ್ವಾ ತೇ ಪ್ರದುದ್ರುವುಃ ॥ ೫೦ ॥**

**ದುರ್ಯೋಧನೋಽವಿಶತ್ ತೋಯಂ ದೃಷ್ಟ್ವಾ ತಂ ಕೇಶವಾಜ್ಞಯಾ ।**
**ಯುಧಿಷ್ಠಿರಃ ಸುಪರುಷೈರ್ವಾಕ್ಯೈರೇನಮಥಾಽಹ್ವಯತ್ ॥ ೫೧ ॥**

ಪದಚ್ಛೇದ :- ಅಗಚ್ಛನ್, ಚ, ತತಃ, ತತ್ರ, ಪುರಸ್ಕೃತ್ಯ, ಜನಾರ್ದನಮ್ । ತದಾ, ಜಲಾತ್, ಸಮುನ್ಮಜ್ಯ, ತ್ರಿಭಿಃ, ದ್ರೌಣಿಪುರಸ್ಸರೈಃ ॥ ಮಂತ್ರಯಂತಮ್, ಸ್ಮ ದದೃಶುಃ ತಾನ್, ದೃಷ್ಟ್ವಾ, ತೇ, ಪ್ರದುದ್ರುವುಃ ॥

ದುರ್ಯೋಧನಃ, ಅವಿಶತ್, ತೋಯಮ್, ದೃಷ್ಟ್ವಾ, ತಂ, ಕೇಶವಾಜ್ಞಯಾ । ಯುಧಿಷ್ಠಿರಃ, ಸುಪರುಷೈಃ, ವಾಕ್ಯೈಃ, ಏನಮ್, ಅಥ, ಆಹ್ವಯತ್ ॥

**ಅನ್ವಯಾರ್ಥ** :- **ತತಃ** = ಅನಂತರ, **ತತ್ರ** = ದ್ವೈಪಾಯನಸರೋವರಕ್ಕೆ, **ಜನಾರ್ದನಮ್** = ಶ್ರೀಕೃಷ್ಣನನ್ನು, **ಪುರಸ್ಕೃತ್ಯ** = ಮುಂದೆ ಮಾಡಿಕೊಂಡು, **ಅಗಚ್ಛನ್** = ಹೋದರು, **ತದಾ** = ಆಗ, **ಜಲಾತ್** = ನೀರಿನಿಂದ, **ಸಮುನ್ಮಜ್ಯ** = ಮೇಲೆದ್ದು, **ದ್ರೌಣಿಪುರಸ್ಸರೈಃ** = ಅಶ್ವತ್ಥಾಮನೇ ಮೊದಲಾದ, **ತ್ರಿಭಿಃ** = ಮೂರರಿಂದ, **ಮಂತ್ರಯಂತಮ್** = ಮಂತ್ರಾಲೋಚನೆ ಮಾಡುತ್ತಿದ್ದ ದುರ್ಯೋಧನನನ್ನು, **ದದೃಶುಃ** = ಪಾಂಡವರು ನೋಡಿದರು, **ತಾನ್** = ಆ ಪಾಂಡವರನ್ನು, **ದೃಷ್ಟ್ವಾ** = ನೋಡಿ, **ತೇ** = ಅಶ್ವತ್ಥಾಮಾದಿಗಳು, **ಪ್ರದುದ್ರುವುಃ** = ಓಡಿದರು, **ದುರ್ಯೋಧನಃ** = ದುರ್ಯೋಧನನು, **ತೋಯಮ್** = ನೀರನ್ನು, **ಅವಿಶತ್** = ಪ್ರವೇಶಿಸಿದನು, **ತಮ್** = ಅವನನ್ನು, **ದೃಷ್ಟ** = ನೋಡಿ, **ಕೇಶವಾಜ್ಞಯಾ** = ಶ್ರೀಕೃಷ್ಣನ ಆಜ್ಞೆಯಿಂದ, **ಯುಧಿಷ್ಠಿರಃ** = ಧರ್ಮರಾಜನು, **ಸುಪರುಷೈಃ** = ನಿಷ್ಠುರವಾದ, **ವಾಕ್ಯೈಃ** = ವಾಕ್ಯಗಳಿಂದ, **ಏನಮ್** = ದುರ್ಯೋಧನನನ್ನು, **ಆಹ್ವಯತ್** = ಕರೆದನು.

**ತಾತ್ಪರ್ಯ** :- ಅನಂತರ ಪಾಂಡವರು ಶ್ರೀಕೃಷ್ಣನನ್ನು ಮುಂದೆ ಮಾಡಿಕೊಂಡು ದ್ವೈಪಾಯನ ಸರೋವರಕ್ಕೆ ಹೋದರು. ನೀರಿನಿಂದ ಮೇಲೆದ್ದು ಅಶ್ವತ್ಥಾಮ, ಕೃತವರ್ಮ, ಕೃಪರೊಟ್ಟಿಗೆ ಮಂತ್ರಾಲೋಚನೆಯನ್ನು ಮಾಡುತ್ತಿದ್ದ ದುರ್ಯೋಧನನನ್ನು ಪಾಂಡವರು ನೋಡಿದರು. ಇದನ್ನು

ನೋಡಿ ಅಶ್ವತ್ಥಾಮಾದಿಗಳು ಕೂಡಲೇ ಓಡಿದರು. ದುರ್ಯೋಧನನು ನೀರಿನಲ್ಲಿ ಪ್ರವೇಶಿಸಿದನು. ಆಗ ಧರ್ಮರಾಜನು ನಿಷ್ಠುರವಾದ ನುಡಿಗಳಿಂದ ಅವನನ್ನು ಕರೆದನು.

**ಅಮರ್ಷಿತೋಽಸೌ ಧೃತರಾಷ್ಟ್ರಪುತ್ರಃ**
**ಶ್ವಸಂಸ್ತದಾ ದಂಡಹತೋ ಯಥಾಽಹಿಃ ।**
**ಉವಾಚ ಶಾಠ್ಯಾತ್ ತಪಸೇ ವನಾಯ**
**ಯಾಯಾಂ ಭವಾನ್ ಶಾಸತು ಸರ್ವಪೃಥ್ವೀಮ್ ।। ೫೨ ।।**

ಪದಚ್ಛೇದ :- ಅಮರ್ಷಿತಃ, ಅಸೌ, ಧೃತರಾಷ್ಟ್ರಪುತ್ರಃ, ಶ್ವಸನ್, ದಂಡಹತಃ, ಯಥಾ, ಅಹಿಃ । ಉವಾಚ, ಶಾಠ್ಯಾತ್, ತಪಸೇ, ವನಾಯ, ಯಾಯಾಮ್, ಭವಾನ್, ಶಾಸತು, ಸರ್ವಪೃಥ್ವೀಮ್ ।। ೫೨ ।।

**ಅನ್ವಯಾರ್ಥ** :- **ಅಸೌ, ಧೃತರಾಷ್ಟ್ರಪುತ್ರಃ** = ಈ ದುರ್ಯೋಧನನು **ಅಮರ್ಷಿತಃ** = ಕೋಪಗೊಂಡವನಾಗಿ, **ದಂಡಹತಃ** = ಕೋಲಿನಿಂದ ಹೊಡೆಯಲ್ಪಟ್ಟ **ಅಹಿಃ** = ಸರ್ಪವು **ಯಥಾ** = ಹೇಗೆ **ಶ್ವಸನ್** = ಬುಸುಗುಟ್ಟುತ್ತದೋ ಹಾಗೇ **ಶಾಠ್ಯಾತ್** = ಕಪಟದಿಂದ **ವನಾಯ** = ಕಾಡಿಗೆ **ಯಾಯಾಮ್** = ಹೋಗುತ್ತೇನೆ **ಭವಾನ್** = ನೀನು **ತಪಸೇ** = ತಪಸ್ಸಿಗಾಗಿ **ಸರ್ವಪೃಥ್ವೀಮ್** = ಎಲ್ಲ ಭೂಮಿಯನ್ನು **ಶಾಸತು** = ಆಳು ಎಂದು **ಉವಾಚ** = ಹೇಳಿದನು.

**ತಾತ್ಪರ್ಯ** :- ದುರ್ಯೋಧನನು ಕೋಪಗೊಂಡವನಾಗಿ ಕೋಲಿನಿಂದ ಹೊಡೆದ ಹಾವಿನಂತೆ ಬುಸುಗುಟ್ಟುತ್ತಾ ಕಪಟದಿಂದ ಹೇಳಿದ. ನಾನು ತಪಸ್ಸಿಗಾಗಿ ಕಾಡಿಗೆ ಹೋಗುತ್ತೇನೆ. ನೀನೇ ಎಲ್ಲ ಭೂಮಿಯನ್ನು ಆಳು ಎಂದು.

**ತಮಾಹ ಧರ್ಮಜೋ ರಾಜಾ ಯಸ್ತ್ವಂ ಕೃಷ್ಣೇ ಸಮಾಗತೇ ।**
**ಸೂಚ್ಯಗ್ರವೇಧ್ಯಾಂ ಪೃಥಿವೀಂ ದಾತುಂ ನೈಚ್ಛಃ ಕಥಂ ಪುನಃ ।। ೫೩ ।।**

**ಘಾತಯಿತ್ವಾ ಸರ್ವಪೃಥ್ವೀಂ ಭೀಷ್ಮದ್ರೋಣಮುಖಾನಪಿ ।**
**ದಾತುಮಿಚ್ಛಸಿ ಸರ್ವಾಂ ಚ ಪೃಥ್ವೀಂ ನಾದ್ಯ ವಯಂ ಪುನಃ ।। ೫೪ ।।**

**ಅಹತ್ವಾ ಪ್ರತಿಗೃಹ್ಣೀಮ ಏಹಿ ಯುದ್ಧೇ ಸ್ಥಿರೋ ಭವ ।**
**ನ ಕುರೂಣಾಂ ಕುಲೇ ಜಾತಸ್ತ್ವಂ ಯೋ ಭೀತೋ ಹ್ಯಪೋಽವಿಶಃ ॥ ೫೫ ॥**

ಪದಚ್ಛೇದ :- ತಮ್, ಆಹ, ಧರ್ಮಜಃ, ರಾಜಾ, ಯಃ, ತ್ವಮ್, ಕೃಷ್ಣೇ, ಸಮಾಗತೇ । ಸೂಚ್ಯಗ್ರವೇಧ್ಯಾಮ್, ಪೃಥಿವೀಮ್, ದಾತುಮ್, ನ, ಐಚ್ಛಃ, ಕಥಂ, ಪುನಃ ॥ ೫೩ ॥ ಘಾತಯಿತ್ವಾ, ಸರ್ವಪೃಥ್ವೀಮ್, ಭೀಷ್ಮದ್ರೋಣಮುಖಾನ್, ಅಪಿ । ದಾತುಮ್, ಇಚ್ಛಸಿ, ಸರ್ವಾಮ್, ತ್ವಮ್, ಪೃಥ್ವೀಮ್, ನ, ಅದ್ಯ, ವಯಮ್, ಪುನಃ ॥ ೫೪ ॥ ಅಹತ್ವಾ, ಪ್ರತಿಗೃಹ್ಣೀಮಃ, ಏಹಿ, ಯುದ್ಧೇ, ಸ್ಥಿರಃ, ಭವ । ನ, ಕುರೂಣಾಮ್, ಕುಲೇ, ಜಾತಃ, ತ್ವಮ್, ಯಃ, ಭೀತಃ, ಹಿ, ಅಪಃ, ಅವಿಶಃ ॥ ೫೫ ॥

**ಅನ್ವಯಾರ್ಥ** :- **ರಾಜಾ ಧರ್ಮಜಃ** = ರಾಜನಾದ ಧರ್ಮರಾಜನು **ತಮ್** = ಆ ದುರ್ಯೋಧನನನ್ನು ಕುರಿತು **ಆಹ** = ಹೇಗೆ ಹೇಳಿದನು **ಕೃಷ್ಣೇ** = ಶ್ರೀಕೃಷ್ಣನು **ಸಮಾಗತೇ** = ಸಂಧಾನಕ್ಕಾಗಿ ಬಂದಾಗ **ಸೂಚ್ಯಗ್ರವೇಧ್ಯಾಮ್** = ಸೂಜಿಮೊನೆಯೂರುವಷ್ಟು **ಪೃಥಿವೀಮ್** = ಭೂಮಿಯನ್ನು **ಯಃ** = ಯಾವ **ತ್ವಮ್** = ನೀನು **ದಾತುಮ್** = ಕೊಡಲು **ನ ಐಚ್ಛಃ** = ಇಚ್ಛಿಸಲಿಲ್ಲವೋ **ಭೀಷ್ಮದ್ರೋಣಮುಖಾನಪಿ** = ಭೀಷ್ಮದ್ರೋಣಾದಿಗಳನ್ನೂ **ಘಾತಯಿತ್ವಾ** = ಕೊಂದು **ಸರ್ವಪೃಥ್ವೀಮ್** = ಎಲ್ಲ ಭೂಮಿಯನ್ನು **ಕಥಮ್** = ಹೇಗೆ ತಾನೆ **ದಾತುಮ್ ಇಚ್ಛಸಿ** = ಕೊಡಲು ಇಚ್ಛಿಸುತ್ತಿ **ವಯಂ ಪುನಃ** = ನಾವಾದರೋ **ಅಹತ್ವಾ** = ನಿನ್ನನ್ನು ಕೊಲ್ಲದೇ **ಸರ್ವಾಂ ಪೃಥ್ವೀಮ್** = ಎಲ್ಲ ಭೂಮಿಯನ್ನು **ಅದ್ಯ** = ಇಂದು **ನ ಪ್ರತಿಗೃಹ್ಣೀಮ** = ಸ್ವೀಕರಿಸುವದಿಲ್ಲ **ಏಹಿ** = ಬಾ **ಯುದ್ಧೇ** = ಯುದ್ಧದಲ್ಲಿ **ಸ್ಥಿರೋ ಭವ** = ಸ್ಥಿರನಾಗಿ ನಿಲ್ಲು **ಯೋ ಭೀತಃ** = ಯಾವ ಭೀತನಾದ **ತ್ವಮ್** = ನೀನು **ಅಪಃ** = ನೀರನ್ನು **ಅವಿಶಃ** = ಪ್ರವೇಶಿಸಿದ್ದೀಯೋ ಆದ್ದರಿಂದ **ಕುರೂಣಾಮ್ ಕುಲೇ** = ಕುರುಕುಲದಲ್ಲಿ **ನ ಜಾತಃ** = ಹುಟ್ಟಿರಲಿಲ್ಲ.

**ತಾತ್ಪರ್ಯ** :- ರಾಜನಾದ ಧರ್ಮರಾಜನು ಹೀಗೆ ಹೇಳಿದನು. ಶ್ರೀಕೃಷ್ಣನು ಸಂಧಾನಕ್ಕಾಗಿ ಬಂದಾಗ ಸೂಜಿಮೊನೆಯೂರುವಷ್ಟು ಭೂಮಿಯನ್ನು ಕೊಡಲು ಒಪ್ಪಲಿಲ್ಲ. ಎಲ್ಲಾ ಭೂಮಿಯನ್ನು ಭೀಷ್ಮದ್ರೋಣಾದಿಗಳನ್ನೂ ನಾಶಪಡಿಸಿ ನಮಗೆ ಕೊಡಲು ಹೇಗೆ ಒಪ್ಪುತ್ತಿ ? ನಿನ್ನನ್ನು ಕೊಲ್ಲದೇ ನಾವು ಭೂಮಿಯನ್ನು ಸ್ವೀಕರಿಸಲಾರೆವು. ಬಾ. ಯುದ್ಧದಲ್ಲಿ ಸ್ಥಿರನಾಗಿ ನಿಲ್ಲು.

ಭೀತನಾಗಿ ನೀರನ್ನು ಪ್ರವೇಶಿಸಿದ್ದಿ. ಆದ್ದರಿಂದ ನೀನು ಕುರುಕುಲದಲ್ಲಿ ಹುಟ್ಟಿದವನೇ ಅಲ್ಲ.

**ಇತ್ಯಾದಿ ರೂಕ್ಷವಚನಂ ಶ್ರುತ್ವಾ ದುರ್ಯೋಧನೋ ರುಷಾ ।**
**ಜಲಸ್ತಂಭಾತ್ ಸಮುತ್ತಸ್ಥೌ ಶ್ವಸನ್ನಾಶೀವಿಷೋ ಯಥಾ ॥ ೫೬ ॥**

ಪದಚ್ಛೇದ :- ಇತ್ಯಾದಿರೂಕ್ಷವಚನಮ್, ಶ್ರುತ್ವಾ, ದುರ್ಯೋಧನಃ, ರುಷಾ ।
ಜಲಸ್ತಂಭಾತ್, ಸಮುತ್ತಸ್ಥೌ, ಶ್ವಸನ್, ಆಶೀವಿಷಃ, ಯಥಾ ॥ ೫೬ ॥

**ಅನ್ವಯಾರ್ಥ** :- **ಇತ್ಯಾದಿರೂಕ್ಷವಚನಮ್** = ಇವೇ ಮೊದಲಾದ ಬಿರುನುಡಿಗಳನ್ನು **ಶ್ರುತ್ವಾ** = ಕೇಳಿ **ದುರ್ಯೋಧನಃ** = ದುರ್ಯೋಧನನು **ರುಷಾ** = ಸಿಟ್ಟಿನಿಂದ **ಶ್ವಸನ್** = ಬುಸುಗುಟ್ಟುವ **ಆಶೀವಿಷಃ** = ಹಾವು **ಯಥಾ** = ಹೇಗೋ ಹಾಗೇ **ಜಲಸ್ತಂಭಾತ್** = ಜಲಸ್ತಂಭದಿಂದ **ಸಮುತ್ತಸ್ಥೌ** = ಮೇಲಕ್ಕೆದ್ದನು.

**ತಾತ್ಪರ್ಯ** :- ಇವೇ ಮೊದಲಾದ ಬಿರುನುಡಿಗಳನ್ನು ಕೇಳಿದ ದುರ್ಯೋಧನನು ಸಿಟ್ಟಿನಿಂದ ಬುಸುಗುಟ್ಟುವ ಹಾವಿನಂತೆ ಜಲಸ್ತಂಭದಿಂದ ಮೇಲಕ್ಕೆದ್ದನು.

**ಉವಾಚ ಚೈಕ ಏವಾಹಮಕಿರೀಟೋ ವಿವರ್ಮಕಃ ।**
**ಭವಂತೋ ಬಹವೋ ವರ್ಮಶಿರಸ್ತ್ರಾಣಯುತಾ ಅಪಿ ॥ ೫೭ ॥**

ಪದಚ್ಛೇದ :- ಉವಾಚ, ಚ, ಏಕಃ, ಏವ, ಅಹಮ್, ಅಕಿರೀಟಃ, ವಿವರ್ಮಕಃ ।
ಭವಂತಃ, ಬಹವಃ, ವರ್ಮಶಿರಸ್ತ್ರಾಣಯುತಾಃ, ಅಪಿ ॥ ೫೭ ॥

**ಅನ್ವಯಾರ್ಥ** :- **ಉವಾಚ ಚ** = ಹೇಳಿದನೂ ಕೂಡ **ಏಕ ಏವ ಅಹಮ್** = ನಾನು ಏಕಾಕಿ **ಅಕಿರೀಟಃ** = ಕಿರೀಟ ಇಲ್ಲದವನು **ವಿವರ್ಮಕಃ** = ಕವಚಗಳಿಲ್ಲದವನು **ಭವಂತಃ** = ನೀವು **ಬಹವಃ** = ಬಹಳವಾಗಿದ್ದೀರಿ **ಅಪಿ** = ಮತ್ತು **ವರ್ಮಶಿರಸ್ತ್ರಾಣಯುತಾಃ** = ಕವಚ, ಕಿರೀಟಗಳಿಂದ ಕೂಡಿದ್ದೀರಿ.

**ತಾತ್ಪರ್ಯ** :- ದುರ್ಯೋಧನನು ''ನಾನು ಏಕಾಕಿ. ಕಿರೀಟಕವಚಗಳಿಲ್ಲದವನು. ನೀವು ಬಹಳಜನ ಹಾಗೂ ಕವಚ, ಕಿರೀಟಗಳಿಂದ ಕೂಡಿದ್ದೀರಿ'' ಎಂದು ಹೇಳಿದನು.

**ಯದ್ಯೇವಮಪಿ ಮೇ ಯುದ್ಧಂ ಭವದ್ಭಿರ್ಮನ್ಯಸೇ ಸಮಮ್ ।**
**ಸರ್ವೈರೇಕೇನ ವಾ ಯುದ್ಧಂ ಕರಿಷ್ಯೇ ನಚ ಭೀರ್ಮಮ ॥ ೫೮ ॥**

ಪದಚ್ಛೇದ :- ಯದಿ, ಏವಮ್, ಅಪಿ, ಮೇ, ಯುದ್ಧಮ್, ಭವದ್ಭಿಃ, ಮನ್ಯಸೇ, ಸಮಮ್ । ಸರ್ವೈಃ, ಏಕೇನ, ವಾ, ಯುದ್ಧಮ್, ಕರಿಷ್ಯೇ, ನ, ಚ, ಭೀಃ, ಮಮ ॥ ೫೮ ॥

**ಅನ್ವಯಾರ್ಥ** :- **ಯದ್ಯೇವಮಪಿ** = ಹೀಗಿದ್ದರೂ **ಮೇ** = ನನಗೆ **ಭವದ್ಭಿಃ** = ನಿಮ್ಮೊಂದಿಗೆ **ಯುದ್ಧಮ್** = ಯುದ್ಧವು **ಸಮಮ್** = ಸಮ ಎಂದು **ಮನ್ಯಸೇ** = ಭಾವಿಸುತ್ತಿಯಾದರೆ **ಸರ್ವೈಃ** = ನಿಮ್ಮಲ್ಲಿ ಎಲ್ಲರೊಂದಿಗೆ **ಏಕೇನ ವಾ** = ಅಥವಾ ಒಬ್ಬನೊಡನೆ **ಯುದ್ಧಮ್** = ಯುದ್ಧವನ್ನು **ಕರಿಷ್ಯೇ** = ಮಾಡುತ್ತೇನೆ **ಮಮ** = ನನಗೆ **ಭೀಃ** = ಹೆದರಿಕೆಯು **ನ ಚ** = ಇರುವದಿಲ್ಲ.

**ತಾತ್ಪರ್ಯ** :- ಹೀಗಿದ್ದರೂ ನಿಮ್ಮ ಜೊತೆ ಯುದ್ಧ ಸಮ ಎಂದು ನೀನು ತಿಳಿಯುವಿಯಾದರೆ ನಿಮ್ಮಲ್ಲಿ ಎಲ್ಲರೊಡನೆ ಅಥವಾ ಒಬ್ಬನೊಂದಿಗೆ ಯುದ್ಧ ಮಾಡುತ್ತೇನೆ. ನನಗೆ ಯಾವ ಭಯವಿಲ್ಲ.

**ಇತ್ಯುಕ್ತ ಆಹ ಧರ್ಮಾತ್ಮಾ ವರ್ಮಾದ್ಯಂ ಚ ದದಾಮಿ ತೇ ।**
**ವೃಣೀಷ್ವ ಪ್ರತಿವೀರಂ ಚ ಪಂಚಾನಾಂ ಯಂ ತ್ವಮಿಚ್ಛಸಿ ॥ ೫೯ ॥**

ಪದಚ್ಛೇದ :- ಇತಿ, ಉಕ್ತಃ, ಆಹ, ಧರ್ಮಾತ್ಮಾ, ವರ್ಮಾದ್ಯಮ್, ಚ, ದದಾಮಿ, ತೇ । ವೃಣೀಷ್ವ, ಪ್ರತಿಯೋದ್ಧಾರಮ್, ಪಂಚಾನಾಮ್, ಯಮ್, ತ್ವಮ್, ಇಚ್ಛಸಿ ॥ ೫೯ ॥

**ಅನ್ವಯಾರ್ಥ** :- **ಇತ್ಯುಕ್ತಃ** = ಈ ರೀತಿ ಹೇಳಿಸಿಕೊಳ್ಳಲ್ಪಟ್ಟ **ಧರ್ಮಾತ್ಮಾ** = ಧರ್ಮರಾಜನು **ವರ್ಮಾದ್ಯಂ ಚ** = ಕವಚ ಮುಂತಾದ್ದನ್ನು **ತೇ** = ನಿನಗೆ **ದದಾಮಿ** = ಕೊಡುತ್ತೇನೆ **ಪ್ರತಿಯೋದ್ಧಾರಮ್** = ಪ್ರತಿಯಾಗಿ ಯುದ್ಧ ಮಾಡುವವನನ್ನು **ಪಂಚಾನಾಮ್** = ಐದರೊಳಗೆ **ಯಮ್** = ಯಾರನ್ನು **ತ್ವಮ್** = ನೀನು **ಇಚ್ಛಸಿ** = ಇಚ್ಛಿಸುತ್ತಿ **ವೃಣೀಷ್ವ** = ಅವರನ್ನು ಆರಿಸಿಕೋ **ಇತಿ** = ಈ ರೀತಿ **ಆಹ** = ಹೇಳಿದನು.

**ತಾತ್ಪರ್ಯ** :- ದುರ್ಯೋಧನನು ಈ ರೀತಿ ಹೇಳಿದಾಗ ಧರ್ಮರಾಜನು ನಿನಗೆ ಕವಚ ಮುಂತಾದವುಗಳನ್ನು ಕೊಡುತ್ತೇನೆ. ಐವರಲ್ಲಿ ಯಾರು ಬೇಕೋ ಅವರನ್ನು ಆರಿಸಿಕೋ ಎಂದು ಹೇಳಿದನು.

**ಹತ್ವೈಕಂ ತ್ವಂ ಭುಂಕ್ಷ್ವ ರಾಜ್ಯಮನ್ಯೇ ಯಾಮ ವಯಂ ವನಮ್ ।**
**ಹತೇ ವಾ ತ್ವಯಿ ತೇನೈವ ಭುಂಜೀಮಶ್ಚಾಖಿಲಾಂ ಭುವಮ್ ।**
**ಆದತ್ಸ್ವ ಚಾऽಯುಧಂ ಯೇನ ಜೇತುಮಿಚ್ಛಸಿ ಶಾತ್ರವಾನ್ ॥ ೬೦ ॥**

ಪದಚ್ಛೇದ :– ಹತ್ವಾ, ಏಕಮ್, ತ್ವಮ್, ಭುಂಕ್ಷ್ವ, ರಾಜ್ಯಮ್, ಅನ್ಯೇ, ಯಾಮ, ವಯಂ, ವನಮ್ । ಹತೇ, ವಾ, ತ್ವಯಿ, ತೇನ, ಏವ, ಭುಂಜೀಮಃ, ಚ, ಅಖಿಲಾಮ್, ಭುವಮ್ । ಆದತ್ಸ್ವ, ಚ, ಆಯುಧಮ್, ಯೇನ, ಜೇತುಮ್, ಇಚ್ಛಸಿ, ಶಾತ್ರವಾಮ್ ॥ ೬೦ ॥

**ಅನ್ವಯಾರ್ಥ** :- **ತ್ವಮ್** = ನೀನು **ಏಕಮ್** = ಒಬ್ಬನನ್ನು **ಹತ್ವಾ** = ಕೊಂದು **ರಾಜ್ಯಮ್** = ರಾಜ್ಯವನ್ನು **ಭುಂಕ್ಷ್ವ** = ಭೋಗಿಸು **ಅನ್ಯೇ ವಯಂ** = ಉಳಿದವರಾದ ನಾವು **ವನಮ್** = ಕಾಡಿಗೆ **ಯಾಮ** = ಹೋಗುವೆವು **ತೇನೈವ** = ಅವನಿಂದಲೇ **ತ್ವಯಿ** = ನೀನು **ಹತೇ ವಾ** = ಹತನಾದರೆ **ಅಖಿಲಾಮ್ ಭುವಮ್** = ಎಲ್ಲ ಭೂಮಿಯನ್ನು **ಭುಂಜೀಮಃ** = ನಾವು ಭೋಗಿಸುತ್ತೇವೆ **ಶಾತ್ರವಾನ್** = ಶತ್ರುಗಳನ್ನು **ಯೇನ** = ಯಾವ ಆಯುಧದಿಂದ **ಜೇತುವ್** = ಗೆಲ್ಲಲು **ಇಚ್ಛಸಿ** = ಇಚ್ಛಿಸುತ್ತೀಯೋ **ಆಯುಧಮ್** = ಆ ಆಯುಧವನ್ನು **ಆದತ್ಸ್ವ** = ಸ್ವೀಕರಿಸು.

**ತಾತ್ಪರ್ಯ** :- ಯಾವನ ಜೊತೆ ಯುದ್ಧ ಮಾಡುತ್ತೀಯೋ ಅವನೊಬ್ಬನನ್ನು ನೀನು ಕೊಂದರೆ ನೀನೇ ರಾಜ್ಯವನ್ನು ಆಳು. ನಾವು ಕಾಡಿಗೆ ಹೊರಡುತ್ತೇವೆ. ಅಥವಾ ಅವನಿಂದ ನೀನು ಹತನಾದರೆ ನಾವು ಈ ಎಲ್ಲ ಭೂಮಿಯನ್ನು ಆಳುವೆವು. ಯಾವ ಆಯುಧದಿಂದ ಗೆಲ್ಲಲು ಬಯಸುತ್ತೀಯೋ ಆ ಆಯುಧವನ್ನು ಸ್ವೀಕರಿಸು.

**ಇತ್ಯುಕ್ತ ಊಚೇ ನಹಿ ದುರ್ಬಲೈರಹಂ**
**ಯೋತ್ಸ್ಯೇ ಚತುರ್ಭಿರ್ಭವದರ್ಜುನಾದಿಭಿಃ ।**

**ಭೀಮೇನ ಯೋತ್ಸ್ಯೇ ಗದಯಾ ಸದಾ ಹಿ ಮೇ**
**ಪ್ರಿಯಾ ಗದಾ ನಾನ್ಯದಥಾಽಯುಧಂ ಸ್ಪೃಶೇ ॥ ೬೧ ॥**

ಪದಚ್ಛೇದ :- ಇತಿ, ಉಕ್ತಃ, ಊಚೇ, ನ, ಹಿ, ದುರ್ಬಲೈಃ, ಅಹಮ್, ಯೋತ್ಸ್ಯೇ, ಚತುರ್ಭಿಃ, ಭವದರ್ಜುನಾದಿಭಿಃ । ಭೀಮೇನ, ಯೋತ್ಸ್ಯೇ, ಗದಯಾ, ಸದಾ, ಹಿ, ಮೇ, ಪ್ರಿಯಾ, ಗದಾ, ನ, ಅನ್ಯತ್, ಅಥ, ಆಯುಧಮ್, ಸ್ಪೃಶೇ ॥ ೬೧ ॥

**ಅನ್ವಯಾರ್ಥ** :- **ಇತ್ಯುಕ್ತಃ** = ಈ ರೀತಿಯಾಗಿ ಧರ್ಮರಾಜನಿಂದ ಉಕ್ತನಾದ ದುರ್ಯೋಧನನು **ಊಚೇ** = ಹೇಳಿದನು **ಅಹಮ್** = ನಾನು **ಭವದರ್ಜುನಾದಿಭಿಃ** = ನೀನು ಅರ್ಜುನನೇ ಮೊದಲಾದ **ಚತುರ್ಭಿಃ** = ನಾಲ್ಕು **ದುರ್ಬಲೈಃ** = ದುರ್ಬಲರಿಂದ **ನ ಹಿ ಯೋತ್ಸ್ಯೇ** = ಯುದ್ಧ ಮಾಡುವದಿಲ್ಲ **ಗದಯಾ** = ಗದೆಯಿಂದ **ಭೀಮೇನ** = ಭೀಮನ ಜೊತೆಗೆ **ಯೋತ್ಸ್ಯೇ** = ಯುದ್ಧ ಮಾಡುತ್ತೇನೆ **ಸದಾ** = ಯಾವಾಗಲೂ **ಮೇ** = ನನಗೆ **ಗದಾ** = ಗದೆಯು **ಪ್ರಿಯಾ ಹಿ** = ಪ್ರಿಯವಾಗಿದೆ **ಅಥ** = ಅನಂತರ **ಅನ್ಯತ್** = ಬೇರೆ **ಆಯುಧಮ್** = ಆಯುಧವನ್ನು **ನ ಸ್ಪೃಶೇ** = ಮುಟ್ಟಲಾರೆ.

**ತಾತ್ಪರ್ಯ** :- ಧರ್ಮರಾಜ ಈ ರೀತಿಯಾಗಿ ಹೇಳಿದಾಗ ದುರ್ಯೋಧನನು ಹೇಳಿದನು. ''ನೀನು ಅರ್ಜುನ ಮುಂತಾದ ನಾಲ್ವರು ದುರ್ಬಲರೊಂದಿಗೆ ನಾನು ಯುದ್ಧ ಮಾಡಲಾರೆ. ಭೀಮನೊಡನೆ ಗದೆಯಿಂದ ಯುದ್ಧ ಮಾಡುತ್ತೇನೆ. ನನಗೆ ಗದೆಯು ಸದಾ ಅತ್ಯಂತ ಪ್ರಿಯವಾಗಿದೆ. ಬೇರೆ ಆಯುಧವನ್ನು ನಾನು ಮಟ್ಟಲಾರೆ'' ಎಂದು.

**ಶ್ರುತ್ವಾಽಸ್ಯ ವಾಕ್ಯಂ ರಭಸೋ ವೃಕೋದರೋ**
**ಗದಾಂ ತದಾಽಧ್ಯರ್ಧಭರಾಧಿಕಾಂ ಮುದಾ ।**
**ರಾಜ್ಞೋ ಗದಾಯಾಃ ಪರಿಗೃಹ್ಯ ವೀರಃ**
**ಸಮುತ್ಥಿತೋ ಯುದ್ಧಮನಾಃ ಸಮುನ್ನದನ್ ॥ ೬೨ ॥**

ಪದಚ್ಛೇದ :- ಶ್ರುತ್ವಾ, ಅಸ್ಯ, ವಾಕ್ಯಮ್, ರಭಸೋ, ವೃಕೋದರಃ, ಗದಾಮ್, ತದಾ, ಅಧ್ಯರ್ಧಭರಾಧಿಕಾಮ್, ಮುದಾ । ರಾಜ್ಞಃ, ಗದಾಯಾಃ, ಪರಿಗೃಹ್ಯ, ವೀರಃ, ಸಮುತ್ಥಿತಃ, ಯುದ್ಧಮನಾಃ, ಸಮುನ್ನದನ್ ॥ ೬೨ ॥

**ಅನ್ವಯಾರ್ಥ :-** **ಅಸ್ಯ** = ಈ ದುರ್ಯೋಧನನ **ವಾಕ್ಯಮ್** = ಮಾತನ್ನು **ಶ್ರುತ್ವಾ** = ಕೇಳಿ **ವೀರಃ** = ವೀರನಾದ **ವೃಕೋದರಃ** = ಭೀಮನು **ರಾಜ್ಞಃ** = ದುರ್ಯೋಧನನ **ಗದಾಯಾಃ** = ಗದೆಗಿಂತಲೂ **ಅಧ್ಯರ್ಧಭರಾಧಿಕಾಮ್** = ಒಂದೂವರೆ ಪಟ್ಟು ಹೆಚ್ಚು ಭಾರವುಳ್ಳ **ಗದಾಮ್** = ಗದೆಯನ್ನು **ಮುದಾ** = ಸಂತೋಷದಿಂದ **ಪರಿಗೃಹ್ಯ** = ಹಿಡಿದು **ಯುದ್ಧಮನಾಃ** = ಯುದ್ಧಮನಸ್ಕನಾಗಿ **ರಭಸಃ** = ವೇಗವಾಗಿ **ಸಮುನ್ನದನ್** = ಸಿಂಹನಾದ ಮಾಡುತ್ತಾ **ಸಮುತ್ಥಿತಃ** = ಎದ್ದು ನಿಂತನು.

**ತಾತ್ಪರ್ಯ :-** ದುರ್ಯೋಧನನ ಈ ಮಾತನ್ನು ಕೇಳಿ ವೀರನಾದ ಭೀಮನು ದುರ್ಯೋಧನನ ಗದೆಗಿಂತಲೂ ಒಂದೂವರೆ ಪಟ್ಟು ಹೆಚ್ಚು ಭಾರವುಳ್ಳ ಗದೆಯನ್ನು ಸಂತೋಷದಿಂದ ಹಿಡಿದು ಯುದ್ಧರತನಾಗಿ ರಭಸದಿಂದ ಸಿಂಹನಾದ ಮಾಡುತ್ತಾ ಎದ್ದು ನಿಂತನು.

ಆಪದ್ಧರ್ಮ

**ಅಥಾಽಹ ನಾರಾಯಣ ಆದಿದೇವೋ**
**ಯುಧಿಷ್ಠಿರಂ ಕಷ್ಟಮಿದಂ ಕೃತಂ ತ್ವಯಾ ।**
**ನಹ್ಯೇಷ ರಾಜಾ ಗದಯಾ ರಣೇ ಚರನ್**
**ಶಕ್ಯೋ ವಿಜೇತುಂ ನಿಖಿಲೈಃ ಸುರಾಸುರೈಃ ॥ ೬೩ ॥**

**ಅಥ, ಆಹ, ನಾರಾಯಣಃ, ಆದಿದೇವಃ, ಯುಧಿಷ್ಠಿರಮ್, ಕಷ್ಟಮ್, ಇದಮ್, ಕೃತಮ್, ತ್ವಯಾ । ನ, ಹಿ, ಏಷಃ, ರಾಜಾ, ಗದಯಾ, ರಣೇ, ಚರನ್, ಶಕ್ಯಃ, ವಿಜೇತುಮ್, ನಿಖಿಲೈಃ, ಸುರಾಸುರೈಃ ॥ ೬೩ ॥**

**ಅನ್ವಯಾರ್ಥ :-** **ಅಥ** = ಅನಂತರ **ಆದಿದೇವಃ** = ಆದಿದೇವನಾದ **ನಾರಾಯಣಃ** = ನಾರಾಯಣನು, **ಯುಧಿಷ್ಠಿರಮ್** = ಯುಧಿಷ್ಠಿರನನ್ನು ಕುರಿತು **ಆಹ** = ಹೇಳಿದನು. **ತ್ವಯಾ** = ನಿನ್ನಿಂದ **ಕೃತಮ್** = ಮಾಡಲ್ಪಟ್ಟ **ಇದಮ್** = ಈ ಕಾರ್ಯವು **ಕಷ್ಟಮ್** = ಅಪಾಯಕಾರಿಯಾಗಿದೆ. **ಹಿ** = ಯಾಕೆಂದರೆ **ಏಷಃ ರಾಜಾ** = ಈ ದುರ್ಯೋಧನನು **ಗದಯಾ** = ಗದೆಯಿಂದ **ರಣೇ** = ಯುದ್ಧದಲ್ಲಿ **ಚರನ್ ವಿಜೇತುಮ್** = ಗೆಲ್ಲಲು **ನ ಹಿ ಶಕ್ಯಃ** = ಶಕ್ಯನಾಗಲಾರ.

**ತಾತ್ಪರ್ಯ** :- ಅನಂತತರ ಆದಿದೇವನಾದ ನಾರಾಯಣನು ಯುಧಿಷ್ಠಿರನನ್ನು ಕುರಿತು ಈ ರೀತಿ ಹೇಳಿದನು. ನೀನು ಮಾಡಿದ ಕೆಲಸ ತುಂಬಾ ಕಷ್ಟವಾಗಿತ್ತು. ಏಕೆಂದರೆ ದುರ್ಯೋಧನನು ಗದೆಯಿಂದ ಕೂಡಿಕೊಂಡು ರಣರಂಗದಲ್ಲಿ ಓಡಾಡಿದರೆ ಎಲ್ಲಾ ಸುರಾಸುರರಿಂದಲೂ ಗೆಲ್ಲಲು ಶಕ್ಯವಿಲ್ಲ.

**ಸ ನಿಶ್ಚಯಾದ್ ವಶ್ಚತುರೋ ನಿಹನ್ಯಾತ್**
**ಸಹಾರ್ಜುನಾನ್ ಭೀಮಸೇನಃ ಕಥಂಚಿತ್ ।**
**ಹಂತೈನಮಾಜೌ ನಹಿ ಭೀಮತುಲ್ಯೋ**
**ಬಲೇ ಕ್ವಚಿದ್ ಧಾರ್ತರಾಷ್ಟ್ರಃ ಕೃತೀ ಚ ॥ ೬೪ ॥**

ಪದಚ್ಛೇದ :- ಸಃ, ನಿಶ್ಚಯಾತ್, ವಃ, ಚತುರಃ, ನಿಹನ್ಯಾತ್, ಸಹಾರ್ಜುನಾನ್, ಭೀಮಸೇನಃ, ಕಥಂಚಿತ್ । ಹಂತಾ, ಏನಮ್, ಆಜೌ, ನ, ಹಿ, ಭೀಮತುಲ್ಯಃ, ಬಲೇ, ಕ್ವಚಿತ್, ಧಾರ್ತರಾಷ್ಟ್ರಃ, ಕೃತೀ, ಚ ॥ ೬೪ ॥

**ಅನ್ವಯಾರ್ಥ** :- **ಸಃ** = ಆ ದುರ್ಯೋಧನನು **ನಿಶ್ಚಯಾತ್** = ನಿಶ್ಚಯವಾಗಿಯೂ **ಸಹಾರ್ಜುನಾನ್** = ಅರ್ಜುನಸಮೇತರಾದ **ಚತುರಃ** = ನಾಲ್ವರನ್ನು **ನಿಹನ್ಯಾತ್** = ಕೊಲ್ಲಬಹುದು. **ಭೀಮಸೇನಃ** = ಭೀಮಸೇನನು **ಕಥಂಚಿತ್** = ಹೇಗಾದರೂ **ಏನಮ್** = ಈ ದುರ್ಯೋಧನನನ್ನು **ಆಜೌ** = ಯುದ್ಧದಲ್ಲಿ **ಹಂತಾ** = ಕೊಲ್ಲಬೇಕು **ಬಲೇ** = ಬಲದಲ್ಲಿ **ಭೀಮತುಲ್ಯಃ** = ಭೀಮನಿಗೆ ಸಮನಾದವನು **ಕ್ವಚಿತ್** = ಎಲ್ಲಿಯೂ **ನ ಹಿ** = ಇಲ್ಲ **ಧಾರ್ತರಾಷ್ಟ್ರಃ ಚ** = ದುರ್ಯೋಧನನೂ ಕೂಡ **ಕೃತೀ ಚ** = ಬಲಿಷ್ಠ ಹಾಗೂ ಪ್ರಯತ್ನಶೀಲನೂ ಆಗಿದ್ದಾನೆ.

**ತಾತ್ಪರ್ಯ** :- ದುರ್ಯೋಧನನು ನಿಶ್ಚಯವಾಗಿಯೂ ಅರ್ಜುನಾದಿ ನಾಲ್ವರನ್ನು ಕೊಲ್ಲಬಹುದು. ಭೀಮನು ಹೇಗಾದರೂ ಮಾಡಿ ಉಪಾಯದಿಂದ ದುರ್ಯೋಧನನನ್ನು ಕೊಲ್ಲಬೇಕು. ಬಲದಲ್ಲಿ ಭೀಮನಿಗೆ ಸಮನಾದವನು ಎಲ್ಲಿಯೂ ಇಲ್ಲ. ದುರ್ಯೋಧನನೂ ಕೂಡ ಬಲಿಷ್ಠ ಹಾಗೂ ಪ್ರಯತ್ನಶೀಲನೂ ಆಗಿದ್ದಾನೆ.

**ಊರೂ ಭೀಮೇನ ಭೇತ್ತವ್ಯೌ ಪ್ರತಿಜ್ಞಾಂ ರಕ್ಷತಾ ರಿಪೋಃ ।**
**ನಾಭೇರಧಸ್ತಾದ್ಧನನಂ ಜನಾ ಆಹುರ್ಗದಾಮೃಧೇ ॥ ೬೫ ॥**

**ಅಧರ್ಮ ಇತಿ ತತ್ ಕೃಷ್ಣೋ ಲೋಕನಿಂದಾನಿವೃತ್ತಯೇ ।**
**ಆಪದ್ಧರ್ಮಂ ದರ್ಶಯಿತುಂ ಕಿಂಚಿದ್ವ್ಯಾಜೇನ ಸಂಯುತಃ ॥ ೬೬ ॥**

**ಭೀಮೋ ಹನ್ಯಾದ್ ಧಾರ್ತರಾಷ್ಟ್ರ ಮಿತ್ಯೂಚೇ ಯದ್ಯಪಿ ಸ್ಫುಟಮ್ ।**
**ಅವ್ಯಾಜೇನಾಪಿ ಶಕ್ತೋಽಸೌ ಬಲಂ ನಿಸ್ಸೀಮಮಾಹ ಚ ॥ ೬೭ ॥**

**ಆಹ ಶಿಕ್ಷಾಮಪ್ಯನೂನಾಂ ಯತ್ನಂ ದುರ್ಯೋಧನೇಽಧಿಕಮ್ ।**
**ನಹಿ ಭೀಮೋಽತಿಪ್ರಯತ್ನಂ ಕುರ್ಯಾದಿತಿ ಗುಣೋ ಹ್ಯಯಮ್ ॥ ೬೮ ॥**

ಪದಚ್ಛೇದ :- ಊರೂ, ಭೀಮೇನ, ಭೇತ್ತವ್ಯೌ, ಪ್ರತಿಜ್ಞಾಮ್, ರಕ್ಷತಾ, ರಿಪೋಃ । ನಾಭೇಃ, ಅಧಸ್ತಾತ್, ಹನನಮ್, ಜನಾಃ, ಆಹುಃ, ಗದಾಮೃಧೇ ॥ ೬೫ ॥ ಅಧರ್ಮಃ, ಇತಿ, ತತ್, ಕೃಷ್ಣಃ, ಲೋಕನಿಂದಾನಿವೃತ್ತಯೇ । ಆಪದ್ಧರ್ಮಮ್, ದರ್ಶಯಿತುಮ್, ಕಿಂಚಿತ್, ವ್ಯಾಜೇನ, ಸಂಯುತಃ ॥ ೬೬ ॥ ಭೀಮಃ, ಹನ್ಯಾತ್, ಧಾರ್ತರಾಷ್ಟ್ರಮ್, ಇತಿ, ಊಚೇ, ಯದಿ, ಅಪಿ, ಸ್ಫುಟಮ್ । ಅವ್ಯಾಜೇನ, ಅಪಿ, ಶಕ್ತಃ, ಅಸೌ, ಬಲಮ್, ನಿಸ್ಸಿಮಮ್, ಆಹ, ಚ ॥ ೬೭ ॥ ಆಹ, ಶಿಕ್ಷಾಮ್, ಅಪಿ ಅನೂನಾಮ್, ಯತ್ನಮ್, ದುರ್ಯೋಧನೇ, ಅಧಿಕಮ್ । ನ, ಹಿ, ಭೀಮಃ, ಅತಿಪ್ರಯತ್ನಮ್, ಕುರ್ಯಾತ್, ಇತಿ ಗುಣಃ, ಹಿ, ಅಯಮ್ ॥ ೬೮ ॥

**ಅನ್ವಯಾರ್ಥ :- ಪ್ರತಿಜ್ಞಾಮ್** = ಪ್ರತಿಜ್ಞೆಯನ್ನು **ರಕ್ಷತಾ** = ರಕ್ಷಿಸುವ ಭೀಮನಿಂದ **ರಿಪೋಃ** = ಶತ್ರುವಿನ **ಊರೂ** = ತೊಡೆಗಳನ್ನು **ಭೇತ್ತವ್ಯೌ** = ಭೇದಿಸಲ್ಪಡಬೇಕು **ನಾಭೇಃ** = ನಾಭಿಯ **ಅಧಸ್ತಾತ್** = ಕೆಳಗೆ **ಹನನಮ್** = ಹೊಡೆಯುವುದು **ಗದಾಮೃಧೇ** = ಗದಾಯುದ್ಧದಲ್ಲಿ **ಅಧರ್ಮ ಇತಿ** = ಅಧರ್ಮ ಎಂದು **ಜನಾಃ** = ಜನರು **ಆಹುಃ** = ಹೇಳುತ್ತಾರೆ.

**ತತ್** = ಆದ್ದರಿಂದ **ಲೋಕನಿಂದಾನೃವತ್ತಯೇ** = ಲೋಕನಿಂದೆಗೆ ಅವಕಾಶವಿಲ್ಲದಂತೆ ಮಾಡಲು **ಆಪದ್ಧರ್ಮಮ್** = ಆಪದ್ಧರ್ಮವನ್ನು **ದರ್ಶಯಿತುಮ್** = ತೋರಿಸಲು **ಕಿಂಚಿತ್ ವ್ಯಾಜೇನ** = ಯಾವುದಾದರೊಂದು ಉಪಾಯದಿಂದ **ಧಾರ್ತರಾಷ್ಟ್ರಮ್** = ದುರ್ಯೋಧನನನ್ನು **ಭೀಮಃ** = ಭೀಮನು **ಹನ್ಯಾತ್** = ಕೊಲ್ಲಬೇಕು.

ಎಂದು **ಕೃಷ್ಣಃ** = ಕೃಷ್ಣನು **ಊಚೇ** = ಹೇಳಿದ್ದಾನೆ **ಯದ್ಯಪಿ** = ವಾಸ್ತವಿಕವಾಗಿ **ಅಸೌ** = ಈ ಭೀಮನು **ಅವ್ಯಾಜೇನಾಽಪಿ** = ಯಾವ

ಉಪಾಯವಿಲ್ಲದೇ **ಶಕ್ತಃ** = ಕೊಲ್ಲಲು ಸಮರ್ಥನು **ಚ** = ಮತ್ತು **ಬಲಮ್** = ಬಲವೂ **ನಿಸ್ಸೀಮಮ್** = ಅಪರಿಮಿತ ಎಂದು **ಆಹ** = ಕೃಷಣನೇ ಹೇಳಿದನು.

**ಚ** = ಮತ್ತು **ಶಿಕ್ಷಾಮಪಿ** = ಗದಾವಿದ್ಯೆಯನ್ನೂ ಕೂಡ **ಅನೂನಾಮ್** = ಪೂರ್ಣವಾಗಿದೆ ಎಂದು **ಆಹ** = ಹೇಳಿದ್ದಾನೆ **ದುರ್ಯೋಧನೇ** = ದುರ್ಯೋಧನನಲ್ಲಿ **ಯತ್ನಮ್** = ಪ್ರಯತ್ನವು **ಅಧಿಕಮ್** = ಅಧಿಕವಾಗಿದೆ ಎಂದೂ ಹೇಳಿದ್ದಾನೆ **ಭೀಮಃ** = ಭೀಮನು **ಅತಿಪ್ರಯತ್ನಮ್** = ಅಲ್ಪಕಾರ್ಯದಲ್ಲಿ ಹೆಚ್ಚಿನ ಪ್ರಯತ್ನವನ್ನು **ನ ಹಿ ಕುರ್ಯಾತ್** = ಮಾಡುವದಿಲ್ಲ **ಇತಿ** = ಎಂಬುದು **ಅಯಮ್ ಗುಣಃ ಹಿ** = ಗುಣವಷ್ಟೆ.

**ತಾತ್ಪರ್ಯ** :- ಭೀಮನು ಪ್ರತಿಜ್ಞೆಯನ್ನು ಕಾಪಾಡುವುದಕ್ಕಾಗಿ ಶತ್ರುವಿನ ತೊಡೆಯನ್ನು ಭೇದಿಸಬೇಕು. ಆದರೆ ನಾಭಯಿಂದ ಕೆಳಗೆ ಹೊಡೆಯುವುದು ಗದಾಯುದ್ಧದಲ್ಲಿ ಅಧರ್ಮ ಎಂದು ಜನರು ಹೇಳುತ್ತಾರೆ. ಆದ್ದರಿಂದ ಲೋಕನಿಂದೆಗೆ ಅವಕಾಶವಾಗದಂತೆ ಆಪದ್ಧರ್ಮವನ್ನು ತೋರಿಸಲು ಹೇಗಾದರೂ ಉಪಾಯದಿಂದ ಭೀಮ ದುರ್ಯೋಧನನನ್ನು ಕೊಲ್ಲಬೇಕು ಎಂದು ಕೃಷ್ಣ ಹೇಳಿದ್ದಾನೆ. ವಾಸ್ತವಿಕವಾಗಿ ಯಾವ ಉಪಾಯವಿಲ್ಲದೇ ಕೊಲ್ಲಲು ಭೀಮ ಶಕ್ತನಾಗಿದ್ದಾನೆ. ಅವನ ಬಲ ಅಪರಿಮಿತ ಎಂದು ಕೃಷ್ಣನೇ ಹೇಳಿದ್ದಾನೆ. ಗದಾವಿದ್ಯಾಭ್ಯಾಸವೂ ಪೂರ್ಣವಾಗಿದೆ ಎಂದಿದ್ದಾನೆ. ಹಾಗೂ ದುರ್ಯೋಧನನಲ್ಲಿ ಪ್ರಯತ್ನಶೀಲತೆ ಅಧಿಕ ಎಂದಿದ್ದಾನೆ. ಸರ್ವಸಮರ್ಥನಾದ ಭೀಮನು ಅಲ್ಪಕಾರ್ಯದಲ್ಲಿ ಹೆಚ್ಚಿನ ಪ್ರಯತ್ನವನ್ನು ಮಾಡುವದಿಲ್ಲ. ಅದು ಗುಣವೇ ಆಗಿದೆ.

**ಪ್ರತಿಜ್ಞಾಪಾಲನಂ ಧರ್ಮೋ ದುಷ್ಟೇಷು ತು ವಿಶೇಷತಃ ।**
**ಇತಿ ಧರ್ಮರಹಸ್ಯಂ ತು ವಿತ್ತಃ ಕೃಷ್ಣವೃಕೋದರೌ ॥ ೬೯ ॥**

**ನಾನ್ಯಸ್ತತೋ ಲೋಕನಿಂದಾಂ ವ್ಯಪನೇತುಮುಭಾವಪಿ ।**
**ಅನಾಪದ್ಯಾಪದಿವ ಚ ದರ್ಶಯೇತಾಂ ಜನಸ್ಯ ತು ॥ ೭೦ ॥**

**ಪದಚ್ಛೇದ** :- ಪ್ರತಿಜ್ಞಾಪಾಲನಮ್, ಧರ್ಮಃ, ದುಷ್ಟೇಷು, ತು, ವಿಶೇಷತಃ । ಇತಿ, ಧರ್ಮರಹಸ್ಯಮ್, ತು, ವಿತ್ತಃ, ಕೃಷ್ಣವೃಕೋದರೌ ॥ ೬೯ ॥ ನ, ಅನ್ಯಃ, ತತಃ,

ಲೋಕನಿಂದಾಮ್, ವ್ಯಪನೇತುಮ್, ಉಭೌ, ಅಪಿ । ಅನಾಪದಿ, ಆಪತ್, ಇವ, ಚ, ದರ್ಶಯೇತಾಮ್, ಜನಸ್ಯ, ತು ॥ ೭೦ ॥

**ಅನ್ವಯಾರ್ಥ :- ಪ್ರತಿಜ್ಞಾಪಾಲನಮ್** = ಪ್ರತಿಜ್ಞಾಪಾಲನೆಯು **ಧರ್ಮಃ** = ಧರ್ಮವು **ವಿಶೇಷತಃ** = ವಿಶೇಷವಾಗಿ **ದುಷ್ಟೇಷು** = ದುಷ್ಟರಲ್ಲಿ ಪ್ರತಿಜ್ಞಾಪಾಲನೆಯು ಧರ್ಮವು ಇತಿ = ಎಂಬ **ಧರ್ಮರಹಸ್ಯಮ್** = ಧರ್ಮದ ರಹಸ್ಯವನ್ನು **ಕೃಷ್ಣವೃಕೋದರೌ** = ಕೃಷ್ಣಭೀಮರು **ವಿತ್ತಃ** = ತಿಳಿದಿದ್ದಾರೆ.

**ನಾನ್ಯಃ** = ಬೇರೆ ಯಾರೂ ತಿಳಿದಿಲ್ಲ **ತತಃ** = ಆದ್ದರಿಂದ **ಲೋಕನಿಂದಾಮ್** = ಲೋಕನಿಂದೆಯನ್ನು **ವ್ಯಪನೇತುಮ್** = ಬಾರದಂತೆ ಮಾಡಲು **ಅನಾಪದಿ** = ಆಪತ್ತಿಲ್ಲದಿದ್ದರೂ **ಆಪದಿವ** = ಆಪತ್ತು ಇರುವಂತೆ **ಜನಸ್ಯ** = ಲೋಕಕ್ಕೆ **ದರ್ಶಯೇತಾಮ್** = ತೋರಿಸಿಕೊಳ್ಳುತ್ತಾರೆ.

**ತಾತ್ಪರ್ಯ :-** ಪ್ರತಿಜ್ಞಾಪಾಲನೆಯು ವಿಶೇಷವಾಗಿ ದುಷ್ಟರಲ್ಲಿ ಧರ್ಮವೆನಿಸುತ್ತದೆ. ಎಂದು ಧರ್ಮರಹಸ್ಯವನ್ನು ಕೃಷ್ಣಭೀಮರು ತಿಳಿದಿದ್ದಾರೆ. ಬೇರೆ ಯಾರೂ ತಿಳಿದಿಲ್ಲ. ಆದ್ದರಿಂದ ಲೋಕನಿಂದೆ ಬಾರದಂತೆ ಮಾಡಲು ಆಪತ್ತಿಲ್ಲದಿದ್ದರೂ ಆಪತ್ತು ಇರುವಂತೆ ಇಬ್ಬರೂ ಲೋಕಕ್ಕೆ ತೋರಿಸಿಕೊಳ್ಳುತ್ತಾರೆ.

ಊರುಭಂಗ

**ತತೋ ಭೀಮಃ ಸರ್ವಲೋಕಸ್ಯ ಧರ್ಮಂ**
**ಪ್ರಕಾಶಯನ್ ವಾಕ್ಯಮಿದಂ ಜಗಾದ ।**
**ಊರೂ ತವಾಹಂ ಹಿ ಯಥಾಪ್ರತಿಜ್ಞಂ**
**ಭೇತ್ಸ್ಯಾಮಿ ನೈವಾತ್ರ ವಿಚಾರಣೀಯಮ್ ॥ ೭೧ ॥**

ಪದಚ್ಛೇದ :- ತತಃ, ಭೀಮಃ, ಸರ್ವಲೋಕಸ್ಯ, ಧಮಮ್, ಪ್ರಕಾಶಯನ್, ವಾಕ್ಯಮ್, ಇದಮ್, ಜಗಾದ । ಊರೂ, ತವ, ಅಹಮ್, ಯಥಾಪ್ರತಿಜ್ಞಮ್, ಭೇತ್ಸ್ಯಾಮಿ, ನ, ಏವ, ಅತ್ರ, ವಿಚಾರಣೀಯಮ್ ॥ ೭೧ ॥

**ಅನ್ವಯಾರ್ಥ :- ತತಃ** = ಅನಂತರ **ಭೀಮಃ** = ಭೀಮನು **ಸರ್ವಲೋಕಸ್ಯ** = ಎಲ್ಲ ಲೋಕಕ್ಕೆ **ಧರ್ಮಮ್** = ಧರ್ಮವನ್ನು **ಪ್ರಕಾಶಯನ್**

= ತೋರಿಸುತ್ತಾ **ಇದಂ ವಾಕ್ಯಮ್** = ಈ ವಾಕ್ಯವನ್ನು ಜಗಾದ = ಹೇಳಿದನು **ಅಹಂ ಹಿ** = ನಾನಾದರೋ **ತವ** = ನಿನ್ನ **ಊರೂ** = ಎರಡು ತೊಡೆಗಳನ್ನು **ಯಥಾಪ್ರತಿಜ್ಞಮ್** = ಪ್ರತಿಜ್ಞಾನುಸಾರವಾಗಿ **ಭೇತ್ಸ್ಯಾಮಿ** = ಮುರಿಯುತ್ತೇನೆ **ಅತ್ರ** = ಈ ವಿಷಯದಲ್ಲಿ **ನೈವ ವಿಚಾರಣೀಯಮ್** = ಸಂಶಯ ಪಡಬೇಕಿಲ್ಲ.

**ತಾತ್ಪರ್ಯ :-** ಅನಂತರ ಭೀಮನು ಇಡೀ ಜಗತ್ತಿಗೆ ಧರ್ಮವನ್ನು ತೋರಿಸುತ್ತಾ ಈ ಮಾತನ್ನು ಹೇಳಿದ. ನಾನು ನಿನ್ನ ತೊಡೆಗಳನ್ನು ಪ್ರತಿಜ್ಞಾನುಸಾರವಾಗಿ ಮುರಿಯುತ್ತೇನೆ. ಇದರಲ್ಲಿ ಸಂಶಯ ಪಡಬೇಕಿಲ್ಲ.

**ಇತ್ಯುಕ್ತವಂತಂ ಪ್ರಸಸಾರ ಚಾಽಜೌ**
**ದುರ್ಯೋಧನಸ್ತತ್ರ ಬಭೂವ ಯುದ್ಧಮ್ ।**
**ಭೀಮಸ್ತದಾಽಗ್ರ್ಯ ಪ್ರಕೃತಿಂ ವಿಧಿತ್ಸು-**
**ರ್ಮಂದಃ ಸ ಆಜೌ ವ್ಯಚರಜ್ಜನಾರ್ಥೇ ॥ ೭೨ ॥**

**ಪದಚ್ಛೇದ :- ಇತಿ, ಉಕ್ತವಂತಮ್, ಪ್ರಸಸಾರ, ಚ, ಆಜೌ, ದುರ್ಯೋಧನಃ, ತತ್ರ, ಬಭೂವ, ಯುದ್ಧಮ್ । ಭೀಮಃ, ತದಾ, ಅಗ್ರ್ಯಪ್ರಕೃತಿಮ್, ವಿಧಿತ್ಸುಃ, ಮಂದಃ, ಸಃ, ಆಜೌ, ವ್ಯಚರತ್, ಜನಾರ್ಥೇ ॥ ೭೨ ॥**

**ಅನ್ವಯಾರ್ಥ :- ಇತಿ, ಉಕ್ತವಂತವಮ್** = ಈ ರೀತಿ ಹೇಳಿದ ಭೀಮನನ್ನು **ಆಜೌ** = ಯುದ್ಧದಲ್ಲಿ **ದುರ್ಯೋಧನಃ** = ದುರ್ಯೋಧನನು **ಪ್ರಸಸಾರ** = ಎದುರಿಸಿದನು **ತತ್ರ** = ಅಲ್ಲಿ **ಯುದ್ಧಮ್** = ಯುದ್ಧವು **ಬಭೂವ** = ನಡೆಯಿತು **ತದಾ** = ಆಗ **ಭೀಮಃ** = ಭೀಮನು **ಅಗ್ರ್ಯಪ್ರಕೃತಿಮ್** = ದೊಡ್ಡವರ ಸ್ವಭಾವವನ್ನು **ವಿಧಿತ್ಸುಃ** = ತೋರಿಸಲು ಬಯಸಿ **ಜನಾರ್ಥೇ** = ಲೋಕಶಿಕ್ಷಣಕ್ಕಾಗಿ **ಆಜೌ** = ಯುದ್ಧದಲ್ಲಿ **ಮಂದಃ** = ಮಂದವಾಗಿ **ವ್ಯಚರತ್** = ಸಂಚರಿಸಿದನು.

**ತಾತ್ಪರ್ಯ :-** ಭೀಮನು ಹೀಗೆ ಹೇಳಿದಾಗ ದುರ್ಯೋಧನನು ಅವನನ್ನು ಯುದ್ಧದಲ್ಲಿ ಎದುರಿಸಿದನು. ಯುದ್ಧ ನಡೆಯಿತು. ಭೀಮನು ದೊಡ್ಡವರ ಸ್ವಭಾವವನ್ನು ತೋರಿಸಲು ಬಯಸಿ ಲೋಕಶಿಕ್ಷಣಕ್ಕಾಗಿ ಯುದ್ಧದಲ್ಲಿ ಮಂದಗತಿಯಿಂದ ಸಂಚರಿಸಿದನು.

**ದರ್ಶಯಂತೌ ಗದಾಮಾರ್ಗಂ ಚಿತ್ರಂ ತೌ ಪ್ರವಿಚೇರತುಃ ।**
**ಬಲಭದ್ರೋಽಪ್ಯಾಜಗಾಮ ತದಾ ತೌ ಪ್ರತಿವಾರಿತುಮ್ ॥ ೭೩ ॥**

ಪದಚ್ಛೇದ :- ದರ್ಶಯಂತೌ, ಗದಾಮಾರ್ಗಮ್, ಚಿತ್ರಮ್, ತೌ, ಪ್ರವಿಚೇರತುಃ ।
ಬಲಭದ್ರಃ, ಅಪಿ, ಆಜಗಾಮ, ತದಾ, ತೌ, ಪ್ರತಿವಾರಿತುಮ್ ॥ ೭೩ ॥

**ಅನ್ವಯಾರ್ಥ** :- **ತೌ** = ಭೀಮದುರ್ಯೋಧನರು **ಗದಾಮಾರ್ಗಮ್** = ಗದಾಯುದ್ಧದ ಮಾರ್ಗವನ್ನು **ದರ್ಶಯಂತೌ** = ತೋರಿಸುತ್ತಾ **ಚಿತ್ರಮ್** = ಆಶ್ಚರ್ಯಕರವಾಗಿ **ಪ್ರವಿಚೇರತುಃ** = ಸಂಚರಿಸಿದರು **ತದಾ** = ಆಗ **ತೌ** = ಅವರಿಬ್ಬರನ್ನು **ಪ್ರತಿವಾರಿತುಮ್** = ನಿವಾರಿಸಲು **ಬಲಭದ್ರಃ ಅಪಿ** = ಬಲರಾಮನೂ ಕೂಡ **ಆಜಗಾಮ** = ಬಂದನು.

**ತಾತ್ಪರ್ಯ** :- ಭೀಮದುರ್ಯೋಧನರು ಗದಾಯುದ್ಧದ ಮಾರ್ಗವನ್ನು ತೋರಿಸುತ್ತಾ ಆಶ್ಚರ್ಯಕರವಾಗಿ ಸಂಚರಿಸಿದರು. ಆಗ ಅವರಿಬ್ಬರನ್ನು ನಿವಾರಿಸಲು ಬಲರಾಮನೂ ಕೂಡ ಬಂದನು.

**ವಾರಿತಾವಪಿ ತೇನೋಭೌ ನೈವ ಯುದ್ಧಂ ಪ್ರಮುಂಚತಾಮ್ ।**
**ತತೋ ದದರ್ಶ ತದ್ ಯುದ್ಧಂ ಮಾನಿತಃ ಕೃಷ್ಣಪೂರ್ವಕೈಃ ॥ ೭೪**

ಪದಚ್ಛೇದ :- ವಾರಿತೌ, ಅಪಿ, ತೇನ, ಉಭೌ, ನ, ಏವ, ಯುದ್ಧಮ್, ಪ್ರಮುಂಚತಾಮ್ । ತತಃ, ದದರ್ಶ, ತತ್, ಯುದ್ಧಮ್, ಮಾನಿತಃ, ಕೃಷ್ಣಪೂರ್ವಕೈಃ ॥ ೭೪ ॥

**ಅನ್ವಯಾರ್ಥ** :- **ತೇನ** = ಬಲರಾಮನಿಂದ **ವಾರಿತಾವಪಿ** = ತಡೆಯಲ್ಪಟ್ಟರೂ **ಉಭೌ** = ಭೀಮದುರ್ಯೋಧನರು **ಯುದ್ಧಮ್** = ಯುದ್ಧವನ್ನು **ನೈವ ಪ್ರಮುಂಚತಾಮ್** = ನಿಲ್ಲಿಸಲಿಲ್ಲ **ತತಃ** = ಅನಂತರ **ಕೃಷ್ಣಪೂರ್ವಕೈಃ** = ಕೃಷ್ಣಮುಂತಾದವರಿಂದ **ಮಾನಿತಃ** = ಸತ್ಕೃತನಾಗಿ **ತದ್ ಯುದ್ಧಮ್** = ಆ ಯುದ್ಧವನ್ನು **ದದರ್ಶ** = ನೋಡಿದನು.

**ತಾತ್ಪರ್ಯ** :- ಬಲರಾಮನು ಎಷ್ಟು ತಡೆದರೂ ಭೀಮ ದುರ್ಯೋಧನರು ಯುದ್ಧವನ್ನು ನಿಲ್ಲಿಸಲಿಲ್ಲ. ಅನಂತರ ಕೃಷ್ಣ ಮುಂತಾದವರಿಂದ ಸತ್ಕೃತನಾಗಿ ಆ ಯುದ್ಧವನ್ನು ನೋಡಿದನು.

**ತೌ ಶಿಕ್ಷಾಬಲಸಂಯುಕ್ತೌ ಮಂಡಲಾನಿ ವಿಚೇರತುಃ ।**
**ತತೋ ಭೀಮಂ ವಂಚಯಿತುಂ ಧಾರ್ತರಾಷ್ಟ್ರಃ ಶಿರಃ ಕ್ಷಿತೌ ॥ ೭೫ ॥**

**ನ್ಯಧಾದುಚ್ಛ್ರಿತಸಕ್ಥೀಕಸ್ತದಾ ಕೃಷ್ಣಾಭ್ಯನುಜ್ಞಯಾ ।**
**ಪೃಷ್ಠಮೂಲೇಽಹನದ್ ಭೀಮೋ ಭಿನ್ನಸಕ್ಥಿಶ್ಚ ಸೋಽಪತತ್ ॥ ೭೬ ॥**

**ಪ್ರತಿಜ್ಞಾಪಾಲನಾರ್ಥಾಯ ನಾಭೇರ್ನೋಪರ್ಯಧಸ್ತದಾ ॥ ೭೭ ॥**

ಪದಚ್ಛೇದ :- ತೌ, ಶಿಕ್ಷಾಬಲಸಂಯುಕ್ತೌ, ಮಂಡಲಾನಿ, ವಿಚೇರತುಃ । ತತಃ, ಭೀಮಮ್, ವಂಚಯಿತುಮ್, ಧಾರ್ತರಾಷ್ಟ್ರಃ, ಶಿರಃ, ಕ್ಷಿತೌ ॥ ೭೫ ॥ ನ್ಯಧಾತ್, ಉಚ್ಛ್ರಿತಸಕ್ಥೀಕಃ, ತದಾ, ಕೃಷ್ಣಾಭ್ಯನುಜ್ಞಯಾ । ಪೃಷ್ಠಮೂಲೇ, ಅಹನತ್, ಭೀಮಃ, ಭಿನ್ನಸಕ್ಥಿಃ, ಚ, ಸಃ, ಅಪತತ್ ॥ ೭೬ ॥ ಪ್ರತಿಜ್ಞಾಪಾಲನಾರ್ಥಾಯ, ನಾಭೇಃ, ನ, ಉಪರಿ, ಅಧಃ, ತದಾ ॥ ೭೭ ॥

**ಅನ್ವಯಾರ್ಥ** :- **ತೌ** = ಭೀಮದುರ್ಯೋಧನರಿಬ್ಬರು **ಶಿಕ್ಷಾಬಲ ಸಂಯುಕ್ತೌ** = ಶಿಕ್ಷಣ ಮತ್ತು ಬಲದಿಂದ ಕೂಡಿದವರು **ಮಂಡಲಾನಿ** = ಗದಾಯುದ್ಧದ ವರಸೆಗಳನ್ನು ತೋರಿಸಲು **ವಿಚೇರತುಃ** = ಸಂಚರಿಸಿದರು **ತತಃ** = ಅನಂತರ **ಧಾರ್ತರಾಷ್ಟ್ರಃ** = ದುರ್ಯೋಧನನು **ಭೀಮಮ್** = ಭೀಮನನ್ನು **ವಂಚಯಿತುಮ್** = ವಂಚಿಸಲು **ಕ್ಷಿತೌ** = ಭೂಮಿಯಲ್ಲಿ **ಶಿರಃ** = ತಲೆಯನ್ನು **ನ್ಯಧಾತ್** = ಕೆಳಗೆ ಮಾಡಿದನು **ಉಚ್ಛ್ರಿತಸಕ್ಥೀಕಃ** = ತೊಡೆಯನ್ನು ಮೇಲೆ ಮಾಡಿದನು **ತದಾ** = ಆಗ **ಕೃಷ್ಣಾಭ್ಯನುಜ್ಞಯಾ** = ಕೃಷ್ಣನ ಅನುಜ್ಞೆಯಂತೆ **ಪ್ರತಿಜ್ಞಾಪಾಲನಾರ್ಥಾಯ** = ಪ್ರತಿಜ್ಞಾಪಾಲನೆಗಾಗಿ **ಭೀಮಃ** = ಭೀಮನು **ಪೃಷ್ಠಮೂಲೇ** = ಬೆನ್ನಿನ ಬುಡಕ್ಕೆ **ಅಹನತ್** = ಹೊಡೆದನು **ತದಾ** = ಆಗ **ನಾಭೇಃ** = ನಾಭಿಯ **ಉಪರಿ** = ಮೇಲೆ **ಅಧಃ** = ಕೆಳಗೆ **ನ** = ಅಲ್ಲ **ಭಿನ್ನಸಕ್ಥಿಃ** = ತೊಡೆಮುರಿದವನಾಗಿ **ಅಪತತ್** = ಬಿದ್ದನು.

**ತಾತ್ಪರ್ಯ** :- ಭೀಮದುರ್ಯೋಧನರಿಬ್ಬರು ಶಿಕ್ಷಣ ಮತ್ತು ಬಲದಿಂದ ಯುಕ್ತರಾಗಿದ್ದಾರೆ. ಗದಾಯುದ್ಧದ ವರಸೆಗಳನ್ನು ತೋರಿಸುತ್ತಾ ಅಲ್ಲಿ ಸಂಚರಿಸಿದರು. ಭೀಮನನ್ನು ವಂಚಿಸಲು ದುರ್ಯೋಧನನು ನೆಲದಲ್ಲಿ ತಲೆ ಕೆಳಗೆ ತೊಡೆ ಮೇಲೆ ಮಾಡಿ ಬಿದ್ದನು. ಆಗ ಭೀಮನು ಕೃಷ್ಣನ ಅನುಜ್ಞೆಯಂತೆ

ಪ್ರತಿಜ್ಞಾಪಾಲನೆಗಾಗಿ ಬೆನ್ನಿನ ಬುಡಕ್ಕೆ ಹೊಡೆದನು. ನಾಭಿಯ ಮೇಲೂ ಅಲ್ಲ, ಕೆಳಗೂ ಅಲ್ಲ. ಆಗ ತೊಡೆ ಮುರಿದು ಬಿದ್ದನು.

**ಗದಾಯುದ್ಧಸ್ಯ ಮರ್ಯಾದಾಂ ಯಶಶ್ಚಾಪ್ಯಭಿರಕ್ಷಿತುಮ್ ।**
**ನಾಧಸ್ತಾನ್ಮಧ್ಯ ಏವಾಸೌ ನಿಜಘ್ನೇ ತಂ ವೃಕೋದರಃ ॥ ೭೮ ॥**

**ಏವಂ ಪ್ರತಿಜ್ಞಾಯುಗ್ಮಾರ್ಥಂ ಭಗ್ನಂ ಸಕ್ಥಿಯುಗಂ ರಣೇ ।**
**ಕೃಷ್ಣಂ ದ್ಯೂತೇ ನಿಧೇಹೀತಿ ಯದಾವಾದೀತ್ ಸುಯೋಧನಃ ।**
**ತತ್‌ಪ್ರತಿಜ್ಞಾನುಸಾರೇಣ ಭೀಮೋ ಮೂರ್ಧಾನಮಕ್ರಮೀತ್ ॥ ೭೯ ॥**

ಪದಚ್ಛೇದ :- ಗದಾಯುದ್ಧಸ್ಯ, ಮರ್ಯಾದಾಮ್, ಯಶಃ, ಚ, ಅಪಿ, ಅಭಿರಕ್ಷಿತುಮ್ । ನ, ಅಧಸ್ತಾತ್, ಮಧ್ಯೇ, ಏವ, ಅಸೌ, ನಿಜಘ್ನೇ, ತಮ್, ವೃಕೋದರಃ ॥ ೭೮ ॥ ಏವಮ್, ಪ್ರತಿಜ್ಞಾಯುಗ್ಮಾರ್ಥಮ್, ಭಗ್ನಮ್, ಸಕ್ಥಿಯುಗಮ್, ರಣೇ । ಕೃಷ್ಣಮ್, ದ್ಯೂತೇ, ನಿಧೇಹಿ, ಇತಿ, ಯತ್, ಷವಾದೀತ್, ಸುಯೋಧನಃ । ತತ್ಪ್ರತಿಜ್ಞಾನುಸಾರೇಣ, ಭೀಮಃ, ಮೂರ್ಧಾನಮ್, ಅಕ್ರಮೀತ್ ॥ ೭೯ ॥

**ಅನ್ವಯಾರ್ಥ** :- **ಗದಾಯುದ್ಧಸ್ಯ** = ಗದಾಯುದ್ಧದ **ಮರ್ಯಾದಾಮ್** = ನಿಯಮವನ್ನು **ಯಶಶ್ಚ** = ಕೀರ್ತಿಯನ್ನೂ **ಅಭಿರಕ್ಷಿತುಮ್** = ಪಾಲಿಸಲು **ಅಸೌ ವೃಕೋದರಃ** = ಈ ಭೀಮನು **ತಮ್** = ಆ ದುರ್ಯೋಧನನನ್ನು **ನ ಅಧಸ್ತಾತ್** = ನಾಭಿಯ ಕೆಳಗಲ್ಲದೇ **ಮಧ್ಯೇ ಏವ** = ಮಧ್ಯದಲ್ಲಿಯೇ **ನಿಜಘ್ನೇ** = ಹೊಡೆದನು.

**ಏವಮ್** = ಈ ರೀತಿ **ಪ್ರತಿಜ್ಞಾಯುಗ್ಮಾರ್ಥಮ್** = ಎರಡು ಪ್ರತಿಜ್ಞೆಗಳನ್ನು ಪಾಲಿಸಲು **ರಣೇ** = ಯುದ್ಧದಲ್ಲಿ **ಸಕ್ಥಿಯುಗಮ್** = ಎರಡು ತೊಡೆಗಳು **ಭಗ್ನಮ್** = ಮುರಿಯಲ್ಪಟ್ಟವು **ದ್ಯೂತೇ** = ಜೂಜಿನಲ್ಲಿ **ಕೃಷ್ಣಮ್** = ಕೃಷ್ಣನನ್ನು **ನಿಧೇಹಿ** = ಪಣವಾಗಿ ಕೊಡು **ಇತಿ** = ಎಂದು **ಸುಯೋಧನಃ** = ದುರ್ಯೋಧನನು **ಯದವಾದೀತ್** = ಹೇಳಿದ್ದಾನೋ **ತತ್ಪ್ರತಿಜ್ಞಾನುಸಾರೇಣ** = ಅಲ್ಲಿ ಮಾಡಿದ ಪ್ರತಿಜ್ಞೆಗನುಸಾರವಾಗಿ **ಭೀಮಃ** = ಭೀಮನು **ಮೂರ್ಧಾನಮ್** = ಅವನ ತಲೆಯನ್ನು **ಅಕ್ರಮೀತ್** = ತುಳಿದನು.

**ತಾತ್ಪರ್ಯ** :- ಗದಾಯುದ್ಧದ ನಿಯಮವನ್ನು ಹಾಗೂ ಕೀರ್ತಿಯನ್ನು ಪಾಲಿಸಲು ಭೀಮನು ದುರ್ಯೋಧನನನ್ನು ನಾಭಿಯ ಕೆಳಗೆ ಹೊಡೆಯಲಿಲ್ಲ.

ಮಧ್ಯದಲ್ಲಿಯೇ ಹೊಡೆದ. ಎರಡು ಪ್ರತಿಜ್ಞೆಗಳನ್ನು ಪಾಲಿಸಲು ಎರಡು ತೊಡೆಗಳನ್ನು ಮುರಿದ. ಜೂಜಿನಲ್ಲಿ ಕೃಷ್ಣನನ್ನು ಪಣವಾಗಿ ಕೊಡು ಎಂದು ಹೇಳಿದ್ದರಿಂದ ಆಗ ಮಾಡಿದ ಪ್ರತಿಜ್ಞೆಗನುಸಾರವಾಗಿ ಭೀಮನು ಅವನ ತಲೆಯನ್ನು ತುಳಿದನು.

**'ಋಷಭಂ ಸಾ ಸಮಾನಾನಾಮ್' ಇತಿ ಸೂಕ್ತಂ ದದರ್ಶ ಚ ।**
**ತೇಷಾಂ ಪುಣ್ಯಾನಿ ವಿದ್ಯಾಶ್ಚ ಸಮಾದಾಯೈವ ಸರ್ವಶಃ ।**
**ತಾಂಶ್ಚಕಾರ ತಮೋಗಂಸ್ತಸ್ಯ ಮೂರ್ಧ್ನಿ ಪದಾऽऽಕ್ರಮನ್ ॥ ೮೦ ॥**

**ಪದಚ್ಛೇದ :- ಋಷಭಮ್, ಮಾ, ಸಮಾನಾನಾಮ್, ಇತಿ, ಸೂಕ್ತಮ್, ದದರ್ಶ, ಹ । ತೇಷಾಮ್, ಪುಣ್ಯಾನಿ, ವಿದ್ಯಾಃ, ಚ, ಸಮಾದಾಯ, ಏವ, ಸರ್ವಶಃ । ತಾನ್, ಚಕಾರ, ತಮೋಗಂತ್ರ್ಯನ್, ತಸ್ಯ, ಮೂರ್ಧ್ನಿ, ಪದಾ, ಅಕ್ರಮೀತ್ ॥ ೮೦ ॥**

**ಅನ್ವಯಾರ್ಥ :- ತಸ್ಯ** = ಆ ದುರ್ಯೋಧನನು **ಮೂರ್ಧ್ನಿ** = ತಲೆಯಲ್ಲಿ **ಋಷಭಂ ಮಾ ಸಮಾನಾನಾಮ್ ಇತಿ** = ಎಂಬ ಸೂಕ್ತವನ್ನು **ದದರ್ಶ ಹ** = ಕಂಡುಕೊಂಡನು **ಚ** = ಮತ್ತು **ತೇಷಾಮ** = ಆ ಕೌರವರ **ಪುಣ್ಯಾನಿ** = ಪುಣ್ಯಗಳನ್ನು **ವಿದ್ಯಾಶ್ಚ** = ಜ್ಞಾನಗಳನ್ನೂ ಕೂಡ **ಸರ್ವಶಃ** = ಪೂರ್ತಿಯಾಗಿ **ಸಮಾದಾಯ** = ಕಸಿದುಕೊಂಡು **ತಾನ್** = ಅವರನ್ನು **ತಮೋಗಂತ್ರ್ಯನ್** = ತಮೋಗಾಮಿಗಳನ್ನಾಗಿ **ಚಕಾರ** = ಮಾಡಿದನು.

**ತಾತ್ಪರ್ಯ :-** ಭೀಮನು ದುರ್ಯೋಧನನ ತಲೆಯನ್ನು ಮೆಟ್ಟುತ್ತಾ ''ಋಷಭಂ ಮಾ ಸಮಾನಾನಾಮ್'' ಎಂಬ ಸೂಕ್ತವನ್ನು ಕಂಡು ಹಿಡಿದನು. ಕೌರವರ ಪುಣ್ಯಗಳನ್ನು ಜ್ಞಾನಗಳನ್ನೂ ಕೂಡ ಪೂರ್ತಿಯಾಗಿ ಕಸಿದು ಅವರನ್ನು ತಮಸ್ಸಿಗೆ ಕಳುಹಿಸಿದನು.

**ಸ್ಮಾರಯಾಮಾಸ ಕರ್ಮಾಣಿ ಯಾನಿ ತಸ್ಯ ಕೃತಾನಿ ಚ ।**
**ಕೃಷ್ಣಬಂಧೇ ಕೃತೋ ಮಂತ್ರ ಇತಿ ಮೂರ್ಧ್ನಿ ಪದಾऽಹನತ್ ॥ ೮೧ ॥**

**ಪದಚ್ಛೇದ :- ಸ್ಮಾರಯಾಮಾಸ, ಕರ್ಮಾಣಿ, ಯಾನಿ, ತಸ್ಯ, ಕೃತಾನಿ, ಚ । ಕೃಷ್ಣಬಂಧೇ, ಕೃತಃ, ಮಂತ್ರಃ, ಇತಿ, ಮೂರ್ಧ್ನಿ, ಪದಾ, ಅಹನತ್ ॥ ೮೧ ॥**

**ಅನ್ವಯಾರ್ಥ** :- **ತಸ್ಯ** = ಆ ದುರ್ಯೋಧನನಿಗೆ ಯಾನಿ **ಕರ್ಮಾಣಿ** = ಹಿಂದೆ ಯಾವ ಕರ್ಮಗಳು **ಕೃತಾನಿ** = ಮಾಡಲ್ಪಟ್ಟವೆವೋ ಅವೆಲ್ಲವನ್ನು **ಸ್ಮಾರಯಾಮಾಸ** = ಭೀಮನು ನೆನಪಿಸಿದನು **ಕೃಷ್ಣಬಂಧೇ** = ಕೃಷ್ಣನ ಬಂಧನಕ್ಕಾಗಿ **ಮಂತ್ರಃ** = ಮಂತ್ರಾಲೋಚನೆಯು **ಕೃತಃ** = ಮಾಡಲ್ಪಟ್ಟಿದೆ **ಇತಿ** = ಎಂದು **ಮೂರ್ಧ್ನಿ** = ತಲೆಯಲ್ಲಿ **ಪದಾ** = ಕಾಲಿನಿಂದ **ಅಹನತ್** = ತುಳಿದನು.

**ತಾತ್ಪರ್ಯ** :- ದುರ್ಯೋಧನನು ಹಿಂದೆ ಏನೇನು ಮಾಡಿದ್ದನೋ ಅದೆಲ್ಲವನ್ನು ಅವನಿಗೆ ನೆನಪಿಸಿದನು. ಕೃಷ್ಣನನ್ನು ಸೆರೆಹಿಡಿಯಲು ಈ ತಲೆಯಿಂದಲೇ ಮಂತ್ರಾಲೋಚನೆ ಮಾಡಿದ್ದಿ ಎಂದು ಇನ್ನೊಮ್ಮೆ ಅವನ ತಲೆಯನ್ನು ತುಳಿದನು.

### ಭೀಮ ಅಧರ್ಮ ಮಾಡಲಿಲ್ಲ

**ಪುನಃಪುನಶ್ಚ ತದ್ ವೀಕ್ಷ್ಯ ಚುಕ್ರೋಧ ಮುಸಲಾಯುಧಃ ।**
**ಚುಕ್ರೋಶ ನೈವ ಧರ್ಮೋऽಯಮಿತ್ಯಸಾವೂರ್ಧ್ವಬಾಹುಕಃ ॥ ೮೨ ॥**

**ಪುನಃ ಕ್ರೋಧಾಭಿತಾಮ್ರಾಕ್ಷ ಆದಾಯ ಮುಸಲಂ ಹಲಮ್ ।**
**ಅಭಿದುದ್ರಾವ ಭೀಮಂ ತಂ ನ ಚಚಾಲ ವೃಕೋದರಃ ॥ ೮೩ ॥**

ಪದಚ್ಛೇದ :- ಪುನಃ, ಚ, ಪುನಃ, ಚ, ತತ್, ವೀಕ್ಷ್ಯ, ಚುಕ್ರೋಧ, ಮುಸಲಾಯುಧಃ । ಚುಕ್ರೋಶ, ನ, ಏವ, ಧರ್ಮಃ, ಅಯಮ್, ಇತಿ, ಅಸೌ, ಊರ್ಧ್ವಬಾಹುಕಃ ॥ ೮೨ ॥ ಪುನಃ ಕ್ರೋಧಾಭಿತಾಮ್ರಾಕ್ಷಃ, ಆದಾಯ, ಮುಸಲಮ್, ಹಲಮ್ । ಅಭಿದುದ್ರಾವ, ಭೀಮಮ್, ತಮ್, ನ, ಚಚಾಲ, ವೃಕೋದರಃ ॥ ೮೩ ॥

**ಅನ್ವಯಾರ್ಥ** :- **ಪುನಃ ಪುನಶ್ಚ** = ಮತ್ತೆ ಮತ್ತೆ **ತತ್** = ಭೀಮ ತುಳಿಯುವುದನ್ನು **ವೀಕ್ಷ್ಯ** = ನೋಡಿ **ಮುಸಲಾಯುಧಃ** = ಬಲರಾಮನು **ಚುಕ್ರೋಧ** = ಕುಪಿತನಾದನು **ಊರ್ಧ್ವಬಾಹುಕಃ** = ಎರಡು ಕೈಗಳನ್ನೆತ್ತಿ **ಅಸೌ** = ಬಲರಾಮನು **ಅಯಂ ನೈವ ಧರ್ಮಃ** = ಇದು ಧರ್ಮವಲ್ಲ **ಇತಿ** = ಎಂದು **ಚುಕ್ರೋಶ** = ಕೂಗಿದನು.

**ಪುನಃ** = ಮತ್ತೆ **ಕ್ರೋಧಾಭಿತಾಮ್ರಾಕ್ಷಃ** = ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ **ಮುಸಲಮ್** = ಒನಕೆಯನ್ನು **ಹಲಮ್** = ನೇಗಿಲನ್ನೂ **ಆದಾಯ** = ಹಿಡಿದುಕೊಂಡು **ಭೀಮಮ್** = ಭೀಮನ ಹತ್ತಿರ **ಅಭಿದುದ್ರಾವ** = ಓಡಿದನು **ವೃಕೋದರಃ** = ಭೀಮನು **ನ ಚಚಾಲ** = ಅಲುಗಾಡಲಿಲ್ಲ.

**ತಾತ್ಪರ್ಯ** :- ಹೀಗೆ ಪುನಃ ಪುನಃ ಭೀಮನು ತುಳಿಯುವುದನ್ನು ನೋಡಿ ಬಲರಾಮನು ಕುಪಿತನಾದನು. ಎರಡು ಕೈಗಳನ್ನೆತ್ತಿ ಇದು ಧರ್ಮವಲ್ಲ ಎಂದು ಕೂಗಿದನು. ಮತ್ತೆ ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ಒನಕೆಯನ್ನು ನೇಗಿಲನ್ನೂ ಹಿಡಿದುಕೊಂಡು ಭೀಮನ ಹತ್ತಿರ ಓಡಿದನು. ಇದರಿಂದ ಭೀಮನು ವಿಚಲಿತನಾಗಲಿಲ್ಲ.

**ಅಭಯೇ ಸಂಸ್ಥಿತೇ ಭೀಮೇ ರಾಮಂ ಜಗ್ರಾಹ ಕೇಶವಃ ।**
**ಆಹ ಧರ್ಮೇಣ ನಿಹತೋ ಭೀಮೇನಾಯಂ ಸುಯೋಧನಃ ॥ ೮೪ ॥**

ಪದಚ್ಛೇದ :- **ಅಭಯೇ, ಸಂಸ್ಥಿತೇ, ಭೀಮೇ, ರಾಮಮ್, ಜಗ್ರಾಹ, ಕೇಶವಃ । ಅಹ, ಧರ್ಮೇಣ, ನಿಹತಃ, ಭೀಮೇನ, ಅಹಮ್, ಸುಯೋಧನಃ ॥ ೮೪ ॥**

**ಅನ್ವಯಾರ್ಥ** :- **ಭೀಮೇ** = ಭೀಮನು **ಅಭಯೇ** = ನಿರ್ಭಯನಾಗಿ **ಸಂಸ್ಥಿತೇ** = ನಿಂತಿರಲು **ಕೇಶವಃ** = ಶ್ರೀಕೃಷ್ಣನು **ರಾಮಮ್** = ಬಲರಾಮನನ್ನು **ಜಗ್ರಾಹ** = ಹಿಡಿದನು **ಭೀಮೇನ** = ಭೀಮನಿಂದ **ಅಯಮ್ ಸುಯೋಧನಃ** = ಈ ದುರ್ಯೋಧನನು **ಧರ್ಮೇಣ** = ಧರ್ಮದಿಂದ **ನಿಹತಃ** = ಹೊಡೆಯಲ್ಪಟ್ಟಿದ್ದಾನೆ **ಇತಿ** = ಎಂದು **ಆಹ** = ಹೇಳಿದನು.

**ತಾತ್ಪರ್ಯ** :- ಭೀಮನು ನಿರ್ಭೀತನಾಗಿ ನಿಂತಾಗ ಕೃಷ್ಣನು ಬಲರಾಮನನ್ನು ಹಿಡಿದು ನಿಲ್ಲಿಸಿದನು. ಭೀಮನು ಧರ್ಮದಿಂದಲೇ ದುರ್ಯೋಧನನನ್ನು ಕೊಂದಿದ್ದಾನೆಂದು ಹೇಳಿದನು.

**ನ ಮಂಡಲೇಽಭಿಸಾರೇ ವಾ ನಾಪಸಾರೇ ಚ ನಾಭಿತಃ ।**
**ಅಧೋ ಹನ್ಯಾದ್ ವಂಚಯಂತಮಧೋ ಹತ್ವಾ ನ ದುಷ್ಯತಿ ॥ ೮೫ ॥**

ಪದಚ್ಛೇದ :- **ನ, ಮಂಡಲೇ, ಅಭಿಸಾರೇ, ವಾ, ನ, ಅಪಸಾರೇ, ನಾಭಿತಃ । ಅಧಃ, ಹನ್ಯಾತ್, ವಂಚಯಂತಮ್, ಅಧಃ, ಹತ್ವಾ, ನ, ದುಷ್ಯತಿ ॥ ೮೫ ॥**

**ಅನ್ವಯಾರ್ಥ** :- **ಮಂಡಲೇ** = ಮಂಡಲಾಕಾರವಾಗಿ ಸಂಚರಿಸುವಾಗ **ಅಭಿಸಾರೇ** = ಎದುರು ಬರುವಾಗ **ಅಪಸಾರೇ ಚ** = ದೂರ ಸರಿಯುವಾಗ **ನಾಭಿತಃ** = ನಾಭಿಯಿಂದ **ಅಧಃ** = ಕೆಳಗೆ **ನ ಹನ್ಯಾತ್** = ಹೊಡೆಯಬಾರದು ಆದರೆ **ವಂಚಯಂತಮ್** = ವಂಚಿಸುವವನಿಗೆ **ಅಧಃ** = ಕೆಳಗೆ **ಹತ್ವಾ** = ಹೊಡೆದರೆ **ನ ದುಷ್ಯತಿ** = ದೋಷವಾಗುವದಿಲ್ಲ.

**ತಾತ್ಪರ್ಯ** :- ಮಂಡಲಾಕಾರವಾಗಿ ಸಂಚರಿಸುವಾಗ ಹಾಗೂ ಎದುರು ಬರುವಾಗ, ದೂರ ಸರಿಯುವಾಗಲೂ ನಾಭಿಯಿಂದ ಕೆಳಗೆ ಹೊಡೆಯ ಬಾರದು. ಆದರೆ ವಂಚಿಸುವವನಿಗೆ ಕೆಳಗೆ ಹೊಡೆದರೆ ದೋಷವಾಗುವದಿಲ್ಲ.

**ಕೃತಾ ಪ್ರತಿಜ್ಞಾ ಚ ವೃಕೋದರೇಣ**
**ಭೇತ್ಸ್ಯೇ ತವೋರೂ ಇತಿ ಯುಕ್ತಿಪೂರ್ವಮ್ ।**
**ಸಂಶ್ರಾವಯಾನೇನ ತದೇಷ ಧರ್ಮತೋ**
**ಜಘಾನ ದುರ್ಯೋಧನಮಗ್ರ್ಯಕರ್ಮಾ ॥ ೮೬ ॥**

**ಪದಚ್ಛೇದ** :- ಕೃತ್ವಾ, ಪ್ರತಿಜ್ಞಾ, ಚ, ವೃಕೋದರೇಣ, ಭೇತ್ಸ್ಯೇ, ತವ, ಊರೂ, ಇತಿ, ಯುಕ್ತಿಪೂರ್ವಮ್ । ಸಂಶ್ರಾವಯಾನೇನ, ತತ್, ಏಷಃ, ಧರ್ಮತಃ, ಜಘಾನ, ದುರ್ಯೋಧನಮ್, ಅಗ್ರ್ಯಕರ್ಮಾ ॥ ೮೬ ॥

**ಅನ್ವಯಾರ್ಥ** :- **ಸಂಶ್ರಾವಯಾನೇನ** = ಎಲ್ಲರ ಎದುರಿಗೆ ಕೇಳಿಸುವ ಹಾಗೆ **ವೃಕೋದರೇಣ** = ಭೀಮನಿಂದ **ಯುಕ್ತಿಪೂರ್ವಮ್** = ಯುಕ್ತಿ ಪೂರ್ವಕವಾಗಿಯೇ **ತವ** = ನಿನ್ನ **ಊರೂ** = ತೊಡೆಗಳನ್ನು **ಭೇತ್ಸ್ಯೇ** = ಮುರಿಯುತ್ತೇನೆ **ಇತಿ** = ಎಂದು **ಪ್ರತಿಜ್ಞಾ** = ಪ್ರತಿಜ್ಞೆಯು **ಕೃತಾ** = ಮಾಡಲ್ಪಟ್ಟಿದೆ **ತತ್** = ಆದ್ದರಿಂದ **ಧರ್ಮತಃ** = ಧರ್ಮದಿಂದಲೇ **ಏಷಃ** = ಈ **ಅಗ್ರ್ಯಕರ್ಮಾ** = ಉತ್ತಮಕರ್ಮಶೀಲನಾದ ಭೀಮನು **ದುರ್ಯೋಧನಮ್** = ದುರ್ಯೋಧನನನ್ನು **ಜಘಾನ** = ಹೊಡೆದಿದ್ದಾನೆ.

**ತಾತ್ಪರ್ಯ** :- ಬೇರೆ ಸ್ತ್ರೀಗೆ ತೊಡೆ ತೋರಿದರೆ ಅದನ್ನು ಮುರಿಯಬೇಕು. ಆದ್ದರಿಂದ ನಿನ್ನ ತೊಡೆಯನ್ನು ಮುರಿಯುತ್ತೇನೆಂದು ಹಿಂದೆ ಭೀಮ ಯುಕ್ತಿಪೂರ್ವಕವಾಗಿಯೇ ಪ್ರತಿಜ್ಞೆ ಮಾಡಿದ್ದಾನೆ. ಈಗಲೂ ಅದನ್ನೇ ಹೇಳಿ ನಿನ್ನ ತೊಡೆಯನ್ನು ಮುರಿಯುವೆನೆಂದು ಪುನಃ ಪ್ರತಿಜ್ಞೆ ಮಾಡಿದ್ದಾನೆ. ಹೀಗೆ

ಧರ್ಮದಿಂದಲೇ ಉತ್ತಮಕರ್ಮಶೀಲನಾದ ಭೀಮನು ದುರ್ಯೋಧನನನ್ನು ಹೊಡೆದಿದ್ದಾನೆ.

**ವಾಸುದೇವವಚಃ ಶ್ರುತ್ವಾ ಧರ್ಮಚ್ಛಲಮಿತಿ ಬ್ರುವನ್ ।**
**ರೌಹಿಣೇಯೋ ಜಗಾಮಾಽಶು ಸ್ವಪುರೀಮೇವ ಸಾನುಗಃ ॥ ೮೭ ॥**

ಪದಚ್ಛೇದ :- ವಾಸುದೇವವಚಃ, ಶ್ರುತ್ವಾ, ಧರ್ಮಚ್ಛಲಮ್, ಇತಿ, ಬ್ರುವನ್ । ರೌಹಿಣೇಯಃ, ಜಗಾಮ, ಆಶು, ಸ್ವಪುರೀಮ್, ಏವ, ಸಾನುಗಃ ॥ ೮೭ ॥

**ಅನ್ವಯಾರ್ಥ** :- **ವಾಸುದೇವವಚಃ** = ಶ್ರೀಕೃಷ್ಣನ ಮಾತನ್ನು **ಶ್ರುತ್ವಾ** = ಕೇಳಿ **ಧರ್ಮಚ್ಛಲಮ್** = ಧರ್ಮದಲ್ಲಿ ವಂಚನೆ **ಇತಿ** = ಎಂದು **ರೌಹಿಣೇಯಃ** = ಬಲರಾಮನು **ಆಶು** = ಕೂಡಲೇ **ಸಾನುಗಃ** = ಸಹಚರರೊಂದಿಗೆ **ಸ್ವಪುರೀಮೇವ** = ತನ್ನ ಪಟ್ಟಣಕ್ಕೆ **ಜಗಾಮ** = ಹೋದನು.

**ತಾತ್ಪರ್ಯ** :- ಶ್ರೀಕೃಷ್ಣನ ಮಾತನ್ನು ಕೇಳಿ ಇದು ಧರ್ಮವಂಚನೆ ಎಂದು ಬಲರಾಮನು ತನ್ನ ಸಹಚರರೊಂದಿಗೆ ತನ್ನ ಪಟ್ಟಣಕ್ಕೆ ಹೋದನು.

**ತಸ್ಮಿನ್ ಗತೇ ವಾಸುದೇವಂ ಸಮಪೃಚ್ಛದ್ ಯುಧಿಷ್ಠಿರಃ ।**
**ಧರ್ಮೋಽಯಮಥವಾಽಧರ್ಮ ಇತಿ ತಂ ಪ್ರಾಹ ಕೇಶವಃ ॥ ೮೮ ॥**

ಪದಚ್ಛೇದ :- ತಸ್ಮಿನ್, ತೇ, ವಾಸುದೇವಮ್, ಸಮಪೃಚ್ಛತ್, ಯುಧಿಷ್ಠಿರಃ । ಧರ್ಮಃ, ಅಯಮ್, ಅಥವಾ, ಧರ್ಮಃ, ಇತಿ, ತಮ್, ಪ್ರಾಹ, ಕೇಶವಃ ॥ ೮೮ ॥

**ಅನ್ವಯಾರ್ಥ** :- **ತಸ್ಮಿನ್** = ಆ ಬಲರಾಮನು **ತೇ ಸತಿ** = ಹೋಗುತ್ತಿರಲು **ಯುಧಿಷ್ಠಿರಃ** = ಧರ್ಮರಾಜನು **ವಾಸುದೇವಮ್** = ಶ್ರೀಕೃಷ್ಣನನ್ನು **ಸಮಪೃಚ್ಛತ್** = ಕೇಳಿದನು **ಅಯಮ್** = ಇದು **ಧರ್ಮಃ** = ಧರ್ಮವು ಅಥವಾ **ಅಯಮ್** = ಇದು **ಅಧರ್ಮಃ** = ಅಧರ್ಮವು **ಇತಿ** = ಎಂದು **ತಮ್** = ಆ ಬಲರಾಮನಿಗೆ **ಕೇಶವಃ** = ಶ್ರೀಕೃಷ್ಣನು **ಪ್ರಾಹ** = ಹೇಳಿದನು.

**ತಾತ್ಪರ್ಯ** :- ಬಲರಾಮನು ಹೋದನಂತರ ಧರ್ಮರಾಜನು ಕೃಷ್ಣನನ್ನು ಕೇಳಿದನು. ಇದು ಧರ್ಮ ಇದು ಅಧರ್ಮ ಎಂದು ಬಲರಾಮನಿಗೆ ಶ್ರೀಕೃಷ್ಣನಿಗೆ ಹೇಳಿದನು.

**ನ ಸಾಕ್ಷಾದ್ ಧರ್ಮತೋ ವಧ್ಯಾ ಯೇ ತು ಪಾಪತಮಾ ನರಾಃ ।**
**ದೇವೈರ್ಹಿ ವಂಚಯಿತ್ವೈವ ಹತಾಃ ಪೂರ್ವಂ ಸುರಾರಯಃ ॥ ೮೯ ॥**

ಪದಚ್ಛೇದ :- ನ, ಸಾಕ್ಷಾತ್, ಧರ್ಮತಃ, ವಧ್ಯಾಃ, ಯೇ, ತು, ಪಾಪತಮಾಃ, ನರಾಃ । ದೇವೈಃ, ಹಿ, ವಂಚಯಿತ್ವಾ, ಏವ, ಹತಾಃ, ಪೂರ್ವಮ್, ಸುರಾರಯಃ ॥ ೮೯ ॥

**ಅನ್ವಯಾರ್ಥ** :- **ಯೇ ತು** = ಯಾರು **ಪಾಪತಮಾಃ** = ಪಾಪಿಷ್ಠರಾದ **ನರಾಃ** = ಮನುಷ್ಯರು ಇರುವರೋ ಅವರು **ಸಾಕ್ಷಾತ್ ಧರ್ಮತಃ** = ಶುದ್ಧಧರ್ಮದಿಂದ **ನ ವಧ್ಯಾಃ** = ಕೊಲ್ಲಬಾರದು **ದೇವೈರ್ಹಿ** = ದೇವತೆಗಳಿಂದ **ಪೂರ್ವಮ್** = ಹಿಂದೆ **ಸುರಾರಯಃ** = ದೈತ್ಯರು **ವಂಚಯಿತ್ವೈವ** = ವಂಚಿಸಿಯೇ **ಹತಾಃ** = ಹತರಾಗಿರುವರು.

**ತಾತ್ಪರ್ಯ** :- ಮಹಾಪಾಪಿಗಳಾದ ಜನರನ್ನು ಧರ್ಮದಿಂದ ಕೊಲ್ಲಬಾರದು. ಹಿಂದೆ ದೇವತೆಗಳೂ ಕೂಡ ದೈತ್ಯರನ್ನು ವಂಚಿಸಿಯೇ ಕೊಂದಿದ್ದಾರೆ.

**ಅತೋಽಯಮಪ್ಯಧರ್ಮೇಣ ಹತೋ ನಾತ್ರಾಸ್ತಿ ದೂಷಣಮ್ ।**
**ಭೀಷ್ಮದ್ರೋಣೌ ಚ ಕರ್ಣಶ್ಚ ಯದ್ಯೈವೋಪಧಿನಾ ಹತಾಃ ॥ ೯೦ ॥**

**ಪದಚ್ಛೇದ :- ಅತಃ, ಅಯಮ್, ಅಪಿ, ಅಧರ್ಮೇಣ, ಹತಃ, ನ, ಅತ್ರ, ಅಸ್ತಿ, ದೂಷಣಮ್ । ಭೀಷ್ಮದ್ರೌಣೌ, ಚ, ಕರ್ಣಃ, ಚ, ಯತ್, ಏವ, ಉಪಧಿನಾ, ಹತಾಃ ॥ ೯೦ ॥**

**ಅನ್ವಯಾರ್ಥ** :- **ಅತಃ** = ಆದ್ದರಿಂದ **ಅಯಮಪಿ** = ಈ ದುರ್ಯೋಧನನೂ ಕೂಡ **ಅಧರ್ಮೇಣ** = ಅಧರ್ಮದಿಂದ **ಹತಃ** = ಹತನಾಗಿದ್ದಾನೆ **ಅತ್ರ** = ಈ ವಿಷಯದಲ್ಲಿ **ದೂಷಣಂ ನಾಸ್ತಿ** = ದೋಷವಿಲ್ಲ **ಭೀಷ್ಮದ್ರೌಣೌ** = ಭೀಷ್ಮದ್ರೋಣರು **ಕರ್ಣಶ್ಚ** = ಕರ್ಣನೂ ಕೂಡ **ಯದೇವೋಪಧಿನಾ** = ಯಾವ ಒಂದು ನಿಮಿತ್ತದಿಂದ **ಹತಾಃ** = ಕೊಲ್ಲಲ್ಪಟ್ಟಿದ್ದಾರೆ ?

**ತಾತ್ಪರ್ಯ** :- ಆದ್ದರಿಂದ ಈ ದುರ್ಯೋಧನನನ್ನು ಅಧರ್ಮದಿಂದ ಕೊಂದರೆ ಯಾವ ದೋಷವಿಲ್ಲ. ಸಜ್ಜನರಾದ ಭೀಷ್ಮದ್ರೋಣರು ಹಾಗೂ ಕರ್ಣನೂ ಕೂಡ ವಂಚನೆಯಿಂದಲೇ ಹತರಾಗಿದ್ದಾರೆ.

**ಕೋ ನು ದುರ್ಯೋರ್ಧನೇ ಪಾಪೇ ಹತೇ ದೋಷಃ ಕಥಂಚನಃ ।**
**ಪ್ರತಿಜ್ಞಾಪಾಲನಾಯಾಪಿ ಬಿಭೇದೋರೂ ವೃಕೋದರಃ ॥ ೯೧ ॥**

ಪದಚ್ಛೇದ :- ಕಃ, ನು, ದುರ್ಯೋಧನೇ, ಪಾಪೇ, ಹತೇ, ದೋಷಃ, ಕಥಂಚನ ।
ಪ್ರತಿಜ್ಞಾಪಾಲನಾಯ, ಅಪಿ, ಬಿಭೇದ, ಊರೂ, ವೃಕೋದರಃ ॥ ೯೧ ॥

**ಅನ್ವಯಾರ್ಥ** :- **ಪಾಪೇ** = ಪಾಪಿಷ್ಠನಾದ **ದುರ್ಯೋಧನೇ** = ದುರ್ಯೋಧನನು **ಕಥಂಚನ** = ಯಾವ ರೀತಿಯಿಂದಲೂ **ಹತೇ** = ಹತನಾದರೆ **ಕೋ ನು ದೋಷಃ** = ಯಾವ ದೋಷವು ? **ಅಪಿ** = ಮತ್ತು **ಪ್ರತಿಜ್ಞಾಪಾಲನಾಯ** = ಪ್ರತಿಜ್ಞಾಪಾಲನೆಗಾಗಿ **ವೃಕೋದರಃ** = ಭೀಮನು **ಊರೂ** = ತೊಡೆಗಳನ್ನು **ಬಿಭೇದ** = ಮುರಿದನು.

**ತಾತ್ಪರ್ಯ** :- ಪಾಪಿಷ್ಠನಾದ ದುರ್ಯೋಧನನು ಹೇಗಾದರೂ ಹತನಾಗಲಿ ಅದರಿಂದ ಯಾವ ದೋಷವೂ ಇಲ್ಲ. ಮತ್ತು ಪ್ರತಿಜ್ಞಾಪಾಲನೆ ಗಾಗಿ ಭೀಮನು ದುರ್ಯೋಧನನ ತೊಡೆಗಳನ್ನು ಮುರಿದನು.

**ಧರ್ಮತಶ್ಚ ಪ್ರತಿಜ್ಞೇಯಂ ಕೃತಾ ತೇನಾನುರೂಪತಃ ।**
**ಲೋಕತೋಽಪಿ ನ ಧರ್ಮಸ್ಯ ಹಾನಿರತ್ರ ಕಥಂಚನ ॥ ೯೨ ॥**

ಪದಚ್ಛೇದ :- ಧರ್ಮತಃ, ಚ, ಪ್ರತಿಜ್ಞಾ, ಇಯಮ್, ಕೃತಾ, ತೇನ, ಅನುರೂಪತಃ ।
**ಲೋಕತಃ**, ಅಪಿ, ನ, ಧರ್ಮಸ್ಯ, ಹಾನಿಃ, ಅತ್ರ, ಕಥಂಚನ ॥ ೯೨ ॥

**ಅನ್ವಯಾರ್ಥ** :- **ಅನುರೂಪತಃ** = ಪಾಪಿಗಳನ್ನು ಅಧರ್ಮದಿಂದ ವಧೆ ಮಾಡುವುದಕ್ಕನುಗುಣವಾಗಿ **ತೇನ** = ಆ ಭೀಮನಿಂದ **ಧರ್ಮತಃ** = ಧರ್ಮದಿಂದ **ಇಯಮ್ ಪ್ರತಿಜ್ಞಾ** = ಈ ಪ್ರತಿಜ್ಞೆಯು **ಕೃತಾ** = ಮಾಡಲ್ಪಟ್ಟಿದೆ **ಅತ್ರ** = ಈ ವಿಷಯದಲ್ಲಿ **ಲೋಕತೋಽಪಿ** = ಲೋಕದೃಷ್ಟಿಯಿಂದಲೂ **ಧರ್ಮಸ್ಯ** = ಧರ್ಮದ **ಹಾನಿಃ** = ಹಾನಿಯು **ಕಥಂಚನ** = ಸರ್ವಥಾ **ನ** = ಇರುವದಿಲ್ಲ.

**ತಾತ್ಪರ್ಯ** :- ಪಾಪಿಗಳಿಗೆ ಅಧರ್ಮದಿಂದ ವಧೆ ಅನುರೂಪ ವಾಗಿರುವುದರಿಂದ ಭೀಮನು ಧರ್ಮದಿಂದಲೇ ಪ್ರತಿಕ್ಷೆ ಮಾಡಿದ್ದಾನೆ. ಲೋಕದೃಷ್ಟಿಯಿಂದಲೂ ಇಲ್ಲಿ ಧರ್ಮಕ್ಕೆ ಯಾವ ಹಾನಿಯೂ ಇರುವದಿಲ್ಲ.

**ಯೇ ಭೀಮಸ್ಯಾಪ್ರಭಾವಜ್ಞಾ ಆಪದ್ಧರ್ಮಂ ಚ ಮನ್ವತೇ ।**
**ಅವಧ್ಯತ್ವೇ ಶಿವವರಾದ್ ಗದಾಶಿಕ್ಷಾಬಲಾದಪಿ ।**
**ಜರಾಸಂಧೋಪಮೋ ಯಸ್ಮಾದ್ ಧಾರ್ತರಾಷ್ಟ್ರಃ ಸುವಿಶ್ರುತಃ ॥ ೯೩ ॥**

ಪದಚ್ಛೇದ :- ಯೇ, ಭೀಮಸ್ಯ, ಅಪ್ರಭಾವಜ್ಞಾಃ, ಆಪದ್ಧರ್ಮಮ್, ಚ, ಮನ್ವತೇ । ಅವಧ್ಯತ್ವೇ, ಶಿವವರಾತ್, ಗದಾಶಿಕ್ಷಾಬಲಾತ್, ಅಪಿ । ಜರಾಸಂಧೋಪಮಃ, ಯಸ್ಮಾತ್, ಧಾರ್ತರಾಷ್ಟ್ರಃ, ಸುವಿಶ್ರುತಃ ॥ ೯೩ ॥

**ಅನ್ವಯಾರ್ಥ** :- **ಯೇ** = ಯಾರು **ಭೀಮಸ್ಯ** = ಭೀಮನ **ಅಪ್ರಭಾವಜ್ಞಾಃ** = ಪ್ರಭಾವವನ್ನು ತಿಳಿಯದವರು **ಆಪದ್ಧರ್ಮಂ ಚ** = ಈ ಕೃತ್ಯವನ್ನು ಆಪದ್ಧರ್ಮವೆಂದು **ಮನ್ವತೇ** = ತಿಳಿಯುತ್ತಾರೆ **ಯಸ್ಮಾತ್** = ಯಾವ ಕಾರಣದಿಂದ **ಧಾರ್ತರಾಷ್ಟ್ರಃ** = ದುರ್ಯೋಧನನು **ಅವಧ್ಯತ್ವೇ** = ಅವಧ್ಯತ್ವವಿಷಯದಲ್ಲಿ **ಶಿವವರಾತ್** = ಶಿವನ ವರವಿರುವುದರಿಂದ **ಅಪಿ** = ಮತ್ತು **ಗದಾಶಿಕ್ಷಾಬಲಾತ್** = ಬಲರಾಮನಿಂದ ಪಡೆದ ಗದಾಯುದ್ಧದ ಶಿಕ್ಷಣಬಲದಿಂದಲೂ **ಜರಾಸಂಧೋಪಮಃ** = ಜರಾಸಂಧನಿಗೆ ಸದೃಶನೆಂದು **ಸುವಿಶ್ರುತಃ** = ಪ್ರಸಿದ್ಧನಾಗಿದ್ದಾನೆ.

**ತಾತ್ಪರ್ಯ** :- ಭೀಮನ ಬಲವನ್ನು ತಿಳಿಯದವರು ಇವನ ಕೃತ್ಯವನ್ನು ಆಪದ್ಧರ್ಮವೆಂದು ತಿಳಿಯುತ್ತಾರೆ. ದುರ್ಯೋಧನನು ಅವಧ್ಯತ್ವವಿಷಯದಲ್ಲಿ ಶಿವನ ವರವಿರುವುದರಿಂದ ಜರಾಸಂಧನಿಗೆ ಸದೃಶನೆಂದು ಪ್ರಸಿದ್ಧನಾಗಿದ್ದಾನೆ.

**ತಸ್ಮಾತ್ ಸದ್ಧರ್ಮ ಏವಾಯಂ ಭೀಮಚೀರ್ಣ ಇತಿ ಬ್ರುವನ್ ।**
**ಅಪಿ ಸಂಶಯಿನಂ ಚಕ್ರೇ ಧರ್ಮರಾಜಂ ಜಗತ್ಪತಿಃ ॥ ೯೪ ॥**

ಪದಚ್ಛೇದ :- ತಸ್ಮಾತ್, ಸಧರ್ಮಃ, ಏವ, ಅಯಮ್, ಭೀಮಚೀರ್ಣಃ, ಇತಿ, ಬ್ರುವನ್ । ಅಪಿ, ಸಂಶಯಿನಮ್, ಚಕ್ರೇ, ಧರ್ಮರಾಜಮ್, ಜಗತ್ಪತಿಃ ॥ ೯೪ ॥

**ಅನ್ವಯಾರ್ಥ** :- **ತಸ್ಮಾತ್** = ಆದ್ದರಿಂದ **ಭೀಮಚೀರ್ಣಃ** = ಭೀಮನಿಂದ ಮಾಡಿದ **ಅಯಮ್** = ಈ ವಧೆಯು **ಸಧರ್ಮಃ, ಏವ** = ಧರ್ಮಯುಕ್ತವೇ **ಇತಿ** = ಎಂಬುದಾಗಿ **ಜಗತ್ಪತಿಃ** = ಜಗದೊಡೆಯನಾದ ಶ್ರೀಕೃಷ್ಣನು **ಧರ್ಮರಾಜಮ್** = ಧರ್ಮರಾಜನನ್ನು ಕುರಿತು **ಬ್ರುವನ್** =

ಹೇಳುತ್ತಾ **ಸಂಶಯಿನಮ್ ಅಪಿ** = ಸಂಶಯುಳ್ಳವನನ್ನಾಗಿಯೇ **ಚಕ್ರೇ** = ಮಾಡಿದನು.

**ತಾತ್ಪರ್ಯ :-** ಆದ್ದರಿಂದ ಭೀಮನು ಮಾಡಿದ ದುರ್ಯೋಧನನ ವಧೆಯು ಧರ್ಮವೇ ಆಗಿದೆ. ಎಂಬುದಾಗಿ ಜಗದೊಡೆಯನಾದ ಶ್ರೀಕೃಷ್ಣನು ಧರ್ಮರಾಜನಿಗೆ ಬೋಧಿಸುತ್ತಿದ್ದರೂ ಅವನನ್ನು ಸಂಶಯದಲ್ಲಿಯೇ ಇರಿಸಿದ.

**ಭೂಭಾರಕ್ಷತಿಜೋ ಧರ್ಮೋ ಮಚ್ಛುಶ್ರೂಷಾತ್ಮಕಸ್ತು ಯಃ ।**
**ಭೀಮಸ್ಯೈವ ಭವೇತ್ ಸಮ್ಯಗಿತಿ ಬುದ್ಧ್ಯಾ ಪರಃ ಪ್ರಭುಃ ॥ ೯೫ ॥**

**ಪದಚ್ಛೇದ :- ಭೂಭಾರಕ್ಷಿತಿಜಃ, ಧರ್ಮಃ, ಮಚ್ಛುಶ್ರೂಷಾತ್ಮಕಃ, ಚ, ಯಃ । ಭೀಮಸ್ಯ, ಏವ, ಭವೇತ್, ಸಮ್ಯಕ್, ಇತಿ, ಬುದ್ಧ್ಯಾ, ಪರಃ, ಪ್ರಭುಃ ॥ ೯೫ ॥**

**ಅನ್ವಯಾರ್ಥ :- ಮಚ್ಛುಶ್ರೂಷಾತ್ಮಕಃ** = ನನ್ನ ಸೇವಾರೂಪವಾದ **ಭೂಭಾರಕ್ಷಿತಿಜಃ** = ಭೂಭಾರಹರಣದಿಂದ ಉಂಟಾದ **ಧರ್ಮಃ** = ಪುಣ್ಯವು **ಸಮ್ಯಕ್** = ಪೂರ್ತಿಯಾಗಿ **ಭೀಮಸ್ಯೈವ** = ಭೀಮನಿಗೇ **ಭವೇತ್** = ಬರಲಿ **ಇತಿ ಬುದ್ಧ್ಯಾ** = ಈ ಅಭಿಪ್ರಾಯದಿಂದ **ಪರಃ ಪ್ರಭುಃ** = ಮಹಾಪ್ರಭುವು ಹೀಗೆ ಮಾಡಿದ.

**ತಾತ್ಪರ್ಯ :-** ನನ್ನ ಸೇವಾರೂಪವಾದ ಭೂಭಾರಹರಣದಿಂದ ಉಂಟಾದ ಪುಣ್ಯವು ಪೂರ್ತಿಯಾಗಿ ಭೀಮನಿಗೇ ಬರಲಿ. ಎಂಬ ಅಭಿಪ್ರಾಯ ದಿಂದ ಶ್ರೀಕೃಷ್ಣನು ಹೀಗೆ ಮಾಡಿದನು.

**ಸ್ವೇನೈವ ಬಲಭದ್ರಾಯ ಜನಾಯ ಚ ಪುನಃಪುನಃ ।**
**ಶ್ರುತ್ವಾಽಪ್ಯುಕ್ತಂ ನ ತತ್ಯಾಜ ಸಂಶಯಂ ಧರ್ಮಜೋ ಯತಃ ॥ ೯೬ ॥**

**ತತೋಽಪ್ಯಸಂಶಯಂ ಕೃಷ್ಣೋ ನ ಚಕಾರ ಯುಧಿಷ್ಠಿರಮ್ ।**
**ಮುಖ್ಯಂ ಧರ್ಮಂ ಹಿ ಭಗವಾನ್ ಬಲಾಯಾಽಹ ಜನಾಯ ಚ ॥ ೯೭ ॥**

**ಪದಚ್ಛೇದ :- ಸ್ವೇನ, ಏವ, ಬಲಭದ್ರಾಯ, ಜನಾಯ, ಚ, ಪುನಃ, ಪುನಃ । ಶ್ರುತ್ವಾ, ಅಪಿ, ಉಕ್ತಮ್, ನ, ತತ್ಯಾಜ, ಸಂಶಯಮ್, ಧರ್ಮಜಃ, ಯತಃ ॥ ೯೬ ॥ ತತಃ, ಅಪಿ, ಅಸಂಶಯಮ್, ಕೃಷ್ಣಃ, ನ, ಚಕಾರ, ಯುಧಿಷ್ಠಿರಮ್ । ಮುಖ್ಯಮ್, ಧರ್ಮಮ್, ಹಿ, ಭಗವಾನ್, ಬಲಾಯ, ಆಹ, ಜನಾಯ, ಚ ॥ ೯೭ ॥**

**ಅನ್ವಯಾರ್ಥ** :- **ಸ್ವೇನೈವ** = ಶ್ರೀಕೃಷ್ಣನಿಂದಲೇ **ಬಲಭದ್ರಾಯ** = ಬಲರಾಮನಿಗೆ **ಚ** = ಮತ್ತು **ಜನಾಯ** = ಜನರಿಗೆ **ಪುನಃ, ಪುನಃ** = ಮತ್ತೆ ಮತ್ತೆ **ಉಕ್ತಂ** = ಹೇಳಿದ್ದನ್ನು **ಶ್ರುತ್ವಾಽಪಿ** = ಕೇಳಿಯೂ **ಧರ್ಮಜ್ಞಃ** = ಧರ್ಮರಾಜನು **ಯತಃ** = ಯಾವ ಕಾರಣದಿಂದ **ಸಂಶಯಮ್** = ಸಂಶಯವನ್ನು **ನ ತತ್ಯಾಜ** = ಬಿಡಲಿಲ್ಲವೋ ॥ ೯೬ ॥ **ಭಗವಾನ್** = ಶ್ರೀಕೃಷ್ಣನು **ತತಃ** = ಆ ಕಾರಣದಿಂದ **ಯುಧಿಷ್ಠಿರಮ್** = ಯುಧಿಷ್ಠಿರನನ್ನು **ಅಸಂಶಯಮ್** = ಸಂಶಯರಹಿತನನ್ನಾಗಿ **ನ ಚಕಾರ** = ಮಾಡಲಿಲ್ಲ **ಚ** = ಮತ್ತು **ಮುಖ್ಯಮ್ ಧರ್ಮಮ್** = ಮುಖ್ಯಧರ್ಮವನ್ನು **ಬಲಾಯ** = ಬಲರಾಮನಿಗೆ **ಜನಾಯ ಚ** = ಜನರಿಗೂ ಆಹ ಹೇಳಿದನು.

**ತಾತ್ಪರ್ಯ** :- ಶ್ರೀಕೃಷ್ಣನು ಬಲರಾಮನಿಗೂ ಹಾಗೂ ಬೇರೆ ಜನರಿಗೂ ಮತ್ತೆ ಮತ್ತೆ ಹೇಳಿದ್ದನ್ನು ಕೇಳಿಯೂ ಧರ್ಮರಾಜನು ಕೇಳಿ ಸಂಶಯವನ್ನು ಬಿಡಲಿಲ್ಲ. ಆದ್ದರಿಂದ ಶ್ರೀಕೃಷ್ಣನು ಅವನೊಳಗಿದ್ದು ಅವನಿಗೆ ಸಂಶಯ ಪರಿಹಾರ ಮಾಡಲಿಲ್ಲವೆಂದು ತಿಳಿಯುತ್ತದೆ. ಏಕೆಂದರೆ ಮುಖ್ಯಧರ್ಮವನ್ನೇ ಕೃಷ್ಣನು ಬಲರಾಮನಿಗೆ ಹಾಗೂ ಜನರಿಗೆ ಹೇಳಿದ್ದ.

**ಧರ್ಮೇಣೈವ ಹತೋ ರಾಜಾ ಧಾರ್ತರಾಷ್ಟ್ರಃ ಸುಯೋಧನಃ ।**
**ಇತಿ ಯದ್ ವಕ್ಷ್ಯತಿ ಪುನರ್ನಿಶ್ಚಯಾರ್ಥೇಽರ್ಜುನಾಯ ಚ ॥ ೯೮ ॥**

**ಪದಚ್ಛೇದ** :- **ಧರ್ಮೇಣ, ಏವ, ಹತಃ, ರಾಜಾ, ಧಾರ್ತರಾಷ್ಟ್ರಃ, ಸುಯೋಧನಃ । ಇತಿ, ಯತ್, ವಕ್ಷ್ಯತಿ, ಪುನಃ, ನಿಶ್ಚಯಾರ್ಥೇ, ಅರ್ಜುನಾಯ, ಚ ॥ ೯೮ ॥**

**ಅನ್ವಯಾರ್ಥ** :- **ಧಾರ್ತರಾಷ್ಟ್ರಃ** = ಧೃತರಾಷ್ಟ್ರಪುತ್ರನಾದ **ರಾಜಾ** = ರಾಜನಾದ **ಸುಯೋಧನಃ** = ದುರ್ಯೋಧನನು **ಧರ್ಮೇಣೈವ** = ಧರ್ಮದಿಂದಲೇ **ಹತಃ** = ಹತನಾದನು **ಇತಿ** = ಎಂದು **ಅರ್ಜುನಾಯ ಚ** = ಅರ್ಜುನನಿಗೂ **ನಿಶ್ಚಯಾರ್ಥೇ** = ನಿಶ್ಚಯಕ್ಕಾಗಿ ಕೃಷ್ಣನು **ಪುನಃ** = ಮತ್ತೆ **ಯದ್ ವಕ್ಷ್ಯತಿ** = ಹೇಳುತ್ತಾನೆ.

**ತಾತ್ಪರ್ಯ** :- ಧೃತರಾಷ್ಟ್ರಪುತ್ರನಾದ ದುರ್ಯೋಧನನು ಧರ್ಮದಿಂದಲೇ ಹತನಾದನೆಂದು ಅರ್ಜುನನಿಗೆ ಸಂಶಯಪರಿಹಾರವಾಗಿ ನಿಶ್ಚಯವಾಗಲಿ ಎಂದು ಪುನಃ ಕೃಷ್ಣನು ಹೇಳುತ್ತಾನೆ.

**ಪುನಃಪುನರ್ಧರ್ಮತ ಏವ ಭೀಮೋ**
**ಜಘಾನ ರಾಜಾನಮಿತಿ ಬ್ರುವಂತಮ್ ।**
**ಜಗಾದ ಕೃಷ್ಣಂ ಸ್ಫುರಿತಾಧರೋಷ್ಠಃ**
**ಕ್ರೋಧಾತ್ ಸುಪಾಪೋ ಧೃತರಾಷ್ಟ್ರಸೂನುಃ ॥ ೯೯ ॥**

ಪದಚ್ಛೇದ :- ಪುನಃ ಪುನಃ, ಧರ್ಮತಃ, ಏವ, ಭೀಮಃ, ಜಘಾನ, ರಾಜಾನಮ್, ಇತಿ, ಬ್ರುವಂತಮ್ । ಜಗಾದ, ಕೃಷ್ಣಮ್, ಸ್ಫುರಿತಾಧರೋಷ್ಠಃ, ಕ್ರೋಧಾತ್, ಸುಪಾಪಃ, ಧೃತರಾಷ್ಟ್ರಸೂನುಃ ॥ ೯೯ ॥

**ಅನ್ವಯಾರ್ಥ** :- **ಪುನಃ ಪುನಃ** = ಮತ್ತೆ ಮತ್ತೆ **ಧರ್ಮತಃ ಏವ** = ಧರ್ಮದಿಂದಲೇ **ಭೀಮಃ** = ಭೀಮನು **ರಾಜಾನಮ್** = ದುರ್ಯೋಧನನನ್ನು **ಜಘಾನ** = ಹೊಡೆದನು **ಇತಿ** = ಎಂದು **ಬ್ರುವಂತಮ್** = ಹೇಳುತ್ತಿರುವ **ಕೃಷ್ಣಮ್** = ಕೃಷ್ಣನನ್ನು **ಸ್ಫುರಿತಾಧರೋಷ್ಠಃ** = ತುಟಿಯನ್ನು ಅದರಿಸುತ್ತಾ **ಸುಪಾಪಃ** = ಮಹಾಪಾಪಿಯಾದ **ಧೃತರಾಷ್ಟ್ರಸೂನುಃ** = ದುರ್ಯೋಧನನು **ಕ್ರೋಧಾತ್** = ಕೋಪದಿಂದ **ಜಗಾದ** = ಹೇಳಿದನು.

**ತಾತ್ಪರ್ಯ** :- ಧರ್ಮದಿಂದಲೇ ಭೀಮನು ದುರ್ಯೋಧನನನ್ನು ಕೊಂದಿದ್ದಾನೆಂದು ಪುನಃ ಪುನಃ ಕೃಷ್ಣನು ಹೇಳಿದನು. ಆಗ ದುರ್ಯೋಧನನು ತುಟಿಯನ್ನು ಅದರಿಸುತ್ತಾ ಕೋಪದಿಂದ ಕೃಷ್ಣನಿಗೆ ಹೇಳಿದನು.

**ತ್ವಯೈವ ಪಾಪೇ ನಿಹತಾ ಹಿ ಪಾರ್ಥಾಃ**
**ಪಾಪಾಧಿಕಸ್ತ್ವಂ ಹಿ ಸದೈಕ ಏವ ।**
**ಇತ್ಯೂಚಿವಾಂಸಂ ಪ್ರಜಗಾದ ಕೃಷ್ಣೋ**
**ನ ತ್ವತ್ಸಮಃ ಪಾಪತಮಃ ಕದಾಚಿತ್ ॥ ೧೦೦ ॥**

ಪದಚ್ಛೇದ :- ತ್ವಯಾ, ಏವ, ಪಾಪೇ, ನಿಹತಾಃ, ಹಿ, ಪಾರ್ಥಾಃ, ಪಾಪಾಧಿಕಃ, ತ್ವಮ್, ಹಿ, ಸದಾ, ಏಕಃ, ಏವ, ಹಿ । ಇತಿ, ಊಚಿವಾಂಸಮ್, ಪ್ರಜಗಾದ, ಕೃಷ್ಣಃ, ನ, ತತ್ಸಮಃ, ಪಾಪತಮಃ, ಕದಾಚಿತ್ ॥ ೧೦೦ ॥

**ಅನ್ವಯಾರ್ಥ** :- **ತ್ವಯೈವ** = ನಿನ್ನಿಂದಲೇ **ಪಾರ್ಥಾಃ** = ಪಾಂಡವರು **ಪಾಪೇ** = ಪಾಪಮಾರ್ಗದಲ್ಲಿ **ನಿಹತಾ ಹಿ** = ಬಿದ್ದಿದ್ದಾರೆ **ತ್ವಮ್ ಏಕಃ, ಏವ**

= ನೀನೊಬ್ಬನೇ **ಸದಾ** = ಯಾವಾಗಲೂ **ಪಾಪಾಧಿಕಃ** = ಅಧಿಕಪಾಪಿಯು **ಇತಿ** = ಎಂದು **ಊಚಿವಾಂಸಮ್** = ಹೇಳುತ್ತಿರುವ ದುರ್ಯೋಧನನನ್ನು ಕುರಿತು **ಕೃಷ್ಣಃ** = ಕೃಷ್ಣನು **ತ್ವತ್ಸಮಃ** = ನಿನಗೆ ಸಮನಾದ **ಪಾಪತಮಃ** = ಮಹಾಪಾಪಿಯು **ಕದಾಚಿತ್** = ಯಾವಾಗಲೂ **ನ** = ಇಲ್ಲ ಎಂದು **ಪ್ರಜಗಾದ** = ಹೇಳಿದನು.

**ತಾತ್ಪರ್ಯ** :- ಪಾಂಡವರನ್ನು ಪಾಪಮಾರ್ಗದಲ್ಲಿ ಹಚ್ಚಿದವನು ನೀನೇ. ನೀನೊಬ್ಬನೇ ಮಹಾಪಾಪಿ ಎಂದು ಹೇಳುತ್ತಿರುವ ದುರ್ಯೋಧನನನ್ನು ಕುರಿತು ಕೃಷ್ಣನು ನಿನಗೆ ಸಮನಾದ ಮಹಾಪಾಪಿಯು ಎಲ್ಲಿಯೂ ಎಂದೂ ಇಲ್ಲ ಎಂದು ಹೇಳಿದನು.

**ಭೀಷ್ಮಾದಿಹತ್ಯಾಽಪಿ ತವೈವ ಪಾಪಂ**
**ಯದನ್ವಯುಸ್ತ್ವಾಮತಿಪಾಪನಿಶ್ಚಯಮ್ ।**
**ಪಾಪಂ ಚ ಪಾಪಾನುಗತಂ ಚ ಹತ್ವಾ**
**ಕಥಂಚನಾಪ್ಯಸ್ತಿ ನಚೈವ ಪಾಪಮ್ ॥ ೧೦೧ ॥**

ಪದಚ್ಛೇದ :- **ಭೀಷ್ಮಾದಿಹತ್ಯಾ, ಅಪಿ, ತವ, ಏವ, ಪಾತಮ್, ಯತ್, ಅನ್ವಯುಃ, ತ್ವಾಮ್, ಅತಿಪಾಪನಿಶ್ಚಯಮ್ । ಪಾಪಮ್, ಚ, ಪಾಪಾನುಗತಮ್, ಚ, ಹತ್ವಾ, ಕಥಂಚನ, ಅಪಿ, ಅಸ್ತಿ, ನ, ಚ, ಏವ, ಪಾಪಮ್ ॥ ೧೦೧ ॥**

**ಅನ್ವಯಾರ್ಥ** :- **ಭೀಷ್ಮಾದಿಹತ್ಯಾಪಿ** = ಭೀಷ್ಮಾದಿಗಳ ಕೊಂದ ಪಾಪವೂ ಕೂಡ **ತವೈವ** = ನಿನಗೆ **ಯತ್** = ಯಾವ ಕಾರಣದಿಂದ **ಅತಿಪಾಪ ನಿಶಚಯಮ್** = ಅತಿಪಾಪಬುದ್ಧಿಯವನಾದ **ತ್ವಾಮ್** = ನಿನ್ನನ್ನು **ಅನ್ವಯುಃ** = ಅವರು ಅನುಸರಿಸಿದರು **ಪಾಪಮ್** = ಪಾಪಿಯನ್ನು **ಪಾಪಾನುಗತಮ್** = ಪಾಪಿಯನ್ನು ಅನುಸರಿಸಿದವರನ್ನೂ **ಹತ್ವಾ** = ಕೊಂದು **ಕಥಂ ಚ ನಾಪಿ** = ಸರ್ವಥಾ ಪಾಪಕರವು **ನೈವಾಸ್ತಿ** = ಇರುವದಿಲ್ಲ.

**ತಾತ್ಪರ್ಯ** :- ಭೀಷ್ಮಾದಿಗಳ ಕೊಂದ ಪಾಪವೂ ನಿನಗೇ ಬರುತ್ತದೆ. ಯಾಕೆಂದರೆ ಅವರೆಲ್ಲರೂ ಪಾಪಬುದ್ಧಿಯವನಾದ ನಿನ್ನನ್ನು ಆಶ್ರಯಿಸಿ ಹತರಾಗಿದ್ದಾರೆ. ಪಾಪಿಯನ್ನು ಅನುಸರಿಸಿದವರನ್ನೂ ಕೊಂದರೆ ಯಾವುದೇ ರೀತಿಯಿಂದಲೂ ಪಾಪ ಬರುವದಿಲ್ಲ.

**ನ ಪಾಂಡವೇಷ್ವಸ್ತಿ ತತೋ ಹಿ ಕಿಂಚಿತ್**
**ಪಾಪಂ ಪ್ರಯತ್ನಾಚ್ಚ ನಿಸರ್ಗತೋಽಪಿ ।**
**ಗುಣಾಧಿಕಾಸ್ತೇ ಮದಪಾಶ್ರಯಾಚ್ಚ**
**ಕೋ ನಾಮ ತೇಷ್ವಣ್ವಪಿ ಪಾಪಮಾಹ ॥ ೧೦೨ ॥**

ಪದಚ್ಛೇದ :– ನ, ಪಾಂಡವೇಷು, ಅಸ್ತಿ, ತತಃ, ಹಿ, ಕಿಂಚಿತ್, ಪಾಪಮ್, ಪ್ರಯತ್ನಾತ್, ಚ, ನಿಸರ್ಗತಃ, ಅಪಿ । ಗುಣಾಧಿಕಾಃ, ತೇ, ಮದುಪಾಶ್ರಯಾಃ, ಚ, ಕಃ, ನಾಮ, ತೇಷು, ಅಪಿ, ಪಾಪಮ್, ಆಹ ॥ ೧೦೨ ॥

**ಅನ್ವಯಾರ್ಥ** :- **ತತಃ** = ಆದ್ದರಿಂದ **ಕಿಂಚಿತ್** = ಸ್ವಲ್ಪವೂ ಕೂಡ **ಪಾಂಡವೇಷು** = ಪಾಂಡವರಲ್ಲಿ **ಪಾಪಮ್** = ಪಾಪವು **ನ ಹಿ ಅಸ್ತಿ** = ಇರುವದಿಲ್ಲ **ಪ್ರಯತ್ನಾಚ್ಚ** = ಪ್ರಯತ್ನದಿಂದಲೂ **ನಿಸರ್ಗತೋಽಪಿ** = ಸ್ವಭಾವದಿಂದಲೂ **ತೇ** = ಅವರು **ಗುಣಾಧಿಕಾಃ** = ಗುಣವಂತರು **ಚ** = ಮತ್ತು **ಮದುಪಾಶ್ರಯಾಃ** = ನನ್ನನ್ನು ಆಶ್ರಯಿಸಿರುವರು **ಕೋ ನಾಮ** = ಯಾವನು ತಾನೆ **ತೇಷು** = ಅವರಲ್ಲಿ **ಅಣ್ವಪಿ** = ಸ್ವಲ್ಪವಾದರೂ **ಪಾಪಮ್** = ಪಾಪವನ್ನು **ಆಹ** = ಹೇಳಿಯಾನು ?

**ತಾತ್ಪರ್ಯ** :- ಆದ್ದರಿಂದ ಪಾಂಡವರಲ್ಲಿ ಸ್ವಲ್ಪವೂ ಕೂಡ ಪಾಪವಿಲ್ಲ. ಪ್ರಯತ್ನದಿಂದಲೂ ಸ್ವಭಾವದಿಂದಲೂ ಅವರು ಗುಣವಂತರು. ಹಾಗೂ ನನ್ನನ್ನು ಆಶ್ರಯಿಸಿರುವರು. ಯಾವನು ತಾನೆ ಅವರಲ್ಲಿ ಸ್ವಲ್ಪವಾದರೂ ಪಾಪವನ್ನು ಹೇಳಿಯಾನು ?

**ನಿಸರ್ಗತಃ ಪಾಪತಮಸ್ತ್ವಮನ್ಯಾನ್**
**ಧರ್ಮಸ್ಥಿತಾನ್ ಪಾಪಪಥೇ ನಿಧಾಯ ।**
**ಸ್ವಯಂ ಚ ಪಾಪೇ ನಿರತಃ ಸದೈವ**
**ಪಾಪಾತ್ ಸುಪಾಪಾಂ ಗತಿಮೇವ ಯಾಸಿ ॥ ೧೦೩ ॥**

ಪದಚ್ಛೇದ :– ನಿಸರ್ಗತಃ, ಪಾಪತಮಃ, ತ್ವಮ್, ಅನ್ಯಾನ್, ಧರ್ಮಸ್ಥಿತಾನ್, ಪಾಪಪಥೇ, ನಿಧಾಯ । ಸ್ವಯಮ್, ಚ, ಪಾಪೇ, ನಿರತಃ, ಸದಾ, ಏವ, ಪಾಪಾತ್, ಸುಪಾಪಾಮ್, ಗತಿಮ್, ಏವ, ಯಾಸಿ ॥ ೧೦೩ ॥

**ಅನ್ವಯಾರ್ಥ** :- **ನಿಸರ್ಗತಃ** = ಸ್ವಭಾವದಿಂದ **ತ್ವಮ್** = ನೀನು **ಪಾಪತಮಃ** = ಮಹಾಪಾಪಿಯು **ಧರ್ಮಸ್ಥಿತಾನ್** = ಧರ್ಮದಲ್ಲಿರುವ **ಅನ್ಯಾನ್** = ಬೇರೆಯವರನ್ನು **ಪಾಪಪಥೇ** = ಪಾಪಮಾರ್ಗದಲ್ಲಿ **ನಿಧಾಯ** = ಇರಿಸಿ **ಸ್ವಯಂ ಚ** = ತಾನೂ ಕೂಡ **ಸದಾ** = ಯಾವಾಗಲೂ **ಪಾಪೇ** = ಪಾಪದಲ್ಲಿ **ನಿರತಃ** = ನಿರತನಾಗಿ **ಪಾಪಾತ್** = ಪಾಪಕ್ಕಿಂತಲೂ **ಸುಪಾಪಾಮ್** = ಅತಿಪಾಪವಾದ **ಗತಿಮೇವ** = ಗತಿಯನ್ನೇ **ಯಾಸಿ** = ಹೊಂದುತ್ತಿ.

**ತಾತ್ಪರ್ಯ** :- ಸ್ವಭಾವದಿಂದ ನೀನು ಮಹಾಪಾಪಿಯು. ಧರ್ಮದಲ್ಲಿರುವ ಬೇರೆಯವರನ್ನು ಪಾಪಮಾರ್ಗದಲ್ಲಿ ಇರಿಸಿ ತಾನೂ ಕೂಡ ಸದಾ ಪಾಪನಿರತನಾಗಿ ಪಾಪಕ್ಕಿಂತಲೂ ಅತಿಪಾಪವಾದ ಗತಿಯನ್ನೇ ಹೊಂದುತ್ತಿ.

**ಇತಿ ಬ್ರುವಂತಂ ಪುನರಾಹ ಕೃಷ್ಣಂ**
**ದುರ್ಯೋಧನಃ ಪಾಪಕೃತಾಂ ಪ್ರಧಾನಃ ।**
**ಸ್ವಂತೋತ್ತಮೋ ನಾಮ ಕ ಏವ ಮತ್ತಃ**
**ಕೋ ನಾಮ ದೋಷೋऽಸ್ತಿ ಮಯಾ ಕೃತೋऽತ್ರ ॥ ೧೦೪ ॥**

ಪದಚ್ಛೇದ :- **ಇತಿ, ಬ್ರುವಂತಮ್, ಪುನಃ, ಆಹ, ಕೃಷ್ಣಮ್, ದುರ್ಯೋಧನಃ, ಪಾಪಕೃತಾಮ್, ಪ್ರಧಾನಃ । ಸ್ವಂತೋತ್ತಮಃ, ನಾಮ, ಕಃ, ಏವ, ಮತ್ತಃ, ಕಃ, ನಾಮ, ದೋಷಃ, ಅಸ್ತಿ, ಮಯಾ, ಕೃತಃ, ಅತ್ರ ॥ ೧೦೪ ॥**

**ಅನ್ವಯಾರ್ಥ** :- **ಇತಿ** = ಈ ರೀತಿಯಾಗಿ **ಬ್ರುವಂತಮ್** = ಹೇಳುತ್ತಿರುವ **ಕೃಷ್ಣಮ್** = ಶ್ರೀಕೃಷ್ಣನನ್ನು ಕುರಿತು **ಪಾಪಕೃತಾಂ ಪ್ರಧಾನಃ** = ಪಾಪಕಾರಿಗಳಲ್ಲಿ ಶ್ರೇಷ್ಠನಾದ **ದುರ್ಯೋಧನಃ** = ದುರ್ಯೋಧನನು **ಪುನಃ** = ಮತ್ತೆ **ಆಹ** = ಹೇಳಿದನು **ಸ್ವಂತೋತ್ತಮಃ** = ಒಳ್ಳೆಯ ಮರಣ ಹೊಂದಿದವರಲ್ಲಿ ಉತ್ತಮವಾದ **ಮತ್ತಃ** = ನನಗಿಂತ **ಕ ಏವ ನಾಮ** = ಬೇರೆ ಯಾರಿದ್ದಾರೆ ? ಆದ್ದರಿಂದ **ಮಯಾ** = ನನ್ನಿಂದ **ಅತ್ರ** = ಈ ಜನ್ಮದಲ್ಲಿ **ಕೃತಃ** = ಮಾಡಿದ **ದೋಷಃ** = ಪಾಪವು **ಕೋ ನಾಮ ಅಸ್ತಿ** ? = ಯಾವುದಿದೆ ?

**ತಾತ್ಪರ್ಯ** :- ಕೃಷ್ಣನು ಹೀಗೆ ಹೇಳಿದಾಗ ಪಾಪಿಗಳಲ್ಲಿ ಮುಖ್ಯನಾದ ದುರ್ಯೋಧನನು ಪುನಃ ಹೀಗೆ ಹೇಳಿದನು. ಒಳ್ಳೆಯ ಮರಣಹೊಂದಿದವರಲ್ಲಿ

ಉತ್ತಮನೆಂದರೆ ನನಗಿಂತ ಬೇರೆ ಯಾರು ತಾನೆ ಇದ್ದಾರೆ ? ಆದ್ದರಿಂದ ನಾನು ಈ ಜನ್ಮದಲ್ಲಿ ಮಾಡಿದ ಪಾಪ ಯಾವುದು ?

**ಇಷ್ಟಂ ಚ ಯಜ್ಞೈಶ್ಚರಿತಂ ಚ ಪೂರ್ತೈಃ**
**ಪದಂ ರಿಪೂಣಾಂ ನಿಹಿತಂ ಹಿ ಮೂರ್ಧ್ನಿ ।**
**ಮೃತ್ಯುಶ್ಚ ಸಂಗ್ರಾಮಶಿರಸ್ಯವಾಪ್ತೋ**
**ರಣೋನ್ಮುಖೇನೈವ ಮಯಾ ಕಿಮನ್ಯತ್ ॥ ೧೦೫ ॥**

ಪದಚ್ಛೇದ :- ಇಷ್ಟಮ್, ಚ, ಯಜ್ಞೈಃ, ಚರಿತಮ್, ಚ, ಪೂರ್ತೈಃ, ಪದಮ್, ರಿಪೂಣಾಮ್, ನಿಹಿತಮ್, ಚ, ಮೂರ್ಧ್ನಿ । ಮೃತ್ಯುಃ, ಚ, ಸಂಗ್ರಾಮಶಿರಸಿ, ಅವಾತ್ತಃ, ರಣೋನ್ಮುಖೇನ, ಏವ, ಮಯಾ, ಕಿಮ್, ಅನ್ಯತ್ ॥ ೧೦೫ ॥

**ಅನ್ವಯಾರ್ಥ :-** **ಯಜ್ಞೈಃ** = ಯಜ್ಞಗಳಿಂದ **ಇಷ್ಟಂ ಚ** = ಪೂಜೆ ಮಾಡಿದೆ **ಚ** = ಮತ್ತು **ಪೂರ್ತೈಃ** = ಕೆರೆ ಬಾವಿಗಳಿಂದ **ಚರಿತಮ್** = ಕಟ್ಟಿಸಿ ಸೇವೆ ಮಾಡಿದೆ **ಚ** = ಮತ್ತು **ರಿಪೂಣಾಮ್** = ಶತ್ರುಗಳ **ಮೂರ್ಧ್ನಿ** = ತಲೆಯಲ್ಲಿ **ಪದಮ್** = ಕಾಲು **ನಿಹಿತಮ್** = ಇಡಲ್ಪಟ್ಟಿತು **ರಣೋನ್ಮುಖೇನೈವ** = ಯುದ್ಧೋನ್ಮುಖವಾಗಿಯೇ **ಸಂಗ್ರಾಮಶಿರಸಿ** = ಯುದ್ಧದ ಕೊನೆಯಲ್ಲಿ **ಮೃತ್ಯುಶ್ಚ** = ಮರಣವೂ **ಅವಾತ್ತಃ** = ಪ್ರಾಪ್ತವಾಯಿತು **ಮಯಾ ಚ** = ನನ್ನಿಂದಾದರೋ **ಕಿಮನ್ಯತ್** = ಇನ್ನೇನು ಬೇರೆ ಮಾಡಲ್ಪಡಬೇಕು.

**ತಾತ್ಪರ್ಯ :-** ನಾನು ಯಜ್ಞಗಳನ್ನು ಮಾಡಿದೆ. ಕೆರೆ ಬಾವಿಗಳನ್ನು ಕಟ್ಟಿಸಿದೆ. ಯುದ್ಧದಲ್ಲಿ ಶತ್ರುಗಳ ತಲೆಯನ್ನು ತುಳಿದಿದ್ದೇನೆ. ಯುದ್ಧೋನ್ಮುಖವಾಗಿಯೇ ಯುದ್ಧದ ಕೊನೆಯಲ್ಲಿ ಮರಣವನ್ನು ಹೊಂದುತ್ತಿದ್ದೇನೆ. ಇನ್ನು ಬೇರೆ ನನಗೇನು ಬೇಕು ?

**ಇಷ್ಟಾ ಭೋಗಾ ಮಯಾ ಭುಕ್ತಾಃ ಪ್ರಾಪ್ತಾ ಚ ಪರಮಾ ಗತಿಃ ।**
**ದುಃಖಿನೋ ದುಃಖಮಾಪ್ಸ್ಯಂತಿ ಪಾರ್ಥಾಸ್ತೇ ಕೂಟಯೋಧಿನಃ ॥ ೧೦೬ ॥**

ಪದಚ್ಛೇದ :- ಇಷ್ಟಾಃ, ಭೋಗಾಃ, ಮಯಾ, ಭುಕ್ತಾಃ, ಪ್ರಾಪ್ತಾ, ಚ, ಪರಮಾ, ಗತಿಃ । ದುಃಖಿನಃ, ದುಃಖಮ್, ಆಪ್ಸ್ಯಂತಿ, ಪಾರ್ಥಾಃ, ತೇ, ಕೂಟ-ಯೋಧಿನಃ ॥ ೧೦೬ ॥

**ಅನ್ವಯಾರ್ಥ** :- **ಇಷ್ಟಾಃ** = ಇಷ್ಟವಾದ **ಭೋಗಾಃ** = ಭೋಗಗಳು **ಮಯಾ** = ನನ್ನಿಂದ **ಭುಕ್ತಾಃ** = ಅನುಭವಿಸಲ್ಪಟ್ಟಿವೆ **ಪರಮಾ** = ಉತ್ತಮವಾದ **ಗತಿಶ್ಚ** = ವೀರಸ್ವರ್ಗವೂ **ಪ್ರಾಪ್ತಾ** = ಪ್ರಾಪ್ತವಾಗಿದೆ **ದುಃಖಿನಃ** = ಈಗಲೂ ದುಃಖಿಗಳಾದ **ತೇ ಪಾರ್ಥಾಃ** = ಆ ಪಾಂಡವರು **ಕೂಟಯೋಧಿನಃ** = ಕಪಟಯುದ್ಧವನ್ನು ಮಾಡುವವರಾಗಿ **ದುಃಖಮ್** = ದುಃಖವನ್ನು **ಆಪ್ಸ್ಯಂತಿ** = ಹೊಂದುವರು.

**ತಾತ್ಪರ್ಯ** :- ಇಷ್ಟವಾದ ಭೋಗಗಳನ್ನು ಇವತ್ತಿನವರೆಗೆ ಅನುಭವಿಸಿದ್ದೇನೆ. ಉತ್ತಮವಾದ ವೀರಸ್ವರ್ಗವನ್ನೂ ಹೊಂದುತ್ತಿದ್ದೇನೆ. ಇವತ್ತಿನವರೆಗೆ ದುಃಖಿಗಳಾದ ಪಾಂಡವರು ಕಪಟಯುದ್ಧವನ್ನು ಮಾಡುವವರಾಗಿ ಮುಂದೆಯೂ ದುಃಖವನ್ನೇ ಅನುಭವಿಸುವರು.

**ಚಂದ್ರಸೂರ್ಯನಿಭೈಃ ಶೂರೈರ್ಧಾರ್ಮಿಕೈಃ ಸದ್ಭಿರುಜ್ಝಿತಾ ।**
**ಕೇವಲಾ ರತ್ನಹೀನೇಯಂ ಪಾಂಡವೈರ್ಭುಜ್ಯತಾಂ ಮಹೀ ॥ ೧೦೭ ॥**

ಪದಚ್ಛೇದ :- ಚಂದ್ರಸೂರ್ಯನಿಭೈಃ, ಶೂರೈಃ, ಧಾರ್ಮಿಕೈಃ, ಸದ್ಭಿಃ, ಉಜ್ಝಿತಾ । ಕೇವಲಾ, ರತ್ನಹೀನಾ, ಇಯಮ್, ಪಾಂಡವೈಃ, ಭುಜ್ಯತಾಮ್, ಮಹೀ ॥ ೧೦೭ ॥

**ಅನ್ವಯಾರ್ಥ** :- **ಚಂದ್ರಸೂರ್ಯನಿಭೈಃ** = ಚಂದ್ರಸೂರ್ಯರಿಗೆ ಸಮಾನರಾದ **ಶೂರೈಃ** = ಶೂರರಾದ **ಧಾರ್ಮಿಕೈಃ** = ಧಾರ್ಮಿಕರಾದ **ಸದ್ಭಿಃ** = ಸಜ್ಜನರಿಂದ **ಉಜ್ಝಿತಾ** = ರಹಿತವಾದ **ರತ್ನಹೀನಾ** = ರತ್ನಹೀನವಾದ **ಕೇವಲಾ ಇಯಮ್ ಮಹೀ** = ಕೇವಲ ಮಣ್ಣಾಗಿ ಉಳಿದ ಈ ಭೂಮಿಯು **ಪಾಂಡವೈಃ** = ಪಾಂಡವರಿಂದ **ಭುಜ್ಯತಾಮ್** = ಅನುಭವಿಸಲ್ಪಡಲಿ.

**ತಾತ್ಪರ್ಯ** :- ಚಂದ್ರಸೂರ್ಯರಿಗೆ ಸಮಾನರಾದ ಶೂರರಾದ ಧಾರ್ಮಿಕರಾದ ಸಜ್ಜನರಿಂದ ರಹಿತವಾದ ರತ್ನಹೀನವಾದ ಕೇವಲ ಮಣ್ಣಿನ ರೂಪದಲ್ಲಿರುವ ಈ ಭೂಮಿಯನ್ನು ಪಾಂಡವರು ಅನುಭವಿಸಲಿ.

**ಇತ್ಯುಕ್ತವತ್ಯೇವ ನೃಪೇ ಸುರೇಶೈಃ**
**ಪ್ರಸೂನವೃಷ್ಟಿರ್ವಿಹಿತಾ ಪಪಾತ ।**
**ತಾಮೇವ ಬುದ್ಧಿಂ ಧೃತರಾಷ್ಟ್ರಸೂನೋಃ**
**ಕೃತ್ವಾ ದೃಢಾಂ ಪಾತಯಿತುಂ ತಮೋಽಂಧೇ ॥ ೧೦೮ ॥**

ಪದಚ್ಛೇದ :- ಇತಿ, ಉಕ್ತವತಿ, ಏವ, ನೃಪೇ, ಸುರೇಶೈಃ, ಪ್ರಸೂನವೃಷ್ಟಿಃ, ವಿಹಿತಾ, ಪಪಾತ । ತಾಮ್, ಏವ, ಬುದ್ಧಿಮ್, ಧೃತರಾಷ್ಟ್ರಸೂನೋಃ, ಕೃತ್ವಾ, ದೃಢಾಮ್, ಪಾತಯಿತುಮ್, ತಮಃ, ಅಂಧೇ ॥ ೧೦೮ ॥

**ಅನ್ವಯಾರ್ಥ** :- **ಇತಿ** = ಈ ರೀತಿಯಾಗಿ **ನೃಪೇ** = ರಾಜನಾದ ದುರ್ಯೋಧನನು **ಉಕ್ತವತ್ಯೇವ** = ಹೇಳುತ್ತಿರಲು **ಸುರೇಶೈಃ** = ದೇವತೆಗಳಿಂದ **ಪ್ರಸೂನವೃಷ್ಟಿಃ** = ಹೂಮಳೆಯು **ಪಪಾತ** = ಬಿದ್ದಿತು **ತಮೋಽಂಧೇ** = ಅಂಧಂತಮಸ್ಸಿನಲ್ಲಿ **ಪಾತಯಿತುಮ್** = ಆ ದುರ್ಯೋಧನನನ್ನು ಬೀಳಿಸಲು **ಧೃತರಾಷ್ಟ್ರಸೂನೋಃ** = ದುರ್ಯೋಧನನಿಗೆ **ತಾಮೇವ** = ಅದೇ **ಬುದ್ಧಿಮ್** = ಬುದ್ಧಿಯನ್ನು **ದೃಢಾಮ್** = ದೃಢವಾಗಿ **ಕೃತ್ವಾ** = ಮಾಡಿ.

**ತಾತ್ಪರ್ಯ** :- ಈ ರೀತಿಯಾಗಿ ದುರ್ಯೋಧನನು ಹೇಳುತ್ತಿರಲು ದೇವತೆಗಳು ಹೂವುಮಳೆಗರೆದರು. ಇದು ದುರ್ಯೋಧನನಿಗೆ ಅದೇ ಪಾಪಬುದ್ಧಿಯನ್ನು ಇನ್ನೂ ದೃಢವಾಗಿಸಿ ಅಂಧಂತಮಸ್ಸಿನಲ್ಲಿ ಬೀಳಿಸುವ ಉದ್ದೇಶದಿಂದ ಕೂಡಿತ್ತು.

**ಸಂಭಾವಯತ ಆತ್ಮಾನಂ ವಾಸುದೇವಂ ವಿನಿಂದತಃ ।**
**ತತ್ಪರಾಂಶ್ಚ ಕಥಂ ನ ಸ್ಯಾತ್ ತಮೋಽಂತೇ ಚ ವಿಶೇಷತಃ ॥ ೧೦೯ ॥**

ಪದಚ್ಛೇದ :- ಸಂಭಾವಯತಃ, ಆತ್ಮಾನಮ್, ವಾಸುದೇವಮ್, ವಿನಿಂದತಃ । ತತ್ಪರಾನ್, ಚ, ಕಥಮ್, ನ, ಸ್ಯಾತ್, ತಮಃ, ಅಂತೇ, ಚ, ವಿಶೇಷತಃ ॥ ೧೦೯ ॥

**ಅನ್ವಯಾರ್ಥ** :- **ವಿಶೇಷತಃ** = ವಿಶೇಷವಾಗಿ **ಅಂತೇ** = ಮರಣ ಕಾಲದಲ್ಲಿ **ಆತ್ಮಾನಮ್** = ತನ್ನನ್ನು **ಸಂಭಾವಯತಃ** = ಹೊಗಳಿಕೊಳ್ಳುವ **ವಾಸುದೇವಮ್** = ಕೃಷ್ಣನನ್ನು **ಚ** = ಮತ್ತು **ತತ್ಪರಾನ್** = ಅವನ ಭಕ್ತರನ್ನು **ವಿನಿಂದತಃ** = ನಿಂದಿಸುತ್ತಿರುವ ದುರ್ಯೋಧನನಿಗೆ **ತಮಃ** = ತಮಸ್ಸು **ಕಥಂ ನ ಸ್ಯಾತ್** = ಹೇಗೆ ಆಗದಿದ್ದೀತು ?

**ತಾತ್ಪರ್ಯ** :- ದುರ್ಯೋಧನನು ವಿಶೇಷವಾಗಿ ಮರಣಕಾಲದಲ್ಲಿ ತನ್ನನ್ನು ಪ್ರಶಂಸೆ ಮಾಡಿಕೊಳ್ಳುತ್ತಿದ್ದಾನೆ. ಕೃಷ್ಣನನ್ನು ಮತ್ತು ಅವನ ಭಕ್ತರನ್ನು ನಿಂದಿಸುತ್ತಿದ್ದಾನೆ. ಅಂಥವನಿಗೆ ತಮಸ್ಸು ಹೇಗೆ ಆಗದೇ ಇದ್ದೀತು ?

**ಯದೈಕೈಕಮಲಂ ತತ್ರ ದುಃಖಾಧಿಕ್ಯಂ ಸಮುಚ್ಚಯಾತ್ ।**
**ಇತಿ ತತ್ ಕಾರಯಿತ್ವೇಶ ಆಹ ಮೋಘಂ ತವಾಖಿಲಮ್ ॥ ೧೧೦ ॥**

ಪದಚ್ಛೇದ :- ಯದಾ, ಏಕೈಕಮ್, ಅಲಮ್, ತತ್ರ, ದುಃಖಾಧಿಕ್ಯಮ್, ಸಮುಚ್ಚಯಾತ್ । ಇತಿ, ತತ್, ಕಾರಯಿತ್ವಾ, ಈಶಃ, ಆಹ, ಮೋಘಮ್, ತವ, ಅಖಿಲಮ್ ॥ ೧೧೦ ॥

**ಅನ್ವಯಾರ್ಥ :-** **ಯದಾ** = ಯಾವಾಗ **ಏಕೈಕಮ್** = ಆತ್ಮಪ್ರಶಂಸೆ ಕೃಷ್ಣನಿಂದೆ ಕೃಷ್ಣಭಕ್ತರ ನಿಂದೆ ಇವುಗಳಲ್ಲಿ ಒಂದೊಂದೂ **ಅಲಮ್** = ತಮಃಪ್ರಾಪ್ತಿಗೆ ಸಾಕು **ಸಮುಚ್ಚಯಾತ್** = ಮೂರರಿಂದಲೂ ತಮಸ್ಸು ಎಂದು ಏನು ಹೇಳಬೇಕು ? **ತತ್ರ** = ಆ ತಮಸ್ಸಿನಲ್ಲಿ **ದುಃಖಾಧಿಕ್ಯಮ್** = ದುಃಖ ಹೆಚ್ಚಾಗಿರುವುದು **ಇತಿ** = ಎಂಬ ಅಭಿಪ್ರಾಯದಿಂದ ಶ್ರೀಕೃಷ್ಣನು **ತತ್** = ಆ ಮೂರನ್ನು **ಕಾರಯಿತ್ವಾ** = ಆ ದುರ್ಯೋಧನನಿಂದ ಮಾಡಿಸಿ **ತವ** = ನಿನ್ನ **ಅಖಿಲಮ್** = ಯಜ್ಞಾದಿಗಳೆಲ್ಲವೂ **ಮೋಘಮ್** = ವ್ಯರ್ಥವು ಎಂದು **ಆಹ** = ಹೇಳಿದನು.

**ತಾತ್ಪರ್ಯ :-** ಆತ್ಮಪ್ರಶಂಸೆ, ಕೃಷ್ಣನಿಂದೆ, ಕೃಷ್ಣಭಕ್ತರ ನಿಂದೆ, ಇವುಗಳಲ್ಲಿ ಒಂದೊಂದೂ ತಮಃಪ್ರಾಪ್ತಿಗೆ ಸಾಕು. ಮೂರರಿಂದಲೂ ತಮಸ್ಸು ಎಂದು ಏನು ಹೇಳಬೇಕು ? ತಮಸ್ಸಿನಲ್ಲಿ ದುಃಖ ಹೆಚ್ಚಾಗಿರುವುದು ಎಂಬ ಅಭಿಪ್ರಾಯ ದಿಂದ ಶ್ರೀಕೃಷ್ಣನು ದುರ್ಯೋಧನನಿಂದ ಆ ಮೂರನ್ನು ಮಾಡಿಸಿ ನಿನ್ನ ಯಜ್ಞಾದಿಗಳೆಲ್ಲವೂ ವ್ಯರ್ಥ ಎಂದು ಹೇಳಿದನು.

**ನೃಶಂಸಸ್ಯ ಕೃತಘ್ನಸ್ಯ ಗುಣವದ್ದ್ವೇಷಿಣಃ ಸದಾ ।**
**ಯದಿ ಧರ್ಮಫಲಂ ಧ್ವಾಂತಂ ಸೂರ್ಯವತ್ ಸ್ಯಾತ್ ಪ್ರಕಾಶಕಮ್ ॥ ೧೧೧ ॥**

ಪದಚ್ಛೇದ :- ನೃಶಂಸಸ್ಯ, ಕೃತಘ್ನಸ್ಯ, ಗುಣವದ್ದ್ವೇಷಿಣಃ, ಸದಾ । ಯದಿ, ಧರ್ಮಫಲಮ್, ಧ್ವಾಂತಮ್, ಸೂರ್ಯವತ್, ಸ್ಯಾತ್, ಪ್ರಕಾಶಕಮ್ ॥ ೧೧೧ ॥

**ಅನ್ವಯಾರ್ಥ :-** **ನೃಶಂಸಸ್ಯ** = ಹಿಂಸಕನಾದ **ಕೃತಘ್ನಸ್ಯ** = ಕೃತಘ್ನನೂ ಆದ **ಸದಾ** = ಯಾವಾಗಲೂ **ಗುಣವದ್ದ್ವೇಷಿಣಃ** = ಗುಣವಂತರನ್ನು ದ್ವೇಷಿಸುವ ನಿನಗೆ **ಯದಿ** = ಒಂದು ವೇಳೆ **ಧರ್ಮಫಲಮ್** = ಪುಣ್ಯಫಲ

ದೊರೆಯುವುದಾದರೆ **ಧ್ವಾಂತವ್** = ಕತ್ತಲೆಯು **ಸೂರ್ಯವತ್** = ಸೂರ್ಯನಂತೆ **ಪ್ರಕಾಶಕಮ್** = ಪ್ರಕಾಶಕವು **ಸ್ಯಾತ್** = ಆಗಬೇಕಾದೀತು.

**ತಾತ್ಪರ್ಯ :-** ಹಿಂಸಕನಾದ ಕೃತಘ್ನನೂ ಆದ ಯಾವಾಗಲೂ ಗುಣವಂತರನ್ನು ದ್ವೇಷಿಸುವ ನಿನಗೆ ಒಂದು ವೇಳೆ ಪುಣ್ಯಫಲ ದೊರೆಯುವುದಾದರೆ ಕತ್ತಲೆಯು ಸೂರ್ಯನಂತೆ ಪ್ರಕಾಶಕವಾಗಬೇಕಾದೀತು.

**ವದನ್ ಪುನಃಪುನರಿದಂ ಧರ್ಮತೋ ಹತ ಇತ್ಯಪಿ ।**
**ಖ್ಯಾಪಯಾಮಾಸ ಭಗವಾನ್ ಜನೇ ನಿಜಜನೇಷ್ಟದಃ ॥ ೧೧೨ ॥**

**ಪದಚ್ಛೇದ :-** ವದನ್, ಪುನಃ, ಪುನಃ, ಇದಮ್, ಧರ್ಮತಃ, ಹತಃ, ಇತಿ, ಅಪಿ । ಖ್ಯಾಪಯಾಮಾಸ, ಭಗವಾನ್, ಜನೇ, ನಿಜಜನೇಷ್ಟದಃ ॥ ೧೧೨ ॥

**ಅನ್ವಯಾರ್ಥ :-** **ನಿಜಜನೇಷ್ಟದಃ** = ತನ್ನ ಭಕ್ತರಿಗೆ ಇಷ್ಟವನ್ನು ಕೊಡುವ **ಭಗವಾನ್** = ಶ್ರೀಕೃಷ್ಣನು ಪುನಃ, **ಪುನಃ** = ಮತ್ತೆ ಮತ್ತೆ **ವದನ್** = ಅದನ್ನೇ ಹೇಳುತ್ತಾ **ಧರ್ಮತಃ** = ಧರ್ಮದಿಂದ **ಹತಃ** = ದುರ್ಯೋಧನನು ಹತನಾಗಿದ್ದಾನೆ **ಇತ್ಯಪಿ** = ಎಂಬುದನ್ನೂ **ಜನೇ** = ಲೋಕಕ್ಕೆ **ಖ್ಯಾಪಯಾಮಾಸ** = ಪ್ರಸಿದ್ಧಿಪಡಿಸಿದನು.

**ತಾತ್ಪರ್ಯ :-** ತನ್ನ ಭಕ್ತರಿಗೆ ಇಷ್ಟವನ್ನು ಕೊಡುವ ಶ್ರೀಕೃಷ್ಣನು ಹೇಳಿದ್ದನ್ನೇ ಪುನಃ ಹೇಳುತ್ತಾ ದುರ್ಯೋಧನನು ಧರ್ಮದಿಂದ ಹತನಾಗಿದ್ದಾನೆಂಬುದನ್ನು ಲೋಕದಲ್ಲಿ ಪ್ರಸಿದ್ಧಿಪಡಿಸಿದನು.

**ಪ್ರಖ್ಯಾಪಿತೇ ವಾಸುದೇವೇನ ಧರ್ಮೇ**
**ಸತಾಂ ಸರ್ವೇಷಾಂ ಹೃದ್ಯಮಾಸೀತ್ ಸಮಸ್ತಮ್ ।**
**ಹತಂ ಚ ಧರ್ಮೇಣ ನೃಪಂ ವ್ಯಜಾನನ್**
**ಪಾಪೋऽಯಮಿತ್ಯೇವ ಚ ನಿಶ್ಚಿತಾರ್ಥಾಃ ॥ ೧೧೩ ॥**

**ಪದಚ್ಛೇದ :-** ಪ್ರಖ್ಯಾಪಿತೇ, ವಾಸುದೇವೇನ, ಧರ್ಮೇ, ಸತಾಮ್, ಸರ್ವೇಷಾಮ್, ಹೃದ್ಯಮ್, ಆಸೀತ್, ಸಮಸ್ತಮ್ । ಹತಮ್, ಚ, ಧರ್ಮೇಣ, ನೃಪಮ್, ವ್ಯಜಾನನ್, ಪಾಪಃ, ಅಯಮ್, ಏವ, ಚ, ನಿಶ್ಚಿತಾರ್ಥಾಃ ॥ ೧೧೩ ॥

**ಅನ್ವಯಾರ್ಥ** :- **ವಾಸುದೇವೇನ** = ಶ್ರೀಕೃಷ್ಣನಿಂದ **ಧರ್ಮೇ** = ಧರ್ಮವು **ಪ್ರಖ್ಯಾಪಿತೇ** = ತಿಳಿಸಲ್ಪಡುತ್ತಿರಲು **ಸರ್ವೇಷಾಮ್** = ಎಲ್ಲಾ **ಸತಾಮ್** = ಸಜ್ಜನರಿಗೆ **ಸಮಸ್ತಮ್** = ಎಲ್ಲವೂ **ಹೃದ್ಯಮ್** = ಹೃದ್ಯವಾಗಿ **ಆಸೀತ್** = ಆಯಿತು **ಅಯಮ್** = ಈ ದುರ್ಯೋಧನನು **ಪಾಪಃ** = ಪಾಪಿಯು **ಇತ್ಯೇವ** = ಎಂದೇ **ನಿಶ್ಚಿತಾರ್ಥಾಃ** = ನಿಶ್ಚಯವುಳ್ಳವರಾಗಿ **ನೃಪಮ್** = ರಾಜನಾದ ದುರ್ಯೋಧನನನ್ನು **ಧರ್ಮೇಣ** = ಧರ್ಮದಿಂದ **ಹತಮ್** = ಹತನಾಗಿದ್ದಾನೆಂದು **ವ್ಯಜಾನನ್** = ತಿಳಿದರು.

**ತಾತ್ಪರ್ಯ** :- ಶ್ರೀಕೃಷ್ಣನು ಧರ್ಮವನ್ನು ತಿಳಿಸಿದಾಗ ಸಜ್ಜನರಿಗೆ ಎಲ್ಲವೂ ಹೃದ್ಯವಾಯಿತು. ಈ ದುರ್ಯೋಧನನು ಪಾಪಿಯು ಎಂದೇ ನಿಶ್ಚಯ ಮಾಡಿ ಅವನನ್ನು ಧರ್ಮದಿಂದಲೇ ಕೊಂದಿದ್ದಾರೆಂದು ಎಲ್ಲರೂ ತಿಳಿದರು.

**ಯುಧಿಷ್ಠಿರೋಽಪಾಯದರ್ಶೀ ಸದೈವ**
**ಸಸಂಶಯೋಽಭೂತ್ ಸುಮನೋಽಭಿವೃಷ್ಟ್ಯಾ ।**
**ಸ್ನೇಹಾದ್ ದ್ರೌಣಿಃ ಸಂಜಯೋ ರೌಹಿಣೇಯೋ**
**ದೌರ್ಯೋಧನಾತ್ ಪಾಪಮಿತ್ಯೇವ ಚೋಚುಃ ॥ ೧೧೪ ॥**

ಪದಚ್ಛೇದ :- **ಯುಧಿಷ್ಠಿರಃ, ಅಪಾಪದರ್ಶೀ, ಸದಾ, ಏವ, ಸಸಂಶಯಃ, ಅಭೂತ್, ಸುಮನೋಭಿವೃಷ್ಟ್ಯಾ । ಸ್ನೇಹಾತ್, ದ್ರೌಣಿಃ, ಸಂಜಯಃ, ರೌಹಿಣೇಯಃ, ದೌರ್ಯೋಧನಾತ್, ಪಾಪಮ್, ಇತಿ, ಏವ, ಚ, ಊಚುಃ ॥ ೧೧೪ ॥**

**ಅನ್ವಯಾರ್ಥ** :- **ಯುಧಿಷ್ಠಿರಃ** = ಧರ್ಮರಾಜನು **ಅಪಾಪದರ್ಶೀ** = ದುರ್ಯೋಧನನಲ್ಲಿ ಪಾಪವನ್ನು ಕಾಣದವನಾಗಿ **ಸುಮನೋಭಿವೃಷ್ಟ್ಯಾ** = ಪುಷ್ಪವೃಷ್ಟಿಯಿಂದ **ಸದೈವ** = ಯಾವಾಗಲೂ **ಸಸಂಶಯಃ** = ಸಂಶಯ ಯುಕ್ತನೇ **ಅಭೂತ್** = ಆದನು **ದೌರ್ಯೋಧನಾತ್ ಸ್ನೇಹಾತ್** = ದುರ್ಯೋಧನನ ಮೇಲಿನ ಸ್ನೇಹದಿಂದ **ದ್ರೌಣಿಃ** = ಅಶ್ವತ್ಥಾಮನು **ಸಂಜಯಃ** = ಸಂಜಯನು **ರೌಹಿಣೇಯಃ** = ಬಲರಾಮನೂ **ಪಾಪಮಿತ್ಯೇವ** = ಅಧರ್ಮವೆಂದೇ **ಊಚುಃ** = ಹೇಳಿದರು.

**ತಾತ್ಪರ್ಯ** :- ಧರ್ಮರಾಜನು ದುರ್ಯೋಧನನಲ್ಲಿ ಪಾಪವನ್ನು ಕಾಣದವನಾಗಿ ಮತ್ತು ಅವನ ಮೇಲೆ ಪುಷ್ಪವೃಷ್ಟಿಯಿಂದಲೂ ಸದಾ

ಸಂಶಯಯುಕ್ತನೇ ಆದನು. ದುರ್ಯೋಧನನ ಮೇಲಿನ ಸ್ನೇಹದಿಂದ ಅಶ್ವತ್ಥಾಮನು, ಸಂಜಯನು, ಬಲರಾಮನೂ ಈ ವಧೆಯನ್ನು ಅಧರ್ಮ ಎಂದೇ ಹೇಳಿದರು.

**ತತಃ ಕೃಷ್ಣಃ ಪಾಂಡುಪಾಂಚಾಲಕೈಸ್ತೈ-**
**ರ್ಭೃಶಂ ನದದ್ಭಿರ್ಹೃಷಿತೈಃ ಸಮೇತಃ ।**
**ಯಯೌ ವಿರಿಂಚೇಶಸುರೇದ್ರಮುಖ್ಯೈಃ**
**ಸಂಪೂಜಿತಸ್ತೈಶ್ಚ ರಣಾಂಗಣಾತ್ ಸ್ಮಯನ್ ॥ ೧೧೫ ॥**

ಪದಚ್ಛೇದ :- ತತಃ, ಕೃಷ್ಣಃ, ಪಾಂಡುಪಾಂಚಾಲಿಕೈಃ, ತೈಃ, ಭೃಶಮ್, ನದದ್ಭಿಃ, ಹೃಷಿತೈಃ, ಸಮೇತಃ । ಯಯೌ, ವಿರಿಂಚೇಶಸುರೇಂದ್ರಮುಖ್ಯೈಃ, ಸಂಪೂಜಿತಃ, ತೈಃ, ಚ, ರಣಾಂಗಣಾತ್, ಸ್ಮಯನ್ ॥ ೧೧೫ ॥

**ಅನ್ವಯಾರ್ಥ** :- **ತತಃ** = ಅನಂತರ **ಕೃಷ್ಣಃ** = ಶ್ರೀಕೃಷ್ಣನು **ಭೃಶಮ್** = ಅತ್ಯಂತವಾಗಿ **ಹೃಷಿತೈಃ** = ಸಂತುಷ್ಟರಾದ **ನದದ್ಭಿಃ** = ಗರ್ಜನಮಾಡುತ್ತಿರುವ **ತೈಃ** = ಆ **ಪಾಂಡುಪಾಂಚಾಲಿಕೈಃ** = ಪಾಂಡವ ಪಾಂಚಾಲಸೈನಿಕರಿಂದ **ಸಮೇತಃ** = ಕೂಡಿದವನಾಗಿ **ವಿರಿಂಚೇಶಸುರೇಂದ್ರಮುಖ್ಯೈಃ** = ಬ್ರಹ್ಮ, ರುದ್ರ ಇಂದ್ರಾದಿಗಳಿಂದ **ಸಂಪೂಜಿತಃ** = ಪೂಜಿತನಾಗಿ **ಸ್ಮಯನ್** = ನಗುತ್ತಾ **ರಣಾಂಗಣಾತ್** = ಯುದ್ಧರಂಗದಿಂದ **ಯಯೌ** = ಹೊರಟನು.

**ತಾತ್ಪರ್ಯ** :- ಅನಂತರ ಶ್ರೀಕೃಷ್ಣನು ಸಂತುಷ್ಟರಾಗಿ ಗರ್ಜನ ಮಾಡುತ್ತಿರುವ ಪಾಂಡವ, ಪಾಂಚಾಲಸೈನಿಕರೊಡನೆ ಬ್ರಹ್ಮ, ರುದ್ರ, ಇಂದ್ರಾದಿಗಳಿಂದ ಪೂಜಿತನಾಗಿ ನಗುತ್ತಾ ಯುದ್ಧರಂಗದಿಂದ ಹೊರಟನು.

**ತತಃ ಶ್ರುತ್ವಾ ಸಂಜಯಾದ್ ದುಃಖತಪ್ತಂ**
**ಸಂಬೋಧಯಿಷ್ಯನ್ ಪಿತರಂ ಯುಯುತ್ಸುಃ ।**
**ಕೃಷ್ಣಸ್ಯ ರಾಜ್ಞಶ್ಚ ಮತೇನ ಯಾತೋ**
**ಜಗಾಮ ಚಾನ್ವೇವ ಜನಾರ್ದನಶ್ಚ ॥ ೧೧೬ ॥**

ಪದಚ್ಛೇದ :- ತತಃ, ಶ್ರುತ್ವಾ, ಸಂಜಯಾತ್, ದುಃಖತಪ್ತಮ್, ಸಂಬೋಧಯಿಷ್ಯನ್, ಪಿತರಮ್, ಯುಯುತ್ಸುಃ । ಕೃಷ್ಣಸ್ಯ, ರಾಜ್ಞಃ, ಚ, ಮತೇನ, ಯಾತಃ, ಜಗಾಮ, ಚ, ಅನು, ಏವ, ಜನಾರ್ದನಃ, ಚ ॥ ೧೧೬ ॥

**ಅನ್ವಯಾರ್ಥ** :- **ತತಃ** = ಅನಂತರ **ಸಂಜಯಾತ್** = ಸಂಜಯನಿಂದ **ಶ್ರುತ್ವಾ** = ಎಲ್ಲ ವೃತ್ತಾಂತವನ್ನು ಕೇಳಿ **ದುಃಖತಪ್ತಮ್** = ದುಃಖತಪ್ತನಾದ **ಪಿತರಮ್** = ತಂದೆಯಾದ ಧೃತರಾಷ್ಟ್ರನನ್ನು **ಸಂಬೋಧಯಿಷ್ಯನ್** = ಸಂತೈಸಲು **ಯುಯುತ್ಸುಃ** = ಯುಯುತ್ಸು **ಕೃಷ್ಣಸ್ಯ** = ಕೃಷ್ಣನ **ರಾಜ್ಞಶ್ಚ** = ಧರ್ಮರಾಜನ **ಮತೇನ** = ಅನುಮತಿಯಿಂದ **ಯಾತಃ** = ಹಸ್ತಿನಾವತಿಗೆ ಹೊರಟನು **ಅನ್ವೇವ** = ಅವನನ್ನು ಹಿಂಬಾಲಿಸಿ **ಜನಾರ್ದನಶ್ಚ** = ಶ್ರೀಕೃಷ್ಣನೂ ಕೂಡ **ಜಗಾಮ** = ಹೊರಟನು.

**ತಾತ್ಪರ್ಯ** :- ಅನಂತರ ಸಂಜಯನಿಂದ ಎಲ್ಲ ವೃತ್ತಾಂತವನ್ನು ಕೇಳಿ ದುಃಖತಪ್ತನಾದ ತಂದೆಯಾದ ಧೃತರಾಷ್ಟ್ರನನ್ನು ಸಂತೈಸಲು ಕೃಷ್ಣನ ಹಾಗೂ ಧರ್ಮರಾಜನ ಅನುಮತಿಯಿಂದ ಯುಯುತ್ಸು ಹಸ್ತಿನಾವತಿಗೆ ಹೊರಟನು. ಅವನನ್ನು ಹಿಂಬಾಲಿಸಿ ಶ್ರೀಕೃಷ್ಣನೂ ಕೂಡ ಹೊರಟನು.

**ಧರ್ಮಯುಕ್ತೈಶ್ಚ ತತ್ತ್ವಾರ್ಥೈರ್ಲೋಕವೃತ್ತಾನುದರ್ಶಕೈಃ ।**
**ವಾಕ್ಯೈ ರಾಜಾನಮಾಶ್ವಾಸ್ಯ ಪ್ರಾಯಾತ್ ಪಾರ್ಥಾನ್ ಪುನರ್ಹರಿಃ ॥೧೧೭॥**

ಪದಚ್ಛೇದ :- **ಧರ್ಮಯುಕ್ತೈಃ, ಚ, ತತ್ತ್ವಾರ್ಥೈಃ, ಲೋಕವೃತ್ತಾನುದರ್ಶಕೈಃ । ವಾಕ್ಯೈಃ, ರಾಜಾನಮ್, ಆಶ್ವಾಸ್ಯ, ಪ್ರಾಯಾತ್, ಪಾರ್ಥಾನ್, ಪುನಃ, ಹರಿಃ ॥೧೧೭॥**

**ಅನ್ವಯಾರ್ಥ** :- **ಧರ್ಮಯುಕ್ತೈಃ** = ಧರ್ಮಶಾಸ್ತ್ರಯುಕ್ತವಾದ **ತತ್ತ್ವಾರ್ಥೈಃ** = ತತ್ತ್ವಾರ್ಥಗಳಿಂದ ಕೂಡಿದ **ಲೋಕವೃತ್ತಾನುದರ್ಶಕೈಃ** = ಲೋಕದಲ್ಲಿರುವ ಉದಾಹರಣೆಗಳನ್ನು ತೋರಿಸುವ **ವಾಕ್ಯೈಃ** = ವಾಕ್ಯಗಳಿಂದ **ರಾಜಾನಮ್** = ಧೃತರಾಷ್ಟ್ರನನ್ನು **ಆಶ್ವಾಸ್ಯ** = ಸಮಾಧಾನ ಪಡಿಸಿ **ಪುನಃ** = ಮತ್ತೆ **ಹರಿಃ** = ಶ್ರೀಕೃಷ್ಣನು **ಪಾರ್ಥಾನ್** = ಪಾಂಡವರ ಹತ್ತಿರ **ಪ್ರಾಯಾತ್** = ಹೊರಟನು.

**ತಾತ್ಪರ್ಯ** :- ಶ್ರೀಕೃಷ್ಣನು ಧರ್ಮಶಾಸ್ತ್ರಯುಕ್ತವಾದ ತತ್ತ್ವಾರ್ಥಗಳಿಂದ ಕೂಡಿದ ಲೋಕದಲ್ಲಿ ಕೆಲವೊಮ್ಮೆ ತಂದೆ ತಾಯಿಗಳಿಗಿಂತ ಮಕ್ಕಳು ಮೊದಲು ಸಾಯುತ್ತಾರೆ ಎಂಬ ಲೋಕರೀತಿಯನ್ನು ತೋರುವ ಮಾತುಗಳಿಂದ ಧೃತರಾಷ್ಟ್ರನನ್ನು ಸಮಾಧಾನ ಪಡಿಸಿ ಮತ್ತೆ ಪಾಂಡವರ ಹತ್ತಿರ ಹೊರಟನು.

**ಕಾಲಾನುಸಾರತೋ ದೈವಾಂಶ್ಚೋಪಸಂಹರ್ತುಮಚ್ಯುತಃ ।**
**ಯಯೌ ಸಪಾರ್ಥಶೈನೇಯಃ ಕುರೂಣಾಂ ಶಿಬಿರಂ ನಿಶಿ ॥ ೧೧೮ ॥**

ಪದಚ್ಛೇದ :– ಕಾಲಾನುಸಾರತಃ, ದೈವಾನ್, ಚ, ಉಪಸಂಹರ್ತುಮ್, ಅಚ್ಯುತಃ । ಯಯೌ, ಸಪಾರ್ಥಶೈನೇಯಃ, ಕುರೂಣಾಮ್, ಶಿಬಿರಮ್, ನಿಶಿ ॥ ೧೧೮ ॥

**ಅನ್ವಯಾರ್ಥ** :- **ಕಾಲಾನುಸಾರತಃ** = ಕಾಲಾನುಸಾರವಾಗಿ **ದೈವಾನ್** = ದೇವಾಂಶಸಂಭೂತರಾದವರನ್ನು **ಉಪಸಂಹರ್ತುಮ್** = ಸಂಹರಿಸಲು **ಅಚ್ಯುತಃ** = ಶ್ರೀಕೃಷ್ಣನು **ಸಪಾರ್ಥಶೈನೇಯಃ** = ಅರ್ಜುನ, ಸಾತ್ಯಕಿಗಳಿಂದ ಕೂಡಿ **ನಿಶಿ** = ರಾತ್ರಿಯಲ್ಲಿ **ಕುರೂಣಾಮ್** = ಕೌರವರ **ಶಿಬಿರಮ್** = ಶಿಬಿರವನ್ನು ಕುರಿತು **ಯಯೌ** = ಹೊರಟನು.

**ತಾತ್ಪರ್ಯ** :- ಕಾಲಾನುಸಾರವಾಗಿ ದೇವಾಂಶಸಂಭೂತರಾದವರನ್ನು ಸಂಹರಿಸಲು ಶ್ರೀಕೃಷ್ಣನು ಅರ್ಜುನ, ಸಾತ್ಯಕಿಗಳಿಂದ ಕೂಡಿಕೊಂಡು ರಾತ್ರಿಯಲ್ಲಿ ಕೌರವರ ಶಿಬಿರಕ್ಕೆ ಹೊರಟನು.

### ಅಶ್ವತ್ಥಾಮನಿಗೆ ಸೇನಾಧಿಪತ್ಯ

**ತದೈವ ಹಾರ್ದಿಕ್ಯಕೃಪಾನ್ವಿತೋಽಯಾತ್**
**ಸುಯೋಧನಂ ದ್ರೌಣಿರಮುಂ ಶಯಾನಮ್ ।**
**ಪ್ರಭಗ್ನಸಕ್ಥಿಂ ಚ ಸೃಗಾಲಭೂತೈಃ**
**ಸಂಭಕ್ಷ್ಯಮಾಣಂ ದದೃಶೇ ಶ್ವಸಂತಮ್ ॥ ೧೧೯ ॥**

ಪದಚ್ಛೇದ :– ತದಾ, ಏವ, ಹಾರ್ದಿಕ್ಯಕೃಪಾನ್ವಿತಃ, ಅಯಾತ್, ಸುಯೋಧನಮ್, ದ್ರೌಣಿಃ, ಅಮುಮ್, ಶಯಾನಮ್ । ಪ್ರಭಗ್ನಸಕ್ಥಿಮ್, ಚ, ಸೃಗಾಲಭೂತೈಃ, ಸಂಭಕ್ಷ್ಯಮಾಣಮ್, ದದೃಶೇ, ಶ್ವಸಂತಮ್ ॥ ೧೧೯ ॥

**ಅನ್ವಯಾರ್ಥ** :- **ತದೈವ** = ಆಗಲೇ **ಹಾರ್ದಿಕ್ಯಕೃಪಾನ್ವಿತಃ** = ಕೃತವರ್ಮ ಕೃಪಾಚಾರ್ಯರಿಂದ ಕೂಡಿದ **ದ್ರೌಣಿಃ** = ಅಶ್ವತ್ಥಾಮನು **ಶಯಾನಮ್** = ಮಲಗಿರುವ **ಅಮುಮ್ ಸುಯೋಧನಮ್** = ಈ ದುರ್ಯೋಧನನ ಹತ್ತಿರ **ಅಯಾತ್** = ಹೊರಟನು **ಪ್ರಭಗ್ನಸಕ್ಥಿಮ್** = ತೊಡೆ ಮುರಿದ **ಚ** = ಮತ್ತು **ಸೃಗಾಲಭೂತೈಃ** = ನರಿ ಮುಂತಾದ ಪ್ರಾಣಿಗಳಿಂದ

**ಸಂಭಕ್ಷ್ಯಮಾಣಮ್** = ಕಚ್ಚಿಸಿಕೊಳ್ಳುತ್ತಿರುವ **ಶ್ವಸಂತಮ್** = ಉಸಿರಾಡುತ್ತಾ ಬಿದ್ದಿರುವುದನ್ನು **ದದೃಶೇ** = ನೋಡಿದನು.

**ತಾತ್ಪರ್ಯ** :- ಆಗಲೇ ಕೃತವರ್ಮ, ಕೃಪಾಚಾರ್ಯರಿಂದ ಕೂಡಿದ ಅಶ್ವತ್ಥಾಮನು ಮಲಗಿರುವ ದುರ್ಯೋಧನನ ಹತ್ತಿರ ಹೋದನು. ತೊಡೆಯನ್ನು ಮುರಿದುಕೊಂಡಿರುವ ನರಿ ಮುಂತಾದ ಪ್ರಾಣಿಗಳಿಂದ ಕಚ್ಚಿಸಿಕೊಳ್ಳುತ್ತಿರುವ ಹಾಗೂ ನೆಲದಲ್ಲಿ ಉಸಿರಾಡುತ್ತಾ ಬಿದ್ದಿರುವುದನ್ನು ನೋಡಿದನು.

**ಸ ದುಃಖಶೋಕಾಭಿಹತೋ ವಿನಿಂದ್ಯ**
**ಪಾರ್ಥಾನ್ ಮಯಾ ಭೂಪ ಕಿಮತ್ರ ಕಾರ್ಯಮ್ ।**
**ಇತ್ಯಾಹ ನಿಷ್ಪಾಂಡವತಾಂ ಕುರುಷ್ವೇ-**
**ತ್ಯಮುಂ ವ್ಯಧಾತ್ ಪಾಂಸ್ವಭಿಷೇಕಿಣಂ ನೃಪಃ ॥ ೧೨೦ ॥**

ಪದಚ್ಛೇದ :- ಸಃ, ದುಃಖಶೋಕಾಭಿಹತಃ, ವಿನಿಂದ್ಯ, ಪಾರ್ಥಾನ್, ಮಯಾ, ಭೂಪ, ಕಿಮ್, ಅತ್ರ, ಕಾರ್ಯಮ್ । ಇತಿ, ಆಹ, ನಿಷ್ಪಾಂಡವತಾಮ್, ಕುರುಷ್ವ, ಇತಿ, ಅಮುಮ್, ವ್ಯಧಾತ್, ಪಾಂಸ್ವಭಿಷೇಕಿಣಮ್, ನೃಪಃ ॥ ೧೨೦ ॥

**ಅನ್ವಯಾರ್ಥ** :- **ದುಃಖಶೋಕಾಭಿಹತಃ** = ದುಃಖಶೋಕಗಳಿಂದ ಸಂತಪ್ತನಾದ **ಸಃ** = ಆ ಅಶ್ವತ್ಥಾಮನು **ಪಾರ್ಥಾನ್** = ಪಾಂಡವರನ್ನು **ವಿನಿಂದ್ಯ** = ಚೆನ್ನಾಗಿ ನಿಂದಿಸಿ **ಭೂಪ** = ರಾಜನೇ **ಮಯಾ** = ನನ್ನಿಂದ **ಕಿಮತ್ರ ಕಾರ್ಯಮ್** = ಏನು ಮಾಡಲ್ಪಡಬೇಕು ? **ಇತಿ** = ಎಂದು **ಆಹ** = ಹೇಳಿದನು **ನಿಷ್ಪಾಂಡವತಾಮ್** = ಈ ಭೂಮಿಯನ್ನು ಪಾಂಡವರಹಿತರನ್ನಾಗಿ **ಕುರುಷ್ವ** = ಮಾಡು **ಇತಿ** = ಎಂದು ಹೇಳಿ **ಅಮುಮ್** = ಅಶ್ವತ್ಥಾಮನನ್ನು **ಪಾಂಸ್ವಭಿಷೇಕಿಣಮ್** = ಧೂಳಿನ ಅಭಿಷೇಕ ಉಳ್ಳವನನ್ನಾಗಿ **ವ್ಯಧಾತ್** = ಮಾಡಿದನು.

**ತಾತ್ಪರ್ಯ** :- ದುಃಖಶೋಕಗಳಿಂದ ಪೀಡಿತನಾದ ಅಶ್ವತ್ಥಾಮನು ಪಾಂಡವರನ್ನು ಚೆನ್ನಾಗಿ ನಿಂದಿಸಿ ಹೇ ರಾಜನೇ ನಾನೀಗ ಏನು ಮಾಡಲಿ ? ಎಂದನು. ಈ ಭೂಮಿಯು ಪಾಂಡವರಿಲ್ಲದಂತೆ ಆಗಬೇಕೆಂದು ಹೇಳಿ ದುರ್ಯೋಧನನು ಅಶ್ವತ್ಥಾಮನ ಮೇಲೆ ಧೂಳಿನ ಅಭಿಷೇಕ ಮಾಡಿದನು.

**ಉಚ್ಛಿದ್ಯ ಸಂತತಿಂ ಪಾಂಡೋಃ ಕೃತ್ವಾ ಸ್ವಕ್ಷೇತ್ರಸಂತತಿಮ್ ।**
**ತಯಾ ಭೂರಕ್ಷಣಹೃದಾ ಸೋಽಭಿಷಿಕ್ತಸ್ತಥೇತ್ಯಗಾತ್ ॥ ೧೨೧ ॥**

ಪದಚ್ಛೇದ :- **ಉಚ್ಛಿದ್ಯ, ಸಂತತಿಮ್, ಪಾಂಡೋಃ, ಕೃತ್ವಾ, ಸ್ವಕ್ಷೇತ್ರಸಂತತಿಮ್ । ತಯಾ, ಭೂರಕ್ಷಣಹೃದಾ, ಸಃ, ಅಭಿಷಕ್ತಃ, ತಥಾ, ಇತಿ, ಅಗಾತ್** ॥ ೧೨೧ ॥

**ಅನ್ವಯಾರ್ಥ** :- **ಪಾಂಡೋಃ** = ಪಾಂಡುವಿನ **ಸಂತತಿಮ್** = ಸಂತತಿಯನ್ನು **ಉಚ್ಛಿದ್ಯ** = ನಾಶಮಾಡಿ **ಸ್ವಕ್ಷೇತ್ರಸಂತತಿಮ್** = ತನ್ನ ಹೆಂಡತಿಯಲ್ಲಿ ಸಂತತಿಯನ್ನು **ಕೃತ್ವಾ** = ಮಾಡಿ **ತಯಾ** = ಆ ಸಂತತಿಯಿಂದ **ಭೂರಕ್ಷಣಹೃದಾ** = ರಾಜ್ಯಭಾರ ಮಾಡಿಸಬೇಕೆನ್ನುವ ಅಭಿಪ್ರಾಯದಿಂದ **ಸಃ** = ಆ ಅಶ್ವತ್ಥಾಮನು **ಅಭಿಷಿಕ್ತಃ** = ಅಭಿಷಿಕ್ತನಾದನು **ತಥಾ** = ಹಾಗೆಯೇ ಆಗಲಿ **ಇತಿ** = ಎಂದು ಹೇಳಿ **ಅಗಾತ್** = ಹೊರಟನು.

**ತಾತ್ಪರ್ಯ** :- ಪಾಂಡುವಿನ ಸಂತತಿಯನ್ನು ನಾಶಮಾಡಿ ತನ್ನ ಹೆಂಡತಿಯಲ್ಲಿ ಸಂತತಿಯನ್ನು ಬೆಳಿಸಿ ಆ ಸಂತತಿಯಿಂದ ರಾಜ್ಯಭಾರ ಮಾಡಿಸಬೇಕೆನ್ನುವ ಅಭಿಪ್ರಾಯದಿಂದ ದುರ್ಯೋಧನನು ಅಶ್ವತ್ಥಾಮನಿಗೆ ಅಭಿಷೇಕಗೈದನು. ಅಶ್ವತ್ಥಾಮನು ಹಾಗೆಯೇ ಆಗಲಿ ಎಂದು ಹೇಳಿ ಹೊರಟನು.

### ಸೌಪ್ತಿಕಪರ್ವ

**ಸ ಕೃಷ್ಣಭೀಮಪಾರ್ಥಾನಾಂ ಭಯಾದೇವ ಪುನರ್ವನಮ್ ।**
**ಕೃಪಸಾತ್ವತಸಂಯುಕ್ತೋ ವಿವೇಶ ಗಹನಂ ರಥೀ ॥ ೧೨೨ ॥**

ಪದಚ್ಛೇದ :- ಸಃ, ಕೃಷ್ಣಭೀಮಪಾರ್ಥಾನಾಮ್, ಭಯಾತ್, ಏವ, ಪುನಃ, ವನಮ್ । ಕೃಪಸಾತ್ವತಸಂಯುಕ್ತಃ, ವಿವೇಶ, ಗಹನಮ್, ರಥೀ ॥ ೧೨೨ ॥

**ಅನ್ವಯಾರ್ಥ** :- **ಸಃ** = ಅಶ್ವತ್ಥಾಮನು **ಕೃಷ್ಣಭೀಮಪಾರ್ಥಾನಾಮ್** = ಶ್ರೀಕೃಷ್ಣ, ಭೀಮ, ಅರ್ಜುನರ **ಭಯಾದೇವ** = ಭಯದಿಂದಲೇ **ಕೃಪಸಾತ್ವತಸಂಯುಕ್ತಃ** = ಕೃಪ, ಕೃತವರ್ಮರಿಂದ ಕೂಡಿಕೊಂಡು **ರಥೀ** = ರಥವನ್ನೇರಿ **ಪುನಃ** = ಮತ್ತೆ **ಗಹನಮ್** = ದಟ್ಟವಾದ **ವನಮ್** = ಕಾಡನ್ನು **ವಿವೇಶ** = ಪ್ರವೇಶಿಸಿದನು.

ತಾತ್ಪರ್ಯ :- ಅಶ್ವತ್ಥಾಮನು ಶ್ರೀಕೃಷ್ಣ, ಭೀಮ, ಅರ್ಜುನ ಭಯದಿಂದಲೇ ಕೃಪ, ಕೃತವರ್ಮರಿಂದ ಕೂಡಿಕೊಂಡು ರಥವನ್ನೇರಿ ಪುನಃ ದಟ್ಟವಾದ ಕಾಡನ್ನು ಪ್ರವೇಶಿಸಿದನು.

**ತಸ್ಯ ಚಿಂತಯತೋ ದ್ರೋಣವಧಂ ದುರ್ಯೋಧನಸ್ಯ ಚ ।**
**ನಾಽಗಾನ್ನಿದ್ರಾ ನಿಶೀಥೇ ಚ ಧ್ವಾಙ್ಕ್ಷಾನ್ ನ್ಯಗ್ರೋಧವಾಸಿನಃ ॥ ೧೨೩ ॥**

**ಹತಾನ್ ಸುಬಹುಸಾಹಸ್ರಾನೇಕೇನಾತಿಬಲೇನ ತು ।**
**ಕೌಶಿಕೇನ ನಿರೀಕ್ಷ್ಯೈವ ಪ್ರಾಹ ತೌ ಕೃಪಸಾತ್ವತೌ ॥ ೧೨೪ ॥**

**ನಿದರ್ಶನೇನ ಹ್ಯೇನೇನ ಪ್ರೇರಿತಃ ಪರಮಾತ್ಮನಾ ।**
**ಯಾಮಿ ಪಾಂಡುಸುತಾನ್ ಹಂತುಮಿತ್ಯುಕ್ತ್ವಾಽಽರುರುಹೇ ರಥಮ್ ।**
**ನಿವಾರಿತೋಽಪಿ ತಾಭ್ಯಾಂ ಸ ಪ್ರಾದವಚ್ಛಿಬಿರಂ ಪ್ರತಿ ॥ ೧೨೫ ॥**

ಪದಚ್ಛೇದ :- ತಸ್ಯ, ಚಿಂತಯತಃ, ದ್ರೋಣವಧಮ್, ದುರ್ಯೋಧನಸ್ಯ, ಚ । ನ, ಅಗಾತ್, ನಿದ್ರಾ, ನಿಶೀಥೇ, ಚ, ಧ್ವಾಂಕ್ಷಾನ್, ನ್ಯಗ್ರೋಧವಾಸಿನಃ ॥ ೧೨೩ ॥ ಹತಾನ್, ಸುಬಹುಸಾಹಸ್ರಾನ್, ಏಕೇನ, ಅತಿಬಲೇನ, ತು । ಕೌಶಿಕೇನ, ನಿರೀಕ್ಷ್ಯ, ಏವ, ಪ್ರಾಹ, ತೌ, ಕೃಪಸಾತ್ವತೌ ॥ ೧೨೪ ॥ ನಿದರ್ಶನೇನ, ಹಿ, ಏನೇನ, ಪ್ರೇರಿತಃ, ಪರಮಾತ್ಮನಾ । ಯಾಮಿ, ಪಾಂಡುಸುತಾನ್, ಹಂತುಮ್, ಇತಿ, ಉಕ್ತ್ವಾ, ಆರುರುಹೇ, ರಥಮ್ । ನಿವಾರಿತಃ, ಅಪಿ, ತಾಭ್ಯಾಮ್, ಸಃ, ಪ್ರಾದ್ರವತ್, ಶಿಬಿರಮ್, ಪ್ರತಿ ॥ ೧೨೫ ॥

ಅನ್ವಯಾರ್ಥ :- **ದ್ರೋಣವಧಮ್** = ದ್ರೋಣವಧೆಯನ್ನು **ಚ** = ಮತ್ತು **ದುರ್ಯೋಧನಸ್ಯ** = ದುರ್ಯೋಧನನ ವಧೆಯನ್ನು **ಚಿಂತಯತಃ** = ಆಲೋಚಿಸುತ್ತಿರುವ **ತಸ್ಯ** = ಅಶ್ವತ್ಥಾಮನಿಗೆ **ನಿಶೀಥೇ** = ರಾತ್ರಿಯಲ್ಲಿ **ನಿದ್ರಾ** = ನಿದ್ರೆಯು **ನಾಽಗಾತ್** = ಬರಲಿಲ್ಲ ॥ ೧೨೩ ॥ **ಏಕೇನ** = ಒಂದು **ಅತಿಬಲೇನ ತು** = ಅತಿಬಲಿಷ್ಠವಾದ **ಕೌಶಿಕೇನ** = ಗೂಬೆಯಿಂದ **ನ್ಯಗ್ರೋಧವಾಸಿನಃ** = ಆಲದ ಮರದ ಕೆಳಗೆ ವಾಸಿಸುವ **ಸುಬಹುಸಾಹಸ್ರಾನ್** = ಅನೇಕ ಸಾವಿರಸಂಖ್ಯೆಯುಳ್ಳ **ಧ್ವಾಂಕ್ಷಾನ್** = ಕಾಗೆಗಳನ್ನು **ಹತಾನ್** = ಕೊಂದಿದ್ದನ್ನು **ನಿರೀಕ್ಷ್ಯ** = ನೋಡಿ **ತೌ ಕೃಪಸಾತ್ವತೌ** = ಆ ಕೃಪ, ಕೃತವರ್ಮರಿಗೆ **ಪ್ರಾಹ** = ಹೇಳಿದನು ॥ ೧೨೪ ॥ **ಏನೇನ ನಿದರ್ಶನೇನ ಹಿ**

= ಈ ನಿದರ್ಶನದ ಮೂಲಕ **ಪರಮಾತ್ಮನಾ** = ಪರಮಾತ್ಮನಿಂದ **ಪ್ರೇರಿತಃ** = ಪ್ರೇರಿತನಾದ ನಾನು **ಪಾಂಡುಸುತಾನ್** = ಪಾಂಡವರನ್ನು **ಹಂತುಮ್** = ಕೊಲ್ಲಲು **ಯಾಮಿ** = ಹೋಗುತ್ತೇನೆ **ಇತಿ** = ಈ ರೀತಿಯಾಗಿ **ಉಕ್ತ್ವಾ** = ಹೇಳಿ **ತಾಭ್ಯಾವ್** = ಕೃಪ, ಕೃತವರ್ಮರಿಂದ **ನಿವಾರಿತೋಽಪಿ** = ತಡೆಯಲ್ಪಟ್ಟರೂ ಕೂಡ **ರಥಮ್** = ರಥವನ್ನು **ಆರುರುಹೇ** = ಏರಿದನು **ಶಿಬಿರಮ್ ಪ್ರತಿ** = ಪಾಂಡವರ ಶಿಬಿರಕ್ಕೆ **ಪ್ರಾದ್ರವತ್** = ತೆರಳಿದನು.

**ತಾತ್ಪರ್ಯ** :- ಅಶ್ವತ್ಥಾಮನು ದ್ರೋಣವಧೆಯನ್ನು ಹಾಗೂ ದುರ್ಯೋಧನನ ವಧೆಯನ್ನು ಆಲೋಚಿಸುತ್ತಿದ್ದನು. ಆದರಿಂದ ಅವನಿಗೆ ನಿದ್ರೆ ಬರಲಿಲ್ಲ. ಅತಿಬಲಿಷ್ಠವಾದ ಒಂದು ಗೂಬೆಯು ಅರ್ಧರಾತ್ರಿಯಲ್ಲಿ ಆಲದ ಮರದ ಕೆಳಗೆ ವಾಸಿಸುವ ಅನೇಕ ಸಾವಿರ ಸಂಖ್ಯೆಯುಳ್ಳ ಕಾಗೆಗಳನ್ನು ಕೊಂದಿದ್ದನ್ನು ನೋಡಿ = ಅಶ್ವತ್ಥಾಮನು ಕೃಪ, ಕೃತವರ್ಮರಿಗೆ ಹೇಳಿದನು. ಈ ನಿದರ್ಶನದ ಮೂಲಕ ಪರಮಾತ್ಮನಿಂದ ಪ್ರೇರಿತನಾದ ನಾನು ಪಾಂಡವರನ್ನು ಕೊಲ್ಲಲು ಹೋಗುತ್ತೇನೆಂದು ರಥವನ್ನೇರಿದ. ಕೃಪ, ಕೃತವರ್ಮರು ಎಷ್ಟು ತಡೆದರೂ ನಿಲ್ಲದೇ ಪಾಂಡವರ ಶಿಬಿರಕ್ಕೆ ತೆರಳಿದನು.

### ಶಿಬಿರದ್ವಾರದಲ್ಲಿ ಭೂತ

**ಅನುಜಗ್ಮತುಸ್ತಾವಪಿ ತಂ ಶಿಬಿರದ್ವಾರಿ ಚೈಕ್ಷತ ।**
**ಉಗ್ರರೂಪಧರಂ ರುದ್ರಂ ಸ್ವಕೀಯಾಂ ತನುಮೇವ ಸಃ ॥ ೧೨೬ ॥**

**ಪರೀತಂ ವಾಸುದೇವಂ ಚ ಬಹುಕೋಟಿಸ್ವರೂಪಿಣಾ ।**
**ದೃಷ್ಟ್ವೈವ ವಾಸುದೇವಂ ತಮತ್ರಸದ್ ಗೌತಮೀಸುತಃ ॥ ೧೨೭ ॥**

**ಪದಚ್ಛೇದ** :- ಅನ್ವಜಗ್ಮತುಃ, ತೌ, ಅಪಿ, ತಮ್, ಶಿಬಿರದ್ವಾರಿ, ಚ, ಐಕ್ಷತ । ಉಗ್ರರೋಪಧರಮ್, ರುದ್ರಮ್, ಸ್ವಕೀಯಾಮ್, ತನುಮ್, ಏವ, ಸಃ ॥ ೧೨೬ ॥ ಪರೀತಮ್, ವಾಸುದೇವೇನ, ಬಹುಕೋಟಿಸ್ವರೂಪಿಣಾ । ದೃಷ್ಟ್ವಾ, ಏವ, ವಾಸುದೇವಮ್, ತಮ್, ಅತ್ರಸತ್, ಗೌತಮೀಸುತಃ ॥ ೧೨೭ ॥

**ಅನ್ವಯಾರ್ಥ** :- **ತೌ, ಅಪಿ** = ಕೃಪ, ಕೃತವರ್ಮರಿಬ್ಬರೂ **ಅನ್ವಜಗ್ಮತುಃ** = ಅಶ್ವತ್ಥಾಮನನ್ನು ಹಿಂಬಾಲಿಸಿದರು **ಸಃ** = ಅಶ್ವತ್ಥಾಮನು **ಶಿಬಿರದ್ವಾರಿ** =

ಶಿಬಿರದ ದ್ವಾರದಲ್ಲಿ **ಉಗ್ರರೋಪಧರಮ್** = ಉಗ್ರರೂಪವನ್ನು ಧರಿಸಿರುವ **ಸ್ವಕೀಯಾಮ್** = ತನ್ನದೇ ಆದ **ತನುಮ್** = ಸ್ವರೂಪವುಳ್ಳ **ಬಹುಕೋಟಿ ಸ್ವರೂಪಿಣಾ** = ಬಹುಕೋಟಿರೂಪನಾದ **ವಾಸುದೇವೇನ** = ಕೃಷ್ಣನಿಂದ **ಪರೀತವಮ್** = ಯುಕ್ತನಾಗಿರುವ **ರುದ್ರಮ್** = ರುದ್ರನನ್ನು **ಐಕ್ಷತ** = ನೋಡಿದನು **ಗೌತಮೀಸುತಃ** = ಅಶ್ವತ್ಥಾಮನು **ತಮ್ ವಾಸುದೇವಮ್** = ಆ ಕೃಷ್ಣನನ್ನು **ದೃಷ್ಟ್ವೈವ** = ನೋಡಿಯೇ **ಅತ್ರಸತ್** = ಹೆದರಿದನು.

**ತಾತ್ಪರ್ಯ** :- ಕೃಪ, ಕೃತವರ್ಮರಿಬ್ಬರೂ ಅಶ್ವತ್ಥಾಮನನ್ನು ಹಿಂಬಾಲಿಸಿದರು. ಅಶ್ವತ್ಥಾಮನು ಶಿಬಿರದ ದ್ವಾರದಲ್ಲಿ ತನ್ನದೇ ಸ್ವರೂಪನಾದ ರುದ್ರನನ್ನು ಕಂಡನು. ರುದ್ರನು ಉಗ್ರರೂಪವನ್ನು ಧರಿಸಿದ್ದ. ಹಾಗೂ ಬಹುಕೋಟಿರೂಪನಾದ ಕೃಷ್ಣನಿಂದ ಸುತ್ತು ಆವೃತನಾಗಿದ್ದ. ಅಶ್ವತ್ಥಾಮನು ಕೃಷ್ಣನನ್ನು ನೋಡಿ ಹೆದರಿದನು.

**ವಾಸುದೇವಾಜ್ಞಯೈವಾತ್ರ ಸ್ವಾತ್ಮನಾಽಪಿ ಸದಾಶಿವಃ ।**
**ಅಯುಧ್ಯದಗ್ರಸಚ್ಚಾಽಶು ದ್ರೌಣೇಃ ಸರ್ವಾಯುಧಾನ್ಯಪಿ ॥ ೧೨೮ ॥**

**ಅಚಿಂತ್ಯಾ ಹರಿಶಕ್ತಿರ್ಯದ್ ದೃಶ್ಯಂತೇ ತ್ಮಹನೋಽಪಿ ಹಿ ।**
**ಅತಸ್ತಯಾ ಪ್ರೇರಿತೇನ ಸ್ವಾತ್ಮನೈವಾಖಿಲೇಷ್ವಪಿ ॥ ೧೨೯ ॥**

**ಆಯುಧೇಷು ನಿಗೀರ್ಣೇಷು ದ್ರೌಣಿರ್ಯಜ್ಞಂ ತು ಮಾನಸಮ್ ।**
**ಚಕ್ರೇಽತ್ಮಾನಂ ಪಶುಂ ಕೃತ್ವಾ ಸ್ವಾತ್ಮಸ್ಥಾಯೈವ ವಿಷ್ಣವೇ ॥ ೧೩೦ ॥**

ಪದಚ್ಛೇದ :- ವಾಸುದೇವಾಜ್ಞಯಾ, ಏವ, ಅತ್ರ, ಸ್ವಾತ್ಮನಾ, ಅಪಿ, ಸದಾಶಿವಃ । ಅಯುಧ್ಯತ್, ಅಗ್ರಸತ್, ಚ, ಆಶು, ದ್ರೌಣೇಃ, ಸರ್ವಾಯುಧಾನಿ, ಅಪಿ ॥ ೧೨೮ ॥ ಅಚಿಂತ್ಯಾ, ಹರಿಶಕ್ತಿಃ, ಯತ್, ದೃಶ್ಯಂತೇ, ಆತ್ಮಹನಃ, ಅಪಿ, ಹಿ । ಅತಃ, ತಯಾ, ಪ್ರೇರಿತೇನ, ಸ್ವಾತ್ಮನಾ, ಏವ, ಅಖಿಲೇಷು, ಅಪಿ ॥ ೧೨೯ ॥ ಆಯುಧೇಷು, ನಿಗೀರ್ಣೇಷು, ದ್ರೌಣಿಃ, ಯಜ್ಞಮ್, ತು, ಮಾನಸಮ್ । ಚಕ್ರೇ, ಆತ್ಮಾನಮ್, ಪಶುಮ್, ಕೃತ್ವಾ, ಸ್ವಾತ್ಮಸ್ಥಾಯ, ಏವ, ವಿಷ್ಣವೇ ॥ ೧೩೦ ॥

**ಅನ್ವಯಾರ್ಥ** :- **ವಾಸುದೇವಾಜ್ಞಯಾ** = ಶ್ರೀಕೃಷ್ಣನ ಆಜ್ಞೆಯಿಂದ **ಅತ್ರ** = ಇಲ್ಲಿ **ಸದಾಶಿವಃ** = ರುದ್ರನು **ಸ್ವಾತ್ಮನಾಽಪಿ** = ತನ್ನ ಸ್ವರೂಪದವನೇ ಆದ

ಅಶ್ವತ್ಥಾಮನ ಜೊತೆ **ಅಯುಧ್ಯತ್** = ಯುದ್ಧ ಮಾಡಿದನು **ದ್ರೌಣೇಃ** = ಅಶ್ವತ್ಥಾಮನ **ಸರ್ವಾಯುಧಾನ್ಯಪಿ** = ಎಲ್ಲಾ ಆಯುಧಗಳನ್ನು **ಅಗ್ರಸತ್ ಚ** = ನುಂಗಿದನು ॥ ೧೨೮ ॥ **ಹರಿಶಕ್ತಿಃ** = ಶ್ರೀಹರಿಯ ಶಕ್ತಿಯು **ಅಚಿಂತ್ಯಾ** = ಅಚಿಂತ್ಯವಾದುದು **ಯತ್** = ಯಾಕೆಂದರೆ **ತಯಾ** = ಆ ಅಚಿಂತ್ಯಶಕ್ತಿಯಿಂದ **ಪ್ರೇರಿತೇನ** = ಪ್ರೇರಿತನಾಗಿ **ಆತ್ಮಹನೋऽಪಿ** = ಆತ್ಮಹತ್ಯೆಯನ್ನು ಮಾಡಿಕೊಳ್ಳುವವರು **ದೃಶ್ಯಂತೇ** = ಕಂಡು ಬರುತ್ತಾರೆ **ಅತಃ** = ಆದ್ದರಿಂದ **ತಯಾ** = ಹರಿಯ ಶಕ್ತಿಯಿಂದ **ಪ್ರೇರಿತೇನ** = ಪ್ರೇರಿತನಾದ ॥ ೧೨೯ ॥ **ಸ್ವಾತ್ಮನಾ ಏವ** = ತನ್ನ ಸ್ವರೂಪನಾದ ರುದ್ರನಿಂದ **ಅಖಿಲೇಷು** = ಎಲ್ಲಾ **ಆಯುಧೇಷು** = ಆಯುಧಗಳು **ನಿಗೀರ್ಣೇಷು** = ನುಂಗಲ್ಪಡುತ್ತಿರಲು **ದ್ರೌಣಿಃ** = ಅಶ್ವತ್ಥಾಮನು **ಸ್ವಾತ್ಮಸ್ಥಾಯೈವ** = ತನ್ನೊಳಗಿರುವ **ವಿಷ್ಣವೇ** = ವಿಷ್ಣುವಿಗೆ **ಆತ್ಮಾನಮ್** = ತನ್ನನ್ನು **ಪಶುಂ ಕೃತ್ವಾ** = ಪಶುವನ್ನಾಗಿ ಮಾಡಿ **ಮಾನಸಮ್** = ಮಾನಸವಾದ **ಯಜ್ಞಮ್** = ಯಜ್ಞವನ್ನು **ಚಕ್ರೇ** = ಮಾಡಿದನು.

**ತಾತ್ಪರ್ಯ** :- ಶ್ರೀಕೃಷ್ಣನ ಆಜ್ಞೆಯಿಂದ ರುದ್ರನು ತನ್ನ ಸ್ವರೂಪದವನೇ ಆದ ಅಶ್ವತ್ಥಾಮನ ಜೊತೆ ಯುದ್ಧ ಮಾಡಿದನು. ಅಶ್ವತ್ಥಾಮನ ಎಲ್ಲಾ ಆಯುಧಗಳನ್ನು ನುಂಗಿದನು. ಶ್ರೀಹರಿಯ ಶಕ್ತಿಯು ಅಚಿಂತ್ಯವಾದುದು. ಯಾಕೆಂದರೆ ಆ ಅಚಿಂತ್ಯಶಕ್ತಿಯಿಂದ ಪ್ರೇರಿತನಾಗಿ ಆತ್ಮಹತ್ಯೆಯನ್ನು ಮಾಡಿಕೊಳ್ಳುವವರು ಕಂಡು ಬರುತ್ತಾರೆ. ಆದ್ದರಿಂದ ಹರೀಚ್ಛೆಯಿಂದ ಪ್ರೇರಿತನಾದ ತನ್ನ ಸ್ವರೂಪನಾದ ರುದ್ರ ಎಲ್ಲಾ ಆಯುಧಗಳನ್ನು ನುಂಗಿದಾಗ ಅಶ್ವತ್ಥಾಮನು ತನ್ನೊಳಗಿರುವ ವಿಷ್ಣುವಿಗೆ ತನ್ನನ್ನು ಪಶುವೆಂದು ಚಿಂತಿಸಿ ಮಾನಸವಾದ ಯಜ್ಞವನ್ನು ಮಾಡಿದನು.

**ಯಜ್ಞತುಷ್ಟೇನ ಹರಿಣಾ ಪ್ರೇರಿತಃ ಶಂಕರಃ ಸ್ವಯಮ್ ।**
**ಆತ್ಮನೇ ದ್ರೋಣಪುತ್ರಾಯ ದದೌ ಸರ್ವಾಯುಧಾನಿ ಚ ॥ ೧೩೦ ॥**

**ಉವಾಚ ಚಾಹಮಾದಿಷ್ಟೋ ವಿಷ್ಣುನಾ ಪ್ರಭವಿಷ್ಣುನಾ ।**
**ಅರಕ್ಷಂ ಪಾರ್ಥಶಿಬಿರಮಿಯಂತಂ ಕಾಲಮೇವ ತು ॥ ೧೩೧ ॥**

**ತದಿಚ್ಛಯೈವ ನಿರ್ದಿಷ್ಟೋ ದಾಸ್ಯೇ ಮಾರ್ಗಂ ತವಾದ್ಯ ಚ ।**
**ಆಯುಧಾನಿ ಚ ಸರ್ವಾಣಿ ಹಂತುಂ ಸರ್ವಾನಿಮಾನ್ ಜನಾನ್ ॥ ೧೩೨ ॥**

ಪದಚ್ಛೇದ :- ಯಜ್ಞತುಷ್ಟೇನ, ಹರಿಣಾ, ಪ್ರೇರಿತಃ, ಶಂಕರಃ, ಸ್ವಯಮ್ । ಆತ್ಮನೇ, ದ್ರೋಣಪುತ್ರಾಯ, ದದೌ, ಸರ್ವಾಯುಧಾನಿ, ಚ ।। ೧೩೧ ।। ಉವಾಚ, ಚ, ಅಹಮ್, ಆದಿಷ್ಟಃ, ವಿಷ್ಣುನಾ, ಪ್ರಭವಿಷ್ಣುನಾ । ಅರಕ್ಷಮ್, ಪಾರ್ಥಶಿಬಿರಮ್, ಇಯಂತಮ್, ಕಾಲಮ್, ಏವ, ತು ।। ೧೩೨ ।। ತದಿಚ್ಛಯಾ, ಏವ, ನಿರ್ದಿಷ್ಟಃ, ದಾಸ್ಯೇ, ಮಾರ್ಗಮ್, ತವ, ಅದ್ಯ, ಚ । ಆಯುಧಾನಿ, ಚ, ಸರ್ವಾಣಿ, ಹಂತುಮ್, ಸರ್ವಾನ್, ಇಮಾನ್, ಜನಾನ್ ।। ೧೩೩ ।।

**ಅನ್ವಯಾರ್ಥ** :- **ಯಜ್ಞತುಷ್ಟೇನ** = ಯಜ್ಞದಿಂದ ಸಂತುಷ್ಟನಾದ **ಹರಿಣಾ** = ಶ್ರೀಹರಿಯಿಂದ **ಪ್ರೇರಿತಃ** = ಪ್ರೇರಿತನಾದ **ಸ್ವಯಮ್ ಶಂಕರಃ** = ಸ್ವತಃ ರುದ್ರನೇ **ಆತ್ಮನೇ** = ತನ್ನ ಸ್ವರೂಪನಾದ **ದ್ರೋಣಪುತ್ರಾಯ** = ಅಶ್ವತ್ಥಾಮನಿಗೆ **ಸರ್ವಾಯುಧಾನಿ ಚ** = ಎಲ್ಲಾ ಆಯುಧಗಳನ್ನು **ದದೌ** = ಕೊಟ್ಟನು ।। ೧೩೧ ।। **ಚ** = ಮತ್ತು **ಅಹಮ್** = ನಾನು **ಇಯಂತಮ್** = ಇಷ್ಟು ಕಾಲದವರೆಗೆ **ಪ್ರಭವಿಷ್ಣುನಾ** = ಸರ್ವರಕ್ಷಕನಾದ **ವಿಷ್ಣುನಾ** = ವಿಷ್ಣುವಿನಿಂದ **ಆದಿಷ್ಟಃ** = ಆದಿಷ್ಟನಾಗಿ **ಪಾರ್ಥಶಿಬಿರಮ್** = ಪಾಂಡವರ ಶಿಬಿರವನ್ನು **ಅರಕ್ಷಮ್** = ರಕ್ಷಿಸಿದ್ದೇನೆಂದು **ಉವಾಚ** = ಹೇಳಿದನು ।। ೧೩೨ ।। **ತವ** = ನಿನಗೆ **ಅದ್ಯ** = ಇಂದು **ಮಾರ್ಗಮ್** = ಮಾರ್ಗವನ್ನು **ದಾಸ್ಯೇ** = ಕೊಡುತ್ತೇನೆ **ಸರ್ವಾನ್** = ಎಲ್ಲಾ **ಇಮಾನ್ ಜನಾನ್** = ಈ ಜನರನ್ನು **ಹಂತುವ್** = ಕೊಲ್ಲಲು **ಸವರ್ಶಣಿ ಆಯುಧಾನಿ ಚ** = ಎಲ್ಲಾ ಆಯುಧಗಳನ್ನು **ದಾಸ್ಯೇ** = ಕೊಡುತ್ತೇನೆಂದೂ ಹೇಳಿದನು ।। ೧೩೩ ।।

**ತಾತ್ಪರ್ಯ** :- ಯಜ್ಞದಿಂದ ಸಂತುಷ್ಟನಾದ ಪರಮಾತ್ಮನ ಪ್ರೇರಣೆಯಿಂದ ರುದ್ರನು ತನ್ನ ಸ್ವರೂಪಭೂತನಾದ ಅಶ್ವತ್ಥಾಮನಿಗೆ ಎಲ್ಲಾ ಆಯುಧಗಳನ್ನು ಹಿಂತಿರುಗಿ ಕೊಟ್ಟನು. ಮತ್ತೂ ''ನಾನು ಇಷ್ಟು ಕಾಲದವರೆಗೆ ಸರ್ವರಕ್ಷಕನಾದ ಶ್ರೀಹರಿಯ ಆಜ್ಞೆಯಿಂದ ಪಾಂಡವರ ಶಿಬಿರವನ್ನು ರಕ್ಷಿಸಿದ್ದೇನೆ. ಈಗ ಅವನ ಪ್ರೇರಣೆಯಿಂದಲೇ ನಿನಗೆ ನಾನು ಮಾರ್ಗವನ್ನು ಕೊಡುತ್ತೇನೆ. ಹಾಗೂ ಎಲ್ಲರನ್ನು ಕೊಲ್ಲಲು ಆಯುಧಗಳನ್ನೂ ಕೊಡುತ್ತೇನೆ''ದೂ ಹೇಳಿದನು.

**ಇತ್ಯುದೀರ್ಯ ಪ್ರದಾಯಾಽಶು ಸರ್ವಾ ಹೇತೀರ್ವೃಷಧ್ವಜಃ ।**
**ತತ್ರೈವಾಂತರ್ದಧೇ ಸೋಽಪಿ ಪ್ರೋವಾಚ ಕೃಪಸಾತ್ವತೌ ।। ೧೩೪ ।।**

ಪದಚ್ಛೇದ :– ಇತಿ, ಉದೀರ್ಯ, ಪ್ರದಾಯ, ಆಶು, ಸರ್ವಾಃ, ಹೇತೀಃ, ವೃಷಧ್ವಜಃ । ತತ್ರ, ಏವ, ಅಂತರ್ದಧೇ, ಸಃ, ಅಪಿ, ಪ್ರೋವಾಚ, ಕೃಪಸಾತ್ವತೌ ॥ ೧೩೪ ॥

**ಅನ್ವಯಾರ್ಥ** :- **ವೃಷಧ್ವಜಃ** = ರುದ್ರನು **ಇತಿ** = ಈ ರೀತಿಯಾಗಿ **ಉದೀರ್ಯ** = ಹೇಳಿ **ಆಶು** = ಕೂಡಲೇ **ಸರ್ವಾಃ, ಹೇತೀಃ** = ಎಲ್ಲಾ ಆಯುಧಗಳನ್ನು **ಪ್ರದಾಯ** = ಕೊಟ್ಟು **ತತ್ರೈವ** = ಅಲ್ಲಿಯೇ **ಅಂತರ್ದಧೇ** = ಅದೃಶ್ಯನಾದನು **ಸೋಽಪಿ** = ಅಶ್ವತ್ಥಾಮನಾದರೂ **ಕೃಪಸಾತ್ವತೌ** = ಕೃಪ, ಕೃತವರ್ಮರಿಗೆ **ಪ್ರೋವಾಚ** = ಹೇಳಿದನು.

**ತಾತ್ಪರ್ಯ** :- ರುದ್ರನು ಈ ರೀತಿಯಾಗಿ ಹೇಳಿ ಕೂಡಲೇ ಎಲ್ಲಾ ಆಯುಧಗಳನ್ನು ಅಶ್ವತ್ಥಾಮನಿಗೆ ಕೊಟ್ಟು ಅದೃಶ್ಯನಾದನು. ಅಶ್ವತ್ಥಾಮನಾದರೂ ಕೃಪ, ಕೃತವರ್ಮರಿಗೆ ಹೇಳಿದನು.

**ಯೇ ನಿರ್ಯಾಸ್ಯಂತಿ ಶಿಬಿರಾಜ್ಜಹಿತಂ ತಾಂಸ್ತು ಸರ್ವಶಃ ।**
**ಇತ್ಯುಕ್ತ್ವಾ ಪ್ರವಿವೇಶಾಂತರ್ಧನ್ವೀ ಖಡ್ಗೀ ಕೃತಾಂತವತ್ ॥ ೧೩೫ ॥**

ಪದಚ್ಛೇದ :– ಯೇ, ನಿರ್ಯಾಸ್ಯಂತಿ, ಶಿಬಿರಾತ್, ಜಹಿತಮ್, ತಾನ್, ತು, ಸರ್ವಶಃ । ಇತಿ, ಉಕ್ತ್ವಾ, ಪ್ರವಿವೇಶ, ಅಂತಃ, ಧನ್ವೀ, ಖಡ್ಗೀ, ಕೃತಾಂತವತ್ ॥ ೧೩೫ ॥

**ಅನ್ವಯಾರ್ಥ** :- **ಯೇ** = ಯಾರು **ಶಿಬಿರಾತ್** = ಶಿಬಿರದಿಂದ **ನಿರ್ಯಾಸ್ಯಂತಿ** = ಹೊರಗೆ ಹೋಗುತ್ತಾರೋ **ತಾನ್, ತು, ಸರ್ವಶಃ** = ಅವರೆಲ್ಲರನ್ನು **ಜಹಿತಮ್** = ಕೊಲ್ಲಿರಿ **ಇತಿ** = ಎಂದು **ಉಕ್ತ್ವಾ** = ಹೇಳಿ **ಧನ್ವೀ** = ಬಿಲ್ಲನ್ನು ಹಿಡಿದಿರುವವನಾಗಿ **ಖಡ್ಗೀ** = ಖಡ್ಗವನ್ನೂ ಹಿಡಿದಿರುವವನಾಗಿ **ಕೃತಾಂತವತ್** = ಯಮನಂತೆ **ಅಂತಃ** = ಶಿಬಿರದೊಳಗೆ **ಪ್ರವಿವೇಶ** = ಪ್ರವೇಶಿಸಿದನು.

**ತಾತ್ಪರ್ಯ** :- ಯಾರು ಶಿಬಿರದಿಂದ ಹೊರಗೆ ಹೋಗುತ್ತಾರೋ ಅವರೆಲ್ಲರನ್ನು ಕೊಲ್ಲಿರಿ ಎಂದು ಅಶ್ವತ್ಥಾಮ ಹೇಳಿ ಬಿಲ್ಲನ್ನು ಖಡ್ಗವನ್ನೂ ಹಿಡಿದು ಯಮನಂತೆ ಶಿಬಿರದೊಳಗೆ ಪ್ರವೇಶಿಸಿದನು.

**ಪಾರಾವತಾಶ್ವಂ ಸ ತದಾ ಶಯಾನ-**
**ಮುಪೇತ್ಯ ಪದ್ಭ್ಯಾಂ ಸಮತಾಡಯಚ್ಚ ।**

**ವಕ್ಷಸ್ಯಸಾವವದದ್ ವೀತನಿದ್ರೋ**
**ಜಾನೇ ಭವಂತಂ ಹಿ ಗುರೋಸ್ತನೂಜಮ್ ॥ ೧೩೬ ॥**

**ಸಮುತ್ಥಿತಂ ಮಾಂ ಜಹಿ ಶಸ್ತ್ರಪಾಣಿಂ**
**ಶಸ್ತ್ರೇಣ ವೀರೋಽಸಿ ಸ ವೀರಧರ್ಮಃ ।**
**ಲೋಕಾಶ್ಚ ಮೇ ಸಂತ್ವಥ ಶಸ್ತ್ರಪೂತಾ**
**ಇತಿ ಬ್ರುವಾಣಂ ಸ ರುಷಾ ಜಗಾದ ॥ ೧೩೭ ॥**

ಪದಚ್ಛೇದ :- ಪಾರಾವತಾಶ್ವಮ್, ಸಃ, ತದಾ, ಶಯಾನಮ್, ಉಪೇತ್ಯ, ಪದ್ಭ್ಯಾಮ್, ಸಮತಾಡಯತ್, ಚ । ವಕ್ಷಸಿ, ಅಸೌ, ಅವದತ್, ವೀತನಿದ್ರಃ, ಜಾನೇ, ಭವಂತಮ್, ಹಿ, ಗುರೋಃ, ತನೂಜಮ್ ॥ ೧೩೬ ॥ ಸಮುತ್ಥಿತಮ್, ಮಾಮ್, ಜಹಿ, ಶಸ್ತ್ರಪಾಣಿಮ್, ಶಸ್ತ್ರೇಣ, ವೀರಃ, ಅಸಿ, ಸಃ, ವೀರಧರ್ಮಃ । ಲೋಕಾಃ, ಚ, ಮೇ, ಸಂತು, ಅಥ, ಶಸ್ತ್ರಪೂತಾಃ, ಇತಿ, ಬ್ರುವಾಣಮ್, ಸಃ, ರುಷಾ, ಜಗಾದ ॥ ೧೩೭ ॥

**ಅನ್ವಯಾರ್ಥ** :- **ಸಃ** = ಅಶ್ವತ್ಥಾಮನು **ತದಾ** = ಆವಾಗ **ಶಯಾನಮ್** = ಮಲಗಿರುವ **ಪಾರಾವತಾಶ್ವಮ್** = ದೃಷ್ಟದ್ಯುಮ್ನನನ್ನು ಕುರಿತು **ಉಪೇತ್ಯ** = ಹೊಂದಿ **ಪದ್ಭ್ಯಾಮ್** = ಕಾಲುಗಲಿಂದ **ವಕ್ಷಸಿ** = ಎದೆಗೆ **ಸಮತಾಡಯಚ್ಚ** = ಹೊಡೆದನು **ಅಸೌ** = ಈ ದೃಷ್ಟದ್ಯುಮ್ನನು **ವೀತನಿದ್ರಃ** = ನಿದ್ರೆಯಿಂದೆಂದು **ಭವಂತಮ್ ಹಿ** = ನಿನ್ನನ್ನಾದರೋ **ಗುರೋಃ ತನೂಜಮ್** = ಗುರುಪುತ್ರನೆಂದು **ಜಾನೇ** = ತಿಳಿದಿದ್ದೇನೆ ಎಂದು **ಅವದತ್** = ಹೇಳಿದನು ॥ ೧೩೬ ॥ **ಸಮುತ್ಥಿತಮ್** = ಎದ್ದ **ಶಸ್ತ್ರಪಾಣಿಮ್** = ಶಸ್ತ್ರವನ್ನು ಕೈಯಲ್ಲಿ ಹಿಡಿದ **ಮಾಮ್** = ನನ್ನನ್ನು **ಶಸ್ತ್ರೇಣ** = ಶಸ್ತ್ರದಿಂದ **ಜಹಿ** = ಕೊಲ್ಲು **ವೀರೋಽಸಿ** = ಆವಾಗ ನೀನು ವೀರನಾಗುತ್ತಿ **ಸಃ** = ಅದು **ವೀರಧರ್ಮಃ** = ವೀರಧರ್ಮವು **ಅಥ** = ಅನಂತರ **ಶಸ್ತ್ರಪೂತಾಃ** = ಶಸ್ತ್ರದಿಂದ ಪವಿತ್ರರಾಗಿ ಹತರಾಗುವವರ **ಲೋಕಾಃ** = ಲೋಕಗಳು **ಮೇ** = ನನಗೆ **ಸಂತು** = ಆಗಲಿ **ಇತಿ** = ಎಂದು **ಬ್ರುವಾಣಮ್** = ಹೇಳುತ್ತಿರುವ ದೃಷ್ಟದ್ಯುಮ್ನನನ್ನು ಕುರಿತು **ಸಃ** = ಅಶ್ವತ್ಥಾಮನು **ರುಷಾ** = ಸಿಟ್ಟಿನಿಂದ **ಜಗಾದ** = ಹೇಳಿದನು ॥ ೧೩೭ ॥

**ತಾತ್ಪರ್ಯ** :- ಅಶ್ವತ್ಥಾಮನು ಮಲಗಿರುವ ದೃಷ್ಟದ್ಯುಮ್ನನ ಹತ್ತಿರ ಹೋಗಿ ಅವನೆದೆಗೆ ಕಾಲಿನಿಂದ ಒದ್ದ. ದೃಷ್ಟದ್ಯುಮ್ನ ಎದ್ದು ''ನೀನು

ಗುರುಪುತ್ರನೆಂದು ತಿಳಿದಿದ್ದೇನೆ. ನಾನು ಶಸ್ತ್ರವನ್ನು ಕೈಯಲ್ಲಿ ಹಿಡಿದ ಮೇಲೆ ಶಸ್ತ್ರದಿಂದ ನನ್ನನ್ನು ಕೊಲ್ಲು. ಆವಾಗ ನೀನು ವೀರನಾಗುತ್ತಿ. ಅದು ವೀರಧರ್ಮವು. ಶಸ್ತ್ರದಿಂದ ಪವಿತ್ರರಾಗಿ ಹತರಾಗುವವರ ಲೋಕಗಳು ನನಗಾಗಲಿ''. ಹೀಗೆ ದೃಷ್ಟದ್ಯುಮ್ನನು ಹೇಳಿದಾಗ ಅಶ್ವತ್ಥಾಮನು ಸಿಟ್ಟಿನಿಂದ ಹೇಳಿದನು.

**ನ ಸಂತಿ ಹಿ ಬ್ರಹ್ಮಹಣಾಂ ಸುಲೋಕಾ**
**ವಿಶೇಷತಶ್ಚೈವ ಗುರುದ್ರುಹಾಂ ಪುನಃ ।**
**ನ ಧರ್ಮಯುದ್ಧೇನ ವಧಾರ್ಹಕಾಶ್ಚ**
**ಯೇ ತ್ವದ್ವಿಧಾಃ ಪಾಪತಮಾಃ ಸುಪಾಪ ।। ೧೩೮ ।।**

ಪದಚ್ಛೇದ :- ನ, ಸಂತಿ, ಹಿ, ಬ್ರಹ್ಮಹಣಾಮ್, ಸುಲೋಕಾಃ, ವಿಶೇಷತಃ, ಚ, ಏವ, ಗುರುದ್ರುಹಾಮ್, ಪುನಃ । ನ, ಧರ್ಮಯುದ್ಧೇನ, ವಧಾರ್ಹಕಾಃ, ಚ, ಯೇ, ತ್ವದ್ವಿಧಾಃ, ಪಾಪತಮಾಃ, ಸುಪಾಪ ।। ೧೩೮ ।।

**ಅನ್ವಯಾರ್ಥ** :- **ಹೇ ಸುಪಾಪ** = ಎಲೈ ಮಹಾಪಾಪಿಯೇ! **ಬ್ರಹ್ಮಹಣಾಮ್** = ಬ್ರಹ್ಮಹತ್ಯೆ ಮಾಡುವವರಿಗೆ **ಸುಲೋಕಾಃ** = ಪುಣ್ಯ ಲೋಕಗಳು **ನ ಸಂತಿ** = ಇರುವದಿಲ್ಲ **ವಿಶೇಷತಃ** = ವಿಶೇಷವಾಗಿ **ಗುರುದ್ರುಹಾಮ್ ಪುನಃ** = ಗುರುದ್ರೋಹಿಗಳಿಗಾದರೋ **ನ ಸಂತಿ** = ಇಲ್ಲವೇ ಇಲ್ಲ **ತ್ವದ್ವಿಧಾಃ** = ನಿನ್ನಂತಹ **ಪಾಪತಮಾಃ** = ಪಾಪಿಷ್ಠರು **ಧರ್ಮಯುದ್ಧೇನ** = ಧರ್ಮಯುದ್ಧದಿಂದ **ವಧಾರ್ಹಕಾಶ್ಚ** = ವಧೆಗೆ ಅರ್ಹರು **ನ** = ಇಲ್ಲ.

**ತಾತ್ಪರ್ಯ** :- ಎಲೈ ಮಹಾಪಾಪಿಯೇ! ಬ್ರಹ್ಮಹತ್ಯೆ ಮಾಡುವವರಿಗೆ ಒಳ್ಳೆಯ ಲೋಕಗಳಿಲ್ಲ. ವಿಶೇಷವಾಗಿ ಗುರುದ್ರೋಹಿಗಳಿಗೆ ಸರ್ವಥಾ ಇಲ್ಲ. ಅದರಿಂದ ನಿನ್ನಂಥ ಮಹಾಪಾಪಿಗಳು ಧರ್ಮಯುದ್ಧದಿಂದ ವಧಾರ್ಹರಲ್ಲ.

**ಅವಶ್ಯಭಾವಿನಂ ಮೃತ್ಯುಂ ಧೃಷ್ಟದ್ಯುಮ್ನೋ ವಿಚಿಂತ್ಯ ತಮ್ ।**
**ತೂಷ್ಣೀಂ ಬಭೂವ ಸ್ವಪ್ನೇಽಪಿ ನಿತ್ಯಂ ಪಶ್ಯತಿ ತಾಂ ಮೃತಿಮ್ ।। ೧೩೯ ।।**

ಪದಚ್ಛೇದ :- ಅವಶ್ಯಭಾವಿನಮ್, ಮೃತ್ಯುಮ್, ಧೃಷ್ಟದ್ಯುಮ್ನಃ, ವಿಚಿಂತ್ಯ, ತಮ್ । ತೂಷ್ಣೀಮ್, ಬಭೂವ, ಸ್ವಪ್ನೇ, ಅಪಿ, ನಿತ್ಯಮ್, ಪಶ್ಯತಿ, ತಾಮ್, ಮೃತಿಮ್ ।। ೧೩೯ ।।

**ಅನ್ವಯಾರ್ಥ** :- **ಅವಶ್ಯಭಾವಿನಮ್** = ಅವಶ್ಯ ಉಂಟಾಗಲಿರುವ **ಮೃತ್ಯುಮ್** = ಮರಣವೆಂದು **ವಿಚಿಂತ್ಯ** = ಆಲೋಚಿಸಿ **ಧೃಷ್ಟದ್ಯುಮ್ನಃ** = ಧೃಷ್ಟದ್ಯುಮ್ನನು **ತೂಷ್ಣೀಂ ಬಭೂವ** = ಸುಮ್ಮನಾದನು **ಸ್ವಪ್ನೇಽಪಿ** = ಸ್ವಪ್ನದಲ್ಲಿಯೂ **ತಾಂ ಮೃತಿಮ್** = ಆ ಮರಣವನ್ನು **ನಿತ್ಯಮ್** = ಯಾವಾಗಲೂ **ಪಶ್ಯತಿ** = ನೋಡುತ್ತಿದ್ದನು.

**ತಾತ್ಪರ್ಯ** :- ಇದು ಅವಶ್ಯ ಉಂಟಾಗಲಿರುವ ಮರಣವೆಂದು ಧೃಷ್ಟದ್ಯುಮ್ನನು ಆಲೋಚಿಸಿ ಸುಮ್ಮನಾದನು. ಯಾಕೆಂದರೆ ಸ್ವಪ್ನದಲ್ಲಿ ಯಾವಾಗಲೂ ಆ ಮರಣವನ್ನು ನೋಡುತ್ತಿದ್ದ.

**ದ್ರೌಣಿಂ ಚ ಕಾಳರಾತ್ರಿಂ ಚ ದ್ರೋಣಪಾತಾದನಂತರಮ್ ।**
**ವಿಶಸಂತಂ ಕೃಷಂತೀಂ ಚ ಸ್ವಪ್ನೇಽಪಶ್ಯದ್ಧಿ ಪಾರ್ಷತಃ ॥ ೧೪೦ ॥**

ಪದಚ್ಛೇದ :- **ದ್ರೌಣಿಮ್, ಚ, ಕಾಲರಾತ್ರಿಮ್, ಚ, ದ್ರೋಣಪಾತಾತ್, ಅನಂತರಮ್ । ವಿಶಸಂತಮ್, ಕೃಷಂತೀಮ್, ಚ, ಸ್ವಪ್ನೇ, ಅಪಶ್ಯತ್, ಹಿ, ಪಾರ್ಷತಃ ॥ ೧೪೦ ॥**

**ಅನ್ವಯಾರ್ಥ** :- **ದ್ರೋಣಪಾತಾತ್** = ದ್ರೋಣಪತನದ **ಅನಂತರಮ್** = ಅನಂತರ **ಪಾರ್ಷತಃ** = ಧೃಷ್ಟದ್ಯುಮ್ನನು **ಸ್ವಪ್ನೇ** = ಸ್ವಪ್ನದಲ್ಲಿ **ವಿಶಸಂತಮ್** = ಕೊಲ್ಲುತ್ತಿರುವ **ದ್ರೌಣಿಮ್** = ಅಶ್ವತ್ಥಾಮನನ್ನು **ಕೃಷಂತೀಮ್** = ಸೆಳೆಯುತ್ತಿರುವ **ಕಾಲರಾತ್ರಿಮ್** = ದುರ್ಗೆಯನ್ನು **ಅಪಶ್ಯತ್ ಹಿ** = ಕಾಣುತ್ತಿದ್ದನು.

**ತಾತ್ಪರ್ಯ** :- ದ್ರೋಣಪತನದ ಬಳಿಕ ಧೃಷ್ಟದ್ಯುಮ್ನನು ತನ್ನನ್ನು ಅಶ್ವತ್ಥಾಮನು ಕೊಲ್ಲುವಂತೆ, ಕಾಲರಾತ್ರಿ ದುರ್ಗೆಯು ಸೆಳೆಯುವಂತೆ ಸ್ವಪ್ನದಲ್ಲಿ ನೋಡುತ್ತಿದ್ದನು.

**ಸಮಾಕ್ಷಿಪದ್ ದ್ರೋಣಸುತೋಽಸ್ಯ ಕಂಠೇ**
**ನಿಬಧ್ಯ ಮೌರ್ವೀಂ ಧನುಷೋಽಪ್ಯುರಸ್ಥಃ ।**
**ಮಮಂಥ ಕೃಚ್ಛ್ರೇಣ ವಿಹಾಯ ದೇಹಂ**
**ಯಯೌ ನಿಜಂ ಸ್ಥಾನಮಸೌ ಚ ವಹ್ನಿಃ ॥ ೧೪೧ ॥**

ಪದಚ್ಛೇದ :- ಸಮಾಕ್ಷಿಪದತ್, ದ್ರೋಣಸುತಃ, ಅಸ್ಯ, ಕಂಠೇ, ನಿಬಧ್ಯ, ಮೌರ್ವೀಮ್, ಧನುಷಃ, ಅಪಿ, ಉರಸ್ಥಃ । ಮಮಂಥ, ಕೃಚ್ಛ್ರೇಣ, ವಿಹಾಯ, ದೇಹಮ್, ಯಯೌ, ನಿಜಮ್, ಸ್ಥಾನಮ್, ಅಸೌ, ಚ, ವಹ್ನಿಃ ॥ ೧೪೧ ॥

**ಅನ್ವಯಾರ್ಥ** :- **ದ್ರೋಣಸುತಃ** = ಅಶ್ವತ್ಥಾಮನು **ಅಸ್ಯ** = ದೃಷ್ಟದ್ಯುಮ್ನನ **ಉರಸ್ಥಃ** = ಎದೆಯಲ್ಲಿ **ಕಂಠೇ** = ಕೊರಳಲ್ಲಿ **ಧನುಷಃ** = ಬಿಲ್ಲಿನ **ಮೌರ್ವೀಮ್** = ಹಗ್ಗವನ್ನು **ನಿಬಧ್ಯ** = ಕಟ್ಟಿ **ಸಮಾಕ್ಷಿಪತ್** = ಸೆಳೆದನು **ಮಮಂಥ** = ಮಂಥನ ಮಾಡಿದನು **ಅಸೌ ಚ ವಹ್ನಿಃ** = ಅಗ್ನಿಯ ಅವತಾರನಾದ ದೃಷ್ಟದ್ಯುಮ್ನನು **ಕೃಚ್ಛ್ರೇಣ** = ಕಷ್ಟದಿಂದ **ದೇಹಮ್** = ದೇಹವನ್ನು **ವಿಹಾಯ** = ಬಿಟ್ಟು **ನಿಜಂ ಸ್ಥಾನಮ್** = ತನ್ನ ಸ್ಥಾನವನ್ನು **ಯಯೌ** = ಹೊರಟನು.

**ತಾತ್ಪರ್ಯ** :- ಅಶ್ವತ್ಥಾಮನು ದೃಷ್ಟದ್ಯುಮ್ನನ ಎದೆಯಲ್ಲಿ ಕುಳಿತು ಬಿಲ್ಲಿನ ಹಗ್ಗವನ್ನು ಅವನ ಕೊರಳಿಗೆ ಕಟ್ಟಿ ಎಳೆದನು. ಮಥನ ಮಾಡಿದನು. ಅಗ್ನಿಯ ಅವತಾರನಾದ ದೃಷ್ಟದ್ಯುಮ್ನನು ಕಷ್ಟದಿಂದ ದೇಹವನ್ನು ಬಿಟ್ಟು ತನ್ನ ಸ್ಥಾನಕ್ಕೆ ಹೊರಟನು.

**ತತಃ ಶಿಖಂಡಿನಂ ಹತ್ವಾ ಯುಧಾಮನ್ಯೂತ್ತಮೋಜಸೌ ।**
**ಜನಮೇಜಯಂ ಚ ಪಾಂಚಾಲೀಸುತಾನಭಿಯಯೌ ಜ್ವಲನ್ ॥ ೧೪೨ ॥**

ಪದಚ್ಛೇದ :- ತತಃ, ಶಿಖಂಡಿನಮ್, ಹತ್ವಾ, ಯುಧಾಮನ್ಯೂತ್ತಮೌಜಸೌ । ಜನಮೇಜಯಮ್, ಚ, ಪಾಂಚಾಲೀಸುತಾನ್, ಅಭಿಯಯೌ, ಜ್ವಲನ್ ॥ ೧೪೨ ॥

**ಅನ್ವಯಾರ್ಥ** :- **ತತಃ** = ಅನಂತರ **ಶಿಖಂಡಿನಮ್** = ಶಿಖಂಡಿಯನ್ನು **ಯುಧಾಮನ್ಯೂತ್ತಮೌಜಸೌ** = ಯುಧಾಮನ್ಯು ಉತ್ತಮೌಜಸರನ್ನು **ಚ** = ಮತ್ತು **ಜನಮೇಜಯಮ್** = ಜನಮೇಜಯನನ್ನು **ಹತ್ವಾ** = ಕೊಂದು **ಜ್ವಲನ್** = ಜ್ವಲಿಸುತ್ತಾ **ಪಾಂಚಾಲೀಸುತಾನ್** = ದ್ರೌಪದೀಮಕ್ಕಳ ಹತ್ತಿರ **ಅಭಿಯಯೌ** = ಹೊರಟನು.

**ತಾತ್ಪರ್ಯ** :- ಅನಂತರ ಶಿಖಂಡಿಯನ್ನು, ಯುಧಾಮನ್ಯು, ಉತ್ತಮೌಜಸರನ್ನು, ಜನಮೇಜಯನನ್ನು ಕೊಂದು ದ್ರೌಪದೀಮಕ್ಕಳ ಹತ್ತಿರ ಹೊರಟನು.

ತೈರುತ್ಥಿತೈರಸ್ಯಮಾನಃ ಶರೈಃ ಖಡ್ಗೇನ ಜಘ್ನಿವಾನ್ ।
ಸರ್ವಾನ್ ಸವ್ಯಾಪಸವ್ಯೇನ ತಥಾಽನ್ಯಾನ್ ಪಾಂಡವಾತ್ಮಜಾನ್ ॥ ೧೪೩ ॥

ಋತ ಏಕಂ ಭೈಮಸೇನಿಂ ಕಾಶಿರಾಜಾತ್ಮಜಾತ್ಮಜಮ್ ।
ತಂ ತದಾಽಂತರ್ಹಿತಃ ಶರ್ವಃ ಕೈಲಾಸಮನಯತ್ ಕ್ಷಣಾತ್ ॥ ೧೪೪ ॥

ಸ ಶರ್ವತ್ರಾತನಾಮಾಽಽಸೀದತಸ್ತತ್ರೈವ ಸೋಽವಸತ್ ।
ಪುರಾಽರ್ಥಿತಃ ಸ್ವದೌಹಿತ್ರಸ್ಯಾಮರತ್ವಾಯ ಶಂಕರಃ ।
ಕಾಶಿರಾಜೇನ ತೇನಾಸೌ ಜುಗೋಪೈನಂ ಕೃಪಾಯುತಃ ॥ ೧೪೫ ॥

ಪದಚ್ಛೇದ :– ತೈಃ, ಉತ್ಥಿತೈಃ, ಅಸ್ಯಮಾನಃ, ಶರೈಃ, ಖಡ್ಗೇನ, ಜಘ್ನಿವಾನ್ । ಸರ್ವಾನ್, ಸವ್ಯಾಪಸವ್ಯೇನ, ತಥಾ, ಅನ್ಯಾನ್, ಪಾಂಡವಾತ್ಮಜಾನ್ ॥ ೧೪೩ ॥ ಋತೇ, ಏಕಮ್, ಭೈಮಸೇನೀಮ್, ಕಾಶಿರಾಜಾತ್ಮಜಾತ್ಮಜಮ್ । ತಮ್, ತದಾ, ಅಂತರ್ಹಿತಃ, ಶರ್ವಃ, ಕೈಲಾಸಮ್, ಅನಯತ್, ಕ್ಷಣಾತ್ ॥ ೧೪೪ ॥ ಸಃ, ಶರ್ವತ್ರಾತನಾಮಾ, ಆಸೀತ್, ಅತಃ, ತತ್ರೈವ, ಶಂಕರಃ । ಪುರಾಽರ್ಥಿತಃ, ಸ್ವದೌಹಿತ್ರಸ್ಯ, ಅಮರತ್ವಾಯ, ಶಂಕರಃ । ಕಾಶಿರಾಜೇನ, ತೇನ, ಅಸೌ, ಜುಗೋಪ, ಏನಮ್, ಕೃಪಾಯುತಃ ॥ ೧೪೫ ॥

**ಅನ್ವಯಾರ್ಥ** :- **ಉತ್ಥಿತೈಃ ತೈಃ** = ಮೇಲೆದ್ದ ದ್ರೌಪದೀಪುತ್ರರಿಂದ **ಶರೈಃ** = ಬಾಣಗಳಿಂದ **ಅಸ್ಯಮಾನಃ** = ತಡೆದರೂ **ಖಡ್ಗೇನ** = ಖಡ್ಗದಿಂದ **ಸರ್ವಾನ್** = ಎಲ್ಲರನ್ನು **ಜಘ್ನಿವಾನ್** = ಕೊಂದನು **ತಥಾ** = ಹಾಗೆಯೇ **ಭೈಮಸೇನೀಮ್** = ಭೀಮಸೇನನ ಮಗನಾದ **ಕಾಶಿರಾಜಾತ್ಮಜಾತ್ಮಜಮ್** = ಕಾಶಿರಾಜನ ಮಗಳಾದ ಕಾಳಿದೇವಿಯಲ್ಲಿ ಹುಟ್ಟಿದ ಶರ್ವತ್ರಾತ ಎಂಬುವವನನ್ನು **ಏಕಮ್** = ಒಬ್ಬನನ್ನು **ಋತೇ** = ಹೊರತುಪಡಿಸಿ **ಅನ್ಯಾನ್** = ಬೇರೆಲ್ಲ ಪಾಂಡವರ ಮಕ್ಕಳನ್ನು **ಸವ್ಯಾಪಸವ್ಯೇನ** = ಎಡಕ್ಕೂ ಬಲಕ್ಕೂ ಹೊಡೆದು ಕೊಂದನು **ತಮ್** = ಆ ಶರ್ವತ್ರಾತನನ್ನು **ತದಾ** = ಆಗ **ಅಂತರ್ಹಿತಃ** = ಅದೃಶ್ಯನಾಗಿ **ಶರ್ವಃ** = ರುದ್ರನು **ಕ್ಷಣಾತ್** = ಕ್ಷಣಕಾಲದಲ್ಲಿ **ಕೈಲಾಸಮ್** = ಕೈಲಾಸಕ್ಕೆ **ಅನಯತ್** = ಕೊಂಡೊಯ್ದನು **ಅತಃ** = ಆದ್ದರಿಂದ **ಸಃ** = ಅವನು **ಶರ್ವತ್ರಾತನಾಮಾ** = ಶರ್ವತ್ರಾತ ಎಂಬ ಹೆಸರುಳ್ಳವನು **ಆಸೀತ್** = ಆದನು **ಸಃ** = ಅವನು **ತತ್ರೈವ** = ಕೈಲಾಸದಲ್ಲಿಯೇ **ಅವಸತ್** = ವಾಸಮಾಡಿದನು **ಪುರಾ** = ಹಿಂದೆ **ಕಾಶಿರಾಜೇನ** = ಕಾಶಿರಾಜನಿಂದ

**ಸ್ವದೌಹಿತ್ರಸ್ಯ** = ತನ್ನ ಮಗಳ ಮಗನ **ಅಮರತ್ವಾಯ** = ಅಮರತ್ವಾಗಿ **ಶಂಕರಃ** = ರುದ್ರನು **ಅರ್ಥಿತಃ** = ಪ್ರಾರ್ಥಿಸಲ್ಪಟ್ಟಿದ್ದ **ತೇನ** = ಆದ್ದರಿಂದ **ಏನಮ್** = ಶರ್ವತ್ರಾತನನ್ನು **ಕೃಪಾಯುತಃ** = ಕೃಪೆಯಿಂದ ಕೂಡಿದವನಾಗಿ **ಅಸೌ** = ಈ ರುದ್ರನು **ಜುಗೋಪ** = ರಕ್ಷಿಸಿದನು.

**ತಾತ್ಪರ್ಯ** :- ದ್ರೌಪದೀಪುತ್ರರು ಎದ್ದು ಬಾಣಗಳಿಂದ ಅಶ್ವತ್ಥಾಮನನ್ನು ತಡೆದರೂ ಅವನ್ನು ಎಲ್ಲರನ್ನೂ ಖಡ್ಗದಿಂದ ಕೊಂದನು. ಭೀಮಸೇನನಿಗೆ ಕಾಶಿರಾಜನ ಮಗಳಾದ ಕಾಳಿದೇವಿಯಲ್ಲಿ ಹುಟ್ಟಿದ ಶರ್ವತ್ರಾತನೆಂಬ ಒಬ್ಬ ಮಗನನ್ನು ಬಿಟ್ಟು ಇನ್ನೆಲ್ಲಾ ಪಾಂಡವ ಪುತ್ರರನ್ನು ಎಡಕ್ಕೂ ಬಲಕ್ಕೂ ಹೊಡೆದು ಕೊಂದನು. ಆಗ ಶರ್ವತ್ರಾತನನ್ನು ಅದೃಶ್ಯನಾಗಿ ರುದ್ರನು ಕ್ಷಣಕಾಲದಲ್ಲಿ ಕೈಲಾಸಕ್ಕೆ ಕೊಂಡೊಯ್ದನು. ಆದ್ದರಿಂದ ಆ ಹೆಸರು ಅವನಿಗೆ ಸಾರ್ಥಕ ವಾಯಿತು. ಅನಂತರ ಅವನು ಕೈಲಾಸದಲ್ಲಿಯೇ ವಾಸಮಾಡಿದನು. ಹಿಂದೆ ಕಾಶಿರಾಜ ತನ್ನ ಮಗಳ ಮಗನು ಅಮರನಾಗಬೇಕೆಂದು ರುದ್ರನನ್ನು ಬೇಡಿದ್ದ. ಆದರಿಂದ ರುದ್ರ ಈಗ ಕೃಪಾಯುಕ್ತನಾಗಿ ಶರ್ವತ್ರಾತನನ್ನು ರಕ್ಷಿಸಿದನು.

**ವಾಸುದೇವಮತಂ ಜ್ಞಾತ್ವಾ ಸಾಮ್ರಾಜ್ಯಾಯ ಪರೀಕ್ಷಿತಃ ।**
**ವಾರಯಾಮಾಸ ಭೂಲೋಕಂ ನೈವ ಯಾಹೀತ್ಯಮುಂ ಶಿವಃ ॥ ೧೪೬ ॥**

ಪದಚ್ಛೇದ :- **ವಾಸುದೇವಮತಮ್, ಜ್ಞಾತ್ವಾ, ಸಾಮ್ರಾಜ್ಯಾಯ, ಪರೀಕ್ಷಿತಃ । ವಾರಯಾಮಾಸ, ಭೂಲೋಕಮ್, ನ, ಏವ, ಯಾಹಿ, ಇತಿ, ಅಮುಮ್, ಶಿವಃ ॥ ೧೪೬ ॥**

**ಅನ್ವಯಾರ್ಥ** :- **ಪರೀಕ್ಷಿತಃ** = ಪರೀಕ್ಷಿತನು **ಸಾಮ್ರಾಜ್ಯಾಯ** = ಸಾಮ್ರಾಜ್ಯಕ್ಕಾಗಿ **ವಾಸುದೇವಮತಮ್** = ಶ್ರೀಕೃಷ್ಣನ ಅಭಿಪ್ರಾಯವನ್ನು **ಜ್ಞಾತ್ವಾ** = ತಿಳಿದು **ಭೂಲೋಕಮ್** = ಭೂಲೋಕಕ್ಕೆ **ನೈವ ಯಾಹಿ** = ನೀನು ಹೋಗಬೇಡ **ಇತಿ** = ಎಂದು **ಅಮುಮ್** = ಶರ್ವತ್ರಾತನನ್ನು **ಶಿವಃ** = ರುದ್ರನು **ವಾರಯಾಮಸ** = ತಡೆದನು.

**ತಾತ್ಪರ್ಯ** :- ಪರೀಕ್ಷಿತನಿಗೆ ಸಾಮ್ರಾಜ್ಯವನ್ನು ಕೊಡಬೇಕೆನ್ನುವ ಶ್ರೀಕೃಷ್ಣನ ಅಭಿಪ್ರಾಯವನ್ನು ತಿಳಿದು ರುದ್ರನು ನೀನು ಭೂಲೋಕಕ್ಕೆ ಹೋಗಬೇಡವೆಂದು ತಡೆದನು.

**ಸಾಮಾನ್ಯತೋऽಪಾಂಡವಾಯ ದ್ರೌಣಿನಾऽಪ್ಯಭಿಸಂಧಿತಮ್ ।**
**ತದ್ರೂಪೇಣೈವ ರುದ್ರೇಣ ವಿನೈನಮಿತಿ ಚಿಂತಿತಮ್ ॥ ೧೪೭ ॥**

ಪದಚ್ಛೇದ :- ಸಾಮಾನ್ಯತಃ, ಅಪಾಂಡವಾಯ, ದ್ರೌಣಿನಾ, ಅಪಿ, ಅಭಿಸಂಧಿತಮ್ । ತದ್ರೂಪೇಣೈವ, ರೂಪೇಣ, ವಿನಾ, ಏನಮ್, ಇತಿ, ಚಿಂತಿತಮ್ ॥ ೧೪೭ ॥

**ಅನ್ವಯಾರ್ಥ** :- **ಸಾಮಾನ್ಯತಃ** = ಸಾಮಾನ್ಯವಾಗಿ **ಅಪಾಂಡವಾಯ** = ಪಾಂಡವರ ಸಂತತಿ ನಾಶವಾಗಲೆಂದು **ದ್ರೌಣಿನಾ** = ಅಶ್ವತ್ಥಾಮನಿಂದ **ಅಭಿಸಂಧಿತಮ್** = ಇಚ್ಛಿಸಲ್ಪಟ್ಟಿತು **ತದ್ರೂಪೇಣೈವ** = ಅಶ್ವತ್ಥಾಮಸ್ವರೂಪನಾದ **ರುದ್ರೇಣ** = ಶಿವನಿಂದ **ಏನಂ ವಿನಾ** = ಶರ್ವತ್ರಾತನನ್ನು ಹೊರತುಪಡಿಸಿ **ಇತಿ** = ಎಂದು **ಚಿಂತಿತಮ್** = ಸಂಕಲ್ಪಿತವಾಗಿತ್ತು.

**ತಾತ್ಪರ್ಯ** :- ಬ್ರಹ್ಮಾಸ್ತ್ರಪ್ರಯೋಗಕಾಲದಲ್ಲಿ ಸಾಮಾನ್ಯವಾಗಿ ಪಾಂಡವರ ಸಂತತಿ ನಾಶವಾಗಲೆಂದು ಅಶ್ವತ್ಥಾಮ ಬಯಸಿದ್ದ. ಆದರೂ ಅಶ್ವತ್ಥಾಮಸ್ವರೂಪನಾದ ಶಿವನು ಶರ್ವತ್ರಾತನನ್ನು ಹೊರತು ಪಡಿಸಿ ಎಂದು ಸಂಕಲ್ಪಿಸಿದ್ದ.

**ಅಸ್ತ್ರಂ ಬ್ರಹ್ಮಶಿರಶ್ಚೈನಂ ನ ಜಘಾನೈಕ್ಯತಸ್ತಯೋಃ ।**
**ಚೇಕಿತಾನಾದಿಕಾಂಶ್ಚೈವ ಜಘಾನಾನ್ಯಾನ್ ಸ ಸರ್ವಶಃ ॥ ೧೪೮ ॥**

ಪದಚ್ಛೇದ :- ಅಸ್ರಮ್, ಬ್ರಹ್ಮಶಿರಃ, ಚ, ಏನಮ್, ನ, ಜಘಾನ, ಏಕತಃ, ತಯೋಃ । ಚೇಕಿತಾನಾದಿಕಾನ್, ಚ, ಏವ, ಜಘಾನ, ಅನ್ಯಾನ್, ಸಃ, ಸರ್ವಶಃ ॥ ೧೪೮ ॥

**ಅನ್ವಯಾರ್ಥ** :- **ತಯೋಃ** = ಅಶ್ವತ್ಥಾಮ, ರುದ್ರರು **ಏಕತಃ** = ಒಂದೇ ಆದ್ದರಿಂದ **ಬ್ರಹ್ಮಶಿರಃ ಅಸ್ರಮ್** = ಬ್ರಹ್ಮಾಸ್ತ್ರವು **ಏನಮ್** = ಶರ್ವತ್ರಾತನನ್ನು **ನ ಜಘಾನ** = ಕೊಲ್ಲಲಿಲ್ಲ **ಸಃ** = ಅಶ್ವತ್ಥಾಮನು **ಚೇಕಿತಾನಾದಿಕಾನ್ ಚೈವ** = ಚೇಕಿತಾನ ಮೊದಲಾದ **ಅನ್ಯಾನ್** = ಬೇರೆ **ಸರ್ವಶಃ** = ಎಲ್ಲರನ್ನೂ **ಜಘಾನ** = ಕೊಂದನು.

**ತಾತ್ಪರ್ಯ** :- ಅಶ್ವತ್ಥಾಮ, ರುದ್ರರು ಒಂದೇ ಆದ್ದರಿಂದ ಬ್ರಹ್ಮಾಸ್ತ್ರವು ಶರ್ವತ್ರಾತನನ್ನು ಕೊಲ್ಲಲಿಲ್ಲ. ಅಶ್ವತ್ಥಾಮನು ಈಗ ಶಿಬಿರದಲ್ಲಿ ಚೇಕಿತಾನ ಮೊದಲಾದ ಎಲ್ಲರನ್ನೂ ಕೊಂದನು.

ಶಿಬಿರದಾಹ

**ಸ ಚೇದಿಪಾಂಚಾಲಕರೂಶಕಾಶೀ-**
**ನನ್ಯಾಂಶ್ಚ ಸರ್ವಾನ್ ವಿನಿಹತ್ಯ ವೀರಃ ।**
**ಶಿಶೂನ್ ಸ್ತ್ರಿಯಶ್ಚೈವ ನಿಹಂತುಮುಗ್ರಃ**
**ಪ್ರಾಜ್ವಾಲಯತ್ ತಚ್ಛಿಬಿರಂ ಸಮಂತಾತ್ ॥ ೧೪೯ ॥**

ಪದಚ್ಛೇದ :- ಸಃ, ಚೇದಿಪಾಂಚಾಲಕರೂಶಕಾಶೀನ್, ಅನ್ಯಾನ್, ಚ, ಸರ್ವಾನ್, ವಿನಿಹತ್ಯ, ವೀರಃ । ಶಿಶೂನ್, ಸ್ತ್ರಿಯಃ, ಚ, ಏವ, ನಿಹಂತುಮ್, ಉಗ್ರಃ, ಪ್ರಾಜ್ವಾಲಯತ್, ತಚ್ಛಿಬಿರಮ್, ಸಮಂತಾತ್ ॥ ೧೪೯ ॥

**ಅನ್ವಯಾರ್ಥ** :- **ಉಗ್ರಃ** = ಕ್ರೂರನಾದ **ವೀರಃ** = ವೀರನಾದ **ಸಃ** = ಆ ಅಶ್ವತ್ಥಾಮನು **ಚೇದಿಪಾಂಚಾಲಕರೂಶಕಾಶೀನ್** = ಚೇದಿ, ಪಾಂಚಾಲ, ಕರೂಶ, ಕಾಶಿ ರಾಜರುಗಳ ಸಂಬಂಧಿಗಳನ್ನು **ಅನ್ಯಾನ್, ಚ, ಸರ್ವಾನ್** = ಬೇರೆಲ್ಲರನ್ನು **ವಿನಿಹತ್ಯ** = ಕೊಂದು **ಶಿಶೂನ್** = ಮಕ್ಕಳನ್ನು **ಸ್ತ್ರಿಯಶ್ಚ** = ಹೆಂಗಸರನ್ನು **ನಿಹಂತುಮ್** = ಕೊಲ್ಲಲು **ತಚ್ಛಿಬಿರಮ್** = ಆ ಶಿಬಿರವನ್ನು **ಸಮಂತಾತ್** = ಎಲ್ಲ ಕಡೆ **ಪ್ರಾಜ್ವಾಲಯತ್** = ಸುಟ್ಟು ಹಾಕಿದನು.

**ತಾತ್ಪರ್ಯ** :- ಚೇದಿ, ಪಾಂಚಾಲ, ಕರೂಶ, ಕಾಶಿ ರಾಜರುಗಳ ಸಂಬಂಧಿಗಳನ್ನು, ಬೇರೆಲ್ಲರನ್ನು ಕೊಂದು ಕ್ರೂರನಾದ ವೀರನಾದ ಅಶ್ವತ್ಥಾಮನು ಮಕ್ಕಳನ್ನು ಹೆಂಗಸರನ್ನು ಕೊಲ್ಲಲು ಆ ಶಿಬಿರವನ್ನು ಎಲ್ಲ ಕಡೆ ಸುಟ್ಟು ಹಾಕಿದನು.

**ಜಿಜೀವಿಷೂಂಸ್ತತ್ರ ಪಲಾಯಮಾನಾನ್**
**ದ್ವಾರಿ ಸ್ಥಿತೋ ಗೌತಮಃ ಸಾತ್ವತಶ್ಚ ।**
**ನಿಜಘ್ನತುಃ ಸರ್ವತಃ ಪಾರ್ಷತಸ್ಯ**
**ಸೂತಸ್ತ್ವೇಕಃ ಶೇಷಿತೋ ದೈವಯೋಗಾತ್ ॥ ೧೫೦ ॥**

ಪದಚ್ಛೇದ :- ಜಿಜೀವಿಷೂನ್, ತತ್ರ, ಪಲಾಯಮಾನಾನ್, ದ್ವಾರಿ, ಸ್ಥಿತಃ, ಗೌತಮಃ, ಸಾತ್ವತಃ, ಚ । ನಿಜಘ್ನತುಃ, ಸರ್ವತಃ, ಪಾರ್ಷತಸ್ಯ, ಸೂತಃ, ತು, ಏಕಃ, ಶೇಷಿತಃ, ದೈವಯೋಗಾತ್ ॥ ೧೫೦ ॥

**ಅನ್ವಯಾರ್ಥ** :- **ತತ್ರ** = ಅಲ್ಲಿ **ಜಿಜೀವಿಷೂನ್** = ಬದುಕಲು ಆಸೆಯುಳ್ಳ **ಪಲಾಯಮಾನಾನ್** = ಓಡುತ್ತಿರುವ **ಸರ್ವತಃ** = ಎಲ್ಲರನ್ನು **ದ್ವಾರಿಸ್ಥಿತಃ** = ಶಿಬಿರದ್ವಾರದಲ್ಲಿದ್ದ **ಗೌತಮಃ** = ಕೃಪನು **ಚ** = ಮತ್ತು **ಸಾತ್ವತಃ** = ಕೃತವರ್ಮನು **ನಿಜಘ್ನತುಃ** = ಕೊಂದರು **ಪಾರ್ಷತಸ್ಯ** = ದೃಷ್ಟದ್ಯುಮ್ನನ **ಸೂತಸ್ತ್ವೇಕಃ** = ಸಾರಥಿಯೊಬ್ಬನೇ **ದೈವಯೋಗಾತ್** = ದೈವಯೋಗದಿಂದ **ಶೇಷಿತಃ** = ಉಳಿದುಕೊಂಡನು.

**ತಾತ್ಪರ್ಯ** :- ಬದುಕುವಾಸೆಯಿಂದ ಓಡುತ್ತಿರುವವರೆಲ್ಲರನ್ನು ಶಿಬಿರದ್ವಾರದಲ್ಲಿದ್ದ ಕೃಪನು ಮತ್ತು ಕೃತವರ್ಮನು ಕೊಂದರು. ದೈವಯೋಗದಿಂದ ದೃಷ್ಟದ್ಯುಮ್ನನ ಸಾರಥಿಯೊಬ್ಬನೇ ಉಳಿದುಕೊಂಡನು.

**ತತ್ರೈಕಲಂ ದ್ರೋಣಸುತಂ ರಥೇನ**
**ಯಾಂತಂ ರಥೀ ಮಾರುತಿರನ್ವಧಾವತ್ ।**
**ತಮಾದ್ರವಂತಂ ಪ್ರಸಮೀಕ್ಷ್ಯ ಭೀತಃ**
**ಪರಾದ್ರವದ್ ದ್ರೌಣಿರತಿದ್ರುತಾಶ್ವೈಃ ॥ ೧೫೧ ॥**

ಪದಚ್ಛೇದ :– ತತ್ರ, ಏಕಲಂ, ದ್ರೋಣಸುತಂ, ರಥೇನ, ಯಾಂತಂ, ರಥೀ, ಮಾರುತಿಃ, ಅನ್ವದಾವತ್, ತಂ, ಆದ್ರವಂತಂ, ಪ್ರಸಮೀಕ್ಷ್ಯ, ಭೀತಃ, ಪರಾದ್ರವತ, ದ್ರೌಣಿಃ, ಅತಿದ್ರುತಾಶ್ವಃ ॥ ೧೫೧ ॥

**ಅರ್ಥ** :- **ತತ್ರ** = ಅವರಲ್ಲಿ **ಏಕಲಂ** = ಏಕಾಂಗಿಯಾಗಿ **ರಥೇನ** = ರಥದಲ್ಲಿ **ಯಾಂತ್ರಂ** = ಹೊರಟಿರುವ **ದ್ರೋಣಸುತಂ** = ಅಶ್ವತ್ಥಾಮನನ್ನು **ಮಾರುತಿಃ** = ಭೀಮನು **ಅನ್ವಧಾವತ್** = ಬೆನ್ನಟ್ಟಿದನು **ಆದ್ರವಂತಂ** = ಬೆನ್ನಟ್ಟಿ ಬರುತ್ತಿರುವ **ತಂ** = ಆ ಭಿಮನನ್ನು **ಪ್ರಸಮೀಕ್ಷ್ಯ** = ನೋಡಿ **ಭೀತಃ** = ಹೆದರಿದ **ದ್ರೌಣಿಃ** = ಅಶ್ವತ್ಥಾಮನು **ಅತಿದ್ರುತಾಶ್ವಃ** = ವೇಗದಿಂಹದ ಓಡುತ್ತಿರುವ ಕುದುರೆಗಳಿಂದ **ಪರಾದ್ರವತ್** = ಪಲಾಯನ ಮಾಡಿದನು.

**ತಾತ್ಪರ್ಯ** :- ಭೀಮಾದಿಗಳಿಗೆ ಅಂಜಿ ಒಬ್ಬೊಬ್ಬರು ಒಂದೊಂದು ದಿಕ್ಕಿಗೆ ಪಲಾಯನ ಮಾಡಿದಾಗ ಅಶ್ವತ್ಥಾಮನು ಒಬ್ಬಂಟಿಯಾಗಿ ರಥವನ್ನೇರಿ ಹೊರಟಾಗ ಅವನನ್ನು ಭೀಮನು ಅಟ್ಟಿಸಿಕೊಂದು ಬಂದನು. ಅವನನ್ನು

ನೋಡಿದ ಹೆದರಿದ ಅಶ್ವತ್ಥಾಮನು ಕುದುರೆಗಳನ್ನು ಇನ್ನೂ ವೇಗವಾಗಿ ಓಡಿಸಿ ಪಲಾಯನ ಮಾಡಿದನು.

**ಆದ್ರವಂತಂ ಪುನರ್ದೃಷ್ಟ್ವಾ ಭೀಮಂ ದ್ರೋಣಾತ್ಮಜೋ ರುಷಾ ।**
**ಆವೃತ್ಯ ಯುಧ್ಯನ್ ವಿಜಿತೋಽಸ್ತ್ರಂ ಬ್ರಹ್ಮಶಿರ ಆದದೇ ॥ ೧೫೨ ॥**

**ಪದಚ್ಛೇದ :- ಆದ್ರವಂತಂ, ಪುನಃ, ದೃಷ್ಟ್ವಾ, ಭೀಮಂ, ದ್ರೋಣಾತ್ಮಜಃ, ರುಷಾ, ಆವೃತ್ಯ, ಯುಧ್ಯನ್, ವಿಜಿತಃ, ಅಸ್ತ್ರಂ, ಬ್ರಹ್ಮಶಿರಃ, ಆದದೇ ॥ ೧೫೨ ॥**

**ಅರ್ಥ** :- **ಪುನಃ** = ಆದರೂ **ಆದ್ರವಂತಂ** = ಬೆನ್ನಟ್ಟಿ ಬರುತ್ತಿರುವ **ಭೀಮಂ** = ಭೀಮನನ್ನು **ದೃಷ್ಟ್ವಾ** = ನೋಡಿ **ದ್ರೋಣಾತ್ಮಜಃ** = ಅಶ್ವತ್ಥಾಮನು **ರುಷಾ** = ಸಿಟ್ಟಿನಿಂದ **ಆವೃತ್ಯ** = ತಿರುಗಿ ನಿಂತು **ಯುಧ್ಯನ್** = ಯುದ್ಧ ಮಾಡಿ **ವಿಜಿತಃ ಸನ್** = ಸೋತವನಾಗಿ **ಬ್ರಹ್ಮಶಿರಃ** = ಬ್ರಹ್ಮಶಿರಸ್ಸು ಎಂಬ **ಅಸ್ತ್ರಂ** = ಅಸ್ತ್ರವನ್ನು **ಆದದೇ** = ಪ್ರಯೋಗಿಸಿದನು.

**ತಾತ್ಪರ್ಯ** :- ಎಷ್ಟು ಓಡಿದರೂ ಬೆನ್ನಟ್ಟಿ ಬರುತ್ತಲೇ ಇರುವ ಭಿಮನನ್ನು ಕಂಡು ಅಶ್ವತ್ಥಾಮನು ಕೊಪದಿಂದ ಹಿಂದಿರುಗಿ ನಿಂತು ಭಿಮನ ಜೊತೆ ಯುದ್ಧ ಮಾಡಿ ಸೋತ. ನಂತರ ಭಿಮನ ಮೇಲೆ ಬ್ರಹ್ಮಶಿರೋಸ್ತ್ರವನ್ನು ಪ್ರಯೋಗ ಮಾಡಿದ.

**ವಿವರಣೆ** :- ಅಶ್ವತ್ಥಾಮ ರುದ್ರನ ಅವತಾರ. ರುದ್ರ ಮನೋಭಿಮಾನಿ ಭಿಮ ಸ್ವತಃ ವಾಯುದೇವನೇ ಆದ್ದರಿಂದ ಅಶ್ವತ್ಥಾಮನನ್ನು ವೇಗದಲ್ಲಿ ಸೋಲಿಸಿದಾಗ ಮನೋವೇಗಕ್ಕಿಂತಲೂ ವಾಯುವೇಗ ದೊಡ್ಡದು ಎಂದು ತಿಳಿಯುತ್ತದೆ.

**ಏತಸ್ಮಿನ್ನಂತರೇ ಕೃಷ್ಣೋ ಧರ್ಮಜೇನಾರ್ಜುನೇನ ಚ ।**
**ತತ್ರಾಽಗಮತ್ ತದಸ್ತ್ರಂ ಚ ಭೀಮಂ ಚಾವ್ಯರ್ಥತಾಂ ನಯನ್ ॥ ೧೫೩ ॥**

**ಪದಚ್ಛೇದ :- ಏತಸ್ಮಿನ್, ಅಂತರೇ, ಕೃಷ್ಣಃ, ಧರ್ಮಜೇನ, ಅರ್ಜುನೇನ, ಚ, ತತ್ರ, ಆಗಮತ, ತದಸ್ತ್ರಂ, ಚ, ಭೀಮಂ ಚ, ಅವ್ಯರ್ಥತಾಂ, ನಯನ್ ॥ ೧೫೩ ॥**

**ಅರ್ಥ** :- **ಏತಸ್ಮಿನ್ನಂತರೇ** = ಇಷ್ಟರ ಮಧ್ಯದಲ್ಲಿ **ಕೃಷ್ಣಃ** = ಕೃಷ್ಣನು **ತದಸ್ತ್ರಂ ತತ್** = ಆ ಅಶ್ವತ್ಥಾಮನು ಪ್ರಯೋಗಿಸಿದ **ಅಸ್ತ್ರಂ** = ಬ್ರಹ್ಮ ಶಿರೋಸ್ತ್ರವನ್ನು **ಭೀಮಂ ಚ** = ಭೀಮನನ್ನು **ಅವ್ಯರ್ಥಂ** = ನಿಷ್ಫಲರಾಗದಂತೆ ನಯನ ಮಾಡುವುದಕ್ಕಾಗಿ **ಧರ್ಮಜೇನ** = ಧರ್ಮರಾಜನನ್ನು **ಅರ್ಜುನೇನ ಚ** = ಅರ್ಜುನನನ್ನೂ ಕೂಡಿಕೊಂಡು **ತತ್ರ** = ಆ ಸ್ಥಳಕ್ಕೆ **ಆಗಮತ್** = ಬಂದನು.

**ತಾತ್ಪರ್ಯ** :- ಇಂತಹ ಪ್ರಸಂಗದಲ್ಲಿ ಶ್ರೀಕೃಷ್ಣನು ಆ ಬ್ರಹ್ಮಶಿರೋಸ್ತ್ರವನ್ನು ಭಿಮನನ್ನು ವ್ಯರ್ಥವಾಗದಂತೆ ಮಾಡುವುದಕ್ಕಾಗಿ ಅವೆರಡೂ ಅಮೋಘ ವೆಂದು ತೋರಿಸಲು ತಾನು ಧರ್ಮರಾಜ ಮತ್ತು ಅರ್ಜುನರನ್ನು ಕೂಡಿಕೊಂಡು ಆ ಸ್ಥಳಕ್ಕೆ ಆಗಮಿಸಿದನು.

**ಅವಧ್ಯೋ ಭೀಮಸೇನಸ್ತದಸ್ತ್ರಂ ಚಾಮೋಘಮೇವ ಯತ್ ।**
**ವಿಷ್ಣುನೈವೋಭಯಂ ಯಸ್ಮಾತ್ ಕ್ಲ್ಪಪ್ತಂ ಭೀಮೋಽಸ್ತ್ರಮೇವ ತತ್ ॥ ೧೫೪ ॥**

ಪದಚ್ಛೇದ :- **ಅವಧ್ಯಃ, ಭೀಮಸೇನ, ತದಸ್ತ್ರಂ, ಚ, ಅಮೋಘಂ, ಏವ, ತತ್, ವಿಷ್ಣುನಾ, ಏವ, ಉಭಯಂ, ಯಸ್ಮಾತ್, ಕೃತಂ, ಭೀಮಃ, ಅಸ್ತ್ರಂ, ಏವ, ತತ್ ॥ ೧೫೪ ॥**

**ಅರ್ಥ** :- **ಭೀಮಸೇನ** = ಭೀಮಸೇನನು **ಅವಧ್ಯ** = ಅವಧ್ಯನು **ತದಸ್ತ್ರಂ ಚ** = ಆ ಬ್ರಹ್ಮಶಿರೋಸ್ತ್ರವೂ ಕೂಡ **ಅಮೋಘಮೇವ** = ಅಮೋಘವೇ ಆಗಿದೆ **ಯಸ್ಮಾತ್** = ಯಾವ ಕಾರಣದಿಂದ **ತತ್ ಉಭಯಂ** = ಅವೆರಡೂ **ವಿಷ್ಣುನಾ ಏವ** = ವಿಷ್ಣುವಿನಿಂದಲೇ **ಕೃತಂ** = ಸಂಕಲ್ಪಿಸಲ್ಪಟ್ಟಿದೆ **ಭೀಮಃ** = ಭೀಮನು **ತತ್ ಅಸ್ತ್ರಮೇವ** = ಆ ಅಸ್ತ್ರವೇ ಆಗಿರುವನು.

**ತಾತ್ಪರ್ಯ** :- ಭೀಮಸೇನನೂ ಅವಧ್ಯನೇ ಆ ಅಸ್ತ್ರವೂ ಅಮೋಘವೇ ನಾರಾಯಣನು ಎರಡನ್ನೂ ಸಂಕಲ್ಪಿಸಿದ್ದಾನೆ. ಭೀಮನು ಆ ಅಸ್ತ್ರವೇ ಆಗಿರುವನು.

**ವಿವರಣೆ** :- ಭೀಮನೇ ಅಸ್ತ್ರನು ಎಂದರೆ ಅವನೇ ಅದಕ್ಕೆ ಅಭಿಮಾನಿ ಎಂದರ್ಥ ಮುಖ್ಯಾಭಿಮಾನಿ ಬ್ರಹ್ಮದೇವರೇ ಆಗಿದ್ದರೂ ಭೀಮ ಭಾವಿ ಬ್ರಹ್ಮನಾದ್ದರಿಂದ ಅವನೂ ಅಭಿನಿಯೇ ಆಗಿದ್ದಾನೆ.

**ಗಾಯತ್ರೀ ತತ್ರ ಮಂತ್ರೋ ಯದ್ ಬ್ರಹ್ಮಾ ತದ್ಧ್ಯಾನದೇವತಾ ।**
**ಧ್ಯೇಯೋ ನಾರಾಯಣೋ ದೇವೋ ಜಗತ್ಪ್ರಸವಿತಾ ಸ್ವಯಮ್ ॥೧೫೫॥**

ಪದಚ್ಛೇದ :- ಗಾಯತ್ರೀ, ತತ್ರ, ಮಂತ್ರಃ, ಯತ್, ಬ್ರಹ್ಮಾ, ತದ್ಧ್ಯಾನದೇವತಾ, ಧ್ಯೇಯಃ, ನಾರಾಯಣಃ, ದೇವಃ, ಜಗತ್ಪ್ರಸವಿತಾ, ಸ್ವಯಂ ॥ ೧೫೫ ॥

**ಅರ್ಥ :-** **ಯತ್** = ಯಾವ ಕಾರಣದಿಂದ **ತತ್ರ** = ಆ ಅಸ್ತ್ರಕ್ಕೆ **ಗಾಯತ್ರೀ** = ಗಾಯತ್ರಿಯೇ **ಮಂತ್ರಃ** = ಮಂತ್ರವೋ **ತತ್** = ಆ ಕಾರಣದಿಂದಲೇ (**ತತ್ರ** = ಆ ಅಸ್ತ್ರಕ್ಕೆ) **ಧ್ಯಾನದೇವತಾ** = ಧ್ಯಾನ ಮಾಡುವ ದೇವತೆಯು **ಬ್ರಹ್ಮಾ** = ಬ್ರಹ್ಮದೇವರೇ ಆಗಿದ್ದಾರೆ **ಸ್ವಯಂ** = ಸ್ವತಃ **ಜಗತ್ಪ್ರಸವಿತಾ** = ಜಗತ್ಸೃಷ್ಟಿಕರ್ತನಾದ **ದೇವಃ** = ಶ್ರೀತಾದಿಗುಣ ವಿಶಿಷ್ಟವಾದ **ನಾರಾಯಣಃ** = ನಾರಾಯಣನೇ **ಧ್ಯೇಯಃ** = ಧ್ಯೇಯನಾಗಿದ್ದಾನೆ.

**ತಾತ್ಪರ್ಯ :-** ಆ ಅಸ್ತ್ರಕ್ಕೆ ಗಾಯತ್ರಿಯೇ ಮಂತ್ರವಾದ್ದರಿಂದ ಬ್ರಹ್ಮದೇವರೇ ಧ್ಯಾನಿಸುವ ದೇವತೆಯು. ಆ ಅಸ್ತ್ರದ ಧ್ಯೇಯನು ಸ್ವತಃ ಸಮಗ್ರ ಪ್ರಪಂಚದ ಸೃಷ್ಟಿಕರ್ತನಾದ ನಾರಾಯಣನೇ ಆಗಿರುವನು.

**ಊಚೇ ಚ ಪಾರ್ಥಯೋಃ ಕೃಷ್ಣೋ ಯತ್ ಕೃತಂ ದ್ರೌಣಿನಾ ಪುರಾ ।**
**ಸ್ವಾಯುಧಾನಾಂ ಯಾಚನಂ ಚಾಪ್ಯಶಕ್ತೇನ ತದುದ್ಧೃತೌ ॥ ೧೫೬ ॥**

ಪದಚ್ಛೇದ :- ಊಚೇ, ಚ, ಪಾರ್ಥಯೋಃ, ಕೃಷ್ಣಃ, ಯತ್, ಕೃತಂ, ಪ್ರಾಣಿನಾ, ಪುರಾ, ಸ್ವಾಯುಧಾನಾಂ, ಯಾಚನಂ, ಚ, ಅಪಿ, ಅಶಕ್ತೇನ, ತಮುದ್ಧೃತೌ ॥೧೫೬॥

**ಅರ್ಥ :-** **ಕೃಷ್ಣಃ** = ಕೃಷ್ಣನು **ಪಾರ್ಥಯೋಃ** = ಧರ್ಮರಾಜ ಅರ್ಜುನರಿಗೆ **ಪುರಾ** = ಹಿಂದೆ **ಪ್ರಾಣಿನಾ** = ಅಶ್ವತ್ಥಾಮನಿಂದ **ಯತ್** = ಏನು **ಕೃತಂ** = ಮಾಡಲ್ಪಟ್ಟಿತೋ (**ತತ್** = ಅದನು) **ಊಚೇ** = ಹೇಳಿದನು **ಸ್ವಾಯುಧಾನಾಂ** = ತನ್ನ ಆಯುಧಗಳ **ಯಾಚನಂ ಚ** = ಬೇಡಿಕೆಯನ್ನು **ತದುದ್ಧೃತೌ** = ಅವುಗಳನ್ನು ಎತ್ತುವುದರಲ್ಲಿ **ಅಶಕ್ತೇನ ಅಪಿ** = ಅಸಮರ್ಥನಾದ (ದ್ರೌಣಿನಾ, ಯತ್ಕೃತಂ) (ತತ್, ಊಚೆ)

**ತಾತ್ಪರ್ಯ :-** ಕೃಷ್ಣನು ಅರ್ಜುನ ಧರ್ಮರಾಜರಿಗೆ ಹಿಂದೆ ಮಾಡಿದ ತನ್ನದೇ ಆದ ಆಯುಧಗಳ ಪ್ರಾರ್ಥನೆಯನ್ನು ಅವುಗಳನ್ನು ಎತ್ತುವುದರಲ್ಲಿ ಅವನು ಅಸಮರ್ಥನಾದುದನ್ನೂ ಹೇಳಿದನು.

**ಪೃಷ್ಟೇನೋಕ್ತಂ ತ್ವಯಾ ಹೀನಾಂ ಕೃತ್ವಾ ದುರ್ಯೋಧನಾಯ ಗಾಮ್ ।**
**ದಾತುಂ ತ್ವದಾಯುಧಂ ಮೇಽದ್ಯೇತ್ಯೇವಮುಕ್ತೇ ತ್ಮನೋದಿತಮ್ ।**
**ಮೈವಂ ಕಾರ್ಷೀಃ ಪುನರಿತಿ ಧ್ಯಾಯತಾಽಬ್ಧೇಸ್ತಟೇ ಸ್ವಮು ॥ ೧೫೭ ॥**

ಪದಚ್ಛೇದ :- ಪೃಷ್ಟೇನ, ಉಕ್ತಂ, ತ್ವಯಾ, ಹೀನಾಂ, ಕೃತ್ವಾ, ದುರ್ಯೋಧನಾಯ, ಗಾಂ, ದಾತುಂ, ತ್ವದಾಯುಧಂ, ಮೇ, ಅದ್ಯ, ಇತಿ, ಏವಂ, ಉಕ್ತೇ, ತ್ವನೋದಿತಂ, ಹಿಮಾ, ಏವಂ, ಕಾರ್ಷೀಃ, ಪುನಃ, ಇತಿ, ಧ್ಯಾಯತಾ, ಅಚ್ಛೇ, ರಟೇ, ಸ್ವಮು ॥೧೫೭॥

**ಅರ್ಥ :-** (**ಮಯಾ** = ನನ್ನಿಂದ) **ಪೃಷ್ಟೇನ** = ಕೇಳಲ್ಪಟ್ಟಾಗ (**ತೇನ** = ಆ ದ್ರೌಣಿಯಿಂದ) **ಉಕ್ತಂ** = ಹೇಳಲ್ಪಟ್ಟಿತು **ತ್ವಯಾ** = ನಿನ್ನಿಂದ **ಹೀನಾಂ** = ರಹಿತವಾದದ್ದನ್ನಾಗಿ **ಗಾಂ** = ಭೂಮಿಯನ್ನು **ಕೃತ್ವಾ** = ಮಾಡಿ **ದುರ್ಯೋಧನಾಯ** = ದುರ್ಯೋಧನನಿಗೆ **ದಾತುಂ** = ನೀಡಲು **ಅದ್ಯ** = ಇಂದು **ಮೇ** = ನನಗೆ **ತ್ವದಾಯುಧಂ** = ನಿನ್ನ ಆಯುಧವನ್ನು (**ದೇಹ** = ಕೊಡು) **ಇತ್ಯೇವಂ** = ಹೀಗೆಂದು **ಉಕ್ತೇ** = ಹೇಳಲಾಗಿ **ಪುನಃ** = ಮತ್ತೊಮ್ಮೆ **ಏವ** = ಹೀಗೆ **ಮಾಕಾರ್ಷೀಃ** = ಮಾಡಬೇಡ **ಇತಿ** = ಎಂಬುದಾಗಿ **ಅಬ್ಧೇಃ** = ಸಮುದ್ರದ **ತಟೇ** = ತೀರದಲ್ಲಿ **ಸ್ವಂ ಉ** = ತನ್ನದ್ದೇ ಸ್ವರೂಪವನ್ನು **ಧ್ಯಾಯತಾ** = ಧ್ಯಾನಿಸುತ್ತಿರುವ **ಆತ್ಮನಾ** = ನನ್ನಿಂದ **ಉದಿತಂ** = ಹೇಳಲ್ಪಟ್ಟಿತು.

**ತಾತ್ಪರ್ಯ :-** ಶ್ರೀಕೃಷ್ಣನು ಅರ್ಜುನ ಧರ್ಮರಾಜರಿಗೆ ಹಿಂದೆ ಅಶ್ವತ್ಥಾಮನು ಮಾಡಿದ್ದೆಲ್ಲವನ್ನೂ ಹೇಳುತ್ತಾನೆ. ಹಿಂದೆ ಶ್ರೀಕೃಷ್ಣನು ಸಮುದ್ರದ ತೀರದಲ್ಲಿ ತನ್ನ ರೂಪಗಳನೇ ಧ್ಯಾನಿಸುತ್ತಿದ್ದಾಗ ಅಲ್ಲಿಗೆ ಅಶ್ವತ್ಥಾಮನು ಒಂದು ಶ್ರೀಕೃಷ್ಣನ ಆಯುಧಗಳನ್ನು ಕೇಳಿದ. 'ಆಗಲಿ' ಎಂದು ಶ್ರೀಕೃಷ್ಣನು ತನ್ನ ಆಯುಧವನ್ನು ಕೊಟ್ಟಾಗ ದ್ರೌಣಿಯಿಂದ ಅವನ್ನು ಎತ್ತಲೂ ಆಗಲಿಲ್ಲ. ಕೃಷ್ಣನು ಅವನನ್ನು 'ನನ್ನ ಆಯುಧ ನಿನಗೇಕೆ ?' ಎಂದು ಕೇಳಿದಾಗ ಅವನು ''ಈ ಭೂಮಿಯಲ್ಲಿ ನಿನ್ನನ್ನು ಇಲ್ಲದಂತೆ ಮಾಡಿ ಅಂತಹ ಭೂಮಿಯನ್ನು ದುರ್ಯೋಧನನಿಗೆ ಕೊಡುತ್ತೇನೆ. ಆದ್ದರಿಂದ ನಿನ್ನ ಆಯುಧ ಕೇಳಿದೆ'' ಎಂದನು. ಆಗ ಕೃಷ್ಣನು ಅವನಿಗೆ ''ಪುನಃ ಈ ರೀತಿ ಮಾಡಬೇಡ'' ಎಂದು ಹೇಳಿದನು. ಈ ಎಲ್ಲವನ್ನೂ ಕೃಷ್ಣ ಧರ್ಮರಾಜ - ಅರ್ಜುನರಿಗೆ ಹೇಳಿದ.

**ತದಸ್ತ್ರಂ ಪ್ರಜ್ವಲದ್ ದೃಷ್ಟ್ವಾಽಪಾಂಡವತ್ವವಿಧಿತ್ಸಯಾ ।**
**ಧರಾಯಾಂ ದ್ರೌಣಿನಾ ಮುಕ್ತಂ ಕೃಷ್ಣೇನ ಪ್ರೇರಿತೋಽರ್ಜುನಃ ॥ ೧೫೮ ॥**

**ಪದಚ್ಛೇದ :**– ತದಸ್ತ್ರಂ, ಪ್ರಜ್ವಲತ್, ದೃಷ್ಟ್ವಾ, ಅಪಾಂಡವವಿಧಿತ್ಸಯಾ, ಧರಾಯಾಂ, ದ್ರೌಣಿನಾ, ಮುಕ್ತಂ, ಕೃಷ್ಣೇನ, ಪ್ರೇರಿತಃ, ಅರ್ಜುನಃ ॥ ೧೫೮ ॥

**ಅರ್ಥ :- ಧರಾಯಾಂ** = ಭೂಮಿಯಲ್ಲಿ, **ಅಪಾಂಡವವಿಧಿತ್ಸಯಾ** = ಪಾಂಡವ ಸಂತತಿ ಇಲ್ಲದಂತೆ ಮಾಡಲು, **ದ್ರೌಣಿನಾ** = ಅಶ್ವತ್ಥಾಮನಿಂದ **ಮುಕ್ತಂ** = ಪ್ರಯೋಗಿಸಲ್ಪಟ್ಟ **ತದಸ್ತ್ರಂ** = ಆ ಬ್ರಹ್ಮಶಿರೋವಸ್ತ್ರವು **ಪ್ರಜ್ವಲತ್** = ಪ್ರಜ್ವಲಿಸುತ್ತಿರುವುದನ್ನು **ದೃಷ್ಟ್ವಾ** = ನೋಡಿ **ಕೃಷ್ಣೇನ** = ಕೃಷ್ಣನಿಂದ **ಪ್ರೇರಿತಃ** = ಪ್ರೇರಿಸಲ್ಪಟ್ಟ **ಅರ್ಜುನ** = ಅರ್ಜುನನನ್ನು (**ತದೇವಾಸ್ತ್ರಂ** = ಅದೇ ಅಸ್ತ್ರವನ್ನೇ **ವ್ಯಸರ್ಜಯತ್** = ಪ್ರಯೋಗಿಸಿದ.)

**ತಾತ್ಪರ್ಯ :-** ಭೂಮಿಯಲ್ಲಿ ಪಾಂಡವರ ಸಂತತಿಯೇ ಇಲ್ಲದಂತೆ ಮಾಡುವ ಉದ್ದೇಶದಿಂದ ಅಶ್ವತ್ಥಾಮನು ಪ್ರಯೋಗಿಸಿದ ಆ ಅಸ್ತ್ರವು ಪ್ರಜ್ವಲಿಸುತ್ತಾ ಬರುತ್ತಿರುವುದನ್ನು ಕಂಡ ಕೃಷ್ಣನಿಂದ ಪ್ರೇರಿತನಾದ ಅರ್ಜುನನ್ನು ಅದೇ ಅಸ್ತ್ರವನ್ನು ಅವನ ಮೇಲೆ ಹೂಡಿದನು.

**ಸ್ವಸ್ತ್ಯಸ್ತು ದ್ರೋಣಪುತ್ರಾಯ ಭೂತೇಭ್ಯೋ ಮಹ್ಯಮೇವ ಚ ।**
**ಇತಿ ಬ್ರುವಂಸ್ತದೇವಾಸ್ತ್ರಮಸ್ತ್ರಶಾಂತ್ಯೈ ವ್ಯಸರ್ಜಯತ್ ॥ ೧೫೯ ॥**

**ಪದಚ್ಛೇದ :**– ಸ್ವಸ್ತಿ, ಅಸ್ತು, ದ್ರೌಣಪುತ್ರಾಯ, ಭೂತೇಭ್ಯೋ, ಮಹ್ಯಂ, ಏವ, ಚ, ಇತಿ, ಬ್ರುವನ್, ತತ್, ಏವ, ಅಸ್ತ್ರಂ, ಅಸ್ತ್ರಶಾಂತ್ಯೈ, ವ್ಯಸಜಯತ್ ॥ ೧೫೯ ॥

**ಅರ್ಥ :- ದ್ರೋಣಪುತ್ರಾಯ** = ಅಶ್ವತ್ಥಾಮನಿಗೆ, **ಭೂತೇಭ್ಯೋ** = ಸಕಲ ಪ್ರಾಣಿ ಪಕ್ಷಿಗಳಿಗೆ, **ಮಹ್ಯಮೇವ ಚ** = ನನಗೂ **ಸ್ವಸ್ತ್ಯಸ್ತು** = ಮಂಗಳವಾಗಲಿ **ಇತಿ** = ಹೀಗೆಂದು **ಬ್ರುವನ** = ಹೇಳುತ್ತಾ **ಅಸ್ತ್ರಶಾಂತ್ಯೈ** = ಅಶ್ವತ್ಥಾಮನು ಪ್ರಯೋಗಿಸಿದ ಬ್ರಹ್ಮಶಿರೋತ್ರವ ಉಪರತಿಗಾಗಿ **ತದೇವ ಅಸ್ತ್ರಂ** = ಆ ಬ್ರಹ್ಮಶಿರೋಸ್ತ್ರವನ್ನೇ **ವ್ಯಸರ್ಜಯತ್** = ಪ್ರಯೋಗಿಸಿದ.

**ತಾತ್ಪರ್ಯ :-** ಅರ್ಜುನನು ಅಶ್ವತ್ಥಾಮ ಪ್ರಯೋಗಿಸಿದ ಅಸ್ತ್ರವನ್ನು ಶಾಂತವನ್ನಾಗಿಸಲು ಅದೇ ಬ್ರಹ್ಮಶಿರೋಸ್ತ್ರವನ್ನೆ ಪ್ರಯೋಗಿಸುತ್ತಾನೆ. ಆಗ ಅವನು ''ಅಶ್ವತ್ಥಾಮನಿಗೆ ಎಲ್ಲಾ ಭೂತಗಳಿಗೆ ನನಗೆ ಕ್ಷೇಮವಾಗಲಿ'' ಎಂದು ಹೇಳುತ್ತಾನೆ.

**ವಿವರಣೆ** :- ಅಶ್ವತ್ಥಾಮ ಪ್ರಯೋಗಿಸಿದ್ದು ಬ್ರಹ್ಮಶಿರೋಸ್ತ್ರ. ಅದನ್ನು ಶಾಂತಗೋಳಿಸಬೇಕಾದರೆ ಅದಕ್ಕೆ ಸಮವಾದ ಅಸ್ತ್ರ ಅವನ್ನು ಬಿಟ್ಟರೆ ಇನ್ನೊಂದಿಲ್ಲ. ಆದ್ದರಿಂದ ಅದೇ ಅಸ್ತ್ರವನ್ನು ಪ್ರಯೋಗಿಸಿದೆ.

**ಅನಸ್ತ್ರಜ್ಞೇಷು ಮುಕ್ತಂ ತದ್ಧನ್ಯಾದಸ್ತ್ರಮುಚಂ ಯತಃ ।**
**ಗುರುಭಕ್ತ್ಯಾ ತತೋ ದ್ರೌಣೇಃ ಸ್ವಸ್ತ್ಯಸ್ತ್ವಿತ್ಯಾಹ ವಾಸವಿಃ ॥ ೧೬೦ ॥**

ಪದಚ್ಛೇದ :– ಅನಸ್ತ್ರಜ್ಞೇಷು, ಮುಕ್ತಂ, ತತ್, ಹನ್ಯಾತ್, ಅಸ್ತ್ರಮುಚಂ, ಯತಃ, ಗುರುಭಕ್ತ್ಯಾ, ತತಃ, ದ್ರೌಣೇಃ, ಸ್ವಸ್ತ್ಯಸ್ತು, ಇತಿ, ಆಹ, ವಾಸವಿಃ ॥ ೧೬೦ ॥

**ಅರ್ಥ** :- **ಯತಃ** = ಯಾವ ಕಾರಣದಿಂದ, **ಅಸಸ್ತ್ರಜ್ಞೇಷು** = ಅಸ್ತ್ರಜ್ಞಾನವಿಲ್ಲದವರ ಮೇಲೆ **ಮುಕ್ತಂ** = ಪ್ರಯೋಗಿಸಲ್ಪಟ್ಟ **ತತ್** = ಆ ಅಸ್ತ್ರವು **ಅಸ್ತ್ರಮುಚಂ** = ಅಸ್ತ್ರ ಪ್ರಯೋಗಿಸಿದವರನ್ನೇ, **ಹನ್ಯಾತ್** = ಸಂಹರಿಸುತ್ತದೆ **ತತಃ** = ಆದ್ದರಿಂದ ವಾಸವಿಯು **ಗುರುಭಕ್ತ್ಯಾ** = ಗುರುಭಕ್ತಿಯಿಂದ **ದ್ರೌಣೇಃ** = ಅಶ್ವತ್ಥಾಮನಿಗೆ **ಸ್ವಸ್ತ್ಯಸ್ತು** = ಮಂಗಳವಾಗಲಿ **ಇತಿ ಆಹ** = ಎಂದನು.

**ತಾತ್ಪರ್ಯ** :- ಅಶ್ವತ್ಥಾಮನು ತನ್ನ ಗುರುಗಳಾದ ದ್ರೋಣಾಚಾರ್ಯರ ಮಗ. ಈಗ ಅವನಿಗೆ ಅಪಾಯವಿದೆ. ಏಕೆಂದರೆ ಅವನು ಪಾಂಡವರ ಮೇಲೆ ಬ್ರಹ್ಮಶಿರೋಸ್ತ್ರವನ್ನು ಪ್ರಯೋಗಿಸಿದ್ದಾನೆ. ಪಾಂಡವರ ಅರ್ಜುನ, ಭೀಮರನ್ನು ಬಿಟ್ಟರೆ ಉಳಿದ ಮೂವರಿಗೆ ಆ ಅಸ್ತ್ರವ ಜ್ಞಾನವಿಲ್ಲ ಆದ್ದರಿಂದ ಆ ಅಸ್ತ್ರವು ಅವನನ್ನೆ ಕೊಲ್ಲುತ್ತದೆ. ಅದಕ್ಕಾಗಿ ಗುರುಪುತ್ರನಿಗೆ ಕ್ಷೇಮವನ್ನು ಅರ್ಜುನ ಬಯಸಿದ.

**ತದಾಽಸ್ತ್ರಯೋಸ್ತು ಸಂಯೋಗೇ ಭೂತಾನಾಂ ಸಂಹೃತಿರ್ಭವೇತ್ ।**
**ಭೂತಾನಾಂ ಸ್ವಸ್ತಿರಪ್ಯತ್ರ ಕಾಂಕ್ಷಿತಾ ಕರುಣಾತ್ಮನಾ ॥ ೧೬೧ ॥**

ಪದಚ್ಛೇದ :– ತದಸ್ತ್ರಯೋಃ, ತು, ಸಂಯೋಗೇ, ಭೂತಾನಾಂ, ಸಂಹೃತಿಃ, ಭವೇತ್, ಭೂತಾನಾಂ, ಸ್ವಸ್ತಿಃ, ಅಪಿ, ಅತ್ರ, ಕಾಂಕ್ಷಿತಾ, ಕರುಣಾತ್ಮನಾ ॥ ೧೬೧ ॥

**ಅರ್ಥ** :- **ತದಸ್ತ್ರಯೋಃ ತು** = ಆ ಎರಡೂ ಬ್ರಹ್ಮಶಿರೋಸ್ತ್ರಗಳ **ಸಂಯೋಗೇ** = ಮೀಲನದಿಂದ **ಭೂತಾನಾಂ** = ಸಕಲ ಮನುಷ್ಯ, ಪ್ರಾಣಿ, ಪಕ್ಷಿಗಳ **ಸಂಹುತಿಃ** = ನಾಶವು **ಭವೇತ್** = ಉಂಟಾಗುತ್ತದೆ (**ಅತಃ** =

ಆದ್ದರಿಂದ) **ಕರುಣಾತ್ಮನಾ** = ಕೃಪಾಲುವಾದಾ ಅರ್ಜುನನಿಂದ **ಭೂತಾನಾಂ ಅಪಿ** = ಸಕಲ ಭೂತಗಳಿಗೂ **ಸ್ವಸ್ತಿಃ** = ಮಂಗಳವನ್ನೂ **ಅತ್ರ** = ಅಸ್ತ್ರ ಪ್ರಯೋಗದಲ್ಲಿ **ಕಾಂಕ್ಷಿತಾ** = ಪ್ರಾರ್ಥಿಸಲ್ಪಟ್ಟಿತು.

**ತಾತ್ಪರ್ಯ** :- ಒಂದು ವೇಳೆ ಆ ಎರಡು ಅಸ್ತ್ರಗಳು ಸೇರಿದರೆ ಎಲ್ಲಾ ಪ್ರಾಣಿಗಳು ನಾಶವಾಗುತ್ತವೆ. ಆದ್ದರಿಂದಲೇ ಅರ್ಜುನನು ಅವುಗಳ ಮೇಲಿನ ಕರುಣೆಯಿಂದ ತಾನು ಅಸ್ತ್ರವನ್ನು ಪ್ರಯೋಗಿಸುವಾಗ ಭೂತಗಳಿಗೂ ಮಂಗಳವನ್ನು ಹಾರೈಸಿದ.

**ವಿವರಣೆ** :- ಅರ್ಜುನನು ''ದ್ರೋಣಪುತ್ರಾಯ, ಭೂತೇಭ್ಯೋ, ಮಹ್ಯಂ ಸ್ವಸ್ತಿ'' ಎಂದು ಹೇಳಿದ. ಅದರಲ್ಲಿ ಅಶ್ವತ್ಥಾಮನಿಗೆ ಸ್ವಸ್ತಿ ಹೇಳಿದ್ದಕ್ಕೆ ಕಾರಣವನ್ನು ತಿಳಿಸಿ. ಈಗ ಭೂತೇಭ್ಯಃ ಸ್ವಸ್ತಿ ಎಂದು ಹೇಳಿದ್ದರ ಅಭಿಪ್ರಾಯವನ್ನು ತಿಳಿಸುತ್ತಿದ್ದಾರೆ. ಇನ್ನು ಅಸ್ತ್ರವನ್ನು ಪ್ರಯೋಗಿಸಿದ್ದರಲ್ಲಿ ತಾನೂ ಒಬ್ಬ ಗುರಿಯೇ ಆದ್ದರಿಂದ ತನಗೂ ಸ್ವಸ್ತಿಯನ್ನು ಹೇಳಿದ ಎಂಬುದು ಸ್ಪಷ್ಟವಾದ್ದರಿಂದ ಹೇಳಲಿಲ್ಲ.

**ತಥಾಽಪ್ಯಸ್ತ್ರದ್ವಯಂ ಯುಕ್ತಂ ಭೂತಾನಾಂ ನಾಶಕೃದ್ ಧ್ರುವಮ್ ।**
**ತಸ್ಮಾನ್ನಿವಾರಯನ್ ಯೋಗಂ ತಯೋರ್ಮಧ್ಯೇಽಭವತ್ ಕ್ಷಣಾತ್ ।।೧೬೨।।**

**ಪದಚ್ಛೇದ** :- **ತಥಾ, ಅಪಿ, ಅಸ್ತ್ರದ್ವಯಂ, ಯುಕ್ತಂ, ಭೂತಾನಾಂ, ನಾಶಕೃತ್, ಧ್ರುವಂ, ತಸ್ಮಾತ್, ನಿವಾರಯನ್, ಯೋಗಂ, ತಯೋಃ, ಮಧ್ಯೇ, ಅಭವತ್, ಕ್ಷಣಾತ್ ।। ೧೬೨ ।।**

**ಅರ್ಥ** :- **ತಥಾಽಪಿ** = ಆದರೂ **ಅಸ್ತ್ರದ್ವಯಂ** = ಆ ಎರಡು ಅಸ್ತ್ರಗಳು **ಯುಕ್ತಂ** = ಸೇರಿದರೆ **ಭೂತಾನಾಂ** = ಪಶು ಪಕ್ಷಿಗಳಿಗೆ **ಧ್ರುವಂ** = ನಿಶ್ಚಯವಾಗಿಯೂ **ನಾಶಕೃತ್** = ನಾಶವನ್ನುಂಟು ಮಾಡುತ್ತವೆ **ತಸ್ಮಾತ್** = ಆದ್ದರಿಂದಲೇ **ಯೋಗಂ** = ಆ ಎರಡು ಅಸ್ತ್ರಗಳ ಜೊಡಣೆನ್ನು **ನಿವಾರಯನ್** = ತಡೆಯುವವರಾಗಿ (**ಕೃಷ್ಣಃ** = ವೇದ ವ್ಯಾಸದೇವರು) **ತಯೋಃ** = ಆ ಎರಡು ಅಸ್ತ್ರಗಳ **ಮಧ್ಯೇ** = ಮಧ್ಯದಲ್ಲಿ **ಕ್ಷಣಾತ್** = ಕೂಡಲೇ **ಅಭವತ್** = ಬಂದು ನಿಂತರು.

**ತಾತ್ಪರ್ಯ** :- ಅರ್ಜುನನು ದ್ರೌಣಿಗೆ, ಪ್ರಾಣಿಗಳಿಗೆ ಎಷ್ಟೇ ಮಂಗಳ ವನ್ನು ಹಾರೈಸಿದರೂ ಆ ಎರಡು ಅಸ್ತ್ರಗಳ ಸೇರಿವಿಕೆಯಿಂದ ಸಮಗ್ರ ಪ್ರಪಂಚಕ್ಕೆ ನಾಶವಂತೂ ನಿಶ್ಚಿತವೇ ಆಗಿತ್ತು. ಅವೆರಡನ್ನು ತಡೆಯಬೇಕಾದರೆ ಆ ಅಸ್ತ್ರಗಳ ಪ್ರತಿಪಾದ್ಯರೇ ಆದ ವೇದವ್ಯಾಸದೇವರೇ ಶಕ್ತರು ಅದಕ್ಕೆ ಅವರೇ ಬಂದು ನಿಂತರು.

**ನಿಸ್ಸೀಮಶಕ್ತಿಃ ಪರಮಃ ಕೃಷ್ಣಃ ಸತ್ಯವತೀಸುತಃ ।**
**ಸಂಸ್ಥಾಪ್ಯಾಸ್ತ್ರದ್ವಯಂ ದೂರೇ ತಾವಾಹ ಪುರುಷೋತ್ತಮಃ ॥ ೧೬೩ ॥**

ಪದಚ್ಛೇದ :– ನಿಸ್ಸೀಮಶಕ್ತಿಃ, ಪರಮಃ, ಕೃಷ್ಣಃ, ಸತ್ಯವತೀಸುತಃ, ಸಂಸ್ಥಾಪ್ಯ, ಅಸ್ತ್ರದ್ವಯಂ, ದೂರೇ, ತಾ, ಆಹ, ಪುರುಷೋತ್ತಮಃ ॥ ೧೬೩ ॥

**ಅರ್ಥ** :- **ನಿಃಸೀಮಶಕ್ತಿಃ** = ಅಪಾರಶಕ್ತಿಯುಳ್ಳ **ಪರಮಃ** = ಸರ್ವೋತ್ತಮರಾದ **ಪುರುಷೋತ್ತಮಃ** = ಪುರುಷಶ್ರೇಷ್ಠರಾದ **ಸತ್ಯವತೀಸುತಃ** = ಸತ್ಯವತಿಯಲ್ಲಿ ಮಗನೆಂದು ಅವತರಿಸಿದ **ಕೃಷ್ಣಃ** = ವೇದವ್ಯಾಸದೇವರು **ಅಸ್ತ್ರದ್ವಯಂ** = ಆ ಎರಡು ಬ್ರಹ್ಮಶಿರೋಸ್ತ್ರಗಳನ್ನು **ದೂರೇ** = ದೂರದಲ್ಲಿ **ಸಂಸ್ಥಾಪ್ಯ** = ನಿಲ್ಲಿಸಿ **ತೌ** = ಆ ಅರ್ಜುನಾಶ್ವತ್ಥಾಮರಿಗೆ **ಆಹ** = ಹೇಳಿದರು.

**ತಾತ್ಪರ್ಯ** :- ಅಮಿತ ಶಕ್ತಿಯುಳ್ಳ, ಪುರುಷೋತ್ತಮರಾದ ಸರ್ವೋತ್ತಮ ರಾದ ಸತ್ಯವತೀಸುತರಾದ ಆ ವೇದವ್ಯಾಸದೇವರು ಆ ಎರಡು ಅಸ್ತ್ರಗಳ ಮಧ್ಯದಲ್ಲಿ ನಿಂತು ಅವುಗಳು ದೂರದಲ್ಲೆ ನಿಲ್ಲಿಸಿ, ಇವುಗಳನ್ನು ಪ್ರಯೋಗಿಸಿದ ಆ ಅರ್ಜುನಾಶ್ವತ್ಥಾಮರನ್ನು ಕುರಿತು ಹೀಗೆ ಹೇಳುತ್ತಾರೆ.

**ವಿವರಣೆ** :- ಪ್ರಪಂಚವನ್ನೇ ನಾಶಮಾಡುವಂತಹ ಆ ಎರಡು ಅಸ್ತ್ರಗಳನ್ನು ಅನಾಯಾಸವಾಗಿ ತಡೆಯುವುದರ ಮೂಲಕ ತಮ್ಮ ಶಕ್ತಿ ಅಪರಿಮಿತ ಎಂದು ತೋರಿಸಿದ್ದಾರೆ ವೇದವ್ಯಾಸರು.

**ಸಂತಿ ಹ್ಯಸ್ತ್ರವಿದಃ ಪೂರ್ವಂ ಪ್ರಾಯಶ್ಚೈ ತನ್ನ ತೈಃ ಕೃತಮ್ ।**
**ಲೋಕೋಪದ್ರವಕೃತ್ ಕರ್ಮ ಸಂತಃ ಕುರ್ಯುಃ ಕಥಂ ಕ್ವಚಿತ್ ॥ ೧೬೪ ॥**

ಪದಚ್ಛೇದ :– ಸಂತಿ, ಹಿ, ಅಸ್ತ್ರವಿದಃ, ಪೂರ್ವಂ, ಪ್ರಾಯಃ, ಚ, ಏತತ್, ನ, ತೈಃ, ಕೃತಂ, ಲೋಕೊಪದ್ರವಕೃತ್, ಕರ್ಮ, ಸಂತಃ, ಕುರ್ಯುಃ, ಕಥಂ, ಕ್ವಚಿತ್ ॥ ೧೬೪ ॥

ಆದ್ದರಿಂದ) **ಕರುಣಾತ್ಮನಾ** = ಕೃಪಾಲುವಾದಾ ಅರ್ಜುನನಿಂದ **ಭೂತಾನಾಂ ಅಪಿ** = ಸಕಲ ಭೂತಗಳಿಗೂ **ಸ್ವಸ್ತಿಃ** = ಮಂಗಳವನ್ನೂ **ಅತ್ರ** = ಅಸ್ತ್ರ ಪ್ರಯೋಗದಲ್ಲಿ **ಕಾಂಕ್ಷಿತಾ** = ಪ್ರಾರ್ಥಿಸಲ್ಪಟ್ಟಿತು.

**ತಾತ್ಪರ್ಯ** :- ಒಂದು ವೇಳೆ ಆ ಎರಡು ಅಸ್ತ್ರಗಳು ಸೇರಿದರೆ ಎಲ್ಲಾ ಪ್ರಾಣಿಗಳು ನಾಶವಾಗುತ್ತವೆ. ಆದ್ದರಿಂದಲೇ ಅರ್ಜುನನು ಅವುಗಳ ಮೇಲಿನ ಕರುಣೆಯಿಂದ ತಾನು ಅಸ್ತ್ರವನ್ನು ಪ್ರಯೋಗಿಸುವಾಗ ಭೂತಗಳಿಗೂ ಮಂಗಳವನ್ನು ಹಾರೈಸಿದ.

**ವಿವರಣೆ** :- ಅರ್ಜುನನು ''ದ್ರೋಣಪುತ್ರಾಯ, ಭೂತೇಭ್ಯೋ, ಮಹ್ಯಂ ಸ್ವಸ್ತಿ'' ಎಂದು ಹೇಳಿದ. ಅದರಲ್ಲಿ ಅಶ್ವತ್ಥಾಮನಿಗೆ ಸ್ವಸ್ತಿ ಹೇಳಿದ್ದಕ್ಕೆ ಕಾರಣವನ್ನು ತಿಳಿಸಿ. ಈಗ ಭೂತೇಭ್ಯಃ ಸ್ವಸ್ತಿ ಎಂದು ಹೇಳಿದ್ದರ ಅಭಿಪ್ರಾಯವನ್ನು ತಿಳಿಸುತ್ತಿದ್ದಾರೆ. ಇನ್ನು ಅಸ್ತ್ರವನ್ನು ಪ್ರಯೋಗಿಸಿದ್ದರಲ್ಲಿ ತಾನೂ ಒಬ್ಬ ಗುರಿಯೇ ಆದ್ದರಿಂದ ತನಗೂ ಸ್ವಸ್ತಿಯನ್ನು ಹೇಳಿದ ಎಂಬುದು ಸ್ಪಷ್ಟವಾದ್ದರಿಂದ ಹೇಳಲಿಲ್ಲ.

**ತಥಾಽಪ್ಯಸ್ತ್ರದ್ವಯಂ ಯುಕ್ತಂ ಭೂತಾನಾಂ ನಾಶಕೃದ್ ಧ್ರುವಮ್ ।**
**ತಸ್ಮಾನ್ನಿವಾರಯನ್ ಯೋಗಂ ತಯೋರ್ಮಧ್ಯೇಽಭವತ್ ಕ್ಷಣಾತ್ ॥೧೬೨॥**

**ಪದಚ್ಛೇದ** :- ತಥಾ, ಅಪಿ, ಅಸ್ತ್ರದ್ವಯಂ, ಯುಕ್ತಂ, ಭೂತಾನಾಂ, ನಾಶಕೃತ್, ಧ್ರುವಂ, ತಸ್ಮಾತ್, ನಿವಾರಯನ್, ಯೋಗಂ, ತಯೋಃ, ಮಧ್ಯೇ, ಅಭವತ್, ಕ್ಷಣಾತ್ ॥ ೧೬೨ ॥

**ಅರ್ಥ** :- **ತಥಾಽಪಿ** = ಆದರೂ **ಅಸ್ತ್ರದ್ವಯಂ** = ಆ ಎರಡು ಅಸ್ತ್ರಗಳು **ಯುಕ್ತಂ** = ಸೇರಿದರೆ **ಭೂತಾನಾಂ** = ಪಶು ಪಕ್ಷಿಗಳಿಗೆ **ಧ್ರುವಂ** = ನಿಶ್ಚಯವಾಗಿಯೂ **ನಾಶಕೃತ್** = ನಾಶವನ್ನುಂಟು ಮಾಡುತ್ತವೆ **ತಸ್ಮಾತ್** = ಆದ್ದರಿಂದಲೇ **ಯೋಗಂ** = ಆ ಎರಡು ಅಸ್ತ್ರಗಳ ಜೊಡಣೆನ್ನು **ನಿವಾರಯನ್** = ತಡೆಯುವವರಾಗಿ (**ಕೃಷ್ಣಃ** = ವೇದ ವ್ಯಾಸದೇವರು) **ತಯೋಃ** = ಆ ಎರಡು ಅಸ್ತ್ರಗಳ **ಮಧ್ಯೇ** = ಮಧ್ಯದಲ್ಲಿ **ಕ್ಷಣಾತ್** = ಕೂಡಲೇ **ಅಭವತ್** = ಬಂದು ನಿಂತರು.

**ತಾತ್ಪರ್ಯ** :- ಅರ್ಜುನನು ದ್ರೌಣಿಗೆ, ಪ್ರಾಣಿಗಳಿಗೆ ಎಷ್ಟೇ ಮಂಗಳ ವನ್ನು ಹಾರೈಸಿದರೂ ಆ ಎರಡು ಅಸ್ತ್ರಗಳ ಸೇರಿವಿಕೆಯಿಂದ ಸಮಗ್ರ ಪ್ರಪಂಚಕ್ಕೆ ನಾಶವಂತೂ ನಿಶ್ಚಿತವೇ ಆಗಿತ್ತು. ಅವೆರಡನ್ನು ತಡೆಯಬೇಕಾದರೆ ಆ ಅಸ್ತ್ರಗಳ ಪ್ರತಿಪಾದ್ಯರೇ ಆದ ವೇದವ್ಯಾಸದೇವರೇ ಶಕ್ತರು ಅದಕ್ಕೆ ಅವರೇ ಬಂದು ನಿಂತರು.

**ನಿಸ್ಸೀಮಶಕ್ತಿಃ ಪರಮಃ ಕೃಷ್ಣಃ ಸತ್ಯವತೀಸುತಃ ।**
**ಸಂಸ್ಥಾಪ್ಯಾಸ್ತ್ರದ್ವಯಂ ದೂರೇ ತಾವಾಹ ಪುರುಷೋತ್ತಮಃ ॥ ೧೬೩ ॥**

**ಪದಚ್ಛೇದ** :- **ನಿಸ್ಸೀಮಶಕ್ತಿಃ, ಪರಮಃ, ಕೃಷ್ಣಃ, ಸತ್ಯವತೀಸುತಃ, ಸಂಸ್ಥಾಪ್ಯ, ಅಸ್ತ್ರದ್ವಯಂ, ದೂರೇ, ತಾ, ಆಹ, ಪುರುಷೋತ್ತಮಃ ॥ ೧೬೩ ॥**

**ಅರ್ಥ** :- **ನಿಃಸೀಮಶಕ್ತಿಃ** = ಅಪಾರಶಕ್ತಿಯುಳ್ಳ **ಪರಮಃ** = ಸರ್ವೋತ್ತಮರಾದ **ಪುರುಷೋತ್ತಮಃ** = ಪುರುಷಶ್ರೇಷ್ಠರಾದ **ಸತ್ಯವತೀಸುತಃ** = ಸತ್ಯವತಿಯಲ್ಲಿ ಮಗನೆಂದು ಅವತರಿಸಿದ **ಕೃಷ್ಣಃ** = ವೇದವ್ಯಾಸದೇವರು **ಅಸ್ತ್ರದ್ವಯಂ** = ಆ ಎರಡು ಬ್ರಹ್ಮಶಿರೋಸ್ತ್ರಗಳನ್ನು **ದೂರೇ** = ದೂರದಲ್ಲಿ **ಸಂಸ್ಥಾಪ್ಯ** = ನಿಲ್ಲಿಸಿ **ತೌ** = ಆ ಅರ್ಜುನಾಶ್ವತ್ಥಾಮರಿಗೆ **ಆಹ** = ಹೇಳಿದರು.

**ತಾತ್ಪರ್ಯ** :- ಅಮಿತ ಶಕ್ತಿಯುಳ್ಳ, ಪುರುಷೋತ್ತಮರಾದ ಸರ್ವೋತ್ತಮ ರಾದ ಸತ್ಯವತೀಸುತರಾದ ಆ ವೇದವ್ಯಾಸದೇವರು ಆ ಎರಡು ಅಸ್ತ್ರಗಳ ಮಧ್ಯದಲ್ಲಿ ನಿಂತು ಅವುಗಳು ದೂರದಲ್ಲೆ ನಿಲ್ಲಿಸಿ, ಇವುಗಳನ್ನು ಪ್ರಯೋಗಿಸಿದ ಆ ಅರ್ಜುನಾಶ್ವತ್ಥಾಮರನ್ನು ಕುರಿತು ಹೀಗೆ ಹೇಳುತ್ತಾರೆ.

**ವಿವರಣೆ** :- ಪ್ರಪಂಚವನ್ನೇ ನಾಶಮಾಡುವಂತಹ ಆ ಎರಡು ಅಸ್ತ್ರಗಳನ್ನು ಅನಾಯಾಸವಾಗಿ ತಡೆಯುವುದರ ಮೂಲಕ ತಮ್ಮ ಶಕ್ತಿ ಅಪರಿಮಿತ ಎಂದು ತೋರಿಸಿದ್ದಾರೆ ವೇದವ್ಯಾಸರು.

**ಸಂತಿ ಹ್ಯಸ್ತ್ರವಿದಃ ಪೂರ್ವಂ ಪ್ರಾಯಶ್ಚೈ ತನ್ನ ತೈಃ ಕೃತಮ್ ।**
**ಲೋಕೋಪದ್ರವಕೃತ್ ಕರ್ಮ ಸಂತಃ ಕುರ್ಯುಃ ಕಥಂ ಕ್ವಚಿತ್ ॥ ೧೬೪ ॥**

**ಪದಚ್ಛೇದ** :- **ಸಂತಿ, ಹಿ, ಅಸ್ತ್ರವಿದಃ, ಪೂರ್ವಂ, ಪ್ರಾಯಃ, ಚ, ಏತತ್, ನ, ತೈಃ, ಕೃತಂ, ಲೋಕೊಪದ್ರವಕೃತ್, ಕರ್ಮ, ಸಂತಃ, ಕುರ್ಯುಃ, ಕಥಂ, ಕ್ವಚಿತ್ ॥ ೧೬೪ ॥**

**ಅರ್ಥ** :- **ಪೂರ್ವಂ** = ಹಿಂದೆಯೂ **ಅಸ್ತ್ರವಿದಃ** = ಈ ಬ್ರಹ್ಮ ಶಿರೋಸ್ತ್ರವನ್ನು ಬಲ್ಲವರು **ಸಂತಿ ಹಿ** = ಇದ್ದೇ ಇದ್ದರು (**ಪರಂತು** = ಆದರೆ) **ಪ್ರಾಯಃ** = ಬಹುಶಃ **ತೈಃ ಚ** = ಅವರಿಂದಲಾದರೂ **ಏತತ್** = ಈ ಅಸ್ತ್ರದ ಪ್ರಯೋಗವು **ನ ಕೃತಂ** = ಮಾಡಲ್ಪಟ್ಟಿರಲಿಲ್ಲ **ಲೋಕೋಪದ್ರವಕೃತ್** = ಜಗತ್ತಿಗೆ ತೊಂದರೆಯನ್ನುಂಟು ಮಾಡುವ **ಕರ್ಮ** = ಕೆಲಸವನ್ನು **ಸಂತಃ** = ಸಜ್ಜನರಾದವರು **ಕ್ವಚಿತ್** = ಎಲ್ಲಿಯಾದರೂ **ಕಥಂ** = ಹೇಗೆ ತಾನೆ **ಕುರ್ಯುಃ** = ಮಾಡುತ್ತಾರೆ.

**ತಾತ್ಪರ್ಯ** :- ಈ ಬ್ರಹ್ಮಶಿರೋಸ್ತ್ರವನ್ನು ಬಲ್ಲವರು ಹಿಂದೆಯೂ ಇದ್ದೇ ಇದ್ದರು. ಅವರಾರೂ ಹೀಗೆ ಪ್ರಯೋಗ ಮಾಡಲಿಲ್ಲ. ಸಜ್ಜನರು ಇಂತಹ ಜಗತ್ತಿಗೇ ಅನಿಷ್ಟವನ್ನುಂಟು ಮಾಡುವ ಕೆಲಸವನ್ನು ಎಲ್ಲಿಯಾದರೂ ಮಾಡುವರೇ ಮಾಡುವುದಿಲ್ಲ ಎಂದರ್ಥ.

**ಇತ್ಯುಕ್ತೇ ಫಲ್ಗುನಃ ಪ್ರಾಹ ಮಯಾ ಮುಕ್ತಂ ಮಹಾಪದಿ ।**
**ಶಾಂತ್ಯರ್ಥಮೇವ ಚ ವಿಭೋ ಕ್ಷಂತವ್ಯಂ ಭವತಾ ತತಃ ॥ ೧೬೫ ॥**

**ಪದಚ್ಛೇದ** :- **ಇತಿ, ಉಕ್ತೇ, ಫಲ್ಗುನಃ, ಪ್ರಾಹ, ಮಯಾ, ಮುಕ್ತ, ಮಹಾಪದಿ, ಶಾಂತ್ಯರ್ಥಂ, ಏವ, ಚ, ವಿಭೋ, ಕ್ಷಂತವ್ಯಂ, ಭವತಾ, ತತಃ ॥ ೧೬೫ ॥**

**ಅರ್ಥ** :- **ಇತ್ಯುಕ್ತೇ** = ವೇದವ್ಯಾಸದೇವರು ಹೀಗೆನ್ನಲು **ಫಲ್ಗುನಃ** = ಅರ್ಜುನನು **ಪ್ರಾಹ** = ಹೇಳಿದನು **ಮಯಾ** = ನನ್ನಿಂದ **ಮಹಾಪದಿ** = ಮಹಾ ಆಪತ್ತಿನಲ್ಲಿ **ಶಾಂತ್ಯರ್ಥಮೇವ** = ಆ ಅಸ್ತ್ರದ ಶಾಂತಿಗಾಗಿಯೇ **ಮುಕ್ತಂ** = ಪ್ರಯೋಗಿಸಲ್ಪಟ್ಟಿದೆ **ತತಃ** = ಆದ್ದರಿಂದ **ವಿಭೋ** = ಎಲೈ ಪ್ರಭುವೇ **ಭವತಾ** = ನಿಮ್ಮಿಂದ **ಕ್ಷಂತ್ಯವ್ಯಂ** = ಕ್ಷಮಿಸಲ್ಪಡಬೇಕು.

**ತಾತ್ಪರ್ಯ** :- ವೇದವ್ಯಾಸರು ಹೀಗೆನ್ನಲು ಅರ್ಜುನನು ಅವರಿಗೆ ಹೇಳಿದನು. ನಾನು ಈ ಅಸ್ತ್ರವನ್ನು ಮಹಾ ಆಪತ್ತಿನಲ್ಲಿ ಶಾಂತಿಗೋಸ್ಕರವೇ ಪ್ರಯೋಗಿಸಿದ್ದೇನೆ. ಆದ್ದರಿಂದ ನಾನು ಮಾಡಿದ್ದುಕ್ಕೆ ಕ್ಷಮಿಸಬೇಕು.

**ವಿವರಣೆ** :- ಅರ್ಜುನನೇ ತಾನು ಹಿಂದೆ ''ಸ್ವಸ್ತ್ಯಸ್ತು ದ್ರೋಣಪುತ್ರಾಯ ಭೂತೇಭ್ಯೋ ಮಶ್ರಮೇವ ಚ'' ಎಂದು ಅಸ್ತ್ರ ಪ್ರಯೋಗಕಾಲದಲ್ಲಿ ಹೇಳಿದ್ದರಿಂದ ಶಾಂತಿಗಾಗಿಯೇ ಎಂದು ತಿಳಿಯುತ್ತದೆ.

**ದ್ರೌಣಿರಪ್ಯೇವಮೇವಾಽಹ ತೌ ವೇದಪತಿರಬ್ರವೀತ್ ।**
**ನಿವರ್ತ್ಯತಾಮಸ್ತ್ರಮಿತಿ ಶಕ್ರಸೂನುಸ್ತಥಾಽಕರೋತ್ ।**
**ನಿವರ್ತನಾಪ್ರಭುಂ ದ್ರೌಣಿಂ ವಾಸುದೇವೋಽಭ್ಯಭಾಷತ ॥ ೧೬೬ ॥**

ಪದಚ್ಛೇದ :- ದ್ರೌಣಿಃ, ಅಪಿ, ಏವಂ, ಏವ, ಆಹ, ತೌ, ವೇದಪತಿಃ, ಅಬ್ರವೀತ್, ನಿವರ್ತ್ಯತಾಂ, ಅಸ್ತ್ರಂ, ಇತಿ, ಶಕ್ರಸೂನುಃ, ತಥಾ, ಅಕರೋತ್, ನಿವರ್ತನಾಪ್ರಭುಂ, ದ್ರೌಣಿಂ, ವಾಸುದೇವಃ, ಅಭ್ಯಭಾಷಿತಃ ॥ ೧೬೬ ॥

**ಅರ್ಥ :- ದ್ರೌಣಿರಪಿ** = ಅಶ್ವತ್ಥಾಮನೂ **ಏವಮೇವ** = ಅರ್ಜುನ ಹೇಳಿದಂತೆಯೇ **ಆಹ** = ಹೇಳಿದ **ವೇದಪತಿಃ** = ವೇದವ್ಯಾಸರು **ತೌ** = ಅವರಿಬ್ಬರನ್ನು ಕುರಿತು **ಅಸ್ತ್ರಂ** = ಈ ಬ್ರಹ್ಮಶಿರೋಸ್ತ್ರವು **ನಿವರ್ತ್ಯತಾಂ** = ಹಿಂತೆಗೆದುಕೊಳ್ಳಲ್ಪಡಲಿ **ಇತಿ** = ಎಂದು **ಅಬ್ರವೀತ್** = ಹೇಳಿದರು **ಶಕ್ರಸೂನುಃ** = ಅರ್ಜುನನು **ತಥಾ** = ಹಾಗೆಯೇ **ಅಕರೋತ** = ಮಾಡಿದನು **ನಿವರ್ತನಾಪ್ರಭುಂ** = ಹಿಂತೆಗೆದುಕೊಳ್ಳುವುದರಲ್ಲಿ ಅಶಕ್ತನಾದ **ದ್ರೌಣೀ** = ಅಶ್ವತ್ಥಾಮನನ್ನು ಕುರಿತು **ವಾಸುದೇವಃ** = ಶ್ರೀ ಕೃಷ್ಣನು ಅಭ್ಯಭಾಷತ.

**ತಾತ್ಪರ್ಯ :-** ಅಶ್ವತ್ಥಾಮನೂ ಅರ್ಜುನ ಹೇಳಿದಂತೆಯೇ ಹೇಳಿದ. ಆಗ ವೇದವ್ಯಾಸರು ಬ್ರಹ್ಮಾಸ್ತ್ರವನ್ನು ಇಬ್ಬರೂ ಹಿಂತೆಗೆದುಕೊಳ್ಳಿ ಎಂದರು. ಅರ್ಜುನನು ಅವರ ಮಾತಿನಂತೆ ಹಿಂತೆಗೆದುಕೊಂಡನು. ಹಿಂತೆಗೆದುಕೊಳ್ಳಲು ಅಶಕ್ತನಾದ ಅಶ್ವತ್ಥಾಮನಿಗೆ ಶ್ರೀಕೃಷ್ಣನು ಹೇಳಿದನು.

**ಕ್ಷತ್ರತೇಜಾ ಬ್ರಹ್ಮಚಾರೀ ಕೌಮಾರಾದಪಿ ಪಾಂಡವಃ ।**
**ನಿವರ್ತನೇ ತತಃ ಶಕ್ತೋ ನಾಯಂ ದ್ರೋಣಾತ್ಮಜೋಽಪಿ ಸನ್ ॥ ೧೬೭ ॥**

ಪದಚ್ಛೇದ :- ಕ್ಷತ್ರತೇಜಾಃ, ಬ್ರಹ್ಮಚಾರೀ, ಕೌಮಾರಾತ್, ಅಪಿ, ಪಾಂಡವಃ, ನಿವರ್ತನೇ, ತತಃ, ಶಕ್ತಃ, ನ, ಅಯಂ, ದ್ರೋಣಾತ್ಮಜಃ, ಅಪಿ, ಸನ್ ॥ ೧೬೭ ॥

**ಅರ್ಥ :- ಪಾಂಡವಃ** = ಅರ್ಜುನನು, **ಕೌಮಾರಾತ್** = ಬಾಲ್ಯದಿಂದಲೂ **ಕ್ಷತ್ರತೇಜೌಃ** = ಕ್ಷತ್ರಿಯ ತೇಜಸ್ಸುಳ್ಳವನು **ಬ್ರಹ್ಮಚಾರೀ** = ಬ್ರಹ್ಮಚರ್ಯನಿಷ್ಠನು **ತತಃ** = ಆದ್ದರಿಂದಲೇ **ನಿವರ್ತನೇ** = ಬ್ರಹ್ಮಶಿರೋಸ್ತ್ರವನ್ನು ಹಿಂತೆಗೆದುಕೊಳ್ಳುವುದರಲ್ಲಿ **ಶಕ್ತಃ** = ಸಮರ್ಥನಾದನು **ಅಯಂ** = ಈ

ಅಶ್ವತ್ಥಾಮನು **ದ್ರೋಣಾತ್ಮಜಃ ಅಪಿ ಸನ್** = ದ್ರೋಣರ ಪುತ್ರನಾಗಿದ್ದರೂ **ನ ಶಕ್ತಃ** = ಆ ಅಸ್ತ್ರವನ್ನು ಹಿಂತೆಗೆದುಕೊಳ್ಳಲು ಶಕ್ತನಾಗಲಿಲ್ಲ.

**ತಾತ್ಪರ್ಯ** :- ಕ್ಷಾತ್ರತೇಜೋಯುಕ್ತನಾದ ಬಾಲ್ಯದಿಂದಲೂ ಬ್ರಹ್ಮಚಾರಿಯಾಗಿದ್ದವನು ಅರ್ಜುನ. ಆದ್ದರಿಂದ ಅವನು ಅಸ್ತ್ರವನ್ನು ಹಿಂತಿರುಗಿಸಿಕೊಳ್ಳಲು ಶಕ್ತನಾಗಿದ್ದಾನೆ. ಆದರೆ ಅಶ್ವತ್ಥಾಮನು ದ್ರೋಣಪುತ್ರನಾದರೂ ಬ್ರಹ್ಮಚರ್ಯ ರಹಿತನಾಗಿದ್ದರಿಂದ ಅಸ್ತ್ರವನ್ನು ಹಿಂತಿರುಗಿಸಲು ಸಮರ್ಥನಾಗಲಿಲ್ಲ.

**ಅಬ್ರಹ್ಮಚರ್ಯಾದಿತ್ಯುಕ್ತೇ ವ್ಯಾಸೋ ದ್ರೌಣಿಮಭಾಷತ ।**
**ನಿವರ್ತನಾಸಮರ್ಥಸ್ತ್ವಂ ದೇಹಿ ನೈಸರ್ಗಿಕಂ ಮಣಿಮ್ ॥ ೧೬೮ ॥**

**ಪದಚ್ಛೇದ** :- **ಅಬ್ರಹ್ಮಚರ್ಯಾತ್, ಇತಿ, ಉಕ್ತೇ, ವ್ಯಾಸಃ, ದ್ರೌಣಿಂ, ಅಭಾಷಿತ, ನಿವರ್ತನಾಸಮರ್ಥಃ, ತ್ವಂ, ದೇಹಿ, ನೈಸರ್ಗಿಕಂ, ಮಣಿಂ ॥ ೧೬೮ ॥**

**ಅರ್ಥ** :- **ಅಬ್ರಹ್ಮಚರ್ಯಾತ್** = ಬ್ರಹ್ಮಚರ್ಯವಿಲ್ಲದ್ದರಿಂದ (**ನ ಶಕ್ತ** = ಸಮರ್ಥನಾಗಲಿಲ್ಲ) **ಇತಿ ಉಕ್ತೇ** = ಹೀಗೆನ್ನಲು **ವ್ಯಾಸಃ** = ವೇದವ್ಯಾಸರ, **ದ್ರೌಣಿಂ** = ಅಶ್ವತ್ಥಾಮನನ್ನು ಕುರಿತು **ನಿವರ್ತನಾಸಮರ್ಥಃ** = ಅಸ್ತ್ರವನ್ನು ಹಿಂದೆ ಪಡೆಯಲು **ಅಶಕ್ತನಾದ ತ್ವಂ** = ನೀನು **ನೈಸರ್ಗಿಕಂ** = ಸ್ವಾಭಾವಿಕವಾಗಿ ಇರುವ **ಮಣಿಂ** = ಮಣಿಯನ್ನು **ದೇಹಿ** = ಕೊಡು.

**ತಾತ್ಪರ್ಯ** :- ಅಶ್ವತ್ಥಾಮನು ಬ್ರಹ್ಮಚರ್ಯವಿಲ್ಲವಾದ್ದರಿಂದ ಆ ಅಸ್ತ್ರವನ್ನು ಹಿಂತಿರುಗಿಸಲು ಆಗಲಿಲ್ಲ ಎಂದು ಶ್ರೀಕೃಷ್ಣ ಹೇಳಿದಾಗ ವೇದವ್ಯಾಸರು ಅಶ್ವತ್ಥಾಮನನ್ನು ಕುರಿತು ಹೇಳಿದರು. ಆ ಬ್ರಹ್ಮಾಸ್ತ್ರವನ್ನು ಉಪಸಂಹರಿಸಲು ಅಸಮರ್ಥನಾದ ನೀನು ನಿನ್ನಲ್ಲಿ ಸ್ವಾಭಾವಿಕವಾಗಿ ಇರುವ ಆ ಮಣಿಯನ್ನು ಕೊಡು ಎಂದು.

**ವಿವರಣೆ** :- ಅಶ್ವತ್ಥಾಮನಿಗೆ ಬ್ರಹ್ಮಚರ್ಯವಿಲ್ಲ ಎಂದರೆ ದುರ್ಯೋಧನನ ಹೆಂಡತಿಯೇ ಸಂತತಿಯನ್ನು ಹುಟ್ಟಿಸುವ ಪ್ರತಿಜ್ಞೆ ಮಾಡಿದ್ದರಿಂದ ಅವನು ಬ್ರಹ್ಮಚರ್ಯ ಹಾಳಾಯಿತು. ಆದರೆ ಅರ್ಜುನನಾದರೆ ಚಿತ್ರಾಂಗದೆ, ಉಲೂಪಿ ಇವರ ಸಂಗ ಮಾಡಿದ್ದರೂ ಅವನ ಬ್ರಹ್ಮಚರ್ಯ ಹಾಳಾಗಲಿಲ್ಲ. ಕ್ಷತ್ರಿಯ ಧರ್ಮೋಚಿತವಾಗಿಯೆ ಅವರಲ್ಲಿ ಸಂಗ ಮಾಡಿದ್ದರಿಂದ ಅವನ ಬ್ರಹ್ಮಚರ್ಯ ಹಾಳಾಗಲಿಲ್ಲ.

**ಜಿತಃ ಪ್ರಾಗೇವ ಭೀಮೇನ ಭೀಮಾಯೈವ ಮಹಾಪ್ರಭಮ್ ।**
**ಅಪಿ ಕೇವಲಯಾ ವಾಚಾ ಪಾರ್ಥೇಭ್ಯೋऽಸ್ತ್ರಂ ನಿವರ್ತಯ ॥ ೧೬೯ ॥**

ಪದಚ್ಛೇದ :- ಜಿತಃ, ಪ್ರಾಕ್, ಏವ, ಭೀಮೇನ, ಭೀಮಾಯಾ, ಏವ, ಮಹಾಪ್ರಭಂ, ಅಪಿ, ಕೇವಲಯಾ, ವಾಚಾ, ಪಾರ್ಥೇಭ್ಯಃ, ಅಸ್ತ್ರಂ, ನಿವರ್ತಯ ॥ ೧೬೯ ॥

**ಅರ್ಥ** :- **ಪ್ರಾಕ್ ಏವ** = ಮೊದಲೇ **ಭೀಮೇನ** = ಭೀಮನಿಂದ **ಜಿತಃ** = ಪರಾಜಿತನಾಗಿದ್ದೀ (**ತತಃ** = ಆದ್ದರಿಂದ) **ಭೀಮಾಯಾ ಏವ** = ಭೀಮನಿಗೇ **ಮಹಾಪ್ರಭಂ** = ಅತ್ಯಂತ ಕಾಂತಿಯುಳ್ಳ (**ಮಣಿ** = ಮಣಿಯನ್ನು **ದೇಹಿ** = ಕೊಡು) **ಕೇವಲಯಾ ವಾಚಾ ಅಪಿ** = ಕೇವಲ ಮಾತಿನಿಂದಲಾದರೂ **ಪಾರ್ಥೇಭ್ಯಃ** = ಪಾಂಡವರಿಂದ **ಅಸ್ತ್ರಂ** = ಆ ಬ್ರಹ್ಮಶಿರೋಸ್ತ್ರವನ್ನು **ನಿವರ್ತಯ** = ಹಿಂತೆಗೆದುಕೋ.

**ತಾತ್ಪರ್ಯ** :- ನೀನು ಭೀಮನಿಂದ ಮೊದಲೇ ಪರಾಜಿತ್‌ನಾದ್ದರಿಂದ ಆ ಮಣಿಯನ್ನು ಭೀಮನಿಗೇ ನೀಡು. ಹಾಗೆಯೇ ಕೇವಲ ಮಾತಿನಿಂದ ಲಾದರೂ ಆ ಅಸ್ತ್ರವನ್ನು ಪಾಂಡವರಿಂದ ಉಪಸಂಹಾರ ಮಾಡು.

**ಇತ್ಯುಕ್ತೋ ಮೂರ್ಧಜಂ ರತ್ನಂ ಜರಾಮರಣನಾಶನಮ್ ।**
**ಕ್ಷುತ್‌ತೃಟ್‌ಶ್ರಮಾಪಹಂ ದಿವ್ಯಗಂಧಂ ಧ್ವಾಂತಹರಂ ಶುಭಮ್ ॥ ೧೭೦ ॥**

ಪದಚ್ಛೇದ :- ಇತಿ, ಉಕ್ತಃ, ಮೂರ್ಧಜಂ, ರತ್ನಂ, ಜರಾಮರಣನಾಶನಂ, ಕ್ಷುತತೃಟ್‌ಶ್ರಮಾಪಹಂ, ದಿವ್ಯಗಂಧಂ, ಧ್ವಾಂತಹರಂ, ಶುಭಂ ॥ ೧೭೦ ॥

**ಅರ್ಥ** :- **ಇತಿ ಉಕ್ತಃ** = ಹೀಗೆ ಹೇಳಲ್ಪಟ್ಟ (**ದ್ರೌಣಿಃ** = ಅಶ್ವತ್ಥಾಮನು) **ಜರಾಮರಣನಾಶನಂ** = ವೃದ್ಧಾಪ್ಯ ಮತ್ತು ಮೃತ್ಯುವನ್ನು ಕಳೆಯುವ **ಕೃತ್ತೃಟ್‌ಶ್ರಮಾಪಹಂ** = ಹಸಿವು, ಬಾಯಾರಿಕೆ, ದಣಿವು ಮೊದಲಾದೆಲ್ಲವನ್ನು ಪರಿಹರಿಸುವ **ದಿವ್ಯಂ** = ತೇಜೋಮಯವಾದ **ಗಂಧಂ** = ಪರಿಮಳದಿಂದ ಕೂಡಿದ **ಧ್ವಾಂತಹರಂ** = ಕತ್ತಲೆಯನ್ನು ದೂರ ಮಾಡುವ **ಶುಭಂ** = ಮಂಗಳಕರವಾದ **ಮೂರ್ಧಜಂ** = ಶಿರಸ್ಸಿನಲ್ಲಿರುವ **ರತ್ನಂ** = ಆ ಮಣಿಯನ್ನು (**ಭೀಮಾಯ** = ಭಿಮನಿಗೆ **ದದೌ** = ಕೊಟ್ಟನು.

**ತಾತ್ಪರ್ಯ** :- ವ್ಯಾಸರು ಹೀಗೆ ಹೇಳಿದಾಗ ಮುಪ್ಪು ಸಾವುಗಳನ್ನೂ ನಾಶಪಡಿಸುವ ಹಸಿವು, ಬಾಯಾರಿಕೆ ಮೊದಲಾದ ಶ್ರಮಗಳನ್ನು ಕಳೆಯುವ ದಿವ್ಯವಾದ ಪರಿಮಳವುಳ್ಳ ಕತ್ತಲೆಯನ್ನು ದೂರಮಾಡುವ, ಮಂಗಳವಾದ ತನ್ನ ತಲೆಯಲ್ಲಿರುವ ರತ್ನವನ್ನು ಭೀಮನಿಗೆ ಕೊಟ್ಟನು.

**ಉತ್‌ಕೃತ್ಯ ಭೀಮಾಯ ದದೌ ಮುಕ್ತಾಃ ಪಂಚೈವ ಪಾಂಡವಾಃ ।**
**ಅಸ್ತ್ರಾದಿತಿ ತತೋ ವೇದಭರ್ತಾ ವಾಸವಿಮಬ್ರವೀತ್ ॥ ೧೭೧ ॥**

**ಪದಚ್ಛೇದ** :– ಉತ್ಕೃತ್ಯ, ಭೀಮಾಯ, ದದೌ, ಮುಕ್ತಾಃ, ಪಂಚ, ಏವ, ಪಾಂಡವಾಃ, ಅಸ್ತ್ರಾತ್, ಇತಿ, ತತಃ, ವೇದಭರ್ತಾ, ವಾಸವಿಂ, ಅಬ್ರವೀತ್ ॥ ೧೭೧ ॥

**ಅರ್ಥ** :- (**ದ್ರೌಣಿಃ** = ಅಶ್ವತ್ಥಾಮನು) **ಉತ್ಕೃತ್ಯ** = ತಲೆಯಿಂದ ತೆಗೆದು **ಭೀಮಾಯ** = ಭೀಮನಿಗೆ **ದದೌ** = ಕೊಟ್ಟನು **ಅಸ್ತ್ರಾತ್** = ಅಸ್ತ್ರದಿಂದ **ಪಂಚ ಏವ** = ಐವರು ಮಾತ್ರ **ಪಾಂಡವಾಃ** = ಪಾಂಡವರು **ಮುಕ್ತಾಃ** = ಬಿಡುಗಡೆ ಹೊಂದಿದ್ದಾರೆ **ಇತಿ** = ಹಿಗೆಂದು (**ಅಬ್ರವೀತ್** = ಹೇಳಿದನು) **ತತಃ** = ಅನಂತರ **ವೇದಭರ್ತಾ** = ವೇದವ್ಯಾಸರು **ವಾಸವಿಂ** = ಅರ್ಜುನನಿಗೆ **ಅಬ್ರವೀತ** = ಹೇಳಿದರು.

**ತಾತ್ಪರ್ಯ** :- ಅಶ್ವತ್ಥಾಮನ ತನ್ನ ತಲೆಯಿಂದ ಕಿತ್ತಿ ಭೀಮನಿಗೆ ಕೊಟ್ಟನು. ಮತ್ತು ತನ್ನ ಬ್ರಹ್ಮಾಸ್ತ್ರದಿಂದ ಪಾಂಡವರು ಬಿಡುಗಡೆ ಹೊಂದಿದ್ದಾರೆ ಎಂದನು. ಅದನ್ನು ಕೇಳಿದ ವೇದವ್ಯಾಸರು ಅರ್ಜುನನಿಗೆ ಹೇಳಿದರು.

**ತಾತ ಮುಕ್ತಂ ದ್ರೌಣಿನಾಽಪಿ ತ್ವಮೇವಾಸ್ತ್ರಂ ನಿವರ್ತಯ ।**
**ಇತ್ಯುಕ್ತಸ್ತಂ ಪ್ರಣಮ್ಯಾಽಶು ಸಂಜಹಾರಾರ್ಜುನೋಽಪಿ ತತ್ ॥ ೧೭೨ ॥**

**ಪದಚ್ಛೇದ** :– ತಾತ, ಮುಕ್ತಂ, ದ್ರೌಣಿನಾ, ಅಪಿ, ತ್ವಂ, ಏವ, ಅಸ್ತ್ರಂ, ನಿವರ್ತಯ, ಇತಿ, ಉಕ್ತಃ, ತಂ, ಪ್ರಣಮ್ಯ, ಆಶು, ಸಂಜಹಾರ, ಅರ್ಜುನಃ, ಅಪಿ, ತತ್ ॥ ೧೭೨ ॥

**ಅರ್ಥ** :- **ತಾತ** = ಎಲೈ ಅರ್ಜುನನೇ **ದ್ರೌಣಿನಾ** = ಅಶ್ವತ್ಥಾಮನಿಂದ **ಮುಕ್ತಂ** = ಪ್ರಯೋಗಿಸಲ್ಪಟ್ಟ **ಅಸ್ತ್ರಂ ಅಪಿ** = ಅಸ್ತ್ರವನ್ನೂ ಕೂಡ **ತ್ವಂ ಏವ** = ನೀನೇ **ನಿವರ್ತಯ** = ಹಿಂತಿರುಗಿಸು **ಇತಿ** = ಹೀಗೆ **ಉಕ್ತಃ** = ಹೇಳಲ್ಪಟ್ಟ **ಅರ್ಜುನಃ** = ಅರ್ಜುನನು, **ತಂ** = ವೇದವ್ಯಾಸರನ್ನು **ಪ್ರಣಮ್ಯ** = ನಮಸ್ಕರಿಸಿ

**ಆಶು** = ಬೇಗನೇ **ತತ್ ಅಪಿ** = ಅಶ್ವತ್ಥಾಮನು ಪ್ರಯೋಗಿಸಿದ ಅಸ್ತ್ರವನ್ನು **ಸಂಜಹಾರ** = ಉಪಸಂಹರಿಸಿದನು.

**ತಾತ್ಪರ್ಯ** :- ಅರ್ಜುನನೇ, ಈ ಅಸ್ತ್ರವನ್ನು ಪ್ರಯೋಗಿಸಿದವನು ಅಶ್ವತ್ಥಾಮನಾದರೂ ಅವನಿಗೆ ಸಾಮರ್ಥ್ಯವಿಲ್ಲವಾದ್ದರಿಂದ ನೀನೇ ಅದನ್ನು ಉಪಸಂಹರಿಸು. ಹೀಗೆ ವ್ಯಾಸರು ಹೇಳಿದಾಗ ಅರ್ಜುನನು ವೇದವ್ಯಾಸರನ್ನು ವಂದಿಸಿ ಆ ಬ್ರಹ್ಮಾಸ್ತ್ರವನ್ನು ತಾನೇ ಉಪಸಂಹಾರ ಮಾಡಿದ.

**ಯಾದವೇಶೋऽಥ ಗೌತಮ್ಯಾಃ ಸುತಮಾಹೈಕಸಂತತೇಃ ।**
**ವಾಚಾ ನಿವರ್ತಯಾಸ್ತ್ರಂ ತೇ ಇತ್ಯುಕ್ತೋ ದ್ರೌಣಿರಬ್ರವೀತ್ ॥ ೧೭೩ ॥**

**ಪದಚ್ಛೇದ** :- **ಯಾದವೇಶಃ, ಅಥ, ಗೌತಮ್ಯಾಃ, ಸುತಂ, ಆಹ, ಏಕಸಂತತೇಃ, ವಾಚಾ, ನಿವಾರಯ, ಅಸ್ತ್ರಂ, ತೇ, ಇತಿ, ಉಕ್ತಃ, ದ್ರೌಣಿಃ, ಅಬ್ರವೀತ್** ॥ ೧೭೩ ॥

**ಅರ್ಥ** :- **ಅಥ** = ಅನಂತರ **ಯಾದವೇಶಃ** = ಶ್ರೀಕೃಷ್ಣನು **ಗೌತಮ್ಯಾಃ ಸುತಂ** = ಗೌತಮಿಯರ ಮಗನಾದ ಅಶ್ವತ್ಥಾಮನನ್ನು ಕುರಿತು **ತೇ** = ನಿನ್ನ **ಅಸ್ತ್ರಂ** = ಈ ಅಸ್ತ್ರವನ್ನು **ಏಕಸಂತತೇಃ** = ಒಂದು ಸಂತತಿಯಿಂದಲಾದರೂ **ವಾಚಾ** = ಮಾತಿನಿಂದ **ನಿವಾರಯ** = ಹಿಂತೆಗೆದುಕೋ **ಇತಿ** = ಹೀಗೆ **ಆಹ** = ಹೇಳಿದನು **ಇತಿ ಉಕ್ತಃ** = ಹೀಗೆ ಹೇಳಲ್ಪಟ್ಟ **ದ್ರೌಣಿಃ** = ಅಶ್ವತ್ಥಾಮನು **ಅಬ್ರವೀತ್** = ಹೇಳಿದನು.

**ತಾತ್ಪರ್ಯ** :- ಶ್ರೀಕೃಷ್ಣನು ಆಗ ಅಶ್ವತ್ಥಾಮನನ್ನು ಕುರಿತು ಹೀಗೆಂದನು. ''ಮಾತಿನಿಂದ ಒಂದು ಸಂತತಿಯಿಂದಲಾದರೂ ನೀನು ನಿನ್ನ ಅಸ್ತ್ರವನ್ನು ಉಪಸಂಹರಿಸು''. ಹೀಗೆನ್ನಲು ಅಶ್ವತ್ಥಾಮನು ಶ್ರೀ ಕೃಷ್ಣನನ್ನು ಕುರಿತು ಹೇಳಿದನು.

ವಿ :- ಪಾಂಡವರ ಉಳಿದ ಸಂತತಿ ನಾಶವಾದರೂ ಒಂದು ಸಂತತಿಯನ್ನಾದರೂ ಉಳಿಸುವ ಹಾಗೆ ಹೇಳು ಎಂದು ಶ್ರೀಕೃಷ್ಣನ ಆಂತರ್ಯ.

**ಪಕ್ಷಪಾತಾದಿಚ್ಛಸಿ ತ್ವಂ ಭಾಗಿನೇಯಸ್ಯ ಸಂತತಿಮ್ ।**
**ತತ್ರೈವ ಪಾತಯಾಮ್ಯಸ್ತ್ರಮುತ್ತರಾಗರ್ಭಕೃಂತನೇ ॥ ೧೭೪ ॥**

ಪದಚ್ಛೇದ :– ಪಕ್ಷಪಾತಾತ್, ಇಚ್ಛಸಿ, ತ್ವಂ, ಭಾಗಿನೇಯಸ್ಯ, ಸಂತತಿಂ, ತತ್ರ, ಏವ, ಪಾತಯಾಮಿ, ಅಸ್ತ್ರಂ, ಉತ್ತರಾಗರ್ಭಕೃಂತನೇ ॥ ೧೭೪ ॥

**ಅರ್ಥ** :- **ತ್ವಂ** = ನೀನು **ಪಕ್ಷಪಾತಾತ್** = ಪಕ್ಷಪಾತದಿಂದ **ಭಾಗಿನೇಯಸ್ಯ** = ನಿನ್ನ ಸೋದರಳಿಯನ **ಸಂತತಿಂ** = ಸಂತತಿಯನ್ನು **ಇಚ್ಛಸಿ** = ಬಯಸುತ್ತಿದ್ದೀ (**ಪರಂತು** = ಆದರೆ **ಅಹಂ** = ನಾನು) **ಉತ್ತರಾ ಗರ್ಭಕೃಂತನೇ** = ಉತ್ತರೆಯ ಗರ್ಭವನ್ನು ನಾಶಿಸುವುದಾಗಿ **ತತ್ರ ಏವ** = ಆ ಉತ್ತರೆಯ ಗರ್ಭಕ್ಕೆ **ಅಸ್ತ್ರಂ** = ಅಸ್ತ್ರವನ್ನು **ಪಾತಯಾಮಿ** = ಬೀಳಿಸುತ್ತೇನೆ.

**ವಿವರಣೆ** :- ಭಗಿನಿ ಎಂದರೆ ತಂಗಿ, ಭಗಿನೇಯ ಎಂದರೆ ತಂಗಿಯ ಮಗ. ಕೃಷ್ಣನ ತಂಗಿ ಸುಭದ್ರೆ. ಆ ಸುಭದ್ರೆಯ ಮಗನೇ ಅಭಿಮನ್ಯು ಅವನೇ ಶ್ರೀಕೃಷ್ಣನಿಗೆ ಭಾಗಿನೇಯ.

**ವಾಸುದೇವಃ ಪುನಃ ಪ್ರಾಹ ಯದಿ ಹಂತವ್ಯ ಏವ ತೇ ।**
**ಗರ್ಭಸ್ತಥಾಽಪಿ ನೈವಾಸ್ತ್ರಂ ಪಾತಯಾಸ್ಮಿನ್ ಕಥಂಚನ ॥ ೧೭೫ ॥**

ಪದಚ್ಛೇದ :– ವಾಸುದೇವಃ, ಪುನಃ, ಪ್ರಾಹ, ಯದಿ, ಹಂತವ್ಯ, ಏವ, ತೇ, ಗರ್ಭಃ, ತಥಾ, ಅಪಿ, ನ, ಏವ, ಅಸ್ತ್ರಂ, ಪಾತಯ, ಅಸ್ಮಿನ್, ಕಥಂಚನ ॥ ೧೭೫ ॥

**ಅರ್ಥ** :- **ವಾಸುದೇವಃ** = ಕೃಷ್ಣನು **ಪುನಃ** = ಮತ್ತೇ **ಪ್ರಾಹ** = ಹೇಳಿದನು **ಯದಿ** = ಒಂದು ವೇಳೆ **ತೇ** = ನಿನಗೆ **ಗರ್ಭಃ** = ಗರ್ಭವು **ಹಂತವ್ಯಃ ಏವ** = ಕೊಲ್ಲಲೇಬೇಕು **ತಥಾಃ ಅಪಿ** = ಹಾಗಿದ್ದರೂ **ಕಥಂ ಚ ನ** = ಹೇಗಾದರೂ **ಅಸ್ತ್ರಂ** = ಅಸ್ತ್ರವನ್ನು **ಅಸ್ಮಿನ್** = ಈ ಉತ್ತರೆಯ ಗರ್ಭದಲ್ಲಿ **ನೈವ ಪಾತಯಂ** = ಬೀಳಿಸಬೇಡ.

**ತಾತ್ಪರ್ಯ** :- ಕೃಷ್ಣನು ಮತ್ತೇ ಅಶ್ವತ್ಥಾಮನಿಗೆ ಹೇಳುತ್ತಾನೆ. ನೀನು ಒಂದು ವೇಳೆ ಆ ಗರ್ಭವನ್ನು ಕೊಲ್ಲಲೇಬೇಕು ಎಂದಿದ್ದರೂ ಕೂಡ ಈ ಅಸ್ತ್ರವನ್ನು ಆ ಗರ್ಭರ ಮೇಲೆ ಪ್ರಯೋಗ ಮಾಡಬೇಡ.

**ಅಭಿಮನ್ಯೋರ್ಮೃತಸ್ಯೈವ ದೇಹೇ ಪಾತಯ ಮಾನದ ।**
**ಏವಂ ತ್ವದಸ್ತ್ರನಿಹತಂ ಗರ್ಭಮುಜ್ಜೀವಯಾಮ್ಯಹಮ್ ॥ ೧೭೬ ॥**

ಪದಚ್ಛೇದ :- **ಅಭಿಮನ್ಯೋಃ, ಮೃತಸ್ಯ, ಏವ, ದೇಹೇ, ಪಾತಯ, ಮಾನದ, ಏವಂ, ತ್ವದಸ್ತ್ರನಿಹಿತಂ, ಗರ್ಭಂ, ಉಜ್ಜೀವಯಾಮಿ, ಅಹಂ ॥ ೧೭೬ ॥**

**ಅರ್ಥ** :- **ಹೇ ಮಾನದ** = ಎಲೈ ಸ್ವಾಭಿಮಾನಿಯಾದ ಅಶ್ವತ್ಥಾಮನೇ **ಮೃತಸ್ಸ ಏವ** = ಮರಣವನ್ನೆ ಹೊಂದಿದ **ಅಭಿಮನ್ಯೋಃ** = ಅಭಿಮನ್ಯುವಿನ **ದೇಹೇ** = ದೇಹದ ಮೇಲೆ **ಪಾತಯ** = ಅಸ್ತ್ರವನ್ನು ಬೀಳಿಸು **ಏವಂ** = ಹೀಗೆ **ತ್ವದಸ್ತ್ರನಿಹತಂ** = ನಿನ್ನ ಅಸ್ತ್ರದಿಂದ ಹತವಾದ **ಗರ್ಭಂ** = ಗರ್ಭವನ್ನು **ಅಹಂ** = ನಾನು **ಉಜ್ಜೀವಯಾಮಿ** = ಮತ್ತೇ ಬದುಕಿಸುತ್ತೇನೆ.

**ತಾತ್ಪರ್ಯ** :- ಸ್ವಾಭಿಮಾನಿಯಾದ ಅಶ್ವತ್ಥಾಮನೇ ನೀನು ಆ ಅಸ್ತ್ರವನ್ನು ಮೃತನಾದ ಅಭಿಮನ್ಯುವಿನ ಶರೀರದ ಮೇಲೆ ಆ ಅಸ್ತ್ರವನ್ನು ಬೀಳಿಸು. ಹೀಗೆ ನಿನ್ನ ಅಸ್ತ್ರದಿಂದ ಹತವಾಗುವ ಆ ಗರ್ಭವನ್ನು ಪುನಃ ನಾನು ಬದುಕಿಸುತ್ತೇನೆ.

**ವಿವರಣೆ** :- ಅಭಿಮನ್ಯುವಿನ ಮೃತಶರೀರಕ್ಕೆ ಅಸ್ತ್ರ ಬೀಳಿಸುವುದು ಹೇಗೆ ವ್ಯರ್ಥವೋ ಹಾಗೆಯೇ ಉತ್ತರೆಯ ಗರ್ಭಕ್ಕೆ ಬಿಳಿಸಿದರೂ ಅದು ವ್ಯರ್ಥವೇ.

**ಪಾತಯೇ ಗರ್ಭ ಏವಾಹಮಿತ್ಯೂಚೇ ಗೌತಮೀಸುತಃ ।**
**ಅಥಾऽಹ ವಾಸುದೇವಸ್ತಮೀಷತ್ಕ್ರುದ್ಧ ಇವ ಪ್ರಭುಃ ॥ ೧೭೭ ॥**

ಪದಚ್ಛೇದ :- **ಪಾತಯೇ, ಗರ್ಭೇ, ಏವ, ಅಹಂ, ಇತಿ, ಊಚೇ, ಗೌತಮೀಸುತಃ, ಅಥ, ಆಹ, ವಾಸುದೇವಃ, ತಂ, ಈಷತ್ಕ್ರುದ್ಧಃ, ಇವ, ಪ್ರಭುಃ ॥ ೧೭೭ ॥**

**ಅರ್ಥ** :- **ಗೌತಮೀಸುತಃ** = ಅಶ್ವತ್ಥಾಮನು **ಅಹಂ** = ನಾನು **ಗರ್ಭೇ ಏವ** = ಗರ್ಭದಲ್ಲಿಯೇ **ಪಾತಯೇ** = ಅಸ್ತ್ರವನ್ನು ಬೀಳಿಸುತ್ತೇನೆ **ಇತಿ ಊಚೇ** = ಹೀಗೆಂದನು **ಅಥ** = ಅವನ ಮಾತನ್ನು ಕೇಳಿದ ನಂತರ **ವಾಸುದೇವಃ** = ಶ್ರೀಕೃಷ್ಣನು **ಪ್ರಭುಃ** = ಸರ್ವಸಮರ್ಥನಾದರೂ **ಈಷತ್ಕ್ರುದ್ಧ ಇವ** = ಸ್ವಲ್ಪ ಕೊಪಗೊಂಡವನಂತಾಗಿ **ತಂ** = ಆ ಅಶ್ವತ್ಥಾಮನನ್ನು ಕುರಿತು **ಆಹ** = ಹೇಳಿದನು.

**ತಾತ್ಪರ್ಯ** :- ನಾನು ಗರ್ಭದಲ್ಲಿಯೇ ಅಸ್ತ್ರವನ್ನು ಬೀಳಿಸುವೆ ಎಂದು ಅಶ್ವತ್ಥಾಮನು ಹೇಳಿದನು. ಆಗ ಸರ್ವಸಮರ್ಥನಾದ ಶ್ರೀಕೃಷ್ಣನು ಸ್ವಲ್ಪ ಕೊಪಗೊಂಡವನಂತೆ ಅವನಿಗೆ ಹೇಳಿದ.

**ವಿವರಣೆ** :- ಅಶ್ವತ್ಥಾಮ ಶ್ರೀಕೃಷ್ಣನಿಗೆ ಪರಮಪ್ರಿಯನಾದ ರುದ್ರನ ಅವತಾರ. ಅಷುರಾವೇಶದಿಂದ ಹೀಗೆ ವಿರೋಧಿಸುತ್ತಿದ್ದಾರೆ. ಆದರಿಂದ ಕೃಷ್ಣನಿಗೆ ತೊರಿಕೆಗಾಗಿ ಕೊಪಾದಿಗಳು ಬರುವುದು ಎಂದರ್ಥ.

**ದುರ್ಮತೇ ಪಶ್ಯ ಮೇ ವೀರ್ಯಂ ಯತ್ ತೇ ಶಕ್ಯಂ ಕುರುಷ್ವ ತತ್ ।**
**ಉಜ್ಜೀವಯಾಮ್ಯಹಂ ಗರ್ಭಂ ಯತತಃ ಶಕ್ತಿತೋಽಪಿ ತೇ ॥ ೧೭೮ ॥**

ಪದಚ್ಛೇದಃ = ದುರ್ಮತೇ, ಪಶ್ಯ, ಮೇ, ವೀರ್ಯಂ, ಯತ್, ತೇ, ಶಕ್ಯಂ, ಕುರುಷ್ವ, ತತ್, ಉಜ್ಜೀವಯಾಮೆ, ಅಹಂ, ಗರ್ಭಂ, ಯತತಃ, ಶಕ್ತಿತಃ, ಅಪಿ ತೇ ॥ ೧೭೮ ॥

**ಅರ್ಥ** :- **ದುರ್ಮತೇ** = ಎಲೈ ದುಷ್ಟ ಬುದ್ಧಿಯುಳ್ಳ ಅಶ್ವತ್ಥಾಮನೇ **ಮೇ** = ನನ್ನ **ವೀರ್ಯಂ** = ಸಾಮರ್ಥ್ಯವನ್ನು **ಪಶ್ಯ** = ನೋಡು **ತೇ** = ನಿನಗೆ **ಯತ್** = ಏನು **ಶಕ್ಯಂ** = ಮಾಡಲು ಸಾಧ್ಯವೋ **ತತ್** = ಅದನ್ನು **ಕುರುಷ್ವ** = ಮಾಡು **ತೇ** = ನಿನ್ನ **ಶಕ್ತಿತಃ** = ಶಕ್ತಿಗಿಂತಲೂ ಮೀರಿ **ಯತತಃ** **ಅಪಿ** = ಪ್ರಯತ್ನಿಸಿದರೂ ಕೂಡ **ಗರ್ಭಂ** = ಆ ಉತ್ತರೆಯ ಗರ್ಭವನ್ನು **ಅಹಂ** = ನಾನು **ಉಜ್ಜೀವಯಾಮಿ** = ಬದುಕಿಸುತ್ತೇನೆ.

**ತಾತ್ಪರ್ಯ** :- ಎಲೈ ದುಷ್ಟಬುದ್ಧಿಯುಳ್ಳ ಅಶ್ವತ್ಥಾಮನೇ ನೋಡು ಈ ನನ್ನ ಸಾಮರ್ಥ್ಯವನ್ನು ನಿನಗೇನು ಸಾಧ್ಯವೋ ಅದನ್ನು ಮಾಡು. ನೀನು ನಿನ್ನ ಶಕ್ತಿಯಿಂದ ಪ್ರಯತ್ನದಿಂದಲೂ ಈ ಗರ್ಭವನ್ನು ನಾಶಪಡಿಸಲು ಪ್ರಯತ್ನಿಸಿದರೂ ನಾನು ಅದನ್ನು ಬದುಕಿಸುತ್ತೇನೆ.

**ಸಂತತಿರ್ವರ್ಷಸಾಹಸ್ರಂ ಪಾಂಡವಾನಾಂ ಭವೇದ್ ಭುವಿ ।**
**ಮತ್ಪಾಲಿತಾಂ ನ ಕಶ್ಚಿತ್ ತಾಂ ತಾವದ್ಧಂತುಂ ಕ್ಷಮಃ ಕ್ವಚಿತ್ ॥ ೧೭೯ ॥**

ಪದಚ್ಛೇದ :- ಸಂತತಿಃ, ವರ್ಷಸಾಹಸ್ರಂ, ಪಾಂಡವಾನಾಂ, ಭವೇತ್, ಭುವಿ, ಮತ್‌ಪಾಲಿತಾಂ, ನ, ಕಶ್ಚಿತ್, ತಾಂ, ತಾವತ್, ಹಂತುಂ, ಕ್ಷಮಃ, ಕ್ವಚಿತ್ ॥ ೧೭೯ ॥

**ಅರ್ಥ** :- **ಭುವಿ** = ಭೂಮಿಯಲ್ಲಿ **ಪಾಂಡವಾನಾಂ** = ಪಾಂಡವರ **ಸಂತತಿಃ** = ಸಂತತಿಯು **ವರ್ಷಸಾಹಸ್ರಂ** = ಸಾವಿರ ವರ್ಷಗಳ ಕಾಲ **ಭವೇತ್** = ಇರುತ್ತದೆ **ಮತ್ಪಾಲಿತಾಂ** = ನನ್ನಿಂದ ರಕ್ಷಿಸಲ್ಪಟ್ಟ **ತಾಂ** = ಆ ಸಂತತಿಯನ್ನು **ಹಂತುಂ** = ಕೊಲ್ಲಲು **ಕ್ವಚಿತ್** = ಎಲ್ಲಿಯೂ **ಕಶ್ಚಿತ್** = ಯಾವನೂ **ನತಾವತ್** **ಕ್ಷಮಃ** = ಸಮರ್ಥನಲ್ಲವಷ್ಟೇ.

**ತಾತ್ಪರ್ಯ** :- ಪಾಂಡವರ ಸಂತತಿಯು ಭೂಮಿಯಲ್ಲಿ ಸಾವಿರ ವರ್ಷಗಳ ಕಾಲ ಇರುವುದು. ನನ್ನಿಂದ ಕಾಪಾಡಲ್ಪಟ್ಟ ಈ ಪಾಂಡವರ ಸಂತತಿಯನ್ನು ನಾಶಮಾಡುವ ಸಾಮರ್ಥ್ಯ ಯಾರಿಗೂ ಎಲ್ಲಿಯೂ ಇಲ್ಲವಷ್ಟೇ.

**ವಿವರಣೆ** :- ಅಶ್ವತ್ಥಾಮನು ಗರ್ಭವನ್ನು ನಾಶಪಡಿಸುವ ಪ್ರತಿಜ್ಞೆ ಮಾಡಿದ್ದರಿಂದ ಕೃಷ್ಣನು ಗರ್ಭವನ್ನಷ್ಟೆ ಅಲ್ಲ ಈ ಸಮಗ್ರ ಪಾಂಡವರ ಸಂತತಿಯನ್ನು ನಾನು ಕಾಪಾಡುವೆ ಎಂದ.

**ಜಾನಾಮಿ ತೇ ಮತಿಂ ದುಷ್ಟಾಂ ಜಿಘಾಂಸೋಃ ಪಾರ್ಥಸಂತತಿಮ್ ।**
**ಚಿಕೀರ್ಷೋರ್ಧಾರ್ತರಾಷ್ಟ್ರಸ್ಯ ತಂತುಂ ಭೂಯಃ ಸುದುಷ್ಕರಮ್ ॥೧೮೦॥**

ಪದಚ್ಛೇದ :– ಜಾನಾಮಿ, ತೇ, ಮತಿಂ, ದುಷ್ಟಾಂ, ಜಘಾಂಸೋಃ, ಪಾರ್ಥಸಂತತಿಂ, ಚಿಕೀರ್ಷೋಃ, ಧಾರ್ತರಾಷ್ಟ್ರಸ್ಯ, ತಂತುಂ, ಭೂಯಃ, ಸುದುಷ್ಟರಂ ॥ ೧೮೦ ॥

**ಅರ್ಥ** :- **ಪಾರ್ಥಸಂತತಿಂ** = ಪಾಂಡವರ ಸಂತತಿಯನ್ನು **ಜಘಂಸೋಃ** = ಕೊಲ್ಲಲು ಬಯಸುತ್ತಿರುವ **ಧಾರ್ತರಾಷ್ಟ್ರಸ್ಯ** = ದುರ್ಯೋಧನನ **ಸುದುಷ್ಟರಂ** = ಮುಂದುವರಿಸಲಸಾಧ್ಯವಾದ **ತಂತುಂ** = ಸಂತತಿಯನ್ನು **ಭೂಯಃ** = ಮತ್ತೇ **ಚಿಕೀರ್ಷ್ಣಃ** = ಮಾಡಲು ಬಯಸುತ್ತಿರುವ **ತೇ** = ನಿನ್ನ **ದುಷ್ಟಾಂ** = ಕೆಟ್ಟದಾದ **ಮತಿಂ** = ಬುದ್ಧಿಯನ್ನು **ಜಾನಾಮಿ** = ತಿಳಿದಿದ್ದೇನೆ.

**ತಾತ್ಪರ್ಯ** :- ನಿನ್ನ ದುರ್ಬುದ್ಧಿ ನನಗೆ ತಿಳಿದೇ ಇದೆ. ನೀನು ಪಾಂಡವರ ಸಂತತಿಯನ್ನು ನಾಶಪಡಿಸಲು ಬಯಸಿದ್ದು ಅಷ್ಟೆ ಅಲ್ಲದೆ ದುರ್ಯೋಧನ ಸಂತತಿಯನ್ನು ಅಭಿವೃದ್ಧಿ ಪಡಿಸಲು ಬಯಸಿದ್ದೇ ಆದರೆ ಇವೆರಡು ಅತ್ಯಂತ ಕಷ್ಟಕರವಾದದ್ದು.

**ಮದಾಜ್ಞಯಾ ಸಾ ವಿಫಲಾ ಭವಿತ್ರೀ**
**ವಾಂಛಾ ಮುಮುಕ್ಷಾ ವಿಮುಖಸ್ಯ ವಿಷ್ಣೋಃ ।**
**ಯಥೈವ ತೇನೈವ ನರಾಧಿರೂಢೋ**
**ಗಮ್ಯಸ್ತದ ಸ್ಯಾನ್ನಚ ಭೂಮಿಭಾಗಃ ॥ ೧೮೧ ॥**

ಪದಚ್ಛೇದ :- ಮದಾಜ್ಞಯಾ, ಸಾ, ವಿಫಲಾ, ಭವಿತ್ರೀ, ವಾಂಛಾ, ಮುಮುಕ್ಷೌಃ, ವಿಮುಖಸ್ಯ, ವಿಷ್ಣೋಃ, ಯಥಾ, ಏವ, ತೇನ, ಏವ, ನರಾಧಿಹಢಃ, ಗಮ್ಯಃ, ತವ, ಸ್ಯಾತ್, ನ, ಚ, ಭೂಮಿಭಾಗಃ ॥ ೧೮೧ ॥

**ಅರ್ಥ** :- **ವಿಷ್ಣೋಃ** = ವಿಷ್ಣುವಿಗೆ **ವಿಮುಖಸ್ಯ** = ವಿಮುಖನಾದವನಿಗೆ **ಮುಮುಕ್ಷೌ** = ಮೊಕ್ಷದ ಆಸೆಯು **ವಿಫಲಾ** = ವಿಫಲವು **ಯಥಾ** = ಹೆಗೆ (**ತಥಾ** = ಹಾಗೆಯೇ) **ಸಾ** = ಆ ನಿನ್ನ **ವಾಂಛಾ** = ಆಸೆಯು **ವಿಫಲಾ** = ವಿಫಲವೇ **ಭವಿತ್ತ** = ಆಗುವುದು **ತೇನೈವ** = ಆ ಕಾರಣದಿಂದಲೇ (**ತ್ವಂ** = ನೀನು) **ನರಾಧಿರೂಢಃ** = ಮನುಷ್ಯರ ಮೇಲೆ ಕುಳಿತವನಾಗುತ್ತೀ **ತವ** = ನಿನಗೆ **ಭೂಮಿಭಾಗಃ** = ಭೂಭಾಗವು **ಗಮ್ಯ** = ದೊರಕುವುದು **ನ ಚ ಸ್ಯಾತ್** = ಆಗದಿರಲಿ.

**ತಾತ್ಪರ್ಯ** :- ನಾರಾಯಣನಿಗೆ ವಿಮುಖನಾದವನು ಮೋಕ್ಷವನ್ನು ಬಯಸಿದರೆ ಅದು ಹೇಗೆ ವಿಫಲವಾಗುವುದೋ ಹಾಗೆಯೇ ನಿನ್ನ ಈ ದುಷ್ಟಬಯಕೆಯೂ ನನ್ನ ಸಂಕಲ್ಪದಿಂದಲೇ ವಿಫಲವಾಗುವುದು ಆದ್ದರಿಂದಲೇ ನಿನು ಮನುಷ್ಯರ ಮೇಲೆ ಕುಳಿತಿರುವಿ. ನಿನಗೆ ಯಾವ ಭೂಭಾಗವೂ ಸಿಗದಂತೆ ಆಗಲಿ.

**ದುರ್ಗಂಧಯುಕ್ತೋ ವ್ರಣಸಂಚಿತಾಂಗಃ**
**ಸದಾ ಚರಃ ಸ್ಯಾ ವಿಪಿನೇಷು ಮಂದ ।**
**ಯಾವದ್ ಭುವಿ ಸ್ಯಾದಿಹ ಪಾರ್ಥತಂತು-**
**ರ್ವ್ಯಾಸೋಽಪಿ ತಂ ಪ್ರಾಹ ತಥೇತಿ ದೇವಃ ॥ ೧೮೨ ॥**

ಪದಚ್ಛೇದ :- ದುರ್ಗಂಧಯುಕ್ತಿಃ, ವ್ರಣಸಂಚಿತಾಂಗಃ, ಸದಾ, ಚರಃ, ಸ್ಯಾಃ, ವಿಪಿನೇಷು, ಮಂದ, ಯಾವತ್, ಭುವಿ, ಸ್ಯಾತ್, ಇಹ, ಪಾರ್ಥತಂತುಃ, ವ್ಯಾಸಃ, ಅಪಿ, ತಂ, ಪ್ರಾಹ, ತಥಾ, ಇತಿ, ದೇವಃ ॥ ೧೮೨ ॥

**ಅರ್ಥ** :- **ಮಂದ** = ಎಲೈ ಮಂದಮತಿಯೇ (**ತ್ವಂ** = ನೀನು) **ಇಹ ಭುವಿ** = ಈ ಭೂಮಿಯಲ್ಲಿ **ಪಾರ್ಥತಂತುಃ** = ಪಾಂಡವರ ಸಂತತಿಯು **ಯಾವತ್** = ಎಲ್ಲಿಯವರೆಗೆ **ಸ್ಯಾತ್** = ಇರುವುದೋ (**ತಾವತ್** = ಅಲ್ಲಿಯವರೆಗೂ) **ದುರ್ಗಂಧ ಯುಕ್ತಃ** = ದುರ್ಗಂಧದಿಂದ ಕೂಡಿದವನಾಗಿ

**ವ್ರಣಸಂಚಿತಾಂಗಃ** = ಗಾಯಗಳಿಂದ ತುಂಬಿದ ಅಂಗಗಳುಳ್ಳವನಾಗಿ **ವಿಪಿನೇಷು** = ಕಾಡುಗಳಲ್ಲಿ **ಸದಾ** = ಯಾವಾಗಲೂ **ಚರಃ** = ಚಲಿಸುವವನು **ಸ್ಯಾಃ** = ಆಗು (**ಇತಿ ಆಹ** = ಹೀಗೆಂದನು) **ದೇವಃ** = ಕ್ರೀಡಾದಿ ಗುಣವಿಶಿಷ್ಟರಾದ **ವ್ಯಾಸಃ ಅಪಿ** = ವೇದವ್ಯಾಸರೂ ಕೂಡ **ತಂ** = ಅಶ್ವತ್ಥಾಮನನ್ನು ಕುರಿತು **ತಥಾ ಇತಿ** = ಹಾಗೆಯೆ ಆಗಲಿ ಎಂದು **ಪ್ರಾಹ** = ಹೇಳಿದರು.

**ತಾತ್ಪರ್ಯ :-** ಎಲೈ ಮೂಢಮತಿಯೇ ನೀನು ಭೂಮಿಯ ಮೇಲೆ ಪಾಂಡವರ ಇರುವಷ್ಟು ಕಾಲವೂ ದುರ್ಗಂಧಯುಕ್ತನಾಗಿ, ಮೈಯೆಲ್ಲಾ ಹುಣ್ಣುಗಳಿಂದ ಕೂಡಿದವನಾಗಿ ಕಾಡಿನಲ್ಲಿ ಯಾವಾಗಲೂ ಸಂಚರಿಸು. ಶ್ರೀಕೃಷ್ಣನು ಹೀಗೆ ಹೇಳಿದಾಗ ವೇದವ್ಯಾಸರೂ ''ಹಾಗೆಯೇ ಆಗಲಿ'' ಎಂದರು.

ವಿ. :- ಕೃಷ್ಣನು ಪಾಂಡವರ ಸಂತತಿಯನ್ನು ಸಾವಿರ ವರ್ಷ ಎಂದು ಹೇಳಿದ್ದರಿಂದ ಅಶ್ವತ್ಥಾಮನಿಗೆ ಕೊಟ್ಟ ಶಾಪವೂ ಸಾವಿರ ವರ್ಷ ಎಂದರ್ಥ.

**ರೂಪದ್ವಯೇನಾಪಿ ಹರೇಸ್ತಥೋಕ್ತೇ**
**ಜಗಾದ ಕಾಳೀತನಯಂ ಸ ಕೃಷ್ಣಮ್ ।**
**ತ್ವಯಾ ಸಹ ಸ್ಯಾನ್ಮಮ ಸಂಗಮೋ ವಿಭೋ**
**ಯಥೇಷ್ಟತಃ ಸ್ಯಾನ್ನಚ ಮೇಽತ್ರ ವಿಘ್ನಃ ॥ ೧೮೩ ॥**

ಪದಚ್ಛೇದ :- ರೂಪದ್ವಯೇನ, ಅಪಿ, ಹರೇಃ, ತಥಾ, ಉಕ್ತೇ, ಜಗಾದ, ಕಾಲೀತನಯಂ, ಸ, ಕೃಷ್ಣಂ, ತ್ವಯಾ, ಸಹ, ಸ್ಯಾತ್, ಮಮ, ಸಂಗಮಃ, ವಿಭೋ, ಯಥೇಷ್ಟತಃ, ಸ್ಯಾತ್, ನ, ಚ, ಮೇ, ಅತ್ರ, ವಿಘ್ನಃ ॥ ೧೮೩ ॥

**ಅರ್ಥ :- ಹರೇಃ** = ನಾರಾಯಣನ **ರೂಪದ್ವಯೇನ ಅಪಿ** = ಕೃಷ್ಣ ವೇದವ್ಯಾಸ ಎಂಬ ಎರಡೂ ರೂಪಗಳಿಂದಲೂ **ತಥಾ ಉಕ್ತೇ** = ಹಾಗೆ ಹೇಳಲ್ಪಡಲು **ಸಃ** = ಆ ಅಶ್ವತ್ಥಾಮನು **ಕಾಲೇತನಯಂ** = ಕಾಲಿಯ ಮಗನಾಗಿ ಪ್ರಾದುರ್ಭವಿಸಿದ **ಕೃಷ್ಣಂ** = ಕೃಷ್ಣನನ್ನು ಕುರಿತು **ಜಗಾದ** = ಹೇಳಿದನು **ವಿಭೋ** = ಸರ್ವಶಕ್ತರಾದ ವ್ಯಾಸರೇ **ಮಮ** = ನನಗೆ **ತ್ವಯಾಸಹ** = ನಿಮ್ಮ ಜೊತೆಗೆ **ಸಂಗಮಃ** = ಸಂಗವು **ಯಥೇಷ್ಟಿತಃ** = ಆಸೆಪಟ್ಟಾಗಲೆಲ್ಲ **ಸ್ಯಾತ** = ಆಗಲಿ

ಮೇ ನನಗೆ **ಅತ್ರ** = ಈ ವಿಷಯದಲ್ಲಿ **ವಿಘ್ನಃ** = ವಿಘ್ನಗಳು **ನ ಚ ಸ್ಯಾತ್** = ಆಗದಿರಲಷ್ಟೇ

**ತಾತ್ಪರ್ಯ :-** ಪರಮಾತ್ಮನು ತನ್ನ ವೇದವ್ಯಾಸ ಮತ್ತು ಕೃಷ್ಣ ಎಂಬ ಎರಡೂ ರೂಪಗಳಿಂದ ಹೀಗೆ ಹೇಳಿದಾಗ ಅಶ್ವತ್ಥಾಮನು ವೇದವ್ಯಾಸರನ್ನು ಕೇಳಿಕೊಂಡನು. ''ಎಲೈ ಪ್ರಭುವೇ ನಾನು ಬಯಸಿದಾಗಲೆಲ್ಲಾ ನನಗೆ ನಿನ್ನೊಡನೆ ಸಂಗವು ಆಗುತ್ತಲೇ ಇರಲಿ. ನನಗೆ ಈ ವಿಷಯದಲ್ಲಿ ಯಾವ ವಿಘ್ನಗಳೂ ಬಾರದೇ ಇರಲಿ'' ಎಂದು.

**ಇತ್ಯುಕ್ತ ಓಮಿತಿ ಪ್ರಾಹ ಭಗವಾನ್ ಬಾದರಾಯಣಃ ।**
**ತಂ ಪ್ರಣಮ್ಯ ಯಯೌ ಸೋಽಪಿ ಸ್ವಪ್ನದೃಷ್ಟಮನುಸ್ಮರನ್ ॥ ೧೮೪ ॥**

**ಪದಚ್ಛೇದ :- ಇತಿ, ಉಕ್ತಃ, ಓಂ, ಇತಿ, ಪ್ರಾಹ, ಭಗವಾನ್, ಬಾದರಾಯಣಃ, ತಂ, ಪ್ರಣಮ್ಯ, ಯಯೌ, ಸಃ, ಅಪಿ, ಸ್ವಪ್ನದೃಷ್ಟಂ, ಅನುಸ್ಮರನ್ ॥ ೧೮೪ ॥**

**ಅರ್ಥ :- ಇತ್ಯುಕ್ತ** = ಹೀಗೆ ಹೇಳಲ್ಪಟ್ಟ **ಭಗವಾನ್** = ಸಕಲ ಗುಣಪೂರ್ಣನಾದ **ಬಾದರಾಯಣಃ** = ವೇದವ್ಯಾಸರು **ಓಂ ಇತಿ** = ಹಾಗೆಯೇ ಆಗಲಿ ಎಂದು **ಪ್ರಾಹ** = ಹೇಳಿದರು **ಸಃ ಅಪಿ** = ಆ ಅಶ್ವತ್ಥಾಮನಾದರೂ ತಂ = ವ್ಯಾಸರನ್ನು **ಪ್ರಣಮ್ಯ** = ನಮಸ್ಕರಿಸಿ **ಸ್ವಪ್ನದೃಷ್ಟಿ** = ಕನಸಿನಲ್ಲಿ ಕಂಡದ್ದನ್ನು **ಅನುಸ್ಮರನ್** = ಸ್ಮರಿಸಿಕೊಳ್ಳುತ್ತಾ **ಯಯೌ** = ಹೊಟರನು.

**ತಾತ್ಪರ್ಯ :-** ಅಶ್ವತ್ಥಾಮನು ಹೀಗೆ ಬೇಡಿಕೊಂಡಾಗ ವೇದವ್ಯಾಸರು ''ಆಗಲಿ'' ಎಂದರು. ನಂತರ ಅಶ್ವತ್ಥಾಮನು ಆ ವೇದವ್ಯಾಸರನ್ನು ವಂದಿಸಿ ತಾನು ಸ್ವಪ್ನದಲ್ಲಿ ಕಂಡದ್ದನ್ನು ನೆನೆದುಕೊಳ್ಳುತ್ತಾ ಅಲ್ಲಿಂದ ತೆರಳಿದನು.

**ಸ್ವಪ್ನೇ ಹಿ ದ್ರೌಪದೇಯಾನಾಂ ವಧೋ ದೃಷ್ಟೋ ತ್ಮನಾ ನಿಶಿ ।**
**ಅರ್ಜುನೇನ ಪ್ರತಿಜ್ಞಾನಂ ದ್ರೌಪದ್ಯೈ ಸ್ವವಧಂ ಪ್ರತಿ ॥ ೧೮೫ ॥**

**ಪದಚ್ಛೇದ :- ಸ್ವಪ್ನೇ, ಹಿ, ದ್ರೌಪದೇಯಾನಾಂ, ವಧಃ, ದೃಷ್ಟಃ, ಆತ್ಮನಾ, ನಿಶಿ, ಅರ್ಜುನೇನ, ಪ್ರತಿಜ್ಞಾನಂ, ದ್ರೌಪದ್ಯೈ, ಸ್ವವಧಂ, ಪ್ರತಿ ॥ ೧೮೫ ॥**

**ಅರ್ಥ** :- **ಸ್ವಪ್ನೆ ಹಿ** = ಕನಸಿನಲ್ಲಾದರೂ **ನಿಶಿ** = ರಾತ್ರಿಯಲ್ಲಿ **ಆತ್ಮನಾ** = ತನ್ನಿಂದ **ದ್ರೌಪದೇಯಾನಾಂ** = ದ್ರೌಪದೀಪುತ್ರರ **ವಧಃ** = ನಾಶವು **ದೃಷ್ಟಿ** = ನೊಡಲ್ಪಟ್ಟಿತು **ಅರ್ಜುನೇನ** = ಅರ್ಜುನನಿಂದ **ದ್ರೌಪದ್ಯೈ** = ದ್ರೌಪದೀದೇವಿಗೆ **ಸ್ವವಧಂ ಪ್ರತಿ** = ತನ್ನ ನಾಶವನ್ನು ಕುರಿತಾದ **ಪ್ರತಿಜ್ಞಾನಂ** = ಪ್ರತಿಜ್ಞೆಯು (**ದೃಷ್ಟಿ** = ನೊಡಲ್ಪಟ್ಟಿತು).

**ತಾತ್ಪರ್ಯ** :- ಸ್ವಪ್ನದಲ್ಲಿ ರಾತ್ರಿಯಲ್ಲಿ ತಾನು ದ್ರೌಪದೀಪುತ್ರರನ್ನು ವಧಿಸಿದ ಹಾಗೆ ಕಂಡನು. ಹಾಗೆಯೇ ಅರ್ಜುನನು ದ್ರೌಪದೀದೇವಿಗೆ ತನ್ನ ವಧೆಯನ್ನು ಮಾಡುವ ಪ್ರತಿಜ್ಞೆಯನ್ನು ಮಾಡಿದ್ದನ್ನು ಕಂಡನು.

**ನಿಬಧ್ಯಾऽನಯನಂ ಚೈವ ತೇನೈವ ಶಿಬಿರಂ ಪ್ರತಿ ।**
**ಮುಂಚೇತಿ ದ್ರೌಪದೀವಾಕ್ಯಂ ನೇತಿ ಭೀಮವಚಸ್ತಥಾ ।। ೧೮೬ ।।**

**ಪದಚ್ಛೇದ** :- ನಿಬಧ್ಯ, ಆನಯನಂ, ಚ, ಏವ, ತೇನ, ಏವ, ಶಿಬಿರಂ, ಪ್ರತಿ, ಮುಂಚ, ಇತಿ, ದ್ರೌಪದೀವಾಕ್ಯಂ, ನ, ಇತಿ, ಭೀಮವಚಃ, ತಥಾ ।। ೧೮೬ ।।

**ಅರ್ಥ** :- **ತೇನ ಏವ** = ಅವನಿಂದಲೇ **ನಿಬಧ್ಯ ಏವ** = ಬಂಧಿಸಿಕೊಂಡೇ **ಶಿಬಿರಂ ಪ್ರತಿ** = ಶಿಬಿರವನ್ನು ಕುರಿತು **ಆನಯನಂ ಚ** = ಕರೆದುಕೊಂಡು ಬಂದದ್ದನ್ನೂ **ಮುಂಚ ಇತಿ** = ಬಿಟ್ಟುಬಿಡು ಎಂಬ **ದ್ರೌಪದೀವಾಕ್ಯಂ** = ದ್ರೌಪದೀ ಮಾಡು **ತಥಾ** = ಹಾಗೆಯೇ **ನ ಇತಿ** = ಬೇಡ ಎಂಬ **ಭೀಮವಚಃ** = ಭೀಮೇನ ಮಾತು (**ಸ್ವಪ್ನೆ** = ಕನಸಿನಲ್ಲಿ **ದೃಷ್ಟಂ** = ನೋಡಲ್ಪಟ್ಟಿತು)

**ತಾತ್ಪರ್ಯ** :- ಆ ಅರ್ಜುನನೇ ತನ್ನನ್ನು ಕಟ್ಟಿ ಶಿಬಿರಕ್ಕೆ ಕರೆದು ತಂದಂತೆ, ಆಗ ದ್ರೌಪದೀದೇವಿಯು ತನ್ನನ್ನು 'ಬಿಡು' ಎಂದು ಹೇಳಿದಂತೆ, ಭೀಮಸೇನನ್ನು ''ಬೇಡ'' ಎಂದು ಹೇಳಿದಂತೆ ಸ್ವಪ್ನದಲ್ಲಿ ಕಂಡನು.

**ಕೃಷ್ಣವಾಕ್ಯಾನ್ಮಣಿಂ ಹೃತ್ವಾ ಕೇಶಾನ್ನಿರ್ಯಾತನಂ ತಥಾ ।**
**ಇತ್ಯಾದಿ ಸ್ವಪ್ನದೃಷ್ಟಂ ಯತ್ ಪ್ರಾಯಃ ಸತ್ಯಮಭೂದಿತಿ ।**
**ಚಿಂತಯನ್ ಪ್ರಯಯೌ ದಾವಂ ದ್ರೌಣಿಃ ಶಸ್ತ್ರಭೃತಾಂ ವರಃ ।। ೧೮೭ ।।**

**ಪದಚ್ಛೇದ** :- ಕೃಷ್ಣವಾಕ್ಯಾತ್, ಮಣಿಂ, ಹೃತ್ವಾ, ದೇಶಾತ್, ನಿರ್ಯಾತನಂ, ತಥಾ, ಇತ್ಯಾದಿಸ್ವಪ್ನದೃಷ್ಟಂ, ಯತ್, ಪ್ರಾಯಃ, ಸತ್ಯಂ, ಅಭೂತ್, ಇತಿ, ಚಿಂತಯನ್, ಪ್ರಯಯೌ, ದಾವಂ, ದ್ರೌಣಿಃ, ಶಸ್ತ್ರಭೃತಾಂ, ವರಃ ।। ೧೮೭ ।।

**ಅರ್ಥ** :- **ಕೃಷ್ಣವಾಕ್ಯಾತ್** = ಕೃಷ್ಣನ ಮಾತಿನಂತೆ **ಮಣಿಂ** = ಶಿರೋರತ್ನವನ್ನು **ಹೃತ್ವಾ** = ಕಿತ್ತುಕೊಂಡು (**ತಥಾ** = ಹಾಗೆಯೆ) **ದೇಶಾತ್** = ದೇಶದಿಂದ **ನಿರ್ಯಾತನಂ** = ತೊಲಗಿಸುವುದು **ಇತ್ಯಾದಿ** = ಇವೇ ಮೊದಲಾದ (**ಯತ** = ಯಾವುದು) **ಸ್ವಪ್ನದೃಷ್ಟಂ** = ಸ್ವಪ್ನದಲ್ಲಿ ಕಂಡಿದ್ದನೋ (**ತತ್** = ಅದು) **ಸತ್ಯಂ** = ಸತ್ಯವೇ **ಅಭೂತ್** = ಆಯಿತು **ಇತಿ** = ಹೀಗೆಂದು **ಚಿಂತಯನ್** = ಯೋಚಿಸುತ್ತಾ **ಶಸ್ತ್ರಭೃತಾಂ** = ಶಸ್ತ್ರಧಾರಿಗಳಲ್ಲಿ **ವರಃ** = ಉತ್ತಮನಾದ **ದ್ರೌಣಿಃ** = ಅಶ್ವತ್ಥಾಮನು **ದಾವಂ** = ಕಾಡನ್ನು ಕುರಿತು **ಪ್ರಯಯೌ** = ಹೊರಟನು.

**ತಾತ್ಪರ್ಯ** :- ಕೃಷ್ಣನ ಮಾತಿನಂತೆ ಮಣಿಯನ್ನು ಕಿತ್ತುಕೊಂಡು ತನ್ನನ್ನು ದೇಶಭ್ರಷ್ಟನನ್ನಾಗಿ ಮಾಡಿದಂತೆ ಇವೇ ಮೊದಲಾಗಿ ನಿಜವೇ ಆಗಿದೆ ಎಂದು ಯೋಚಿಸುತ್ತಾ ಶಸ್ತ್ರಧಾರಿಗಳಲ್ಲಿ ಉತ್ತಮವಾದ ಆ ಅವ್ವತ್ಥಾಮನು ಕಾಡಿಗೆ ಹೊರಟನು.

**ವಿವರಣೆ** :- ಅಶ್ವತ್ಥಾಮನು ಕನಸ್ಸಿನಲ್ಲಿ ಕಂಡದ್ದು ಸತ್ಯವೇಂದೇ ಭಾಗವತದಲ್ಲಿ ಇದ್ದರೂ ಅದು ಸ್ವಪ್ನ ಎಂದು ಸ್ಕಂದಪುರಾಣವು ಹೇಳಿದೆ. ಅದನ್ನು ಆಚಾರ್ಯರು ಇಲ್ಲಿ ಉಲ್ಲೇಖಿಸಿದ್ದಾರೆ.

**ಸ ಕೃಷ್ಣೋಕ್ತಮಪಿ ಪ್ರಾಪ್ಯ ಬಾದರಾಯಣಶಿಷ್ಯತಾಮ್ ।**
**ಪ್ರಾಪ್ಯೋತ್ತರದ್ವಾಪರೇ ಚ ವೇದಾನ್ ಸಂವಿಭಜಿಷ್ಯತಿ ॥ ೧೮೮ ॥**

ಪದಚ್ಛೇದ :– ಸಃ, ಕೃಷ್ಣೋಕ್ತಂ, ಅಪಿ, ಪ್ರಾಪ್ಯ, ಬಾದರಾಯಣ, ಶಿಷ್ಯತಾಂ, ಪ್ರಾಪ್ಯ, ಉತ್ತರದ್ವಾಪರೇ, ಚ, ವೇದಾನ್, ಸಂವಿಭಜಿಷ್ಯತಿ ॥ ೧೮೮ ॥

**ಅರ್ಥ** :- **ಸಃ** = ಆ ಅಶ್ವತ್ಥಾಮನು **ಕೃಷ್ಣೋಕ್ತಂ ಅಪಿ** = ಕೃಷ್ಣನ ಶಾಪವನ್ನೆಲ್ಲವನ್ನೂ **ಪ್ರಾಪ್ಯ** = ಅನುಭವಿಸಿ **ಬಾದರಾಯಣಶಿಷ್ಯತಾಂ** = ವೇದವ್ಯಾಸರ ಶಿಷ್ಯತ್ವವನ್ನು **ಪ್ರಾಪ್ಯ** = ಹೊಂದಿ **ಚ** = ಅಂತೆಯೇ **ಉತ್ತರದ್ವಾಪರೇ** = ಮುಂದಿನ ದ್ವಾಪರಯುಗದಲ್ಲಿ **ವೇದಾನ್** = ವೇದಗಳನ್ನು **ಸಂವಿಭಜಿಷ್ಯತಿ** = ಚೆನ್ನಾಗಿ ವಿಭಾಗಮಾಡುತ್ತಾನೆ.

**ತಾತ್ಪರ್ಯ** :- ಒಂದು ಸಾವಿರ ವರ್ಷಗಳ ಅವಧಿ ಇರುವ ಆ ಶ್ರೀಕೃಷ್ಣನ ಶಾಪವನ್ನು ಅನುಭವಿಸಿ ತದನಂತರ ವೇದವ್ಯಾಸರ ಶಿಷ್ಯತ್ವವನ್ನು ವಹಿಸಿ ಇವನೇ ಮುಂದಿನ ದ್ವಾಪರಯುಗದಲ್ಲಿ ವೇದಗಳನ್ನು ವಿಭಾಗ ಮಾಡುತ್ತಾನೆ.

**ತತಃ ಸಪ್ತಋಷಿರ್ಭೂತ್ವಾ ಪಾರಾಶರ್ಯಪ್ರಸಾದತಃ ।**
**ಏಕೀಭಾವಂ ಸ್ವರೂಪೇಣ ಯಾಸ್ಯತ್ಯಚ್ಯುತನಿಷ್ಠಯಾ ॥ ೧೮೯ ॥**

ಪದಚ್ಛೇದ :– ತತಃ, ಸಪ್ತಋಷಿಃ, ಭೂತ್ವಾ, ಪಾರಾಶರ್ಯಪ್ರಸಾದತಃ, ಏಕೀಭಾವಂ, ಸ್ವರೂಪೇಣ, ಯಾಸ್ಯತಿ, ಅಚ್ಯುತನಿಷ್ಠಯಾ ॥ ೧೮೯ ॥

**ಅರ್ಥ** :- **ತತಃ** = ಬಳಿಕ **ಪಾರಾಶರ್ಯಪ್ರಸದತಃ** = ವೇದವ್ಯಾಸರ ಅನುಗ್ರಹದಿಂದ **ಸಪ್ತಋಷಿಃ** = ಸಪ್ತಚಿರಂಜೀವಿಗಳಲ್ಲಿ ಒಬ್ಬನು **ಭೂತ್ವಾ** = ಆಗಿ **ಅಚ್ಯುತನಿಷ್ಠಯಾ** = ನಾರಾಯಣನಲ್ಲಿನ ಭಕ್ತಿಯ ಬಲದಿಂದ **ಸ್ವರೂಪೇಣ** = ತನ್ನದೇ ಆದ ರುದ್ರರೂಪದಿಂದ **ಏಕೀಭವಂ** = ಐಕ್ಯವನ್ನು **ಯಾಸ್ಯತಿ** = ಹೊಂದುತ್ತಾನೆ.

**ತಾತ್ಪರ್ಯ** :- ಅನಂತರ ಅವನು ಸಪ್ತಋಷಿಗಳಲ್ಲಿ ಒಬ್ಬನಾಗಿ ವೇದವ್ಯಾಸರ ಅನುಗ್ರಹದಿಂದ ಕೃಷ್ಣನ ನಿಷ್ಠೆಯ ಬಲದಿಂದ ತನ್ನ ಮೂಲ ರೂಪವೇ ಆದ ರುದ್ರರೂಪದಲ್ಲಿ ಏಕಭಾವವನ್ನು ಹೊಂದುತ್ತಾನೆ.

**ವಿವರಣೆ** :- ಹೀಗೆ ಅವನು ಧೀರ್ಘಕಾಲ ಜೀವಿಸಿದ್ದರಿಂದ ಅವನನ್ನು 'ಚಿರಂಜೀವಿ' ಎಂದು ಕರೆಯಲಾಯಿತು.

**ಕೃಪೋಽಥ ಪಾಂಡವಾನ್ ಪ್ರಾಪ್ಯ ಗೌರವಾತ್ ಪೂಜಿತಶ್ಚ ತೈಃ ।**
**ಅಭೂದಾಚಾರ್ಯ ಏವಾಸೌ ರಾಜ್ಞಾಂ ತತ್ತಂತುಭಾವಿನಾಮ್ ॥ ೧೯೦ ॥**

ಪದಚ್ಛೇದ :– ಕೃಪಃ, ಅಥ, ಪಾಂಡವಾನ್, ಪ್ರಾಪ್ಯ, ಗೌರವಾತ್, ಪೂಜಿತಃ, ಚ, ತೈಃ, ಅಭೂತ್, ಆಚಾರ್ಯಃ, ಏವ, ಅಸೌ, ರಾಜ್ಞಾಂ, ತತ್ತಂತುಭಾವಿನಾಂ ॥ ೧೯೦ ॥

**ಅರ್ಥ** :- **ಅಥ** = ಅನಂತರ **ಕೃಪಃ** = ಕೃಪನು **ಪಾಂಡವಾನ್** = ಪಾಂಡವರ ಬಳಿಗೆ **ಪ್ರಾಪ್ಯ** = ಬಂದು **ತೈಃ** = ಅವರಿಂದ **ಪೂಜಿತಃ** = ಸತ್ಕೃತನಾದ **ಅಸೌ** = ಈ ಕೃಪನು **ತತ್ತಂತುಭಾವಿನಾಂ** = ಅವರ ವಂಶದಲ್ಲಿ

ಹುಟ್ಟು ಬರುವ **ರಾಜ್ಞಾಂ** = ರಾಜರಿಗೆ **ಆಚಾರ್ಯ ಏವ** = ಆಚಾರ್ಯನೇ **ಅಭೂತ್** = ಆದನು.

**ತಾತ್ಪರ್ಯ** :- ಕೃಪನೂ ಕೂಡ ಪಾಂಡವ ಬಳಿಗೆ ಬಂದ. ಅವರೆಲ್ಲರೂ ಅವನನ್ನು ಗೌರವದಿಂದ ಸತ್ಕರಿಸಿದರು. ಈ ಕೃಪನೇ ಮುಂದೆ ಈ ಪಾಂಡವರ ವಂಶದಲ್ಲಿ ಹುಟ್ಟುವ ರಾಜನಿಗೆ ಆಚಾರ್ಯನಾಗುತ್ತಾನೆ.

**ವಿ.** :- ಪಾಂಡವರ ವಂಶದಲ್ಲಿ ಮುಂದೆ ಕ್ಷೇಮಕ್ ಎಂಬ ರಾಜ ಬರುವನು. ಅವನ ಪರ್ಯಂತವೂ ಇವನೇ ಆಚಾರ್ಯನಾಗಿರುವನು ಎಂದರ್ಥ.

**ಬಾದರಾಯಣಶಿಷ್ಯತ್ವಂ ಪುನಃ ಪ್ರಾಪ್ಯ ಭಜನ್ನಮುಮ್ ।**
**ಸಾಕಂ ಸ್ವಭಾಗಿನೇಯೇನ ಭಾವ್ಯೇಕೋ ಮುನಿಸಪ್ತಕೇ ।**
**ಕೃತವರ್ಮಾ ದ್ವಾರವತೀಂ ಯಯೌ ಕೃಷ್ಣಾನುಮೋದಿತಃ ॥ ೧೯೧ ॥**

**ಪದಚ್ಛೇದ** :- ಬಾದರಾಯಣಶಿಷ್ಯತ್ವಂ, ಪುನಃ, ಪ್ರಾಪ್ಯ, ಭಜನ್, ಅಮುಂ, ಸಾಕಂ, ಸ್ವಭಾಗಿನೇಯೇನ, ಭಾವೀ, ಏಕಃ, ಮುನಿಸಪ್ತಕೇ, ಕೃತವರ್ಮಾ, ದ್ವಾರವತೀಂ, ಯಯೌ, ಕೃಷ್ಣಾನುಮೋದಿತಃ ॥ ೧೯೧ ॥

**ಅರ್ಥ** :- **ಪುನಃ** = ಪಾಂಡವರ ವಂಶವನ್ನು ಆಳಿದನಂತರ **ಬಾದರಾಯಣಶಿಷ್ಯತ್ವಂ** = ವೇದವ್ಯಾಸರ ಶಿಷ್ಯತ್ವವನ್ನು **ಪ್ರಾಪ್ಯ** = ಹೊಂದಿ **ಅಮುಂ** = ಈ ವ್ಯಾಸರನ್ನು **ಭಜನ್** = ಸೇವಿಸಿದವನಾಗಿ **ಸ್ವಭಾಗಿನೇಮೇನ ಸಾಕಂ** = ಅಶ್ವತ್ಥಾಮನಿಂದ ಕೂಡಿಕೊಂಡು **ಮುನಿಸಪ್ತಕೇ** = ಸಪ್ತಋಷಿಗಳಲ್ಲಿ **ಏಕಃ** = ಒಬ್ಬನು **ಭಾವೀ** = ಆಗುವನು **ಕೃತವರ್ಮಾ** = ಕೃತವರ್ಮನೂ **ಕೃಷ್ಣಾನುಮೋದಿತಃ** = ಕೃಷ್ಣನ ಅಪ್ಪಣೆಯಂತೆ **ದ್ವಾರವತೀಂ** = ದ್ವಾರಕೆಗೆ **ಯಯೌ** = ತೆರಳಿದನು.

**ತಾತ್ಪರ್ಯ** :- ಅನಂತರ ಮತ್ತೇ ವೇದವ್ಯಾಸ ಶಿಷ್ಯನಾಗಿ ಅವರನ್ನು ಸೇವಿಸುತ್ತಾ ತನ್ನ ಸೊರಳಿಯನೊಂದಿಗೆ ಸಪ್ತಋಷಿಗಳಲ್ಲಿ ಒಬ್ಬನಾಗುತ್ತಾನೆ. ಕೃತವರ್ಮನು ಕೃಷ್ಣನ ಅಪ್ಪಣೆಯಂತೆ ದ್ವಾರಕೆಗೆ ತೆರಳಿದನು.

**ಕೃಷ್ಣಾಯೈ ತಂ ಮಣಿಂ ದತ್ವಾ ಭೀಮಸ್ತಾಂ ಪರ್ಯಸಾಂತ್ವಯತ್ ।**
**ವಿಕೋಪಾ ಭೀಮವಾಕ್ಯೇನ ರಾಜ್ಞೇ ಸಾ ಚ ಮಣಿಂ ದದೌ ॥ ೧೯೨ ॥**

ಪದಚ್ಛೇದ :- ಕೃಷ್ಣಾಯೈ, ತಂ, ಮಣಿಂ, ದತ್ವಾ, ಭೀಮಃ, ತಾಂ, ಪರ್ಯಸಾಂತ್ವಯತ್, ವಿಕೋಪಿ, ಭೀಮವಾಕ್ಯೇನ, ರಾಜ್ಞೇ, ಸ, ಚ, ಮಣಿಂ, ದದೌ ॥ ೧೯೨ ॥

**ಅರ್ಥ** :- **ಭೀಮಃ** = ಭೀಮನು **ತಾಂ** = ಅಶ್ವತ್ಥಾಮನಿಂದ ತೆಗೆದುಕೊಂಡ **ಮಣಿಂ** = ಆ ಮಣಿಯನ್ನು **ಕೃಷ್ಣಾಯೈ** = ದ್ರೌಪದಿಗೆ **ದತ್ವಾ** = ಕೊಟ್ಟು **ತಾಂ** = ಅವಳನ್ನು **ಪರ್ಯಸಾಂತ್ವಯತ್** = ಸಮಾಧಾನ ಪಡಿಸಿದನು **ಭೀಮವಾಕ್ಯೇನ** = ಭೀಮನ ಮಾತಿನಿಂದ **ವಿಕೋಪಾ** = ಕೊಪಬಿಟ್ಟ **ಸಾ** = ಅವಳು **ಮಣಿಂ ಚ** = ಆ ಮಣಿಯನ್ನಾದರೂ **ರಾಜ್ಞೇ** = ಧರ್ಮರಾಜನಿಗೆ **ದದೌ** = ಕೊಟ್ಟಳು.

**ತಾತ್ಪರ್ಯ** :- ಭೀಮನು ಅಶ್ವತ್ಥಾಮನಿಂದ ಕಿತ್ತುಕೊಂಡು ಆ ಮಣಿಯನ್ನು ದ್ರೌಪದಿಗೆ ಕೊಟ್ಟನು. ಹಾಗೆಯೇ ನಡೆದ ಘಟನೆಗಾಗಿ ಅವಳಿಗೆ ಸಾಂತ್ವನ ಹೇಳಿದನು. ಅವಳೂ ಕೂಡ ಭೀಮನ ಹಿತವಚನಗಳಿಂದ ಕೊಪವನ್ನು ಬಿಟ್ಟು ಆ ಮಣಿಯನ್ನು ಧರ್ಮರಾಜನಿಗೆ ನೀಡಿದಳು.

ವಿ. :- ಭೀಮನು ತನಗೆ ಬೇಡವೆಂದು ದ್ರೌಪದಿಗೆ ನೀಡಿದ. ಅವಳು ತನಗೆ ಬೇಡವೆಂದು ಧರ್ಮರಾಜನಿಗೆ ನೀಡಿದಳು. ಇದರಿಂದ ಅವರಿಬ್ಬರಿಗೂ ಲೌಕಿಕವಾದ ಫಲಾಪೇಕ್ಷೆ ಇಲ್ಲವೆಂಬುದು ತಿಳಿಯುತ್ತದೆ.

**ರಾಜಾರ್ಹೇ ಹಿ ಮಣೌ ದತ್ತೇ ಮಹ್ಯಂ ಭೀಮೇನ ಲೌಕಿಕಾಃ ।**
**ಸ್ತ್ರೀಪಕ್ಷಪಾತಂ ರಾಜಾ ಚ ಶಂಕೇಯುರ್ಮಾರುತೇರಿತಿ ॥ ೧೯೩ ॥**

ಪದಚ್ಛೇದ :- ರಾಜಾರ್ಹೇ, ಹಿ, ಮಣೌ, ದತ್ತೇ, ಮಹ್ಯಂ, ಭೀಮೇನ, ಲೌಕಿಕಾಃ, ಸ್ತ್ರೀಪಕ್ಷಪಾತಂ, ರಾಜಾ, ಚ, ಶಂಕೇಯುಃ, ಮಾರುತೇಃ, ಇತಿ ॥ ೧೯೩ ॥

**ಅರ್ಥ** :- **ರಾಜಾರ್ಹೇ** = ರಾಜನಿಗೆ ಯೋಗ್ಯವಾದ **ಮಣೌಹಿ** = ಆ ಮಣಿಯಾದರೋ **ಮಹ್ಯಂ** = ನನಗೆ **ಭೀಮೇನ** = ಭೀಮನಿಂದ **ಹತ್ತೇ(ಸತಿ)** = ಕೊಡಲ್ಪಟ್ಟರೆ, **ಲೌಕಿಕಾಃ** = ಜನರು **ರಾಜಾ ಚ** = ಧರ್ಮರಾಜನೂ

**ಮಾರುತೇಃ** = ಭೀಮನಿಗೆ **ಸ್ತ್ರೀಪಕ್ಷಪಾತಂ** = ಸ್ತ್ರೀಪಕ್ಷಪಾತ ಮಾಡುವವನು **ಇತಿ** = ಎಂದು **ಶಂಕೇಯುಃ** = ಶಂಕಿಸಬಹುದು.

**ತಾತ್ಪರ್ಯ** :- ರಾಜಯೋಗ್ಯವಾದ ಆ ಮಣಿಯನ್ನು ಭೀಮಸೇನನು ತನಗೆ ನೀಡಿದರೆ ಲೌಕಿಕ ಜನರೂ ಹಾಗೆಯೇ ಧರ್ಮರಾಜನೂ ಭೀಮಸೇನನಲ್ಲಿ ಸ್ತ್ರೀಪಕ್ಷಪಾತವನ್ನು ಶಂಕಿಸಬಹುದು ಎಂದು ಯೋಚಿಸಿದಳು.

**ಮಣಿಂ ರಾಜ್ಞೇ ದದೌ ಕೃಷ್ಣಾ ಭರ್ತೃಪ್ರಿಯಹಿತೇ ರತಾ ।**
**ಸೋಽಪ್ಯಾಬಧ್ಯ ಮಣಿಂ ಮೂರ್ಧ್ನಿ ರೇಜೇ ರಾಜಾ ಗವಾಮಿವ ॥ ೧೯೪ ॥**

**ಪದಚ್ಛೇದ** :- ಮಣಿಂ, ರಾಜ್ಞೇ, ದದೌ, ಕೃಷ್ಣಾ, ಭರ್ತೃಪ್ರಿಯಹಿತೇ, ರತಾ, ಸಃ, ಅಪಿ, ಆಭಧ್ಯ, ಮಣಿಂ, ಮೂರ್ಧ್ನಿ, ರೇಜೆ, ರಾಜಾ, ಗವಾಂ, ಇವ ॥ ೧೯೪ ॥

**ಅರ್ಥ** :- **ಭರ್ತೃಪ್ರಿಯಹಿತೇ** = ಪತಿಗೆ ಪ್ರಿಯವನ್ನೂ, ಹಿತವನ್ನೂ ಉಂಟುಮಾಡುವುದರಲ್ಲಿ **ರತಾ** = ನಿರತಳಾದ **ಕೃಷ್ಣಾ** = ದ್ರೌಪದಿಯು **ಮಣಿಂ** = ಮಣಿಯನ್ನು **ರಾಜ್ಞೆ** = ರಾಜನಿಗೆ **ದದೌ** = ನೀಡಿದಳು **ಸಃ ಅಪಿ** = ಆ ಧರ್ಮರಾಜನಾದರೂ **ಮಣಿಂ** = ಮಣಿಯನ್ನು **ಮೂರ್ಧ್ನಿ** = ಶಿರಸ್ಸಿನಲ್ಲಿ **ಆಬಧ್ಯ** = ಧರಿಸಿಕೊಂಡು **ಗವಾಂ** = ಕಿರಣಗಳ **ರಾಜಾ ಇವ** = ಒಡೆಯನಾದ ಸೂರ್ಯನಂತೆ **ರೇಜೇ** = ಬೆಳಗಿದನು.

**ತಾತ್ಪರ್ಯ** :- ದ್ರೌಪದಿಯು ಪತಿಗೆ ಪ್ರಿಯವಾದ ಹಾಗೂ ಹಿತವಾದ ಕೆಲಸಗಳನ್ನು ಮಾಡುವುದರಲ್ಲಿ ನಿರತಳಾದವಳು. ಆದ್ದರಿಂದ ಅವಳು ಆ ಮಣಿಯನ್ನು ಧರ್ಮರಾಜನಿಗೇ ನೀಡಿದಳು. ಆ ರಾಜನಾದರೂ ಆ ಮಣಿಯನ್ನು ತನ್ನ ಶಿರಸ್ಸಿನಲ್ಲಿ ಧರಿಸಿಕೊಂಡು ಸೂರ್ಯನಂತೆ ಪ್ರಕಾಶಿಸಿದನು.

**ವಿವರಣೆ** :- ದ್ರೌಪದಿ ಹಾಗೆ ಮಾಡುವುದರ ಮೂಲಕ ಭೀಮನ ಕೋಪವೃದ್ಧಿಗೆ ಕಾರಣಳಾದಳು. ಪತಿಗೆ ಹಿತವಾಗಿ ಪ್ರಿಯವಾಗಿ ನಡೆಯುವುದೆ ಪಾತಿವ್ರತ್ಯಧರ್ಮ.

**ವೇದೇಶ್ವರೇಣಾಪಿ ಯದೂತ್ತಮೇನ**
**ಕೃಷ್ಣೇನ ಯುಕ್ತಾಸ್ತತ ಆಶು ಪಾರ್ಥಾಃ ।**

**ಯಯುಃ ಸಭಾರ್ಯಾ ನಿಜರಾಜಧಾನೀಂ**
**ಹತ್ವೈವ ಸಂತೋಽಂತರರೀನ್ ಸ್ವರಾಜ್ಯಮ್ ॥ ೧೯೫ ॥**

ಪದಚ್ಛೇದ :- ವೇದೇಶ್ವರೇಣ, ಅಪಿ, ಯದೂತ್ತಮೇನ, ಕೃಷ್ಣೇನ, ಯುಕ್ತಾಃ, ತತಃ, ಆಶು, ಪಾರ್ಥಾಃ, ಯಯುಃ, ಸಾರ್ಯಾಃ, ನಿಜರಾಜಧಾನೀಂ, ಹತ್ವಾ, ಏವ, ಸಂತಃ, ಅಂತರರೀನ್, ಸ್ವರಾಜ್ಯಂ ॥ ೧೯೫ ॥

**ಅರ್ಥ** :- **ಸಂತಃ** = ಸಜ್ಜನರು **ಅಂತರರೀನ್** = ಮನದೊಳಗಿನ ಕಾಮಾದಿಶತ್ರುಗಳನ್ನು **ಹತ್ವಾ ಏವ** = ಸಂಹರಿಸಿಯೇ **ಸ್ವರಾಜ್ಯಂ** = ಮೋಕ್ಷವನ್ನು (**ಭಜಂತೇ** = ಹೋಂದುವರೋ) (**ತಥಾ** = ಹಾಗೆಯೇ) **ಪಾರ್ಥಾಃ** = ಪಾಂಡವರು **ಅಂತರರೀನ್** = ತಮ್ಮ ಮನೆಯೊಳಗಿನ ಶತ್ರುಗಳನ್ನು **ಹತ್ವಾ ಏವ** = ಸಂಹರಿಸಿ **ತತ್** = ಅನಂತರ **ವೇದೇಶ್ವರೇಣ** = ವೇದವ್ಯಾಸರಿಂದ **ಯದೂತ್ತಮೇನ** = ಯದುಕುಲಶ್ರೇಷ್ಠನಾದ **ಕೃಷ್ಣೇನ** = ಕೃಷ್ಣನಿಂದ **ಯುಕ್ತಾಃ** = ಕೂಡಿದವರಾಗಿ **ಸಭಾರ್ಯಾಃ** = ಮಡದಿಯರಿಂದ ಸಹಿತರಾಗಿ **ಆಶು** = ಬೇಗನೇ **ನಿಜರಾಜಧಾನೀಂ** = ತಮ್ಮ ರಾಜಧಾನಿಯಾದ ಹಸ್ತಿನಾವತೀಯನ್ನು **ಯಯುಃ** = ಪ್ರವೇಶಿಸಿದರು.

**ತಾತ್ಪರ್ಯ** :- ಸಜ್ಜನರು ಹೇಗೆ ತಮ್ಮ ಒಳಗಿರುವ ಕಾಮಕ್ರೋಧಾದಿಗಳನ್ನು ನಾಶಮಾಡಿ ಮೊಕ್ಷವೆಂಬ ನಗರವನ್ನು ಪ್ರವೇಶಿಸುತ್ತಾರೋ, ಅಂತೆಯೇ ಪಾಂಡವರು ವೇದವ್ಯಾಸರು ಮತ್ತು ಯದುಶ್ರೇಷ್ಠನಾದ ಶ್ರೀಕೃಷ್ಣನಿಂದ ಕೂಡಿಕೊಂಡು ಪತ್ನೀಸಹಿತರಾಗಿ ತಮ್ಮ ರಾಜಧಾನಿಯಾದ ಹಸ್ತಿನಾಪುರಕ್ಕೆ ಹೊರಟರು.

**ಯುಧಿಷ್ಠಿರಸ್ಯಾನು ವಿಚಿತ್ರವೀರ್ಯ-**
**ಸುತಸ್ಯ ಪಾದಾವಭಿವಂದಮಾನಮ್ ।**
**ಆಕೃಷ್ಯ ಭೀಮಂ ಪರಮೇಶ್ವರೋಽಯೋ-**
**ಮಯಾಕೃತಿಂ ಧಾತ್ ಪುರತೋ ನೃಪಸ್ಯ ॥ ೧೯೬ ॥**

ಪದಚ್ಛೇದ :- ಯುಧಿಷ್ಠಿರಸ್ಯಾನು, ವಿಚಿತ್ರವೀರ್ಯಸುತಸ್ಯ, ಪಾದೌ, ಅಭಿವಂದಮಾನಂ, ಆಕೃಷ್ಯ, ಭೀಮಂ, ಪರಮೇಶ್ವರಃ, ಅಯೋಮಯಾಕೃತಿಂ, ಧಾತ್, ಪುರತೋ, ನೃಪಸ್ಯ ॥ ೧೯೬ ॥

**ಅರ್ಥ** :- **ವಿಚಿತ್ರವೀರ್ಯಸುತಸ್ಯ** = ಧೃತರಾಷ್ಟ್ರನ **ಪಾದೌ** = ಕಾಲುಗಳಿಗೆ **ಯುಧಿಷ್ಠಿರಸ್ತಾನು** = ಧರ್ಮರಾಜನ ನಂತರ **ಅಭಿವಂದಮಾನಂ** = ನಮಸ್ಕರಿಸುತ್ತಿರುವ **ಭೀಮಂ** = ಭೀಮನನ್ನು **ಪರಮೇಶ್ವರಃ** = ಶ್ರೀಕೃಷ್ಣನು **ಆಕೃಷ್ಯ** = ಹಿಂದಕ್ಕೆ ಸೆಳೆದು **ಅಯೋಮಯಾಕೃತಿಂ** = ಕಬ್ಬಿಣದ ಪ್ರತಿಕೃತಿಯನ್ನು **ನೃಪಸ್ಯ** = ರಾಜನ **ಪುರತಃ** = ಮುಂದೆ **ಧಾತ್** = ನಿಲ್ಲಿಸಿದನು.

**ತಾತ್ಪರ್ಯ** :- ಭೀಮನು ಧರ್ಮರಾಜನ ನಂತರ ಧೃತರಾಷ್ಟ್ರನಿಗೆ ನಮಸ್ಕರಿಸಲು ಮುಂದಾದಾಗ ಅವನನ್ನು ಪರಮೇಶ್ವರನಾದ ಶ್ರೀಕೃಷ್ಣನು ಸೆಳೆದು ಆ ಧೃತರಾಷ್ಟ್ರನ ಮುಂದೆ ಉಕ್ಕಿನ ಭೀಮಾಕೃತಿಯನ್ನು ನಿಲ್ಲಿಸಿದನು.

**ಭೀಮಾಕೃತಿಂ ತಾಂ ಸ ಸುಯೋಧನೇನ**
**ಕಾರಾಪಿತಾಮಭ್ಯಸನೇ ಗದಾಯಾಃ ।**
**ಆಶ್ಲಿಷ್ಯ ಚೂರ್ಣೀಕೃತವಾನಸೃಗ್ ವಮನ್**
**ಹಾ ತಾತ ಭೀಮೇತಿ ವದನ್ ಪಪಾತ ॥ ೧೯೭ ॥**

**ಪದಚ್ಛೇದ :– ಭೀಮಾಕೃತಿಂ, ತಾಂ, ಸಃ, ಸುಯೋಧನೇನ, ಕಾರಾಪಿತಾಂ, ಅಭ್ಯಸನೇ, ಗದಾಯಾಃ, ಆಶ್ಲಿಷ್ಯ, ಚೂರ್ಣೀಕೃತವಾನ್, ಅಸೃಕ್, ವಮನ್, ಹಾ, ತಾತ್, ಭೀಮ, ಇತಿ, ವದನ್, ಪಪಾತ ॥ ೧೯೭ ॥**

**ಅರ್ಥ** :- **ಸುಯೋಧನೇನ** = ದುರ್ಯೋಧನನಿಂದ **ಗದಾಯಾಃ** = ಗದಾಯುದ್ಧದ **ಅಭ್ಯಸನೇ** = ಅಭ್ಯಾಸಕ್ಕಾಗಿ **ಕಾರಾಪಿತಾಂ** = ಮಾಡಿಸಲಾಗಿದ್ದ **ತಾಂ** = ಆ **ಭೀಮಾಕೃತಿಂ** = ಭೀಮನ ಪ್ರತಿಕೃತಿಯನ್ನು **ಸಃ** = ಧೃತರಾಷ್ಟ್ರನು **ಆಶ್ಲಿಷ್ಯ** = ಆಲಿಂಗಿಸಿ **ಚೂರ್ಣೀಕೃತವಾನ್** = ಪುಡಿಮಾಡಿದನು **ಅಸೃಕ್** = ರಕ್ತವನ್ನು **ವಮನ್** = ಕಾರುತ್ತಾ **ಹಾತಾತ** = ಎಲೈ ಮಗನೇ **ಭೀಮ** = ಭೀಮನೇ **ಇತಿ** = ಎಂದು **ವದನ್** = ಹೇಳುತ್ತಾ **ಪಪಾತ** = ಬಿದ್ದನು.

**ತಾತ್ಪರ್ಯ** :- ದುರ್ಯೋಧನನು ತಾನು ಪ್ರತಿದಿನ ಗದಾಭ್ಯಾಸವನ್ನು ಮಾಡುವುದಕ್ಕಾಗಿ ಆ ಭೀಮಾಕೃತಿಯನ್ನು ಮಾಡಿಸಲಾಗಿತ್ತು. ಧೃತರಾಷ್ಟ್ರನು ಆ ಭೀಮಾಕೃತಿಯನ್ನೇ ಆಲಿಂಗಿಸಿ ಪುಡಿಮಾಡಿದ. ರಕ್ತವನ್ನು ಕಾರುತ್ತಾ ''ಹಾ! ಮಗು! ಭೀಮನೇ!'' ಎಂದು ಕೂಗುತ್ತಾ ಬಿದ್ದನು.

**ವಿವರಣೆ** :- ಮುಂದೆ ಭೀಮನನ್ನು ಕೊಲ್ಲುವ ನೈಪುಣ್ಯವನ್ನು ಸಂಪಾದಿಸಲು ದುರ್ಯೋಧನ ಭೀಮನ ಪ್ರತಿಮೆಯನ್ನು ಮಾಡಿಸಿ ಹದಿಮೂರು ವರ್ಷಗಳ ಕಾಲ ಆ ಭೀಮಾಕೃತಿಗೆ ಗದಾಪ್ರಹಾರ ಮಾಡಿದ. ಧೃತರಾಷ್ಟ್ರನು ಭೀಮನ ಮೇಲಿನ ಕೃಪದಿಂದ ಮುಂದಿಟ್ಟಿದ್ದು ಆಕೃತಿ ಎಂದು ತಿಳಿಯದೇ ಹತ್ತು ಸಾವಿರ ಆನೆಗಳ ಬಲದಿಂದ ಕೂಡಿದ ಬಾಹು ಶಕ್ತಿಯಿಂದ ಬಿಗಿಯಾಗಿ ಅಪ್ಪಿ, ಅದನ್ನು ಪುಡಿಮಾಡಿ ಭೀಮನೇ ಸತ್ತನೆಂದು ಭ್ರಮಿಸಿದ.

**ತಮಾಹ ಕೃಷ್ಣೋ ನ ಹತೋಽದ್ಯ ಭೀಮೋ**
**ನಚ ತ್ವಯಾಽನ್ಯೈರಪಿ ಶಕ್ಯತೇಽಸೌ ।**
**ಹಂತುಂ ಸ್ವಬುದ್ಧಿಃ ಪ್ರಥಿತಾ ತ್ವಯಾಽದ್ಯ**
**ಪಾಪಾ ಹಿ ತೇ ಬುದ್ಧಿರದ್ಯಾಪಿ ರಾಜನ್ ॥ ೧೯೮ ॥**

**ಪದಚ್ಛೇದ :- ತಂ, ಆಹ, ಕೃಷ್ಣಃ, ನ, ಹತಃ, ಅದ್ಯ, ಭೀಮಃ, ನ, ಚ, ತ್ವಯಾ, ಅನ್ಯೈಃ, ಅಪಿ, ಶಕ್ಯತೇ, ಅಸೌ, ಹಂತುಂ, ಸ್ವಬುದ್ಧಿಃ, ಪ್ರಥಿತಾ, ತ್ವಯಾ, ಅದ್ಯ, ಪಾಪಾ, ಹಿ, ತೇ, ಬುದ್ಧಿಃ, ಅದ್ಯ, ಅಪಿ, ರಾಜನ್ ॥ ೧೯೮ ॥**

**ಅರ್ಥ** :- **ತಂ** = ಆ ಧೃತರಾಷ್ಟ್ರನಿಗೆ **ಕೃಷ್ಣಃ** = ಶ್ರೀಕೃಷ್ಣನು **ಆಹ** = ಹೇಳಿದನು **ಅದ್ಯ** = ಈಗ **ಭೀಮಃ** = ಭೀಮನು, **ನ ಹತಃ** = ಹತನಾಗಿಲ್ಲ **ತ್ವಯಾ** = ನಿನ್ನಿಂದಾಗಲೀ **ಅನ್ಯೈರಪಿ** = ಬೇರೆ ಯಾರಿಂದಾಗಲೀ **ಅಸೌ** = ಈ ಭೀಮನು **ಹಂತುಂ** = ಕೊಲ್ಲಲು **ನ ಚ ಶಕ್ಯತೇ** = ಸಾಧ್ಯವಾಗುವುದಿಲ್ಲ **ತ್ವಯಾ** = ನಿನ್ನಿಂದ **ಅದ್ಯ** = ಈಗ **ಸ್ವಬುದ್ಧಿಃ** = ನಿನ್ನ ಕೆಟ್ಟ ಬುದ್ಧಿಯು **ಪ್ರಥಿತಾ** = ತೋರಿಸಲ್ಪಟ್ಟಿತು **ರಾಜನ್** = ರಾಜನೇ **ತೇ** = ನಿನ್ನ **ಬುದ್ಧಿಃ** = ಬುದ್ಧಿಯು **ಅದ್ಯಾಪಿ** = ಇಂದಿಗೂ **ಪಾಪಾ ಹಿ** = ಕಲುಷಿತವಾಗಿಯೇ ಇದೆ.

**ತಾತ್ಪರ್ಯ** :- ಕೃಷ್ಣನು ಧೃತರಾಷ್ಟ್ರನಿಗೆ ಹೇಳುತ್ತಾನೆ. ''ಭೀಮನು ಮೃತನಾಗಿಲ್ಲ. ನೀನಾಗಲೀ ಜಗತ್ತಿನಲ್ಲಿರುವ ಬೇರೇ ಯಾರೇ ಆಗಲಿ ಭೀಮನನ್ನು ಕೊಲ್ಲುವುದು ಸಾಧ್ಯವೂ ಅಲ್ಲ. ಆದರೆ ಇದರಿಂದ ರಾಜನೇ ನಿನ್ನ ದುಷ್ಟಬುದ್ಧಿಯನ್ನು ನೀನೇ ಬಯಲು ಮಾಡಿಕೊಂಡೆ ಇಂದಿಗೂ ನಿನ್ನದ್ದು ಪಾಪಬುದ್ಧಿಯೇ''.

**ಸ್ವಬುದ್ಧಿದೋಷಾದತಿಪಾಪಶೀಲ-**
**ಪುತ್ರಾಖ್ಯಪಾಪಾನಿ ವಿವರ್ಧಯಿತ್ವಾ ।**
**ನೀತೋ ವಶಂ ತೈಃ ಫಲಮದ್ಯ ಭುಂಜನ್**
**ನ ಕ್ರೋಧಿತುಂ ಚಾರ್ಹಸಿ ಭೀಮಸೇನೇ ॥ ೧೯೯ ॥**

ಪದಚ್ಛೇದ :- ಸ್ವಬುದ್ಧಿದೋಷಾತ್, ಅತಿಪಾಪಶೀಲಪುತ್ರಾಖ್ಯಪಾಪಾನಿ, ವಿವರ್ಧಯಿತ್ವಾ, ನೀತಃ, ವಶಂ, ತೈಃ, ಫಲಂ, ಅದ್ಯ, ಭುಂಜನ್, ನ, ಕ್ರೋಧಿತುಂ, ಚ, ಅರ್ಹಸಿ, ಭೀಮಸೇನೇ ॥ ೧೯೯ ॥

**ಅರ್ಥ** :- **ಸ್ವಬುದ್ಧಿದೋಷಾತ್** = ನಿನ್ನ ಕೆಟ್ಟಬುದ್ಧಿಯ ದೋಷದಿಂದ, **ಅಪಿ ಪಾಪಶೀಲಪುತ್ರಾಖ್ಯಪಾಪಾನಿ** = ಪರಮಪಾಪಸ್ವಭಾವವುಳ್ಳ ಮಕ್ಕಳೆಂದ ಪಾಪಗಳನ್ನು **ವಿವರ್ಧಯತ್ವಾ** = ಬೆಳೆಸಿ **ತೈಃ** = ಅವರ **ವಶಂ** = ವಶಕ್ಕೆ **ನೀತಃ** = ಒಳಗಾಗಿ **ಅದ್ಯ** = ಈಗ, **ಫಲಂ** = ಪಾಪದ ಫಲವನ್ನು **ಭುಂಜನ** = ಅನುಭವಿಸುತ್ತಿರುವ ನಾನು **ಭೀಮಸೇನೇ** = ಭೀಮಸೇನನಲ್ಲಿ **ಕ್ರೋಧಿತುಂ** = ಕೊಪಗೊಳ್ಳಲು **ನಾರ್ಹಸಿ** = ಅರ್ಹನಾಗಿಲ್ಲ.

**ತಾತ್ಪರ್ಯ** :- ನಿನ್ನ ಕೆಟ್ಟ ಬುದ್ಧಿಯಿಂದ ಅತ್ಯಂತ ಪಾಪಿಷ್ಠರಾದ ಮಕ್ಕಳೆಂಬ ಪಾಪವನ್ನೆ ಬೆಳೆಸಿ ಅವರ ವಶಕ್ಕೆ ಒಳಗಾಗಿ ಈಗ ಅದರ ಫಲವನ್ನು ಅನುಭವಿಸುತ್ತಿದ್ದೀ ಆದ್ದರಿಂದ ನೀನು ಭೀಮಸೇನನಲ್ಲಿ ಕೋಪಮಾಡುವುದು ಉಚಿತವಲ್ಲ.

**ಇತ್ಯುಕ್ತೇ ಶಾಂತಬುದ್ಧ್ಯೈವ ರಾಜ್ಞಾಽಽಹೂತೋ ವೃಕೋದರಃ ।**
**ಅಭ್ಯವಂದತ ತತ್ಪಾದಾವನುಜಾದ್ಯಾಶ್ಚ ತಸ್ಯ ಯೇ ॥ ೨೦೦ ॥**

ಪದಚ್ಛೇದ :- ಇತಿ, ಉಕ್ತೇ, ಶಾಂತಬುದ್ಧ್ಯಾ, ಏವ, ರಾಜ್ಞಾ, ಆಹುತಃ, ವೃಕೋದರಃ, ಅಭ್ಯವಂದತ್, ತತ್ಪಾದೌ, ಅನುಜಾದ್ಯಾಃ, ಚ, ತಸ್ಯ, ಯೇ ॥ ೨೦೦ ॥

**ಅರ್ಥ** :- **ಇತ್ಯುಕ್ತೇ** = ಶ್ರೀಕೃಷ್ಣನು ಹೀಗೆ ಹೇಳಿದಾಗ **ಶಾಂತಬುದ್ಧ್ಯಾ ಏವ** = ಶಾಂತವಾದ ಬುದ್ಧಿಯುಳ್ಳ **ರಾಜ್ಞಾ** = ಧೃತರಾಷ್ಟ್ರನಿಂದ **ಆಹೂತಃ** = ಕರೆಯಲ್ಪಟ್ಟ **ವೃಕೋದರಃ** = ಭೀಮನು **ತತ್ಪಾದೌ** = ಅವನ ಕಾಲುಗಳನ್ನು **ಅಭ್ಯವಂದತ** = ನಮಸ್ಕರಿಸಿದನು **ತಸ್ಯ** = ಆ ಭೀಮನ **ಯೇ** = ಯಾವ

**ಅನುಜಾದ್ಯಾಃ ಚ** = ತಮ್ಮಂದಿರು ಇದ್ದರೋ (ತೇ = ಅವರೂ) (**ಅಭ್ಯವಂದಂತ** = ನಮಸ್ಕರಿಸಿದರು)

**ತಾತ್ಪರ್ಯ :-** ಶ್ರೀಕೃಷ್ಣನು ಹೀಗೆ ಹೇಳಿದಾಗ ಶಾಂತವಾದ ಬುದ್ಧಿಯುಳ್ಳ ಧೃತರಾಷ್ಟ್ರನು ಭೀಮನನ್ನು ಕರೆದನು. ಭೀಮನು ಅವನ ಪಾದಗಳಿಗೆ ನಮಸ್ಕರಿಸಿದನು. ನಂತರ ಅವನ ತಮ್ಮಂದಿರೂ ಕೂಡ ಧೃತರಾಷ್ಟ್ರನ ಪಾದಗಳಿಗೆ ವಂದಿಸಿದರು.

**ವಜ್ರಾಚ್ಚ ದೃಢದೇಹತ್ವಾದವಿಕಾರೇ ವೃಕೋದರೇ ।**
**ನ ದೋಷೋ ವಿವೃತೋಽಸ್ಯ ಸ್ಯಾದಿತಿ ಕೃಷ್ಣೇನ ವಂಚಿತಃ ॥ ೨೦೦ ॥**

**ಪದಚ್ಛೇದ :- ವಜ್ರಾತ್, ಚ, ದೃಢದೇಹತ್ವಾತ್, ಅವಿಕಾರೇ, ವೃಕೋದರೇ, ನ, ದೋಷಃ, ವಿವೃತಃ, ಅಸ್ಯ, ಸ್ಯಾತ್, ಇತಿ, ಕೃಷ್ಣೇನ, ವಂಚಿತಃ ॥ ೨೦೦ ॥**

**ಅರ್ಥ :- ವಜ್ರಾತ್ ಚ** = ವಜ್ರಕ್ಕಿಂತಲೂ **ದೃಢದೇಹತ್ವಾತ್** = ಗಟ್ಟಿಯಾದ ದೇಹವುಳ್ಳವನಾದ್ದರಿಂದ **ವೃಕೋದರೇ** = ಭೀಮಸೇನೇ **ಅವಿಕಾರೇ (ಸತಿ)** = ವಿಕಾರವಿಲ್ಲದವನಾಗುತ್ತಿರಲು **ಅಸ್ಯ** = ಧೃತರಾಷ್ಟ್ರನ **ದೋಷಃ** = ಕೆಟ್ಟ ಬುದ್ಧಿಯು **ವಿವೃತಃ** = ಪ್ರಕಟವಾದದ್ದಾಗಿ **ನ ಸ್ಯಾತ್** = ಆಗುತ್ತಿರಲಿಲ್ಲ **ಇತಿ** = ಈ ಕಾರಣದಿಂದ **ಕೃಷ್ಣೇನ** = ಶ್ರೀ ಕೃಷ್ಣನಿಂದ **ವಂಚಿತಃ** = ಮೋಸಗೊಳಿಸಲ್ಪಟ್ಟನು.

**ತಾತ್ಪರ್ಯ :-** ಭೀಮಸೇನನ ದೇಹವು ವಜ್ರಕ್ಕಿಂತಲೂ ದೃಢವಾದದ್ದು ಆದ್ದರಿಂದ ಅವನು ಧೃತರಾಷ್ಟ್ರ ಆಲಿಂಗಿಸಿದಾಗ ವಿಕಾರವಾಗದಿದ್ದರೆ ಧೃತರಾಷ್ಟ್ರನ ದುಷ್ಟತನ ಪ್ರಕಟವಾಗುತ್ತಿರಲಿಲ್ಲ. ಆದ್ದರಿಂದಲೇ ಕೃಷ್ಣನು ಅವನನ್ನು ವಂಚಿಸಿದನು.

**ಸರ್ವಾನಾಶ್ಲಿಷ್ಯ ಚ ಪ್ರೇಮ್ಣಾ ಯುಯೋಜ ನೃಪ ಆಶಿಷಃ ।**
**ಕುಲನಾಶಕರಃ ಪಾಪಃ ಶಾಪಯೋಗ್ಯಸ್ತವ ಹ್ಯಹಮ್ ॥ ೨೦೨ ॥**

**ಪದಚ್ಛೇದ :- ಸರ್ವಾನ್, ಆಶ್ಲಿಷ್ಯ, ಚ, ಪ್ರೇಮ್ಣಾ, ಯುಯೋಜ, ನೃಪಃ, ಆಶಿಷಃ, ಕುಲನಾಶಕರಃ, ಪಾಪಃ, ಶಾಪಯೋಗ್ಯಃ, ತವ, ಅಹಂ ॥ ೨೦೨ ॥**

**ಅರ್ಥ** :- **ನೃಪಃ** = ಧೃತರಾಷ್ಟ್ರನು **ಸರ್ವಾನ್** = ಎಲ್ಲರನ್ನೂ **ಪ್ರೇಮ್ಣಾ** = ಪ್ರೀತಿಯಿಂದ **ಆಶ್ಲಿಷ್ಯ** = ಆಲಿಂಗಿಸಿ **ಚ** = ಮತ್ತು **ಆಶಿಷಃ** = ಆಶೀರ್ವಾದವನ್ನು **ಯುಯೋಜ** = ಮಾಡಿದನು **ಕುಲನಾಶಕರಃ** = ಕುಲದ ನಾಶವನ್ನುಂಟು ಮಾಡುವ **ಪಾಪಃ** = ಪಾಪಿಯಾದ **ಅಹಂ** = ನಾನು **ತವ** = ನಿನಗೆ **ಶಾಪಯೋಗ್ಯಃ** = ಶಾಪಕ್ಕೆ ಅರ್ಹನಾಗಿದ್ದೇನೆ.

**ತಾತ್ಪರ್ಯ** :- ಧೃತರಾಷ್ಟ್ರನು ಎಲ್ಲ ತಮ್ಮಂದಿರು ಮೊದಲಾದವರನ್ನು ಆಲಿಂಗಿಸಿ. ಅವರಿಗೆ ಆಶೀರ್ವಾದವನ್ನು ಮಾಡಿದನು. ಆಗ ಧರ್ಮರಾಜನು ''ನಾನು ಕುಲವನ್ನೆ ನಾಶಮಾಡಿದವನಾಗಿದ್ದೇನೆ ಪಾಪಿಯಾಗಿದ್ದೇನೆ. ನಿನಗೆ ನಾನು ಶಪಿಸಲು ಯೋಗ್ಯನೂ ಆಗಿದ್ದೇನೆ.

**ಇತ್ಯುಕ್ತ್ವೈವ ಪ್ರಣಮತೋ ಗಾಂಧಾರೀ ಸುಪದಾಂಗುಲೀಃ ।**
**ದದರ್ಶ ಧರ್ಮರಾಜಸ್ಯ ಪಟ್ಟಾಂತೇನ ಪ್ರಕೋಪಿತಾ ।**
**ತಸ್ಯಾಃ ಕ್ರೋಧಾಗ್ನಿನಿರ್ದಗ್ಧನಖಃ ಸ ಕುನಖೋಽಭವತ್ ॥ ೨೦೩ ॥**

ಪದಚ್ಛೇದ :- **ಇತಿ, ಉಕ್ತ್ವಾ, ಏವ, ಪ್ರಣಮತಃ, ಗಾಂಧಾರೀ, ಸುಪದಾಂಗುಲೀಃ, ದದರ್ಶ, ಧರ್ಮರಾಜಸ್ಯ, ಪಟಾಂತೇನ, ಪ್ರಕೋಪಿತಾ, ತಸ್ಯಾಃ, ಕ್ರೋಧಾಗ್ನಿ ನಿರ್ದಗ್ಧನಖಃ, ಸಃ, ಕುನಖಃ, ಅಭವತ್ ॥ ೨೦೩ ॥**

**ಅರ್ಥ** :- **ಇತಿ** = ಹೀಗೆಂದು **ಉಕ್ತ್ವಾ ಏವ** = ಹೇಳಲ್ಪಟ್ಟವಳೇ ಆದ **ಗಾಂಧಾರೀ** = ಗಾಂಧಾರಿಯು **ಪ್ರಕೋಪಿತಾ (ಸತೀ)** = ಬಹಳ ಕೊಪಗೊಂಡವಳಾಗಿ **ಪ್ರಣಮತಃ** = ನಮಸ್ಕರಿಸುತ್ತಿದ್ದ **ಧರ್ಮರಾಜಸ್ಯ** = ಧರ್ಮರಾಜನ **ಸುಪದಾಂಗುಲೀಃ** = ಚೆಂದವಾದ ಪಾದದ ಬೆರಳುಗಳನ್ನು **ದದರ್ಶ** = ಕಂಡಳು **ತಸ್ಯಾಃ** = ಅವಳ **ಕ್ರೋಧಾಗ್ನಿನಿರ್ದಗ್ಧನಖಃ** = ಕೋಪವೆಂಬ ಅಗ್ನಿಯಿಂದ ಸುಡಲ್ಪಟ್ಟ ಉಗುರುಗಳುಳ್ಳ **ಸಃ** = ಆ ಧರ್ಮರಾಜನು **ಕುನಖಃ** = ಹಾಳುಗುರಿನವನು **ಅಭವತ್** = ಆದನು.

**ತಾತ್ಪರ್ಯ** :- ಧರ್ಮರಾಜನು ಹೀಗೆ ಹೇಳುತ್ತಾ ಗಾಂಧಾರಿಯನ್ನೂ ನಮಿಸಿದನು. ಅವಳು ನಮಿಸುತ್ತಿರುವ ಆ ಧರ್ಮರಾಜನ ಸುಂದರವಾದ ಪಾದದ ಬೆರಳುಗಳನ್ನು ಕಣ್ಣಿಗೆ ಕಟ್ಟಿದ್ದ ಬಟ್ಟೆಯ ತುದಿಯಿಂದ ಬಹಳ

ಕೋಪದಿಂದ ನೋಡಿದಳು. ಅವಳ ಕೊಪವೆಂಬ ಅಗ್ನಿಯಿಂದ ಸುಟ್ಟುಹೋದ ಉಗುರುಳ್ಳ ಆ ಧರ್ಮರಾಜನು ಕುನಖ (ಹಾಳುಗುರಿನವನು) ಆದನು.

**ವಂದಮಾನಂ ಪುನರ್ಭೀಮಮಾಹ ಸಾ ಕ್ರೋಧವಿಹ್ವಲಾ ।**
**ಅಧರ್ಮತಃ ಕಥಂ ಭೀಮ ಸುತಂ ಮೇ ತ್ವಂ ನಿಜಘ್ನಿವಾನ್ ॥ ೨೦೪ ॥**

ಪದಚ್ಛೇದ :- ವಂದಮಾನಂ, ಪುನಃ, ಭೀಮಂ, ಆಹ, ಸಾ, ಕ್ರೊಧವಿಹ್ವಲಾ, ಅಧರ್ಮಕಃ, ಕಥಂ, ಭೀಮ, ಸುತಂ, ಮೇ, ತ್ವಂ, ನಿಜಘ್ನವಾನ್ ॥ ೨೦೪ ॥

**ಅರ್ಥ** :- **ಸಾ** = ಆ ಗಾಂಧಾರಿಯು **ಪುನಃ** = ಮತ್ತೆ **ವಂದಮಾನಂ** = ನಮಸ್ಕರಿಸುತ್ತಿರುವ **ಭೀಮಂ** = ಭೀಮನನ್ನು ಕುರಿತು **ಕ್ರೊಧವಿಹ್ವಲಾ(ಸತೀ)** = ಕೊಪದಿಂದ ನೊಂದವಳಾಗಿ **ಆಹ** = ಹೇಳಿದಳು **ಭೀಮ** = ಎಲೈ ಭೀಮನೇ **ತ್ವಂ** = ನೀನು **ಮೇ** = ನನ್ನ **ಸುತಂ** = ಮಗನನ್ನು **ಅಧರ್ಮತಃ** = ಅಧರ್ಮದಿಂದ **ಕಥಂ** = ಹೇಗೆ ತಾನೇ **ನಿಜಘ್ನಿವಾನ್** = ಸಂಹರಿಸಿದೆ.

**ತಾತ್ಪರ್ಯ** :- ಭೀಮ ಗಾಂಧಾರಿಯನ್ನು ನಮಸ್ಕರಿಸುವಾಗ ಅವಳು ಅವನನ್ನು ಕುರಿತು ಕೊಪದಿಂದ ನೊಂದವಳಾಗಿ ನುಡಿದಳು. ''ನೀನು ನನ್ನ ಮಗನನ್ನು ಹೇಗೆ ತಾನೆ ಅಧರ್ಮದಿಂದ ಕೊಂದೆ'' ಎಂದು.

**ಇತ್ಯುಕ್ತೋಽಸ್ಯಾಃ ಶಮಯಿತುಂ ಕ್ರೋಧಮಗ್ರೇ ವೃಕೋದರಃ ।**
**ಪ್ರಾಹ ನ ಪ್ರಾಣಸಂದೇಹೇ ಪಾಪಂ ಸ್ಯಾತ್ ಪಾಪಿನೋ ವಧೇ ॥ ೨೦೫ ॥**

ಪದಚ್ಛೇದ :- ಇತಿ, ಉಕ್ತೇ, ಅಸ್ಯಾಃ, ಶಮಯಿತುಂ, ಕ್ರೊಧಂ, ಅಗ್ರೇ, ವೃಕೋದರಃ, ಪ್ರಾಹ, ನ, ಪ್ರಾಣಸಂದೇಹೇ, ಪಾಪಂ, ಸ್ಯಾತ್, ಪಾಪಿನಃ, ವಧೇ ॥ ೨೦೫ ॥

**ಅರ್ಥ** :- **ಇತಿ** = ಹೀಗೆ **ಉಕ್ತೇ** = ಗಾಂಧಾರಿಯು ಹೇಳಿದಾಗ **ಅಗ್ರೇ** = ಮೊದಲಿಗೆ **ಅಸ್ಯಾಃ** = ಇವಳ **ಕ್ರೊಧಂ** = ಕೊಪವನ್ನು **ಶಮಯಿತುಂ** = ಶಮನಮಾಡಲು **ವೃಕೋದರಃ** = ಭೀಮಸೇನನು **ಪ್ರಾಹ** = ಹೇಳಿದನು **ಪ್ರಾಣಸಂದೇಹೇ** = ಪ್ರಾಣಕ್ಕೆ ಆಪತ್ತು ಒದಗಿದಾಗ **ಪಾಪಿನಃ** = ದುಷ್ಟರ **ವಧೆ (ಸತಿ)** = ಸಂಹಾರ ಮಾಡಿದಾಗ **ಪಾಪಂ** = ಪಾಪಂ **ನ ಸ್ಯಾತ್** = ಆಗಲಾರದು.

**ತಾತ್ಪರ್ಯ** :- ಗಾಂಧಾರಿಯು ಹೀಗೆ ಹೇಳಿದಾಗ ಭೀಮನು ಅವಳ ಕೋಪವನ್ನು ಕಡಿಮೆ ಮಾಡಿಲು ಮೊದಲಿಗೆ ಹೀಗೆ ಹೇಳಿದ. ''ಪ್ರಾಣಾಪಾಯದ ಸಂದೇಹ ಒದಗಿದಾಗ ಪಾಪಿಗಳನ್ನು ಅಧರ್ಮದಿಂದ ಕೊಂದರೂ ಅದು ಪಾಪವಾಗುವುದೇ ಇಲ್ಲ.

**ವಿವರಣೆ** :- ಭೀಮನಿಗೆ ಯಾವುದೇ ತರಹದ ಪ್ರಾಣಭೀತಿ ಇಲ್ಲವೇ ಇಲ್ಲ. ಅವನು ಸ್ವಯಂ ಪ್ರಾಣನೇ ಆದರು ಲೋಕದ ನಿಯಮಾನುಸಾರ ವಾಗಿಯೇ ತಾನು ನಡೆದಿದ್ದೇನೆ ಎಂದು ತಿಳಿಸುವುದು ಅವನ ತಾತ್ಪರ್ಯ.

**ಇತ್ಯುಕ್ತ್ವಾ ತಾಂ ಪುನಃ ಪ್ರಾಹ ಪ್ರತಿಜ್ಞಾಹಾನಿಮಂತರಾ ।**
**ನ ಮೇಽಸ್ತಿ ಪ್ರಾಣಸಂದೇಹ ಇತಿ ಜಾನನ್ ವೃಕೋದರಃ ॥ ೨೦೬ ॥**

**ಪದಚ್ಛೇದ** :- **ಇತಿ, ಉಕ್ತ್ವಾ, ತಾಂ, ಪುನಃ, ಪ್ರಾಹ, ಪ್ರತಿಜ್ಞಾಹಾನಿ, ಅಂತರಾ, ನ, ಮೇ, ಅಸ್ತಿ, ಪ್ರಾಣಸಂದೇಹಃ, ಇತಿ, ಜಾನನ್, ವೃಕೋದರಃ ॥ ೨೦೭ ॥**

**ಅರ್ಥ** :- **ಇತಿ** = ಹೀಗೆ **ಉಕ್ತ್ವಾ** = ತಿಳಿಸಿ **ಮೇ** = ನನಗೆ **ಪ್ರತಿಜ್ಞಾ ಹಾನಿಂ** = ಮಾಡಿದ ಪ್ರತಿಜ್ಞಾಹಾನಿಯನ್ನು **ಅಂತರಾ** = ಹೊರತುಪಡಿಸಿ **ಪ್ರಾಣಸಂದೇಹಃ** = ಪ್ರಾಣದ ಆಪತ್ತು **ನಾಸ್ತಿ** = ಇಲ್ಲವಷ್ಟೆ **ಇತಿ** = ಹೀಗೆ **ಜಾನನ್** = ಬಲ್ಲ **ವೃಕೋದರಃ** = ಭೀಮನು **ತಾಂ** = ಆ ಗಾಂಧಾರಿಗೆ **ಪುನಃ** = ಮತ್ತೇ **ಪ್ರಾಹ** = ನುಡಿದನು.

**ತಾತ್ಪರ್ಯ** :- ಮೊದಲಿಗೆ ಇಷ್ಟು ಹೇಳಿ ತನಗೆ ಪ್ರತಿಜ್ಞೆಯ ಭಂಗಕ್ಕಿಂತ ಹೊರತಾದ ಪ್ರಾಣಾಪಾಯದ ಸಂದೇಹ ಇಲ್ಲವೆಂದು ತಿಳಿದ ಭೀಮನು ಅವಳನ್ನು ಕುರಿತು ಪುನಃ ಹೇಳುತ್ತಾನೆ.

**ಯಥಾಪ್ರತಿಜ್ಞಂ ಭ್ರಾತೃವ್ಯಾನ್ ರಣೇ ಮಮ ನಿಜಘ್ನುಷಃ ।**
**ಕ್ವಾಧರ್ಮಃ ಕ್ಷತ್ರಜಾತೇಸ್ತು ತದ್ದಾನೌ ಜೀವಿತಂ ನಹಿ ॥ ೨೦೭ ॥**

**ಪದಚ್ಛೇದ** :- **ಯಥಾಪ್ರತಿಜ್ಞಂ, ಭ್ರಾತವ್ಯಾನ್, ರಣೆ, ಮಮ, ನಿಜಘ್ನುಷಃ, ಕ್ವ, ಅಧರ್ಮಃ, ಕ್ಷತ್ರಜಾತೇ, ತು, ತದ್ದಾನೌ, ಜೀವನಂ, ನ, ಹಿ ॥ ೨೦೭ ॥**

**ಅರ್ಥ** :- **ರಣೇ** = ರಣರಂಗದಲ್ಲಿ **ಯಥಾಪ್ರತಿಜ್ಞಂ** = ಮಾಡಿದ ಪ್ರತಿಜ್ಞೆಗೆ ಅನುಗುಣವಾಗಿ **ಭ್ರಾತವ್ಯಾನ್** = ಸೊದರರನ್ನು **ನಿಜಘ್ನುಷಃ** =

ಕೊಂದಿರುವ **ಕ್ಷತ್ರಜಾತೇಃ** = ಕ್ಷಾತ್ರಕುಲಪ್ರಸೂತನಾದ **ಮೇ** = ನನಗಾದರೋ **ಅಧಮಃ** = ಅಧರ್ಮವು **ಕ್ವ** = ಎಲ್ಲಿ ಬಂದೀತು **ತದ್ಧಾಸೌ** = ಆ ಪ್ರತಿಜ್ಞೆಯೇ ಭಗ್ನವಾದರೆ **ಜೀವನಂ** = ಬದುಕು **ನ ಹಿ** = ಇಲ್ಲವಷ್ಟೆ.

**ತಾತ್ಪರ್ಯ** :- ಕ್ಷತ್ರಿಯ ಜಾತಿಯವನಾದ ನಾನು ಯುದ್ಧದಲ್ಲಿ ಎಲ್ಲ ನನ್ನ ತಮ್ಮಂದಿರು ಮೊದಲಾದ ಶತ್ರುಗಳನ್ನು ನನ್ನ ಪ್ರತಿಜ್ಞೆಗೆ ಅನುಗುಣವಾಗಿ ಕೊಂದಿದ್ದೇನೆ. ಹೀಗಿರಲು ನನಗಿದು ಅಧರ್ಮ ಹೇಗೆ ತಾನೆ ಆದೀತು. ಕ್ಷತ್ರಿಯನಾದವನಿಗೆ ಮಾಡಿದ ಪ್ರತಿಜ್ಞೆಯ ಪಾಲನೆಯೇ ಪರಮಧರ್ಮ. ಅದೇ ಭಗ್ನವಾದರೆ ಅವನಿಗೆ ಜೀವನವೇ ಇಲ್ಲವಾದೀತು.

**ಪಾಪಾ ನ ಶುದ್ಧಧರ್ಮೇಣ ಹಂತವ್ಯಾ ಇತಿ ಚ ಶ್ರುತಿಃ ।**
**ಅನ್ಯವತ್ ಪಾಪಹನನಂ ಪಾಪಾಯೇತ್ಯಾಹ ಹಿ ಶ್ರುತಿಃ ।**
**ಅತೋಽಸುರಾನ್ ನೈಕೃತಿಕಾನ್ ನಿಕೃತ್ಯಾ ಘ್ನಂತಿ ದೇವತಾಃ ॥ ೨೦೮ ॥**

ಪದಚ್ಛೇದ :- ಪಾಪಾಃ, ನ, ಶುದ್ಧಧರ್ಮೇಣ, ಹಂತವ್ಯಾ, ಇತಿ, ಚ, ಶ್ರುತಿಃ, ಅನ್ಯವತ್, ಪಾಪಹನನಂ, ಪಾಪಾಯ, ಇತಿ, ಆಹ, ಹಿ, ಶ್ರುತಿಃ, ಅತಃ, ಅಸುರಾನ್, ನೈಕೃತಿಕಾನ್, ನಿಕೃತ್ಯಾ, ಘ್ನಂತಿ, ದೇವತಾಃ ॥ ೨೦೮ ॥

**ಅರ್ಥ** :- **ಪಾಪಾಃ** = ಪಾಪಿಗಳು **ಶುದ್ಧಧರ್ಮೇಣ** = ಶುದ್ಧಧರ್ಮದಿಂದ **ನ ಹಂತವ್ಯಾಃ** = ಕೊಲ್ಲಲ್ಪಡಬಾರದು **ಇತಿ** = ಹೀಗೆ **ಚ** = ಮತ್ತು **ಅನ್ಯವತ್** = ಸಜ್ಜನರಂತೆ ಧರ್ಮದಿಂದ **ಪಾಪಹನನಂ** = ಪಾಪಿಗಳನ್ನು ಕೊಲ್ಲುವುದು **ಪಾಪಾಯ** = ಪಾಪಕರ **ಇತಿ ಚ** = ಹೀಗೆಂದೂ **ಶ್ರುತಿಃ** = ಶ್ರುತಿಯು **ಆಹ ಹಿ** = ಹೇಳಿದೆಯಷ್ಟೆ **ಅತಃ** = ಆದ್ದರಿಂದಲೇ **ದೇವತಾಃ** = ದೇವತೆಗಳು **ನೈಕೃತಿಕಾನ್** = ವಂಚಕರಾದ **ಅಸುರಾನ್** = ದೈತ್ಯರನ್ನು **ನಿಕೃತ್ಯಾ** = ಮೋಸದಿಂದಲೇ **ಘ್ನಂತಿ** = ಸಂಹರಿಸುತ್ತಾರೆ.

**ತಾತ್ಪರ್ಯ** :- ಪಾಪಿಗಳನ್ನು ಪರಿಶುದ್ಧ ಧರ್ಮದಿಂದ ಕೊಲ್ಲಬಾರದೆಂದು ಶ್ರುತಿಯೇ ಹೇಳಿದೆ. ಹಾಗೆಯೇ ಬೇರೆಯವರನ್ನು ಧರ್ಮದಿಂದ ಕೊಲ್ಲುವಂತೆ ಪಾಪಿಗಳನ್ನೂ ಧರ್ಮದಿಂದ ಸಂಹರಿಸಿದರೆ ಅದು ಪಾಪಕ್ಕೆ ಕಾರಣವಾಗುತ್ತದೆ ಎಂದೂ ಶ್ರುತಿಯೇ ತಿಳಿಸಿದೆ. ಆದ್ದರಿಂದಲೇ ದೇವತೆಗಳು ವಂಚಕರಾದ ಅಸುರರನ್ನು ವಂಚನೆಯಿಂದಲೇ ಸಂಹರಿಸುತ್ತಾರೆ.

**'ನಿಕೃತ್ಯಾ ನಿಕೃತಿಂ ಹನ್ಯಾನ್ನಿಕೃತ್ಯಾ ನೈವ ಧಾರ್ಮಿಕಮ್' ।**
**ಇತಿ ಶ್ರುತಿರ್ಹಿ ಪರಮಾ ಪಠ್ಯತೇ ಪೈಂಗಿಭಿಃ ಸದಾ ॥ ೨೦೯ ॥**

**ಪದಚ್ಛೇದ :- ನಿಕೃತ್ಯಾ, ನಿಕೃತಿಂ, ಹನ್ಯಾತ್, ನಿಕೃತ್ಯಾ, ನ, ಏವ, ಧಾರ್ಮಿಕಾನ್, ಇತಿ, ಶ್ರುತಿಃ, ಹಿ, ಪರಮಾ, ಪಠ್ಯತೇ, ಪೈಂಗಿಭಿಃ, ಸದಾ ॥ ೨೦೯ ॥**

**ಅರ್ಥ** :- **ನಿಕೃತಿಂ** = ವಂಚಕರನ್ನು **ನಿಕೃತ್ಯಾ** = ವಂಚನೆಯಿಂದಲೇ **ಹನ್ಯಾತ್** = ಕೊಲ್ಲಬೇಕು **ಧಾರ್ಮಿಕಾನ್** = ಧರ್ಮನಿಷ್ಠರನ್ನು **ನಿಕೃತ್ಯಾ** = ವಂಚನೆಯಿಂದ **ನೈವ ಹನ್ಯಾತ್** = ಕೊಲ್ಲಲೇಬಾರದು **ಇತಿ** = ಹಿಗೆ **ಪೈಂಗಿಭಿಃ** = ಪೈಂಗಿ ಶಾಖೆಯವರಿಂದ **ಪರಮಾ** = ಉತ್ತಮವಾದ **ಶ್ರುತಿಃ** = ಶ್ರುತಿಯು **ಸದಾ** = ನಿರಂತವಾಗಿ **ಪಠ್ಯತೇ ಹಿ** = ಪಠಿಸಲ್ಪಡುತ್ತದೆಯಷ್ಟೇ.

**ತಾತ್ಪರ್ಯ** :- ಮೊಸಗಾರರನ್ನು ಮೋಸದಿಂದಲೇ ಕೊಲ್ಲಬೇಕು. ಧಾರ್ಮಿಕರನ್ನು ಮಾತ್ರ ವಂಚನೆಯಿಂದ ಕೊಲ್ಲಬಾರದು ಎಂಬ ಶ್ರುತಿಯನ್ನು ಪೈಂಗಿ ಶಾಖೆಯವರು ಸತತವಾಗಿ ಪಠಿಸುತ್ತಾರೆ.

**ಇತ್ಯುಕ್ತಾ ತಂ ಪುನಃ ಪ್ರಾಹ ಕಥಂ ತೇ ನರಶೋಣಿತಮ್ ।**
**ಪೀತಂ ನರೇಣೈವ ಸತಾ ನ ಪೀತಮಿತಿ ಸೋಽಬ್ರವೀತ್ ॥ ೨೧೦ ॥**

**ಪದಚ್ಛೇದ :- ಇತಿ, ಉಕ್ತಾ, ತಂ, ಪುನಃ, ಪ್ರಾಹ, ಕಥಂ, ತೇ, ನರಶೋಣಿತಂ, ಪೀತಂ, ನರೇಣ, ಏವ, ಸತಾ, ನ, ಪೀತರ, ಇತಿ, ಸಃ, ಅಬ್ರವೀತ್ ॥ ೨೧೦ ॥**

**ಅರ್ಥ** :- **ಇತಿ** = ಹೀಗೆಂದು **ಉಕ್ತಾ** = ಹೇಳಲ್ಪಟ್ಟ ಗಾಂಧಾರಿಯು **ತಂ** = ಆ ಭೀಮನನ್ನು **ಪುನಃ** = ಮತ್ತೊಮ್ಮೆ **ಪ್ರಾಹ** = ಹೇಳಿದಳು **ನರೇಣೈವ ಸತಾ** = ಮನುಷ್ಯನೇ ಆದ **ತೇ** = ನಿನ್ನಿಂದ **ನರಶೋಣಿತಂ** = ಮನುಷ್ಯರ ರಕ್ತವು **ಕಥಂ** = ಹೀಗೆ **ಪೀತಂ** = ಕುಡಿಯಲ್ಪಟ್ಟಿತು **ಸಃ** = ಆ ಭೀಮನು (**ಮಯಾ** = ನನ್ನಿಂದ) **ನ ಪೀತಂ** = ಕುಡಿಯಲ್ಪಟ್ಟಿಲ್ಲ **ಇತಿ** = ಹೀಗೆ **ಅಬ್ರವೀತ್** = ಹೇಳಿದನು.

**ತಾತ್ಪರ್ಯ** :- ಭೀಮನು ಹೀಗೆ ಹೇಳಿದಾಗ ಗಾಂಧಾರಿಯು ಮತ್ತೇ ಹೇಳಿದಳು. ನೀನು ಒಬ್ಬ ಮನುಷ್ಯನಾಗಿರುವಾಗ ಇನ್ನೊಬ್ಬ ಮನುಷ್ಯನ

ರಕ್ತವನ್ನು ಹೇಗೆ ತಾನೆ ಕುಡಿದಿದ್ದೀ ಎಂದು ಆಗ ಭೀಮನೆಂದ ''ನಾನು ಕುಡಿದಿಲ್ಲ'' ಎಂದು.

**ದಂತಾಂತರಂ ನ ಮೇ ಪ್ರಾಪ ಶೋಣಿತಂ ತತ್ ಸುತಸ್ಯ ತೇ ।**
**ಪ್ರತಿಜ್ಞಾಪಾಲನಾಯಾಪಿ ಪ್ರತಿಕರ್ತುಂ ಚ ತತ್ ಕೃತಮ್ ॥ ೨೧೧ ॥**

ಪದಚ್ಛೇದ :- ದಂತಾಂತರಂ, ನ, ಮೇ, ಪ್ರಾಪ, ಶೋಣಿತಂ, ತತ್, ಸುತಸ್ಯ, ತೇ, ಪ್ರತಿಜ್ಞಾಪಾಲನಾಯಾ, ಅಪಿ, ಪ್ರತಿಕರ್ತುಂ, ಚ, ತತ್ಂ, ಕೃತ್ ॥ ೨೧೧ ॥

**ಅರ್ಥ** :- **ತೇ** = ನಿನ್ನ **ಸುತಸ್ಯ** = ಮಗನ **ತತ್ಶೋಣಿತಂ** = ಆ ರಕ್ತವು **ಮೇ** = ನನ್ನ **ದಂತಾಂತರಂ** = ಹಲ್ಲೀನ ಒಳಗೂ **ನ ಪ್ರಾಪ** = ಹೊಗಲಿಲ್ಲ **ಪ್ರತಿಜ್ಞಾಪಾಲನಾಯ** = ನನ್ನ ಪ್ರತಿಜ್ಞೆಯ ಪಾಲನೆಗಾಗಿ **ಚ** = ಮತ್ತು **ಪ್ರತಿಕರ್ತುಂ ಅಪಿ** = ಪ್ರತಿಕಾರಕ್ಕಾಗಿಯೂ **ತತ್** = ಆ ರಕ್ತ ಕುಡಿಯುವಿಕೆಯು **ಕೃತಂ** = ಮಾಡಲ್ಪಟ್ಟಿತು.

**ತಾತ್ಪರ್ಯ** :- ನಿನ್ನ ಮಗನ ರಕ್ತವು ನನ್ನ ಹಲ್ಲುಗಳಿಂದ ಒಳಗೆ ಹೋಗಲೇ ಇಲ್ಲ. ನನ್ನ ಪ್ರತಿಜ್ಞಾಪಾಲನೆಗಾಗಿ ಮತ್ತು ಅವನು ಮಾಡಿದ ಕುಕೃತ್ಯಗಳಿಗೆ ಶಿಕ್ಷೆ ಕೊಡುವುದಕ್ಕಾಗಿ ನಾನು ರಕ್ತವನ್ನು ಕುಡಿದಂತೆ ತೋರಿಸಿದೆ.

**ಭೀಷಣಾಯ ಚ ಶತ್ರೂಣಾಂ ಪೀತವಚ್ಚ ಪ್ರದರ್ಶಿತಮ್ ।**
**ವೇದದೃಷ್ಟಶ್ಚ ಧರ್ಮೋऽಯಮತಿಪಾಪಜನಂ ಪ್ರತಿ ॥ ೨೧೨ ॥**

ಪದಚ್ಛೇದ :- ಭೀಷಣಾಯ, ಚ, ಶತ್ರೂಣಾಂ, ಪೀತವತ್, ಚ, ಪ್ರದರ್ಶಿತಂ, ವೇದದೃಷ್ಟಃ, ಚ, ಧರ್ತುಃ, ಅಯಂ, ಇತಿ, ಪಾಪಜನಂ, ಪ್ರತಿ ॥ ೨೧೨ ॥

**ಅರ್ಥ** :- **ಶತ್ರೂಣಾಂ** = ಶತ್ರುಗಳನ್ನು **ಭೀಷಣಾಯ ಚ** = ಹೆದರಿಸುವುದಕ್ಕಾಗಿಯೂ (**ಮಯಾ** = ನನ್ನಿಂದ) **ಪೀತವತ್ ಚ** = ಕುಡಿದಂತೆ **ಪ್ರದರ್ಶಿತಂ** = ತೋರಿಸಲ್ಪಟ್ಟಿತು **ಪಾಪಜನಂ ಪ್ರತಿ** = ಪಾಪಿಗಳಾದ ಜನರಿಗೆ **ಅಯಂ** = ಇದು **ವೇದದೃಷ್ಟಃ** = ವೇದಗಳಲ್ಲಿ ತಿಳಿಸಿರುವ **ಧರ್ಮಃ** = ಧರ್ಮವೂ ಆಗಿದೆ.

**ತಾತ್ಪರ್ಯ** :- ನನ್ನ ಎಲ್ಲ ಶತ್ರುಗಳನ್ನು ಹೆದರಿಸುವುದಕ್ಕಾಗಿಯೂ ನಾನು ಕುಡಿದಂತೆ ತೋರಿಸಿದೆ. ಮಹಾ ಮಹಾಪಾಪಗಳನ್ನು ಮಾಡಿದವರಿಗೆ ಇಂತಹ ಶಿಕ್ಷೆಯನ್ನು ಕೊಡುವ ಧರ್ಮವೇ ಎಂದು ವೇದಗಳಲ್ಲಿ ಹೇಳಿದೆ.

**ಇತ್ಯುಕ್ತೋವಾಚ ನೈವಾಂಧದ್ವಯಸ್ಯಾಸ್ಯ ವೃಕೋದರ ।**
**ಘ್ನತಾ ಪುತ್ರಶತಂ ಯಷ್ಟಿಮಾತ್ರಂ ಚೋರ್ವರಿತಂ ತ್ವಯಾ ।। ೨೧೩ ।।**

**ಪದಚ್ಛೇದ** :- ಇತಿ, ಉಕ್ತಾ, ಉವಾಚ, ನ, ಏವ, ಅಂಧದ್ವಯಸ್ಯ, ಅಸ್ಯ, ವೃಕೋದರ, ಘ್ನತಾ, ಪುತ್ರಶತಂ, ಯಷ್ಟಿಮಾತ್ರಂ, ಚ, ಉರ್ವರಿತಂ, ತ್ವಯಾ ।। ೨೧೩ ।।

**ಅರ್ಥ** :- **ಇತಿ** = ಹೀಗೆ **ಉಕ್ತಾ** = ಹೇಳಲ್ಪಟ್ಟ ಗಾಂಧಾರಿಯು **ಉವಾಚ** = ಹೇಳಿದಳು **ವೃಕೋದರ** = ಭೀಮನೇ **ಪುತ್ರಶತಂ** = ನನ್ನ ನೂರು ಮಕ್ಕಳನ್ನು **ಘ್ನತಾ** = ಕೊಂದ **ತ್ವಯಾ** = ನಿನ್ನಿಂದ **ಅಸ್ಯ** = ಈ **ಅಂಧ್ವದ್ವಯಸ್ಯ** = ಕುರುಡು ದಂಪತಿಗಳಿಗೆ **ಯಷ್ಟಿಮಾತ್ರಂ ಚ** = ಊರುಗೋಲನಾದರೂ **ನೈವ ಉರ್ವರಿತಂ** = ಉಳಿಸಲ್ಪಡಲಿಲ್ಲ.

**ತಾತ್ಪರ್ಯ** :- ಭೀಮ ಹೀಗೆ ನುಡಿದಾಗ ಗಾಂಧಾರಿಯು ಹೇಳಿದಳು. ''ಭೀಮನೇ ನೀನು ನನ್ನ ನೂರು ಮಕ್ಕಳನ್ನೂ ಸಂಹರಿಸಿ. ಈ ಕುರುಡು ದಂಪತಿಗಳಿಗೆ ಜೀವನ ನಡೆಸಲು ಒಂದು ಊರುಗೋಲನ್ನೂ ಉಳಿಸಲಿಲ್ಲ.

**ವಿವರಣೆ** :- ಗಂಡ-ಹೆಂಡತಿ ಇಬ್ಬರು ಕುರುಡರಾದಾಗ ನಡೆದಾಡುವುದೇ ಮೊದಲಾದ ವ್ಯವಹಾರಗಳಿಗೆ ಒಂದು ಕೋಲಾದರೂ ಹೇಗೆ ಅವಶ್ಯಕವೋ ಹಾಗೆಯೇ ನಮಗೆ ೧೦೦ ಮಕ್ಕಳಲ್ಲಿ ಒಬ್ಬನನ್ನಾದರೂ ಆಶ್ರಯಕ್ಕಾಗಿ ಉಳಿಸಲಿಲ್ಲ ಎಂದರ್ಥ.

**ತಾಮಾಹ ಭೀಮಃ ಪಾಪಿಷ್ಠಾ ವಧಯೋಗ್ಯಾಪರಾಧಿನಃ ।**
**ಸರ್ವೇ ಹತಾ ಇತಿ ಪುನಃ ಸಾಽಽಹ ಯೇನಾಕೃತಸ್ತವ ।। ೨೧೪ ।।**

**ಅಪರಾಧಃ ಸ ಏಕೋಽಪಿ ಕಿಂ ನಾಸ್ತೀತ್ಯವದತ್ ಸ ತಾಮ್ ।**
**ಸರ್ವೈಃ ಸಮೇತ್ಯೈಃ ಕೃಷ್ಣಸ್ಯ ಬಂಧನಾಯ ವಿನಿಶ್ಚಿತಮ್ ।। ೨೧೫ ।।**

**ಪದಚ್ಛೇದ** :- ತಾಂ, ಆಹ, ಭೀಮಃ, ಪಾಪಿಷ್ಠಾಃ, ವಧಯೋಗ್ಯಾಪರಾಧಾನಃ, ಸರ್ವೇ, ಹತಃ, ಇತಿ, ಪುನಃ, ಸಾ, ಆಹ, ಯೇನ, ಅಕೃತಃ, ತವ, ಅಪರಾಧಃ, ಸಃ, ಏಕಃ, ಅಪಿ,

**ಕರಿ, ನ, ಅಸ್ತಿ, ಇತಿ, ಅವದತ್, ಸಃ, ತಾಂ, ಸರ್ವೈಃ, ಸಮೇತ್ಯೈಃ, ಕೃಷ್ಣಸ್ಯ, ಬಂಧನಾಯ, ವಿನಿಶ್ಚಿತಂ ॥ ೨೧೪, ೨೧೫ ॥**

**ಅರ್ಥ** :- **ತಾಂ** = ಆ ಗಾಂಧಾರಿಯನ್ನು ಕುರಿತು **ಭೀಮಃ** = ಭೀಮನು **ವಧಯೋಗ್ಯಾಪರಾಧಿನಃ** = ಕೊಲ್ಲಲು ಯೋಗ್ಯವಾದ ಅಪರಾಧವನ್ನು ಮಾಡಿದ **ಪಾಪಿಷ್ಠಾಃ** = ಪಾಪಿಗಳಾದ **ಸರ್ವೇ** = ಅವರೆಲ್ಲರೂ **ಹತಾಃ** = ಕೊಲ್ಲಲ್ಪಟ್ಟರು **ಇತಿ** = ಹಿಗೆ **ಯೇನ** = ಯಾವ ನನ್ನ ಮಗನಿಂದ **ಅಪರಾಧಃ** = ಅಪರಾಧವು **ಅಕೃತಃ** = ಮಾಡಲ್ಪಟ್ಟಿಲ್ಲವೊ, **ಸಃ** = ಅಂತಹ **ಏಕೋಪಿ** = ಒಬ್ಬನಾದರೂ **ಕಿಂ ನಾಸ್ತಿ** = ಇರಲಿಲ್ಲವೇನು ? **ಇತಿ** = ಹೀಗೆ **ಆಹ** = ಹೇಳಿದಳು **ಸಃ** = ಭೀಮನಾದರೂ **ತಾಂ** = ಅವಳನ್ನು ಕುರಿತು **ಅವದತ್** = ತಿಳಿಸಿದನು. **ಸಮೇತ್ಯೈಃ** = ಒಟ್ಟುಗೂಡಿದ **ಸರ್ವೈಃ** = ಅವರೆಲ್ಲರಿಂದಲೂ **ಕೃಷ್ಣಸ್ಯ** = ಶ್ರೀಕೃಷ್ಣನ **ಬಂಧನಾಯ** = ಕಟ್ಟಿಹಾಕಲು **ವಿನಿಶ್ಚಿತಂ** = ನಿರ್ಧರಿಸಲ್ಪಟ್ಟಿತು.

**ತಾತ್ಪರ್ಯ** :- ಭೀಮನು ಗಾಂಧಾರಿಗೆ ಹೇಳುತ್ತಾನೆ. ನೂರು ಮಕ್ಕಳೂ ಪಾಪಿಷ್ಠರೇ. ವಧೆ ಎಂಬ ಶಿಕ್ಷೆಗೆ ಅರ್ಹವಾದ ಅಪರಾಧಗಳನ್ನು ಮಾಡಿದ್ದರು. ಅಂತಹ ಎಲ್ಲರನ್ನೂ ನಾನು ಕೊಂದೆ. ಆಗ ಗಾಂಧಾರಿಯು ನುಡಿದಳು. ನಿನಗೆ ಅಪರಾಧ ಮಾಡದೇ ಇದ್ದವನು ಒಬ್ಬನೂ ಇರಲಿಲ್ಲವೆ ? ಭೀಮನು ಉತ್ತರಿಸುತ್ತಾನೆ. ''ಅವರೆಲ್ಲರೂ ಒಟ್ಟುಗೂಡಿ ಶ್ರೀಕೃಷ್ಣನನ್ನು ಸೆರೆ ಹಿಡಿಯಲು ನಿಶ್ಚಯಿಸಿದ್ದರು.''

**ವಿವರಣೆ** :- ಗಾಂಧಾರಿಯು ಕೇಳಿದ್ದು ''ನಿನಗೆ ಅಪರಾಧ ಮಾಡದವನು ಒಬ್ಬನೂ ಇರಲಿಲ್ಲವೇ ?'' ಎಂದು ಆದರೆ ಭೀಮನು ಕೃಷ್ಣನಿಗೆ ಅವರು ಮಾಡಿದ ಅಪರಾಧವನ್ನು ಹೇಳುತ್ತಿದ್ದಾನೆ. ಇದರಿಂದ ಭೀಮನು ತನಗೆ ಮಾತ್ರ ಅಪರಾಧ ಮಾಡಿದ್ದರು ಎಂಬ ಕಾರಣಕ್ಕೆ ನಾನು ಅವರನ್ನು ಕೊಲ್ಲಲಿಲ್ಲ. ಅವರು ಪರಮಾತ್ಮನಿಗೆ ಅಪರಾಧ ಮಾಡಿದ್ದರು ಎಂದು ಭೀಮನು ತಾನು ಹರಿಭಕ್ತಿಯು ಇಲ್ಲಿ ಗಮನಾರ್ಹ.

**ಅನ್ಯಾನಿ ಚ ಸುಪಾಪಾನಿ ಕೃತಾನ್ಯತ್ರ ಪುರಾಽಪಿಚ ।**
**ವಾಸುದೇವಂ ಸಭಾಸಂಸ್ಥಂ ಬ್ರುವಾಣಂ ಧರ್ಮಸಂಹಿತಮ್ ॥ ೨೧೬ ॥**

**ಪುನಃಪುನರವಜ್ಞಾಯ ಯಾಂತಂ ದುರ್ಯೋಧನಂ ಬಹಿಃ ।**
**ಸರ್ವೇऽನ್ವಗಚ್ಛನ್ನಿತ್ಯಾದೀನ್ಯಭಿಪ್ರೇತ್ಯ ವೃಕೋದರಃ ॥ ೨೧೭ ॥**

ಪದಚ್ಛೇದ :– ಅನ್ಯಾನಿ, ಚ, ಸುಪಾಪಾನಿ, ಕೃತಾನಿ, ಅತ್ರ, ಪುರಾ, ಅಪಿ, ಚ, ವಾಸುದೇವಂ, ಸಭಾಸಂಸ್ಥಂ, ಬ್ರುವಾಣಂ, ಧರ್ಮಸಂಹಿತಂ, ಪುನಃ, ಪುನಃ, ಅವಜ್ಞಾಯ, ಯಾಂತಂ, ದುರ್ಯೋಧನಂ, ಬಹಿಃ, ಸರ್ವೇ, ಅನ್ವಗಚ್ಛನ್, ಇತ್ಯಾದೀನ್, ಅಭಿಪ್ರೇತ್ಯ, ವೃಕೋದರಃ ॥ ೨೧೬, ೨೧೭ ॥

**ಅರ್ಥ** :- **ಪುರಾऽಪಿ** = ಈ ಹಿಂದೆಯೂ **ಅತ್ರ** = ಈ ಕೃಷ್ಣನ ವಿಷಯದಲ್ಲಿ **ಅನ್ಯಾನಿ ಚ** = ಬೇರೆ ಬೇರೆ **ಸುಪಾಪಾನಿ** = ಮಹಾಪಾಪಗಳು **ಕೃತಾನಿ** = ಮಾಡಲ್ಪಟ್ಟಿವೆ **ಚ** = ಮತ್ತು **ಧರ್ಮಸಂಹಿತಂ** = ಧರ್ಮಶಾಸ್ತ್ರ ಪ್ರಮೆಯಗಳನ್ನು **ಬ್ರುವಾಣಂ** = ಹೇಳುತ್ತಿರುವ **ಸಭಾಸಂಸ್ಥಂ** = ಸಭೆಯಲ್ಲಿ ಕುಳಿತಿದ್ದ **ವಾಸುದೇವಂ** = ಶ್ರೀಕೃಷ್ಣನನ್ನು **ಪುನಃ ಪುನಃ** = ಮತ್ತೆ ಮತ್ತೆ **ಅವಜ್ಞಾಯ** = ಅವಮಾನಿಸಿ **ಬಹಿಃ** = ಹೊರಗೆ **ಯಾಂತಂ** = ಹೊರಟ **ದುರ್ಯೋಧನಂ** = ದುರ್ಯೋಧನನನ್ನು **ಸರ್ವೇ** = ಅವರೆಲ್ಲರೂ **ಅನ್ವಗಚ್ಛನ್** = ಹಿಂಬಾಲಿಸಿದರು **ಇತ್ಯಾದೀನ್** = ಇವೇ ಮೊದಲಾದವುಗಳನ್ನು **ಅಭೀಪ್ರೇತ್ಯ** = ಮನಸ್ಸಿನಲ್ಲಿಟ್ಟುಕೊಂಡು **ವೃಕೋದರಃ** = ಭೀಮನು (**ಆಹ** = ಹೇಳಿದನು).

**ತಾತ್ಪರ್ಯ** :- ''ಇವರೆಲ್ಲರೂ ಬಾಲ್ಯದಿಂದಲೂ ಇನ್ನೂ ಬೇರೆ ಅಪರಾಧಗಳನ್ನು ಮಾಡಿಯೇ ಇದ್ದಾರೆ. ಶ್ರೀಕೃಷ್ಣನು ಸಭೆಯಲಿ ಕುಳಿತು ಧರ್ಮಶಾಸ್ತ್ರವನ್ನು ಉಪದೇಶಿಸುತ್ತಿರುವಾಗ ದುರ್ಯೋಧನನು ಕೃಷ್ಣನನ್ನು ಬಾರಿಬಾರಿಗೆ ಅವಮಾನಿಸಿ ಅಲ್ಲಿಂದ ಹೊರಹೊರಟ. ಆಗ ಅವರೆಲ್ಲರೂ ಆ ದುರ್ಯೋಧನನನ್ನು ಹಿಂಬಾಲಿಸಿದರು.'' ಇವೇ ಮೊದಲಾದ ಮನದಾಳದ ಮಾತುಗಳನ್ನು ಭೀಮನು ನುಡಿದನು.

**ನೈಕೋऽಪ್ಯನಪರಾಧೀ ಮೇ ಸ್ವಯಂ ತಾನನುಶಿಕ್ಷಿತುಮ್ ।**
**ಅಸಮರ್ಥಾ ಮಯಿ ಕ್ರೋಧಂ ಕಿಂ ಕರೋಷಿ ನಿರರ್ಥಕಮ್ ॥ ೨೧೮ ॥**

ಪದಚ್ಛೇದ :– ನ, ಏಕಃ, ಅಪಿ, ಅನಪರಾಧೀ, ಮೇ, ಸ್ವಯಂ, ತಾನ್, ಅನುಶಿಕ್ಷಿತುಂ, ಅಸಮರ್ಥಾ, ಮಯಿ, ಕ್ರೋಧಂ, ಕಿ, ಕರೋಷಿ, ನಿರರ್ಥಕಂ ॥ ೨೧೮ ॥

**ಅರ್ಥ** :- **ಮೇ** = ನನಗೆ **ಏಕಃ ಅಪಿ** = ಒಬ್ಬನೂ **ಅನಪರಾಧೀ** = ಅಪರಾಧ ಮಾಡದವನು **ನ** = ಇಲ್ಲ **ಸ್ವಯಂ** = ಸ್ವತಃ **ತಾನ್** = ಅವರನ್ನು **ಅನುಶಿಕ್ಷಿತುಂ** = ತಿದ್ದಿ ಹೇಳಲು **ಅಸಮರ್ಥಾ** = ಸಮರ್ಥಳಾಗದ ನೀನು **ಮಯಿ** = ನನ್ನಲ್ಲಿ **ನಿರರ್ಥಕಂ** = ಅರ್ಥವಿಲ್ಲದ **ಕ್ರೋಧಂ** = ಕೋಪವನ್ನು **ಕಿಂ** = ಯಾವ ಕಾರಣಕ್ಕಾಗಿ **ಕರೋಷಿ** = ಮಾಡುತ್ತೀ ?

**ತಾತ್ಪರ್ಯ** :- ಅಷ್ಟು ಮಂದಿಯಲ್ಲಿ ಒಬ್ಬನೂ ನನಗೆ ಅಪರಾಧಿಯಲ್ಲ ದವನು ಇಲ್ಲವೇ ಇಲ್ಲ. ಸ್ವತಃ ನೀನೇ ಅವರಿಗೆ ತಿಳಿಹೇಳಲು ಅಶಕ್ತಳಾಗಿರುವಾಗ ನನ್ನಲ್ಲಿ ನಿರರ್ಥಕವಾಗಿ ಏಕೆ ಕೊಪಿಸಿಕೊಳ್ಳುತ್ತಿದ್ದೀ.

**ಇತ್ಯುಕ್ತ್ವಾ ಸಾಽಭವತ್ ತೂಷ್ಣೀಂ ಕ್ರಮಾತ್ ಸರ್ವೈಶ್ಚ ಪಾಂಡವೈಃ ।**
**ವಂದಿತಾ ವ್ಯಾಸವಾಕ್ಯಾಚ್ಚ ಕಿಂಚಿಚ್ಛಾಂತಾಽಥ ಸಾಽಭವತ್ ॥ ೨೧೯ ॥**

ಪದಚ್ಛೇದ :- **ಇತಿ, ಉಕ್ತ್ವಾ, ಸಾ, ಅಭವತ್, ತೂಷ್ಣಿಂ, ಕ್ರಮಾತ್, ಸರ್ವೈಃ, ಚ, ಪಾಂಡವೈಃ, ವಂದಿತಾ, ವ್ಯಾಸವಾಕ್ಯಾತ್, ಚ, ಕಿಂಚಿತ್, ಶಾಂತಾ, ಚ, ಸಾ, ಅಭವತ್** ॥ ೨೧೯ ॥

**ಅರ್ಥ** :- **ಇತಿ** = ಹೀಗೆ **ಉಕ್ತ್ವಾ** = ಹೇಳಲ್ಪಟ್ಟ **ಸಾ** = ಆ ಗಾಂಧಾರಿಯು **ತೂಷ್ಣೀಂ** = ಮಾತಿಲ್ಲದಂತೆ **ಅಭವತ್** = ಆದಳು **ಕ್ರಮಾತ್** = ಕ್ರಮವಾಗಿ **ಸರ್ವೈಃ** = ಎಲ್ಲ **ಪಾಂಡವೈಃ** = ಪಾಂಡವರಿಂದ **ವಂದಿತಾ** = ನಮಸ್ಕರಿಸಲ್ಪಟ್ಟ **ಸಾ** = ಅವಳು **ವ್ಯಾಸವಾಕ್ಯಾತ ಚ** = ವೇದವ್ಯಾಸರ ಮಾತಿನಿಂದಲೂ **ಕಿಂಚಿತ್** = ಸ್ವಲ್ಪ **ಶಾಂತಾ ಚ** = ಶಾಂತಳೂ **ಅಭವತ್** = ಆದಳು.

**ತಾತ್ಪರ್ಯ** :- ಭೀಮನು ಹೀಗೆ ಹೇಳಿದಾಗ ಗಾಂಧಾರಿಯು ಸುಮ್ಮನಾದಳು. ನಂತರ ಎಲ್ಲ ಪಾಂಡವರು ಕ್ರಮವಾಗಿ ಬಂದು ಅವಳಿಗೆ ನಮಸ್ಕರಿಸಿದರು. ಮತ್ತು ವೇದವ್ಯಾಸರು ಆಡಿದ ಮಾತಿನಿಂದ ಸ್ವಲ್ಪ ಶಾಂತಳೂ ಆದಳು.

**ತಸ್ಯಾ ಯಾಶ್ಚ ಸ್ನುಷಾಃ ಸರ್ವಾಸ್ತಾಭಿಃ ಸಹ ಪುರಸ್ಕೃತಾಮ್ ।**
**ಕೃತ್ವಾ ತಂ ಧೃತರಾಷ್ಟ್ರಂ ಚ ವಿದುರಾದೀಂಶ್ಚ ಸರ್ವಶಃ ॥ ೨೨೦ ॥**

**ಪಾಂಡವಾಃ ಪ್ರಧನಸ್ಥಾನಂ ಸಭಾರ್ಯಾಃ ಪೃಥಯಾ ಸಹ ।**
**ಕೃಷ್ಣಾಭ್ಯಾಂ ಚ ಯಯುಸ್ತತ್ರ ಗಾಂಧಾರ್ಯಾಸ್ತಪಸೋ ಬಲಮ್ ॥೨೨೧॥**

**ಜಾನನ್ ಪಾಂಡವರಕ್ಷಾರ್ಥಂ ಚಿಕೀರ್ಷುಸ್ತತ್ತಪೋವ್ಯಯಮ್ ।**
**ವೇದೇಶ್ವರೋ ದದೌ ದಿವ್ಯಂ ಚಕ್ಷುಃ ಸತ್ಯವತೀಸುತಃ ॥ ೨೨೨ ॥**

ಪದಚ್ಛೇದ :- ತಸ್ಯಾಃ, ಯಾಃ, ಚ, ಸ್ನುಷಾಃ, ಸರ್ವಾಃ, ತಾಭಿಃ, ಸಹ, ಪುರಸ್ಕೃತಾಂ, ಕೃತ್ವಾ, ತಂ, ಧೃತರಾಷ್ಟ್ರಂ, ಚ, ವಿದುರಾದೀನ್, ಚ, ಸರ್ವಶಃ, ಪಾಂಡವಾಃ, ಪ್ರಧನಸ್ಥಾನಂ, ಸಭಾರ್ಯಾಃ, ಪೃಥಯಾ, ಸಹ, ಕೃಷ್ಣಾಭ್ಯಾಂ, ಚ, ಯಯುಃ, ತತ್ರ,, ಗಾಂಧಾರ್ಯಾಃ, ತಪಸಃ, ಬಲಂ, ಜಾನನ್, ಪಾಂಡವರತ್ಸಾರ್ಥಂ, ಚಿಕೀರ್ಷುಃ, ತತ್ತಪೊವ್ಯಯಂ, ವೇದಶ್ವರೋ, ದದೌ, ದಿವ್ಯಂ, ಚಕ್ಷುಃ, ಸತ್ಯವತೀ-ಸುತಃ ॥ ೨೨೦-೨೨೨ ॥

**ಅರ್ಥ** :- **ಯಾಃ** = ಯಾವ **ತಸ್ಯಾಃ** = ಅವಳ **ಸರ್ವಾಃ** = ಎಲ್ಲಾ **ಸ್ನುಷಾಃ** = ಸೊಸೆಯರಿದ್ದರೋ **ತಾಭಿಃ ಸಹ** = ಅವರಿಂದ **ಪುರಸ್ಕೃತಾಂ** = ಮುಂದೆ ಮಾಡಿಕೊಂಡಿದ್ದ ಗಾಂಧಿರಿಯನ್ನು **ಚ** = ಮತ್ತು **ತಂ** = ಆ **ಧೃತರಾಷ್ಟ್ರಂ** = ಧೃತರಾಷ್ಟ್ರನನ್ನು **ಚ** = ಹಾಗೆಯೇ **ವಿದುರಾದೀನ್** = ವಿದುರ ಮೊದಲಾದವರನ್ನು **ಸರ್ವಶಃ ಕೃತ್ವಾ** = ಸುತ್ತುವರೆಯಲ್ಪಟ್ಟು **ಪಾಂಡವಾಃ** = ಪಾಂಡವರು **ಸಭಾಯಾಃ** = ಸಪತ್ನಿಕರಾಗಿ **ಪೃಥಯಾ ಸಹ** = ಕುಂತಿಯಿಂದ ಕೂಡಿಕೊಂಡು **ಚ** = ಮತ್ತು **ಕೃಷ್ಣಾಭ್ಯಾಂ** = ಕೃಷ್ಣ, ವೇದವ್ಯಾಸರಿಂದ **ಸಹ** = ಕೂಡಿಕೊಂಡು **ಪ್ರಧನಸ್ಥಾನಂ** = ಯುದ್ಧ ನಡೆದ ಸ್ಥಳವನ್ನು ಕುರಿತು **ಯಯುಃ** = ಹೊರಟರು **ತತ್ರ** = ಅಲ್ಲಿ **ಗಾಂಧಾರ್ಯಾಃ** = ಗಾಂಧಾರಿಯ **ತಪಸಃ** = ತಪಸ್ಸಿನ **ಬಲಂ** = ಶಕ್ತಿಯನ್ನು **ಜಾನನ್** = ತಿಳಿದ **ಸತ್ಯವತೀಸುತಃ** = ಸತ್ಯವತಿಯ ಮಗನಾದ **ವೇದೇಶ್ವರಃ** = ವೇದವ್ಯಾಸರು **ಪಾಂಡವ ರಕ್ಷಾರ್ಥಂ** = ಪಾಂಡವರ ರಕ್ಷಣೆಗಾಗಿ **ತತ್ತಪೋವ್ಯಯಂ** = **ತತ** = ಆ ಗಾಂದಾರಿಯ **ತಪಃ** = ತಪಸ್ಸಿನ **ವ್ಯಯಂ** = ಹ್ರಾಸವನ್ನು **ಚಿಕೀರ್ಷುಃ** = ಮಾಡಬಯಸಿದವರಾಗಿ (**ತಸ್ಯೈ** = ಆ ಗಾಂಧಾರಿಗೆ) **ದಿವ್ಯಂ ಚಕ್ಷುಃ** = ದಿವ್ಯದೃಷ್ಟಿಯನ್ನು **ದದೌ** = ನೀಡಿದರು.

**ತಾತ್ಪರ್ಯ** :- ತನ್ನ ಸೊಸೆಯರನ್ನು ಮುಂದೆ ಮಾಡಿಕೊಂಡ ಗಾಂಧಾರಿಯನ್ನು ಧೃತರಾಷ್ಟ್ರನನ್ನು ವಿದುರಾದಿಗಳನ್ನು ಕೂಡಿಕೊಂಡು

ಪಾಂಡವರು ಸಪತ್ನೀಕರಾಗಿ ಕುಂತಿಯೊಡನೆ, ವೇದವ್ಯಾಸರು ಮತ್ತು ಕೃಷ್ಣರೊಂದಿಗೆ ಯುದ್ಧಭೂಮಿಗೆ ಹೊರಟರು. ಅಲ್ಲಿ ಗಾಂಧಾರಿಯ ತಪಸ್ಸಿನ ಪ್ರಭಾವವನ್ನರಿತ ವೇದವ್ಯಾಸರು ಪಾಂಡವರ ರಕ್ಷಣೆಗಾಗಿ ಅವಳ ತಪಸ್ಸನ್ನು ಕಡಿಮೆ ಮಾಡಲು ಬಯಸಿ ಅವಳಿಗೆ ದಿವ್ಯದೃಷ್ಟಿಯನ್ನು ನೀಡಿದರು.

**ವಿವರಣೆ** :- ಗಾಂಧಾರಿಯು ಕಣ್ಣಿಗೆ ಬಟ್ಟೆ ಕಟ್ಟಿದ್ದರಿಂದ ಪ್ರತ್ಯಕ್ಷ ಏನನ್ನೂ ನೋಡಲಾರಳು. ನೋಡಿದ್ದರೂ ಶವಗಳನ್ನು ನಾಯಿ, ನರಿ, ಹದ್ದುಗಳು ತಿಂದಕಾರಣ ಸ್ಪಷ್ಟವಾಗಿ ಗುರುತು ಹಿಡಿಯುತ್ತಿರಲಿಲ್ಲ. ಅವಳು ತನ್ನ ಮಕ್ಕಳನ್ನು ಸ್ಪಷ್ಟವಾಗಿ ಕಾಣದಿದ್ದರೆ ಬಹಳ ದುಃಖಿತಳಾಗದೆ ಕೃಷ್ಣನಿಗೆ ಶಾಪವನ್ನೆ ಕೊಡುತ್ತಿರಲಿಲ್ಲ. ಶಾಪಕೊಡದ ಹೊರತು ಅವಳ ತಪಸ್ಸು ನಾಶವಾಗದು. ಆಗ ಪಾಂಡವರಿಗೆ ಅಪಾಯವಾದೀತು. ಆದ್ದರಿಂದಲೇ ವೇದವ್ಯಾಸರು ಅವಳಿಗೆ ದಿವ್ಯದೃಷ್ಟಿಯನ್ನಿತ್ತರು.

**ತೇನ ದೃಷ್ಟ್ವಾ ಪ್ರೇತದೇಹಾನ್ ಸರ್ವಾಂಸ್ತತ್ರ ಸಮಾಕುಲಾ ।**
**ಶಶಾಪ ಯಾದವೇಶಾನಂ ತ್ವಯಾಽಸ್ಮತ್ಕುಲನಾಶನಮ್ ।**
**ಯತ್ ಕೃತಂ ತತ್ ತವ ಕುಲಂ ಗಚ್ಚತ್ವನ್ಯೋಽನ್ಯತಃ ಕ್ಷಯಮ್ ॥ ೨೨೩ ॥**

**ಪದಚ್ಛೇದ** :- ತೇನ, ದೃಷ್ಟ್ವಾ, ಪ್ರೇತದೇಹಾನ್, ಸರ್ವಾನ್, ತತ್ರ, ಸಮಾಕುಲಾ, ಶಶಾಪ, ಯಾದವೇಶಾನಂ, ತ್ವಯಾ, ಅಸ್ಮತ್ಕುಲನಾಶನಂ, ಯತ್, ಕೃತಂ, ತತ್, ತವ, ಕುಲಂ, ಗಚ್ಛತು, ಅನ್ಯೋನ್ಯತಃ, ಕ್ಷಯಾ ॥ ೨೨೩ ॥

**ಅರ್ಥ** :- **ತತ್ರ** = ಆ ರಣರಂಗದಲ್ಲಿ **ತೇನ** = ಆ ದಿವ್ಯದೃಷ್ಟಿಯಿಂದ **ಸರ್ವಾನ್** = ಎಲ್ಲಾ **ಪ್ರೇತದೇಹಾನ್** = ಶವಗಳನ್ನು **ದೃಷ್ಟ್ವಾ** = ನೋಡಿ **ಸಮಾಕುಲಾ** = ದುಃಖಿತಳಾಗಿ **ಯಾದವೇಶಾನಂ** = ಕೃಷ್ಣನನ್ನು **ಶಶಾಪ** = ಶಪಿಸಿದಳು **ಯತ್** = ಯಾವ ಕಾರಣದಿಂದ **ತ್ವಯಾ** = ನಿನ್ನಿಂದ **ಅಸ್ಮತ್ಕುಲನಾಶನಂ** = ನಮ್ಮ ಕುಲದ ನಾಶವು **ಕೃತಂ** = ಮಾಡಲ್ಪಟ್ಟಿತೋ **ತತ್** = ಆ ಕಾರಣದಿಂದ **ತವ** = ನಿನ್ನ **ಕುಲಂ** = ಕುಲವೂ **ಅನ್ಯೋನ್ಯತಃ** = ಪರಸ್ಪರವಾಗಿ **ಕ್ಷಯಂ** = ನಾಶವನ್ನು **ಗಚ್ಛತು** = ಹೊಂದಲಿ.

**ತಾತ್ಪರ್ಯ** :- ವೇದವ್ಯಾಸರು ನೀಡಿದ ದಿವ್ಯದೃಷ್ಟಿಯಿಂದ ಗಾಂಧಾರಿಯು ಆ ಯುದ್ಧಭೂಮಿಯಲ್ಲಿ ಅಲ್ಲಲ್ಲಿ ಬಿದ್ದಿದ್ದ ಶವಗಳನ್ನು ನೋಡಿ

ಶೊಕದಲ್ಲಿ ಮುಳುಗಿದವಳಾಗಿ ಕೃಷ್ಣನಿಗೆ ಶಾಪ ನೀಡಿದಳು. ''ಯಾವ ಕಾರಣದಿಂದ ನೀನು ನಮ್ಮ ಕುಲದವರು ಪರಸ್ಪರ ಹೊಡೆದಾಡಿಕೊಂಡು ನಾಶವಾಗುವ ಹಾಗೆ ಮಾಡಿದೆಯೋ ಅಂತೆಯೇ ನಿನ್ನ ಕುಲವೂ ಸಹ ಪರಸ್ಪರ ಕಾದಾಡಿಕೊಂಡು ನಾಶಹೊಂದಲಿ''.

**ಇತ್ಯುಕ್ತೋ ಭಗವಾನ್ ಕೃಷ್ಣಃ ಸ್ವಚಿಕೀರ್ಷಿತಮೇವ ತತ್ ।**
**ಅಸ್ತ್ವೇವಮಿತ್ಯಾಹ ವಿಭುರೀಶ್ವರೋಽಪ್ಯನ್ಯಥಾ ಕೃತೌ ॥ ೨೨೪ ॥**

**ಪದಚ್ಛೇದ :– ಇತಿ, ಉಕ್ತಃ, ಭಗವಾನ್, ಕೃಷ್ಣಃ, ಸ್ವಚಿಕೀರ್ಷಿತಂ, ಏವ, ತತ್, ಅಸ್ತು, ಏವಂ, ಇತಿ, ಆಹ, ವಿಭುಃ, ಈಶ್ವರಃ, ಅಪಿ, ಅನ್ಯಥಾ, ಕೃತೌ ॥ ೨೨೪ ॥**

**ಅರ್ಥ** :- **ಇತಿ** = ಹೀಗೆ **ಉಕ್ತಃ** = ಹೇಳಲ್ಪಟ್ಟ **ಭಗವಾನ್** = ಸರ್ವೋತ್ತಮನಾದ **ಕೃಷ್ಣಃ** = ಕೃಷ್ಣನು **ಅನ್ಯಥಾ** = ಅವಳು ಹೇಳಿದ್ದಕ್ಕಿಂತ ಬೇರೆಯಾಗಿ **ಕೃತಾ** = ಮಾಡಲು **ಈಶ್ವರಃ ಅಪಿ** = ಸಮರ್ಥನಾದರೂ **ವಿಭುಃ** = ಸರ್ವಶಕ್ತನಾದ ಅವನು **ತತ್** = ನೀನು ಹೇಳಿದ್ದು **ಸ್ವಚಿಕೀರ್ಷಿತಂ ಏವ** = ನನ್ನ ಸಂಕಲ್ಪವೇ ಆಗಿದೆ **ಏವಂ ಅಸ್ತು** = ಹಾಗೆಯೇ ಆಗಲಿ **ಇತಿ** = ಹೀಗೆ **ಆಹ** = ಹೇಳಿದನು.

**ತಾತ್ಪರ್ಯ** :- ಸರ್ವೋತ್ತಮನಾದ ಶ್ರೀಕೃಷ್ಣನು ಅವಳು ಹೇಳಿದ್ದಕ್ಕೆ ವಿರುದ್ಧವಾಗಿಯೂ ನಡೆಯಲು ಶಕ್ತನು. ಆದರು ಅವಳು ಕೊಟ್ಟ ಶಾಪವು ತನ್ನ ಸಂಕಲ್ಪವೇ ಆದ್ದರಿಂದ ಅವಳು ಹೇಳಿದ್ದಕ್ಕೆ ''ಹಾಗೆಯೇ ಆಗಲಿ'' ಎಂದನು.

**ತೇನ ತಸ್ಯಾಸ್ತಪೋ ನಷ್ಟಂ ಹೀನಾ ಸಾಽತೋ ಹಿ ಭರ್ತೃತಃ ।**
**ನಾಶಯೇದ್ಧಿ ಸದಾ ವಿಷ್ಣುಃ ಸ್ವಯೋಗ್ಯಾದಧಿಕಾನ್ ಗುಣಾನ್ ॥ ೨೨೫ ॥**

**ಪದಚ್ಛೇದ :– ತೇನ, ತಸ್ಯಾಃ, ತಪಃ, ನಷ್ಟಂ, ಹೀನಾ, ಸಾ, ಅತಃ, ಹಿ, ಭರ್ತೃತಃ, ನಾಶಯಿತ್, ಹಿ, ಸದಾ, ವಿಷ್ಣುಃ, ಸ್ವಯೋಗ್ಯಾತ್, ಅಧಿಕಾನ್, ಗುಣಾನ್ ॥ ೨೨೫ ॥**

**ಅರ್ಥ** :- **ತೇನ** = ಶಾಪ ಕೊಟ್ಟಿದ್ದರಿಂದ **ತಸ್ಯಾಃ** = ಆ ಗಾಂಧಾರಿಯ **ತಪಃ** = ತಪಸ್ಸು **ನಷ್ಟಂ** = ನಷ್ಟವಾಯಿತು **ಅತಃ** = ಆದ್ದರಿಂದಲೇ **ಸಾ** = ಅವಳು **ಭರ್ತೃತಃ** = ಪತಿಗಿಂತ **ಹೀನಾ ಹಿ** = ಕಡಿಮೆ ಪುಣ್ಯವುಳ್ಳವಳಾದಳಷ್ಟೆ

**ವಿಷ್ಣು** = ನಾರಾಯಣನು **ಸ್ವಯೋಗ್ಯಾತ್** = ತನ್ನ ಯೊಗ್ಯತೆಗಿಂತ **ಅಧಿಕಾನ** = ಅಧಿಕವಾದ **ಗುಣಾನ್** = ಗುಣಗಳನ್ನು **ಸದಾ** = ಯಾವಾಗಲೂ **ನಾಶಯೇತ** = ನಾಶಮಾಡಿಯೇ ಮಾಡುತ್ತಾನೆ.

**ತಾತ್ಪರ್ಯ** :- ಗಾಂಧಾರಿಯು ಶಾಪಕೊಟ್ಟಿದ್ದರಿಂದ ಅವಳ ತಪಸ್ಸು ನಷ್ಟವಾಯಿತು. ಆದ್ದರಿಂದಲೇ ಅವಳು ತನ್ನ ಗಂಡನಾದ ಧೃತರಾಷ್ಟನಿಗಿಂತ ಪುಣ್ಯದಲ್ಲಿ ಹೀನಳಾದಳು. ಪರಮಾತ್ಮನು ಯಾವಾಗಲೂ ತಮ್ಮ ಯೋಗ್ಯತೆ ಗಿಂತಲೂ ಅಧಿಕವಾದ ಗುಣಗಳನ್ನು ನಾಶಮಾಡುವನು. ಆದ್ದರಿಂದ ಗಾಂಧಾರಿ ಯಿಂದ ಶಾಪಕೊಡಿಸಿ ಅವಳ ಪುಣ್ಯವನ್ನು ಹ್ರಾಸಮಾಡಿದ.

**ತತ ಆಶ್ಲಿಷ್ಯ ಭರ್ತೃಣಾಂ ದೇಹಾನ್ ಪ್ರರುದತೀಃ ಸ್ತ್ರಿಯಃ ।**
**ಸರ್ವಾ ದುರ್ಯೋಧನಾದೀನಾಂ ದರ್ಶಯಾಮಾಸ ಕೇಶವಃ ।**
**ಕೃಷ್ಣಾಯೈ ಸಾ ಚ ತಂ ದೇವಮಸ್ತುವತ್ ಪೂರ್ಣಸದ್ಗುಣಮ್ ॥ ೨೨೬ ॥**

ಪದಚ್ಛೇದ :- ತತಃ, ಆಶ್ಲೇಷ್ಯ, ಭರ್ತೃಣಾಂ, ದೇಹಾನ್, ಪ್ರರುದತೀಃ, ಸ್ತ್ರಿಯಃ, ಸರ್ವಾಃ, ದುರ್ಯೋಧನಾದೀನಾಂ, ದರ್ಶಯಾಮಾಸ, ಕೇಶವಃ, ಕೃಷ್ಣಾಯೈ, ಸಾ, ಚ, ತಂ, ದೇವಂ, ಅಸ್ತುವತ್, ಪೂರ್ಣಸದ್ಗುಣಂ ॥ ೨೨೬ ॥

**ಅರ್ಥ** :- **ತತಃ** = ಅನಂತರ **ಕೇಶವಃ** = ಶ್ರೀಕೃಷ್ಣನು **ದುರ್ಯೋಧನಾದೀನಾಂ** = ದುರ್ಯೋಧನನೇ ಮೊದಲಾದ **ಭರ್ತೃಣಾಂ** = ಗಂಡದಿರ **ದೇಹಾನ್** = ಶವಗಳನ್ನು **ಆಶ್ಲಿಷ್ಯ** = ಆಲಿಂಗಿಸಿಕೊಂಡು **ಪ್ರರುದತೀಃ** = ಬಹಳ ಅಳುತ್ತಿರುವ **ಸರ್ವಾ** = ಎಲ್ಲ **ಸ್ತ್ರಿಯಃ** = ಮಡದಿಯರನ್ನು **ಕೃಷ್ಣಾಯೈ** = ದ್ರೌಪದಿಗೆ **ದರ್ಶಯಾಮಾಸ** = ತೋರಿಸಿದನು **ಸಾ ಚ** = ಅವಳಾದರೂ **ಪೂರ್ಣಸದ್ಗುಣಂ** = ಪೂರ್ಣವಾದ ಸದ್ಗುಣಗಳುಳ್ಳ **ತಂ** = ಆ **ದೇವಂ** = ಶ್ರೀಕೃಷ್ಣನನ್ನು **ಅಸ್ತುವತ್** = ಸ್ತೋತ್ರಮಾಡಿದಳು.

**ತಾತ್ಪರ್ಯ** :- ಅನಂತರ ತಮ್ಮ ತಮ್ಮ ಗಂಡಂದಿರ ಶವಗಳನ್ನು ಆಲಿಂಗಿಸಿಕೊಂಡು ಅಳುತ್ತಿರುವ ದುರ್ಯೋಧನಾದಿಗಳ ಹೆಂಡತಿಯರನ್ನು ಕೃಷ್ಣನು ದ್ರೌಪದಿಗೆ ತೋರಿಸಿದನು. ಅವಳಾದರೂ ಆ ಕೃಷ್ಣನನ್ನು ಪೂರ್ಣವಾದ ಗುಣಭರಿತನನ್ನಾಗಿ ಸ್ತೋತ್ರ ಮಾಡಿದಳು.

**ತತೋ ದೇಹಾನ್ ಪ್ರಸಿದ್ಧಾನಾಂ ಪಾರ್ಥಾಃ ಸಮದಹನ್ ಸತಾಮ್ ।**
**ಅನ್ಯೇಷಾಂ ಧೃತರಾಷ್ಟ್ರಾದೀನ್ ಪುರಸ್ಕೃತ್ಯೈವ ಕಾಂಶ್ಚನ ।**
**ಸೂತೈಃ ಪಂಚಭಿರೇವ ಸ್ವೈಃ ಸರಸ್ವತ್ಯಾಂ ಪ್ರಚಿಕ್ಷಿಪುಃ ॥ ೨೨೭ ॥**

ಪದಚ್ಛೇದ :- ತತಃ, ದೇಹಾನ್, ಪ್ರಸಿದ್ಧಾನಾಂ, ಪಾರ್ಥಾಃ, ಸಮದಹನ್, ಸತಾಂ, ಅನ್ಯೆಷಾಂ, ಧೃತರಾಷ್ಟ್ರಾದೀನಾಂ, ಪುರಸ್ಕೃತ್ಯ, ಏವ, ಕಾಂಶ್ಯನ, ಸೂತೈಃ, ಪಂಚಭಿಃ, ಏವ, ಸ್ವೈಃ, ಸರಸ್ವತ್ಯಾಂ, ಪಚಿಕ್ಷಿಪುಃ ॥ ೨೨೭ ॥

**ಅರ್ಥ** :- **ತತಃ** = ಬಳಿಕ **ಪಾರ್ಥಾಃ** = ಪಾಂಡವರು **ಪ್ರಸಿದ್ಧಾನಾಂ** = ಪ್ರಸಿದ್ಧರಾದ **ಸತಾಂ** = ದ್ರೋಣ ಮೊದಲಾದ ಸಜ್ಜನರ **ದೇಹಾನ್** = ದೇಹಗಳನ್ನು **ಸಮದಹನ್** = ಸುಟ್ಟರು **ಅನ್ಯೇಷಾಂ** = ಇನ್ನು ಕೆಲವು ದುಷ್ಟರ **ಕಾಂಶ್ಚನ** = ಕೆಲವು **ದೇಹಾನ್** = ದೇಹಗಳನ್ನು **ಧೃತರಾಷ್ಟ್ರಾಯೇನ್** = ಧೃತರಾಷ್ಟ್ರನೇ ಮೊದಲಾದವರನ್ನು **ಪುರಸ್ಕೃತ್ಯ** = ಮುಂದೆ ಮಾಡಿಕೊಂಡು **ಸ್ವೈಃ** = ತಮ್ಮ **ಪಂಚಭಿಃ** = ಐವರು **ಸೂತೈಃ ಏವ** = ಸೂತರ ಮೂಲಕ **ಸರಸ್ವತ್ಯಾಂ** = ಸರಸ್ವತೀ ನದಿಯಲ್ಲಿ **ಪಚಿಕ್ಷಿಪುಃ** = ಬಿಸಾಡಿಸಿದರು.

**ತಾತ್ಪರ್ಯ** :- ಅನಂತರದಲ್ಲಿ ಪಾಂಡವರು ಯುದ್ಧದಲ್ಲಿ ಮಡಿದವರಲ್ಲಿ ಪ್ರಸಿದ್ಧರಾದ ಸಜ್ಜನರಾದ ದ್ರೋ ಮೊದಲಾದವರ ಶವಗಳನ್ನು ಸುಟ್ಟರು. ಇತರರ ದುರ್ಯೋಧನಾದಿಗಳ ಶವಗಳನ್ನು ಧೃತರಾಷ್ಟ್ರಾದಿಗಳನ್ನು ಮುಂದೆ ಮಾಡಿಕೊಂಡು ತಮ್ಮ ಐದು ಮಂದಿ ಸಾರಥಿಗಳಿಂದ ಸರಸ್ವತೀನದಿಯಲ್ಲಿ ಬಿಸಾಡಿಸಿದರು.

**ಸ್ನೇಹಾನ್ನೃಪೋ ಯಮೌ ಚ ಸ್ವಾನ್ ನಾಽಜೌ ತಸ್ಮಿನ್ ಹ್ಯಯೋಜಯನ್ ।**
**ಶವಾಃ ಪ್ರಾಯೋ ಬಹುತ್ವೇನ ತತ್ರತತ್ರೈವ ಸಂಸ್ಥಿತಾಃ ॥ ೨೨೮ ॥**

ಪದಚ್ಛೇದ :- ಸ್ನೇಹಾತ್, ನೃಪಃ, ಯಮೌ, ಚ, ಸ್ವಾನ್, ಆಜೌ, ತಸ್ಮಿನ್, ನ್ಯಯೋಜಯತ್, ಶವಾಃ, ಪ್ರಾಯಃ, ಬಹುತ್ವೇನ, ತತ್ರ, ತತ್ರ, ಏವ, ಸಂಸ್ಥಿತಾಃ ॥ ೨೨೮ ॥

**ಅರ್ಥ** :- **ಸ್ನೇಹಾತ್** = ಬಂಧು ಸ್ನೇಹದಿಂದಾಗಿ **ನೃಪಃ** = ಧರ್ಮರಾಜನು **ಯಮೌ ಚ** = ನಕುಲ ಸಹದೇವರೂ ಕೂಡ **ಸ್ವಾನ** = ತಮ್ಮ

ಸಾರಥಿಗಳನ್ನು **ಆಜೌ** = ರಣರಂಗದಲ್ಲಿ **ತಸ್ಮಿನ್** = ಆ ಶವಗಳನ್ನು ಎಸೆಯುವ ಕಾರ್ಯದಲ್ಲಿ **ನ್ಯಯೋಜಯನ್** = ನಿಯಮಿಸಿದ್ದರು **ಶವಾಃ** = ಹೆಣಗಳು **ಬಹುತ್ವೇನ** = ಬಹಳ ಇದ್ದದ್ದರಿಂದ **ಪ್ರಾಯಃ** = ಬಹುಶಃ **ತತ್ರ ತತ್ರ ಏವ** = ಅಲ್ಲಲ್ಲೆ **ಸಂಸ್ಥಿತಾಃ** = ಉಳಿದವು.

**ತಾತ್ಪರ್ಯ** :- ಬಾಂಧವ ಸ್ನೇಹದಿಂದ ಬದ್ಧರಾದ ಧರ್ಮರಾಜ, ನಕುಲ, ಸಹದೇವರು ಯುದ್ಧ ಭೂಮಿಯಲ್ಲಿ ಶವಗಳನ್ನು ಎಸೆಯುವ ಕಾರ್ಯಕ್ಕೆ ತಮ್ಮ ಸಾರಥಿಗಳನ್ನು ನಿಯಮಿಸಿದ್ದರು. ಶವಗಳು ಅಸಂಖ್ಯವಾದ್ದರಿಂದ ಬಹುಶಃ ಶವಗಳು ಅಲ್ಲಲ್ಲೆ ಉಳಿದುಬಿಟ್ಟವು.

ಅರ್ಜುನ ತನ್ನ ಸಾರಥಿ ಪೂರುನನ್ನು ರಣರಂಗಕ್ಕೆ ಒಯ್ಯಲಿಲ್ಲ. ಭೀಮನ ಸಾರಥಿ ವಿಶೂಕ ಮಡಿಯಲಿಲ್ಲ. ಉಳಿದವರ ಸಾರಥಿಗಳು ಮಡಿದಿದ್ದರೂ, ತತ್‌ಕ್ಷಣವೇ ಬೇರೆ ಸಾರಥಿಗಳನ್ನು ನೇಮಿಸಿರಬಹುದು. ಆದ್ದರಿಂದ ಐದು ಮಂದಿ ಸಾರಥಿಗಳು ಎಂದು ಹೇಳಿದ್ದು ವಿರುದ್ಧವೇನಲ್ಲ.

**ತತೋ ದದತ್ಸು ಪಾನೀಯಂ ಗಂಗಾಯಾಂ ಸ್ವಜನಸ್ಯ ತು ।**
**ಪೃಥಾ ಕರ್ಣಾಯ ದತ್ತೇತಿ ಪಾರ್ಥಾನಾಹಾಗ್ರಜಂ ಚ ತಮ್ ॥ ೨೨೯ ॥**

**ಪದಚ್ಛೇದ** :- **ತತಃ, ದದತ್ಸು, ಪಾನೀಯಂ, ಗಂಗಾಯಾಂ, ಸ್ವಜನಸ್ಯ, ತು, ಪೃಥಾ, ಕರ್ಣಾಯ, ದತ್ತ, ಇತಿ, ಪಾರ್ಥಾನ್, ಆಹ, ಅಗ್ರಜಂ, ಚ, ತಂ ॥ ೨೨೯ ॥**

**ಅರ್ಥ** :- **ತತಃ** = ಅನಂತರ (**ಪಾಂಡುಷು** = ಪಾಂಡವರು) **ಸ್ವಜನಸ್ಯ** = ತಮ್ಮ ಬಂಧುಜನರಿಗೆ **ಗಂಗಾಯಾಂ** = ಗಂಗೆಯಲ್ಲಿ **ಪಾನೀಯಂ** = ತರ್ಪಣವನ್ನು **ದದತ್ಸು** (**ಸತ್ಸು**) = ನೀಡುತ್ತಿರಲು **ಪೃಥಾ** = ಕುಂತಿಯು **ಕರ್ಣಾಯ** = ಕರ್ಣನಿಗೂ **ದತ್ತ** = ಕೊಡಿರಿ **ಇತಿ** = ಹೀಗೆ **ಆಹ** = ಹೇಳಿದಳು **ಪಾರ್ಥಾನ್** = ಪಾಂಡವರನ್ನು ಕುರಿತು **ತಂ ಚ** = ಆ ಕರ್ಣನನ್ನು **ಅಗ್ರಜಂ** = ಅವರ ಅಣ್ಣನೆಂದೂ **ಆಹ** = ಹೇಳಿದಳು.

**ತಾತ್ಪರ್ಯ** :- ಅನಂತರ ಪಾಂಡವರು ತಮ್ಮ ಬಂಧುಗಳಿಗೆ ಗಂಗಾ ನದಿಯಲ್ಲಿ ತಿಲಾಂಜಲಿಯನ್ನು ಕೊಡುತ್ತಿದ್ದಾಗ ಕುಂತಿಯು ''ಕರ್ಣನಿಗೂ ತರ್ಪಣ ಕೊಡಿರಿ'' ಎಂದು ಹೇಳಿ ಕರ್ಣನು ನಿಮ್ಮ ಅಣ್ಣನೇ ಎಂದು ಪಾಂಡವರಿಗೆ ಹೇಳಿದಳು.

**ತತೋ ಹಾಹೇತಿ ವಿಲಪನ್ ರಾಜಾ ಪರಮದುಃಖಿತಃ ।**
**ಶಶಾಪ ಸರ್ವನಾರೀಣಾಂ ಗುಹ್ಯಂ ಹೃದಿ ನ ತಿಷ್ಠತು ॥ ೨೩೦ ॥**

**ಪದಚ್ಛೇದ :-** ತತಃ, ಹಾ ಹಾ, ಇತಿ, ವಿಲಪನ್, ರಾಜಾ, ಪರಮದುಃಖಿತಃ, ಶಶಾಪ, ಸರ್ವನಾರೀಣಾಂ, ಗುಹ್ಯಂ, ಹೃದಿ, ನ, ತಿಷ್ಠತು ॥ ೨೩೦ ॥

**ಅರ್ಥ :-** **ತತಃ** = ಅದನ್ನು ಕೇಳಿದ **ರಾಜಾ** = ಧರ್ಮರಾಜನು **ಹಾಹಾ ಇತಿ** = ಹಾ! ಹಾ! ಎಂದು **ವಿಲಪನ್** = ಗೋಳಾಡುತ್ತಾ **ಪರಮದುಃಖಿತಃ** = ಅತ್ಯಂತ ದುಃಖಿತನಾಗಿ **ಶಶಾಪ** = ಶಾಪವಿತ್ತನು **ಸರ್ವನಾರೀಣಾಂ** = ಎಲ್ಲಾ ಸ್ತ್ರೀಯರ **ಹೃದಿ** = ಮನಸ್ಸಿನಲ್ಲಿ **ಗುಹ್ಯಂ** = ಗುಟ್ಟು **ನ ತಿಷ್ಠತು** = ಉಳಿಯದಿರಲಿ.

**ತಾತ್ಪರ್ಯ :-** ಆಹ ಅತ್ಯಂತದುಃಖಿತನಾದ ಧರ್ಮರಾಜನು ''ಹಾ! ಹಾ!''' ಎಂದು ಗೋಳಾಡುತ್ತಾ ಲೋಕದ ಎಲ್ಲಾ ಸ್ತ್ರಿಯರಿಗೂ ಶಾಪ ನೀಡಿದ ''ಎಲ್ಲ ಸ್ತ್ರಿಯರ ಹೃದಯದಲ್ಲಿ ಗುಟ್ಟು ನಿಲ್ಲದಿರಲಿ'' ಎಂದು.

**ಹಾ ಮಾತಸ್ತವ ಧೃತ್ಯೈವ ವಯಂ ಸರ್ವೇ ಭೃಶಂ ಹತಾಃ ।**
**ಜ್ಯೇಷ್ಠಂ ಪಿತೃಸಮಂ ಹತ್ವಾ ಪ್ರತಿಪತ್ಸ್ಯಾಮ ಕಾಂ ಗತಿಮ್ ॥ ೨೩೧ ॥**

**ಪದಚ್ಛೇದ :-** ಹಾ, ಮಾತಃ, ತವ, ಧೃತ್ಯಾ, ಏವ, ವಯಂ, ಸರ್ವೇ, ಭೃಶಂ, ಹತೌಃ, ಜ್ಯೇಷ್ಠಂ, ಪಿತೃಸಮಂ, ಹತ್ವಾ, ಪ್ರತಿಪತ್ಯಾಮ, ಕಾಂ, ಗತಿಂ ॥ ೨೩೧ ॥

**ಅರ್ಥ :-** **ಹಾ ಮಾತಃ** = ಹಾ! ತಾಯಿಯೇ! **ವಯಂ** = ನಾವು **ಸರ್ವೇ** = ಎಲ್ಲರೂ **ತವ** = ನಿನ್ನ **ಧೃತ್ಯಾ ಏವ** = ಧೈರ್ಯದಿಂದಲೇ **ಭೃಶಂ** = ಚೆನ್ನಾಗಿ **ಹತಾಃ** = ನಷ್ಟರಾದೆವು **ಪಿತೃಸಮಂ** = ತಂದೆಗೆ ಸಮನಾದ **ಜ್ಯೇಷ್ಠ** = ಅಣ್ಣನನ್ನು **ಹತ್ವಾ** = ಕೊಂದು **ಕಾಂ** = ಯಾವ **ಗತಿಂ** = ಗತಿಯನ್ನು **ಪ್ರತೀಪತ್ಯಾಯ** = ಹೊಂದುದೆವು.

**ತಾತ್ಪರ್ಯ :-** ''ಹಾ! ತಾಯಿಯೇ!'' ನಿನ್ನ ಧೈರ್ಯದಿಂದಲೇ ನಾವೆಲ್ಲರೂ ಹಾಳಾದೆವು. ನಮಗೆಲ್ಲರಿಗೂ ತಂದೆಯ ಸ್ಥಾನದಲ್ಲಿರುವ ಅಣ್ಣನನ್ನು ಕೊಂದು ನಾವು ಯಾವ ಗತಿಯನ್ನು ಹೊಂದುವೆವು.

**ಏವಂ ವದಂತಂ ಕೌಂತೇಯಂ ವಾಸುದೇವಃ ಸನಾರದಃ ।**
**ಶಮಯಾಮಾಸ ಸದ್ವಾಕ್ಯೈರ್ಗುಣಾನ್ ಕರ್ಣಸ್ಯ ಚಾಬ್ರವೀತ್ ॥ ೨೩೨ ॥**

ಪದಚ್ಛೇದ :- ಏವಂ, ವದಂತಂ, ಕೌಂತೇಯಂ, ವಾಸುದೇವಃ, ಸನಾರದಃ, ಶಮಯಾಮಾಸ, ಸದ್ವಾಕ್ಯೈಃ, ಗುಣಾನ್, ಕರ್ಣಸ್ಯ, ಚ, ಅಬ್ರವೀತ್ ॥ ೨೩೨ ॥

**ಅರ್ಥ** :- **ಏವಂ** = ಹೇಗೆ **ವದಂತಂ** = ಹೇಳುತ್ತಿರುವ **ಕೌಂತೇಯಂ** = ಧರ್ಮರಾಜನನ್ನು **ಸನಾರದಃ** = ನಾರದರಿಂದ ಕೂಡಿದ **ವಾಸುದೇವಃ** = ಶ್ರೀಕೃಷ್ಣನು **ಸದ್ವಾಕ್ಯೈಃ** = ಒಳ್ಳೆಯ ಮಾತುಗಳಿಂದ **ಶಮಯಾಮಾಸ** = ಸಮಾಧಾನ ಪಡಿಸಿದನು **ಚ** = ಮತ್ತು **ಕರ್ಣಸ್ಯ** = ಕರ್ಣನ **ಗುಣಾನ್** = ದುರ್ಗುಣಗಳನ್ನು **ಅಬ್ರವೀತ್** = ಹೇಳಿದನು.

**ತಾತ್ಪರ್ಯ** :- ಹೀಗೆ ತನ್ನನ್ನು ತಾನು ನಿಂದಿಸಿಕೊಳ್ಳುತ್ತಿರುವ ಧರ್ಮರಾಜನನ್ನು ನಾರದರೂ ಶ್ರೀಕೃಷ್ಣನೂ ಒಳ್ಳೆಯ ಮಾತುಗಳಿಂದ ಸಮಾಧಾನ ಪಡಿಸಿದರು. ಅಂತೆಯೇ ಕರ್ಣನ ದುರ್ಗುಣಗಳನ್ನೂ ಅವನಿಗೆ ಹೇಳಿದರು.

**ವಿವರಣೆ** :- ''ಪಾಂಡವರೆಲ್ಲರಿಗೂ ನೀನೆ ಹರಿಯನು ಆದ್ದರಿಂದ ನೀನೇ ರಾಜನಾಗು'' ಎಂದಾಗ ಕರ್ಣನು ''ದುರ್ಯೋಧನನಿಗೆ ಪ್ರಾಣವನ್ನೆ ಕೊಡುತ್ತೇನೆ ಅವನ ವಿರುದ್ಧವಂತರ ಪಕ್ಷವನ್ನು ನಾನು ಸೇರಲಾರೆ'' ಎಂದಿದ್ದ ಮತ್ತು ಅವನ ನಾಶಕ್ಕೆ ಬ್ರಾಹ್ಮಣಾದಿಗಳ ಶಾಪ, ಭೀಷ್ಮರನ್ನು ಅವಮಾನಾಗಿದ್ದು ಇವುಗಳೂ ಕಾರಣ ಎಂದು ಅವರು ಹೇಳಿದರು.

**ತತಸ್ತೇ ಪ್ರೇತಕಾರ್ಯಾಣಿ ಚಕ್ರುಃ ಸರ್ವೇಽಪಿ ಸರ್ವಶಃ ।**
**ಸರ್ವೇಷಾಮಾಧಿರಾಜ್ಯೇ ಚ ಸ್ಥಿತೋಽಭೂತ್ ಪಾಂಡವಾಗ್ರಜಃ ॥ ೨೩೩ ॥**

ಪದಚ್ಛೇದ :- ತತಃ, ತೇ, ಪ್ರೇತಕಾರ್ಯಾಣಿ, ಚಕ್ರುಃ, ಸರ್ವೇ, ಅಪಿ, ಸರ್ವಶಃ, ಸರ್ವೇಷಾಂ, ಆಧಿರಾಜ್ಯೇ, ಚ, ಸ್ಥಿತಃ, ಅಭೂತ್, ಪಾಂಡವಾಗ್ರಜಃ ॥ ೨೩೩ ॥

**ಅರ್ಥ** :- **ತತಃ** = ಅನಂತರ **ತೇ** = ಅವರು **ಸರ್ವೇಽಪಿ** = ಎಲ್ಲರೂ **ಸರ್ವಶಃ** = ಎಲ್ಲಾ **ಪ್ರೇತಕಾರ್ಯಾಣಿ** = ಉತ್ತರ ಕ್ರಿಯೆಗಳನ್ನು **ಚಕ್ರುಃ** =

ಮಾಡಿದರು **ಚ** = ಮತ್ತು **ಸರ್ವೇಷಾಂ** = ಎಲ್ಲರ **ಆಧಿರಾಜ್ಯೇ** = ಅಧಿರಾಜನಾಗಿ ಸಿಂಹಾಸನದಲ್ಲಿ **ಪಾಂಡವಾಗ್ರಜಃ** = ಪಾಂಡವರಲ್ಲಿ ಹಿರಿಯನಾದ ಧರ್ಮರಾಜನು **ಸ್ಥಿತಃ** = ಇರುವವನು **ಅಭೂತ್** = ಆದನು.

**ತಾತ್ಪರ್ಯ** :- ಅನಂತರ ಎಲ್ಲರೂ ಎಲ್ಲ ಉತ್ತರಕ್ರಿಯೆಗಳನ್ನು ನೆರವೇರಿಸಿದರು. ಪಾಂಡವರ ಹಿರಿಯಣ್ಣನಾದ ಧರ್ಮರಾಜನು ಎಲ್ಲ ರಾಜರಿಗೂ ಅಧಿರಾಜನಾಗಿ ಸಿಂಹಾಸನದಲ್ಲಿ ವಿರಾಜಿಸಿದನು.

**ಇತಿ ಶ್ರೀಮದಾನಂದತೀರ್ಥಭಗವತ್ಪಾದವಿರಚಿತೇ**

**ಶ್ರೀಮಹಾಭಾರತತಾತ್ಪರ್ಯನಿರ್ಣಯೇ ಪಾಂಡವರಾಜ್ಯಲಾಭೋ ನಾಮ**

**ಅಷ್ಟಾವಿಂಶೋಽಧ್ಯಾಯಃ**

# ಅಧ್ಯಾಯ - 29

ಏಕೋನತ್ರಿಂಶೋಽಧ್ಯಾಯಃ
(ಧರ್ಮರಾಜಸಂದೇಹನಿವೃತ್ತಿಕಥನಮ್)

ಭೀಮ ಯುಧಿಷ್ಠಿರರಿಗೆ ರಾಜ್ಯಾಭಿಷೇಕ

**ಯದೈವ ಕೃಷ್ಣೌ ಸಕಲಾಧಿರಾಜ್ಯೇ**
**ಯುಧಿಷ್ಠಿರಂ ಯೌವರಾಜ್ಯೇ ಚ ಭೀಮಮ್ ।**
**ವಿಪ್ರೈರ್ಯುಕ್ತಾವಭಿಷಿಚ್ಯಾಶಿಷಶ್ಚ**
**ಯುಕ್ತಾ ದತ್ವಾ ಹರ್ಷಯಾಮಾಸತುಸ್ತೌ ॥ ೧ ॥**

**ಯದಾ ಏವ ಕೃಷ್ಣೌ ಸಕಲಾಧಿರಾಜ್ಯೇ ಯುಧಿಷ್ಠಿರಂ ಯೌವರಾಜ್ಯೇ ಚ ಭೀಮಮ್ । ವಿಪ್ರೈಃ ಯುಕ್ತೌ ಅಭಿಷಿಚ್ಯ ಆಶಿಷಃ ಚ ಯುಕ್ತಾಃ ದತ್ವಾ ಹರ್ಷಯಾಮಾಸತುಃ ತೌ ॥ ೧ ॥**

**ಅರ್ಥ :-** **ಯದಾ ಏವ** = ಯಾವಾಗ **ವಿಪ್ರೈಃ** = ಬ್ರಾಹ್ಮಣರಿಂದ **ಯುಕ್ತೌ** = ಕೂಡಿದ **ಕೃಷ್ಣೌ** = ವಾಸಿಷ್ಠಕೃಷ್ಣ ಯಾದವಕೃಷ್ಣರು **ಸಕಲಾಧಿರಾಜ್ಯೇ** = ಚಕ್ರಾಧಿಪತ್ಯದಲ್ಲಿ **ಯುಧಿಷ್ಠಿರಂ** = ಯುಧಿಷ್ಠಿರನನ್ನು, **ಯೌವರಾಜ್ಯೇ** = ಯೌವರಾಜ್ಯದಲ್ಲಿ **ಭೀಮಂ ಚ** = ಭೀಮನನ್ನೂ **ಅಭಿಷಿಚ್ಯ** = ಅಭಿಷೇಕಿಸಿ, **ಚ** = ಮತ್ತು **ಯುಕ್ತಾಃ** = ಯುಕ್ತವಾದ **ಆಶಿಷಃ** = ಆಶೀರ್ವಚನಗಳನ್ನು **ದತ್ವಾ** = ಇತ್ತು **ತೌ** = ಅವರಿಬ್ಬರನ್ನು (ಧರ್ಮರಾಜ–ಭೀಮರನ್ನು) **ಹರ್ಷಯಾಮಾಸತುಃ** = ಆನಂದಪಡಿಸಿದರೋ,

**ತಾತ್ಪರ್ಯ :-** ವಾಸಿಷ್ಠಕೃಷ್ಣ ಮತ್ತು ಯಾದವಕೃಷ್ಣರಾದ ಶ್ರೀಕೃಷ್ಣ ವ್ಯಾಸರು ಚಕ್ರಾಧಿಪತ್ಯದಲ್ಲಿ ಧರ್ಮರಾಜನನ್ನು, ಯೌವರಾಜ್ಯದಲ್ಲಿ ಭೀಮಸೇನನನ್ನು ವಿಪ್ರರೊಂದಿಗೆ ಕೂಡಿದವರಾಗಿ ಪಟ್ಟಾಭಿಷೇಕ ಮಾಡಿದರು ; ಆಶೀರ್ವಚನಗಳನ್ನಿತ್ತು ಆನಂದಪಡಿಸಿದರು.

ತ್ರಿದಂಡಿಯಾಗಿ ಚಾರ್ವಾಕ

**ತದೈವ ಚಾರ್ವಾಕ ಇತಿ ಪ್ರಸಿದ್ಧಂ**
**ರಕ್ಷಸ್ತ್ರಿದಂಡೀ ಯತಿರೇವ ಭೂತ್ವಾ ।**
**ಯುಧಿಷ್ಠಿರಂ ಗರ್ಹಯಾಮಾಸ ವಿಪ್ರಾ-**
**ಸ್ತ್ವಾಂ ಗರ್ಹಯಂತೀತಿ ಸುಪಾಪಶೀಲಃ ॥ ೨ ॥**

ತದಾ ಏವ ಚಾರ್ವಾಕಃ ಇತಿ ಪ್ರಸಿದ್ಧಂ ರಕ್ಷಃ ತ್ರಿದಂಡೀ ಯತಿಃ ಏವ ಭೂತ್ವಾ । ಯುಧಿಷ್ಠಿರಂ ಗರ್ಹಯಾಮಾಸ ವಿಪ್ರಾಃ ತ್ವಾಂ ಗರ್ಹಯಂತಿ ಇತಿ ಸುಪಾಪಶೀಲಃ ॥ ೨ ॥

**ಅರ್ಥ** :- **ತದಾ ಏವ** = ಆಗಲೇ **ಚಾರ್ವಾಕಃ ಇತಿ** = ಚಾರ್ವಾಕನೆಂದು **ಪ್ರಸಿದ್ಧಂ** = ಪ್ರಸಿದ್ಧನಾದ **ಸುಪಾಪಶೀಲಃ** = ಅತ್ಯಂತ ಪಾಪಸ್ವಭಾವದ **ರಕ್ಷಃ ಏವ** = ರಾಕ್ಷಸನೇ **ತ್ರಿದಂಡೀ ಯತಿಃ** = ತ್ರಿದಂಡಿಯತಿಯು **ಭೂತ್ವಾ** = ಆಗಿ **ವಿಪ್ರಾಃ** = ವಿಪ್ರರು **ತ್ವಾಂ** = ನಿನ್ನನ್ನು **ಗರ್ಹಯಂತಿ** = ನಿಂದಿಸುತ್ತಿರುವರು **ಇತಿ** = ಎಂದು **ಯುಧಿಷ್ಠಿರಂ** = ಧರ್ಮರಾಜನನ್ನು **ಗರ್ಹಯಾಮಾಸ** = ನಿಂದಿಸಿದ.

**ತಾತ್ಪರ್ಯ** :- ಆಗಲೇ ಚಾರ್ವಾಕ ಎಂಬ ಅತ್ಯಂತ ಪಾಪಸ್ವಭಾವದ ರಾಕ್ಷಸ ತ್ರಿದಂಡಿ ಸನ್ಯಾಸಿಯಾಗಿ 'ವಿಪ್ರರು ನಿನ್ನನ್ನು ತೆಗಳುತ್ತಿರುವರು' ಎಂದು ಧರ್ಮರಾಜನನ್ನು ನಿಂದಿಸಿದ.

ವಿಪ್ರರಿಂದ ಚಾರ್ವಾಕ ಸಂಹಾರ

**ಶ್ರುತ್ವೈವ ತದ್ದುಃಖಿತಮಾಶು ಧರ್ಮಜಂ**
**ದೃಷ್ಟ್ವಾ ವಿಪ್ರಾಃ ಶೇಪುರಮುಂ ಭೃಶಾರ್ತಾಃ ।**
**ಅಗರ್ಹಿತಂ ನಿತ್ಯಮಸ್ಮಾಭಿರೇನಂ**
**ಯತೋಽವೋಚೋ ಗರ್ಹಿತಮದ್ಯ ಪಾಪ ।**
**ಭಸ್ಮೀಭವಾಶ್ವೇವ ತತಸ್ತ್ವಿತೀರಿತೇ**
**ಕ್ಷಣಾದಭೂತ್ ಪಾಪತಮಃ ಸ ಭಸ್ಮಸಾತ್ ॥ ೩ ॥**

ಶ್ರುತ್ವಾ ಏವ ತತ್ ದುಃಖಿತಂ ಆಶು ಧರ್ಮಜಂ ದೃಷ್ಟ್ವಾ ವಿಪ್ರಾಃ ಶೇಪುಃ ಅಮುಂ ಭೃಶಾರ್ತಾಃ । ಅಗರ್ಹಿತಂ ನಿತ್ಯಂ ಅಸ್ಮಾಭಿಃ ಏನಂ ಯತಃ ಅವೋಚಃ ಗರ್ಹಿತಂ

**ಅದ್ಯ ಪಾಪ । ಭಸ್ಮೀಭವ ಆಶು ಏವ ತತಃ ತು ಇತಿ ಈರಿತೇ ಕ್ಷಣಾತ್ ಅಭೂತ್ ಪಾಪತಮಃ ಸಃ ಭಸ್ಮಸಾತ್ ॥ ೩ ॥**

**ಅರ್ಥ** :- **ತತ್** = ಅದನ್ನು **ಶ್ರುತ್ವಾ ಏವ** = ಕೇಳುತ್ತಲೇ **ಆಶು** = ಕೂಡಲೇ **ದುಃಖಿತಂ** = ದುಃಖಿತನಾದ **ಧರ್ಮಜಂ** = ಧರ್ಮರಾಜನನ್ನು **ದೃಷ್ಟ್ವಾ** = ನೋಡಿ **ಭೃಶಾರ್ತಾಃ** = ಬಹಳ ನೊಂದವರಾದ **ವಿಪ್ರಾಃ** = ಬ್ರಾಹ್ಮಣರು **ಅಮುಂ** = ಅವನನ್ನು (ಆ ಸನ್ಯಾಸಿಯನ್ನು) **ಶೇಪುಃ** = ಶಪಿಸಿದರು. **ಪಾಪ** = ಎಲೈ ಪಾಪಿಯೆ! **ಅಸ್ಮಾಭಿಃ** = ನಮ್ಮಿಂದ **ನಿತ್ಯಂ** = ನಿತ್ಯವೂ **ಅಗರ್ಹಿತಂ** = ನಿಂದಿತನಾಗದ **ಏನಂ** = ಇವನನ್ನು (ಧರ್ಮರಾಜನನ್ನು) **(ಅಸ್ಮಾಭಿಃ)** = ನಮ್ಮಿಂದ **ಅದ್ಯ** = ಇಂದು **ಗರ್ಹಿತಂ (ಇತಿ)** = ನಿಂದಿತನಾದವನನ್ನಾಗಿ **ಯತಃ** = ಯಾವ ಕಾರಣದಿಂದ **ಅವೋಚಃ** = (ನೀನು) ಹೇಳಿದೆಯೋ, **ತತಃ** = ಆ ಕಾರಣದಿಂದ **ಆಶು ಏವ** = ಕೂಡಲೇ **ಭಸ್ಮೀಭವ** = ಸುಟ್ಟು ಬೂದಿಯಾಗು **ಇತಿ** = ಹೀಗೆಂದು **ಈರಿತೇ (ಸತಿ)** = ಹೇಳಲ್ಪಡಲು, **ಪಾಪತಮಃ** = ಅತ್ಯಂತಪಾಪಿಯಾದ **ಸಃ** = ಅವನು **ಕ್ಷಣಾತ್** = ಕ್ಷಣದಲ್ಲೇ **ಭಸ್ಮಸಾತ್ ಅಭೂತ್** = ಸುಟ್ಟುಬೂದಿಯಾಗಿ ಹೋದ.

**ತಾತ್ಪರ್ಯ** :- ಅದನ್ನು ಕೇಳುತ್ತಲೇ ಧರ್ಮರಾಜ ಕೂಡಲೇ ದುಃಖಿತನಾದದ್ದನ್ನು ಕಂಡು ವಿಪ್ರರು ತುಂಬಾ ನೊಂದವರಾಗಿ - ನಾವು ಇವನನ್ನು ತೆಗಳದಿದ್ದರೂ ತೆಗಳುತ್ತಿರುವೆವೆಂದು ಹೇಳುತ್ತಿರುವ ನೀನು ಕೂಡಲೇ ಸುಟ್ಟು ಬೂದಿಯಾಗು ಎಂದು ಆ ರಾಕ್ಷಸನನ್ನು ಶಪಿಸಿದರು. ಅವರು ಹೀಗೆನ್ನುತ್ತಲೇ ಆ ಕ್ಷಣದಲ್ಲೇ ಆ ಮಹಾಪಾಪಿ ಸುಟ್ಟು ಬೂದಿಯಾಗಿ ಹೋದ.

### ಶ್ರೀಕೃಷ್ಣ ತಿಳಿಸಿದ ಚಾರ್ವಾಕನ ಪೂರ್ವೇತಿಹಾಸ

**ಭಸ್ಮೀಕೃತೇಽಸ್ಮಿನ್ ಯತಿವೇಷಧಾರಿಣಿ**
**ಯುಧಿಷ್ಠಿರಂ ದುಃಖಿತಂ ವೃಷ್ಣಿಸಿಂಹಃ ।**
**ಪ್ರೋವಾಚ ನಾಯಂ ಯತಿರುಗ್ರಕರ್ಮಾ**
**ಸುಯೋಧನಸ್ಯೈವ ಸಖಾ ಸುಪಾಪಃ ॥ ೪ ॥**

**ಭಸ್ಮೀಕೃತೇ ಅಸ್ಮಿನ್ ಯತಿವೇಷಧಾರಿಣಿ ಯುಧಿಷ್ಠಿರಂ ದುಃಖಿತಂ ವೃಷ್ಣಿಸಿಂಹಃ । ಪ್ರೋವಾಚ ನ ಅಯಂ ಯತಿಃ ಉಗ್ರಕರ್ಮಾ ಸುಯೋಧನಸ್ಯ ಏವ ಸಖಾ ಸುಪಾಪಃ ॥ ೪ ॥**

**ಅರ್ಥ** :- **ಅಸ್ಮಿನ್** = ಆ **ಯತಿವೇಷಧಾರಿಣಿ** = ಸನ್ನ್ಯಾಸಿವೇಷ ಧಾರಿಯು **ಭಸ್ಮೀಕೃತೇ (ಸತಿ)** = ಸುಟ್ಟುಬೂದಿಯಾಗುತ್ತಿರಲು, **ವೃಷ್ಣಿಸಿಂಹಃ** = ವೃಷ್ಣಿವಂಶಶ್ರೇಷ್ಠನಾದ ಕೃಷ್ಣನು **ದುಃಖಿತಂ** = ದುಃಖಿತನಾದ **ಯುಧಿಷ್ಠಿರಂ** = ಯುಧಿಷ್ಠಿರನನ್ನು ಕುರಿತು **ಪ್ರೋವಾಚ** = ಹೇಳಿದ. **ಅಯಂ** = ಇವನು **ಉಗ್ರಕರ್ಮಾ** = ಕ್ರೂರಕರ್ಮದವನು, **ಸುಪಾಪಃ** = ಅತ್ಯಂತ ಪಾಪಿಯು, **ಸುಯೋಧನಸ್ಯ** = ದುರ್ಯೋಧನನ **ಸಖಾ ಏವ** = ಸ್ನೇಹಿತನೇ, **ನ ಯತಿಃ** = ಸನ್ನ್ಯಾಸಿಯಲ್ಲ.

**ರಕ್ಷೋಽಧಮೋಽಯಂ ನಿಹತೋಽದ್ಯ**
**ವಿಪ್ರೈಸ್ತಸ್ಮಾ ಶುಚಃ ಕೃತಕಾರ್ಯೋಽಸಿ ರಾಜನ್ ।**
**ಇತೀರಿತಃ ಶಾಂತಮನಾಃ ಸ ವಿಪ್ರಾನ್**
**ಸಂತರ್ಪಯಾಮಾಸ ಧನೈಶ್ಚ ಭಕ್ತ್ಯಾ ॥ ೫ ॥**

**ರಕ್ಷೋಽಧಮಃ ಅಯಂ ನಿಹತಃ ಅದ್ಯ ವಿಪ್ರೈಃ ತಸ್ಮಾ ಶುಚಃ ಕೃತಕಾರ್ಯಃ ಅಸಿ ರಾಜನ್ । ಇತಿ ಈರಿತಃ ಶಾಂತಮನಾಃ ಸಃ ವಿಪ್ರಾನ್ ಸಂತರ್ಪಯಾಮಾಸ ಧನೈಃ ಚ ಭಕ್ತ್ಯಾ ॥ ೫ ॥**

**ಅರ್ಥ** :- **ಅಯಂ** = ಈ **ರಕ್ಷೋಽಧಮಃ** = ರಾಕ್ಷಸಾಧಮನು **ಅದ್ಯ** = ಈಗ **ವಿಪ್ರೈಃ** = ಬ್ರಾಹ್ಮಣರಿಂದ **ನಿಹತಃ** = ಕೊಲ್ಲಲ್ಪಟ್ಟನು. **ರಾಜನ್** = ರಾಜನೇ **ಕೃತಕಾರ್ಯಃ ಅಸಿ** = (ನೀನು) ಕೃತಕೃತ್ಯನಾಗಿರುವೆ. **ತಸ್ಮಾ ಶುಚಃ** = ಆದ್ದರಿಂದ ಶೋಕಿಸಬೇಡ. **ಇತಿ** = ಹೀಗೆ **ಈರಿತಃ** = ಹೇಳಲ್ಪಟ್ಟ **ಶಾಂತಮನಾಃ** = ಶಾಂತಮನಸ್ಕನಾದ **ಸಃ** = ಅವನು **ವಿಪ್ರಾನ್** = ಬ್ರಾಹ್ಮಣರನ್ನು **ಭಕ್ತ್ಯಾ** = ಭಕ್ತಿಯಿಂದ **ಚ** = ಮತ್ತು **ಧನೈಃ** = ಧನಗಳಿಂದ **ಸಂತರ್ಪಯಾಮಾಸ** = ಚೆನ್ನಾಗಿ ತೃಪ್ತಿಪಡಿಸಿದ.

**ತಾತ್ಪರ್ಯ** :- ಸನ್ಯಾಸಿವೇಷದ ಅವನು ಹಾಗೆ ಬೂದಿಯಾಗುತ್ತಲೇ ದುಃಖಿತನಾದ ಧರ್ಮರಾಜನಿಗೆ ವೃಷ್ಣಿಶ್ರೇಷ್ಠನಾದ ಕೃಷ್ಣ ತಿಳಿಸಿದ – ''ಇವನು

ಯತಿಯಲ್ಲ, ಕ್ರೂರಕರ್ಮಿಯಾದ ಇವನು ಮಹಾಪಾಪಿ ; ದುರ್ಯೋಧನ ನಿಗೆ ಮಿತ್ರನಾದ ರಾಕ್ಷಸಾಧಮ. ಈಗ ಮುನಿಗಳಿಂದ ಹತನಾದ. ಆದ್ದರಿಂದ ನೀನು ಶೋಕಿಸಬೇಡ. ನೀನು ಮಾಡಬೇಕಾದದ್ದನ್ನೇ ಮಾಡಿರುವಿ''. ಶ್ರೀಕೃಷ್ಣ ಹೀಗೆನ್ನಲು ಧರ್ಮರಾಜ ನೆಮ್ಮದಿಹೊಂದಿ ಭಕ್ತಿಯಿಂದ ಬ್ರಾಹ್ಮಣರನ್ನು ಧನಗಳಿಂದ ಸಂತೋಷಪಡಿಸಿದ.

### ಧರ್ಮರಾಜನ ಆಳ್ವಿಕೆ

**ಅಸಾಂತ್ವಯಚ್ಚ ಬಾಂಧವಾನ್ ಸ ಪೌರಸಂಶ್ರಿತಾದಿಕಾನ್ ।**
**ದದೌ ಯಥೇಷ್ಟತೋ ಧನಂ ರರಕ್ಷ ಚಾನು ಪುತ್ರವತ್ ॥ ೬ ॥**

**ಅಸಾಂತ್ವಯತ್ ಚ ಬಾಂಧವಾನ್ ಸಃ ಪೌರಸಂಶ್ರಿತಾದಿಕಾನ್ । ದದೌ ಯಥೇಷ್ಟತಃ ಧನಂ ರರಕ್ಷ ಚ ಅನು ಪುತ್ರವತ್ ॥ ೬ ॥**

**ಅರ್ಥ** :- **ಸಃ** = ಅವನು **ಪೌರಸಂಶ್ರಿತಾದಿಕಾನ್** = ಪೌರರು, ಆಶ್ರಿತರು ಮೊದಲಾದವರನ್ನು **ಚ** = ಮತ್ತು **ಬಾಂಧವಾನ್** = ಬಾಂಧವ ರನ್ನು **ಅಸಾಂತ್ವಯತ್** = ಸಾಂತ್ವನಪಡಿಸಿದ. **ಯಥೇಷ್ಟತಃ** = ಯಥೇಷ್ಟವಾಗಿ **ಧನಂ** = ಧನವನ್ನು **ದದೌ** = ನೀಡಿದ. **ಪುತ್ರವತ್** = ಪುತ್ರರಂತೆ **ಅನು ರರಕ್ಷ ಚ** = ಚೆನ್ನಾಗಿ ರಕ್ಷಿಸಿದ ಸಹ.

**ತಾತ್ಪರ್ಯ** :- ಧರ್ಮರಾಜ ಬಂಧುಗಳನ್ನು, ಪೌರರನ್ನು, ಆಶ್ರಿತರು ಮೊದಲಾದವರನ್ನು ಸಮಾಧಾನಪಡಿಸಿದ. ಯಥೇಚ್ಛವಾಗಿ ಧನ ನೀಡಿದ ; ಅವರನ್ನು ಮಕ್ಕಳಂತೆ ಪಾಲಿಸಿದ.

### ಯುಧಿಷ್ಠಿರನ ವೈರಾಗ್ಯ

**ಸ ಭೀಷ್ಮದ್ರೋಣಕರ್ಣಾನಾಂ ವಧಾದ್ದುರ್ಯೋಧನಸ್ಯ ಚ ।**
**ಪಾಪಾಶಂಕೀ ತಪ್ಯಮಾನೋ ರಾಜ್ಯತ್ಯಾಗೇ ಮನೋ ದಧೇ ॥ ೭ ॥**

**ಸಃ ಭೀಷ್ಮದ್ರೋಣಕರ್ಣಾನಾಂ ವಧಾತ್ ದುರ್ಯೋಧನಸ್ಯ ಚ । ಪಾಪಾಶಂಕೀ ತಪ್ಯಮಾನಃ ರಾಜ್ಯತ್ಯಾಗೇ ಮನಃ ದಧೇ ॥ ೭ ॥**

**ಅರ್ಥ** :- **ಭೀಷ್ಮದ್ರೋಣಕರ್ಣಾನಾಂ** = ಭೀಷ್ಮ-ದ್ರೋಣ-ಕರ್ಣರ **ಚ** = ಮತ್ತು **ದುರ್ಯೋಧನಸ್ಯ** = ದುರ್ಯೋಧನನ **ವಧಾತ್** =

ವಧೆಯಿಂದ **ಪಾಪಾಶಂಕೀ ಸಃ** = ಪಾಪದ ಶಂಕೆಯುಳ್ಳ ಅವನು **ತಪ್ಯಮಾನಃ (ಸನ್)** = ಪರಿತಪಿಸುವವನಾಗಿ **ರಾಜ್ಯತ್ಯಾಗೇ** = ರಾಜ್ಯತ್ಯಾಗದಲ್ಲಿ **ಮನಃ** = ಮನಸ್ಸನ್ನು **ದಧೇ** = ಮಾಡಿದನು.

**ತಾತ್ಪರ್ಯ** :- ಭೀಷ್ಮ, ದ್ರೋಣ, ಕರ್ಣರ ಮತ್ತು ದುರ್ಯೋಧನರ ವಧೆಯಿಂದಾಗಿ ತನಗೆ ಪಾಪ ಒದಗಿದೆಯೆಂದು ಪರಿತಪಿಸುತ್ತಾ ಧರ್ಮರಾಜನು ರಾಜ್ಯತ್ಯಾಗ ಮಾಡಲು ಮನಸ್ಸು ಮಾಡಿದ.

**ಸೋಽನುಜೈಃ ಕೃಷ್ಣಯಾ ವಿಪ್ರೈರಪ್ಯುಕ್ತೋ ಧರ್ಮಶಾಸನಮ್ ।**
**ಭೀಮಂ ಸಂಪ್ರಾರ್ಥಯಿತ್ವೈವ ನ ವೇತ್ಸೀತ್ಯಾಹ ಫಲ್ಗುನಮ್ ॥ ೮ ॥**

**ಸಃ ಅನುಜೈಃ ಕೃಷ್ಣಯಾ ವಿಪ್ರೈಃ ಅಪಿ ಉಕ್ತಃ ಧರ್ಮಶಾಸನಮ್ । ಭೀಮಂ ಸಂಪ್ರಾರ್ಥಯಿತ್ವಾ ಏವ ನ ವೇತ್ಸಿ ಇತಿ ಆಹ ಫಲ್ಗುನಮ್ ॥ ೮ ॥**

**ಅರ್ಥ** :- **ಅನುಜೈಃ** = ತಮ್ಮಂದಿರಿಂದ **ಕೃಷ್ಣಯಾ** = ದ್ರೌಪದಿಯಿಂದ **ವಿಪ್ರೈಃ ಅಪಿ** = ಬ್ರಾಹ್ಮಣರಿಂದಲೂ **ಧರ್ಮಶಾಸನಂ** = ಧರ್ಮಶಾಸನವನ್ನು **ಉಕ್ತಃ** = ಹೇಳಲ್ಪಟ್ಟ **ಸಃ** = ಆ ಧರ್ಮರಾಜನು **ಭೀಮಂ** = ಭೀಮನನ್ನು **(ಧರ್ಮಶಿಕ್ಷಣಂ ಮಾ ಕುರು ಇತಿ)** = ಧರ್ಮಶಿಕ್ಷಣವನ್ನು ಮಾಡಬೇಡ ಎಂದು **ಸಂಪ್ರಾರ್ಥಯಿತ್ವಾ ಏವ** = ಕೇಳಿಕೊಂಡೇ **ಫಲ್ಗುನಂ** = ಅರ್ಜುನನನ್ನು ಕುರಿತು **'ನ ವೇತ್ಸಿ'** = '(ನೀನು) ತಿಳಿದಿಲ್ಲ' **ಇತಿ** = ಎಂದು **ಆಹ** = ಹೇಳಿದ.

**ತಾತ್ಪರ್ಯ** :- ತಮ್ಮಂದಿರು, ದ್ರೌಪದಿ, ವಿಪ್ರರು ಧರ್ಮೋಪ ದೇಶವನ್ನು ಮಾಡಿದಾಗ ಸಹ ಧರ್ಮರಾಜ ಭೀಮನನ್ನು ತನಗೆ ಉಪದೇಶ ನೀಡದಿರಲು ಕೇಳಿಕೊಂಡ. ಅರ್ಜುನನಿಗೆ ''ನಿನಗೆ ತಿಳಿಯದು'' ಎಂದ.

**ತಸ್ಮಿನ್ ಕ್ರುದ್ಧೇ ನೃಪಂ ಪ್ರಾಹುರ್ವಿಪ್ರಾಸ್ತ್ವತ್ತೋಽಪಿ ಧರ್ಮವಿತ್ ।**
**ಶಕ್ರೋಽರ್ಜುನ ಇತಿ ಶ್ರುತ್ವಾಪ್ಯೇತದ್ಧರ್ಮೇ ಸಸಂಶಯಮ್ ॥ ೯ ॥**

**ತಸ್ಮಿನ್ ಕ್ರುದ್ಧೇ ನೃಪಂ ಪ್ರಾಹುಃ ವಿಪ್ರಾಃ ತ್ವತ್ತಃ ಅಪಿ ಧರ್ಮವಿತ್ । ಶಕ್ರಃ ಅರ್ಜುನಃ ಇತಿ ಶ್ರುತ್ವಾ ಅಪಿ ಏತದ್ಧರ್ಮೇ ಸಸಂಶಯಮ್ ॥ ೯ ॥**

**ಅರ್ಥ** :– **ತಸ್ಮಿನ್** = ಆ ಅರ್ಜುನನಲ್ಲಿ **ಕ್ರುದ್ಧೇ** = ಕೋಪಗೊಂಡ **ನೃಪಂ** = ರಾಜನನ್ನು ಕುರಿತು **ವಿಪ್ರಾಃ** = ಬ್ರಾಹ್ಮಣರು **ಶಕ್ರಃ** = ಇಂದ್ರಾವತಾರನಾದ **ಅರ್ಜುನಃ** = ಅರ್ಜುನನು **ತ್ವತ್ತಃ ಅಪಿ** = ನಿನಗಿಂತಲೂ **ಧರ್ಮವಿತ್** = ಧರ್ಮವನ್ನು ತಿಳಿದವನು (ಇತಿ) = ಎಂದು **ಪ್ರಾಹುಃ** = ತಿಳಿಹೇಳಿದರು. **ಇತಿ ಶ್ರುತ್ವಾ ಅಪಿ** = ಹೀಗೆ (ಅವರು ಹೇಳಿದ್ದನ್ನು) ಕೇಳಿಯೂ ಸಹ **ಏತದ್ಧರ್ಮೇ** = (ಶತ್ರುವಧರೂಪವಾದ) ಈ ಧರ್ಮದಲ್ಲಿ **ಸಸಂಶಯಂ** = ಸಂದೇಹವನ್ನು (**ಚಕ್ರೇ**) = ಮಾಡಿದನು.

### ಯಾರ ಉಪದೇಶಕ್ಕೂ ಮಣಿಯದ ಯುಧಿಷ್ಠಿರ

**ಮತ್ಸ್ನೇಹಾದೇವ ಸರ್ವೇಽಪಿ ಧರ್ಮೋಽಯಮಿತಿ ವಾದಿನಃ ॥ ೧೦ ॥**

**ಮತ್ಸ್ನೇಹಾತ್ ಏವ ಸರ್ವೇ ಅಪಿ ಧರ್ಮಃ ಅಯಂ ಇತಿ ವಾದಿನಃ ।**

**ಇತ್ಯೇವಂ ಶಂಕಮಾನಂ ತಮೂಚತುರ್ವಿಪ್ರಯಾದವೌ ।**
**ಕೃಷ್ಣೌ ಧರ್ಮೋಽಯಮಿತ್ಯೇವ ಶಾಸ್ತ್ರಯುಕ್ತ್ಯಾ ಪುನಃ ಪುನಃ ॥ ೧೧ ॥**

**ಇತಿ ಏವಂ ಶಂಕಮಾನಂ ತಂ ಊಚತುಃ ವಿಪ್ರಯಾದವೌ । ಕೃಷ್ಣೌ ಧರ್ಮಃ ಅಯಂ ಇತಿ ಏವ ಶಾಸ್ತ್ರಯುಕ್ತ್ಯಾ ಪುನಃ ಪುನಃ ॥ ೧೧ ॥**

**ಅರ್ಥ** :– **ಮತ್ಸ್ನೇಹಾತ್ ಏವ** = ನನ್ನ ಮೇಲಿನ ಸ್ನೇಹದಿಂದಾಗಿಯೇ **ಸರ್ವೇ ಅಪಿ** = ಎಲ್ಲರೂ ಸಹ **ಅಯಂ** = ಇದು (ಭೀಷ್ಮಾದಿಗಳನ್ನು ಕೊಂದದ್ದು) **ಧರ್ಮಃ** = ಧರ್ಮವು **ಇತಿ** = ಎಂದು **ವಾದಿನಃ** = ಹೇಳುವವರಾಗಿರುವರು. **ಇತಿ ಏವಂ** = ಹೀಗೆಂದು **ಶಂಕಮಾನಂ** = ಶಂಕಿಸುತ್ತಿರುವ **ತಂ** = ಅವನನ್ನು ಕುರಿತು **ವಿಪ್ರಯಾದವೌ** = ಬ್ರಾಹ್ಮಣ ಹಾಗೂ ಯಾದವರಾದ **ಕೃಷ್ಣೌ** = ಕೃಷ್ಣರು (ವಾಸಿಷ್ಠಕೃಷ್ಣ ಹಾಗೂ ಯಾದವಕೃಷ್ಣರು) **ಅಯಂ** = ಇದು **ಧರ್ಮವು** = ಧರ್ಮವು **ಇತಿ** = ಎಂದು **ಶಾಸ್ತ್ರಯುಕ್ತ್ಯಾ ಏವ** = ಶಾಸ್ತ್ರೋಕ್ತಯುಕ್ತಿಯಿಂದಲೇ **ಪುನಃ ಪುನಃ** = ಮತ್ತೆ ಮತ್ತೆ **ಊಚತುಃ** = ಹೇಳಿದರು.

### ಭೀಷ್ಮರ ಬಳಿಗೆ ತೆರಳಲು ವ್ಯಾಸ ಕೃಷ್ಣರ ಆದೇಶ

**ನಾತಿನಿಶ್ಚಿತಬುದ್ಧಿಂ ತಂ ತದಾಽಪಿ ಪುರುಷೋತ್ತಮೌ ।**
**ಹತಪಕ್ಷಗತತ್ವೇನ ತ್ವಚ್ಛಂಕಾಯಾ ಅಗೋಚರಃ ।**
**ಯತೋ ಭೀಷ್ಮಸ್ತತೋ ಯಾಹಿ ತಮಿತ್ಯೂಚತುರವ್ಯಯೌ ॥ ೧೨ ॥**

ನಾತಿನಿಶ್ಚಿತಬುದ್ಧಿಂ ತಂ ತದಾ ಅಪಿ ಪುರುಷೋತ್ತಮೌ । ಹತಪಕ್ಷಗತತ್ವೇನ ತ್ವಚ್ಛಂಕಾಯಾಃ ಅಗೋಚರಃ । ಯತಃ ಭೀಷ್ಮಃ ತತಃ ಯಾಹಿ ತಂ ಇತಿ ಊಚತುಃ ಅವ್ಯಯೌ ॥ ೧೨ ॥

**ಅರ್ಥ** :- **ಅವ್ಯಯೌ** = ನಾಶರಹಿತರೂ **ಪುರುಷೋತ್ತಮೌ** = ಪುರುಷೋತ್ತಮರೂ ಆದ **(ಕೃಷ್ಣೌ)** = ವಾಸಿಷ್ಠಕೃಷ್ಣ ಹಾಗೂ ಯಾದವಕೃಷ್ಣರು **ತದಾ ಅಪಿ** = ಆಗಲೂ ಕೂಡ **ನಾತಿನಿಶ್ಚಿತಬುದ್ಧಿಂ** = ನಿಶ್ಚಿತಬುದ್ಧಿರಹಿತನಾದ **ತಂ** = ಅವನನ್ನು ಕುರಿತು **ಯತಃ** = ಯಾವ ಕಾರಣದಿಂದಾಗಿ **ಹತಪಕ್ಷಗತತ್ವೇನ** = ಕೊಲ್ಲಲ್ಪಟ್ಟ (ಕೌರವರ) ಪಕ್ಷದಲ್ಲಿರುವುದರಿಂದ **ತ್ವಚ್ಛಂಕಾಯಾಃ** = ನಿನ್ನ ಶಂಕೆಗೆ **ಅಗೋಚರಃ** = ಆಸ್ಪದರಲ್ಲದವರಾಗಿ **ಭೀಷ್ಮಃ** = ಭೀಷ್ಮರು (ಇರುವರೋ), **ತತಃ** = ಆ ಕಾರಣದಿಂದ **ತಂ** = ಅವರನ್ನು (ಭೀಷ್ಮರನ್ನು) ಕುರಿತು **ಯಾಹಿ** = ತೆರಳು **ಇತಿ ಊಚತುಃ** = ಎಂದು ಹೇಳಿದರು.

**ತಾತ್ಪರ್ಯ** :- ನನ್ನ ಮೇಲಿನ ಪ್ರೀತಿಯಿಂದಾಗಿಯೇ ಎಲ್ಲರೂ ಧರ್ಮವೆಂಬುದಾಗಿ ಹೇಳುತ್ತಿರುವರು ಎಂದು ಸಂದೇಹಿಸಿದ ಅವನಿಗೆ ಕೃಷ್ಣ ವೇದವ್ಯಾಸರು - 'ಅದು ಧರ್ಮವೇ ಆಗಿದೆ' ಎಂದು ಶಾಸ್ತ್ರದಿಂದಲೂ, ಯುಕ್ತಿಯಿಂದಲೂ ಮತ್ತೆ ಮತ್ತೆ ತಿಳಿಸಿದರು. ಆಗಲೂ ನಿಶ್ಚಯ ಹೊಂದದ ಅವನಿಗೆ ಪುರುಷೋತ್ತಮರೂ, ಅವ್ಯಯರೂ ಆದ ಅವರಿಬ್ಬರೂ ''ಶತ್ರುಪಕ್ಷದಲ್ಲಿ ಸೇರಿರುವುದರಿಂದ ಭೀಷ್ಮರ ಬಗ್ಗೆ ನಿನ್ನ ಶಂಕೆಗೆ ಆಸ್ಪದವಿಲ್ಲ ; ಆದ್ದರಿಂದ ಅವರ ಬಳಿ ತೆರಳು'' ಎಂದು ತಿಳಿಸಿದರು.

### ಭೀಷ್ಮರ ಬಳಿಗೆ ಧರ್ಮಾದಿಗಳು

**ಸ ತಾಭ್ಯಾಂ ಭ್ರಾತೃಭಿಶ್ಚೈವ ಮುನಿಭಿಶ್ಚ ಸಮನ್ವಿತಃ ।**
**ಭೀಷ್ಮಂ ಯಯೌ ಲಜ್ಜಿತೇಽಸ್ಮಿಂಸ್ತಂ ಭೀಷ್ಮಾಯಾಹ ಕೇಶವಃ ॥ ೧೩ ॥**

ಸಃ ತಾಭ್ಯಾಂ ಭ್ರಾತೃಭಿಃ ಚ ಏವ ಮುನಿಭಿಃ ಚ ಸಮನ್ವಿತಃ । ಭೀಷ್ಮಂ ಯಯೌ ಲಜ್ಜಿತೇ ಅಸ್ಮಿನ್ ತಂ ಭೀಷ್ಮಾಯ ಆಹ ಕೇಶವಃ ॥ ೧೩ ॥

**ಅರ್ಥ** :- **ತಾಭ್ಯಾಂ** = ಅವರಿಬ್ಬರೊಂದಿಗೆ **ಭ್ರಾತೃಭಿಃ ಚ ಏವ** = ಹಾಗೆಯೇ ತಮ್ಮಂದಿರೊಂದಿಗೂ **ಸಮನ್ವಿತಃ** = ಕೂಡಿಕೊಂಡವನಾಗಿ **ಸಃ** = ಅವನು (ಧರ್ಮರಾಜನು) **ಭೀಷ್ಮಂ** = ಭೀಷ್ಮರನ್ನು ಕುರಿತು **ಯಯೌ** = ತೆರಳಿದ. **ಅಸ್ಮಿನ್ ಲಜ್ಜಿತೇ (ಸತಿ)** = ಅವನು ನಾಚಿ ಕೊಂಡಿರಲು **ಕೇಶವಃ** = ಶ್ರೀಕೃಷ್ಣನು **ತಂ** = ಧರ್ಮರಾಜನನ್ನು ಕುರಿತು **ಭೀಷ್ಮಾಯ** = ಭೀಷ್ಮರಿಗೆ **ಆಹ** = ಹೇಳಿದ.

**ತಾತ್ಪರ್ಯ** :- ಧರ್ಮರಾಜ ಕೃಷ್ಣ, ವೇದವ್ಯಾಸರೊಂದಿಗೂ, ಸಹೋದರರೊಂದಿಗೂ ಮುನಿಗಳೊಂದಿಗೂ ಕೂಡಿಕೊಂಡು ಭೀಷ್ಮರ ಬಳಿಗೆ ತೆರಳಿದ; ಅವನು ನಾಚಿದಾಗ ಕೃಷ್ಣ ಭೀಷ್ಮರಿಗೆ ಹೇಳಿದ.

### ಭೀಷ್ಮರಿಂದ ಸಕಲ ಧರ್ಮೋಪದೇಶ

**ಪೃಚ್ಛೇತ್ಯುಕ್ತಃ ಸ ಭೀಷ್ಮೇಣ ಪಪ್ರಚ್ಛಾಖಿಲಮಂಜಸಾ ।**
**ತತ್ರೋವಾಚಾಖಿಲಾನ್ ಧರ್ಮಾನ್ ಕೃಷ್ಣೋ ಭೀಷ್ಮಶರೀರಗಃ ॥ ೧೪ ॥**

ಪೃಚ್ಛ ಇತಿ ಉಕ್ತಃ ಸಃ ಭೀಷ್ಮೇಣ ಪಪ್ರಚ್ಛ ಅಖಿಲಂ ಅಂಜಸಾ । ತತ್ರ ಉವಾಚ ಅಖಿಲಾನ್ ಧರ್ಮಾನ್ ಕೃಷ್ಣಃ ಭೀಷ್ಮಶರೀರಗಃ ॥ ೧೪ ॥

**ಅರ್ಥ** :- **ಭೀಷ್ಮೇಣ** = ಭೀಷ್ಮರಿಂದ **ಪೃಚ್ಛ** = 'ಕೇಳು' (ಪ್ರಶ್ನಿಸು) **ಇತಿ** = ಎಂದು **ಉಕ್ತಃ** = ಹೇಳಲ್ಪಟ್ಟ **ಸಃ** = ಅವನು (ಧರ್ಮರಾಜನು) **ಅಖಿಲಂ** = ಎಲ್ಲವನ್ನೂ **ಅಂಜಸಾ** = ಚೆನ್ನಾಗಿ **ಪಪ್ರಚ್ಛ** = ಕೇಳಿದ. **ತತ್ರ** = ಅಲ್ಲಿ **ಭೀಷ್ಮಶರೀರಗಃ** = ಭೀಷ್ಮರ ಶರೀರದಲ್ಲಿರುವವನಾಗಿ **ಕೃಷ್ಣಃ** = ಕೃಷ್ಣನು **ಅಖಿಲಾನ್** = ಎಲ್ಲ **ಧರ್ಮಾನ್** = ಧರ್ಮಗಳನ್ನು **ಉವಾಚ** = ಹೇಳಿದನು.

**ತಾತ್ಪರ್ಯ** :- ಭೀಷ್ಮರು ಕೇಳು ಎನ್ನಲು ಧರ್ಮರಾಜ ಎಲ್ಲವನ್ನೂ ಸಹ ಚೆನ್ನಾಗಿ ಕೇಳಿದ. ಆಗ ಶ್ರೀಕೃಷ್ಣನೇ ಭೀಷ್ಮರ ಒಳಗೆ ನಿಂತು ಎಲ್ಲ ಧರ್ಮಗಳನ್ನೂ ಸಹ ಉಪದೇಶಿಸಿದ.

ಭೀಷ್ಮರ ಬಳಿಗೆ ತೆರಳಲು ವ್ಯಾಸ ಕೃಷ್ಣರ ಆದೇಶ

**ನಾತಿನಿಶ್ಚಿತಬುದ್ಧಿಂ ತಂ ತದಾಽಪಿ ಪುರುಷೋತ್ತಮೌ ।**
**ಹತಪಕ್ಷಗತತ್ವೇನ ತ್ವಚ್ಛಂಕಾಯಾ ಅಗೋಚರಃ ।**
**ಯತೋ ಭೀಷ್ಮಸ್ತತೋ ಯಾಹಿ ತಮಿತ್ಯೂಚತುರವ್ಯಯೌ ॥ ೧೨ ॥**

**ನಾತಿನಿಶ್ಚಿತಬುದ್ಧಿಂ ತಂ ತದಾ ಅಪಿ ಪುರುಷೋತ್ತಮೌ । ಹತಪಕ್ಷಗತತ್ವೇನ ತ್ವಚ್ಛಂಕಾಯಾಃ ಅಗೋಚರಃ । ಯತಃ ಭೀಷ್ಮಃ ತತಃ ಯಾಹಿ ತಂ ಇತಿ ಊಚತುಃ ಅವ್ಯಯೌ ॥ ೧೨ ॥**

**ಅರ್ಥ** :- **ಅವ್ಯಯೌ** = ನಾಶರಹಿತರೂ **ಪುರುಷೋತ್ತಮೌ** = ಪುರುಷೋತ್ತಮರೂ ಆದ **(ಕೃಷ್ಣೌ)** = ವಾಸಿಷ್ಠಕೃಷ್ಣ ಹಾಗೂ ಯಾದವಕೃಷ್ಣರು **ತದಾ ಅಪಿ** = ಆಗಲೂ ಕೂಡ **ನಾತಿನಿಶ್ಚಿತಬುದ್ಧಿಂ** = ನಿಶ್ಚಿತಬುದ್ಧಿರಹಿತನಾದ **ತಂ** = ಅವನನ್ನು ಕುರಿತು **ಯತಃ** = ಯಾವ ಕಾರಣದಿಂದಾಗಿ **ಹತಪಕ್ಷಗತತ್ವೇನ** = ಕೊಲ್ಲಲ್ಪಟ್ಟ (ಕೌರವರ) ಪಕ್ಷದಲ್ಲಿರುವುದರಿಂದ **ತ್ವಚ್ಛಂಕಾಯಾಃ** = ನಿನ್ನ ಶಂಕೆಗೆ **ಅಗೋಚರಃ** = ಆಸ್ಪದರಲ್ಲದವರಾಗಿ **ಭೀಷ್ಮಃ** = ಭೀಷ್ಮರು (ಇರುವರೋ), **ತತಃ** = ಆ ಕಾರಣದಿಂದ **ತಂ** = ಅವರನ್ನು (ಭೀಷ್ಮರನ್ನು) ಕುರಿತು **ಯಾಹಿ** = ತೆರಳು **ಇತಿ ಊಚತುಃ** = ಎಂದು ಹೇಳಿದರು.

**ತಾತ್ಪರ್ಯ** :- ನನ್ನ ಮೇಲಿನ ಪ್ರೀತಿಯಿಂದಾಗಿಯೇ ಎಲ್ಲರೂ ಧರ್ಮವೆಂಬುದಾಗಿ ಹೇಳುತ್ತಿರುವರು ಎಂದು ಸಂದೇಹಿಸಿದ ಅವನಿಗೆ ಕೃಷ್ಣ ವೇದವ್ಯಾಸರು - 'ಅದು ಧರ್ಮವೇ ಆಗಿದೆ' ಎಂದು ಶಾಸ್ತ್ರದಿಂದಲೂ, ಯುಕ್ತಿಯಿಂದಲೂ ಮತ್ತೆ ಮತ್ತೆ ತಿಳಿಸಿದರು. ಆಗಲೂ ನಿಶ್ಚಯ ಹೊಂದದ ಅವನಿಗೆ ಪುರುಷೋತ್ತಮರೂ, ಅವ್ಯಯರೂ ಆದ ಅವರಿಬ್ಬರೂ ''ಶತ್ರುಪಕ್ಷದಲ್ಲಿ ಸೇರಿರುವುದರಿಂದ ಭೀಷ್ಮರ ಬಗ್ಗೆ ನಿನ್ನ ಶಂಕೆಗೆ ಆಸ್ಪದವಿಲ್ಲ ; ಆದ್ದರಿಂದ ಅವರ ಬಳಿ ತೆರಳು'' ಎಂದು ತಿಳಿಸಿದರು.

ಭೀಷ್ಮರ ಬಳಿಗೆ ಧರ್ಮಾದಿಗಳು

**ಸ ತಾಭ್ಯಾಂ ಭ್ರಾತೃಭಿಶ್ಚೈವ ಮುನಿಭಿಶ್ಚ ಸಮನ್ವಿತಃ ।**
**ಭೀಷ್ಮಂ ಯಯೌ ಲಜ್ಜಿತೇಽಸ್ಮಿಂಸ್ತಂ ಭೀಷ್ಮಾಯಾಹ ಕೇಶವಃ ॥ ೧೩ ॥**

**ಸಃ ತಾಭ್ಯಾಂ ಭ್ರಾತೃಭಿಃ ಚ ಏವ ಮುನಿಭಿಃ ಚ ಸಮನ್ವಿತಃ । ಭೀಷ್ಮಂ ಯಯೌ ಲಜ್ಜಿತೇ ಅಸ್ಮಿನ್ ತಂ ಭೀಷ್ಮಾಯ ಆಹ ಕೇಶವಃ ॥ ೧೩ ॥**

**ಅರ್ಥ** :– **ತಾಭ್ಯಾಂ** = ಅವರಿಬ್ಬರೊಂದಿಗೆ **ಭ್ರಾತೃಭಿಃ ಚ ಏವ** = ಹಾಗೆಯೇ ತಮ್ಮಂದಿರೊಂದಿಗೂ **ಸಮನ್ವಿತಃ** = ಕೂಡಿಕೊಂಡವನಾಗಿ **ಸಃ** = ಅವನು (ಧರ್ಮರಾಜನು) **ಭೀಷ್ಮಂ** = ಭೀಷ್ಮರನ್ನು ಕುರಿತು **ಯಯೌ** = ತೆರಳಿದ. **ಅಸ್ಮಿನ್ ಲಜ್ಜಿತೇ (ಸತಿ)** = ಅವನು ನಾಚಿ ಕೊಂಡಿರಲು **ಕೇಶವಃ** = ಶ್ರೀಕೃಷ್ಣನು **ತಂ** = ಧರ್ಮರಾಜನನ್ನು ಕುರಿತು **ಭೀಷ್ಮಾಯ** = ಭೀಷ್ಮರಿಗೆ **ಆಹ** = ಹೇಳಿದ.

**ತಾತ್ಪರ್ಯ** :- ಧರ್ಮರಾಜ ಕೃಷ್ಣ, ವೇದವ್ಯಾಸರೊಂದಿಗೂ, ಸಹೋದರರೊಂದಿಗೂ ಮುನಿಗಳೊಂದಿಗೂ ಕೂಡಿಕೊಂಡು ಭೀಷ್ಮರ ಬಳಿಗೆ ತೆರಳಿದ; ಅವನು ನಾಚಿದಾಗ ಕೃಷ್ಣ ಭೀಷ್ಮರಿಗೆ ಹೇಳಿದ.

### ಭೀಷ್ಮರಿಂದ ಸಕಲ ಧರ್ಮೋಪದೇಶ

**ಪೃಚ್ಛೇತ್ಯುಕ್ತಃ ಸ ಭೀಷ್ಮೇಣ ಪಪ್ರಚ್ಛಾಖಿಲಮಂಜಸಾ ।**
**ತತ್ರೋವಾಚಾಖಿಲಾನ್ ಧರ್ಮಾನ್ ಕೃಷ್ಣೋ ಭೀಷ್ಮಶರೀರಗಃ ॥ ೧೪ ॥**

**ಪೃಚ್ಛ ಇತಿ ಉಕ್ತಃ ಸಃ ಭೀಷ್ಮೇಣ ಪಪ್ರಚ್ಛ ಅಖಿಲಂ ಅಂಜಸಾ । ತತ್ರ ಉವಾಚ ಅಖಿಲಾನ್ ಧರ್ಮಾನ್ ಕೃಷ್ಣಃ ಭೀಷ್ಮಶರೀರಗಃ ॥ ೧೪ ॥**

**ಅರ್ಥ** :– **ಭೀಷ್ಮೇಣ** = ಭೀಷ್ಮರಿಂದ **ಪೃಚ್ಛ** = 'ಕೇಳು' (ಪ್ರಶ್ನಿಸು) **ಇತಿ** = ಎಂದು **ಉಕ್ತಃ** = ಹೇಳಲ್ಪಟ್ಟ **ಸಃ** = ಅವನು (ಧರ್ಮರಾಜನು) **ಅಖಿಲಂ** = ಎಲ್ಲವನ್ನೂ **ಅಂಜಸಾ** = ಚೆನ್ನಾಗಿ **ಪಪ್ರಚ್ಛ** = ಕೇಳಿದ. **ತತ್ರ** = ಅಲ್ಲಿ **ಭೀಷ್ಮಶರೀರಗಃ** = ಭೀಷ್ಮರ ಶರೀರದಲ್ಲಿರುವವನಾಗಿ **ಕೃಷ್ಣಃ** = ಕೃಷ್ಣನು **ಅಖಿಲಾನ್** = ಎಲ್ಲ **ಧರ್ಮಾನ್** = ಧರ್ಮಗಳನ್ನು **ಉವಾಚ** = ಹೇಳಿದನು.

**ತಾತ್ಪರ್ಯ** :- ಭೀಷ್ಮರು ಕೇಳು ಎನ್ನಲು ಧರ್ಮರಾಜ ಎಲ್ಲವನ್ನೂ ಸಹ ಚೆನ್ನಾಗಿ ಕೇಳಿದ. ಆಗ ಶ್ರೀಕೃಷ್ಣನೇ ಭೀಷ್ಮರ ಒಳಗೆ ನಿಂತು ಎಲ್ಲ ಧರ್ಮಗಳನ್ನೂ ಸಹ ಉಪದೇಶಿಸಿದ.

### ಭೀಷ್ಮರಿಗೆ ಕೃಷ್ಣ ನೀಡಿದ ವರ

**ಭೀಷ್ಮೋ ಹ್ಯಾಹ ಹರಿಂ ಪಾರ್ಥಾ ಬೋಧನೀಯಾಸ್ತ್ವಯೈವ ಹಿ ।**
**ಕಾ ಶಕ್ತಿರ್ಮಮ ದೇವೇಶ ಪಾರ್ಥಾನ್ ಬೋಧಯಿತುಂ ಪ್ರಭೋ ॥ ೧೫ ॥**

**ಭೀಷ್ಮಃ ಹಿ ಆಹ ಹರಿಂ ಪಾರ್ಥಾಃ ಬೋಧನೀಯಾಃ ತ್ವಯಾ ಏವ ಹಿ । ಕಾ ಶಕ್ತಿಃ ಮಮ ದೇವೇಶ ಪಾರ್ಥಾನ್ ಬೋಧಯಿತುಂ ಪ್ರಭೋ ॥ ೧೫ ॥**

**ಅರ್ಥ** :– **ಭೀಷ್ಮಃ ಹಿ** = ಭೀಷ್ಮನೇ **ಹರಿಂ** = ಹರಿಯನ್ನು ಕುರಿತು **ಆಹ** = ಹೇಳಿದ **ದೇವೇಶ** = ದೇವೇಶನೆ! **ಪ್ರಭೋ** = ಪ್ರಭುವೆ! **ತ್ವಯಾ** ಏವ **ಹಿ** = ನಿನ್ನಿಂದಲೇ **ಪಾರ್ಥಾಃ** = ಪಾಂಡವರು **ಬೋಧನೀಯಾಃ** = ಬೋಧಿಸಲ್ಪಡಬೇಕಾದವರು. **ಪಾರ್ಥಾನ್** = ಪಾಂಡವರನ್ನು ಕುರಿತು **ಬೋಧಯಿತುಂ** = ಬೋಧಿಸಲು **ಮಮ ಕಾ ಶಕ್ತಿಃ** = ನನಗಾವ ಶಕ್ತಿ?

**ತಾತ್ಪರ್ಯ** :- ಆಗ ಭೀಷ್ಮರು ಶ್ರೀಕೃಷ್ಣನನ್ನು ಕೇಳಿಕೊಂಡರು: 'ಪ್ರಭೋ, ಪಾಂಡವರಿಗೆ ನೀನೇ ಧರ್ಮಬೋಧನೆ ಮಾಡಬೇಕು. ಪಾಂಡವರಿಗೆ ಬೋಧಿಸಲು ನನಗಾವ ಶಕ್ತಿ !'.

**ಇತ್ಯುಕ್ತೋ ಭಗವಾನಾಹ ತ್ವತ್ಕೀರ್ತ್ಯೈ ತ್ವಯಿ ಸಂಸ್ಥಿತಃ ।**
**ಪ್ರವಕ್ಷ್ಯಾಮ್ಯಖಿಲಾನ್ ಧರ್ಮಾನ್ ಸೂಕ್ಷ್ಮಂ ತತ್ತ್ವಮಪೀತಿ ಹ ॥ ೧೬ ॥**

**ಇತಿ ಉಕ್ತಃ ಭಗವಾನ್ ಆಹ ತ್ವತ್ಕೀರ್ತ್ಯೈ ತ್ವಯಿ ಸಂಸ್ಥಿತಃ । ಪ್ರವಕ್ಷ್ಯಾಮಿ ಅಖಿಲಾನ್ ಧರ್ಮಾನ್ ಸೂಕ್ಷ್ಮಂ ತತ್ತ್ವಂ ಅಪಿ ಇತಿ ಹ ॥ ೧೬ ॥**

**ಅರ್ಥ** :– **ಇತಿ** = ಹೀಗೆ **ಉಕ್ತಃ** = ಹೇಳಲ್ಪಟ್ಟ (ಪ್ರಾರ್ಥಿಸಲ್ಪಟ್ಟ) **ಭಗವಾನ್** = ಭಗವಂತನಾದ ಶ್ರೀಕೃಷ್ಣನು **ಆಹ** = ಹೇಳಿದ – **ತ್ವತ್ಕೀರ್ತ್ಯೈ** = ನಿನ್ನ ಕೀರ್ತಿಗಾಗಿ **ತ್ವಯಿ** = ನಿನ್ನಲ್ಲಿ **ಸಂಸ್ಥಿತಃ (ಸನ್)** = ನೆಲೆಸಿದವನಾಗಿ **ಅಖಿಲಾನ್** = ಎಲ್ಲ **ಧರ್ಮಾನ್** = ಧರ್ಮಗಳನ್ನು **ಸೂಕ್ಷ್ಮಂ ತತ್ತ್ವಂ ಅಪಿ** = ಸೂಕ್ಷ್ಮತತ್ತ್ವವನ್ನೂ ಸಹ **ಪ್ರವಕ್ಷ್ಯಾಮಿ** = ತಿಳಿಸುವೆ **ಇತಿ** = ಎಂದು. **ಹ** = ಆಶ್ಚರ್ಯ!

**ತಾತ್ಪರ್ಯ** :- ಆಗ ಕೃಷ್ಣ ನುಡಿದ 'ನಿನ್ನ ಕೀರ್ತಿಗಾಗಿ ನಿನ್ನೊಳಗೆ ನಾನೇ ಇದ್ದು ಎಲ್ಲ ಧರ್ಮಗಳನ್ನೂ, ಸೂಕ್ಷ್ಮ ತತ್ವವನ್ನೂ ಸಹ ತಿಳಿಸುವೆ'.

ರಾಜನ ಭಾಗವತಧರ್ಮ

**ರಾಜ್ಞಃ ಪ್ರಥಮತೋ ಧರ್ಮೋ ಭಗವದ್ಧರ್ಮಪಾಲನಮ್ ।**
**ತದರ್ಥಂ ಕಂಟಕೋದ್ಧಾರೋ ಧರ್ಮಾ ಭಾಗವತಾ ಅಪಿ ॥ ೧೭ ॥**

ರಾಜ್ಞಃ ಪ್ರಥಮತಃ ಧರ್ಮಃ ಭಗವದ್ಧರ್ಮಪಾಲನಮ್ । ತದರ್ಥಂ ಕಂಟಕೋದ್ಧಾರಃ ಧರ್ಮಾಃ ಭಾಗವತಾಃ ಅಪಿ ॥ ೧೭ ॥

**ಅರ್ಥ** :- **ಪ್ರಥಮತಃ** = ಮೊದಲಿಗೆ **ಭಗವದ್ಧರ್ಮಪಾಲನಂ** = ಭಾಗವತ ಧರ್ಮದ ಪಾಲನೆಯು **ರಾಜ್ಞಃ** = ರಾಜನ **ಧರ್ಮಃ** = ಧರ್ಮವು. **ತದರ್ಥಂ** = ಅದಕ್ಕೆಂದು **ಕಂಟಕೋದ್ಧಾರಃ** = (ಧರ್ಮ ನಿರ್ಬಂಧವನ್ನುಂಟು ಮಾಡುವ) ದುಷ್ಟರ ಸಂಹಾರವು (**ಧರ್ಮಃ**) = ಧರ್ಮವು. **ಭಾಗವತಾಃ** = ಭಗವಂತನಿಗೆ ಸಂಬಂಧಿಸಿದ **ಧರ್ಮಾಃ ಅಪಿ** = ಧರ್ಮಗಳೂ ಸಹ (**ರಾಜ್ಞಃ ಧರ್ಮಾಃ**) = ರಾಜನ ಧರ್ಮಗಳು.

**ತಾತ್ಪರ್ಯ** :- ಭಾಗವತಧರ್ಮವನ್ನು ಪಾಲಿಸುವುದು ರಾಜನಿಗೆ ವಿಹಿತವಾದ ಮುಖ್ಯಧರ್ಮ. ಅದಕ್ಕೆಂದು ದುಷ್ಟಸಂಹಾರವೂ ಧರ್ಮವೇ. ಭಗವಂತನಿಗೆ ಪ್ರಿಯವಾದ ಇತರ ಶಾಸ್ತ್ರೋಕ್ತ ಧರ್ಮಗಳೂ ವಿಹಿತ.

ಭಾಗವತಧರ್ಮಗಳ ಸಂಗ್ರಹ

**ಮನೋವಾಕ್ಕರ್ಮಭಿರ್ವಿಷ್ಣೋರಚ್ಛಿದ್ರತ್ವೇನ ಚಾರ್ಚನಮ್ ।**
**ಪೂರ್ಣಾಶೇಷಗುಣೋ ವಿಷ್ಣುಃ ಸ್ವತಂತ್ರಶ್ಚೈಕ ಏವ ತು ॥ ೧೮ ॥**

ಮನೋವಾಕ್ಕರ್ಮಭಿಃ ವಿಷ್ಣೋಃ ಅಚ್ಛಿದ್ರತ್ವೇನ ಚ ಅರ್ಚನಮ್ । ಪೂರ್ಣಾಶೇಷಗುಣಃ ವಿಷ್ಣುಃ ಸ್ವತಂತ್ರಃ ಚ ಏಕಃ ಏವ ತು ॥ ೧೮ ॥

**ಅರ್ಥ** :- **ಮನೋವಾಕ್ಕರ್ಮಭಿಃ** = ಮನಸ್ಸು ಮಾತು ಕರ್ಮಗಳಿಂದ **ವಿಷ್ಣೋಃ** = ವಿಷ್ಣುವಿನ **ಅಚ್ಛಿದ್ರತ್ವೇನ** = ಎಡೆಬಿಡದ **ಅರ್ಚನಂ ಚ** = ಪೂಜೆಯೂ ಸಹ **ಧರ್ಮಃ** = ಧರ್ಮವು. **ವಿಷ್ಣುಃ ತು** = ವಿಷ್ಣುವಾದರೋ

**ಏಕಃ ಏವ** = ಒಬ್ಬನೇ **ಪೂರ್ಣಾಶೇಷಗುಣಃ** = ಪೂರ್ಣವಾದ ಎಲ್ಲಾ ಗುಣವುಳ್ಳವನು, **ಸ್ವತಂತ್ರಃ ಚ** = ಸ್ವತಂತ್ರನೂ ಸಹ.

**ತದ್ವಶಂ ಸರ್ವಮನ್ಯಚ್ಚ ಸರ್ವದೇತಿ ವಿನಿಶ್ಚಯಃ ।**
**ದೇವತಾಕ್ರಮವಿಜ್ಞಾನಮಪೂಜಾಽನ್ಯಸ್ಯ ವೈ ಹರೇಃ ॥ ೧೯ ॥**

ತದ್ವಶಂ ಸರ್ವಂ ಅನ್ಯತ್ ಚ ಸರ್ವದಾ ಇತಿ ವಿನಿಶ್ಚಯಃ । ದೇವತಾಕ್ರಮವಿಜ್ಞಾನಂ ಅಪೂಜಾ ಅನ್ಯಸ್ಯ ವೈ ಹರೇಃ ॥ ೧೯ ॥

**ಅರ್ಥ :– ಅನ್ಯತ್ ಸರ್ವಂ ಚ** = ಬೇರೆ ಎಲ್ಲವೂ ಸಹ **ಸರ್ವದಾ** = ಯಾವಾಗಲೂ **ತದ್ವಶಂ** = ಅವನ ವಶವು **ಇತಿ ವಿನಿಶ್ಚಯಃ** = ಎಂದು ನಿರ್ಣಯವು. **ದೇವತಾಕ್ರಮವಿಜ್ಞಾನಂ** = ದೇವತೆಗಳ ತಾರತಮ್ಯದ ವಿಶೇಷಜ್ಞಾನ, **ಹರೇಃ** = ಶ್ರೀಹರಿಗಿಂತ **ಅನ್ಯಸ್ಯ** = ಬೇರೆ ದೇವತೆಯ **ಅಪೂಜಾ ವೈ** = (ಸರ್ವೋತ್ತಮಬುದ್ಧಿಯಿಂದ) ಪೂಜೆಯನ್ನು ಮಾಡದಿರುವುದು,

**ಪೂಜಾ ಭಾಗವತತ್ವೇನ ದೇವಾದೀನಾಂ ಚ ಸರ್ವಶಃ ।**
**ವೃಥಾ ಕರ್ಮಾಕೃತಿಃ ಕ್ವಾಪಿ ನಿರಾಶೀಸ್ತ್ವಂ ಸದೈವ ಚ ॥ ೨೦ ॥**

ಪೂಜಾ ಭಾಗವತತ್ವೇನ ದೇವಾದೀನಾಂ ಚ ಸರ್ವಶಃ । ವೃಥಾ ಕರ್ಮಾಕೃತಿಃ ಕ್ವ ಅಪಿ ನಿರಾಶೀಸ್ತ್ವಂ ಸದಾ ಏವ ಚ ॥ ೨೦ ॥

**ಅರ್ಥ :– ಭಾಗವತತ್ವೇನ** = ಭಗವಂತನ ಪರಿವಾರತ್ವದಿಂದ **ಸರ್ವಶಃ** = ಎಲ್ಲ **ದೇವಾದೀನಾಂ** = ದೇವಾದಿಗಳ (ದೇವ–ಋಷಿ ಮೊದಲಾದವರ) **ಪೂಜಾ ಚ** = ಪೂಜೆಯೂ ಸಹ **(ಧರ್ಮಃ)** = ಧರ್ಮವು. **ಕ್ವ ಅಪಿ** = ಎಲ್ಲಿಯೂ **ವೃಥಾ** = ವ್ಯರ್ಥವಾಗಿ **ಕರ್ಮ** = ಕರ್ಮವನ್ನು **ಅಕೃತಿಃ** = ಆಚರಿಸದಿರುವುದ್ **ಸದಾ ಏವ** = ಯಾವಾಗಲೂ **ನಿರಾಶೀಸ್ತ್ವಂ ಚ** = ಫಲೇಚ್ಛೆಯಿಲ್ಲದಿರುವುದೂ ಸಹ **(ಧರ್ಮಃ)** = ಧರ್ಮವು.

**ವಿಷ್ಣೋರ್ಭಾಗವತಾನಾಂ ಚ ಪ್ರತೀಪಸ್ಯಾಕೃತಿಃ ಸದಾ ।**
**ಪರಸ್ಪರವಿರೋಧೇ ತು ವಿಶಿಷ್ಟಸ್ಯಾನುಕೂಲತಾ ॥ ೨೧ ॥**

ವಿಷ್ಣೋಃ ಭಾಗವತಾನಾಂ ಚ ಪ್ರತೀಪಸ್ಯ ಅಕೃತಿಃ ಸದಾ । ಪರಸ್ಪರವಿರೋಧೇ ತು ವಿಶಿಷ್ಟಸ್ಯ ಅನುಕೂಲತಾ ॥ ೨೧ ॥

**ಅರ್ಥ** :- **ಸದಾ** = ಯಾವಾಗಲೂ **ವಿಷ್ಣೋಃ** = ವಿಷ್ಣುವಿನ **ಭಾಗವತಾನಾಂ ಚ** = ಹಾಗೂ ಭಗವದ್ಭಕ್ತರ **ಪ್ರತೀಪಸ್ಯ** = ವಿರೋಧದ **ಅಕೃತಿಃ** = ಮಾಡದಿರುವಿಕೆ, **ಪರಸ್ಪರವಿರೋಧೇ ತು** = (ಭಗವದ್ಭಕ್ತರಲ್ಲಿ) ಪರಸ್ಪರವಿರೋಧವಿದ್ದಾಗ **ವಿಶಿಷ್ಟಸ್ಯ** = ಶ್ರೇಷ್ಠರಾದವರ **ಅನುಕೂಲತಾ** = ಪಕ್ಷವಹಿಸುವುದು,

**ಪ್ರಿಯಂ ವಿಷ್ಣೋಸ್ತದೀಯಾನಾಮಪಿ ಸರ್ವಂ ಸಮಾಚರೇತ್ ।**
**ಧರ್ಮಮಪ್ಯಪ್ರಿಯಂ ತೇಷಾಂ ನೈವ ಕಿಂಚಿತ್ ಸಮಾಚರೇತ್ ॥ ೨೨ ॥**

**ಪ್ರಿಯಂ ವಿಷ್ಣೋಃ ತದೀಯಾನಾಂ ಅಪಿ ಸರ್ವಂ ಸಮಾಚರೇತ್ । ಧರ್ಮಂ ಅಪಿ ಅಪ್ರಿಯಂ ತೇಷಾಂ ನ ಏವ ಕಿಂಚಿತ್ ಸಮಾಚರೇತ್ ॥ ೨೨ ॥**

**ಅರ್ಥ** :- **ವಿಷ್ಣೋಃ** = ವಿಷ್ಣುವಿನ **ತದೀಯಾನಾಂ ಅಪಿ** = (ಹಾಗೂ) ಅವನಿಗೆ ಸಂಬಂಧಿಸಿದವರ (ಭಕ್ತರ) **ಪ್ರಿಯಂ (ಚೇತ್)** = ಪ್ರಿಯವೆಂದಾದರೆ **ಸರ್ವಂ** = ಎಲ್ಲವನ್ನೂ **ಸಮಾಚರೇತ್** = ಚೆನ್ನಾಗಿ ಆಚರಿಸಬೇಕು. **ಧರ್ಮಂ ಅಪಿ** = ಧರ್ಮದಂತೆ ತೋರುವುದನ್ನೂ ಸಹ **ತೇಷಾಂ** = ವಿಷ್ಣುಭಕ್ತರಿಗೆ **ಅಪ್ರಿಯಂ (ಚೇತ್)** = ಪ್ರಿಯವಲ್ಲದ್ದು ಎಂದಾದರೆ **ನ ಏವ ಸಮಾಚರೇತ್** = ಎಂದಿಗೂ ಆಚರಿಸಬಾರದು.

**ಸಾಮ್ಯೇ ವಿರೋಧೇ ಚ ಬಹೂನನುವರ್ತೇತ ವೈಷ್ಣವಾನ್ ।**
**ಏತೇ ಸಾಧಾರಣಾ ಧರ್ಮಾ ಜ್ಞೇಯಾ ಭಾಗವತಾ ಇತಿ ॥ ೨೩ ॥**

**ಸಾಮ್ಯೇ ವಿರೋಧೇ ಚ ಬಹೂನ್ ಅನುವರ್ತೇತ ವೈಷ್ಣವಾನ್ । ಏತೇ ಸಾಧಾರಣಾಃ ಧರ್ಮಾಃ ಜ್ಞೇಯಾಃ ಭಾಗವತಾಃ ಇತಿ ॥ ೨೩ ॥**

**ಅರ್ಥ** :- **ಸಾಮ್ಯೇ** = (ಉಭಯಪಕ್ಷದಲ್ಲೂ) ಸಾಮ್ಯವಿದ್ದಾಗ **ಚ** = ಮತ್ತು **ವಿರೋಧೇ (ಪ್ರಾಪ್ತೇ ಸತಿ)** = ವಿರೋಧವು ಉಂಟಾದಾಗಲೂ **ಬಹೂನ್ ವೈಷ್ಣವಾನ್** = ಬಹಳ ವೈಷ್ಣವರನ್ನು **ಅನುವರ್ತೇತ** = ಅನುಸರಿಸಬೇಕು. **ಏತೇ** = ಇವು **ಸಾಧಾರಣಾಃ** = ಸಾಧಾರಣವಾದ (ಎಲ್ಲರಿಗೂ ಸಮಾನವಾದ) **ಭಾಗವತಾಃ ಧರ್ಮಾಃ** = ಭಾಗವತಧರ್ಮಗಳು **ಇತಿ** = ಎಂದು **ಜ್ಞೇಯಾಃ** = ತಿಳಿಯಬೇಕು.

**ತಾತ್ಪರ್ಯ** :- ಮನಸ್ಸು, ಮಾತು ಮತ್ತು ಕೃತಿಗಳಿಂದ ಶ್ರೀಹರಿಯನ್ನು ನಿರಂತರ ಪೂಜಿಸುವುದು, ವಿಷ್ಣುವು ಪರಿಪೂರ್ಣವಾದ ಸಕಲಗುಣಗಳನ್ನೂ ಉಳ್ಳವನು, ಅವನೊಬ್ಬನೇ ಸ್ವತಂತ್ರ, ಉಳಿದೆಲ್ಲಾ ಅವನಿಗೆ ಸದಾ ಅಧೀನ ಎಂದು ನಿರ್ಣಯಿಸಿಕೊಳ್ಳುವುದು, ದೇವತಾತಾರತಮ್ಯಕ್ರಮದ ಪರಿಜ್ಞಾನ, ಶ್ರೀಹರಿಯ ಹೊರತು ಇತರರ ಪೂಜೆಯನ್ನು ಸರ್ವೋತ್ತಮತ್ವೇನ ಮಾಡದಿರುವುದು, ದೇವತೆಗಳು ಮೊದಲಾದವರನ್ನು ವಿಷ್ಣುಭಕ್ತರೆಂದು ಪೂಜಿಸುವುದು, ವ್ಯರ್ಥ ಕರ್ಮಗಳನ್ನು ಎಲ್ಲಿಯೂ ಮಾಡದಿರುವುದು, ಕರ್ಮಫಲದ ಆಸೆಯನ್ನು ಸದಾ ತೊರೆದಿರುವುದು, ಹರಿಗೂ, ಹರಿಭಕ್ತರಿಗೂ ಎಂದೂ ವಿರೋಧ ಮಾಡದಿರುವುದು, ಹರಿಭಕ್ತರಲ್ಲಿ ಪರಸ್ಪರ ವಿರೋಧ ಉಂಟಾದಾಗ ಶ್ರೇಷ್ಠರಾದವರಿಗೆ ಅನುಕೂಲವಾಗಿ ನಡೆದುಕೊಳ್ಳುವುದು, ವಿಷ್ಣುವಿಗೂ, ಅವನ ಭಕ್ತರಿಗೂ ಪ್ರಿಯವಾದ ಸರ್ವವನ್ನೂ ಚೆನ್ನಾಗಿ ತಪ್ಪದೇ ಆಚರಿಸುವುದು, ಅವರಿಗೆ ಅಪ್ರಿಯವಾದ ಕಾರ್ಯ ಧರ್ಮವೇ ಆಗಿದ್ದರೂ ಸರ್ವಥಾ ಆಚರಿಸದಿರುವುದು, ಎರಡು ಪಕ್ಷಗಳಲ್ಲಿ ಸಮನಾದ ವಿರೋಧವಿದ್ದಾಗ ಬಹು ವೈಷ್ಣವರನ್ನು ಅನುಸರಿಸುವುದು - ಇವೆಲ್ಲಾ ಸರ್ವರಿಗೂ ಸಮಾನವಾದ ಭಾಗವತಧರ್ಮಗಳು ಎಂದು ತಿಳಿಯಬೇಕು.

## ವಿಪ್ರಧರ್ಮ

**ತತ್ತ್ವವಿಜ್ಞಾಪನಂ ಧರ್ಮೋ ವಿಪ್ರಸ್ಯ ತು ವಿಶೇಷತಃ ।**
**ಶಾರೀರದಂಡಸಂತ್ಯಾಗಃ ಪುತ್ರಭಾರ್ಯಾದಿಕಾನೃತೇ ।**
**ತತ್ರಾಪಿ ನಾಂಗಹಾನಿಃ ಸ್ಯಾದ್ವೇದನಾ ವಾ ಚಿರಂ ನ ತು ॥ ೨೪ ॥**

ತತ್ತ್ವವಿಜ್ಞಾಪನಂ ಧರ್ಮಃ ವಿಪ್ರಸ್ಯ ತು ವಿಶೇಷತಃ । ಶಾರೀರದಂಡಸಂತ್ಯಾಗಃ ಪುತ್ರಭಾರ್ಯಾದಿಕಾನ್ ಋತೇ । ತತ್ರ ಅಪಿ ನ ಅಂಗಹಾನಿಃ ಸ್ಯಾತ್ ವೇದನಾ ವಾ ಚಿರಂ ನ ತು ॥ ೨೪ ॥

**ಅರ್ಥ** :- **ವಿಪ್ರಸ್ಯ ತು** = ಬ್ರಾಹ್ಮಣನದಾದರೋ **ತತ್ತ್ವವಿಜ್ಞಾಪನಂ** = ತತ್ತ್ವೋಪದೇಶವು **ವಿಶೇಷತಃ** = ವಿಶೇಷವಾಗಿ **ಧರ್ಮಃ** = ಧರ್ಮವು. **ಪುತ್ರಭಾರ್ಯಾದಿಕಾನ್ ಋತೇ** = ಮಕ್ಕಳು-ಹೆಂಡತಿ ಮೊದಲಾದವರನ್ನು ಬಿಟ್ಟು **ಶಾರೀರದಂಡಸಂತ್ಯಾಗಃ** = ಶರೀರದಂಡನೆಯನ್ನು ತ್ಯಜಿಸುವುದು (ಧರ್ಮ). **ತತ್ರ ಅಪಿ** = ಅಲ್ಲಿಯೂ (ಪತ್ನೀ-ಪುತ್ರಾದಿಗಳನ್ನು

ದಂಡಿಸುವಾಗಲೂ) **ಅಂಗಹಾನಿಃ** = ಅಂಗಹಾನಿಯು **ನ ಸ್ಯಾತ್** = ಆಗಬಾರದು. **ತು** = ವಿಶೇಷವಾಗಿ **ವೇದನಾ ವಾ** = ನೋವಾಗಲಿ **ಚಿರಂ** = ಬಹುಕಾಲದವರೆಗೂ **ನ ಸ್ಯಾತ್** = ಆಗಬಾರದು.

**ತಾತ್ಪರ್ಯ** :- ಬ್ರಾಹ್ಮಣನಿಗೆ ತತ್ತ್ವೋಪದೇಶ ವಿಶೇಷವಾದ ಧರ್ಮ. ಹೆಂಡತಿ ಮಕ್ಕಳನ್ನು ಹೊರತು ಇತರರ ಮೇಲೆ ಶರೀರದಂಡನೆಯನ್ನು ಮಾಡದಿರುವುದು ಧರ್ಮ. ಅವರಿಗೆ ಶರೀರದಂಡ ಮಾಡುವಾಗಲೂ ಅಂಗಹಾನಿಯಾಗಕೂಡದು. ಅಥವಾ ಬಹುಕಾಲದ ನೋವು ಉಂಟಾಗಬಾರದು.

### ಕ್ಷತ್ರಿಯಾದಿಗಳ ಧರ್ಮ

**ನ ಚಾರ್ಥದಂಡಃ ಕರ್ತವ್ಯೋ ವಿಪ್ರವೈಶ್ಯಾದಿಭಿಃ ಕ್ವಚಿತ್ ।**
**ಶಾರೀರದಂಡವಿಷಯೇ ವೈಶ್ಯಾದೀನಾಂ ಚ ವಿಪ್ರವತ್ ॥ ೨೫ ॥**

ನ ಚ ಅರ್ಥದಂಡಃ ಕರ್ತವ್ಯಃ ವಿಪ್ರವೈಶ್ಯಾದಿಭಿಃ ಕ್ವಚಿತ್ । ಶಾರೀರದಂಡವಿಷಯೇ ವೈಶ್ಯಾದೀನಾಂ ಚ ವಿಪ್ರವತ್ ॥ ೨೫ ॥

**ಅರ್ಥ** :- **ವಿಪ್ರವೈಶ್ಯಾದಿಭಿಃ** = ಬ್ರಾಹ್ಮಣ–ವೈಶ್ಯ ಮೊದಲಾದವರಿಂದ **ಅರ್ಥದಂಡಃ ಚ** = ಆರ್ಥಿಕ ದಂಡವು ಸಹ **ಕ್ವಚಿತ್** = ಎಲ್ಲೂ ನ **ಕರ್ತವ್ಯಃ** = ಕರ್ತವ್ಯವಲ್ಲ. **ಶಾರೀರದಂಡವಿಷಯೇ** = ಶರೀರದಂಡನೆಯ ವಿಷಯದಲ್ಲಿ **ವೈಶ್ಯಾದೀನಾಂ ಚ** = ವೈಶ್ಯ ಮೊದಲಾದವರಿಗೂ ಸಹ **ವಿಪ್ರವತ್** = ಬ್ರಾಹ್ಮಣರಂತೆ (**ಧರ್ಮಃ ಉಕ್ತಃ**) = ಧರ್ಮವು ಹೇಳಲ್ಪಟ್ಟಿದೆ.

**ತಾತ್ಪರ್ಯ** :- ಬ್ರಾಹ್ಮಣರು, ವೈಶ್ಯರು ಮೊದಲಾದವರು ಆರ್ಥಿಕ ದಂಡನೆಯನ್ನು ವಿಧಿಸಬಾರದು. ಶರೀರ ದಂಡನೆಯ ವಿಷಯದಲ್ಲಿ ವೈಶ್ಯರು ಮೊದಲಾದವರಿಗೆ ಬ್ರಾಹ್ಮಣರಿಗಿರುವ ನಿಯಮವೇ ಅನ್ವಯಿಸುವುದು.

**ಯಥಾಲಬ್ಧೇನ ವರ್ತೇತ ಭಿಕ್ಷಯಾ ವಾ ದ್ವಿಜೋತ್ತಮಃ ।**
**ಶಿಷ್ಯಯಾಜ್ಯೋಪಲಬ್ಧೈರ್ವಾ ಕ್ಷತ್ರಧರ್ಮೇಣ ವಾಽಽಪದಿ ।**
**ಮಹಾಪದಿ ವಿಶಾಂ ಧರ್ಮೈಃ ಕ್ಷತ್ರಿಯಃ ಸುರವಿಪ್ರಯೋಃ ॥ ೨೬ ॥**

ಯಥಾಲಬ್ಧೇನ ವರ್ತೇತ ಭಿಕ್ಷಯಾ ವಾ ದ್ವಿಜೋತ್ತಮಃ । ಶಿಷ್ಯಯಾಜ್ಯೋಪಲಬ್ಧೈಃ ವಾ ಕ್ಷತ್ರಧರ್ಮೇಣ ವಾ ಆಪದಿ । ಮಹಾಪದಿ ವಿಶಾಂ ಧರ್ಮೈಃ ಕ್ಷತ್ರಿಯಃ ಸುರವಿಪ್ರಯೋಃ ॥ ೨೬ ॥

**ಅನ್ಯತ್ರ ಸರ್ವವಿತ್ತೇನ ವರ್ತೇತೈತಾಂಶ್ಚ ಪಾಲಯನ್ ।**
**ವಿರೋಧಿನಃ ಕ್ಷತ್ರಿಯಾಚ್ಚ ಪ್ರಸಹ್ಯೈವ ಹರೇದ್ಧನಮ್ ॥ ೨೭ ॥**

ಅನ್ಯತ್ರ ಸರ್ವವಿತ್ತೇನ ವರ್ತೇತ ಏತಾನ್ ಚ ಪಾಲಯನ್ । ವಿರೋಧಿನಃ ಕ್ಷತ್ರಿಯಾತ್ ಚ ಪ್ರಸಹ್ಯ ಏವ ಹರೇತ್ ಧನಮ್ ॥ ೨೭ ॥

**ಅರ್ಥ** :- **ದ್ವಿಜೋತ್ತಮಃ** = ಬ್ರಾಹ್ಮಣೋತ್ತಮನು **ಯಥಾಲಬ್ಧೇನ** = ಪ್ರಯತ್ನವಿಲ್ಲದೆ ದೊರೆತ ದ್ರವ್ಯದಿಂದ **ಭಿಕ್ಷಯಾ ವಾ** = ಅಥವಾ ಭಿಕ್ಷೆಯಿಂದ **ವರ್ತೇತ** = ಬದುಕಬೇಕು. **(ಅನಾಪದಿ)** = ಆಪತ್ತು ಇಲ್ಲದಿದ್ದಾಗ **ಶಿಷ್ಯಯಾಜ್ಯೋಪಲಬ್ಧೈಃ ವಾ** = ಶಿಷ್ಯರ ಯಾಜನದಿಂದ ದೊರೆತ ದ್ರವ್ಯದಿಂದಲಾಗಲೀ **(ವರ್ತೇತ)** = ಬದುಕಬೇಕು. **ಆಪದಿ** = ಆಪತ್ತಿನಲ್ಲಿ **ಕ್ಷತ್ರಧರ್ಮೇಣ ವಾ** = ಕ್ಷತ್ರಿಯಧರ್ಮದಿಂದಲಾದರೂ **(ವರ್ತೇತ)** = ಬದುಕಬೇಕು. **ಮಹಾಪದಿ** = ದೊಡ್ಡ ಆಪತ್ತಿನಲ್ಲಿ **ವಿಶಾಂ** = ವೈಶ್ಯರ **ಧರ್ಮೈಃ** = ಧರ್ಮಗಳಿಂದ **(ವರ್ತೇತ)** = ಬದುಕಬೇಕು. **ಕ್ಷತ್ರಿಯಃ** = ಕ್ಷತ್ರಿಯನು **ಸುರವಿಪ್ರಯೋಃ ಅನ್ಯತ್ರ** = ದೇವತೆಗಳ, ಬ್ರಾಹ್ಮಣರ ಹೊರತು **ಸರ್ವವಿತ್ತೇನ** = ಇತರ ಎಲ್ಲ ದ್ರವ್ಯದಿಂದ **ಏತಾನ್ ಚ** = ಅವರನ್ನು ಸಹ **ಪಾಲಯನ್** = ಪಾಲಿಸುವವನಾಗಿ **ವರ್ತೇತ** = ಬದುಕಬೇಕು. **ವಿರೋಧಿನಃ** = ಸದ್ಧರ್ಮವಿರೋಧಿಗಳಿಂದ **ಕ್ಷತ್ರಿಯಾತ್** = ಕ್ಷತ್ರಿಯರಿಂದಲೂ **ಪ್ರಸಹ್ಯ ಏವ** = ಬಲಾತ್ಕಾರದಿಂದಲೇ **ಧನಂ** = ಹಣವನ್ನು **ಹರೇತ್** = ತೆಗೆದುಕೊಳ್ಳಬೇಕು.

**ತಾತ್ಪರ್ಯ** :- ವಿಪ್ರೋತ್ತಮನಾದವನು ಪ್ರಯತ್ನವಿಲ್ಲದೆ ತಾನಾಗಿ ದೊರೆಯುವ ದ್ರವ್ಯದಿಂದಾಗಲೀ, ಭಿಕ್ಷೆಯಿಂದಾಗಲೀ, ಶಿಷ್ಯರು ಬೇಡಿ ತಂದ ಪದಾರ್ಥದಿಂದಾಗಲೀ ಬದುಕಬೇಕು. ಆಪತ್ತಿನಲ್ಲಿ ಕ್ಷತ್ರಿಯಧರ್ಮದಿಂದಲೂ ಮಹಾಪತ್ತಿನಲ್ಲಿ ವೈಶ್ಯಧರ್ಮದಿಂದಲೂ ಬದುಕಬಹುದು. ಕ್ಷತ್ರಿಯನು ದೇವತೆಗಳ, ಬ್ರಾಹ್ಮಣರ ಹೊರತು ಇತರ ಎಲ್ಲರ ದ್ರವ್ಯದಿಂದ ಅವರನ್ನು

ಪಾಲಿಸುತ್ತಾ ಜೀವಿಸಬೇಕು. ವಿರೋಧಿಗಳಾದ ಕ್ಷತ್ರಿಯರಿಂದ ಬಲಾತ್ಕಾರದಿಂದ ಧನವನ್ನು ತೆಗೆದುಕೊಳ್ಳಬಹುದು.

**ಸಾಮಾದಿಕ್ರಮತೋ ಧರ್ಮಾನ್ ವರ್ತಯೇದ್ದಂಡತೋಽಂತತಃ ।**
**ಅಪಲಾಯೀ ಸದಾ ಯುದ್ಧೇ ಸತಾಂ ಕಾರ್ಯಮೃತೇ ಭವೇತ್ ॥ ೨೮ ॥**

ಸಾಮಾದಿಕ್ರಮತಃ ಧರ್ಮಾನ್ ವರ್ತಯೇತ್ ದಂಡತಃ ಅಂತತಃ । ಅಪಲಾಯೀ ಸದಾ ಯುದ್ಧೇ ಸತಾಂ ಕಾರ್ಯಂ ಋತೇ ಭವೇತ್ ॥ ೨೮ ॥

**ಅರ್ಥ** :- **ಸಾಮಾದಿಕ್ರಮತಃ** = ಸಾಮ ಮೊದಲಾದ ಕ್ರಮದಿಂದ **ಧರ್ಮಾನ್** = ಧರ್ಮಗಳನ್ನು **ವರ್ತಯೇತ್** = ರಕ್ಷಿಸಬೇಕು. **ಅಂತತಃ** = ಕೊನೆಯಲ್ಲಿ **ದಂಡತಃ** = ದಂಡದಿಂದ (**ಧರ್ಮಾನ್ ವರ್ತಯೇತ್**) = ಧರ್ಮಗಳನ್ನು ರಕ್ಷಿಸಬೇಕು. **ಸತಾಂ** ಸಜ್ಜನರ **ಕಾರ್ಯಂ** ಕಾರ್ಯವನ್ನು **ಋತೇ** ಹೊರತು **ಯುದ್ಧೇ** ಯುದ್ಧದಲ್ಲಿ **ಸದಾ** ಯಾವಾಗಲೂ **ಅಪಲಾಯೀ** ಪಲಾಯನ ಮಾಡದವನಾಗಿ **ಭವೇತ್** ಆಗಬೇಕು.

**ತಾತ್ಪರ್ಯ** :- ಸಾಮ, ದಾನಾದಿ ಕ್ರಮದಿಂದಲೇ ಧರ್ಮಗಳನ್ನು ಸಂರಕ್ಷಿಸಬೇಕು. ಕೊನೆಯಲ್ಲಿ ದಂಡದಿಂದಲೂ ಸಾಧಿಸಬಹುದು; ಸಜ್ಜನರ ಕಾರ್ಯಕ್ಕೆ ಹೊರತು ಯುದ್ಧದಲ್ಲಿ ಎಂದೂ ಪಲಾಯನ ಮಾಡಕೂಡದು.

ವೈಶ್ಯ ಶೂದ್ರರ ಧರ್ಮ

**ಕೃಷಿವಾಣಿಜ್ಯಗೋರಕ್ಷಾಕುಸೀದಂ ವೈಶ್ಯಜೀವನಮ್ ।**
**ಪರಿಚರ್ಯೈವ ಶೂದ್ರಸ್ಯ ವೃತ್ತಿರನ್ಯೇ ಸ್ವಪೂರ್ವವತ್ ॥ ೨೯ ॥**

ಕೃಷಿವಾಣಿಜ್ಯಗೋರಕ್ಷಾಕುಸೀದಂ ವೈಶ್ಯಜೀವನಮ್ । ಪರಿಚರ್ಯಾ ಏವ ಶೂದ್ರಸ್ಯ ವೃತ್ತಿಃ ಅನ್ಯೇ ಸ್ವಪೂರ್ವವತ್ ॥ ೨೯ ॥

**ಅರ್ಥ** :- **ಕೃಷಿವಾಣಿಜ್ಯಗೋರಕ್ಷಾಕುಸೀದಂ** = ಕೃಷಿ, ವ್ಯಾಪಾರ, ಗೋಸಂರಕ್ಷಣೆ, ಬಡ್ಡಿ ವ್ಯವಹಾರ **ವೈಶ್ಯಜೀವನಂ** = ವೈಶ್ಯರ ವೃತ್ತಿಗಳು. **ಪರಿಚರ್ಯಾ ಏವ** = ಸೇವೆಯೇ **ಶೂದ್ರಸ್ಯ** = ಶೂದ್ರನ **ವೃತ್ತಿಃ** = ವೃತ್ತಿ. **ಅನ್ಯೇ** = ಇತರರು **ಸ್ವಪೂರ್ವವತ್** = ತಮ್ಮ ಹಿಂದಿನವರಂತೆ (**ವರ್ತೇಯುಃ**) = ನಡೆಯಬೇಕು.

**ತಾತ್ಪರ್ಯ** :- ವ್ಯವಸಾಯ, ವ್ಯಾಪಾರ, ಗೋಸಂರಕ್ಷಣೆ, ಬಡ್ಡಿ ವ್ಯವಹಾರ ವೈಶ್ಯರ ವೃತ್ತಿಗಳು. ಶೂದ್ರನಿಗೆ ತ್ರೈವರ್ಣಿಕರ ಸೇವೆಯೇ ಮುಖ್ಯ ಕರ್ತವ್ಯ. ಇತರರು ತಮ್ಮ ಹಿಂದಿನವರು ನಡೆದಂತೆ ನಡೆಯಬೇಕು.

### ಹರಿಭಕ್ತಿಯೇ ಮುಖ್ಯ ಪೂಜಾರ್ಹತೆ

**ವರ್ತೇಯುರ್ಬ್ರಾಹ್ಮಣಾದ್ಯಾಶ್ಚ ಕ್ರಮಾತ್ ಪೂಜ್ಯಾ ಹರಿಪ್ರಿಯಾಃ ।**
**ಹರಿಭಕ್ತಾವನುಚ್ಚಸ್ತು ವರ್ಣೋಽಚ್ಚೋ ನಾತಿಪೂಜ್ಯತೇ ॥ ೩೦ ॥**

**ವರ್ತೇಯುಃ ಬ್ರಾಹ್ಮಣಾದ್ಯಾಃ ಚ ಕ್ರಮಾತ್ ಪೂಜ್ಯಾಃ ಹರಿಪ್ರಿಯಾಃ । ಹರಿಭಕ್ತೌ ಅನುಚ್ಚಃ ತು ವರ್ಣೋಽಚ್ಚಃ ನ ಅತಿಪೂಜ್ಯತೇ ॥ ೩೦ ॥**

**ಅರ್ಥ** :– **ಹರಿಪ್ರಿಯಾಃ** = ಹರಿಗೆ ಪ್ರಿಯರಾದ **ಬ್ರಾಹ್ಮಣಾದ್ಯಾಃ ಚ** = ಬ್ರಾಹ್ಮಣ ಮೊದಲಾದವರು ಸಹ **ಕ್ರಮಾತ್** = ವರ್ಣಕ್ರಮವಾಗಿ **ಪೂಜ್ಯಾಃ** = ಪೂಜ್ಯರು. **ಹರಿಭಕ್ತೌ** = ಹರಿಭಕ್ತಿಯಲ್ಲಿ **ಅನುಚ್ಚಃ** = ಶ್ರೇಷ್ಠನಲ್ಲದವನು **ವರ್ಣೋಽಚ್ಚಃ ತು** = ವರ್ಣದಲ್ಲಿ ಉತ್ತಮನಾಗಿದ್ದರೂ **ನ ಅತಿಪೂಜ್ಯತೇ** = ಹೆಚ್ಚಿನ ಆದರಕ್ಕೆ ಪಾತ್ರನಲ್ಲ.

**ತಾತ್ಪರ್ಯ** :- ಹರಿಭಕ್ತರಾದ ಬ್ರಾಹ್ಮಣರು ಮೊದಲಾದವರು ವರ್ಣಕ್ರಮದಲ್ಲಿ ಪೂಜ್ಯರು. ಹರಿಭಕ್ತಿಯಲ್ಲಿ ಉತ್ತಮನಾಗಿಲ್ಲದವನು ವರ್ಣದಿಂದ ಶ್ರೇಷ್ಠನಾದರೂ, ಹೆಚ್ಚಿನ ಆದರಕ್ಕೆ ಪಾತ್ರನಾಗಲಾರ.

### ಹರಿಭಕ್ತನಾದ ವರ್ಣಹೀನನೂ ಪೂಜ್ಯ

**ವಿನಾ ಪ್ರಣಾಮಂ ಪೂಜ್ಯಸ್ತು ವರ್ಣಹೀನೋ ಹರಿಪ್ರಿಯಃ ।**
**ಆದರಸ್ತತ್ರ ಕರ್ತವ್ಯೋ ಯತ್ರ ಭಕ್ತಿರ್ಹರೇರ್ವರಾ ॥ ೩೧ ॥**

**ವಿನಾ ಪ್ರಣಾಮಂ ಪೂಜ್ಯಃ ತು ವರ್ಣಹೀನಃ ಹರಿಪ್ರಿಯಃ । ಆದರಃ ತತ್ರ ಕರ್ತವ್ಯಃ ಯತ್ರ ಭಕ್ತಿಃ ಹರೇಃ ವರಾ ॥ ೩೧ ॥**

**ಅರ್ಥ** :– **ವರ್ಣಹೀನಃ** = ವರ್ಣದಲ್ಲಿ ಕಡಿಮೆಯಾದ **ಹರಿಪ್ರಿಯಃ ತು** = ಹರಿಭಕ್ತನಾದರೋ **ಪ್ರಣಾಮಂ ವಿನಾ** = ನಮಸ್ಕಾರವನ್ನು ಹೊರತುಪಡಿಸಿ **ಪೂಜ್ಯಃ** = ಪೂಜ್ಯನಾಗಿರುವನು. **ಯತ್ರ** = ಎಲ್ಲಿ

**ಹರೇಃ** = ಶ್ರೀಹರಿಯ **ಭಕ್ತಿಃ** = ಭಕ್ತಿಯು **ವರಾ** = ಉತ್ತಮವಾಗಿರುವುದೋ **ತತ್ರ** = ಅಲ್ಲಿ **ಆದರಃ** = ಆದರವು **ಕರ್ತವ್ಯಃ** = ಮಾಡಲ್ಪಡಬೇಕು.

**ತಾತ್ಪರ್ಯ** :- ವರ್ಣದಲ್ಲಿ ಕಡಿಮೆಯಾದವನು, ಹರಿಭಕ್ತನಾಗಿದ್ದಲ್ಲಿ ಅವನನ್ನು ಪ್ರಣಾಮವನ್ನು ಹೊರತು ಬೇರೆ ಬಗೆಗಳಿಂದ ಪೂಜಿಸಲೇ ಬೇಕು. ಎಲ್ಲಿ ಉತ್ತಮವಾದ ಹರಿಭಕ್ತಿಯಿರುವುದೋ ಅಲ್ಲಿ ಆದರವನ್ನು ಮಾಡಲೇಬೇಕು.

### ಉಪದೇಶದ ಅರ್ಹತೆ

**ಜ್ಞಾಪನಂ ಕ್ಷತ್ರಿಯಾಣಾಂ ಚ ಧರ್ಮೋ ವಿಪ್ರಾಭ್ಯನುಜ್ಞಯಾ ।**
**ತದಭಾವೇ ತು ವೈಶ್ಯಾನಾಂ ಶೂದ್ರಸ್ಯ ಪರಮಾಪದಿ ॥ ೩೨ ॥**

ಜ್ಞಾಪನಂ ಕ್ಷತ್ರಿಯಾಣಾಂ ಚ ಧರ್ಮಃ ವಿಪ್ರಾಭ್ಯನುಜ್ಞಯಾ । ತದಭಾವೇ ತು ವೈಶ್ಯಾನಾಂ ಶೂದ್ರಸ್ಯ ಪರಮಾಪದಿ ॥ ೩೨ ॥

**ಅರ್ಥ** :- **ವಿಪ್ರಾಭ್ಯನುಜ್ಞಯಾ** = ಬ್ರಾಹ್ಮಣನ ಅನುಮತಿಯಿಂದಲೇ **ಜ್ಞಾಪನಂ ಚ** = ತತ್ತ್ವೋಪದೇಶವೂ ಸಹ **ಕ್ಷತ್ರಿಯಾಣಾಂ** = ಕ್ಷತ್ರಿಯರ **ಧರ್ಮಃ** = ಧರ್ಮವು. **ತದಭಾವೇ ತು** = ಅವರಿಲ್ಲವಾದರೆ **ವೈಶ್ಯಾನಾಂ** = ವೈಶ್ಯರದು **ಜ್ಞಾಪನಂ** = ಉಪದೇಶವು **ಧರ್ಮಃ** = ಧರ್ಮವು. **ಪರಮಾಪದಿ** = ಮಹಾ ಆಪತ್ತಿನಲ್ಲಿ **ಶೂದ್ರಸ್ಯ** = ಶೂದ್ರನಿಗೂ **ಜ್ಞಾಪನಂ** = ಉಪದೇಶವು **ಧರ್ಮಃ** = ಧರ್ಮವು.

**ತಾತ್ಪರ್ಯ** :- ಜ್ಞಾನಿಯಾದ ಬ್ರಾಹ್ಮಣ ದೊರೆಯದಿದ್ದಾಗ ಬ್ರಾಹ್ಮಣನ ಅನುಮತಿಯನ್ನು ಪಡೆದು ಕ್ಷತ್ರಿಯರೂ ಜ್ಞಾನೋಪದೇಶ ಮಾಡಬಹುದು. ಕ್ಷತ್ರಿಯರೂ ಇಲ್ಲವಾದಾಗ ವೈಶ್ಯರು, ಅವರೂ ಇಲ್ಲದ ಪರಮಾಪತ್ತಿನ ಪ್ರಸಂಗದಲ್ಲಿ ಶೂದ್ರರೂ ಉಪದೇಶ ನೀಡಬಹುದು.

### ವರ್ಣಾವರನಿಗೆ ಉಪದೇಶದ ಪ್ರಸಕ್ತಿ ಬರದು

**ವರ್ಣೇಷ್ವಜ್ಞೇಷ್ವವರ್ಣಸ್ತು ನ ಜ್ಞಾನೀ ಸ್ಯಾತ್ ಕಥಂಚನ ।**
**ಇತಿ ಶ್ರುತೇರವರ್ಣಸ್ಯ ಜ್ಞಾಪನಪ್ರಾಪ್ತಿರೇವ ನ ॥ ೩೩ ॥**

**ವರ್ಣೇಷು ಅಜ್ಞೇಷು ಅವರ್ಣಃ ತು ನ ಜ್ಞಾನೀ ಸ್ಯಾತ್ ಕಥಂಚನ । ಇತಿ ಶ್ರುತೇಃ ಅವರ್ಣಸ್ಯ ಜ್ಞಾಪನಪ್ರಾಪ್ತಿಃ ಏವ ನ ॥ ೩೩ ॥**

**ಅರ್ಥ** :- **ವರ್ಣೇಷು** = ನಾಲ್ಕುವರ್ಣದವರಲ್ಲಿ **ಅಜ್ಞೇಷು** (ಸತ್ಸು) = ಅಜ್ಞಾನಿಗಳೇ ಇರಲು (ಉಪದೇಶ ಮಾಡುವವರು ಇಲ್ಲದಿರಲು) **ಅವರ್ಣಃ ತು** = ವರ್ಣಬಾಹ್ಯನಾದರೋ **ಕಥಂಚನ** = ಎಂದಿಗೂ **ಜ್ಞಾನೀ** = ಜ್ಞಾನಿಯು **ನ ಸ್ಯಾತ್** = ಆಗಲಾರನು. **ಇತಿ** = ಎಂದು **ಶ್ರುತೇಃ** = ಶ್ರುತಿ ಇರುವುದರಿಂದ **ಅವರ್ಣಸ್ಯ** = ವರ್ಣಬಾಹ್ಯನಿಗೆ **ಜ್ಞಾಪನಪ್ರಾಪ್ತಿಃ** = ಉಪದೇಶದ ಪ್ರಸಕ್ತಿಯು **ನ ಏವ** = ಇಲ್ಲ.

**ತಾತ್ಪರ್ಯ** :- ನಾಲ್ಕುವರ್ಣದವರೂ ಜ್ಞಾನಶೂನ್ಯರಾದಾಗ ವರ್ಣಬಾಹ್ಯನು ಸರ್ವಥಾ ಜ್ಞಾನಿಯಾಗಲು ಅಸಾಧ್ಯ ಎಂದು ಶ್ರುತಿಯಿರುವುದರಿಂದ ವರ್ಣಬಾಹ್ಯನಿಗೆ ಉಪದೇಶಕನಾಗುವ ಪ್ರಸಕ್ತಿಯೇ ಇಲ್ಲ.

### ಸ್ತ್ರೀ ಪುರುಷರ ವಿಶೇಷ ಧರ್ಮಗಳು

**ಜ್ಞೇಯಂ ಸರ್ವಂ ತ್ರಿವರ್ಣಸ್ಥೈಃ ಸ್ತ್ರೀಭಿರ್ವೇದಾನ್ ವಿನಾಽಖಿಲಮ್ ।**
**ಸ್ವೀಯಪುನ್ನಿಯತಿಃ ಸ್ತ್ರೀಣಾಂ ಸ್ವದಾರನಿಯತಿರ್ನೃಣಾಮ್ ॥ ೩೪ ॥**

**ಜ್ಞೇಯಂ** ಸರ್ವಂ **ತ್ರಿವರ್ಣಸ್ಥೈಃ ಸ್ತ್ರೀಭಿಃ ವೇದಾನ್ ವಿನಾ ಅಖಿಲಮ್ ।**
**ಸ್ವೀಯಪುನ್ನಿಯತಿಃ ಸ್ತ್ರೀಣಾಂ ಸ್ವದಾರನಿಯತಿಃ ನೃಣಾಮ್ ॥ ೩೪ ॥**

**ಅರ್ಥ** :- **ತ್ರಿವರ್ಣಸ್ಥೈಃ** = ಮೂರು ವರ್ಣದವರಿಂದ (ಪುರುಷರಿಂದ) **ಸರ್ವಂ** = (ವೇದತಂತ್ರೋಕ್ತವಾದ) ಎಲ್ಲವೂ **ಜ್ಞೇಯಂ** = ತಿಳಿಯಲ್ಪಡಬೇಕು. **ಸ್ತ್ರೀಭಿಃ** = ಸ್ತ್ರೀಯರಿಂದ (ಮೂರುವರ್ಣದ ಸ್ತ್ರೀಯರಿಂದ) **ವೇದಾನ್ ವಿನಾ** = ವೇದಗಳನ್ನು ಹೊರತುಪಡಿಸಿ **ಅಖಿಲಂ** = ಎಲ್ಲವೂ **ಜ್ಞೇಯಮ್** = ತಿಳಿಯಲ್ಪಡಬೇಕು. **ಸ್ತ್ರೀಣಾಂ** = ಸ್ತ್ರೀಯರದು **ಸ್ವೀಯಪುನ್ನಿಯತಿಃ** = ತಮ್ಮ ಪುರುಷರಿಗೆ ನಿಷ್ಠರಾಗಿರುವುದು **ಧರ್ಮಃ** = ಧರ್ಮವು. **ನೃಣಾಂ** = ಪುರುಷರಿಗೆ **ಸ್ವದಾರನಿಯತಿಃ** = ತಮ್ಮ ಪತ್ನಿಯರಿಗೆ ನಿಷ್ಠರಾಗಿರುವುದು **ಧರ್ಮಃ** = ಧರ್ಮವು.

**ಧರ್ಮೋ ಗುಣೋತ್ತಮಾನಾಂ ತು ಸ್ಮೃತ್ಯೈವಾಂಧಂ ತಮೋ ವ್ರಜೇತ್ ।**
**ಗುಣಸರ್ವಸ್ವಹಾನಿಃ ಸ್ಯಾದುತ್ತರೋತ್ತರತೋಽತ್ರ ಚ ।**
**ಅಧೋಽಧೋಽಧಿಕದೋಷಃ ಸ್ಯಾತ್ ಸ್ತ್ರೀಣಾಮನ್ಯತ್ರ ಮಧ್ಯತಃ ॥ ೩೫ ॥**

ಧರ್ಮಃ ಗುಣೋತ್ತಮಾನಾಂ ತು ಸ್ಮೃತ್ಯಾ ಏವ ಅಂಧಂ ತಮಃ ವ್ರಜೇತ್ । ಗುಣಸರ್ವಸ್ವಹಾನಿಃ ಸ್ಯಾತ್ ಉತ್ತರೋತ್ತರತಃ ಅತ್ರ ಚ । ಅಧೋಽಧಃ ಅಧಿಕದೋಷಃ ಸ್ಯಾತ್ ಸ್ತ್ರೀಣಾಂ ಅನ್ಯತ್ರ ಮಧ್ಯತಃ ॥ ೩೫ ॥

**ಅರ್ಥ** :- **ಗುಣೋತ್ತಮಾನಾಂ** = ಗುಣದಲ್ಲಿ ಉತ್ತಮರಾದವರ **ಸ್ಮೃತ್ಯಾ ಏವ ತು** = ಸ್ಮರಣೆಯಿಂದಲೇ **ಅಂಧಂತಮಃ** = ಅಂಧಂತಮಸ್ಸನ್ನು **ವ್ರಜೇತ್** = ಸೇರುವನು. **ಅತ್ರ** = ಈ ವಿಚಾರದಲ್ಲಿ **ಉತ್ತರೋತ್ತರತಃ** = ಹೆಚ್ಚು ಹೆಚ್ಚು ಉತ್ತಮರಾದ ಸ್ತ್ರೀಯರನ್ನು ಬಯಸುವುದು **ಗುಣ ಸರ್ವಸ್ವಹಾನಿಃ ಚ** = ಎಲ್ಲ ಗುಣಗಳ ವಿನಾಶವೂ **ಸ್ಯಾತ್** = ಆಗುವುದು. **ಸ್ತ್ರೀಣಾಂ** = ಸ್ತ್ರೀಯರಿಗೆ **ಅನ್ಯತ್ರ** = ತಮ್ಮ ನಿಯತಿಪತಿಗಿಂತ ಬೇರೆಯವರಲ್ಲಿ **ಮಧ್ಯತಃ** = ತಮ್ಮ ಪತಿಗೆ ಸಮಾನರಾದವರಿಂದ **ಅಧಃ ಅಧಃ** = ಕೇಳಗಿನವರ ಗಮನವು **ಅಧಿಕದೋಷಃ** = ಹೆಚ್ಚಿನ ದೋಷವು **ಸ್ಯಾತ್** = ಆಗುವುದು.

**ತಾತ್ಪರ್ಯ** :- ತ್ರೈವರ್ಣಿಕ ಸ್ತ್ರೀಯರು ವೇದಗಳ ಹೊರತು ಉಳಿದೆಲ್ಲ ವಿದ್ಯೆಗಳನ್ನೂ ತಿಳಿಯಲೇಬೇಕು. ಸ್ತ್ರೀಯರು ತಮ್ಮ ಪುರುಷರಿಗೆ ನಿಷ್ಠ ರಾಗಿರುವುದು, ಪುರುಷರು ತಮ್ಮ ಪತ್ನಿಗೆ ನಿಷ್ಠರಾಗಿರುವುದು ಕರ್ತವ್ಯ. ಗುಣದಲ್ಲಿ ತನಗಿಂತ ಉತ್ತಮರಾದವರ ಸ್ತ್ರೀಯರನ್ನು ಸೇರುವ ಆಲೋಚನೆಯೂ ಸಹ ತಮಸ್ಸಿಗೆ ಸಾಧನ. ಹೆಚ್ಚು ಹೆಚ್ಚು ಉತ್ತಮರಾದ ಪುರುಷರ ಸ್ತ್ರೀಯರನ್ನು ಬಯಸುವುದು ಸಕಲ ಗುಣಗಳ ವಿನಾಶಕ್ಕೆ ಕಾರಣ. ಸ್ತ್ರೀಯರಿಗೆ ತಮ್ಮ ಪತಿಗಳಿಗಿಂತ ಕಡಿಮೆಯವರಾದ ಪುರುಷರ ಸಂಪರ್ಕ ಹೆಚ್ಚಿನ ದೋಷಕ್ಕೆ ಕಾರಣ. ಇತರರನ್ನು ಬಯಸಿದಾಗಲೂ ದೋಷವೇ.

**ವೇದಾ ಅಪ್ಯುತ್ತಮಸ್ತ್ರೀಭಿಃ ಕೃಷ್ಣಾದ್ಯಾಭಿರಿವಾಖಿಲಾಃ ।**
**ದೇವ್ಯೋ ಮುನಿಸ್ತ್ರಿಯಶ್ಚೈವ ನರಾದಿಕುಲಜಾ ಅಪಿ ॥ ೩೬ ॥**

ವೇದಾಃ ಅಪಿ ಉತ್ತಮಸ್ತ್ರೀಭಿಃ ಕೃಷ್ಣಾದ್ಯಾಭಿಃ ಇವ ಅಖಿಲಾಃ । ದೇವ್ಯಃ ಮುನಿಸ್ತ್ರಿಯಃ ಚ ಏವ ನರಾದಿಕುಲಜಾಃ ಅಪಿ ॥ ೩೬ ॥

**ಉತ್ತಮಾ ಇತಿ ವಿಜ್ಞೇಯಾಃ ಸಚ್ಛೂದ್ರೈರಪ್ಯವೈದಿಕಮ್ ।**
**ಜ್ಞೇಯಮನ್ಯೈರ್ಹರೇರ್ನಾಮ ನಿಜಕರ್ತವ್ಯಮೇವ ಚ ॥ ೩೭ ॥**

**ಉತ್ತಮಾಃ ಇತಿ ವಿಜ್ಞೇಯಾಃ ಸಚ್ಛೂದ್ರೈಃ ಅಪಿ ಅವೈದಿಕಮ್ । ಜ್ಞೇಯಂ ಅನ್ಯೈಃ ಹರೇಃ ನಾಮ ನಿಜಕರ್ತವ್ಯಂ ಏವ ಚ ॥ ೩೭ ॥**

**ಅರ್ಥ** :- **ಉತ್ತಮಸ್ತ್ರೀಭಿಃ** = ಉತ್ತಮಸ್ತ್ರೀಯರಿಂದ **ಅಖಿಲಾಃ** = ಎಲ್ಲ **ವೇದಾಃ ಅಪಿ** = ವೇದಗಳೂ **ಜ್ಞಾತವ್ಯಾಃ** = ತಿಳಿಯಲ್ಪಡಬೇಕು. **ಕೃಷ್ಣಾದ್ಯಾಭಿಃ ಇವ** = ದ್ರೌಪದೀ ಮೊದಲಾದವರಿಂದ (ಅಧ್ಯಯನ) ಮಾಡಲ್ಪಟ್ಟಂತೆ **(ಯಥಾ)** = ಹೇಗೋ **(ತಥಾ)** = ಹಾಗೆ. **ದೇವ್ಯಃ** = ದೇವತಾಸ್ತ್ರೀಯರು **ಮುನಿಸ್ತ್ರಿಯಃ ಚ** = ಋಷಿಪತ್ನಿಯರು ಸಹ **ನರಾದಿಕುಲಜಾಃ ಅಪಿ** = ಮನುಷ್ಯಾದಿ ಯೋನಿಯಲ್ಲಿ ಹುಟ್ಟಿದ್ದರೂ ಸಹ **ಉತ್ತಮಾಃ** = ಉತ್ತಮರು **ಇತಿ** = ಎಂದು **ವಿಜ್ಞೇಯಾಃ** = ತಿಳಿಯಲ್ಪಡಬೇಕು.

**ಸಚ್ಛೂದ್ರೈಃ ಅಪಿ** = ಉತ್ತಮಶೂದ್ರರಿಂದಲೂ ಸಹ **ಅವೈದಿಕಂ** = ವೇದ ಹೊರತಾದ ಗ್ರಂಥಗಳು **ಜ್ಞೇಯಂ** = ತಿಳಿಯಲ್ಪಡಬೇಕು. **ಅನ್ಯೈಃ** = ಅನ್ಯರಿಂದ (ವರ್ಣಬಾಹ್ಯರಿಂದ) **ಹರೇಃ** = ಶ್ರೀಹರಿಯ **ನಾಮ** = ನಾಮವು **ನಿಜಕರ್ತವ್ಯಂ ಏವ** = ತಮ್ಮ ಕರ್ತವ್ಯವೇ ಆಗಿದೆ.

**ತಾತ್ಪರ್ಯ** :- ಉತ್ತಮಸ್ತ್ರೀಯರು ದ್ರೌಪದಿ ಮೊದಲಾದವರಂತೆ ಸಕಲವೇದಗಳನ್ನು ಸಹ ಅಧ್ಯಯನ ಮಾಡಲೇಬೇಕು. ದೇವತಾಸ್ತ್ರೀಯರು, ಋಷಿಪತ್ನಿಯರು, ಮನುಷ್ಯಾದಿ ಯೋನಿಯಲ್ಲಿ ಅವತರಿಸಿದ್ದರೂ ಉತ್ತಮರೆಂದೇ ತಿಳಿಯಬೇಕು. ಉತ್ತಮ ಶೂದ್ರರೂ ಸಹ ವೇದಗಳ ಹೊರತು ಇತರ ಗ್ರಂಥಗಳನ್ನು ಕೇಳಿ ತಿಳಿಯಬೇಕು. ಇತರರಿಗೆಲ್ಲ ಹರಿಯ ನಾಮವು ತಮ್ಮ ಕರ್ತವ್ಯವೇ ಆಗಿದೆ.

### ತಮಃ ಸಾಧನಗಳು

**ಸರ್ವಥಾಽಂಧಂ ತಮೋ ಯಾತಿ ವರಂ ಸದೃಶಮೇವ ವಾ ।**
**ಯೋ ವಿಷ್ಣೋರ್ಮನ್ಯತೇ ಕಿಂಚಿದ್ಗುಣೈಃ ಕೈಶ್ಚಿದಪಿ ಕ್ವಚಿತ್ ॥ ೩೮ ॥**

ಸರ್ವಥಾ ಅಂಧಂ ತಮಃ ಯಾತಿ ವರಂ ಸದೃಶಂ ಏವ ವಾ । ಯಃ ವಿಷ್ಣೋಃ ಮನ್ಯತೇ ಕಿಂಚಿತ್ ಗುಣೈಃ ಕೈಶ್ಚಿತ್ ಅಪಿ ಕ್ವಚಿತ್ ॥ ೩೮ ॥

ಬ್ರಹ್ಮೇಶಾನಾದಿಕಮಪಿ ಭೇದಂ ಯೋ ವಾ ನ ಮನ್ಯತೇ ।
ಭೇದದೃಕ್ ತದ್ಗುಣಾದೌ ಚ ಪ್ರಾದುರ್ಭಾವಗತೇಽಪಿ ಯಃ ॥ ೩೯ ॥

ಬ್ರಹ್ಮೇಶಾನಾದಿಕಂ ಅಪಿ ಭೇದಂ ಯಃ ವಾ ನ ಮನ್ಯತೇ । ಭೇದದೃಕ್ ತದ್ಗುಣಾದೌ ಚ ಪ್ರಾದುರ್ಭಾವಗತೇ ಅಪಿ ಯಃ ॥ ೩೯ ॥

ಪ್ರಾಕೃತಂ ದೇಹಮಥವಾ ದುಃಖಾಜ್ಞಾನಶ್ರಮಾದಿಕಮ್ ।
ಮನ್ಯತೇ ತಾರತಮ್ಯಂ ವಾ ತದ್ಭಕ್ತೇಷ್ವನ್ಯಥೈವ ಯಃ ॥ ೪೦ ॥

ಪ್ರಾಕೃತಂ ದೇಹಂ ಅಥವಾ ದುಃಖಾಜ್ಞಾನಶ್ರಮಾದಿಕಮ್ । ಮನ್ಯತೇ ತಾರತಮ್ಯಂ ವಾ ತದ್ಭಕ್ತೇಷು ಅನ್ಯಥಾ ಏವ ಯಃ ॥ ೪೦ ॥

**ಅರ್ಥ** :- **ಬ್ರಹ್ಮೇಶಾನಾದಿಕಂ** = ಬ್ರಹ್ಮ-ರುದ್ರಾದಿಗಳನ್ನು **ಕಶ್ಚಿತ್ ಗುಣೈಃ ಅಪಿ** = ಕೆಲವೇ ಗುಣಗಳಿಂದಲೂ, **ಕ್ವಚಿತ್** = ಯಾವುದೋ ಸ್ಥಳದಲ್ಲಾಗಲೀ **ವಿಷ್ಣೋಃ (ಸಕಾಶಾತ್)** = ವಿಷ್ಣುವಿಗಿಂತ **ಕಿಂಚಿತ್** = ಸ್ವಲ್ಪ **ವರಂ** = ಶ್ರೇಷ್ಠ **ಸದೃಶಂ ವಾ** = ಅಥವಾ ಸಮ ಎಂದೋ **ಯಃ** = ಯಾವನು **ಮನ್ಯತೇ** = ತಿಳಿಯುವನೋ, **(ಸಃ)** = ಅವನು **ಸರ್ವಥಾ** = ನಿಶ್ಚಯವಾಗಿಯೂ **ಅಂಧಂತಮಃ** = ಅಂಧಂತಮಸ್ಸನ್ನು (ಕುರಿತು)

**ಯಾತಿ ಏವ** = ಹೋಗಿಯೇ ಬಿಡುವನು. **ಯಃ ವಾ** = ಅಥವಾ ಯಾವನು **ಬ್ರಹ್ಮೇಶಾನಾದಿಕಂ ಅಪಿ** = ಬ್ರಹ್ಮ-ರುದ್ರ ಮೊದಲಾದವರಲ್ಲಿ ಸಹ **ಭೇದಂ** = ಭೇದವನ್ನು **ನ ಮನ್ಯತೇ** = ತಿಳಿಯುವುದಿಲ್ಲವೋ **(ಸಃ ಅಂಧಂತಮಃ ಯಾತಿ)** = ಅವನು ಅಂಧಂತಮಸ್ಸನ್ನು ಕುರಿತು ಹೋಗುವನು). **ಯಃ** = ಯಾವನು **ತದ್ಗುಣಾದೌ** = ಶ್ರೀಹರಿಯ ಗುಣ ಮೊದಲಾದವುಗಳಲ್ಲಿ **ಭೇದದೃಕ್** = ಭೇದವನ್ನು ಕಾಣುವನೋ **(ಸಃ ಅಂಧಂತಮಃ ಯಾತಿ)** = ಅವನು ಅಂಧಂತಮಸ್ಸನ್ನು ಕುರಿತು ಹೋಗುವನು). **(ಯಃ)** = ಯಾವನು **ಪ್ರಾದುರ್ಭಾವಗತೇ (ಹರೌ) ಅಪಿ** = ಪ್ರಾದುರ್ಭಾವವನ್ನು ಹೊಂದಿದ ಹರಿಯಲ್ಲಿ ಸಹ **ಪ್ರಾಕೃತಂ**

**ದೇಹಂ** = ಪ್ರಾಕೃತ ದೇಹವನ್ನು **ಅಥವಾ** = ಅಥವಾ **ದುಃಖಾಜ್ಞಾನ ಶ್ರಮಾದಿಕಂ** = ದುಃಖ-ಅಜ್ಞಾನ-ಶ್ರಮ ಮೊದಲಾದವುಗಳನ್ನು **ಮನ್ಯತೇ** = ತಿಳಿಯುವನೋ, (**ಸಃ ಅಂಧಂತಮಃ ಯಾತಿ**) = ಅವನು ಅಂಧಂತಮಸ್ಸನ್ನು ಕುರಿತು ಹೋಗುವನು). (**ಯಃ**) = ಯಾವನು **ಪ್ರಾದುರ್ಭಾವಗತೇ (ಹರೌ)** = ಪ್ರಾದುರ್ಭಾವಗೊಂಡ ಹರಿಯ ರೂಪಗಳಲ್ಲಿ **ತಾರತಮ್ಯಂ ವಾ** = ತಾರತಮ್ಯವನ್ನಾದರೋ **ಮನ್ಯತೇ** = ತಿಳಿಯುವನೋ, (**ಸಃ ಅಂಧಂತಮಃ ಯಾತಿ**) = ಅವನು ಅಂಧಂತಮಸ್ಸನ್ನು ಕುರಿತು ಹೋಗುವನು). **ಯಃ** = ಯಾವನು **ತದ್ಭಕ್ತೇಷು** = ಶ್ರೀಹರಿಯ ಭಕ್ತರಲ್ಲಿ **ಅನ್ಯಥಾ ಏವ** = (ತಾರತಮ್ಯವನ್ನು) ತಪ್ಪಾಗಿ **ಮನ್ಯತೇ** = ತಿಳಿಯುವನೋ, (**ಸಃ ಅಂಧಂತಮಃ ಯಾತಿ**) = ಅವನು ಅಂಧಂತಮಸ್ಸನ್ನು ಕುರಿತು ಹೋಗುವನು).

**ತಾತ್ಪರ್ಯ** :- ವಿಷ್ಣುವಿಗಿಂತ ಮಿಗಿಲಾದವನಾಗಲೀ, ಅವನಂಥವನಾಗಲೀ ಇರುವನು ಎಂದು ತಿಳಿದವನು ಅಂಧಂತಮಸ್ಸಿಗೆ ತೆರಳುವುದು ನಿಶ್ಚಿತ. ಬ್ರಹ್ಮ, ರುದ್ರಾದಿಗಳನ್ನು ಕೆಲವು ಗುಣಗಳಿಂದಾಗಿ ಸ್ವಲ್ಪವೇ ಸಮರೆಂದು ತಿಳಿದರೂ, ವಿಷ್ಣುವಿನೊಂದಿಗೆ ಅವರಿಗೆ ಭೇದವನ್ನು ತಿಳಿಯದಿದ್ದರೂ, ವಿಷ್ಣುವಿಗೆ ಅವನ ಗುಣಗಳು ಮೊದಲಾದವುಗಳೊಂದಿಗೆ ಭೇದವನ್ನು ತಿಳಿದರೂ, ವಿಷ್ಣುವಿನ ಅವತಾರಗಳಿಗೆ ಭೇದವನ್ನು ತಿಳಿದರೂ, ಅವತಾರಗಳಲ್ಲಿ ಪ್ರಾಕೃತ ದೇಹವನ್ನು ತಿಳಿದರೂ, ವಿಷ್ಣುವಿಗೆ ಅಜ್ಞಾನ, ದುಃಖ, ಬಳಲಿಕೆ ಮುಂತಾದವುಗಳನ್ನು ತಿಳಿದರೂ, ಅವನ ಭಕ್ತರಲ್ಲಿ ತಾರತಮ್ಯವನ್ನು ತಪ್ಪಾಗಿ ತಿಳಿದರೂ ತಮಸ್ಸು ನಿಶ್ಚಿತ.

**ಮನೋವಾಕ್ತನುಭಿರ್ಯೋ ವಾ ತಸ್ಮಿಂಸ್ತದ್ಭಕ್ತ ಏವ ವಾ ।**
**ವಿರೋಧಕೃದ್ವಿಷ್ಣ್ವಧೀನಾದನ್ಯತ್ ಕಿಂಚಿದಪಿ ಸ್ಮರನ್ ॥ ೪೧ ॥**

**ಮನೋವಾಕ್ತನುಭಿಃ ಯಃ ವಾ ತಸ್ಮಿನ್ ತದ್ಭಕ್ತೇ ಏವ ವಾ । ವಿರೋಧಕೃತ್ ವಿಷ್ಣ್ವ-ಧೀನಾತ್ ಅನ್ಯತ್ ಕಿಂಚಿತ್ ಅಪಿ ಸ್ಮರನ್ ॥ ೪೧ ॥**

**ಅರ್ಥ** :- **ಯಃ ವಾ** = ಯಾವನು **ಮನೋವಾಕ್ತನುಭಿಃ** = ಮನಸ್ಸು ಮಾತು ದೇಹಗಳಿಂದ **ತಸ್ಮಿನ್** = ಆ ವಿಷ್ಣುವಿನಲ್ಲಿ **ತದ್ಭಕ್ತೇ ಏವ** = ಅವನ ಭಕ್ತನಲ್ಲಾಗಲಿ **ವಿರೋಧಕೃತ್** = ವಿರೋಧ

ಮಾಡುವನೋ, **ವಿಷ್ಣ್ವಧೀನಾತ್** = ವಿಷ್ಣುವಿನ ಅಧೀನಕ್ಕಿಂತ **ಅನ್ಯತ್** = ಬೇರೆಯದನ್ನು **ಕಿಂಚಿತ್** = ಸ್ವಲ್ಪವೇ **ಸ್ಮರನ್ ಅಪಿ** = ಸ್ಮರಿಸಿದವನಾದರೂ ಸಹ **(ಅಂಧಂತಮಃ ಯಾತಿ)** = ಅಂಧಂತಮಸ್ಸನ್ನು ಹೊಂದುವನು.

**ತಾತ್ಪರ್ಯ** :- ಮನಸ್ಸು ಮಾತು ಮತ್ತು ದೇಹಗಳಿಂದ ಯಾವನು ವಿಷ್ಣುವನ್ನಾಗಲೀ, ಅವನ ಭಕ್ತನನ್ನಾಗಲೀ ವಿರೋಧಮಾಡುವನೋ, ವಿಷ್ಣುವಿಗೆ ಅಧೀನವಲ್ಲ ಎಂದು ಏನನ್ನಾದರೂ ತಿಳಿಯುವನೋ ಅವನೂ ಸಹ ತಮಸ್ಸನ್ನು ಹೊಂದುವನು.

**ಅನ್ಯಾಧೀನತ್ವವಿಚ್ಚಾಸ್ಯ ಸರ್ವಪೂರ್ತ್ಯವಿದೇವ ಚ ।**
**ಭಕ್ತಿಹೀನಶ್ಚ ತೇ ಸರ್ವೇ ತಮೋಽಂಧಂ ಯಾಂತ್ಯಸಂಶಯಮ್ ॥ ೪೨ ॥**

**ಅನ್ಯಾಧೀನತ್ವವಿತ್ ಚ ಅಸ್ಯ ಸರ್ವಪೂರ್ತ್ಯವಿತ್ ಏವ ಚ । ಭಕ್ತಿಹೀನಃ ಚ ತೇ ಸರ್ವೇ ತಮಃ ಅಂಧಂ ಯಾಂತಿ ಅಸಂಶಯಮ್ ॥ ೪೨ ॥**

**ಅರ್ಥ** :- **ಅಸ್ಯ (ಹರೇಃ)** = ಈ ಹರಿಗೆ **ಅನ್ಯಾಧೀನತ್ವವಿತ್ ಚ** = ಮತ್ತೊಬ್ಬರ ಅಧೀನತ್ವವಿದೆ ಎಂದು ತಿಳಿದವನು ಸಹ **ಸರ್ವಪೂರ್ತ್ಯವಿತ್ ಏವ ಚ** = ಅದರಂತೆ ಶ್ರೀಹರಿಯ ಸರ್ವಪರಿಪೂರ್ಣತ್ವವನ್ನು ತಿಳಿಯದವನು, **ಭಕ್ತಿಹೀನಃ ಚ** = ಭಕ್ತಿ ಇಲ್ಲದವನು ಸಹ **ತೇ ಸರ್ವೇ** = ಈ ಎಲ್ಲರೂ **ಅಸಂಶಯಂ** = ನಿಶ್ಚಯವಾಗಿಯೂ **ಅಂಧಂ ತಮಃ** = ಅಂಧಂತಮಸ್ಸನ್ನು **ಯಾಂತಿ** = ಹೊಂದುವರು.

**ತಾತ್ಪರ್ಯ** :- ವಿಷ್ಣುವಿಗೆ ಇತರರ ಆಧೀನ್ಯವನ್ನಾಗಲೀ, ಸರ್ವಪರಿಪೂರ್ಣತ್ವವನ್ನು ತಿಳಿಯದವನಾಗಲೀ, ಭಕ್ತಿ ಇಲ್ಲದವನಾಗಲೀ, ತಮಸ್ಸನ್ನೇ ನಿಶ್ಚಯವಾಗಿ ಹೊಂದುವನು.

### ಸಂದೇಹಶೀಲರಿಗೆ ನರಕಾದ್ಯನರ್ಥ

**ತತ್ತ್ವೇ ಸಂಶಯಯುಕ್ತಾ ಯೇ ಸರ್ವೇ ತೇ ನಿರಯೋಪಗಾಃ ।**
**ದೋಷೇಭ್ಯಸ್ತೇ ಗುಣಾಧಿಕ್ಯೇ ನೈವ ಯಾಂತ್ಯಧಮಾಂ ಗತಿಮ್ ॥ ೪೩ ॥**

**ತತ್ತ್ವೇ ಸಂಶಯಯುಕ್ತಾಃ ಯೇ ಸರ್ವೇ ತೇ ನಿರಯೋಪಗಾಃ । ದೋಷೇಭ್ಯಃ ತೇ ಗುಣಾಧಿಕ್ಯೇ ನ ಏವ ಯಾಂತಿ ಅಧಮಾಂ ಗತಿಮ್ ॥ ೪೩ ॥**

**ಅರ್ಥ** :- **ಯೇ** = ಯಾರು **ತತ್ತ್ವೇ** = ತತ್ತ್ವದಲ್ಲಿ **ಸಂಶಯಯುಕ್ತಾಃ** = ಸಂಶಯವನ್ನು ಹೊಂದಿರುವರೋ **ತೇ ಸರ್ವೇ** = ಅವರೆಲ್ಲ **ನಿರಯೋಪಗಾಃ** = ನರಕವನ್ನು ಹೊಂದುವವರು. **ತೇ** = ಅವರು **ದೋಷೇಭ್ಯಃ** = ದೋಷಗಳಿಗಿಂತ **ಗುಣಾಧಿಕ್ಯೇ** = ಗುಣಗಳು ಹೆಚ್ಚಿದ್ದಾಗ **ಅಧಮಾಂ ಗತಿಂ** = ಅಧಮಗತಿಯನ್ನು **ನ ಯಾಂತಿ ಏವ** = ಹೊಂದುವುದೇ ಇಲ್ಲ.

**ತಾತ್ಪರ್ಯ** :- ತತ್ತ್ವದಲ್ಲಿ ಸಂದೇಹ ಹೊಂದಿದವರೆಲ್ಲ ಅಂತಹ ದೋಷಗಳಿಂದಾಗಿ ನರಕವನ್ನು ಹೊಂದುವರು. ಗುಣಗಳು ಹೆಚ್ಚಿದ್ದಾಗ ಅವರು ಅಂಧಂತಮಸ್ಸಿಗೆ ಹೋಗುವುದಿಲ್ಲ.

**ಗುಣದೋಷಸಾಮ್ಯೇ ಮಾನುಷ್ಯಂ ಸರ್ವದೈವ ಪುನಃ ಪುನಃ ।**
**ಯಾವದ್ದೋಷಕ್ಷಯಶ್ಚೋರ್ಧ್ವಾ ಗತಿಃ ಕ್ರಮಶ ಏವ ತು ॥ ೪೪ ॥**

ಗುಣದೋಷಸಾಮ್ಯೇ ಮಾನುಷ್ಯಂ ಸರ್ವದಾ ಏವ ಪುನಃ ಪುನಃ । ಯಾವತ್ ದೋಷಕ್ಷಯಃ ಚ ಊರ್ಧ್ವಾ ಗತಿಃ ಕ್ರಮಶಃ ಏವ ತು ॥ ೪೪ ॥

**ಅರ್ಥ** :- **ಗುಣದೋಷಸಾಮ್ಯೇ (ಸತಿ)** = ಗುಣ–ದೋಷಗಳು ಸಮನಾಗಿದ್ದಾಗ **ಸರ್ವದಾ** = ಯಾವಾಗಲೂ **ಪುನಃ ಪುನಃ** = ಮತ್ತೆ ಮತ್ತೆ **ಮಾನುಷ್ಯಂ ಏವ (ಭವತಿ)** = ಮನುಷ್ಯಜನ್ಮವೇ ಆಗುವುದು. **ಯಾವತ್ ದೋಷಕ್ಷಯಃ** = ದೋಷಗಳು ನಾಶವಾಗುವವರೆಗೂ **ಕ್ರಮಶಃ ಏವ ಚ** = ಕ್ರಮವಾಗಿಯೇ **ಊರ್ಧ್ವಾ ತು ಗತಿಃ** = ಮೇಲಿನ ಗತಿಯು **ಸ್ಯಾತ್** = ಆಗುವುದು.

**ತಾತ್ಪರ್ಯ** :- ಗುಣದೋಷಗಳು ಸಮನಾಗಿದ್ದರೆ ಮನುಷ್ಯಲೋಕದಲ್ಲೇ ಸದಾ ಮತ್ತೆ ಮತ್ತೆ ಜನಿಸುವರು. ದೋಷಗಳು ಕ್ಷಯವಾಗುವವರೆಗೂ ಹಾಗಿದ್ದು ಅನಂತರ ಕ್ರಮವಾಗಿ ಉತ್ತಮೋತ್ತಮವಾದ ಗತಿಯನ್ನು ಪಡೆಯುವರು.

### ಮುಕ್ತಿಯ ಪ್ರಧಾನ ಅರ್ಹತೆ

**ಸರ್ವದೋಷಕ್ಷಯೇ ಮುಕ್ತಿರಾತ್ಮಯೋಗ್ಯಾನುಸಾರತಃ ।**
**ಭಕ್ತಿಜ್ಞಾನೋನ್ನತಾವೇವ ಸ್ವರ್ಗಶ್ಚ ಶುಭಕರ್ಮಣಃ ।**
**ವಿಷ್ಣುವೈಷ್ಣವವಾಕ್ಯೇನ ಹಾನಿಃ ಪಾಪಸ್ಯ ಕರ್ಮಣಃ ॥ ೪೫ ॥**

**ಸರ್ವದೋಷಕ್ಷಯೇ ಮುಕ್ತಿಃ ಆತ್ಮಯೋಗ್ಯಾನುಸಾರತಃ । ಭಕ್ತಿಜ್ಞಾನೋನ್ನತೌ ಏವ ಸ್ವರ್ಗಃ ಚ ಶುಭಕರ್ಮಣಃ । ವಿಷ್ಣುವೈಷ್ಣವವಾಕ್ಯೇನ ಹಾನಿಃ ಪಾಪಸ್ಯ ಕರ್ಮಣಃ ॥ ೪೫ ॥**

**ಅರ್ಥ :- ಸರ್ವದೋಷಕ್ಷಯೇ (ಸತಿ)** = ಎಲ್ಲ ದೋಷಗಳೂ ನಾಶವಾಗಲು **ಆತ್ಮಯೋಗ್ಯಾನುಸಾರತಃ** = ತಮ್ಮ ಯೋಗ್ಯತೆಗೆ ತಕ್ಕಂತೆ **ಭಕ್ತಿಜ್ಞಾನೋನ್ನತೌ (ಸತ್ಯಾಂ)** = ಭಕ್ತಿ-ಜ್ಞಾನಗಳು ಹೆಚ್ಚಲು **ಮುಕ್ತಿಃ ಏವ (ಸ್ಯಾತ್)** = ಮುಕ್ತಿಯೇ ಆಗುವುದು. **ಶುಭಕರ್ಮಣಃ** = ಶುಭಕರ್ಮಗಳಿಗೆ **ಸರ್ಗಃ ಚ** = ಸ್ವರ್ಗವೂ, **ವಿಷ್ಣುವೈಷ್ಣವವಾಕ್ಯೇನ** = ವಿಷ್ಣು-ವೈಷ್ಣವರ ವಾಕ್ಯದಿಂದ **ಪಾಪಸ್ಯ ಕರ್ಮಣಃ** = ಪಾಪ ಕರ್ಮದ **ಹಾನಿಃ (ಭವೇತ್)** = ನಾಶವು ಆಗುವುದು.

**ತಾತ್ಪರ್ಯ :-** ಸಕಲದೋಷಗಳೂ ಪರಿಹಾರವಾದಾಗ ತಮ್ಮ ಯೋಗ್ಯತೆಗೆ ಅನುಸಾರವಾಗಿ ಭಕ್ತಿ, ಜ್ಞಾನಗಳು ಹೆಚ್ಚಿದಾಗ ಮುಕ್ತಿಯನ್ನೂ ಪಡೆಯುವರು. ಸತ್ಕರ್ಮಗಳಿಂದ ಸ್ವರ್ಗ ಲಭಿಸುವುದು. ವಿಷ್ಣು ಹಾಗೂ ವೈಷ್ಣವರ ಮಾತುಗಳಿಂದ ಪಾಪಕರ್ಮಗಳು ಪರಿಹಾರವಾಗುವವು.

### ಪುರುಷಾರ್ಥ ತಾರತಮ್ಯ ಜಿಜ್ಞಾಸೆ

**ಇತ್ಯಾದಿಧರ್ಮಸರ್ವಸ್ವಂ ಭೀಷ್ಮಸ್ಥೇನೈವ ವಿಷ್ಣುನಾ ।**
**ಪಾರ್ಥಾನಾಂ ಗದಿತಂ ತಚ್ಚ ಶ್ರುತ್ವಾ ಧರ್ಮಸುತೋಽನುಜಾನ್ ।**
**ಪಪ್ರಚ್ಛ ವಿದುರಂ ಚೈವ ಸಾರಂ ಧರ್ಮಾದಿಷು ತ್ರಿಷು ॥ ೪೬ ॥**

**ಇತ್ಯಾದಿಧರ್ಮಸರ್ವಸ್ವಂ ಭೀಷ್ಮಸ್ಥೇನ ಏವ ವಿಷ್ಣುನಾ । ಪಾರ್ಥಾನಾಂ ಗದಿತಂ ತತ್ ಚ ಶ್ರುತ್ವಾ ಧರ್ಮಸುತಃ ಅನುಜಾನ್ । ಪಪ್ರಚ್ಛ ವಿದುರಂ ಚ ಏವ ಸಾರಂ ಧರ್ಮಾದಿಷು ತ್ರಿಷು ॥ ೪೬ ॥**

**ಅರ್ಥ :- ಇತ್ಯಾದಿಧರ್ಮಸರ್ವಸ್ವಂ** = ಇವೇ ಮೊದಲಾದ ಎಲ್ಲ ಧರ್ಮಗಳು **ಭೀಷ್ಮಸ್ಥೇನ** = ಭೀಷ್ಮರೊಳಗೆ ನೆಲೆಸಿದ **ವಿಷ್ಣುನಾ ಏವ** = ವಿಷ್ಣುವಿನಿಂದಲೇ **ಪಾರ್ಥಾನಾಂ** = ಪಾರ್ಥರಿಗೆ **ಗದಿತಂ** = ಹೇಲಲ್ಪಟ್ಟಿತು. **ತತ್ ಚ** = ಅದನ್ನು **ಶ್ರುತ್ವಾ** = ಕೇಳಿ **ಧರ್ಮಸುತಃ** = ಧರ್ಮನ ಮಗನಾದ ಯುಧಿಷ್ಠಿರನು **ಅನುಜಾನ್** = ತಮ್ಮಂದಿರನ್ನು **ವಿದುರಂ ಚ**

**ಏವ** = ವಿದುರನನ್ನೂ ಸಹ **ಧರ್ಮಾದಿಷು** = ಧರ್ಮಾದಿ **ತ್ರಿಷು** = ಮೂರರಲ್ಲಿ **ಸಾರಂ** = ಸಾರವನ್ನು (ಮುಖ್ಯಪುರುಷಾರ್ಥವನ್ನು) ಕುರಿತು **ಪಪ್ರಚ್ಛ** = ಕೇಳಿದ.

**ತಾತ್ಪರ್ಯ** :- ಇದೇ ಮೊದಲಾದ ಸಕಲಧರ್ಮರಹಸ್ಯವನ್ನು ಭೀಷ್ಮರೊಳಗಿದ್ದು ವಿಷ್ಣು ಪಾಂಡವರಿಗೆ ತಿಳಿಸಿದ. ಅದನ್ನು ಕೇಳಿ ಧರ್ಮರಾಜನು ತಮ್ಮಂದಿರನ್ನು, ವಿದುರನನ್ನು ಧರ್ಮ, ಅರ್ಥ, ಕಾಮ ಎಂಬ ಮೂರು ಪುರುಷಾರ್ಥಗಳಲ್ಲಿ ಯಾವುದು ಮಿಗಿಲು ಎಂದು ಕೇಳಿದ.

### ವಿದುರ-ಅರ್ಜುನರ ವಿಚಾರ

**ಆಹ ಕ್ಷತ್ತಾ ಧರ್ಮಮೇವ ಸಾರಮರ್ಥಂ ಚ ಮಧ್ಯಮಮ್ ।**
**ನೀಚಂ ಕಾಮಂ ನಿಷ್ಫಲತ್ವಾದರ್ಥಮೇವಾರ್ಜುನೋಽಬ್ರವೀತ್ ॥ ೪೭ ॥**

**ಆಹ ಕ್ಷತ್ತಾ ಧರ್ಮಂ ಏವ ಸಾರಂ ಅರ್ಥಂ ಚ ಮಧ್ಯಮಮ್ । ನೀಚಂ ಕಾಮಂ ನಿಷ್ಫಲತ್ವಾತ್ ಅರ್ಥಂ ಏವ ಅರ್ಜುನಃ ಅಬ್ರವೀತ್ ॥ ೪೭ ॥**

### ಅರ್ಥವೇ ಶ್ರೇಷ್ಠ ಪುರುಷಾರ್ಥ ಎಂದ ಅರ್ಜುನ

**ಸಾರಂ ಸ ದ್ವಿವಿಧೋ ಜ್ಞೇಯೋ ದೈವೋ ಮಾನುಷ ಏವ ಚ ।**
**ದೈವೋ ವಿದ್ಯಾ ಹಿರಣ್ಯಾದಿರ್ಮಾನುಷಃ ಪರಿಕೀರ್ತಿತಃ ॥ ೪೮ ॥**

**ಸಾರಂ ಸಃ ದ್ವಿವಿಧಃ ಜ್ಞೇಯಃ ದೈವಃ ಮಾನುಷಃ ಏವ ಚ । ದೈವಃ ವಿದ್ಯಾ ಹಿರಣ್ಯಾದಿಃ ಮಾನುಷಃ ಪರಿಕೀರ್ತಿತಃ ॥ ೪೮ ॥**

**ಅರ್ಥ** :- **ಕ್ಷತ್ತಾ** = ದಾಸೀಪುತ್ರನಾದ ವಿದುರನು **ಧರ್ಮಂ ಏವ** = ಧರ್ಮವನ್ನೇ **ಸಾರಂ** = ಸಾರವನ್ನಾಗಿ (ಶ್ರೇಷ್ಠವನ್ನಾಗಿ), **ಅರ್ಥಂ ಚ** = ಅರ್ಥವನ್ನು **ಮಧ್ಯಮಮ್** = ಮಧ್ಯಮವನ್ನಾಗಿ **ನಿಷ್ಫಲತ್ವಾತ್** = ನಿಷ್ಫಲವಾದ್ದರಿಂದ **ಕಾಮಂ** = ಕಾಮವನ್ನು **ನೀಚಂ** = ಅಧಮವನ್ನಾಗಿ **ಆಹ** = ಹೇಳಿದ. **ಅರ್ಜುನಃ** = ಅರ್ಜುನನು **ಅರ್ಥಂ ಏವ** = ಅರ್ಥವನ್ನೇ **ಸಾರಂ** = ಉತ್ತಮವನ್ನಾಗಿ **ಅಬ್ರವೀತ್** = ಹೇಳಿದ. **ಸಃ** = ಆ ಅರ್ಥವು **ದೈವಃ** = ದೈವ, **ಮಾನುಷಃ ಏವ ಚ** = ಹಾಗೂ ಮಾನುಷ (ಎಂದು) **ದ್ವಿವಿಧಃ** = ಎರಡು ವಿಧವಾಗಿ **ಜ್ಞೇಯಃ** =

ತಿಳಿಯಲ್ಪಡಬೇಕು. **ದೈವಃ** = ದೈವವು **ವಿದ್ಯಾ** = ವಿದ್ಯೆಯು. **ಹಿರಣ್ಯಾದಿಃ** = ಹಿರಣ್ಯಾದಿಯು **ಮಾನುಷಃ** = ಮಾನುಷ(ಸಂಪತ್ತು) **ಪರಿಕೀರ್ತಿತಃ** = (ಎಂದು) ಹೇಳಲ್ಪಟ್ಟಿದೆ.

**ತಾತ್ಪರ್ಯ** :- ವಿದುರ ಧರ್ಮವೇ ಶ್ರೇಷ್ಠ, ಅರ್ಥ ಮಧ್ಯಮ, ಕಾಮ ನಿಷ್ಫಲವಾದ್ದರಿಂದ ಅಧಮ ಎಂದ. ಅರ್ಜುನ ಅರ್ಥವನ್ನೇ ಶ್ರೇಷ್ಠವೆಂದು ನುಡಿದ. ಅರ್ಥವು ದೈವ, ಮಾನುಷ ಎಂಬುದಾಗಿ ಎರಡು ಬಗೆ. ಜ್ಞಾನ ದೈವೀಸಂಪತ್ತು. ಧನಕನಕಾದಿಗಳು ಮಾನುಷಸಂಪತ್ತು.

**ಮಧ್ಯಮೋ ಧರ್ಮ ಏವಾತ್ರ ಸಾಧ್ಯಂ ಸಾಧನಮೇವ ಚ ।**
**ವಿದ್ಯಾಹ್ವಯೋಽರ್ಥೋ ಧರ್ಮಸ್ಯ ವಿದ್ಯಯೈವ ವಿಮುಚ್ಯತೇ ॥ ೪೯ ॥**

**ಮಧ್ಯಮಃ ಧರ್ಮಃ ಏವ ಅತ್ರ ಸಾಧ್ಯಂ ಸಾಧನಂ ಏವ ಚ । ವಿದ್ಯಾಹ್ವಯಃ ಅರ್ಥಃ ಧರ್ಮಸ್ಯ ವಿದ್ಯಯಾ ಏವ ವಿಮುಚ್ಯತೇ ॥ ೪೯ ॥**

**ಅರ್ಥ** :- **ಅತ್ರ** = ಇವುಗಳಲ್ಲಿ (ಮೂರು ಪುರುಷಾರ್ಥಗಳ ಮಧ್ಯೆ) **ಧರ್ಮಃ** = ಧರ್ಮವು **ಮಧ್ಯಮಃ ಏವ** = ಮಧ್ಯಮವೇ. **ವಿದ್ಯಾಹ್ವಯಃ** = ವಿದ್ಯೆ ಎಂಬ **ಅರ್ಥಃ** = ಅರ್ಥವು **ಧರ್ಮಸ್ಯ** = ಧರ್ಮದ **ಸಾಧ್ಯಂ** = ಸಾಧ್ಯವೂ **ಸಾಧನಂ ಏವ ಚ** = ಸಾಧನವೂ ಸಹ. **ವಿದ್ಯಯಾ ಏವ** = ಜ್ಞಾನದಿಂದಲೇ **ವಿಮುಚ್ಯತೇ** = (ಸಂಸಾರದಿಂದ) ಬಿಡುಗಡೆ ಹೊಂದುವನು.

**ತಾತ್ಪರ್ಯ** :- ಧರ್ಮ ಮಧ್ಯಮ, ಅದಕ್ಕೆ ವಿದ್ಯೆ ಎಂಬುದು ಸಾಧ್ಯವೂ, ಸಾಧನವೂ ಆದುದು. ವಿದ್ಯೆಯಿಂದಲೇ ಮುಕ್ತಿ ಲಭಿಸುವುದು.

**ಮಾನುಷೋಽರ್ಥೋಽಪಿ ವಿದ್ಯಾಯಾಃ ಕಾರಣಂ ಸುಪ್ರಯೋಜಿತಃ ।**
**ತುಷ್ಟೋಽರ್ಥೇನ ಗುರುರ್ಯಸ್ಮಾತ್ ಕೈವಲ್ಯಂ ದಾತುಮಪ್ಯಲಮ್ ॥ ೫೦ ॥**

**ಮಾನುಷಃ ಅರ್ಥಃ ಅಪಿ ವಿದ್ಯಾಯಾಃ ಕಾರಣಂ ಸುಪ್ರಯೋಜಿತಃ । ತುಷ್ಟಃ ಅರ್ಥೇನ ಗುರುಃ ಯಸ್ಮಾತ್ ಕೈವಲ್ಯಂ ದಾತುಂ ಅಪಿ ಅಲಮ್ ॥ ೫೦ ॥**

**ಅರ್ಥ** :- **ಸುಪ್ರಯೋಜಿತಃ** = ಸದ್ವಿನಿಯೋಗವಾದ **ಮಾನುಷಃ ಅರ್ಥಃ ಅಪಿ** = ಮಾನುಷ ಸಂಪತ್ತು ಸಹ **ವಿದ್ಯಾಯಾಃ** = ವಿದ್ಯೆಗೆ

**ಕಾರಣಂ** = ಕಾರಣವು. **ಯಸ್ಮಾತ್** = ಯಾವ ಕಾರಣದಿಂದ **ಅರ್ಥೇನ** = ಸಂಪತ್ತಿನಿಂದ **ತುಷ್ಟಃ** = ಸಂತುಷ್ಟನಾದ **ಗುರುಃ** = ಗುರುವು **ಕೈವಲ್ಯಂ ಅಪಿ** = ಮೋಕ್ಷವನ್ನೂ ಸಹ **ದಾತುಂ** = ಕೊಡಿಸಲು **ಅಲಂ** = ಸಮರ್ಥನು. **(ತಸ್ಮಾತ್)** = (ಆದ್ದರಿಂದ ಗುರುವು ಜ್ಞಾನವನ್ನು ಕೊಡಲು ಸಮರ್ಥ ಎಂದು ಮತ್ತೆ ಹೇಳಬೇಕೇನು?)

**ತಾತ್ಪರ್ಯ** :- ಮಾನುಷ ಸಂಪತ್ತು ಸಹ ಸದ್ವಿನಿಯೋಗ ಮಾಡಿದಾಗ ವಿದ್ಯೆಗೆ ಸಾಧನವಾಗುವುದು, ಸಂಪತ್ತಿನಿಂದ ಸಂತುಷ್ಟನಾಗುವ ಗುರು ಮೋಕ್ಷವನ್ನು ಕೊಡಿಸಬಲ್ಲ.

**ಧರ್ಮಾರ್ಥತಾಂ ವಿನಾಽಪ್ಯರ್ಥೈಸ್ತುಷ್ಯೇಯುರ್ಗುರುದೇವತಾಃ ।**
**ಯದ್ಯನುದ್ದೇಶಿತೋ ಧರ್ಮೋಽಪ್ಯರ್ಥಮೇವಾನುಸಂವ್ರಜೇತ್ ॥ ೫೧ ॥**

**ಧರ್ಮಾರ್ಥತಾಂ ವಿನಾ ಅಪಿ ಅರ್ಥೈಃ ತುಷ್ಯೇಯುಃ ಗುರುದೇವತಾಃ । ಯದಿ ಅನುದ್ದೇಶಿತಃ ಧರ್ಮಃ ಅಪಿ ಅರ್ಥಂ ಏವ ಅನು ಸಂವ್ರಜೇತ್ ॥ ೫೧ ॥**

**ಅರ್ಥ** :- **ಧರ್ಮಾರ್ಥತಾಂ ವಿನಾ ಅಪಿ** = ಧರ್ಮಕ್ಕೋಸ್ಕರ ಅಲ್ಲದಿದ್ದರೂ ಸಹ **(ಸುಪ್ರಯೋಜಿತೈಃ)** = ಸದ್ವಿನಿಯೋಗವಾದ **ಅರ್ಥೈಃ** = ಅರ್ಥಗಳಿಂದ (ಸಂಪತ್ತಿನಿಂದ) **ಗುರುದೇವತಾಃ** = ಗುರುದೇವತೆಗಳು **ತುಷ್ಯೇಯುಃ** = ಸಂತುಷ್ಟರಾಗುವರು. **ಅನುದ್ದೇಶಿತಃ** = ಫಲದ ಉದ್ದೇಶವಿಲ್ಲದ **ಧರ್ಮಃ ಯದಿ ಅಪಿ (ತಥಾಪಿ)** = ಧರ್ಮವಾದರೂ ಸಹ **ಅರ್ಥಂ** = ಅರ್ಥವನ್ನು **ಅನು ಏವ** = ಅನುಸರಿಸಿಯೇ **ಸಂವ್ರಜೇತ್** = ತೆರಳುವುದು.

**ತಾತ್ಪರ್ಯ** :- ಧರ್ಮಕ್ಕೆಂದು ತಿಳಿಯದೆಯೂ ಸಂಪತ್ತನ್ನು ವಿನಿಯೋಗಿಸಿದಾಗಲೂ ಗುರುಗಳು, ದೇವತೆಗಳು ಸಂತುಷ್ಟರಾಗುವರು. ಫಲಾಪೇಕ್ಷೆ ಇಲ್ಲದೆ ಮಾಡುವ ಧರ್ಮವೂ ಸಹ ಅರ್ಥವನ್ನು ಅನುಸರಿಸಿಯೇ ಬರುವುದು.

**ಗುರುತಾಽರ್ಥಗತೈವ ಸ್ಯಾತ್ ಕಾಮೋಽಧಸ್ತಾದ್ಧಿ ನಿಷ್ಫಲಃ ।**
**ಯಮಾವತ್ರ ವಿದಾಂ ಶ್ರೇಷ್ಠಾವರ್ಜುನೋಕ್ತಮನೂಚತುಃ ॥ ೫೨ ॥**

**ಗುರುತಾ ಅರ್ಥಗತಾ ಏವ ಸ್ಯಾತ್ ಕಾಮಃ ಅಧಸ್ತಾತ್ ಹಿ ನಿಷ್ಫಲಃ । ಯಮೌ ಅತ್ರ ವಿದಾಂ ಶ್ರೇಷ್ಠೌ ಅರ್ಜುನೋಕ್ತಂ ಅನೂಚತುಃ ॥ ೫೨ ॥**

**ಅರ್ಥ** :- **ಗುರುತಾ** = ಶ್ರೇಷ್ಠತೆಯು **ಅರ್ಥಗತಾ ಏವ ಸ್ಯಾತ್** = ಅರ್ಥದಲ್ಲೇ ಇರುವುದು. **ಕಾಮಃ** = ಕಾಮವು **ಅಧಸ್ತಾತ್** = ಅಧಮವಾದ್ದರಿಂದ **ನಿಷ್ಫಲಃ** = ನಿಷ್ಫಲ. **ಹಿ** = (ಎಂದು) ಪ್ರಸಿದ್ಧ. **ಅತ್ರ** = ಈ ವಿಚಾರದಲ್ಲಿ **ವಿದಾಂ ಶ್ರೇಷ್ಠೌ** = ಬಲ್ಲವರಲ್ಲಿ ಶ್ರೇಷ್ಠರಾದ **ಯಮೌ** = ನಕುಲ-ಸಹದೇವರು **ಅರ್ಜುನೋಕ್ತಂ** = ಅರ್ಜುನನು ಹೇಳಿದ್ದನ್ನು **ಅನೂಚತುಃ** = (ತಮಗೆ) ಅನುಕೂಲವೆಂದು ಹೇಳಿದರು.

**ತಾತ್ಪರ್ಯ** :- ಆದ್ದರಿಂದ ಹಿರಿಮೆ ಅರ್ಥದಲ್ಲೇ ಉಂಟು; ಕಾಮವು ನಿಷ್ಫಲವಾದ್ದರಿಂದ ಅಧಮ. ಉತ್ತಮಜ್ಞಾನಿಗಳಾದ ನಕುಲ, ಸಹದೇವರು ಸಹ ಅರ್ಜುನ ಹೇಳಿದ್ದನ್ನು ಅನುಮೋದಿಸಿದರು.

### ಕಾಮವೇ ಪ್ರಧಾನ ಪುರುಷಾರ್ಥ ಎಂದ ಭೀಮ

**ಅಥಾಹ ಭೀಮಃ ಪ್ರವರಃ ಸುತತ್ತ್ವ-**
**ದೃಶಾಂ ಸಮಸ್ತಾನಭಿಭಾಷ್ಯ ಹರ್ಷಾತ್ ।**
**ಸ್ಮಯನ್ ನ ಕಾಮಾದತಿರಿಕ್ತಮಸ್ತಿ**
**ಕಿಂಚಿಚ್ಛುಭಂ ಕ್ವಾವರತಾಂ ಸ ಯಾಯಾತ್ ॥ ೫೩ ॥**

**ಅಥ ಆಹ ಭೀಮಃ ಪ್ರವರಃ ಸುತತ್ತ್ವದೃಶಾಂ ಸಮಸ್ತಾನ್ ಅಭಿಭಾಷ್ಯ ಹರ್ಷಾತ್ । ಸ್ಮಯನ್ ನ ಕಾಮಾತ್ ಅತಿರಿಕ್ತಂ ಅಸ್ತಿ ಕಿಂಚಿತ್ ಶುಭಂ ಕ್ವ ಅವರತಾಂ ಸಃ ಯಾಯಾತ್ ॥ ೫೩ ॥**

**ಅರ್ಥ** :- **ಅಥ** = ಅನಂತರ **ಸುತತ್ತ್ವದೃಶಾಂ** = ಉತ್ತಮತತ್ತ್ವ ಜ್ಞಾನಿಗಳಲ್ಲಿ **ಪ್ರವರಃ** = ಅತ್ಯಂತಶ್ರೇಷ್ಠನಾದ **ಭೀಮಃ** = ಭೀಮನು **ಹರ್ಷಾತ್** = ಹರ್ಷದಿಂದ **ಸಮಸ್ತಾನ್** = ಎಲ್ಲರನ್ನೂ (ಕುರಿತು) **ಅಭಿಭಾಷ್ಯ** = ಉದ್ದೇಶಿಸಿ **ಸ್ಮಯನ್** = ಮಂದಹಾಸವನ್ನು ಬೀರುತ್ತಾ **ಕಾಮಾತ್** = ಕಾಮಕ್ಕಿಂತ **ಅತಿರಿಕ್ತಂ** = ಬೇರೆಯಾದಾದ **ಕಿಂಚಿತ್ ಶುಭಂ** = ಯಾವ ಉತ್ತಮವೂ **ನ ಅಸ್ತಿ** = ಇಲ್ಲ. **ಸಃ** = ಆ ಕಾಮವು **ಅವರತಾಂ** = ನೀಚತೆಯನ್ನು **ಕ್ವ** = ಎಲ್ಲಿ ತಾನೆ **ಯಾಯಾತ್** = ಹೊಂದೀತು? **ಇತಿ** = ಎಂದು **ಆಹ** = ಹೇಳಿದ.

**ತಾತ್ಪರ್ಯ** :- ಬಳಿಕ ಮಹಾತತ್ತ್ವಜ್ಞಾನಿಗಳಲ್ಲಿ ತುಂಬಾ ಶ್ರೇಷ್ಠನಾದ ಭೀಮಸೇನ ಎಲ್ಲರನ್ನೂ ಸಂಬೋಧಿಸಿ ಸಂಭ್ರಮದಿಂದ ಮಂದಹಾಸ ಬೀರುತ್ತಾ ನುಡಿದ - ಕಾಮಕ್ಕಿಂತ ಬೇರೆಯಾದ ಉತ್ತಮ ಪುರುಷಾರ್ಥ ಮತ್ತೊಂದಿಲ್ಲ; ಅದು ಎಲ್ಲಿ ತಾನೇ ಕೀಳೆನ್ನಿಸೀತು?

### ಕಾಮ ಶಬ್ದಾರ್ಥದ ವಿವೇಚನೆ

**ಕಾಮ್ಯಂ ಹಿ ಕಾಮಾಭಿಧಮಾಹುರಾರ್ಯಾಃ**
**ಕಾಮ್ಯಾಃ ಪುಮರ್ಥಾಃ ಸಹ ಸಾಧನೈರ್ಯತ್ ।**
**ಅಕಾಮ್ಯತಾಂ ಯಾತ್ಯಪುಮರ್ಥ ಏವ**
**ಪುಮರ್ಥಿತತ್ವಾದ್ಧಿ ಪುಮರ್ಥ ಉಕ್ತಃ ॥ ೫೪ ॥**

**ಕಾಮ್ಯಂ ಹಿ ಕಾಮಾಭಿಧಂ ಆಹುಃ ಆರ್ಯಾಃ ಕಾಮ್ಯಾಃ ಪುಮರ್ಥಾಃ ಸಹ ಸಾಧನೈಃ ಯತ್ । ಅಕಾಮ್ಯತಾಂ ಯಾತಿ ಅಪುಮರ್ಥಃ ಏವ ಪುಮರ್ಥಿತತ್ವಾತ್ ಹಿ ಪುಮರ್ಥಃ ಉಕ್ತಃ ॥ ೫೪ ॥**

**ಅರ್ಥ** :- **ಆರ್ಯಾಃ** = ಜ್ಞಾನಿಗಳು **ಕಾಮ್ಯಂ** = ಇಷ್ಟವನ್ನು **ಕಾಮಾಭಿಧಂ** = ಕಾಮ ಎಂದು **ಆಹುಃ** = ಹೇಳುವರು. **ಹಿ** = (ಇದು) ಪ್ರಸಿದ್ಧವು. **ಯತ್** = ಯಾವ ಕಾರಣದಿಂದ **ಪುಮರ್ಥಾಃ** = (ಧರ್ಮಾದಿ) ಪುರುಷಾರ್ಥಗಳು **ಸಾಧನೈಃ ಸಹ** = (ತಮಗೆ ಉಚಿತವಾದ) ಸಾಧನೆಗಳಿಂದ **ಕಾಮ್ಯಾಃ** = ಇಷ್ಟಪಡುವುದೇ ಆಗಿವೆಯೋ, **(ತಸ್ಮಾತ್)** = ಆದ್ದರಿಂದ (ಕಾಮವು ಮಿಗಿಲಾದುದೇ ಆಗಿದೆ). **ಅಪುಮರ್ಥಃ ಏವ** = ಪುರುಷಾರ್ಥವಲ್ಲದ್ದು ಮಾತ್ರವೇ (ದುಃಖ ಮೊದಲಾದವು ಮಾತ್ರವೇ) **ಅಕಾಮ್ಯತಾಂ ಯಾತಿ** = ಇಷ್ಟವಲ್ಲದ್ದು ಆಗುವುದು. **ಪುಮರ್ಥಿತತ್ವಾತ್ ಹಿ** = ಪುರುಷರಿಂದ ಬಯಸಲ್ಪಡುವುದರಿಂದಲೇ **ಪುಮರ್ಥಃ** = ಪುರುಷಾರ್ಥ (ಇತಿ) = ಎಂದು **ಉಕ್ತಃ** = ಹೇಳಲ್ಪಟ್ಟಿದೆ.

**ತಾತ್ಪರ್ಯ** :- ಇಷ್ಟವನ್ನು ಜ್ಞಾನಿಗಳು ಕಾಮ ಎನ್ನುವರು, ಪುರುಷಾರ್ಥಗಳು, ಅವುಗಳ ಸಾಧನೆಗಳು ಇಷ್ಟವಾಗಿರುವುದರಿಂದ ಕಾಮವು ಮಿಗಿಲಾದುದೇ ಆಗಿದೆ. ಇಷ್ಟವಲ್ಲದ್ದು ಪುರುಷಾರ್ಥವೆನ್ನಿಸದು. ಪುರುಷರಿಗೆ ಇಷ್ಟವಾದದ್ದರಿಂದಲೇ ಪುರುಷಾರ್ಥ ಎನ್ನಿಸಿರುವುದಲ್ಲವೇ.

ವಿಜ್ಞಾನಭಕ್ತ್ಯಾದಿಕಮಪ್ಯತೀವ
ತತ್ಸಾಧನಂ ಕಾಮ್ಯಬಹಿಷ್ಕೃತಂ ಚೇತ್ ।
ನ ಸಾಧನಂ ಸ್ಯಾತ್ ಪರಮೋ ಹಿ ಮೋಕ್ಷೋ
ನ ಸಾಧ್ಯತಾಂ ಯಾತಿ ವಿನಾ ಹಿ ಕಾಮಾತ್ ॥ ೫೫ ॥

ವಿಜ್ಞಾನಭಕ್ತ್ಯಾದಿಕಂ ಅಪಿ ಅತೀವ ತತ್ಸಾಧನಂ ಕಾಮ್ಯಬಹಿಷ್ಕೃತಂ ಚೇತ್ । ನ ಸಾಧನಂ ಸ್ಯಾತ್ ಪರಮಃ ಹಿ ಮೋಕ್ಷಃ ನ ಸಾಧ್ಯತಾಂ ಯಾತಿ ವಿನಾ ಹಿ ಕಾಮಾತ್ ॥ ೫೫ ॥

**ಅರ್ಥ** :- **ಅತೀವ** = ಮುಖ್ಯವಾದ **ತತ್ಸಾಧನಂ** = (ಧರ್ಮಾದಿ) ಸಾಧನವಾದ **ವಿಜ್ಞಾನಭಕ್ತ್ಯಾದಿಕಂ ಅಪಿ** = ವಿಜ್ಞಾನ-ಭಕ್ತಿ ಮೊದಲಾದವು ಸಹ **ಕಾಮ್ಯಬಹಿಷ್ಕೃತಂ ಚೇತ್** = ಇಷ್ಟದಿಂದ ಹೊರತಾಗಿದ್ದಾದರೆ **ಸಾಧನಂ** = (ಧರ್ಮಾದಿ)ಸಾಧನವು **ನ ಸ್ಯಾತ್** = ಆಗಲಾರದು. **(ತಸ್ಮಾತ್)** = ಆದ್ದರಿಂದ **ಕಾಮಾತ್ ವಿನಾ** = (ಮೋಕ್ಷವಿಷಯ)ಕಾಮದ ಹೊರತು **ಪರಮಃ** = ಶ್ರೇಷ್ಠವಾದ **ಮೋಕ್ಷಃ ಹಿ** = ಮೋಕ್ಷವು **ಸಾಧ್ಯತಾಂ** = ಸಾಧ್ಯತೆಯನ್ನು **ನ ಯಾತಿ ಹಿ** = ಹೊಂದಲಾರದು.

**ತಾತ್ಪರ್ಯ** :- ಜ್ಞಾನ, ಭಕ್ತಿ ಮೊದಲಾದವುಗಳೂ ಸಹ ಪುರುಷಾರ್ಥಗಳಿಗೆ ಸಾಧನವಾಗಿರುವವು. ಅವು ಇಷ್ಟದಿಂದ ಹೊರತಾದರೆ ಸಾಧನವೆನ್ನಿಸಲಾರವು. ಆದ್ದರಿಂದ ಶ್ರೇಷ್ಠವಾದ ಮೋಕ್ಷವೂ ಸಹ ಇಷ್ಟವಾಗದೇ ಹೋದಲ್ಲಿ ಸಾಧ್ಯವೆನ್ನಿಸಲಾರದು.

### ಮುಖ್ಯಕಾಮ್ಯ

ಪರಾತ್ ಪರೋಽಪ್ಯಾದಿಪುಮಾನ್ ಹರಿಶ್ಚ
ಸ್ವಸ್ಯೇತರೇಷಾಮಪಿ ಕಾಮ್ಯ ಏವ ।
ಅಕಾಮಿತೋಽವಾಗ್ಗತಿಮೇವ ದದ್ಯಾತ್
ಕಾಮಃ ಪುಮರ್ಥೋಽಖಿಲ ಏವ ತೇನ ॥ ೫೬ ॥

ಪರಾತ್ ಪರಃ ಅಪಿ ಆದಿಪುಮಾನ್ ಹರಿಃ ಚ ಸ್ವಸ್ಯ ಇತರೇಷಾಂ ಅಪಿ ಕಾಮ್ಯಃ ಏವ । ಅಕಾಮಿತಃ ಅವಾಗ್ಗತಿಂ ಏವ ದದ್ಯಾತ್ ಕಾಮಃ ಪುಮರ್ಥಃ ಅಖಿಲಃ ಏವ ತೇನ ॥ ೫೬ ॥

**ಅರ್ಥ** :- **ಪರಾತ್ ಪರಃ** = ಶ್ರೇಷ್ಠರಿಗಿಂತ ಶ್ರೇಷ್ಠನಾದ **ಆದಿಪುಮಾನ್** = ಆದಿಪುರುಷನಾದ **ಹರಿಃ ಚ ಅಪಿ** = ಹರಿಯೂ ಸಹ **ಸ್ವಸ್ಯ** = ತನಗೆ **ಇತರೇಷಾಂ ಅಪಿ** = ಇತರರಿಗೂ **ಕಾಮ್ಯಃ ಏವ** = ಇಷ್ಟನೇ ಆಗಿರುವನು. **ಅಕಾಮಿತಃ** = ಇಷ್ಟನಾಗದಿದ್ದಲ್ಲಿ **ಅವಾಗ್ಗತಿಂ ಏವ** = ದುರ್ಗತಿಯನ್ನೇ **ದದ್ಯಾತ್** = ನೀಡುವನು. **ತೇನ** = ಆದ್ದರಿಂದ **ಅಖಿಲಃ** = ಎಲ್ಲ **ಪುಮರ್ಥಃ** = ಪುರುಷಾರ್ಥವೂ (ಅದಕ್ಕೆ ಸಾಧನವಾದ ಶ್ರೀಹರಿಯು ಸಹ) **ಕಾಮಃ ಏವ** = ಕಾಮವೇ.

**ತಾತ್ಪರ್ಯ** :- ಪರಾತ್ಪರನೂ, ಆದಿಪುರುಷನೂ ಆದ ಶ್ರೀಹರಿಯೂ ಸಹ ತನಗೂ ಇತರರಿಗೂ ಇಷ್ಟನೇ ಆಗಿರುವನು. ಅವನು ಇಷ್ಟನಾಗದಿದ್ದಲ್ಲಿ ದುರ್ಗತಿಯನ್ನೇ ನೀಡುವನು, ಆದ್ದರಿಂದ ಅವನೂ ಕಾಮ ಎನ್ನಿಸುವನು. ಹೀಗೆ ಸಕಲ ಪುರುಷಾರ್ಥಗಳೂ ಕಾಮವೇ ಆಗಿರುವವು.

**ಇಚ್ಛೈವ ಕಾಮೋऽಸ್ತು ತಥಾऽಪಿ ನೈತಾ-**
**ಮೃತೇ ಹಿ ಚಿತ್ತ್ವಂ ಘಟಕುಡ್ಯವತ್ ಸ್ಯಾತ್ ।**
**ಸಾರಸ್ತತಃ ಸೈವ ಚಿದಾತ್ಮಿಕಾऽಪಿ**
**ಸಾ ಚೇತನಾ ಗೂಢತನುಃ ಸದೈವ ॥ ೫೭ ॥**

**ಇಚ್ಛಾ ಏವ ಕಾಮಃ ಅಸ್ತು ತಥಾ ಅಪಿ ನ ಏತಾಂ ಋತೇ ಹಿ ಚಿತ್ತ್ವಂ ಘಟಕುಡ್ಯವತ್ ಸ್ಯಾತ್ । ಸಾರಃ ತತಃ ಸಾ ಏವ ಚಿದಾತ್ಮಿಕಾ ಅಪಿ ಸಾ ಚೇತನಾ ಗೂಢತನುಃ ಸದಾ ಏವ ॥ ೫೭ ॥**

**ಅರ್ಥ** :- **ಇಚ್ಛಾ ಏವ** = ಇಚ್ಛೆಯೇ **ಕಾಮಃ ಅಸ್ತು** = ಕಾಮಶಬ್ದವಾಚ್ಯವಾಗಲಿ. **ತಥಾ ಅಪಿ** = ಹಾಗಿದ್ದರೂ ಕೂಡ **ಏತಾಂ** = ಈ ಇಚ್ಛೆಯನ್ನು **ಋತೇ** = ಬಿಟ್ಟು **ಚಿತ್ತ್ವಂ** = ಚೇತನತ್ವವು **(ಜೀವಸ್ಯ)** = ಜೀವನಿಗೆ **ನ ಸಂಭವತಿ ಹಿ** = ಕೂಡಲಾರದು, **(ಕಿಂತು)** = ಆದರೆ, **ಘಟಕುಡ್ಯವತ್** = ಗಡಿಗೆ ಗೋಡೆಗಳಂತೆ **(ಅಚೇತನತ್ವಂ) ಸ್ಯಾತ್** = ಜಡತ್ವವು ಆಗುವುದು. **ತತಃ** = ಆದ್ದರಿಂದ **ಚಿದಾತ್ಮಿಕಾ** = ಚೇತನಸ್ವರೂಪವಾದ **ಸಾ ಏವ** = ಆ ಇಚ್ಛೆಯೇ **ಸಾರಃ** = ಶ್ರೇಷ್ಠವಾದದುದು. **ಚೇತನಾ** = ಚೇತನರೂಪವಾದ **ಸಾ ಅಪಿ** = ಅದೂ ಸಹ **ಸದಾ ಏವ** = ಯಾವಾಗಲೂ (ಸಂಸಾರದಶೆಯಲ್ಲಿ) **ಗೂಢತನುಃ** = ಗುಪ್ತವಾಗಿರುವುದು.

**ತಾತ್ಪರ್ಯ** :- ಕಾಮಕ್ಕೆ ಇಚ್ಛೆಯೆಂಬ ಅರ್ಥವನ್ನೇ ಇಟ್ಟುಕೊಂಡರೂ, ಅದಿಲ್ಲವಾದಲ್ಲಿ ಚೇತನನೂ ಸಹ ಗಡಿಗೆ, ಗೋಡೆಗಳಂತೆ ಜಡವೆನ್ನಿಸುವನು. ಆದ್ದರಿಂದ ಚೇತನಸ್ವರೂಪವಾದ ಆ ಕಾಮನೆ ಶ್ರೇಷ್ಠವೇ ಆಗಿದೆ. ಚೇತನ ರೂಪವಾದ ಅದು ಸದಾ ಗುಪ್ತರೂಪದಲ್ಲಿಯೇ ಇರುವುದು.

### ಕಾಮದಲ್ಲಿ ತಾರತಮ್ಯ

**ನ ಪ್ರಶ್ನಯೋಗ್ಯಃ ಪೃಥಗೇಷ ಕಾಮ-**
**ಸ್ತೇನೈವ ರಾಜನ್ ಯದಿ ತಾರತಮ್ಯಮ್ ।**
**ಇಚ್ಛಸ್ಯಯಂ ತೇ ತ್ರಿವಿಧೋ ಹಿ ವೇದ್ಯೋ**
**ಧರ್ಮಾರ್ಥಯುಕ್ತಃ ಪರಮೋ ಮತೋಽತ್ರ ॥ ೫೮ ॥**

ನ ಪ್ರಶ್ನಯೋಗ್ಯಃ ಪೃಥಕ್ ಏಷಃ ಕಾಮಃ ತೇನ ಏವ ರಾಜನ್ ಯದಿ ತಾರತಮ್ಯಮ್ । ಇಚ್ಛಸಿ ಅಯಂ ತೇ ತ್ರಿವಿಧಃ ಹಿ ವೇದ್ಯಃ ಧರ್ಮಾರ್ಥಯುಕ್ತಃ ಪರಮಃ ಮತಃ ಅತ್ರ ॥ ೫೮ ॥

**ಅರ್ಥ** :- **ತೇನ ಏವ** = ಆದ್ದರಿಂದಲೇ **ಏಷಃ** = ಈ **ಕಾಮಃ** = ಕಾಮವು **ಪೃಥಕ್** = ಪ್ರತ್ಯೇಕವಾಗಿ **ಪ್ರಶ್ನಯೋಗ್ಯಃ** = ಪ್ರಶ್ನಿಸಲು ಯೋಗ್ಯವಾದುದು **ನ** = ಅಲ್ಲ. **ರಾಜನ್** = ರಾಜನೆ! **ಯದಿ** = ಒಂದು ವೇಳೆ (**ಕಾಮಸ್ಯ**) = ಕಾಮದ **ತಾರತಮ್ಯಂ** = ತಾರತಮ್ಯವನ್ನು **ಇಚ್ಛಸಿ** = (ತಿಳಿಯಲು) ಬಯಸುವೆಯಾದರೆ (**ತರ್ಹಿ**) = ಆಗ **ಅಯಂ** = ಈ ಕಾಮವು **ತೇ** = ನಿನ್ನಿಂದ **ತ್ರಿವಿಧಃ** = ಮೂರು ಬಗೆ (ಎಂದು) **ವೇದ್ಯಃ ಹಿ** = ತಿಳಿಯಲ್ಪಡಲೇಬೇಕು. **ಅತ್ರ** = ಇಲ್ಲಿ (ಈ ಕಾಮತ್ರೈವಿಧ್ಯದಲ್ಲಿ) **ಧರ್ಮಾರ್ಥಯುಕ್ತಃ** = ಧರ್ಮ ಅರ್ಥಗಳಿಂದ ಕೂಡಿದ (**ಕಾಮಃ**) = ಕಾಮವು **ಪರಮಃ** = ಶ್ರೇಷ್ಠವೆಂದು **ಮತಃ** = ಅಂಗೀಕರಿಸಲ್ಪಟ್ಟಿದೆ.

**ಏಕಾವಿರೋಧೀ ಯದಿ ಮಧ್ಯಮೋಽಸೌ**
**ದ್ವಯೋರ್ವಿರೋಧೀ ತು ಸ ಏವ ನೀಚಃ ।**
**ತಸ್ಮಾತ್ ಸ್ವಬುದ್ಧಿಪ್ರಮದಾಭಿರೇವ**
**ಕಾಮಂ ರಮೇಥಾ ಅನುರೂಪಕಾಮಃ ॥ ೫೯ ॥**

**ಏಕಾವಿರೋಧೀ ಯದಿ ಮಧ್ಯಮಃ ಅಸೌ ದ್ವಯೋಃ ವಿರೋಧೀ ತು ಸಃ ಏವ ನೀಚಃ । ತಸ್ಮಾತ್ ಸ್ವಬುದ್ಧಿಪ್ರಮದಾಭಿಃ ಏವ ಕಾಮಂ ರಮೇಥಾಃ ಅನುರೂಪಕಾಮಃ ॥ ೫೯ ॥**

**ಅರ್ಥ** :- **ಯದಿ** = ಒಂದು ವೇಳೆ **ಏಕಾವಿರೋಧೀ (ಚೇತ್)** = (ಧರ್ಮ-ಅರ್ಥಗಳಲ್ಲಿ) ಒಂದಕ್ಕೆ ವಿರೋಧಿಯಲ್ಲದಿದ್ದರೆ **(ತರ್ಹಿ)** = ಆಗ (**ಸಃ**) = ಆ ಕಾಮವು **ಮಧ್ಯಮಃ** = ಮಧ್ಯಮವು. **ಯದಿ** = ಒಂದು ವೇಳೆ **ಅಸೌ** = ಈ ಕಾಮವು **ದ್ವಯೋಃ** = ಎರಡರ (ಧರ್ಮ ಹಾಗೂ ಅರ್ಥಗಳ) **ವಿರೋಧೀ** = ವಿರೋಧಿಯಾದರೆ **(ತರ್ಹಿ) ತು** = ಆಗಂತೂ **ಸಃ** = ಆ ಕಾಮವು **ನೀಚಃ ಏವ** = ನೀಚವೇ ಸರಿ. **ತಸ್ಮಾತ್** = ಆದ್ದರಿಂದ **ಅನುರೂಪಕಾಮಃ (ಸನ್)** = (ಧರ್ಮಾದಿ) ಯೋಗ್ಯರೂಪವಾದ ಕಾಮವನ್ನು ಹೊಂದಿದವನಾಗಿ **ಸ್ವಬುದ್ಧಿಪ್ರಮದಾದಿಭಿಃ ಏವ** = ತನ್ನ ಬುದ್ಧಿಯೆಂಬ ಸ್ತ್ರೀಯರೊಂದಿಗೆ ಮಾತ್ರ **ಕಾಮಂ** = ಯಥೇಷ್ಟವಾಗಿ **ರಮೇಥಾಃ** = ರಮಿಸಬೇಕು.

**ತಾತ್ಪರ್ಯ** :- ಆದ್ದರಿಂದ ಈ ಕಾಮವನ್ನು ಪ್ರತ್ಯೇಕವಾಗಿ ಪ್ರಶ್ನಿಸುವುದೇ ಅನುಚಿತ. ಆದ್ದರಿಂದ ರಾಜನೇ ! ಈ ಕಾಮದಲ್ಲೂ ತಾರತಮ್ಯವನ್ನು ತಿಳಿಯ ಬಯಸುವೆಯಾದರೆ, ಅದು ಮೂರು ಬಗೆ ಎಂದು ತಿಳಿಯಬೇಕು ; ಧರ್ಮ, ಅರ್ಥ ಎರಡರಿಂದಲೂ ಕೂಡಿದ್ದಾಗ ಅದು ಉತ್ತಮ ಎನ್ನಿಸುವುದು; ಒಂದಕ್ಕೆ ಮಾತ್ರ ಅನುಗುಣವಾಗಿದ್ದರೆ ಮಧ್ಯಮ ; ಎರಡಕ್ಕೂ ಅನನುಗುಣವಾಗಿದ್ದಾಗ ಅಧಮ. ಆದ್ದರಿಂದ ತನ್ನ ಬುದ್ಧಿಯೆಂಬ ಸ್ತ್ರೀಯರೊಂದಿಗೆ ಅನುರೂಪ ಕಾಮನಾಗಿ ಸ್ವೇಚ್ಛೆಯಿಂದ ರಮಿಸಬೇಕು.

**ರಾಜನ್ ನ ಕಾಮಾದಪರಂ ಶುಭಂ ಹಿ**
**ಪರೋ ಹಿ ಕಾಮೋ ಹರಿರೇವ ಯೇನ ।**
**ಪ್ರಾಜ್ಞಃ ಸುಹೃಚ್ಛಂದನಸಾರಲಿಪ್ತೋ**
**ವಿಚಿತ್ರಮಾಲ್ಯಾಭರಣೈರುಪೇತಃ ।**
**ಇದಂ ವಚೋ ವ್ಯಾಸಸಮಾಸಯುಕ್ತಂ**
**ಸಂಪ್ರೋಚ್ಯ ಭೀಮೋ ವಿರರಾಮ ವೀರಃ ॥ ೬೦ ॥**

ರಾಜನ್ ನ ಕಾಮಾತ್ ಅಪರಂ ಶುಭಂ ಹಿ ಪರಃ ಹಿ ಕಾಮಃ ಹರಿಃ ಏವ ಯೇನ । ಪ್ರಾಜ್ಞಃ ಸುಹೃತ್ ಚಂದನಸಾರಲಿಪ್ತಃ ವಿಚಿತ್ರಮಾಲ್ಯಾಭರಣೈಃ ಉಪೇತಃ । ಇದಂ ವಚಃ ವ್ಯಾಸಸಮಾಸಯುಕ್ತಂ ಸಂಪ್ರೋಚ್ಯ ಭೀಮಃ ವಿರರಾಮ ವೀರಃ ॥ ೬೦ ॥

**ಅರ್ಥ** :- **ರಾಜನ್** = ರಾಜನೆ! **ಕಾಮಾತ್** = ಕಾಮಕ್ಕಿಂತಲೂ **ಅಪರಂ** = ಬೇರೊಂದು **ಶುಭಂ** = ಉತ್ತಮವು **ನ ಹಿ** = ಇಲ್ಲ. **ಯೇನ** = ಯಾವ ಕಾರಣದಿಂದ **ಪ್ರಾಜ್ಞಃ** = ಸರ್ವಜ್ಞನೂ **ಸುಹೃತ್** = (ಭಕ್ತರ) ಸಖನೂ **ಚಂದನಸಾರಲಿಪ್ತಃ** = ಶ್ರೀಗಂಧದ ಸಾರದಿಂದ ಲೇಪಿತನೂ **ವಿಚಿತ್ರಮಾಲ್ಯಾಭರಣೈಃ** = ವಿಚಿತ್ರವಾದ ಮಾಲೆ ಆಭರಣಗಳಿಂದ **ಉಪೇತಃ** = ಕೂಡಿದವನಾದ **ಹರಿಃ ಏವ** = ಶ್ರೀಹರಿಯೇ **ಪರಃ** = ಶ್ರೇಷ್ಠವಾದ **ಕಾಮಃ ಹಿ** = ಕಾಮನೋ (**ತೇನ ಕಾರಣೇನ ಕಾಮಾತ್ ಅಪರಂ ಶುಭಂ ನ ಹಿ**) = (ಆ ಕಾರಣದಿಂದಾಗಿ ಕಾಮಕ್ಕಿಂತ ಬೇರೊಂದು ಉತ್ತಮವಾದದ್ದು ಇಲ್ಲ). **ವೀರಃ** = ಹಿಡಿದ ಕೆಲಸವನ್ನು ಪೂರೈಸುವ **ಭೀಮಃ** = ಭೀಮನು **ವ್ಯಾಸಸಮಾಸಯುಕ್ತಂ** = ವಿಸ್ತಾರ ಹಾಗೂ ಸಂಕ್ಷೇಪದಿಂದ ಕೂಡಿದ **ಇದಂ** = ಈ **ವಚಃ** = ಮಾತನ್ನು **ಸಂಪ್ರೋಚ್ಯ** = ಚೆನ್ನಾಗಿ ತಿಳಿಸಿ **ವಿರರಾಮ** = ಸುಮ್ಮನಾದ.

**ತಾತ್ಪರ್ಯ** :- ರಾಜನೇ ! ಕಾಮಕ್ಕಿಂತ ಬೇರೆಯಾದ ಉತ್ತಮ ಪುರುಷಾರ್ಥ ಇಲ್ಲ. ಪ್ರಾಜ್ಞನೂ, ಸಖನೂ ಶ್ರೀಗಂಧದ ಸಾರದಿಂದ ಅನುಲಿಪ್ತನೂ, ವಿಚಿತ್ರವಾದ ಮಾಲೆ, ಆಭರಣಗಳಿಂದ ಕೂಡಿದವನೂ ಆದ ಸರ್ವೋತ್ತಮನಾದ ಶ್ರೀಹರಿಯೇ ಅತ್ಯುತ್ತಮವಾದ ಕಾಮನಾಗಿರುವನು. ಹೀಗೆ ಸಂಕ್ಷೇಪ ವಿಸ್ತಾರಗಳಿಂದ ಕೂಡಿದ ಮಾತನ್ನು ವೀರನಾದ ಭೀಮ ಚೆನ್ನಾಗಿ ತಿಳಿಸಿ ಸುಮ್ಮನಾದ.

### ಮೋಕ್ಷವೇ ಶ್ರೇಷ್ಠ ಪುರುಷಾರ್ಥ ಎಂದ ಯುಧಿಷ್ಠಿರ

**ಪ್ರಶಸ್ಯ ಭೀಮಮನ್ಯಾಂಶ್ಚ ರಾಜಾ ಮೋಕ್ಷಮಥಾಸ್ತುವತ್ ।**
**ಸ್ವಯುಕ್ತೇರಪ್ರತೀಪತ್ವಾನ್ನಿರಾಚಕ್ರೇ ನ ಮಾರುತಿಃ ॥ ೬೧ ॥**

ಪ್ರಶಸ್ಯ ಭೀಮಂ ಅನ್ಯಾನ್ ಚ ರಾಜಾ ಮೋಕ್ಷಂ ಅಥ ಅಸ್ತುವತ್ । ಸ್ವಯುಕ್ತೇಃ ಅಪ್ರತೀಪತ್ವಾತ್ ನಿರಾಚಕ್ರೇ ನ ಮಾರುತಿಃ ॥ ೬೧ ॥

**ಅರ್ಥ** :- **ರಾಜಾ** = ರಾಜನಾದ ಯುಧಿಷ್ಠಿರನು **ಭೀಮಂ** = ಭೀಮನ್ನು **ಚ** = ಮತ್ತು **ಅನ್ಯಾನ್** = ಇತರರನ್ನು **ಪ್ರಶಸ್ಯ** = ಪ್ರಶಂಸಿಸಿ **ಅಥ** = ಅನಂತರ **ಮೋಕ್ಷಂ** = ಮೋಕ್ಷವನ್ನು **ಅಸ್ತುವತ್** = ಪ್ರಶಂಸಿಸಿದ. **ಮಾರುತಿಃ** = ವಾಯುಪುತ್ರನಾದ ಭೀಮನು **ಸ್ವಯುಕ್ತೇಃ** = ತನ್ನ ಯುಕ್ತಿಗೆ **ಅಪ್ರತೀಪತ್ವಾತ್** = ವಿರುದ್ಧವಲ್ಲದ್ದರಿಂದ **ನ** **ನಿರಾಚಕ್ರೇ** = ನಿರಾಕರಿಸಲಿಲ್ಲ.

**ತಾತ್ಪರ್ಯ** :- ಧರ್ಮರಾಜನು ಭೀಮನನ್ನು ಮತ್ತು ಇತರರನ್ನು ಪ್ರಶಂಸಿಸಿ ಮೋಕ್ಷವನ್ನೇ ಶ್ರೇಷ್ಠ ಪುರುಷಾರ್ಥವೆಂದು ಕೊಂಡಾಡಿದ. ತನ್ನ ಮಾತಿಗೆ ಅದು ವಿರುದ್ಧವೇನೂ ಆಗಿರಲಿಲ್ಲವಾದ್ದರಿಂದ ಭೀಮಸೇನ ಅದನ್ನು ನಿರಾಕರಿಸಲಿಲ್ಲ.

॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮಹಾಭಾರತತಾತ್ಪರ್ಯನಿರ್ಣಯೇ ಧರ್ಮರಾಜಸಂದೇಹನಿವೃತ್ತಿಕಥನಂ ನಾಮ ಏಕೋನತ್ರಿಂಶೋಽಧ್ಯಾಯಃ ॥ ೨೯ ॥

# ಅಧ್ಯಾಯ - 30

**(ಪಾಂಡವಾಶ್ವಮೇಧಕಥನಮ್)**

(ಪಾಂಡವರಾಜ್ಯಭಾರ, ಕಲಿನಿಗ್ರಹ, ಅನುಗೀತಾ, ಉದಂಕವೃತ್ತಾಂತ, ಪರೀಕ್ಷಿತನ ಜನನ, ಅಶ್ವಮೇಧಯಾಗ, ಬಭ್ರುವಾಹನಪ್ರಸಂಗ, ಲಕ್ಷಣಶಾಸ್ತ್ರದ ಹಿರಿಮೆ, ಯಾಗವೈಭವ, ಮುಂಗುಸಿಯ ಪ್ರಸಂಗ)

**ವಸುವಾಗಿ ತೆರಳಿದ ಭೀಷ್ಮ - ಅಶ್ವಮೇಧಯಾಗಕ್ಕೆ ವ್ಯಾಸರ ಆದೇಶ**

**ಅಥ ಕೃಷ್ಣಮನುಸ್ಮೃತ್ಯ ಭೀಷ್ಮೇ ಸ್ವಾಂ ವಸುತಾಂ ಗತೇ ।**
**ಕೃತ್ವಾ ಕಾರ್ಯಾಣಿ ಸರ್ವಾಣಿ ಗಂಗಾಮಾಶ್ವಾಸ್ಯ ದುಃಖಿತಾಮ್ ॥ ೧ ॥**

**ಆಶ್ವಾಸಿತಶ್ಚ ಕೃಷ್ಣಾಭ್ಯಾಂ ಧರ್ಮಜೋ ದುಃಖಿತಃ ಪುನಃ ।**
**ಪರಾಶರಸುತೇನೋಕ್ತಃ ಕೃಷ್ಣೇನಾನಂತರಾಧಸಾ ॥ ೨ ॥**

**ಅಥ ಕೃಷ್ಣಂ ಅನುಸ್ಮೃತ್ಯ ಭೀಷ್ಮೇ ಸ್ವಾಂ ವಸುತಾಂ ಗತೇ । ಕೃತ್ವಾ ಕಾರ್ಯಾಣಿ ಸರ್ವಾಣಿ ಗಂಗಾಂ ಆಶ್ವಾಸ್ಯ ದುಃಖಿತಾಮ್ ॥ ಆಶ್ವಾಸಿತಃ ಚ ಕೃಷ್ಣಾಭ್ಯಾಂ ಧರ್ಮಜಃ ದುಃಖಿತಃ ಪುನಃ । ಪರಾಶರಸುತೇನ ಉಕ್ತಃ ಕೃಷ್ಣೇನ ಅನಂತರಾಧಸಾ ॥**

**ಅರ್ಥ :-** **ಅಥ** = ಅನಂತರ **ಕೃಷ್ಣಂ** = ಶ್ರೀಕೃಷ್ಣನನ್ನು **ಅನುಸ್ಮೃತ್ಯ** = ಪುನಃ ಪುನಃ ಸ್ಮರಿಸಿ **ಭೀಷ್ಮೇ** = ಭೀಷ್ಮರು **ಸ್ವಾಂ** = ತಮ್ಮ **ವಸುತಾಂ** = ವಸುರೂಪವನ್ನು **ಗತೇ (ಸತಿ)** = ಸೇರಿಕೊಳ್ಳಲು **ಧರ್ಮಜಃ** = ಧರ್ಮಪುತ್ರನಾದ ಯುಧಿಷ್ಠಿರನು **ಸರ್ವಾಣಿ** = ಸಕಲ **ಕಾರ್ಯಾಣಿ** = ಕಾರ್ಯಗಳನ್ನು **ಕೃತ್ವಾ** = ಮಾಡಿ **ದುಃಖಿತಾಮ್** = ದುಃಖಿತಳಾದ **ಗಂಗಾಂ** = ಗಂಗೆಯನ್ನು **ಆಶ್ವಾಸ್ಯ** = ಸಾಂತ್ವನಪಡಿಸಿ **ಕೃಷ್ಣಾಭ್ಯಾಂ** = ವೇದವ್ಯಾಸರು ಹಾಗೂ ಶ್ರೀಕೃಷ್ಣನಿಂದ **(ಸ್ವಯಂ ಚ)** = ತಾನೂ ಸಹ **ಆಶ್ವಾಸಿತಃ ಚ (ಆಶ್ವಾಸಿತಃ ಅಪಿ)** = ಸಾಂತ್ವನಪಡಿಸಲ್ಪಟ್ಟವನಾದರೂ **ಧರ್ಮಜಃ** =

ಧರ್ಮಜನು **ದುಃಖಿತಃ (ಸನ್)** = ದುಃಖಿತನಾದವನಾಗಿ **ಪುನಃ** = ಮತ್ತೆ **ಅನಂತರಾಧಸಾ** = ಅನಂತಮಹಿಮನಾದ **ಪರಾಶರಸುತೇನ** = ಪರಾಶನಪುತ್ರತ್ವೇನ ಅವತರಿಸಿದ ಶ್ರೀವೇದವ್ಯಾಸರೂಪದ **ಕೃಷ್ಣೇನ** = ಶ್ರೀಹರಿಯಿಂದ **ಉಕ್ತಃ (ಅಭೂತ್)** = ಹೇಳಲ್ಪಟ್ಟವನಾದನು.

**ತಾತ್ಪರ್ಯ :-** ಬಳಿಕ ಭೀಷ್ಮರು ಕೃಷ್ಣನನ್ನು ಸ್ಮರಿಸಿ, ತಮ್ಮ ವಸುರೂಪವನ್ನು ಸೇರಲು, ಅವರಿಗೆ ಎಲ್ಲ ಉತ್ತರಕ್ರಿಯೆಗಳನ್ನು ಮಾಡಿ, ದುಃಖಿತಳಾಗಿದ್ದ ಗಂಗೆಯನ್ನು ಕೃಷ್ಣವೇದವ್ಯಾಸರು ಸಾಂತ್ವನಪಡಿಸಿದರು ; ಧರ್ಮರಾಜನನ್ನೂ ಸಾಂತ್ವನಪಡಿಸಿದರು. ಅವನು ಮರಳಿ ದುಃಖಿತನಾದ. ಆಗ ಅಪರಿಮಿತಸಿದ್ಧಿಪ್ರದರಾದ ಶ್ರೀವೇದವ್ಯಾಸರು ತಿಳಿಸಿದರು.

**ಅಪಾಪೇ ಪಾಪಶಂಕಿತ್ವಾದಶ್ವಮೇಧೈರ್ಯಜಾಚ್ಯುತಮ್ ।**
**ಕುರು ರಾಜ್ಯಂ ಚ ಧರ್ಮೇಣ ಪಾಲಯಾಪಾಲಕಾಃ ಪ್ರಜಾಃ ॥ ೩ ॥**

**ಅಪಾಪೇ ಪಾಪಶಂಕಿತ್ವಾತ್ ಅಶ್ವಮೇಧೈಃ ಯಜ ಅಚ್ಯುತಮ್ । ಕುರು ರಾಜ್ಯಂ ಚ ಧರ್ಮೇಣ ಪಾಲಯ ಅಪಾಲಕಾಃ ಪ್ರಜಾಃ ॥**

**ಅರ್ಥ :- ಅಪಾಪೇ** = ಪಾಪವಿಲ್ಲದಾಗಲೂ **ಪಾಪಶಂಕಿತ್ವಾತ್** = ಅಧರ್ಮವೆಂದು ಸಂದೇಹಿಸುತ್ತಿರುವುದರಿಂದ **ಅಶ್ವಮೇಧೈಃ** = ಅಶ್ವಮೇಧಯಾಗಗಳಿಂದ **ಅಚ್ಯುತಂ** = ಅಚ್ಯುತನಾದ ಶ್ರೀಹರಿಯನ್ನು ಕುರಿತು **ಯಜ** = ಯಜ್ಞವನ್ನು ಮಾಡು **ರಾಜ್ಯಂ ಚ** = ಮತ್ತು ರಾಜ್ಯವನ್ನು **ಕುರು** = ಪಾಲಿಸು **ಅಪಾಲಕಾಃ** = ಪಾಲಕರಿಲ್ಲದಿರುವ **ಪ್ರಜಾಃ** = ಪ್ರಜೆಗಳನ್ನು **ಧರ್ಮೇಣ** = ಧರ್ಮದಿಂದ **ಪಾಲಯ** = ಪಾಲಿಸು ॥

**ತಾತ್ಪರ್ಯ :-** ''ಧರ್ಮವನ್ನೂ ಅಧರ್ಮವೆಂದು ಶಂಕಿಸುತ್ತಿರುವುದ ರಿಂದ ನೀನು ಅಶ್ವಮೇಧಗಳಿಂದ ಶ್ರೀಹರಿಯನ್ನು ಆರಾಧಿಸು. ಧರ್ಮದಿಂದ ರಾಜ್ಯವಾಳು; ಅನಾಥರಾದ ಪ್ರಜೆಗಳನ್ನು ಪಾಲಿಸು''.

### ಧರ್ಮರಾಜನ ವಿಚಿತ್ರ ರಾಜ್ಯಭಾರ

**ಇತ್ಯುಕ್ತಃ ಸ ತಥಾ ಚಕ್ರೇ ತ್ಯಕ್ತ್ವಾ ಭೋಗಾಂಶ್ಚ ಕೃತ್ಸ್ನಶಃ ।**
**ಗೋವ್ರತಾದಿವ್ರತೈರ್ಯುಕ್ತಃ ಪಾಲಯಾಮಾಸ ಮೇದಿನೀಮ್ ॥ ೪ ॥**

**ಇತಿ ಉಕ್ತಃ ಸಃ ತಥಾ ಚಕ್ರೇ ತ್ಯಕ್ತ್ವಾ ಭೋಗಾನ್ ಚ ಕೃತ್ಸ್ನಶಃ । ಗೋವ್ರತಾದಿವ್ರತೈಃ ಯುಕ್ತಃ ಪಾಲಯಾಮಾಸ ಮೇದಿನೀಮ್ ॥**

**ಅರ್ಥ :-** **ಇತಿ** = ಹೀಗೆ **ಉಕ್ತಃ** = ಹೇಳಲ್ಪಟ್ಟ **ಸಃ** = ಆ ಯುಧಿಷ್ಠಿರನು **ತಥಾ** = ಹಾಗೆಯೇ **ಚಕ್ರೇ** = ಮಾಡಿದನು **ಗೋವ್ರತಾದಿವ್ರತೈಃ** = ಗೋವ್ರತ ಮೊದಲಾದ ವ್ರತಗಳಿಂದ **ಯುಕ್ತಃ** = ಕೂಡಿದವನಾಗಿ **ಚ** = ಮತ್ತು **ಭೋಗಾನ್** = ಭೋಗಗಳನ್ನು **ಕೃತ್ಸ್ನಶಃ** = ಸಂಪೂರ್ಣವಾಗಿ **ತ್ಯಕ್ತ್ವಾ** = ತ್ಯಜಿಸಿ **ಮೇದಿನೀಂ** = ಭೂಮಿಯನ್ನು **ಪಾಲಯಾಮಾಸ** = ಪಾಲಿಸಿದನು.

**ತಾತ್ಪರ್ಯ :-** ವೇದವ್ಯಾಸರು ಹೀಗೆ ಹೇಳಲು, ಧರ್ಮರಾಜ ಹಾಗೆಯೇ ಮಾಡಿದ. ಭೋಗಗಳನ್ನೆಲ್ಲ ಸಂಪೂರ್ಣ ತೊರೆದು, ಗೋವ್ರತ ಮೊದಲಾದ ವ್ರತಗಳನ್ನು ಆಚರಿಸುತ್ತ ಭೂಮಿಯನ್ನು ಪಾಲಿಸಿದ.

**ದದೌ ದೇಯಾನಿ ಮುಖ್ಯಾನಿ ಯಥಾಕಾಮಮಖಂಡಿತಮ್ ।**
**ನೈವಾರ್ಥೀ ವಿಮುಖಃ ಕಶ್ಚಿದಭೂದ್ಯೋಗ್ಯಃ ಕದಾಚನ ॥ ೫ ॥**

**ದದೌ ದೇಯಾನಿ ಮುಖ್ಯಾನಿ ಯಥಾಕಾಮಂ ಅಖಂಡಿತಮ್ । ನ ಏವ ಅರ್ಥೀ ವಿಮುಖಃ ಕಶ್ಚಿತ್ ಅಭೂತ್ ಯೋಗ್ಯಃ ಕದಾಚನ ॥**

**ಅರ್ಥ :-** **ಅಖಂಡಿತಂ** = ತಡೆಯಿಲ್ಲದೇ **ಯಥಾಕಾಮಂ** = ಅವರವರ ಬಯಕೆಗೆ ತಕ್ಕಂಥ **ಮುಖ್ಯಾನಿ** = ಮುಖ್ಯವಾದಂತಹ **ದೇಯಾನಿ** = ದಾನಯೋಗ್ಯ ಪದಾರ್ಥಗಳನ್ನು **ದದೌ** = ದಾನಮಾಡಿದನು **ಯೋಗ್ಯಃ** = ಅರ್ಹನಾದ **ಅರ್ಥೀ** = ಬೇಡಿಬಂದ **ಕಶ್ಚಿತ್** = ಯಾವನೂ ಸಹ **ಕದಾಚನ** = ಎಂದೂ ಸಹ **ವಿಮುಖಃ** = (ಬರಿಗೈಯಲ್ಲಿ) ಹಿಂತಿರುಗಿದವನಾಗಿ **ನ ಅಭೂತ್ ಏವ** = ಆಗಲೇ ಇಲ್ಲ.

**ತಾತ್ಪರ್ಯ :-** ಮುಖ್ಯದಾನಗಳನ್ನು ಧರ್ಮರಾಜ ಯಥೇಚ್ಛವಾಗಿ ನಿರಂತರ ಮಾಡಿದ. ಬೇಡಿ ಬಂದ ಯಾವ ಯೋಗ್ಯನೂ ಸಹ ತಾನು ಬಯಸಿದ್ದನ್ನು ಪಡೆಯದೆ ಎಂದೂ ಹಿಂದಿರುಗುತ್ತಿರಲಿಲ್ಲ.

**ಪ್ರಷ್ಟಾ ಚ ದಾತಾಽಖಿಲರಾಜನಮ್ಯೋ**
**ಯಷ್ಟಾ ಚ ಧರ್ಮಾತ್ಮಜ ಏವ ತತ್ರ ।**

**ಬಭೂವ ಪಾಂಡೋರ್ಗೃಹಮಾವಸಂಶ್ಚ**
**ರಾಜಾಧಿರಾಜೋ ವನಿತಾನಿವೃತ್ತಃ ॥ ೬ ॥**

ಪ್ರಷ್ಟಾ ಚ ದಾತಾ ಅಖಿಲರಾಜನಮ್ಯಃ ಯಷ್ಟಾ ಚ ಧರ್ಮಾತ್ಮಜಃ ಏವ ತತ್ರ । ಬಭೂವ ಪಾಂಡೋಃ ಗೃಹಂ ಆವಸನ್ ಚ ರಾಜಾಧಿರಾಜಃ ವನಿತಾನಿವೃತ್ತಃ ॥ ೬ ॥

**ಅರ್ಥ** :- **ತತ್ರ** = (ತೇಷು ಮಧ್ಯೇ) ಅವರ ಮಧ್ಯದಲ್ಲಿ **ಅಖಿಲರಾಜನಮ್ಯಃ** = ಸಕಲರಾಜರುಗಳಿಂದ ನಮಸ್ಕರಿಸಲ್ಪಡುವವನಾಗಿ **ರಾಜಾಧಿರಾಜಃ** = ರಾಜಾಧಿರಾಜನಾದ **ಧರ್ಮಾತ್ಮಜಃ** = ಧರ್ಮಪುತ್ರನಾದ ಯುಧಿಷ್ಠಿರನು **ವನಿತಾನಿವೃತ್ತಃ** = ಸ್ತ್ರೀಭೋಗವನ್ನು ತೊರೆದವನಾಗಿ **ಪಾಂಡೋಃ** = ಪಾಂಡುರಾಜನ **ಗೃಹಂ** = ಮನೆಯಲ್ಲಿ **ಆವಸನ್** = ನೆಲೆಸಿದವನಾಗಿ **ಪ್ರಷ್ಟಾ ಚ** = ಪ್ರಶ್ನೆಮಾಡುವವನಾಗಿ ಹಾಗೂ **ದಾತಾ ಚ** = ದಾನ ಮಾಡುವವನಾಗಿ **ಯಷ್ಟಾ ಏವ ಚ** = ಯಾಗಗಳನ್ನು ಮಾಡುವವನಾಗಿಯೂ **ಬಭೂವ** = ಆದನು.

**ತಾತ್ಪರ್ಯ** :- ಧರ್ಮರಾಜ ಎಲ್ಲರನ್ನೂ ಕೇಳುವವನಾಗಿಯೂ, ನೀಡುವವನಾಗಿಯೂ, ಸಕಲ ರಾಜರುಗಳಿಂದ ವಂದ್ಯನಾಗಿಯೂ, ಯಾಗಗಳನ್ನು ಮಾಡುವವನಾಗಿಯೂ ಅಲ್ಲಿ ನೆಲೆಸಿದ. ಪಾಂಡುರಾಜನ ಮನೆಯಲ್ಲಿ ವಾಸಿಸತೊಡಗಿದ ರಾಜಾಧಿರಾಜನಾದ ಅವನು ಸ್ತ್ರೀಭೋಗವನ್ನೂ ತೊರೆದ.

### ಭೀಮಸೇನನ ಅಪೂರ್ವ ಭೋಗವೈಭವ

**ಭೀಮಸ್ತು ದೌರ್ಯೋಧನಮೇವ ಸದ್ಮ**
**ಪ್ರಪೇದಿವಾನೂರ್ಜಿತವೀರ್ಯಲಬ್ಧಮ್ ।**
**ಕೃಷ್ಣಾಸಹಾಯಃ ಸುರರಾಜಯೋಗ್ಯಾ-**
**ನಭುಂಕ್ತ ಭೋಗಾನ್ ಯುವರಾಜ ಏವ ॥ ೭ ॥**

ಭೀಮಃ ತು ದೌರ್ಯೋಧನಂ ಏವ ಸದ್ಮ ಪ್ರಪೇದಿವಾನ್ ಊರ್ಜಿತವೀರ್ಯ-ಲಬ್ಧಮ್ । ಕೃಷ್ಣಾಸಹಾಯಃ ಸುರರಾಜಯೋಗ್ಯಾನ್ ಅಭುಂಕ್ತ ಭೋಗಾನ್ ಯುವರಾಜಃ ಏವ ॥ ೭ ॥

**ಅರ್ಥ** :- **ಯುವರಾಜಃ** = ಯುವರಾಜನಾದ **ಭೀಮಃ ತು** = ಭೀಮನಾದರೋ **ಊರ್ಜಿತವೀರ್ಯಲಬ್ಧಂ** = ಪೂರ್ಣವಾದ ಸಾಮರ್ಥ್ಯ ದಿಂದ ಲಭಿಸಿದಂತಹ **ದೌರ್ಯೋಧನಂ** = ದುರ್ಯೋಧನನ **ಸದ್ಮ** ಏವ = ಮನೆಯನ್ನೇ **ಪ್ರಪೇದಿವಾನ್** = ಪಡೆದವನಾದನು **ಕೃಷ್ಣಾಸಹಾಯಃ** ಏವ = ದ್ರೌಪದಿಯೊಂದಿಗೆ ಕೂಡಿಕೊಂಡವನಾಗಿಯೇ **ಸುರರಾಜಯೋಗ್ಯಾನ್** = ಸುರರಾಜನಾದ ದೇವೇಂದ್ರನಿಗೆ ಯೋಗ್ಯವೆನ್ನಿಸುವಂತಹ **ಭೋಗಾನ್** = ಭೋಗಗಳನ್ನು **ಅಭುಂಕ್ತ** = ಭೋಗಿಸಿದನು.

**ತಾತ್ಪರ್ಯ** :- ಭೀಮನಾದರೋ ತನ್ನ ಮಹಾಪರಾಕ್ರಮದಿಂದ ಪಡೆದ ದುರ್ಯೋಧನನ ಮನೆಯಲ್ಲೇ ನೆಲೆಸಿದ. ಯುವರಾಜನಾಗಿದ್ದು ದೇವರಾಜ ನಾದ ಇಂದ್ರನಿಗೆ ಯೋಗ್ಯವಾದ ಭೋಗಗಳನ್ನು ದ್ರೌಪದಿಯೊಂದಿಗೆ ಅನುಭವಿಸಿದ.

ಭೀಮನಷ್ಟೇ ದ್ರೌಪದೀಪತಿ

**ಕೃಷ್ಣಾ ಚ ಪಾರ್ಥಾಂಶ್ಚತುರೋ ವಿಹಾಯ ಸುವ್ಯಕ್ತಸಾರಸ್ವತಶುದ್ಧಭಾವಾ ।**
**ರರಾಜ ರಾಜಾವರಜೇನ ನಿತ್ಯಮನನ್ಯಯೋಗೇನ ಶಿಖೇವ ವಹ್ನೇಃ ॥ ೮ ॥**

**ಕೃಷ್ಣಾ ಚ ಪಾರ್ಥಾನ್ ಚತುರಃ ವಿಹಾಯ ಸುವ್ಯಕ್ತಸಾರಸ್ವತಶುದ್ಧಭಾವಾ । ರರಾಜ ರಾಜಾವರಜೇನ ನಿತ್ಯಂ ಅನನ್ಯಯೋಗೇನ ಶಿಖಾ ಇವ ವಹ್ನೇಃ ॥**

**ಅರ್ಥ** :- **ಸುವ್ಯಕ್ತಸಾರಸ್ವತಶುದ್ಧಭಾವಾ** = ಸಂಪೂರ್ಣವಾಗಿ ಅಭಿವ್ಯಕ್ತವಾದ ಭಾರತಿಯ ಸ್ವರೂಪವನ್ನು ಹೊಂದಿದವಳಾಗಿ **ಕೃಷ್ಣಾ ಚ** = ದ್ರೌಪದಿಯು ಸಹ **ಚತುರಃ** = ನಾಲ್ವರು **ಪಾರ್ಥಾನ್** = ಪಾಂಡವರನ್ನು **ವಿಹಾಯ** = ತೊರೆದು **ಅನನ್ಯಯೋಗೇನ** = ಬೇರಾರ ಸಂಪರ್ಕವನ್ನು ಪಡೆಯದವಳಾಗಿ **ವಹ್ನೇಃ** = ಅಗ್ನಿಯ **ಶಿಖಾ ಇವ** = ಜ್ವಾಲೆಯಂತೆ **ರಾಜಾವರಜೇನ** = ಯುವರಾಜನಾದ ಭೀಮಸೇನನೊಂದಿಗೆ **ನಿತ್ಯಂ** = ಪ್ರತಿನಿತ್ಯವೂ **ರರಾಜ** = ಶೋಭಿಸಿದಳು.

**ತಾತ್ಪರ್ಯ** :- ದ್ರೌಪದಿಯು ತನ್ನಲ್ಲಿ ಆಗ ಭಾರತಿಸ್ವರೂಪವೇ ಪೂರ್ಣವಾಗಿ ಅಭಿವ್ಯಕ್ತವಾದ್ದರಿಂದ ಇತರ ನಾಲ್ವರು ಪಾಂಡವರನ್ನು ಬಿಟ್ಟು,

ಭೀಮನೊಡನೆಯೇ ಸದಾ ನೆಲೆಸಿ, ಅಗ್ನಿಯ ಜ್ವಾಲೆಯಂತೆ ಅನ್ಯರ ಸಂಪರ್ಕವಿಲ್ಲದೆ ಶೋಭಿಸಿದಳು.

**ಪ್ರೀತ್ಯೈವ ವಿಜ್ಞಾನಯುಜಾಽನ್ಯಪಾರ್ಥೈಃ**
**ಸಂವಾದತಃ ಪರಿಹೃತಾ ಗತಭಾವಿಕಾಲೇ ।**
**ಅಪಿ ಸ್ವಕೀಯಂ ಪತಿಮೇವ ಭೀಮ-**
**ಮವಾಪ್ಯ ಸಾ ಪರ್ಯಚರನ್ಮುದೈವ ॥ ೯ ॥**

**ಪ್ರೀತ್ಯಾ ಏವ ವಿಜ್ಞಾನಯುಜಾ ಅನ್ಯಪಾರ್ಥೈಃ ಸಂವಾದತಃ ಪರಿಹೃತಾ ಗತಭಾವಿಕಾಲೇ । ಅಪಿ ಸ್ವಕೀಯಂ ಪತಿಂ ಏವ ಭೀಮಂ ಅವಾಪ್ಯ ಸಾ ಪರ್ಯಚರತ್ ಮುದಾ ಏವ ॥**

**ಅರ್ಥ :-** **ಅನ್ಯಪಾರ್ಥೈಃ** = ಇತರ ಪಾಂಡವರೊಂದಿಗೆ **ವಿಜ್ಞಾನಯುಜಾ** = ವಿಶೇಷಜ್ಞಾನದಿಂದ ಕೂಡಿದ **ಪ್ರೀತ್ಯಾ** = ಪ್ರೀತಿಯ **ಸಂವಾದತಃ ಏವ** = ಒಪ್ಪಿಗೆಯಿಂದಲೇ **ಪರಿಹೃತಾ** = ಬಿಡಲ್ಪಟ್ಟವಳಾದ **ಸಾ** = ಆ ದ್ರೌಪದಿಯು **ಗತಭಾವಿಕಾಲೇ** = ಹಿಂದಿನ ಹಾಗೂ ಮುಂದಿನ ಕಾಲದಲ್ಲೂ **ಅಪಿ** = ಸಹ **ಸ್ವಕೀಯಂ** = ತನ್ನ **ಪತಿಂ** = ಪತಿಯಾದ **ಭೀಮಂ ಏವ** = ಭೀಮಸೇನನನ್ನೇ **ಅವಾಪ್ಯ** = ಹೊಂದಿದವಳಾಗಿ **ಮುದಾ ಏವ** = ಆನಂದದಿಂದಲೇ **ಪರ್ಯಚರತ್** = ಸೇವಿಸಿದಳು.

**ತಾತ್ಪರ್ಯ :-** ಇತರ ಪಾಂಡವರು ಮಹಾಜ್ಞಾನಿಯಾದ ಭೀಮನೊಂದಿಗೆ ಪ್ರೀತಿಯಿಂದಲೇ ಪರಸ್ಪರ ಸಮ್ಮತಿಯಿಂದ ಭೀಮನಿಗೇ ದ್ರೌಪದಿಯನ್ನು ಒಪ್ಪಿಸಿದರು. ಹಿಂದುಮುಂದಿನ ಸಕಲ ಕಾಲಗಳಲ್ಲೂ ತನ್ನ ಪತಿಯೇ ಆದ ಭೀಮನನ್ನು ಹೊಂದಿ, ದ್ರೌಪದಿಯು ಆನಂದದಿಂದಲೇ ಅವನನ್ನು ಸೇವಿಸಿದಳು.

### ಎರಡು ರೂಪದ ಭಾರತೀ

**ರರಾಜ ರಾಜಾವರಜಸ್ತಯಾ ಸ**
**ದ್ವಿರೂಪಯಾ ಸೋಮಕಕಾಶಿಜಾತಯಾ ।**
**ಶ್ರಿಯಾ ಭುವಾ ಚೈವ ಯಥಾಽಬ್ಜನಾಭೋ**
**ನಿಹತ್ಯ ಸರ್ವಾನ್ ದಿತಿಜಾನ್ ಮಹಾಬ್ಧೌ ॥ ೧೦ ॥**

ರರಾಜ ರಾಜಾವರಜಃ ತಯಾ ಸಃ ದ್ವಿರೂಪಯಾ ಸೋಮಕಕಾಶಿಜಾತಯಾ । ಶ್ರಿಯಾ ಭುವಾ ಚ ಏವ ಯಥಾ ಅಬ್ಜನಾಭಃ ನಿಹತ್ಯ ಸರ್ವಾನ್ ದಿತಿಜಾನ್ ಮಹಾಬ್ಧೌ॥

**ಅರ್ಥ** :- **ಯಥಾ** = ಹೇಗೆ **ಅಬ್ಜನಾಭಃ** = ಪದ್ಮನಾಭನಾದ ಶ್ರೀಹರಿಯು **ಸರ್ವಾನ್** = ಸಕಲ **ದಿತಿಜಾನ್** = ದೈತ್ಯರನ್ನು **ನಿಹತ್ಯ** = ಸಂಹರಿಸಿ **ಮಹಾಬ್ಧೌ** = ಕ್ಷೀರಮಹಾಸಾಗರದಲ್ಲಿ **ಶ್ರಿಯಾ** = ಶ್ರೀದೇವಿಯಿಂದಲೂ **ಚ** = ಮತ್ತು **ಭುವಾ ಏವ** = ಭೂದೇವಿಯಿಂದಲೂ ಕೂಡಿದವನಾಗಿಯೇ (**ರರಾಜ**) = ಶೋಭಿಸಿದನು. (**ತಥಾ** ಹಾಗೆಯೇ) **ಸಃ** = ಆ **ರಾಜಾವರಜಃ** = ರಾಜನ ತಮ್ಮನಾದ ಭೀಮಸೇನನು **ದ್ವಿರೂಪಯಾ** = ಎರಡು ರೂಪಗಳಿಂದಿದ್ದ **ತಯಾ** = ಆ **ಸೋಮಕಕಾಶಿಜಾತಯಾ** = ದ್ರೌಪದಿಯೊಂದಿಗೂ ಕಾಳಿಯೊಂದಿಗೂ **ರರಾಜ** = ಶೋಭಿಸಿದನು ।

**ತಾತ್ಪರ್ಯ** :- ಯುವರಾಜನಾದ ಭೀಮ, ದ್ರೌಪದಿ ಮತ್ತು ಕಾಳಿ ಎಂಬ ಎರಡು ರೂಪದ ಭಾರತಿಯೊಂದಿಗೆ, ಕ್ಷೀರಸಾಗರದಲ್ಲಿ ಸರ್ವದೈತ್ಯರನ್ನೂ ಸದೆಬಡೆದ ಪದ್ಮನಾಭನಾದ ಶ್ರೀಹರಿಯು ಶ್ರೀದೇವಿಭೂದೇವಿಯರೊಂದಿಗೆ ಶೋಭಿಸುವಂತೆ ಶೋಭಿಸಿದ.

### ದೇವಿ ಎಂಬ ಮತ್ತೊಬ್ಬ ಭೀಮಪತ್ನಿ

**ಸರ್ವೋತ್ತುಂಗೋ ನಾಮತಃ ಪ್ರಾಣವಾಯೋ-**
**ರಂಶೋ ನಿಶಾಯಾಂ ಗುರುಪುತ್ರಸೂದಿತಃ ।**
**ಮಾತಾಽಸ್ಯ ದೇವೀತಿ ಚ ರೌಹಿಣೇಯೀ**
**ಭೀಮಪ್ರಿಯಾಽಽಸೀದ್ಯಾ ಪುರಾಽಸ್ಯೈವ ರಾಕಾ ॥ ೧೧ ॥**

ಸರ್ವೋತ್ತುಂಗಃ ನಾಮತಃ ಪ್ರಾಣವಾಯೋಃ ಅಂಶಃ ನಿಶಾಯಾಂ ಗುರುಪುತ್ರಸೂದಿತಃ । ಮಾತಾ ಅಸ್ಯ ದೇವೀ ಇತಿ ಚ ರೌಹಿಣೇಯೀ ಭೀಮಪ್ರಿಯಾ ಆಸೀತ್ ಯಾ ಪುರಾ ಅಸ್ಯ ಏವ ರಾಕಾ ॥

**ಅರ್ಥ** :- **ಪ್ರಾಣವಾಯೋಃ** = ಪ್ರಾಣವಾಯುವಿನ **ಅಂಶಃ** = ಅಂಶನಾದ **ನಾಮತಃ** = ಹೆಸರಿನಿಂದ **ಸರ್ವೋತ್ತುಂಗಃ** = ಸರ್ವೋತ್ತುಂಗ

ಎನ್ನಿಸಿದ್ದ ಭೀಮಸೇನನ ಪುತ್ರನು **ನಿಶಾಯಾಂ** = ರಾತ್ರಿಯಲ್ಲಿ **ಗುರುಪುತ್ರ ಸೂದಿತಃ** = ಗುರುಪುತ್ರರಾದ ಅಶ್ವತ್ಥಾಮರಿಂದ ಸಂಹರಿಸಲ್ಪಟ್ಟಿದ್ದನು. **ಅಸ್ಯ** = ಅವನ **ಮಾತಾ** = ತಾಯಿಯು **ರೌಹಿಣೇಯೀ** = ರೋಹಿಣಿಯ ಪುತ್ರಿಯಾದ **ದೇವೀ ಇತಿ** = ದೇವಿ ಎಂಬವಳು **(ಸಾ) ಚ** = ಅವಳೂ ಸಹ **ಭೀಮಪ್ರಿಯಾ** = ಭೀಮಸೇನನ ಪತ್ನಿಯಾಗಿ **ಆಸೀತ್** = ಆಗಿದ್ದಳು **ಯಾ** = ಅವಳು **ಪುರಾ** = ಹಿಂದೆ **ರಾಕಾ** = ಹುಣ್ಣಿಮೆಯ ಅಭಿಮಾನಿ ದೇವತೆ ಯಾದವಳು **ಅಸ್ಯ ಏವ** = ಆ ಭೀಮಸೇನನಿಗೆ (**ಪ್ರಿಯಾ ಆಸೀತ್** = ಪ್ರಿಯಳಾಗಿ ಇದ್ದವಳು).

**ತಾತ್ಪರ್ಯ** :- ಸರ್ವೋತ್ತುಂಗ ಎಂಬ ಆಹಂಕಾರಿಕಪ್ರಾಣನ ಅವತಾರ ನಾದ ಭೀಮಪುತ್ರನು ಅಶ್ವತ್ಥಾಮನಿಂದ ರಾತ್ರಿಯಲ್ಲಿ ಹತನಾದವನು; ಅವನ ತಾಯಿ ದೇವೀ ಎಂಬವಳು; ಅವಳು ವಸುದೇವಪತ್ನಿಯಾದ ರೋಹಿಣಿಯ ಪುತ್ರಿ; ಅವಳು ಹಿಂದೆ ಹುಣ್ಣಿಮೆಗೆ ಅಭಿಮಾನಿದೇವತೆಯಾದ ರಾಕಾ; ಅವಳೂ ಭೀಮನ ಪತ್ನಿಯೇ ಆಗಿದ್ದಳು.

### ಭೀಮನ ಇತರ ಇಪ್ಪತ್ತು ಪತ್ನಿಯರು

**ಅನ್ಯಾಶ್ಚಾಸುರ್ವಾಸುದೇವ್ಯೋ ದಿಶೋ ಯಾ**
**ಆಪಃ ಪೂರ್ವಂ ವಿಂಶತಿರಗ್ರ್ಯರೂಪಾಃ ।**
**ತಾಭಿರ್ಯುತೋ ದೈವತ್ಯೈರಪ್ಯಲಭ್ಯಾ-**
**ನಭುಂಕ್ತ ಭೋಗಾನ್ ವಿಬುಧಾನುಗಾರ್ಚಿತಃ ॥ ೧೨ ॥**

**ಅನ್ಯಾಃ ಚ ಆಸುಃ ವಾಸುದೇವ್ಯಃ ದಿಶಃ ಯಾಃ ಆಪಃ ಪೂರ್ವಂ ವಿಂಶತಿಃ ಅಗ್ರ್ಯರೂಪಾಃ । ತಾಭಿಃ ಯುತಃ ದೈವತ್ಯೈಃ ಅಪಿ ಅಲಭ್ಯಾನ್ ಅಭುಂಕ್ತ ಭೋಗಾನ್ ವಿಬುಧಾನುಗಾರ್ಚಿತಃ ॥**

**ಅರ್ಥ** :- **ಅನ್ಯಾಃ** = ಇತರ **ವಿಂಶತಿಃ** = ಇಪ್ಪತ್ತು **ಅಗ್ರ್ಯರೂಪಾಃ** = ಶ್ರೇಷ್ಠರೂಪವತಿಯರಾದ **ವಾಸುದೇವ್ಯಃ** = ವಸುದೇವನ ಪುತ್ರಿಯರು **ಚ** ಸಹ = (**ಭೀಮಪ್ರಿಯಾಃ** = ಭೀಮಸೇನನ ಪತ್ನಿಯರಾಗಿ) **ಆಸುಃ** = ಆಗಿದ್ದರು **ಯಾಃ** = ಯಾವ ಅವರೆಲ್ಲರು **ಪೂರ್ವಂ** = ಹಿಂದೆ **ದಿಶಃ** = ದಿಗಭಿಮಾನಿ ದೇವತೆಗಳು **ಆಪಃ** = ಅಬಭಿಮಾನಿ ದೇವತೆಗಳು (ಆಗಿದ್ದವರು) **ತಾಭಿಃ** =

ಅವರೊಂದಿಗೆ **ಯುತಃ** = ಕೂಡಿದವನಾಗಿ **ದೈವತೈಃ** = ದೇವತೆಗಳಿಂದಲೂ **ಅಪಿ** ಸಹ **ಅಲಭ್ಯಾನ್** = ಹೊಂದಲಾಗದಂತಹ **ಭೋಗಾನ್** = ಭೋಗಗಳನ್ನು **ವಿಬುಧಾನುಗಾರ್ಚಿತಃ (ಸನ್)** = ದೇವಾನುಚರರಿಂದ ಪೂಜಿತನಾಗಿ **ಅಭುಂಕ್ತ** = ಭೋಗಿಸಿದನು ॥

**ತಾತ್ಪರ್ಯ** :- ಉತ್ತಮರೂಪವತಿಯರಾದ ಇತರ ಇಪ್ಪತ್ತು ವಸುದೇವ ಪುತ್ರಿಯರು ಸಹ ಭೀಮಸೇನನಿಗೆ ಪತ್ನಿಯರಾಗಿದ್ದರು. ಅವರು ಹಿಂದೆ ದಿಗಭಿಮಾನಿ ದೇವತೆಗಳೂ, ಅಬಭಿಮಾನಿ ದೇವತೆಗಳೂ ಆಗಿದ್ದವರು. ಅವರಿಂದ ಕೂಡಿ ಭೀಮಸೇನ ದೇವತೆಗಳಿಗೂ ಅಲಭ್ಯವಾದ ಭೋಗಗಳನ್ನು, ದೇವತೆಗಳಿಂದಲೂ ಗಂಧರ್ವರಿಂದಲೂ ಸೇವಿತನಾಗಿ ಭೋಗಿಸಿದ.

### ಭೀಮಸೇನನ ಧರ್ಮರಕ್ಷಣೆಯ ವೈಖರಿ

**ರರಕ್ಷ ಧರ್ಮಾನಖಿಲಾನ್ ಹರೇಃ ಸ**
**ನಿಧಾಯ ವಿಪ್ರಾನನುಶಾಸ್ಯ ಯುಕ್ತಾನ್ ।**
**ಸದ್ವೈಷ್ಣವಾನ್ ವಿದುಷಃ ಪಂಚ ಪಂಚ**
**ಸವೇತನಾನ್ ಗ್ರಾಮಮನು ಸ್ವಕೀಯಾನ್ ॥ ೧೩ ॥**

**ರರಕ್ಷ ಧರ್ಮಾನ್ ಅಖಿಲಾನ್ ಹರೇಃ ಸಃ ನಿಧಾಯ ವಿಪ್ರಾನ್ ಅನುಶಾಸ್ಯ ಯುಕ್ತಾನ್ । ಸದ್ವೈಷ್ಣವಾನ್ ವಿದುಷಃ ಪಂಚ ಪಂಚ ಸವೇತನಾನ್ ಗ್ರಾಮಂ ಅನು ಸ್ವಕೀಯಾನ್ ॥**

**ಅರ್ಥ** :- **ಸಃ** = ಆ ಭೀಮಸೇನನು **ಸ್ವಕೀಯಾನ್** = ತನ್ನವರಾದ **ಸದ್ವೈಷ್ಣವಾನ್** = ಉತ್ತಮ ವೈಷ್ಣವರಾದ **ವಿದುಷಃ** = ವಿದ್ವಾಂಸರಾದ **ವಿಪ್ರಾನ್** = ಬ್ರಾಹ್ಮಣರನ್ನು **ಯುಕ್ತಾನ್** = ಸಮರ್ಥರನ್ನಾಗಿ ಮಾಡಿ **ಸವೇತನಾನ್** = ಅವರಿಗೆ ವೇತನವನ್ನು ನೀಡುತ್ತಾ **ಪಂಚ ಪಂಚ** = ಐವರು ಐವರಂತೆ **ಗ್ರಾಮಂ ಅನು** = ಪ್ರತಿ ಗ್ರಾಮದಲ್ಲೂ **ನಿಧಾಯ** = ಇರಿಸಿ **ಹರೇಃ ಅಖಿಲಾನ್ ಧರ್ಮಾನ್** = ಶ್ರೀಹರಿಗೆ ಪ್ರೀತಿಕರವಾದ ಸಕಲ ಧರ್ಮಗಳನ್ನು **ಅನುಶಾಸ್ಯ** = ಚೆನ್ನಾಗಿ ಉಪದೇಶಮಾಡಿಸಿ **ರರಕ್ಷ** = ಪಾಲಿಸಿದನು.

**ತಾತ್ಪರ್ಯ** :- ಭೀಮಸೇನ ಪ್ರತಿಗ್ರಾಮದಲ್ಲೂ ಸದ್ವೈಷ್ಣವರೂ, ತನ್ನವರೂ, ಯುಕ್ತಿಚತುರರೂ ಆದ ಐದೈದು ಜನ ವಿದ್ವಾಂಸರಾದ

ಬ್ರಾಹ್ಮಣರುಗಳನ್ನು ವೇತನ ನೀಡಿ ನೇಮಿಸಿ, ಸಕಲ ವೈಷ್ಣವಧರ್ಮಗಳನ್ನೂ ಉಪದೇಶಮಾಡಿಸುತ್ತಾ ಸಕಲಧರ್ಮಗಳನ್ನೂ ಸಂರಕ್ಷಿಸಿದ.

**ದಧಾರ ದಂಡಂ ತದವರ್ತಿಷು ಸ್ವಯಂ**
**ಜಗ್ರಾಹ ಚಾನ್ವೇವ ಮುದಾಽಥ ತದ್ಗತಾನ್ ।**
**ತದ್ವೃತ್ತಮನ್ಯೈರಪಿ ವಿಪ್ರವರ್ಯೈಃ**
**ಸಂಶೋಧಯನ್ ಸರ್ವಮಸೌ ಯಥಾ ವ್ಯಧಾತ್ ॥ ೧೪ ॥**

**ದಧಾರ ದಂಡಂ ತದವರ್ತಿಷು ಸ್ವಯಂ ಜಗ್ರಾಹ ಚ ಅನು ಏವ ಮುದಾ ಅಥ ತದ್ಗತಾನ್ । ತದ್ವೃತ್ತಂ ಅನ್ಯೈಃ ಅಪಿ ವಿಪ್ರವರ್ಯೈಃ ಸಂಶೋಧಯನ್ ಸರ್ವಂ ಅಸೌ ಯಥಾ ವ್ಯಧಾತ್॥**

**ಅರ್ಥ :- ತದವರ್ತಿಷು** = ಧರ್ಮವನ್ನು ಆಚರಿಸದವರ ಬಗ್ಗೆ **ಸ್ವಯಂ** = ತಾನೇ **ದಂಡಂ** = ದಂಡವನ್ನು **ದಧಾರ** = ಭರಿಸಿದನು **ಚ** = ಮತ್ತು **ಅಥ** = ಆ ಬಳಿಕ **ತದ್ಗತಾನ್** = ಧರ್ಮದಲ್ಲಿ ನಿರತರಾದವರನ್ನು **ಮುದಾ ಏವ** = ಸಂತೋಷದಿಂದಲೇ **ಅನುಜಗ್ರಾಹ** = ಅನುಗ್ರಹಿಸಿದನು. **ತದ್ವೃತ್ತಂ** = ಅವರ ವರ್ತನೆಯನ್ನು **ಅನ್ಯೈಃ** = ಇತರ **ವಿಪ್ರವರ್ಯೈಃ** = ವಿಪ್ರಶ್ರೇಷ್ಠರಿಂದ **ಅಪಿ** = ಸಹ **ಸಂಶೋಧಯನ್** = ಚೆನ್ನಾಗಿ ಪರಶೀಲನೆ ಮಾಡಿಸುತ್ತಾ **ಸರ್ವಂ** = ಸಕಲವನ್ನು **ಅಸೌ** = ಆ ಭೀಮಸೇನನು **ಯಥಾ** = ಯಥಾವತ್ತಾಗಿ **ವ್ಯಧಾತ್** = ಇರುವಂತೆ ನೋಡಿಕೊಂಡನು.

**ತಾತ್ಪರ್ಯ :-** ಅನುಸರಿಸದಿದ್ದವರನ್ನು ಭೀಮ ಸ್ವತಃ ತಾನೇ ಶಿಕ್ಷಿಸುತ್ತಿದ್ದ. ಆ ಧರ್ಮದಲ್ಲಿ ನಿರತರಾದವರಿಗೆ ಸಂತೋಷದಿಂದ ರಕ್ಷಿಸುತ್ತಿದ್ದ. ಆ ಬ್ರಾಹ್ಮಣರ ರೀತಿನೀತಿಗಳನ್ನು ಅವರಿಗಿಂತ ಮಿಗಿಲಾದ ಬೇರೆ ಬ್ರಾಹ್ಮಣರುಗಳಿಂದ ಪರೀಕ್ಷೆ ಮಾಡಿಸುತ್ತಾ ಸಕಲಧರ್ಮಗಳನ್ನೂ ಯಥಾವತ್ತಾಗಿ ಸಂರಕ್ಷಿಸಿದ.

### ರಾಮರಾಜ್ಯದಂತಹ ಧರ್ಮರಾಜ್ಯ

**ನಾವೈಷ್ಣವಃ ಕಶ್ಚಿದಭೂತ್ ಕುತಶ್ಚಿ-**
**ನ್ನೈವಾನ್ಯನಿಷ್ಠೋ ನ ಚ ಧರ್ಮಹಂತಾ ।**

ನ ವಿಧ್ಯವರ್ತೀ ನ ಚ ದುಃಖಿತೋಽಭೂ-
ನ್ನಾಪೂರ್ಣವಿತ್ತಶ್ಚ ತದೀಯರಾಷ್ಟ್ರೇ ॥ ೧೫ ॥

ನ ಅವೈಷ್ಣವಃ ಕಶ್ಚಿತ್ ಅಭೂತ್ ಕುತಶ್ಚಿತ್ ನ ಏವ ಅನ್ಯನಿಷ್ಠಃ ನ ಚ ಧರ್ಮಹಂತಾ ।
ನ ವಿಧ್ಯವರ್ತೀ ನ ಚ ದುಃಖಿತಃ ಅಭೂತ್ ನ ಅಪೂರ್ಣವಿತ್ತಃ ಚ ತದೀಯರಾಷ್ಟ್ರೇ ॥

**ಅರ್ಥ** :- **ತದೀಯರಾಷ್ಟ್ರೇ** = ಆ ಭೀಮಸೇನನ ರಾಜ್ಯದಲ್ಲಿ ನ **ಅವೈಷ್ಣವಃ** = ಅವೈಷ್ಣವನಾಗಿ **ಕಶ್ಚಿತ್** = ಯಾರೂ **ಕುತಶ್ಚಿತ್** = ಯಾವ ಕಾರಣದಿಂದಲೂ ನ **ಏವ ಅಭೂತ್** = ಇರಲೇ ಇಲ್ಲ **ಚ** = ಮತ್ತು **ಅನ್ಯನಿಷ್ಠಃ** = ಇತರ ದೇವತೆಗಳನ್ನು ಸರ್ವೋತ್ತಮತ್ವೇನ ಆರಾಧನೆ ಮಾಡುವಂತಹವನು **ನ ಅಭೂತ್** = ಇರಲೇ ಇಲ್ಲ **ಧರ್ಮಹಂತಾ ನ** = ಧರ್ಮವನ್ನು ಆಚರಿಸದವನೂ ಇರಲಿಲ್ಲ. **ವಿಧ್ಯವರ್ತೀ** ನ ವಿಧ್ಯುಕ್ತ ಕಾರ್ಯಗಳನ್ನು ನಡೆಸದೇ ಇರುವವನು ಇರಲಿಲ್ಲ **ಚ** = ಮತ್ತು **ದುಃಖಿತಃ ನ** = ದುಃಖಿತನಾದವನೂ ಇರಲಿಲ್ಲ **ಚ** = ಮತ್ತು **ಅಪೂರ್ಣವಿತ್ತಃ ನ** = ಪೂರ್ಣಸಂಪತ್ತನ್ನು ಹೊಂದದವನು ಸಹ **ನ ಅಭೂತ್** = ಇರಲೇ ಇಲ್ಲ.

**ತಾತ್ಪರ್ಯ** :- ಆ ಭೀಮನ ರಾಜ್ಯದಲ್ಲಿ ಯಾವನೂ ಯಾವ ಕಾರಣದಿಂದಲೂ ಅವೈಷ್ಣವನಾಗಿರಲಿಲ್ಲ. ಅನ್ಯದೇವತೆಯಲ್ಲಿ ಸರ್ವೋತ್ತಮತ್ವ ನಿಷ್ಠೆಯನ್ನು ಹೊಂದಿದವನಾಗಲೀ, ಧರ್ಮಭ್ರಷ್ಟನಾಗಲೀ ಇರಲಿಲ್ಲ, ಶಾಸ್ತ್ರವಿಧಿಯನ್ನು ಮೀರುವವನಿರಲಿಲ್ಲ, ದುಃಖಿತನಿರಲಿಲ್ಲ, ದರಿದ್ರನೂ ಇರಲಿಲ್ಲ.

ವಾಸಿಷ್ಠವೃಷ್ಣಿಪ್ರವರೌ ಪ್ರಪಶ್ಯತಾಂ
ತಾಭ್ಯಾಂ ಚ ಭೀಮೇನ ಮುನೀಶ್ವರೈಶ್ಚ ।
ಸಂಶಿಕ್ಷಿತಾನಾಂ ಪ್ರಥಮಾದ್ಯುಗಾಚ್ಚ
ಗುಣಾಧಿಕಃ ಕಲಿರಾಸೀತ್ ಪ್ರಜಾನಾಮ್ ॥ ೧೬ ॥

ವಾಸಿಷ್ಠವೃಷ್ಣಿಪ್ರವರೌ ಪ್ರಪಶ್ಯತಾಂ ತಾಭ್ಯಾಂ ಚ ಭೀಮೇನ ಮುನೀಶ್ವರೈಃ ಚ ।
ಸಂಶಿಕ್ಷಿತಾನಾಂ ಪ್ರಥಮಾತ್ ಯುಗಾತ್ ಚ ಗುಣಾಧಿಕಃ ಕಲಿಃ ಆಸೀತ್ ಪ್ರಜಾನಾಮ್ ॥

**ಅರ್ಥ** :- **ವಾಸಿಷ್ಠವೃಷ್ಣಿಪ್ರವರೌ** = ವೇದವ್ಯಾಸರು ಹಾಗೂ ಶ್ರೀಕೃಷ್ಣನನ್ನು **ಪ್ರಪಶ್ಯತಾಂ** = ಚೆನ್ನಾಗಿ ದರ್ಶನ ಮಾಡುತ್ತಾ **ತಾಭ್ಯಾಂ ಚ** = ಅವರಿಬ್ಬರಿಂದಲೂ **ಭೀಮೇನ** = ಭೀಮಸೇನನಿಂದಲೂ **ಮುನೀಶ್ವರೈಃ** = ಮುನಿಶ್ರೇಷ್ಠರಿಂದಲೂ **ಚ** = ಸಹ. **ಸಂಶಿಕ್ಷಿತಾನಾಂ** = ಚೆನ್ನಾಗಿ ಉಪದೇಶ ಪಡೆಯುತ್ತಿದ್ದ **ಪ್ರಜಾನಾವ್** = ಪ್ರಜೆಗಳಿಗೆ **ಕಲಿಃ** = ಕಲಿಯುಗವು **ಪ್ರಥಮಾತ್ಯುಗಾತ್ ಚ** = ಮೊದಲ ಯುಗವಾದ ಕೃತಯುಗಕ್ಕಿಂತಲೂ **ಗುಣಾಧಿಕಃ** = ಹೆಚ್ಚು ಗುಣದಿಂದ ಕೂಡಿದ್ದುದಾಗಿ **ಆಸೀತ್** = ಆಯಿತು.

**ತಾತ್ಪರ್ಯ** :- ವೇದವ್ಯಾಸರನ್ನು, ಕೃಷ್ಣನನ್ನು ಸಂದರ್ಶಿಸುತ್ತಾ ಅವರಿಬ್ಬರಿಂದಲೂ ಭೀಮನಿಂದಲೂ ಮುನಿವರ್ಯರುಗಳಿಂದಲೂ ತತ್ತ್ವೋಪದೇಶ ಪಡೆಯುತ್ತಿದ್ದ ಪ್ರಜೆಗಳಿಗೆ ಕಲಿಯುಗ ಮೊದಲನೆಯದಾದ ಕೃತಯುಗಕ್ಕಿಂತ ಗುಣದಲ್ಲಿ ಮಿಗಿಲೆನ್ನಿಸಿತು.

### ಕೃತಯುಗಕ್ಕಿಂತ ಮಿಗಿಲಾದ ಕಲಿಯುಗ

**ಶುಭಂ ಮಹತ್ ಸ್ವಲ್ಪಫಲಂ ಕೃತೇ ಹಿ**
**ವಿಪರ್ಯಯೇಣಾಶುಭಮೇಷ ದೋಷಃ ।**
**ತದ್ಧೀನಮಪ್ಯುಚ್ಚಶುಭಂ ಕೃತಾದ್ಯುಗಾ-**
**ಚ್ಚಕ್ರೇ ಕಲಿಂ ಮಾರುತಿರಚ್ಯುತಾಶ್ರಯಾತ್ ॥ ೧೭ ॥**

**ಶುಭಂ ಮಹತ್ ಸ್ವಲ್ಪಫಲಂ ಕೃತೇ ಹಿ ವಿಪರ್ಯಯೇಣ ಅಶುಭಂ ಏಷಃ ದೋಷಃ। ತದ್ಧೀನಮಪಿ ಉಚ್ಚಶುಭಂ ಕೃತಾತ್ ಯುಗಾತ್ ಚಕ್ರೇ ಕಲಿಂ ಮಾರುತಿಃ ಅಚ್ಯುತಾಶ್ರಯಾತ್ ॥**

**ಅರ್ಥ** :- **ಕೃತೇ ಹಿ** = ಕೃತಯುಗದಲ್ಲಿ ಆದರೋ **ಮಹತ್ ಶುಭಂ** = ದೊಡ್ಡ ಶುಭಕರ್ಮವು **ಸ್ವಲ್ಪಫಲಂ** = ಸ್ವಲ್ಪ ಫಲವನ್ನು **ವಿಪರ್ಯಯೇಣ** = ಅದಕ್ಕೆ ವಿರುದ್ಧವಾಗಿ **ಅಶುಭಂ** = ಪಾಪವು (ದೊಡ್ಡ ಪಾಪದ ಫಲವು) ಹೆಚ್ಚು ಪಾಪ ಫಲವನ್ನು ಕೊಡುತ್ತಿದ್ದಿತು **ಏಷಃ ದೋಷಃ** = ಇದು (ಆ ಯುಗದ) ದೋಷ. **ತದ್ಧೀನಮಪಿ** = ಅದಿಲ್ಲವಾದರೂ **ಕೃತಾತ್ ಯುಗಾತ್** = ಕೃತಯುಗಕ್ಕಿಂತಲೂ **ಉಚ್ಚಶುಭಂ** = ಹೆಚ್ಚಿನ ಶುಭಫಲವನ್ನು ನೀಡುವಂತೆ **ಮಾರುತಿಃ** = ವಾಯುಪುತ್ರನಾದ ಭೀಮಸೇನನು **ಅಚ್ಯುತಾಶ್ರಯಾತ್** =

ಶ್ರೀಕೃಷ್ಣನ ಅನುಗ್ರಹದಿಂದಾಗಿ **ಕಲಿಂ** = ಕಲಿಯುಗವನ್ನು **ಚಕ್ರೇ** = ಮಾಡಿದನು ॥

**ತಾತ್ಪರ್ಯ** :- ಕೃತಯುಗದಲ್ಲಿ ಮಹತ್ತರ ಪುಣ್ಯಕಾರ್ಯಕ್ಕೂ ಸ್ವಲ್ಪವೇ ಫಲ, ಅದಕ್ಕೆ ವಿರುದ್ಧವಾಗಿ ಸ್ವಲ್ಪ ಪಾಪಕ್ಕೂ ಮಹತ್ತರವಾದ ದುಷ್ಫಲ ; ಇದು ಅದರ ದೋಷ. ಆದರೆ, ಆ ದೋಷವಿಲ್ಲದೇ ತುಂಬಾ ಪುಣ್ಯಪ್ರದವಾಗಿರುವ ಮೂಲಕ ಕೃತಯುಗಕ್ಕಿಂತಲೂ ಹೆಚ್ಚು ಪುಣ್ಯಪ್ರದವನ್ನಾಗಿ ಭೀಮಸೇನ ಹರಿಯ ಅನುಗ್ರಹದಿಂದ ಮಾಡಿದ.

### ಅರ್ಜುನನ ಜೀವನ ವೈಖರಿ

**ಧನಂಜಯಃ ಪ್ರೋದ್ಯತದಂಡ ಆಸೀತ್**
**ಸದಾಽನ್ಯಚಕ್ರೇಷು ನಿಜಾಗ್ರಜೇರಿತಃ ।**
**ವಿಭೀಷಯಿತ್ವಾ ನೃಪತೀನ್ ಸರತ್ನಾನ್**
**ಪದೋರ್ನೃಪಸ್ಯಾಗ್ರಭುವೋ ನ್ಯಪಾತಯತ್ ॥ ೧೮ ॥**

ಧನಂಜಯಃ ಪ್ರೋದ್ಯತದಂಡಃ ಆಸೀತ್ ಸದಾ ಅನ್ಯಚಕ್ರೇಷು ನಿಜಾಗ್ರಜೇರಿತಃ ।
ವಿಭೀಷಯಿತ್ವಾ ನೃಪತೀನ್ ಸರತ್ನಾನ್ ಪದೋಃ ನೃಪಸ್ಯ ಅಗ್ರಭುವಃ ನ್ಯಪಾತಯತ್॥

**ಅರ್ಥ** :- **ಧನಂಜಯಃ** = ಧನಂಜಯನು **ನಿಜಾಗ್ರಜೇರಿತಃ** = ತನ್ನ ಅಣ್ಣಂದಿರಿಂದ ಹೇಳಲ್ಪಟ್ಟವನಾಗಿ **ಅನ್ಯಚಕ್ರೇಷು** = ಇತರ ರಾಷ್ಟ್ರಗಳಲ್ಲಿ **ಸದಾ** = ಯಾವಾಗಲೂ **ಪ್ರೋದ್ಯತದಂಡಃ** = ದಂಡವನ್ನು ಧರಿಸಿದವನಾಗಿ **ಆಸೀತ್** = ಆಗಿದ್ದನು; । **ನೃಪತೀನ್** = ರಾಜರನ್ನು **ವಿಭೀಷಯಿತ್ವಾ** = ಭಯಪೀಡಿತರನ್ನಾಗಿಸಿ ಅವರನ್ನು **ಸರತ್ನಾನ್** = ರತ್ನಸಮೇತವಾಗಿ **ಅಗ್ರಭುವಃ** = ಅಣ್ಣನಾದ **ನೃಪಸ್ಯ** = ಧರ್ಮರಾಜನ **ಪದೋಃ** = ಪಾದಗಳಲ್ಲಿ **ನ್ಯಪಾತಯತ್** = ಬೀಳಿಸಿದನು ॥

**ತಾತ್ಪರ್ಯ** :- ಅರ್ಜುನ ಪರರಾಷ್ಟ್ರಗಳ ಮೇಲೆ ಸದಾ ದಂಡ ಯಾತ್ರೆಯಲ್ಲಿ ತೊಡಗಿದ. ಅವನು ತನ್ನ ಅಣ್ಣಂದಿರ ಆದೇಶದಂತೆ ಪರರಾಷ್ಟ್ರಗಳ ರಾಜರುಗಳನ್ನು ಬೆದರಿಸಿ ರತ್ನಸಮೇತವಾಗಿ ಅವರನ್ನು ಧರ್ಮರಾಜನ ಪಾದಗಳ ಮೇಲೆ ಬೀಳಿಸಿದ.

### ಸದಾ ಕೃಷ್ಣನಿಂದ ತತ್ತ್ವಶ್ರವಣ ಮಾಡಿದ ಅರ್ಜುನ

**ಸದೈವ ಕೃಷ್ಣಸ್ಯ ಮುಖಾರವಿಂದಾ-**
**ದ್ವಿನಿಸ್ಸೃತಂ ತತ್ತ್ವವಿನಿರ್ಣಯಾಮೃತಮ್ ।**
**ಪಿಬನ್ ಸುತಾದ್ಯಾಧಿಮಸೌ ಕ್ರಮೇಣ**
**ತ್ಯಜಂಶ್ಚ ರೇಮೇ ವಿರತಾತಿಭೋಗಃ ॥ ೧೯ ॥**

ಸದಾ ಏವ ಕೃಷ್ಣಸ್ಯ ಮುಖಾರವಿಂದಾತ್ ವಿನಿಸ್ಸೃತಂ ತತ್ತ್ವವಿನಿರ್ಣಯಾಮೃತಮ್ ।
ಪಿಬನ್ ಸುತಾದ್ಯಾಧಿಂ ಅಸೌ ಕ್ರಮೇಣ ತ್ಯಜನ್ ಚ ರೇಮೇ ವಿರತಾತಿಭೋಗಃ ॥

**ಅರ್ಥ** :- **ಅಸೌ** = ಆ ಅರ್ಜುನನು **ಸದಾ** = ಯಾವಾಗಲೂ **ಕೃಷ್ಣಸ್ಯ** = ಕೃಷ್ಣನ **ಮುಖಾರವಿಂದಾತ್** = ಮುಖಕಮಲದಿಂದ **ವಿನಿಸ್ಸೃತಂ** = ಹೊರಹೊಮ್ಮುತ್ತಿದ್ದ **ತತ್ತ್ವವಿನಿರ್ಣಯಾಮೃತಮ್** = ತತ್ತ್ವವಿನಿರ್ಣಯ ರೂಪದ ಸುಧೆಯನ್ನು । **ಪಿಬನ್ ಏವ** = ಪಾನಮಾಡುತ್ತಲೇ **ಸುತಾದ್ಯಾಧಿಂ** = ಮಗ ಮೊದಲಾದವರ (ಮರಣದಿಂದುಂಟಾದ) ಮನೋವ್ಯಥೆಯನ್ನು **ಕ್ರಮೇಣ** = ಕ್ರಮವಾಗಿ **ತ್ಯಜನ್** = ತೊರೆಯುತ್ತಾ **ಚ** = ಮತ್ತು **ವಿರತಾತಿಭೋಗಃ** = ಅತಿಭೋಗವನ್ನು ತೊರೆದವನಾಗಿ **ರೇಮೇ** = ವಿಹಾರಮಾಡಿದನು ॥

**ತಾತ್ಪರ್ಯ** :- ಸದಾ ಕೃಷ್ಣನ ಮುಖಕಮಲದಿಂದ ಸುರಿಯುವ ತತ್ತ್ವವಿನಿರ್ಣಯವೆಂಬ ಅಮೃತವನ್ನು ಪಾನ ಮಾಡುತ್ತಾ ಅರ್ಜುನ ಕ್ರಮವಾಗಿ ಪುತ್ರಹಾನಿಶೋಕ ಮೊದಲಾದವುಗಳನ್ನು ತೊರೆದು ಅತಿಭೋಗಗಳಲ್ಲಿ ತೊಡಗದೇ ಆನಂದಿಸಿದ.

### ದುಃಶಾಸನನ ಮನೆಯಲ್ಲಿ ಅರ್ಜುನನ ಸಂಸಾರ

**ದುಃಶಾಸನಸ್ಯಾವಸಥಂ ಸುಭದ್ರಾ-**
**ಚಿತ್ರಾಂಗದಾಸಹಿತೋಽಧ್ಯಾವಸಂಶ್ಚ ।**
**ಸಚಂದ್ರಿಕಾಕಾಂತಿರನೂನಬಿಂಬೋ**
**ನಭಸ್ಥಿತಶ್ಚಂದ್ರ ಇವಾತ್ಯರೋಚತ ॥ ೨೦ ॥**

ದುಃಶಾಸನಸ್ಯ ಅವಸಥಂ ಸುಭದ್ರಾಚಿತ್ರಾಂಗದಾಸಹಿತಃ ಅಧ್ಯಾವಸನ್ ಚ ।
ಸಚಂದ್ರಿಕಾಕಾಂತಿಃ ಅನೂನಬಿಂಬಃ ನಭಸ್ಥಿತಃ ಚಂದ್ರಃ ಇವ ಅತ್ಯರೋಚತ ॥

**ಅರ್ಥ** :- **ಸಃ** = ಆ ಅರ್ಜುನನು **ಸುಭದ್ರಾಚಿತ್ರಾಂಗದಾಸಹಿತಃ** = ಸುಭದ್ರೆ ಹಾಗೂ ಚಿತ್ರಾಂಗದೆಯರೊಂದಿಗೆ ಕೂಡಿಕೊಂಡು **ದುಃಶಾಸನಸ್ಯ** = ದುಃಶಾಸನನ **ಅವಸಥಂ** = ಮನೆಯಲ್ಲಿ **ಅಧ್ಯಾವಸನ್ ಚ** = ವಾಸಿಸುತ್ತಲೇ. **ಸಚಂದ್ರಿಕಾಕಾಂತಿಃ** = ಚಂದ್ರಿಕಾ, ಕಾಂತಿ ಎಂಬ ಪತ್ನಿಯರಿಂದ ಕೂಡಿಕೊಂಡು **ಅನೂನಬಿಂಬಃ** = ಪೂರ್ಣಬಿಂಬದ **ನಭಸ್ಥಿತಃ** = ಗಗನದಲ್ಲಿನ **ಚಂದ್ರಃ ಇವ** = ಚಂದ್ರನಂತೆ **ಅತ್ಯರೋಚತ** = ಬಹಳವಾಗಿ ಕಂಗೊಳಿಸಿದನು ॥

**ತಾತ್ಪರ್ಯ** :- ಅರ್ಜುನ ಸುಭದ್ರೆ, ಚಿತ್ರಾಂಗದೆಯರೊಂದಿಗೆ ದುಶ್ಶಾಸನನ ಮನೆಯಲ್ಲಿ ನೆಲೆಸಿದ. ಚಂದ್ರಿಕಾ ಮತ್ತು ಕಾಂತಿಯೆಂಬ ಇಬ್ಬರು ಪತ್ನಿಯರೊಂದಿಗೆ ಗಗನದಲ್ಲಿನ ಚಂದ್ರನಂತೆ ಪೂರ್ಣ ಬಿಂಬನಾಗಿ ಬಹಳವಾಗಿ ಕಂಗೊಳಿಸಿದ.

### ನಕುಲ ಸಹದೇವರ ಕಾರ್ಯ

**ಸಮಸ್ತಭೃತ್ಯಾಶ್ರಿತವೇತನಾನಾಂ**
**ಮಾದ್ರೇಯ ಆಸೀತ್ ಪ್ರಥಮಃ ಪ್ರದಾತಾ ।**
**ಸ ದುರ್ಮುಖಸ್ಯಾವಸಥೇಽವಸಚ್ಚ**
**ಸ ಮದ್ರರಾಜಾತ್ಮಜಯಾಽಗ್ರ್ಯವರ್ತೀ ॥ ೨೧ ॥**

ಸಮಸ್ತಭೃತ್ಯಾಶ್ರಿತವೇತನಾನಾಂ ಮಾದ್ರೇಯಃ ಆಸೀತ್ ಪ್ರಥಮಃ ಪ್ರದಾತಾ । ಸ ದುರ್ಮುಖಸ್ಯ ಅವಸಥೇ ಅವಸತ್ ಚ ಸಃ ಮದ್ರರಾಜಾತ್ಮಜಯಾ ಅಗ್ರ್ಯವರ್ತೀ ॥

**ಅರ್ಥ** :- **ಪ್ರಥಮಃ ಮಾದ್ರೇಯಃ** = ಮಾದ್ರಿ ಪುತ್ರರಲ್ಲಿ ಮೊದಲನೆಯವನಾದ ನಕುಲನು **ಸಮಸ್ತಭೃತ್ಯಾಶ್ರಿತವೇತನಾನಾಂ** = ಸಮಸ್ತ ಭೃತ್ಯರಿಗೂ ಹಾಗೂ ಆಶ್ರಿತರಿಗೂ ವೇತನಗಳನ್ನು **ಪ್ರದಾತಾ** = ನೀಡುವವನಾಗಿ **ಆಸೀತ್** = ಆಗಿದ್ದನು । **ಸಃ** = ಅವನು **ದುರ್ಮುಖಸ್ಯ** = ದುರ್ಮುಖನ **ಅವಸಥೇ** = ಮನೆಯಲ್ಲಿ **ಮದ್ರರಾಜಾತ್ಮಜಯಾ** = ಮದ್ರರಾಜನಾದ ಶಲ್ಯನ = ಪುತ್ರಿಯೊಂದಿಗೆ **ಅವಸತ್** = ವಾಸಿಸಿದನು **ಚ** = ಮತ್ತು **ಸಃ** = ಅವನು **ಅಗ್ರ್ಯವರ್ತೀ** = ಹಿರಿಯರನ್ನು ಅನುಸರಿಸಿ ನಡೆಯುವವನಾಗಿ (**ಅವಸತ್**) = ವಾಸಿಸಿದನು.

**ತಾತ್ಪರ್ಯ** :- ಸಮಸ್ತ ಭೃತ್ಯರಿಗೂ ಆಶ್ರಿತರಿಗೂ ವೇತನ ನೀಡುವವನಾಗಿ ನಕುಲನಿದ್ದ. ಅವನು ದುರ್ಮುಖನ ಮನೆಯಲ್ಲಿ ಶಲ್ಯನ ಮಗಳೊಂದಿಗೆ ಅಣ್ಣಂದಿರ ಆಜ್ಞಾಧಾರಕನಾಗಿ ನೆಲೆಸಿದ.

**ಸಂಧಾನಭೇದಾನುಗತಪ್ರವೃತ್ತಿ-**
**ಸ್ತಿಷ್ಠಂಶ್ಚ ದುರ್ಮರ್ಷಣಶುಭ್ರಸದ್ಮನಿ ।**
**ನೃಪಾಂಗರಕ್ಷಃ ಪ್ರಗೃಹೀತಖಡ್ಗ-**
**ಸ್ತಸ್ಯಾನುಜೋ ಮಾಗಧಕನ್ಯಯಾಽಽಸೀತ್ ॥ ೨೨ ॥**

ಸಂಧಾನಭೇದಾನುಗತಪ್ರವೃತ್ತಿಃ ತಿಷ್ಠನ್ ಚ ದುರ್ಮರ್ಷಣಶುಭ್ರಸದ್ಮನಿ । ನೃಪಾಂಗರಕ್ಷಃ ಪ್ರಗೃಹೀತಖಡ್ಗಃ ತಸ್ಯ ಅನುಜಃ ಮಾಗಧಕನ್ಯಯಾ ಆಸೀತ್ ॥

**ಅರ್ಥ** :- **ತಸ್ಯ** = ಆ ನಕುಲನ **ಅನುಜಃ** = ತಮ್ಮನಾದ ಸಹದೇವನು **ಮಾಗಧಕನ್ಯಯಾ** = ಜರಾಸಂಧ ಪುತ್ರಿಯೊಂದಿಗೆ ಕೂಡಿದವನಾಗಿ **ದುರ್ಮರ್ಷಣಶುಭ್ರಸದ್ಮನಿ** = ದುರ್ಮರ್ಷಣನ ಶುಭ್ರವಾದ ಮನೆಯಲ್ಲಿ **ತಿಷ್ಠನ್** = ವಾಸಿಸುತ್ತಾ **ಸಂಧಾನಭೇದಾನುಗತಪ್ರವೃತ್ತಿಃ** = ಸಂಧಾನ ಭೇದ ಮೊದಲಾದ ಕಾರ್ಯಗಳನ್ನು ನೋಡಿಕೊಳ್ಳುವವನಾಗಿ **ಚ** = ಮತ್ತು **ಪ್ರಗೃಹೀತಖಡ್ಗಃ** = ಕೈಯಲ್ಲಿ ಖಡ್ಗ ಹಿಡಿದವನಾಗಿ **ನೃಪಾಂಗರಕ್ಷಃ** = ಧರ್ಮರಾಜನ ಅಂಗರಕ್ಷಕನಾಗಿ **ಆಸೀತ್** = ಇದ್ದನು ॥

**ತಾತ್ಪರ್ಯ** :- ಅವನ ತಮ್ಮನಾದ ಸಹದೇವ ಸಂಧಿ, ವಿಗ್ರಹ ಮೊದಲಾದವುಗಳಲ್ಲಿ ತೊಡಗಿದವನಾಗಿ ದುರ್ಮರ್ಷಣನ ಶುಭ್ರವಾದ ಮನೆಯಲ್ಲಿ ನೆಲೆಸಿದ. ಖಡ್ಗಪಾಣಿಯಾಗಿ ಅವನು ಧರ್ಮರಾಜನಿಗೆ ಅಂಗರಕ್ಷಕನಾಗಿ ಇದ್ದು ಜರಾಸಂಧಪುತ್ರಿಯೊಂದಿಗೆ ವಿಹರಿಸಿದ.

### ಸೇನಾಪತಿಯಾಗಿ ಕೃಪ - ಯುಯುತ್ಸು ಮೊದಲಾದವರ ಧೃತರಾಷ್ಟ್ರಸೇವೆ

**ಸೇನಾಪತಿಃ ಕೃಪ ಆಸೀದ್ಯುಯುತ್ಸುಃ**
**ಸಸಂಜಯೋ ವಿದುರಶ್ಚಾಂಬಿಕೇಯಮ್ ।**
**ಪಾರ್ಥೇರಿತಾಃ ಪರ್ಯಚರನ್ ಸ್ವಯಂ ಚ**
**ಸರ್ವೇ ಯಥಾ ದೈವತಮಾದರೇಣ ॥ ೨೩ ॥**

**ಸೇನಾಪತಿಃ ಕೃಪಃ ಆಸೀತ್ ಯುಯುತ್ಸುಃ ಸಸಂಜಯಃ ವಿದುರಃ ಚ ಆಂಬಿಕೇಯಮ್ । ಪಾರ್ಥೇರಿತಾಃ ಪರ್ಯಚರನ್ ಸ್ವಯಂ ಚ ಸರ್ವೇ ಯಥಾ ದೈವತಂ ಆದರೇಣ ॥**

**ಅರ್ಥ :-** **ಕೃಪಃ** = ಕೃಪಾಚಾರ್ಯರು **ಸೇನಾಪತಿಃ** = ಸೇನಾಧಿಪತಿಯಾಗಿ **ಆಸೀತ್** = ಆದರು **ಪಾರ್ಥೇರಿತಾಃ** = ಪಾಂಡವರಿಂದ ಹೇಳಲ್ಪಟ್ಟಂತಹ **ಸಸಂಜಯಃ** = ಸಂಜಯಸಮೇತನಾದ **ಯುಯುತ್ಸುಃ** = ಯುಯುತ್ಸು **ಚ** = ಮತ್ತು **ವಿದುರಃ** = ವಿದುರನು **ಆಂಬಿಕೇಯಮ್** = ಅಂಬಿಕಾಪುತ್ರನಾದ ಧೃತರಾಷ್ಟ್ರನನ್ನು **ಪರ್ಯಚರನ್** = ಸೇವೆ ಮಾಡಿದರು **ಚ** = ಮತ್ತು **ಸ್ವಯಂ** = ಸ್ವತಃ **ಸರ್ವೇ** = ಎಲ್ಲ ಪಾಂಡವರು ಆ ಧೃತರಾಷ್ಟ್ರನನ್ನು **ಯಥಾ ದೈವತಂ** = ದೇವತೆಯೆಂದೆಂಬಂತೆ **ಆದರೇಣ** = ಆದರದಿಂದ **ಪರ್ಯಚರನ್** = ಸೇವಿಸಿದರು ॥

**ತಾತ್ಪರ್ಯ :-** ಕೃಪಾಚಾರ್ಯರು ಪಾಂಡವರಿಗೆ ಸೇನಾಪತಿಯಾದರು. ಯುಯುತ್ಸು, ಸಂಜಯ, ವಿದುರ ಮೂವರೂ ಪಾಂಡವರ ಆದೇಶದಂತೆ ಧೃತರಾಷ್ಟ್ರನನ್ನು ಸೇವಿಸಿದರು. ಅವರೊಂದಿಗೆ ಸ್ವತಃ ಪಾಂಡವರೂ ಸಹ ಅವನನ್ನು ದೇವತೆಯನ್ನು ಹೇಗೋ ಹಾಗೆ ಆದರದಿಂದ ಸೇವಿಸಿದರು.

### ಪಾಂಡವರ ರಾಜ್ಯದ ಅಪೂರ್ವತೆ

**ದ್ವಿರೂಪಕೃಷ್ಣಪ್ರಹಿತೇಷು ಪಾಂಡುಷು**
**ಕ್ಷಿತಿಂ ಪ್ರಶಾಸತ್ಸು ನ ಕಶ್ಚನಾತುರಃ ।**
**ನ ಚಾಕ್ರಮಾನ್ಮೃತ್ಯುರಭೂನ್ನ ನಾರ್ಯೋ**
**ವಿಭರ್ತೃಕಾ ನೋ ವಿಧುರಾ ನರಾಶ್ಚ ॥ ೨೪ ॥**

**ದ್ವಿರೂಪಕೃಷ್ಣಪ್ರಹಿತೇಷು ಪಾಂಡುಷು ಕ್ಷಿತಿಂ ಪ್ರಶಾಸತ್ಸು ನ ಕಶ್ಚನ ಆತುರಃ । ನ ಚ ಅಕ್ರಮಾತ್ ಮೃತ್ಯುಃ ಅಭೂತ್ ನ ನಾರ್ಯಃ ವಿಭರ್ತೃಕಾಃ ನೋ ವಿಧುರಾಃ ನರಾಃ ಚ ॥**

**ಅರ್ಥ :-** **ದ್ವಿರೂಪಕೃಷ್ಣಪ್ರಹಿತೇಷು** = ಎರಡು ರೂಪದ ಶ್ರೀಹರಿಯ ರೂಪಗಳಿಂದ ರಕ್ಷಿತರಾದ **ಪಾಂಡುಷು** = ಪಾಂಡವರು **ಕ್ಷಿತಿಂ** =

ಭೂಮಿಯನ್ನು **ಪ್ರಶಾಸತ್ಸು** = ಆಳುತ್ತಿದ್ದಾಗ **ಕಶ್ಚನ** = ಯಾವೊಬ್ಬನು ಸಹ **ಆತುರಃ** = ರೋಗಿಯಾದವನಾಗಿ ನ = ಆಗಲಿಲ್ಲ । **ಚ** = ಮತ್ತು **ಅಕ್ರಮಾತ್** = ಕ್ರಮವನ್ನು ತಪ್ಪಿಸಿ **ಮೃತ್ಯುಃ** = ಮೃತ್ಯುವು ನ **ಅಭೂತ್** = ಒದಗುತ್ತಿರಲಿಲ್ಲ **ನಾರ್ಯಃ** = ಸ್ತ್ರೀಯರು **ವಿಭರ್ತೃಕಾಃ** = ವಿಧವೆಯರಾಗುತ್ತಿರಲಿಲ್ಲ **ಚ** = ಮತ್ತು **ನರಾಃ** = ಪುರುಷರು **ವಿಧುರಾಃ** = ವಿಧುರರಾಗಿ **ನೋ** = ಆಗುತ್ತಿರಲಿಲ್ಲ ॥

**ತಾತ್ಪರ್ಯ** :- ವ್ಯಾಸ, ಕೃಷ್ಣ ಎಂಬ ಎರಡು ರೂಪಗಳಿಂದ ಪಾಲಿತ ರಾದ ಪಾಂಡವರು ಭೂಮಿಯನ್ನು ಆಳುತ್ತಿದ್ದಾಗ ಒಬ್ಬನೂ ರೋಗಿ ಯಾಗಿರಲಿಲ್ಲ. ಜನರು ಅಪಮೃತ್ಯುವಿನಿಂದ ಮರಣಿಸುತ್ತಿರಲಿಲ್ಲ, ಸ್ತ್ರೀಯರು ವಿಧವೆಯರಾಗುತ್ತಿರಲಿಲ್ಲ, ಪುರುಷರು ವಿಧುರರಾಗುತ್ತಿರಲಿಲ್ಲ.

**ಶಬ್ದಾದಯಶ್ಚಾಸುರತೀವ ಹೃದ್ಯಾ**
**ನಿಕಾಮವರ್ಷೀ ಚ ಸುರೇಶ್ವರೋಽಭೂತ್ ।**
**ಪ್ರಜಾ ಅನಾಸ್ಪೃಷ್ಟಸಮಸ್ತತಾಪಾ**
**ಅನನ್ಯಭಕ್ತ್ಯಾಽಚ್ಯುತಮರ್ಚಯಂತಿ ॥ ೨೫ ॥**

**ಶಬ್ದಾದಯಃ ಚ ಆಸುಃ ಅತೀವ ಹೃದ್ಯಾಃ ನಿಕಾಮವರ್ಷೀ ಚ ಸುರೇಶ್ವರಃ ಅಭೂತ್ । ಪ್ರಜಾಃ ಅನಾಸ್ಪೃಷ್ಟಸಮಸ್ತತಾಪಾಃ ಅನನ್ಯಭಕ್ತ್ಯಾ ಅಚ್ಯುತಂ ಅರ್ಚಯಂತಿ ॥**

**ಅರ್ಥ** :- **ಶಬ್ದಾದಯಃ ಚ** = ಶಬ್ದ ಮೊದಲಾದವುಗಳು ಸಹ **ಅತೀವ ಹೃದ್ಯಾಃ** = ಅತ್ಯಂತ ಮನೋಹರವಾಗಿ **ಆಸುಃ** = ಇದ್ದವು **ಚ** = ಮತ್ತು **ಸುರೇಶ್ವರಃ** = ಸುರರಾಜನಾದ ದೇವೇಂದ್ರನು **ನಿಕಾಮವರ್ಷೀ** = ಬೇಕೆಂದಾಗ ಮಳೆ ಸುರಿಸುವವನಾಗಿ **ಅಭೂತ್** = ಆಗಿದ್ದನು । **ಪ್ರಜಾಃ** = ಪ್ರಜೆಗಳು **ಅನಾಸ್ಪೃಷ್ಟಸಮಸ್ತತಾಪಾಃ** = ಸಕಲವಿಧವಾದ ತಾಪಗಳಿಂದಲೂ ಸಹ ದೂರಾಗಿದ್ದರು **ಅನನ್ಯಭಕ್ತ್ಯಾ** = ಅನನ್ಯಭಕ್ತಿಯಿಂದಿ **ಅಚ್ಯುತಂ** = ಅಚ್ಯುತನಾದ ಶ್ರೀಹರಿಯನ್ನು **ಅರ್ಚಯಂತಿ** = ಪೂಜಿಸುತ್ತಿದ್ದರು.

**ತಾತ್ಪರ್ಯ** :- ಶಬ್ದ ಮೊದಲಾದ ವಿಷಯಗಳೂ ಸಹ ಅತ್ಯಂತ ಮನೋಹರವಾಗಿದ್ದವು, ಇಂದ್ರ ಯಥೇಚ್ಛ ಮಳೆಗರೆಯುತ್ತಿದ್ದ, ಪ್ರಜೆಗಳು

ಯಾವುದೇ ತಾಪದ ಸೋಂಕಿಲ್ಲದೇ ಅನನ್ಯ ಭಕ್ತಿಯಿಂದ ಶ್ರೀಹರಿಯನ್ನು ಆರಾಧಿಸುತ್ತಿದ್ದರು.

**ಪೃಥ್ವೀ ಚ ಗಾವಃ ಸಸರಸ್ವತೀಕಾ**
**ನಿಕಾಮದೋಹಾ ಅಭವನ್ ಸದೈವ ।**
**ಅಬ್ದಾಬ್ಧಿನದ್ಯೋ ಗಿರಿವೃಕ್ಷಜಂಗಮಾಃ**
**ಸರ್ವೇಽಪಿ ರತ್ನಪ್ರಸವಾ ಬಭೂವುಃ ॥ ೨೬ ॥**

**ಪೃಥ್ವೀ ಚ ಗಾವಃ ಸಸರಸ್ವತೀಕಾಃ ನಿಕಾಮದೋಹಾಃ ಅಭವನ್ ಸದಾ ಏವ । ಅಬ್ದಾಬ್ಧಿನದ್ಯಃ ಗಿರಿವೃಕ್ಷಜಂಗಮಾಃ ಸರ್ವೇ ಅಪಿ ರತ್ನಪ್ರಸವಾಃ ಬಭೂವುಃ ॥**

**ಅರ್ಥ :-** **ಪೃಥ್ವೀ** = ಭೂಮಿಯು **ಚ** = ಮತ್ತು **ಸಸರಸ್ವತೀಕಾಃ** = ವೇದಗಳೊಂದಿಗೆ ಕೂಡಿದಂತಹ **ಗಾವಃ** = ಗೋವುಗಳು (ವೇದಗಳು) **ಸದಾ** = ಯಾವಾಗಲೂ **ನಿಕಾಮದೋಹಾಃ ಏವ** = ಯಥೇಚ್ಛವಾಗಿ ಫಲ ನೀಡುವವುಗಳಾಗಿಯೇ **ಅಭವನ್** = ಇದ್ದವು **ಅಬ್ದಾಬ್ಧಿನದ್ಯಃ** = ಮೇಘಗಳು ಸಮುದ್ರಗಳು ನದಿಗಳು **ಗಿರಿವೃಕ್ಷಜಂಗಮಾಃ** = ಬೆಟ್ಟಗಳು, ವೃಕ್ಷಗಳು ಮೊದಲಾದ ಜಂಗಮ ವಸ್ತುಗಳು **ಸರ್ವೇ ಅಪಿ** = ಎಲ್ಲವೂ ಸಹ **ರತ್ನಪ್ರಸವಾಃ** = ರತ್ನಗಳನ್ನು ನೀಡುವವುಗಳಾಗಿ **ಬಭೂವುಃ** = ಆಗಿದ್ದವು ॥

**ತಾತ್ಪರ್ಯ :-** ಭೂಮಿ, ಗೋವುಗಳು, ವೇದಗಳು ಸದಾ ಯಥೇಚ್ಛ ವಾಗಿ ಫಲ ನೀಡುತ್ತಿದ್ದವು. ಮೋಡ, ಸಮುದ್ರ, ನದಿಗಳು, ಬೆಟ್ಟಗಳು, ಮರಗಳು, ಜಂಗಮಪ್ರಾಣಿಗಳು ಎಲ್ಲವೂ ರತ್ನಗಳನ್ನು ನೀಡುತ್ತಿದ್ದವು.

**ಕೃಷ್ಣಾಶ್ರಯಾತ್ ಸರ್ವಮಿದಂ ವಶೇ ತೇ**
**ವಿಧಾಯ ಸಮ್ಯಕ್ ಪರಿಪಾಲಯಂತಃ ।**
**ದಿವೀವ ದೇವಾ ಮುಮುದುಃ ಸದೈವ**
**ಮುನೀಂದ್ರಗಂಧರ್ವನೃಪಾದಿಭಿರ್ವೃತಾಃ ॥ ೨೭ ॥**

**ಕೃಷ್ಣಾಶ್ರಯಾತ್ ಸರ್ವಂ ಇದಂ ವಶೇ ತೇ ವಿಧಾಯ ಸಮ್ಯಕ್ ಪರಿಪಾಲಯಂತಃ । ದಿವಿ ಇವ ದೇವಾಃ ಮುಮುದುಃ ಸದಾ ಏವ ಮುನೀಂದ್ರಗಂಧರ್ವನೃಪಾದಿಭಿಃ ವೃತಾಃ ॥**

**ಅರ್ಥ** :- **ಕೃಷ್ಣಾಶ್ರಯಾತ್** = ಕೃಷ್ಣನ ಆಶ್ರಯದಿಂದಾಗಿ **ತೇ** = ಆ ಪಾಂಡವರು **ಇದಂ ಸರ್ವಂ** = ಇದೆಲ್ಲವನ್ನು **ವಶೇ** = ತಮ್ಮ ವಶದಲ್ಲಿ **ವಿಧಾಯ** = ಇರಿಸಿಕೊಂಡು **ಸಮ್ಯಕ್** = ಚೆನ್ನಾಗಿ **ಪರಿಪಾಲಯಂತಃ** = ಪರಿಪಾಲಿಸುವವರಾಗಿ । **ದಿವಿ** = ದೇವಲೋಕದಲ್ಲಿ **ದೇವಾಃ ಇವ** = ದೇವತೆಗಳು ಹೇಗೋ ಹಾಗೆ **ಮುನೀಂದ್ರಗಂಧರ್ವನೃಪಾದಿಭಿಃ** = ಮುನಿಶ್ರೇಷ್ಠರೂ, ಗಂಧರ್ವರು ಹಾಗೂ ರಾಜರು ಮೊದಲಾದವರಿಂದ **ವೃತಾಃ** = ಕೂಡಿದವರಾಗಿ **ಸದಾ ಏವ** = ಸದಾ ಕಾಲದಲ್ಲೂ **ಮುಮುದುಃ** = ಆನಂದದಿಂದಿದ್ದರು ॥

**ತಾತ್ಪರ್ಯ** :- ಪಾಂಡವರು ಕೃಷ್ಣನ ಆಶ್ರಯದಿಂದಾಗಿ ಜಗತ್ತನ್ನೆಲ್ಲ ತಮ್ಮ ಅಧೀನದಲ್ಲಿರಿಸಿಕೊಂಡು ಚೆನ್ನಾಗಿ ರಾಜ್ಯಪಾಲನೆ ಮಾಡುತ್ತಾ ಮುನಿವರ್ಯರು, ಗಂಧರ್ವರು, ರಾಜರು ಮೊದಲಾದವರುಗಳೊಂದಿಗೆ ಕೂಡಿಕೊಂಡು ಸ್ವರ್ಗದಲ್ಲಿ ದೇವತೆಗಳಂತೆ ಸದಾ ನಲಿದರು.

### ಪಾಂಡವಕೀರ್ತಿನಾರಿ

**ಸಮುಜ್ಜ್ವಲಾ ಪಾಂಡವಕೀರ್ತಿನಾರೀ**
**ಪದಂ ನಿಧಾಯಾಸುರಪಕ್ಷಮೂರ್ಧಸು ।**
**ವರಾಭಯೇ ಚೈವ ಸತಾಂ ಕರಾಭ್ಯಾಂ**
**ಕೃಷ್ಣಪ್ರಸೂತಾ ಜಗದಂಡಮಾವೃಣೋತ್ ॥ ೨೮ ॥**

**ಸಮುಜ್ಜ್ವಲಾ ಪಾಂಡವಕೀರ್ತಿನಾರೀ ಪದಂ ನಿಧಾಯ ಅಸುರಪಕ್ಷಮೂರ್ಧಸು । ವರಾಭಯೇ ಚ ಏವ ಸತಾಂ ಕರಾಭ್ಯಾಂ ಕೃಷ್ಣಪ್ರಸೂತಾ ಜಗದಂಡಂ ಆವೃಣೋತ್ ॥**

**ಅರ್ಥ** :- **ಕೃಷ್ಣಪ್ರಸೂತಾ** = ಶ್ರೀಕೃಷ್ಣನಿಂದ ಜನಿಸಿದಂತಹ **ಸಮುಜ್ಜ್ವಲಾ** = ಅತ್ಯಂತ ಉಜ್ಜ್ವಲಾದ **ಪಾಂಡವಕೀರ್ತಿನಾರೀ** = ಪಾಂಡವರ ಕೀರ್ತಿ ಎಂಬ ನಾರಿಯು **ಅಸುರಪಕ್ಷಮೂರ್ಧಸು** = ಅಸುರಪಕ್ಷದವರ ತಲೆಯ ಮೇಲೆ **ಪದಂ** = ಪಾದವನ್ನು **ನಿಧಾಯ** = ಇರಿಸಿ **ಕರಾಭ್ಯಾಂ** = ತನ್ನ ಕೈಗಳಿಂದ **ಸತಾಂ** = ಸಜ್ಜನರ **ಮೂರ್ಧಸು** = ತಲೆಯ ಮೇಲೆ **ವರಾಭಯೇ ಚ** = ವರ ಮತ್ತು ಅಭಯಹಸ್ತವನ್ನು **ನಿಧಾಯ** = ಇರಿಸಿ **ಜಗದಂಡಂ** = ಬ್ರಹ್ಮಾಂಡವನ್ನು **ಆವೃಣೋತ್ ಏವ** = ಆವರಿಸಿಯೇ ಬಿಟ್ಟಳು.

**ತಾತ್ಪರ್ಯ** :- ವೇದವ್ಯಾಸರಿಂದ ಹುಟ್ಟಿದ ಉಜ್ಜ್ವಲವಾದ ಪಾಂಡವಕೀರ್ತಿ ಎಂಬ ನಾರಿಯು ಅಸುರ ಪಕ್ಷದವರ ತಲೆಯ ಮೇಲೆ ಪಾದವನ್ನೂರಿ ವರದಹಸ್ತ, ಅಭಯಹಸ್ತಗಳನ್ನು ಸಜ್ಜನರ ತಲೆಯ ಮೇಲಿರಿಸಿ ಬ್ರಹ್ಮಾಂಡವನ್ನು ವ್ಯಾಪಿಸಿದಳು.

### ಭಾರತವೆಂಬ ಭಾರತಿ

**ಪಾತಾಲಪಾದಾಂ ಪೃಥಿವೀನಿತಂಬಾ-**
**ಮಾಕಾಶಮಧ್ಯಾಂ ಕರಸಂತತಾಶಾಮ್ ।**
**ಗ್ರಹರ್ಕ್ಷತಾರಾಭರಣದ್ಯುವಕ್ಷಸಂ**
**ವಿರಿಂಚಲೋಕಸ್ಥಿತಸನ್ಮುಖಾಂಬುಜಾಮ್ ॥ ೨೯ ॥**

ಪಾತಾಲಪಾದಾಂ ಪೃಥಿವೀನಿತಂಬಾಂ ಆಕಾಶಮಧ್ಯಾಂ ಕರಸಂತತಾಶಾಮ್ ।
ಗ್ರಹರ್ಕ್ಷತಾರಾಭರಣದ್ಯುವಕ್ಷಸಂ ವಿರಿಂಚಲೋಕಸ್ಥಿತಸನ್ಮುಖಾಂಬುಜಾಮ್ ॥

**ಅರ್ಥ** :- **ಪಾತಾಲಪಾದಾಂ** = ಪಾತಾಲದಲ್ಲಿ ಪಾದಗಳನ್ನಿರಿಸಿದ, **ಪೃಥಿವೀನಿತಂಬಾಂ** = ಪೃಥಿವಿಯಲ್ಲಿ ನಿತಂಬವನ್ನು ಹೊಂದಿದ, **ಆಕಾಶಮಧ್ಯಾಂ** = ಗಗನದಲ್ಲಿ ನಡುವನ್ನು ಹೊಂದಿದ, **ಕರಸಂತತಾಶಾಮ್** = ದಿಕ್ಕುಗಳಲ್ಲೆಲ್ಲಾ ವ್ಯಾಪಿಸಿದ ಕೈಗಳ । **ಗ್ರಹರ್ಕ್ಷತಾರಾಭರಣದ್ಯುವಕ್ಷಸಂ** = ಗ್ರಹಗಳು ನಕ್ಷತ್ರಗಳು ತಾರೆಗಳನ್ನು ಆಭರಣಗಳನ್ನಾಗಿ ಹೊಂದಿದ ದ್ಯುಲೊಕದಲ್ಲಿ ವಕ್ಷಃಸ್ಥಳವುಳ್ಳ **ವಿರಿಂಚಲೋಕಸ್ಥಿತಸನ್ಮುಖಾಂಬುಜಾಮ್** = ಬ್ರಹ್ಮಲೋಕದಲ್ಲಿ ನೆಲೆಸಿದ ಉತ್ತಮ ಮುಖಕಮಲದಿಂದ ಕೂಡಿದ.

**ತಾತ್ಪರ್ಯ** :- ಆ ಪಾಂಡವ ಕೀರ್ತಿನಾರಿಗೆ ಪಾತಾಲದಲ್ಲಿ ಪಾದಗಳು, ಪೃಥಿವಿಯಲ್ಲಿ ನಿತಂಬ, ಆಕಾಶದಲ್ಲಿ ಸೊಂಟ, ದಿಕ್ಕುಗಳೆಲ್ಲಾ ವ್ಯಾಪಿಸಿದ ಕೈಗಳು, ಗ್ರಹಗಳು, ನಕ್ಷತ್ರಗಳು,ತಾರೆಗಳು ಆಭರಣಗಳು, ದ್ಯುಲೋಕದಲ್ಲಿ ವಕ್ಷಃಸ್ಥಳ, ಬ್ರಹ್ಮಲೋಕದಲ್ಲಿ ಉತ್ತಮವಾದ ಮುಖಕಮಲ.

**ವಿಕುಂಠನಾಥಾಭಯಹಸ್ತಮಾದರಾ-**
**ನ್ಮೂರ್ಧ್ನಾ ವಹಂತೀಂ ವರಭಾರತಾಖ್ಯಾಮ್ ।**
**ನಿಶಮ್ಯ ತಾಮೀಕ್ಷ್ಯ ಸಮಸ್ತಲೋಕಾಃ**
**ಪವಿತ್ರಿತಾ ವೇದಿಭವಾಮಿವಾನ್ಯಾಮ್ ॥ ೩೦ ॥**

ವಿಕುಂಠನಾಥಾಭಯಹಸ್ತಂ ಆದರಾತ್ ಮೂರ್ಧ್ನಾ ವಹಂತೀಂ ವರಭಾರತಾಖ್ಯಾಮ್ । ನಿಶಮ್ಯ ತಾಂ ಈಕ್ಷ್ಯ ಸಮಸ್ತಲೋಕಾಃ ಪವಿತ್ರಿತಾ ವೇದಿಭವಾಂ ಇವ ಅನ್ಯಾಮ್ ॥

**ಅರ್ಥ :- ವಿಕುಂಠನಾಥಾಭಯಹಸ್ತಂ** = ವೈಕುಂಠಪತಿಯಾದ ಶ್ರೀಹರಿಯ ಅಭಯಹಸ್ತವನ್ನು **ಆದರಾತ್** = ಆದರದಿಂದ **ಮೂರ್ಧ್ನಾ** ಶಿರಸಾ **ವಹಂತೀಂ** = ಧರಿಸಿದ **ವರಭಾರತಾಖ್ಯಾಮ್** = ಶ್ರೇಷ್ಠಭಾರತವೆಂಬ ಹೆಸರಿನ । **ತಾಂ** = ಆ ಭಾರತವೆಂಬ ನಾರಿಯನ್ನು **ನಿಶಮ್ಯ** = ಕೇಳಿ **ಸಮಸ್ತಲೋಕಾಃ** = ಸಮಸ್ತ ಲೋಕಗಳು **ಅನ್ಯಾಮ್** = ಮತ್ತೊಬ್ಬ **ವೇದಿಭವಾಂ ಇವ** = ದ್ರೌಪದಿಯನ್ನೆಂಬಂತೆ **ಈಕ್ಷ್ಯ** = ಕಂಡು **ಪವಿತ್ರಿತಾ** = ಪಾವನವಾದವು.

**ತಾತ್ಪರ್ಯ :-** ವೈಕುಂಠಪತಿಯಾದ ಶ್ರೀಹರಿಯ ಅಭಯಹಸ್ತವನ್ನು ತಲೆಯ ಮೇಲೆ ಆದರದಿಂದ ಧರಿಸಿರುವಳು. ಶ್ರೇಷ್ಠವಾದ ಭಾರತ ಎಂಬ ಹೆಸರು ಅವಳಿಗೆ. ಮತ್ತೊಬ್ಬ ದ್ರೌಪದಿಯನ್ನೋ ಎಂಬಂತೆ ಅದನ್ನು ಕೇಳಿಯೂ, ನೋಡಿಯೂ ಸಮಸ್ತ ಜನರು ಪಾವನರಾದರು.

### ಭೀಮನಿಂದ ಕಲಿ ಬಲಿಗಳ ನಿಗ್ರಹ

**ಪ್ರಪಾಲಯತ್ಸ್ವೇವ ಧರಾಂ ಸಕೃಷ್ಣೇ-**
**ಷ್ವದ್ಧೈವ ಪಾರ್ಥೇಷು ಕಲಿರ್ಬಲಿಶ್ಚ ।**
**ಸುಪಾಪದೈತ್ಯೌ ಕ್ವ ಚ ರಾಷ್ಟ್ರವಿಪ್ಲವಂ**
**ಸಂಚಕ್ರತುಸ್ತಚ್ಛ್ರುತಮಾಶು ಪಾರ್ಥೈಃ ॥ ೩೧ ॥**

ಪ್ರಪಾಲಯತ್ಸು ಏವ ಧರಾಂ ಸಕೃಷ್ಣೇಷು ಅದ್ಧಾ ಏವ ಪಾರ್ಥೇಷು ಕಲಿಃ ಬಲಿಃ ಚ । ಸುಪಾಪದೈತ್ಯೌ ಕ್ವ ಚ ರಾಷ್ಟ್ರವಿಪ್ಲವಂ ಸಂಚಕ್ರತುಃ ತತ್ ಶ್ರುತಂ ಆಶು ಪಾರ್ಥೈಃ ॥

**ಅರ್ಥ :- ಸಕೃಷ್ಣೇಷು** = ಕೃಷ್ಣಸಮೇತರಾಗಿ **ಪಾರ್ಥೇಷು** = ಪಾಂಡವರು **ಧರಾಂ** = ಭೂಮಿಯನ್ನು **ಅದ್ಧಾ** = ಚೆನ್ನಾಗಿ **ಪ್ರಪಾಲಯತ್ಸು ಏವ** = ಪಾಲಿಸುತ್ತಿರುವಾಗಲೇ **ಸುಪಾಪದೈತ್ಯೌ** = ಅತ್ಯಂತ ಪಾಪಿ ದೈತ್ಯರಾದ **ಕಲಿಃ** = ಕಲಿ **ಚ** = ಮತ್ತು **ಬಲಿಃ** = ಬಲಿ (ಎಂಬ ಇಬ್ಬರು ದೈತ್ಯರು) **ಕ್ವ ಚ** = ಒಂದೆಡೆ **ರಾಷ್ಟ್ರವಿಪ್ಲವಂ** = ರಾಷ್ಟ್ರದ ವಿನಾಶವನ್ನು **ಸಂಚಕ್ರತುಃ** =

ಮಾಡತೊಡಗಿದರು **ತತ್** = ಅದು **ಆಶು** = ಕೂಡಲೇ **ಪಾರ್ಥೈಃ** = ಪಾಂಡವರಿಂದ **ಶ್ರುತಂ** = ಕೇಳಲ್ಪಟ್ಟಿತು ॥

**ತಾತ್ಪರ್ಯ** :- ಕೃಷ್ಣನೊಂದಿಗೆ ಪಾಂಡವರು ಭೂಮಿಯನ್ನು ಚೆನ್ನಾಗಿ ಪರಿಪಾಲಿಸುತ್ತಿದ್ದಾಗ ಕಲಿ ಮತ್ತು ಬಲಿ ಎಂಬ ಇಬ್ಬರು ಮಹಾಪಾಪಿಗಳಾದ ದೈತ್ಯರುಗಳು ಕೆಲವೆಡೆ ರಾಷ್ಟ್ರನಾಶವನ್ನು ಮಾಡತೊಡಗಿದರು. ಅದು ಕೂಡಲೇ ಪಾಂಡವರ ಕಿವಿಗೆ ಬಿದ್ದಿತು.

### ಭೀಮನ ಬಂಧನದಲ್ಲಿ ಕಲಿ

**ನೃಪೇಣ ಕೃಷ್ಣೇನ ಚ ಸಾಧು ಚೋದಿತೋ**
**ಭೀಮಸ್ತದಾ ತೌ ಸಗಣೌ ವಿಜಿತ್ಯ ।**
**ಬಲಿಂ ಪ್ರವಿದ್ರಾವ್ಯ ಕಲಿಂ ನಿಬದ್ಧ್ಯ**
**ಸಮಾನಯತ್ ಕೃಷ್ಣನರೇಂದ್ರಯೋಃ ಪುರಃ ॥ ೩೨ ॥**

ನೃಪೇಣ ಕೃಷ್ಣೇನ ಚ ಸಾಧು ಚೋದಿತಃ ಭೀಮಃ ತದಾ ತೌ ಸಗಣೌ ವಿಜಿತ್ಯ । ಬಲಿಂ ಪ್ರವಿದ್ರಾವ್ಯ ಕಲಿಂ ನಿಬದ್ಧ್ಯ ಸಮಾನಯತ್ ಕೃಷ್ಣನರೇಂದ್ರಯೋಃ ಪುರಃ ॥ ೩೨ ॥

**ಅರ್ಥ** :- **ತದಾ** = ಆಗ **ನೃಪೇಣ** = ರಾಜನಾದ ಯುಧಿಷ್ಠಿರನಿಂದಲೂ **ಚ** = ಮತ್ತು **ಕೃಷ್ಣೇನ** = ಕೃಷ್ಣನಿಂದಲೂ **ಸಾಧು** = ಚೆನ್ನಾಗಿ **ಚೋದಿತಃ** = ಪ್ರಚೋದಿತನಾದ **ಭೀಮಃ** = ಭೀಮನು **ತೌ** = ಅವರಿಬ್ಬರನ್ನು **ಸಗಣೌ** = ಅವರ ಪರಿವಾರದೊಂದಿಗೆ **ವಿಜಿತ್ಯ** = ಗೆದ್ದು । **ಬಲಿಂ** = ಬಲಿಯನ್ನು **ಪ್ರವಿದ್ರಾವ್ಯ** = ದೂರಕ್ಕೆ ಓಡಿಸಿ **ಕಲಿಂ** = ಕಲಿಯನ್ನು **ನಿಬದ್ಧ್ಯ** = ಬಂಧಿಸಿ **ಕೃಷ್ಣನರೇಂದ್ರಯೋಃ** = ಕೃಷ್ಣ ಮತ್ತು ರಾಜನಾದ ಯುಧಿಷ್ಠಿರನ **ಪುರಃ** = ಮುಂದೆ **ಸಮಾನಯತ್** = ಕರೆ ತಂದನು.

**ತಾತ್ಪರ್ಯ** :- ಆಗ ಧರ್ಮರಾಜನಿಂದಲೂ, ಕೃಷ್ಣನಿಂದಲೂ ಪ್ರೇರಿತನಾಗಿ ಭೀಮಸೇನ ಅವರಿಬ್ಬರನ್ನೂ ಅವರ ಪರಿವಾರ ಸಮೇತವಾಗಿ ಸೋಲಿಸಿದ. ಬಲಿಯನ್ನು ಓಡಿಸಿ, ಕಲಿಯನ್ನು ಸೆರೆ ಹಿಡಿದು ಕೃಷ್ಣ, ಹಾಗೂ ಧರ್ಮರಾಜರ ಮುಂದೆ ನಿಲ್ಲಿಸಿದ.

### ಧರ್ಮರಾಜನ ಪ್ರಶ್ನೆ

**ಪಪ್ರಚ್ಛ ತಂ ಕೃಷ್ಣಪುರೋ ಯುಧಿಷ್ಠಿರ ಉದಾರಧೀಃ ।**
**ಕಲೇ ಕಿಮಿತಿ ಮೇ ರಾಷ್ಟ್ರಂ ವಿಪ್ಲಾವಯಸಿ ದುರ್ಮತೇ ॥ ೩೩ ॥**

ಪಪ್ರಚ್ಛ ತಂ ಕೃಷ್ಣಪುರಃ ಯುಧಿಷ್ಠಿರಃ ಉದಾರಧೀಃ । ಕಲೇ ಕಿಂ ಇತಿ ಮೇ ರಾಷ್ಟ್ರಂ ವಿಪ್ಲಾವಯಸಿ ದುರ್ಮತೇ ॥

**ಅರ್ಥ** :- **ತಂ** = ಅವನನ್ನು **ಕೃಷ್ಣಪುರಃ** = ಕೃಷ್ಣನ ಮುಂದೆಯೇ **ಉದಾರಧೀಃ** = ಉದಾರ ಮನಸ್ಸಿನ **ಯುಧಿಷ್ಠಿರಃ** = ಯುಧಿಷ್ಠಿರನು **ಪಪ್ರಚ್ಛ** = ಕೇಳಿದನು । **ದುರ್ಮತೇ ಕಲೇ** = ಎಲೈ ದುರ್ಬುದ್ಧಿಯವನಾದ ಕಲಿಯೇ **ಕಿಂ** = ಏತಕ್ಕೋಸ್ಕರ **ಮೇ** = ನನ್ನ **ರಾಷ್ಟ್ರಂ** = ರಾಜ್ಯವನ್ನು **ವಿಪ್ಲಾವಯಸಿ** = ಹಾಳಗೊಡುವುತ್ತಿರುವಿ **ಇತಿ** = ಎಂದು.

**ತಾತ್ಪರ್ಯ** :- ಕೃಷ್ಣನೆದುರು ಉದಾರಬುದ್ಧಿಯ ಧರ್ಮರಾಜ ಕಲಿಯನ್ನು ಕೇಳಿದ 'ಎಲೈ, ಕೇಡುಬುದ್ಧಿಯವನೇ ಏತಕ್ಕಾಗಿ ನನ್ನ ರಾಷ್ಟ್ರವನ್ನು ಹಾಳುಮಾಡುತ್ತಿರುವಿ?'.

### ಕಲಿ ನೀಡಿದ ವಿಚಿತ್ರ ಉತ್ತರ - ಕಲಿ ಧರ್ಮ ಕೆಡಿಸುವ ಪರಿ

**ಇತ್ಯುಕ್ತ ಆಹ ಕಾಲೋಽಯಂ ದುರ್ಯೋಧನನಿಪಾತನಮ್ ।**
**ಆರಭ್ಯ ಮಮ ತತ್ರ ತ್ವಂ ಬಲಾದಾಕ್ರಮ್ಯ ತಿಷ್ಠಸಿ ॥ ೩೪ ॥**

ಇತಿ ಉಕ್ತಃ ಆಹ ಕಾಲಃ ಅಯಂ ದುರ್ಯೋಧನನಿಪಾತನಮ್ । ಆರಭ್ಯ ಮಮ ತತ್ರ ತ್ವಂ ಬಲಾತ್ ಆಕ್ರಮ್ಯ ತಿಷ್ಠಸಿ ॥

**ಅರ್ಥ** :- **ಇತಿ** = ಹೀಗೆ **ಉಕ್ತಃ** = ಹೇಳಲ್ಪಟ್ಟ ಕಲಿಯು **ಆಹ** = ಹೇಳಿದನು **ದುರ್ಯೋಧನನಿಪಾತನಮ್** = ದುರ್ಯೋಧನನ ಪತನದಿಂದ **ಆರಭ್ಯ** = ಆರಂಭಿಸಿ **ಅಯಂ** = ಈ **ಕಾಲಃ** = ಕಾಲವು **ಮಮ** = ನನ್ನದು **ತತ್ರ** = ಈ ಕಾಲದಲ್ಲಿ **ತ್ವಂ** = ನೀನು **ಬಲಾತ್** = ಬಲಾತ್ಕಾರದಿಂದ **ಆಕ್ರಮ್ಯ** = ಆಕ್ರಮಿಸಿ **ತಿಷ್ಠಸಿ** = ನಿಂತಿರುವಿ ॥

ತಾತ್ಪರ್ಯ :- ಧರ್ಮರಾಜ ಹೀಗೆ ಕೇಳಲು ಕಲಿ ಹೇಳಿದ 'ದುರ್ಯೋಧನನ ಪತನದಿಂದ ಆರಂಭಿಸಿ ಈ ಕಾಲ ನನ್ನದು. ನೀನು ಬಲಾತ್ಕಾರದಿಂದ ಆಕ್ರಮಿಸಿ ನಿಂತಿರುವಿ'.

**ತತೋ ಮಯಾ ಕೃತೋ ರಾಷ್ಟ್ರವಿಪ್ಲವಸ್ತೇ ನರಾಧಿಪ ।**
**ತಮಾಹ ರಾಜಾ ರಾಜ್ಞಾಂ ಹಿ ಬಲಾದ್ರಾಜ್ಯಂ ಪ್ರವರ್ತತೇ ॥ ೩೫ ॥**

**ತತಃ ಮಯಾ ಕೃತಃ ರಾಷ್ಟ್ರವಿಪ್ಲವಃ ತೇ ನರಾಧಿಪ । ತಂ ಆಹ ರಾಜಾ ರಾಜ್ಞಾಂ ಹಿ ಬಲಾತ್ ರಾಜ್ಯಂ ಪ್ರವರ್ತತೇ ॥**

**ಅರ್ಥ :-** **ತತಃ** = ಆದ್ದರಿಂದ **ನರಾಧಿಪ** = ಎಲೈ ರಾಜನೇ **ತೇ** = ನಿನ್ನ **ರಾಷ್ಟ್ರವಿಪ್ಲವಃ** = ರಾಷ್ಟ್ರದ ವಿನಾಶವು **ಮಯಾ** = ನನ್ನಿಂದ **ಕೃತಃ** = ಮಾಡಲ್ಪಟ್ಟಿತು । **ತಂ** = ಅವನನ್ನು ಕುರಿತು **ರಾಜಾ** = ಧರ್ಮರಾಜನು **ಆಹ** = ಹೇಳಿದನು **ರಾಜ್ಞಾಂ** = ರಾಜರ **ಬಲಾತ್** = ಬಲದಿಂದ **ರಾಜ್ಯಂ** = ರಾಜ್ಯವು **ಪ್ರವರ್ತತೇ** = ನಡೆಯುವುದು **ಹಿ** = ಅಲ್ಲವೇ? ॥

**ತಾತ್ಪರ್ಯ :-** 'ರಾಜನೇ, ಆದರಿಂದಾಗಿ ನಾನು ನಿನ್ನ ರಾಷ್ಟ್ರವನ್ನು ಹಾಳು ಮಾಡುತ್ತಿರುವೆ'. ಆಗ ಧರ್ಮರಾಜ ಹೇಳಿದ 'ರಾಜರ ಬಲದಿಂದ ರಾಜ್ಯ ನಡೆಯುವುದು ಅಲ್ಲವೇ?'.

**ಅಪಿ ಕಾಲಭವಂ ರಾಷ್ಟ್ರಂ ತ್ವದೀಯಂ ಮಾದೃಶೈರ್ನೃಪೈಃ ।**
**ಹ್ರಿಯತೇ ಬಲವದ್ಭಿರ್ಹಿ ರಾಜ್ಯಾಶಾ ತೇ ಕುತಸ್ತದಾ ॥ ೩೬ ॥**

**ಅಪಿ ಕಾಲಭವಂ ರಾಷ್ಟ್ರಂ ತ್ವದೀಯಂ ಮಾದೃಶೈಃ ನೃಪೈಃ । ಹ್ರಿಯತೇ ಬಲವದ್ಭಿಃ ಹಿ ರಾಜ್ಯಾಶಾ ತೇ ಕುತಃ ತದಾ ॥**

**ಅರ್ಥ :-** **ರಾಷ್ಟ್ರಂ** = ರಾಷ್ಟ್ರವು **ಕಾಲಭವಂ** = ಕಾಲಕ್ಕೆ ತಕ್ಕಂತೆ **ತ್ವದೀಯಂ** = ನಿನ್ನದಾಗಿದ್ದರೂ **ಅಪಿ** = ಸಹ **ಮಾದೃಶೈಃ** = ನನ್ನಂತಹ **ಬಲವದ್ಭಿಃ** = ಬಲಿಷ್ಠರಾದ **ನೃಪೈಃ** = ರಾಜರಿಂದ । **ಹ್ರಿಯತೇ** = ವಶಕ್ಕೆ ತೆಗೆದು ಕೊಳ್ಳಲ್ಪಡುವುದು **ಹಿ** = ಆದ್ದರಿಂದ **ತದಾ** = ಹೀಗಿರುವಾಗ **ತೇ** = ನಿನಗೆ **ರಾಜ್ಯಾಶಾ** = ರಾಜ್ಯದ ಆಶೆಯು **ಕುತಃ** = ಎಲ್ಲಿಯದು ॥

**ತಾತ್ಪರ್ಯ** :- ಕಾಲಕ್ರಮದಿಂದಾಗಿ ಈರಾಷ್ಟ್ರ ನಿನ್ನದಾಗಿದ್ದರೂ ನನ್ನಂತಹ ರಾಜರಿಂದ ಬಲಾತ್ಕಾರದಿಂದ ಕಿತ್ತಿಕೊಳ್ಳಲ್ಪಡುವುದು. ಆದ್ದರಿಂದ ನಿನಗೆ ರಾಜ್ಯದ ಆಸೆ ಎಲ್ಲಿಯದು?

ರಾಜನೇ ಕಾಲಕ್ಕೆ ಕಾರಣ

**ಕಾಲೋ ವಾ ಕಾರಣಂ ರಾಜ್ಞೋ ರಾಜಾ ವಾ ಕಾಲಕಾರಣಮ್ ।**
**ಇತಿ ತೇ ಸಂಶಯೋ ಮಾಭೂದ್ರಾಜಾ ಕಾಲಸ್ಯ ಕಾರಣಮ್ ॥ ೩೭ ॥**

**ಕಾಲಃ ವಾ ಕಾರಣಂ ರಾಜ್ಞಃ ರಾಜಾ ವಾ ಕಾಲಕಾರಣಮ್ । ಇತಿ ತೇ ಸಂಶಯಃ ಮಾ ಅಭೂತ್ ರಾಜಾ ಕಾಲಸ್ಯ ಕಾರಣಮ್ ॥**

**ಅರ್ಥ** :- **ಕಾಲಃ** = ಕಾಲವು **ರಾಜ್ಞಃ** = ರಾಜನಿಗೆ **ಕಾರಣಂ ವಾ** = ಕಾರಣವೋ ಅಥವಾ **ರಾಜಾ** = ರಾಜನು **ಕಾಲಕಾರಣಮ್** = ಕಾಲಕ್ಕೆ ಕಾರಣವೋ । **ಇತಿ** = ಎಂಬುದಾಗಿ **ತೇ** = ನಿನಗೆ **ಸಂಶಯಃ** = ಸಂಶಯವು **ಮಾ ಅಭೂತ್** = ಒದಗುವುದು ಬೇಡ **ರಾಜಾ** = ರಾಜನು **ಕಾಲಸ್ಯ** = ಕಾಲಕ್ಕೆ **ಕಾರಣಮ್** = ಕಾರಣನು.

**ತಾತ್ಪರ್ಯ** :- ರಾಜನಿಗೆ ಕಾಲ ಕಾರಣವೋ, ಅಥವಾ ರಾಜ ಕಾಲಕ್ಕೆ ಕಾರಣನೋ ಎಂಬ ಸಂಶಯ ನಿನಗೆ ಬೇಡ. ರಾಜನೇ ಕಾಲಕ್ಕೆ ಕಾರಣ.

ರಾಜರಲ್ಲಿ, ವಿಪ್ರರಲ್ಲಿ ಕಲಿಪ್ರವೇಶ

**ತಮುವಾಚ ಕಲಿಃ ಕಾಲೇ ಮದೀಯೇ ತ್ವಾದೃಶಃ ಕುತಃ ।**
**ರಾಜಾನಂ ಪೂರ್ವಮಾವಿಶ್ಯ ವಿಪ್ರಾಂಶ್ಚ ಸ್ಯಾಮಹಂ ನೃಪ ॥ ೩೮ ॥**

**ತಂ ಉವಾಚ ಕಲಿಃ ಕಾಲೇ ಮದೀಯೇ ತ್ವಾದೃಶಃ ಕುತಃ । ರಾಜಾನಂ ಪೂರ್ವಂ ಆವಿಶ್ಯ ವಿಪ್ರಾನ್ ಚ ಸ್ಯಾಂ ಅಹಂ ನೃಪ ॥**

**ಅರ್ಥ** :- **ತಂ** = ಅವನನ್ನು ಕುರಿತು **ಕಲಿಃ** = ಕಲಿಯು **ಉವಾಚ** = ಹೇಳಿದನು **ನೃಪ** = ಎಲೈ ರಾಜನೇ **ಮದೀಯೇ** = ನನಗೆ ಸೇರಿದ **ಕಾಲೇ** = ಕಾಲದಲ್ಲಿ **ತ್ವಾದೃಶಃ** = ನಿನ್ನಂತಹವನು **ಕುತಃ** = ಎಲ್ಲಿರುವನು । **ಪೂರ್ವಂ** =

ಮೊದಲಿಗೆ **ರಾಜಾನಂ** = ರಾಜನನ್ನು **ಚ** = ಮತ್ತು **ವಿಪ್ರಾನ್** = ವಿಪ್ರರನ್ನು **ಆವಿಶ್ಯ** = ಆವೇಶಿಸಿ **ಅಹಂ** = ನಾನು **ಸ್ಯಾಂ** = ಇರುವೆನು ॥

**ತಾತ್ಪರ್ಯ :-** ಕಲಿ ಧರ್ಮರಾಜನಿಗೆ ಹೇಳಿದ 'ರಾಜನೇ, ನನ್ನ ಕಾಲದಲ್ಲಿ ನಿನ್ನಂತಹ ರಾಜರೆಲ್ಲಿರುವರು? ಮೊದಲಿಗೆ ರಾಜರನ್ನು, ಬ್ರಾಹ್ಮಣರನ್ನು ಪ್ರವೇಶಿಸುವೆ.

**ವಾಸುದೇವಸಹಾಯೇಷು ತೇಜೋ ಯುಷ್ಮಾಸು ಮೇ ನ ಹಿ ।**
**ಕ್ವ ರಾಜಾಽಸಾವೃತೇ ಯುಷ್ಮಾನ್ ಯೋ ಮಯಾ ನಾಭಿಭೂಯತೇ ॥೩೯॥**

**ವಾಸುದೇವಸಹಾಯೇಷು ತೇಜಃ ಯುಷ್ಮಾಸು ಮೇ ನ ಹಿ । ಕ್ವ ರಾಜಾ ಅಸೌ ಋತೇ ಯುಷ್ಮಾನ್ ಯಃ ಮಯಾ ನ ಅಭಿಭೂಯತೇ ॥**

**ಅರ್ಥ :- ವಾಸುದೇವಸಹಾಯೇಷು** = ವಾಸುದೇವನಾದ ಶ್ರೀಕೃಷ್ಣನ ಸಹಾಯ ಪಡೆದಿರುವ **ಯುಷ್ಮಾಸು** = ನಿಮ್ಮ ವಿಷಯದಲ್ಲಿ **ಮೇ** = ನನಗೆ **ತೇಜಃ** = ಸಾಮರ್ಥ್ಯವು ನ **ಹಿ** = ಇಲ್ಲವೇ ಇಲ್ಲ । **ಯುಷ್ಮಾನ್** = ನಿಮ್ಮನ್ನು **ಋತೇ** = ಹೊರತು ಪಡಿಸಿ **ಯಃ** = ಯಾವನು **ಮಯಾ** = ನನ್ನಿಂದ ನ **ಅಭಿಭೂಯತೇ** = ವಶಕ್ಕೊಳಗಾಗದಂತಹ **ರಾಜಾ** = ರಾಜನು **ಕ್ವ ಅಸೌ** = ಎಲ್ಲಿರುವನು? ॥

**ಮದೀಯಕಾಲೇ ಭೂಪಾಲ ವಿಪ್ರವೇದವಿರೋಧಿನಿ ।**
**ಮದ್ದೃಷ್ಟಿಪಾತೇ ಕ್ವ ಗುಣಾಃ ಕ್ವ ವೇದಾಃ ಕ್ವ ಸುಯುಕ್ತಯಃ ॥ ೪೦ ॥**

**ಮದೀಯಕಾಲೇ ಭೂಪಾಲ ವಿಪ್ರವೇದವಿರೋಧಿನಿ । ಮದ್ದೃಷ್ಟಿಪಾತೇ ಕ್ವ ಗುಣಾಃ ಕ್ವ ವೇದಾಃ ಕ್ವ ಸುಯುಕ್ತಯಃ ॥**

**ಅರ್ಥ :- ಭೂಪಾಲ** = ರಾಜನೇ! **ವಿಪ್ರವೇದವಿರೋಧಿನಿ** = ವಿಪ್ರರಿಗೂ ವೇದಗಳಿಗೂ ವಿರೋಧಿಯಾದ **ಮದೀಯಕಾಲೇ** = ನನ್ನ ಕಾಲದಲ್ಲಿ **(ಯುಷ್ಮಾನ್ ಋತೇ)** = ನಿಮ್ಮನ್ನು ಹೊರತುಪಡಿಸಿ **ಮದ್ದೃಷ್ಟಿಪಾತೇ** = ನನ್ನ ದೃಷ್ಟಿ ಬಿದ್ದೆಡೆ **ಗುಣಾಃ ಕ್ವ** = ಗುಣಗಳೆಲ್ಲಿ? **ವೇದಾಃ ಕ್ವ** = ವೇದಗಳೆಲ್ಲಿ? **ಸುಯುಕ್ತಯಃ ಕ್ವ** = ಸುಯುಕ್ತಿಗಳೆಲ್ಲಿ?

**ತಾತ್ಪರ್ಯ** :- ರಾಜನೇ, ಕೃಷ್ಣರಕ್ಷಿತರಾದ ನಿಮ್ಮಲ್ಲಿ ನನ್ನ ಸಾಮರ್ಥ್ಯ ನಡೆಯದು, ವಿಪ್ರರಿಗೂ, ವೇದಗಳಿಗೂ ವಿರೋಧಿಯಾದ ನನ್ನ ಕಾಲದಲ್ಲಿ ನಿಮ್ಮ ಹೊರತು ನನಗೆ ಸೋಲದ ರಾಜನೆಲ್ಲಿರುವನು. ನಾನು ಕಣ್ಣು ಹಾಕಿದ ಮೇಲೆ ಎಲ್ಲಿಯ ಗುಣಗಳು ಎಲ್ಲಿಯ ವೇದಗಳು ಎಲ್ಲಿಯ ಸುಯುಕ್ತಿಗಳು?

### ಧರ್ಮರಾಜನಿಂದ ಕಲಿಯ ಬಿಡುಗಡೆ

**ಜಗಾದ ನೃಪತಿಃ ಸತ್ಯಂ ಕಲೇ ವಕ್ಷ್ಯನೃತೋಽಪಿ ಸನ್ ।**
**ಮೋಚಯೇ ತ್ವಾರ್ತವಚನಾದ್ಯದಾಽಸ್ಮತ್ಸಂತತೇಃ ಪರಮ್ ॥ ೪೧ ॥**

**ಜಗಾದ ನೃಪತಿಃ ಸತ್ಯಂ ಕಲೇ ವಕ್ಷಿ ಅನೃತಃ ಅಪಿ ಸನ್ । ಮೋಚಯೇ ತ್ವಾ ಋತವಚನಾತ್ ಯದಾ ಅಸ್ಮತ್ಸಂತತೇಃ ಪರಮ್ ॥**

### ಧರ್ಮರಾಜನಿಗೆ ಕಲಿ ಒಪ್ಪಿಸಬೇಕಾದ ಕರ

**ವಿಲುಂಪಸ್ಯಖಿಲಾನ್ ಧರ್ಮಾನ್ ಕರಂ ತತ್ರಾಪಿ ನೋಽರ್ಪಯ ।**
**ಸೀಮಾಧಿರ್ಬಹುವಾಕ್ಯಂ ಚ ತುಲಾಮಾನೇ ಚ ಮೇ ಕರಃ ॥ ೪೨ ॥**

**ವಿಲುಂಪಸಿ ಅಖಿಲಾನ್ ಧರ್ಮಾನ್ ಕರಂ ತತ್ರ ಅಪಿ ನಃ ಅರ್ಪಯ । ಸೀಮಾ ಆಧಿಃ ಬಹುವಾಕ್ಯಂ ಚ ತುಲಾಮಾನೇ ಚ ಮೇ ಕರಃ ॥**

**ಅರ್ಥ** :- **ಕಲೇ** = ಎಲೈ ಕಲಿಯೇ! **(ತ್ವಂ)** = ನೀನು **ಅನೃತಃ ಸನ್ ಅಪಿ** = ಅನೃತಸ್ವರೂಪನಾದರೂ ಸಹ **ಸತ್ಯಂ** = ಸತ್ಯವನ್ನು **ವಕ್ಷಿ** = ನುಡಿಯುತ್ತಿರುವೆ. **ತ್ವಾ** = ನಿನ್ನನ್ನು **ಋತವಚನಾತ್** = ಸತ್ಯವಾದ ಮಾತಿನ ನಿಮಿತ್ತದಿಂದ **ಮೋಚಯೇ** = ಬಿಡುಗಡೆಮಾಡುವೆ. **ಯದಾ** = ಯಾವಾಗ **ಅಸ್ಮತ್ಸಂತತೇಃ** = ನಮ್ಮ ಸಂತತಿಯ **ಪರಂ** = ಬಳಿಕ **ಅಖಿಲಾನ್** = ಎಲ್ಲ **ಧರ್ಮಾನ್** = ಧರ್ಮಗಳನ್ನು **ವಿಲುಂಪಸಿ** = ನಾಶಮಾಡುವೆ. **ತತ್ರ ಅಪಿ** = ಆಗಲೂ ಸಹ **ಕರಂ** = ಕರವನ್ನು **ನಃ** = ನಮಗೆ **ಅರ್ಪಯ** = ಅರ್ಪಿಸು. **ಸೀಮಾ** = ಗ್ರಾಮದ ಗಡಿ **ಆಧಿಃ** = (ಸಾಲಕ್ಕೆಂದು ವಸ್ತುವನ್ನು ಸಂಪತ್ತನ್ನು) ಅಡವು ಇಡುವುದು **ಬಹುವಾಕ್ಯಂ ಚ** = ಮತ್ತು ಬಹುಜನರ ಸಾಕ್ಷಿ **ತುಲಾಮಾನೇ ಚ** = ತೂಗುವುದು, ಅಳೆಯುವುದು ಸಹ **ಮೇ** = ನನಗೆ **(ದೀಯಮಾನಃ)** = ಕೊಡಬೇಕಾಗಿರುವ **ಕರಃ** = ಕಪ್ಪವಾಗಿದೆ.

**ತಾತ್ಪರ್ಯ** :- ಧರ್ಮರಾಜ ತಿಳಿಸಿದ 'ಕಲಿಯೇ, ನೀನು ಅನೃತ ಸ್ವರೂಪನಾದರೂ ಈ ಮಟ್ಟಿಗೆ ಸತ್ಯವನ್ನೇ ನುಡಿಯುತ್ತಿರುವಿ. ಹೀಗೆ ಸತ್ಯ ನುಡಿದದ್ದರಿಂದ ನಿನ್ನನ್ನು ಬಿಡುಗಡೆ ಮಾಡುವೆ, ನಮ್ಮ ಸಂತತಿಯ ಬಳಿಕ ನೀನು ಎಲ್ಲ ಧರ್ಮಗಳನ್ನೂ ನಾಶಪಡಿಸಬಹುದು. ಆದರೆ, ಆಗಲೂ ನಮಗೆ ನೀನು ಗ್ರಾಮದ ಗಡಿ, ಬಹುಜನರ ಸಾಕ್ಷಿ, ತೂಗುವುದು ಮತ್ತು ಅಳೆಯುವುದು - ಈ ನಾಲ್ಕನ್ನು ನೀನು ಕಪ್ಪವಾಗಿ ನೀಡಬೇಕು'.

ಕೃಷ್ಣನಿಂದ ಕಲಿಯ ಶಾಸನ

**ನೈವಾತಿಕ್ರಮಮೇತೇಷಾಂ ಕುರು ಸರ್ವಾತ್ಮನಾ ಕ್ವಚಿತ್ ।**
**ತಮಾಹ ಭಗವಾನ್ ಕೃಷ್ಣೋ ಯಾವತ್ ಪಾಂಡವಸಂತತಿಃ ॥ ೪೩ ॥**

ನ ಏವ ಅತಿಕ್ರಮಂ ಏತೇಷಾಂ ಕುರು ಸರ್ವಾತ್ಮನಾ ಕ್ವಚಿತ್ । ತಂ ಆಹ ಭಗವಾನ್ ಕೃಷ್ಣಃ ಯಾವತ್ ಪಾಂಡವಸಂತತಿಃ ॥ ೪೩ ॥

**ತಾವನ್ನ ತೇ ಭವೇಚ್ಛಕ್ತಿಃ ಪ್ರವೃತ್ತಸ್ಯಾಪಿ ಭೂತಲೇ ।**
**ಪಾಂಡವೇಭ್ಯಃ ಪರಂ ಯಾವತ್ ಕ್ಷೇಮಕಃ ಕ್ರಮವರ್ಧಿತಾ ॥ ೪೪ ॥**

ತಾವತ್ ನ ತೇ ಭವೇತ್ ಶಕ್ತಿಃ ಪ್ರವೃತ್ತಸ್ಯ ಅಪಿ ಭೂತಲೇ । ಪಾಂಡವೇಭ್ಯಃ ಪರಂ ಯಾವತ್ ಕ್ಷೇಮಕಃ ಕ್ರಮವರ್ಧಿತಾ ॥

**ಕ್ಷೇಮಕಾತ್ ಪರತಃ ಪೂರ್ತಿಂ ಶಕ್ತಿಸ್ತೇ ಯಾಸ್ಯತಿ ಧ್ರುವಮ್ ।**
**ನ ದ್ರಷ್ಟವ್ಯಂ ಭೂತಲಂ ತೇ ಕುತ ಏವ ಸ್ಪ್ರಶೇರ್ಭುವಮ್ ॥ ೪೫ ॥**

ಕ್ಷೇಮಕಾತ್ ಪರತಃ ಪೂರ್ತಿಂ ಶಕ್ತಿಃ ತೇ ಯಾಸ್ಯತಿ ಧ್ರುವಮ್ । ನ ದ್ರಷ್ಟವ್ಯಂ ಭೂತಲಂ ತೇ ಕುತಃ ಏವ ಸ್ಪ್ರಶೇಃ ಭುವಮ್ ॥ ೪೫ ॥

**ಯಾವತ್ ಪಾರ್ಥಾ ಅಹಂ ಚಾತ್ರ ತತೋ ಭುವಿ ಪದಂ ಕುರು ।**
**ಇತ್ಯುಕ್ತೋ ವಾಸುದೇವೇನ ಮೋಚಿತೋ ಧರ್ಮಜೇನ ಚ ॥ ೪೬ ॥**

ಯಾವತ್ ಪಾರ್ಥಾಃ ಅಹಂ ಚ ಅತ್ರ ತತಃ ಭುವಿ ಪದಂ ಕುರು । ಇತಿ ಉಕ್ತಃ ವಾಸುದೇವೇನ ಮೋಚಿತಃ ಧರ್ಮಜೇನ ಚ ॥ ೪೬ ॥

**ಅರ್ಥ** :- **ಏತೇಷಾಂ** = ಇವುಗಳ **ಅತಿಕ್ರಮಂ** = ಅತಿಕ್ರಮಣವನ್ನು **ಸರ್ವಾತ್ಮನಾ** = ಯಾವರೀತಿಯಲ್ಲೂ **ಕ್ವಚಿತ್** = ಎಲ್ಲೂ ನ ಏವ **ಕುರು** = ಮಾಡಲೇಬೇಡ. **ಭಗವಾನ್** = ಭಗವಂತನಾದ **ಕೃಷ್ಣಃ** = ಕೃಷ್ಣನು **ತಂ** = ಆ ಕಲಿಯನ್ನು (ಕುರಿತು) **ಆಹ** = ಹೇಳಿದ. **ಭೂತಲೇ** = ಭೂಮಿಯಲ್ಲಿ **ಪ್ರವೃತ್ತಸ್ಯ ಅಪಿ** = (ಕಲಿಯುಗವು) ಪ್ರಾರಂಭವಾಗಿದ್ದರೂ ಸಹ **ಪಾಂಡವಸಂತತಿಃ** = ಪಾಂಡವರ ಸಂತತಿಯು **ಯಾವತ್** = ಎಲ್ಲಿಯವರೆಗೋ **ತಾವತ್** = ಅಲ್ಲಿಯವರೆಗೂ **ತೇ** = ನಿನ್ನ **ಶಕ್ತಿಃ** = ಶಕ್ತಿಯು **ನ ಭವೇತ್** = ಇರದು. **ಪಾಂಡವೇಭ್ಯಃ** = ಪಾಂಡವರ **ಪರಂ** = ನಂತರ **ಕ್ಷೇಮಕಃ** = ಕ್ಷೇಮಕನು **ಯಾವತ್** = ಎಲ್ಲಿಯವರೆಗೋ, (**ತಾವತ್**) = ಅಲ್ಲಿಯವರೆಗೂ **ಕ್ರಮವರ್ಧಿತಾ** = (ನಿನ್ನ ಪ್ರವೃತ್ತಿಯು) ಕ್ರಮವಾಗಿ ವರ್ಧಿಸುವುದಾಗಿ (**ಸ್ಯಾತ್**) = ಆಗಲಿ. **ಕ್ಷೇಮಕಾತ್** = ಕ್ಷೇಮಕನ **ಪರತಃ** = ನಂತರ **ತೇ** = ನಿನ್ನ **ಶಕ್ತಿಃ** = ಶಕ್ತಿಯು **ಧ್ರುವಂ** = ನಿಶ್ಚಯವಾಗಿ **ಪೂರ್ತಿಃ** = ಪೂರ್ತಿಯು **ಯಾಸ್ಯತಿ** = ಆಗುವುದು. **ಅತ್ರ** = ಈ ಭೂಮಿಯಲ್ಲಿ **ಪಾರ್ಥಾಃ** = ಪಾಂಡವರು **ಅಹಂ ಚ** = ಮತ್ತು ನಾನು **ಯಾವತ್** = ಎಲ್ಲಿಯವರೆಗೆ (ಇರುವೆವೋ) (**ತಾವತ್**) = ಅಲ್ಲಿಯವರೆಗೆ **ತೇ ತ್ವಯಾ** = ನಿನ್ನಿಂದ **ಭೂತಲಂ** = ಭೂಮಿಯು **ನ ದ್ರಷ್ಟವ್ಯಂ** = ನೋಡಲ್ಪಡಬಾರದು. **ಭುವಂ** = ಭೂಮಿಯನ್ನು **ಸ್ಪೃಶೇಃ** = ಸ್ಪರ್ಶಿಸುವುದು **ಕುತಃ ಏವ** = ಎಲ್ಲಿಯದು? **ತತಃ** = ಅನಂತರ (ನಮ್ಮ ಗಮನಾನಂತರ) **ಭುವಿ** = ಭೂಮಿಯಲ್ಲಿ **ಪದಂ ಕುರು** = ಪಾದವನ್ನಿಡು. **ಇತಿ** = ಹೀಗೆಂದು **ವಾಸುದೇವೇನ** = ವಾಸುದೇವನಿಂದ **ಉಕ್ತಃ** = ಹೇಳಲ್ಪಟ್ಟ ಕಲಿಯು, **ಧರ್ಮಜೇನ** = ಧರ್ಮನ ಮಗನಾದ ಯುಧಿಷ್ಠಿರನಿಂದ **ಮೋಚಿತಃ ಚ** = ಬಿಡುಗಡೆಗೊಳಿಸಲ್ಪಟ್ಟ ಸಹ.

**ತಾತ್ಪರ್ಯ** :- ನೀನು ಇವುಗಳ ಉಲ್ಲಂಘನೆಯನ್ನು ಸರ್ವಥಾ ಎಲ್ಲೂ ಮಾಡಕೂಡದು''. ಧರ್ಮರಾಜ ಹೀಗೆನ್ನಲು ಕೃಷ್ಣ ತಿಳಿಸಿದ – ''ಪಾಂಡವರ ಸಂತತಿಯಿರುವವರೆಗೂ ನೀನು ಭೂಮಿಯಲ್ಲಿ ಪ್ರವೃತ್ತನಾದರೂ ಸಾಮರ್ಥ್ಯವಿರಲಾರದು ; ಪಾಂಡವರ ನಂತರ ಕ್ಷೇಮಕನವರೆಗೆ ನಿನ್ನ ಪ್ರವೃತ್ತಿ ಕ್ರಮವಾಗಿ ಹೆಚ್ಚುವುದು. ಕ್ಷೇಮಕನ ಅನಂತರ ನಿನ್ನ ಶಕ್ತಿ ಪೂರ್ಣತೆಯನ್ನು ನಿಶ್ಚಿತವಾಗಿ ಪಡೆಯುವುದು. ಪಾಂಡವರು ಹಾಗೂ ನಾನು ಈ ಭೂಮಿಯ

ಮೇಲೆ ಇರುವವರೆಗೂ ನೀನು ಭೂಮಿಯನ್ನು ನೋಡಲೂ ಕೂಡದು. ಇನ್ನು ಅದನ್ನು ಮುಟ್ಟುವುದು ಎಂತು. ಅನಂತರ ನೀನು ಭೂಮಿಯಲ್ಲಿ ಕಾಲಿಡಬಹುದು'' ಎಂದು ಕೃಷ್ಣ ಹೇಳಿದ ; ಬಳಿಕ ಕಲಿಯನ್ನು ಧರ್ಮರಾಜ ಬಿಡುಗಡೆ ಮಾಡಿದ.

### ಸಮುದ್ರ ಗುಹೆಗೆ ಕಲಿ

**ತಾನ್ ಪ್ರಣಮ್ಯ ಯಯೌ ಪಾರೇ ಸಮುದ್ರಸ್ಯಾಶ್ರಯದ್ಗುಹಾಮ್ ।**
**ಪಾರ್ಥಾಶ್ಚ ಕೃಷ್ಣಸಹಿತಾ ರಕ್ಷಂತಃ ಕ್ಷ್ಮಾಂ ಮುದಂ ಯಯುಃ ॥ ೪೭ ॥**

ತಾನ್ ಪ್ರಣಮ್ಯ ಯಯೌ ಪಾರೇ ಸಮುದ್ರಸ್ಯ ಆಶ್ರಯತ್ ಗುಹಾಮ್ । ಪಾರ್ಥಾಃ ಚ ಕೃಷ್ಣಸಹಿತಾಃ ರಕ್ಷಂತಃ ಕ್ಷ್ಮಾಂ ಮುದಂ ಯಯುಃ ॥

**ಅರ್ಥ** :– **ತಾನ್** = ಅವರನ್ನು **ಪ್ರಣಮ್ಯ** = ನಮಸ್ಕರಿಸಿ **ಸಮುದ್ರಸ್ಯ** = ಸಮುದ್ರದ **ಪಾರೇ** = ಇನ್ನೊಂದು ತೀರದಲ್ಲಿ **ಗುಹಾಂ** = ಗುಹೆಯೊಂದನ್ನು **ಅಶ್ರಯತ್** = ಆಶ್ರಯಿಸಿದನು. **ಪಾರ್ಥಾಃ ಚ** = ಪಾಂಡವರೂ ಸಹ **ಕೃಷ್ಣಸಹಿತಾಃ** = ಕೃಷ್ಣನೊಂದಿಗೆ ಕೂಡಿದವರಾಗಿ **ಕ್ಷ್ಮಾಂ** = ಭೂಮಿಯನ್ನು **ರಕ್ಷಂತಃ** = ರಕ್ಷಿಸುವವರಾಗಿ **ಮುದಂ** = ಸಂತೋಷವನ್ನು **ಯಯುಃ** = ಹೊಂದಿದರು.

**ತಾತ್ಪರ್ಯ** :- ಕಲಿ ಅವರಿಗೆ ನಮಸ್ಕರಿಸಿ ಸಮುದ್ರದ ಆಚೆಯ ಗುಹೆಯೊಂದನ್ನು ಹೊಕ್ಕ. ಪಾಂಡವರು ಕೃಷ್ಣನೊಡನೆ ಭೂಮಿಯನ್ನು ಪಾಲಿಸುತ್ತಾ ಆನಂದವನ್ನು ಹೊಂದಿದರು.

### ಅನುಗೀತಾ ಪ್ರಸಂಗ

**ಏವಂ ಪಾರ್ಥಾನ್ ಪ್ರತಿಷ್ಠಾಪ್ಯ ಶಕ್ರಪ್ರಸ್ಥೇ ತು ಸಾರ್ಜುನಃ ।**
**ಕ್ರೀಡನ್ ದಿವ್ಯಾಃ ಕಥಾಃ ಪ್ರಾಹ ಪುತ್ರಶೋಕಾಪನುತ್ತಯೇ ।**
**ಗೀತೋಕ್ತಂ ವಿಸ್ಮೃತಂ ಚಾಸ್ಮೈ ಪುನರ್ವಿಸ್ತರತೋಽವದತ್ ॥ ೪೮ ॥**

ಏವಂ ಪಾರ್ಥಾನ್ ಪ್ರತಿಷ್ಠಾಪ್ಯ ಶಕ್ರಪ್ರಸ್ಥೇ ತು ಸಾರ್ಜುನಃ । ಕ್ರೀಡನ್ ದಿವ್ಯಾಃ ಕಥಾಃ ಪ್ರಾಹ ಪುತ್ರಶೋಕಾಪನುತ್ತಯೇ । ಗೀತೋಕ್ತಂ ವಿಸ್ಮೃತಂ ಚ ಅಸ್ಮೈ ಪುನಃ ವಿಸ್ತರತಃ ಅವದತ್ ॥ ೪೮ ॥

**ಅರ್ಥ** :- **ಏವಂ** = ಹೀಗೆ **ಪಾರ್ಥಾನ್** = ಪಾಂಡವರನ್ನು **ಪ್ರತಿಷ್ಠಾಪ್ಯ** = (ರಾಜ್ಯದಲ್ಲಿ) ಸ್ಥಾಪಿಸಿ **ಶಕ್ರಪ್ರಸ್ಥೇ ತು** = ಇಂದ್ರಪ್ರಸ್ಥದಲ್ಲಿ **ಸಾರ್ಜುನಃ** = ಅರ್ಜುನನ ಸಹಿತನಾದ ಕೃಷ್ಣನು **ಕ್ರೀಡನ್** = ವಿಹರಿಸುತ್ತಾ **ಪುತ್ರಶೋಕಾಪನುತ್ತಯೇ** = ಪುತ್ರಶೋಕವನ್ನು ಹೋಗಲಾಡಿಸಲೆಂದು **ದಿವ್ಯಾಃ** = ದಿವ್ಯವಾದ **ಕಥಾಃ** = ಕಥೆಗಳನ್ನು **ಪ್ರಾಹ** = ಹೇಳಿದನು. **ವಿಸ್ಮೃತಂ** = (ಅರ್ಜುನನಿಗೆ) ಮರೆತುಹೋಗಿದ್ದ **ಗೀತೋಕ್ತಂ ಚ** = ಗೀತೆಯಲ್ಲಿ ಹೇಳಲ್ಪಟ್ಟದ್ದನ್ನೂ **ಅಸ್ಮೈ** = ಅವನಿಗೆ **ಪುನಃ** = ಮತ್ತೊಮ್ಮೆ **ವಿಸ್ತರತಃ** = ವಿಸ್ತಾರವಾಗಿ **ಅವದತ್** = ಹೇಳಿದನು.

**ತಾತ್ಪರ್ಯ** :- ಹೀಗೆ ಪಾಂಡವರನ್ನು ರಾಜ್ಯದಲ್ಲಿ ಸ್ಥಾಪಿಸಿ ಕೃಷ್ಣ ಅರ್ಜುನನೊಂದಿಗೆ ಇಂದ್ರಪ್ರಸ್ಥದಲ್ಲಿ ವಿಹರಿಸುತ್ತಾ ಅವನ ಪುತ್ರಶೋಕವನ್ನು ಕಳೆಯಲೆಂದು ದಿವ್ಯವಾದ ಕಥೆಗಳನ್ನು ಹೇಳಿದ. ಗೀತೆಯಲ್ಲಿ ಹೇಳಿದ್ದನ್ನು ಮರೆತಿದ್ದ ಅರ್ಜುನನಿಗೆ ಕೃಷ್ಣ ಪುನಃ ಅದನ್ನು ವಿಸ್ತಾರದಿಂದ ಉಪದೇಶಿಸಿದ.

### ಅನುಗೀತಾ ಸಾರ

**ವಾಣೀ ಪ್ರಾಣೋ ವಾಸುದೇವ ಇತ್ಯೇತೈರಖಿಲಂ ತತಮ್ ।**
**ಸರ್ವೋತ್ತಮತ್ವಮೇತೇಷಾಂ ಸರ್ವಮೇತದ್ವಶೇ ಜಗತ್ ।**
**ಉತ್ತರೋತ್ತರಮೇತೇಽಪಿ ಗುಣೋಚ್ಚಾಸ್ತದ್ವಶೇ ಪರೇ ॥ ೪೯ ॥**

**ವಾಣೀ ಪ್ರಾಣಃ ವಾಸುದೇವಃ ಇತಿ ಏತೈಃ ಅಖಿಲಂ ತತಮ್ । ಸರ್ವೋತ್ತಮತ್ವಂ ಏತೇಷಾಂ ಸರ್ವಂ ಏತದ್ವಶೇ ಜಗತ್ । ಉತ್ತರೋತ್ತರಂ ಏತೇ ಅಪಿ ಗುಣೋಚ್ಚಾಃ ತದ್ವಶೇ ಪರೇ ॥ ೪೯ ॥**

**ಅರ್ಥ** :- **ವಾಣೀ** = ಭಾರತೀದೇವೀ **ಪ್ರಾಣಃ** = ಮುಖ್ಯಪ್ರಾಣ **ವಾಸುದೇವಃ** = ವಾಸುದೇವ (ಶ್ರೀಹರಿ) **ಇತಿ** = ಎಂಬ **ಏತೈಃ** = ಇವರಿಂದ (ಈ ಮೂವರಿಂದ) **ಅಖಿಲಂ** = ಸಕಲವೂ (ಎಲ್ಲ ಜಗತ್ತೂ) **ತತಮ್** = ವ್ಯಾಪ್ತವಾಗಿದೆ. **ಏತೇಷಾಂ** = ಈ ಮೂವರಿಗೆ **ಸರ್ವೋತ್ತಮತ್ವಂ** = ಸರ್ವೋತ್ತಮತ್ವವು (ಅಸ್ತಿ) = ಇದೆ. **ಸರ್ವಂ ಜಗತ್** = ಎಲ್ಲ ಜಗತ್ತು **ಏತದ್ವಶೇ** = ಇವರ ವಶದಲ್ಲಿ (ತಿಷ್ಠತಿ) = ನೆಲೆಸಿದೆ. **ಏತೇ ಅಪಿ** = ಇವರು (ಈ ಮೂವರೂ) **ಉತ್ತರೋತ್ತರಂ**

= ಉತ್ತರೋತ್ತರವಾಗಿ **ಗುಣೋಚ್ಚಾಃ** = ಗುಣಗಳಿಂದ ಅಧಿಕರಾಗಿರುವರು **ತದ್ವಶೇ** = ಇವರ ವಶದಲ್ಲಿ **ಪರೇ** = ಇತರರು **(ಸಂತಿ)** = ಇರುವರು.

**ತಾತ್ಪರ್ಯ** :- ಭಾರತಿ, ಮುಖ್ಯಪ್ರಾಣ, ನಾರಾಯಣ ಎಂಬವರಿಂದ ಸಕಲ ಜಗತ್ತು ವ್ಯಾಪ್ತವಾಗಿದೆ. ಸರ್ವೋತ್ತಮತ್ವ ಇರುವುದು ಈ ಮೂವರಿಗಷ್ಟೇ. ಇವರ ಅಧೀನದಲ್ಲೇ ಸಕಲ ಜಗತ್ತು ಇರುವುದು. ಇವರು ಉತ್ತರೋತ್ತರ ಹೆಚ್ಚು ಗುಣಶಾಲಿಗಳು. ಇತರರೆಲ್ಲ ಇವರ ಅಧೀನರು.

**ಇತ್ಥಂ ಹರೇರ್ವಶೇ ಸರ್ವಂ ಗುಣಪೂರ್ಣಶ್ಚ ಸ ಪ್ರಭುಃ ।**
**ಏಕ ಏವ ನ ಚಾನ್ಯೋಽಸ್ತಿ ಪ್ರಾಣೋಚ್ಚಾ ತದಧೋ ರಮಾ ॥ ೫೦ ॥**

**ಇತ್ಥಂ ಹರೇಃ ವಶೇ ಸರ್ವಂ ಗುಣಪೂರ್ಣಃ ಚ ಸಃ ಪ್ರಭುಃ । ಏಕಃ ಏವ ನ ಚ ಅನ್ಯಃ ಅಸ್ತಿ ಪ್ರಾಣೋಚ್ಚಾ ತದಧಃ ರಮಾ ॥**

**ಅರ್ಥ** :- **ಇತ್ಥಂ** = ಹೀಗೆ **ಸರ್ವಂ** = ಎಲ್ಲವೂ **ಹರೇಃ** = ಶ್ರೀಹರಿಯ **ವಶೇ** = ವಶದಲ್ಲಿ **(ಅಸ್ತಿ)** = ಇದೆ. **ಸಃ ಚ** = ಅವನಂತೂ **ಗುಣಪೂರ್ಣಃ** = ಗುಣಪೂರ್ಣನು **ಪ್ರಭುಃ** = ಸರ್ವಸಮರ್ಥನು **(ಸಃ)** = ಅವನು **ಏಕಃ ಏವ** = ಒಬ್ಬನೇ, **ಅನ್ಯಃ ಚ** = ಬೇರೊಬ್ಬನಂತೂ **ನ ಅಸ್ತಿ** = ಇಲ್ಲ. **ರಮಾ** = ಲಕ್ಷ್ಮೀದೇವಿಯು **ಪ್ರಾಣೋಚ್ಚಾ** = ಮುಖ್ಯಪ್ರಾಣನಿಗಿಂತ ಅಧಿಕಳು **ತದಧಃ** = ಅವನಿಗಿಂತ (ಶ್ರೀಹರಿಗಿಂತ) ಕೆಳಗಿನವಳು.

**ತಾತ್ಪರ್ಯ** :- ಹೀಗೆ ಎಲ್ಲವೂ ಶ್ರೀಹರಿಗೆ ಅಧೀನ, ಸರ್ವಗುಣಪೂರ್ಣನಾದವನೂ ಸರ್ವಸಮರ್ಥನಾದವನೂ ಅವನೊಬ್ಬನೇ ಹೊರತು ಬೇರಾರೂ ಅಲ್ಲ. ಮುಖ್ಯಪ್ರಾಣನಿಗಿಂತ ರಮಾದೇವಿ ಶ್ರೇಷ್ಠಳು, ನಾರಾಯಣನಿಗಿಂತ ಕಡಿಮೆಯಾದವಳು.

**ಸ ಹುತಾಶ ಇತಿ ಪ್ರೋಕ್ತೋ ಹುತಮತ್ತ್ಯಖಿಲಂ ಯತಃ ।**
**ವಾಕ್ಪ್ರಾಣಮಧ್ಯಗೋ ನಿತ್ಯಂ ಧಾರಯತ್ಯಖಿಲಂ ಜಗತ್ ॥ ೫೧ ॥**

**ಸಃ ಹುತಾಶಃ ಇತಿ ಪ್ರೋಕ್ತಃ ಹುತಂ ಅತ್ತಿ ಅಖಿಲಂ ಯತಃ । ವಾಕ್ಪ್ರಾಣಮಧ್ಯಗಃ ನಿತ್ಯಂ ಧಾರಯತಿ ಅಖಿಲಂ ಜಗತ್ ॥ ೫೧ ॥**

**ಅರ್ಥ** :- **ಯತಃ** = ಯಾವ ಕಾರಣದಿಂದ **ಹುತಂ** = ಹೋಮಿಸಿದ **ಅಖಿಲಂ** = ಎಲ್ಲವನ್ನೂ **ಅತ್ತಿ** = ತಿನ್ನುವನೋ, (**ಅತಃ**) = ಆ ಕಾರಣದಿಂದ **ಸಃ** = ಅವನು **ಹುತಾಶಃ** = ಹುತಾಶನು **ಇತಿ** = ಎಂದು **ಪ್ರೋಕ್ತಃ** = ಹೇಳಲ್ಪಟ್ಟಿರುವವನು. **ವಾಕ್ಪ್ರಾಣಮಧ್ಯಗಃ** = ಭಾರತೀ–ಪ್ರಾಣರ ಅಂತರ್ಯಾಮಿಯಾಗಿ **ನಿತ್ಯಂ** = ಯಾವಾಗಲೂ **ಅಖಿಲಂ ಜಗತ್** = ಎಲ್ಲ ಜಗತ್ತನ್ನೂ **ಧಾರಯತಿ** = ಧರಿಸಿರುವನು.

**ತಾತ್ಪರ್ಯ** :- ಹೋಮಿಸಿದ್ದನ್ನೆಲ್ಲ ಸ್ವೀಕರಿಸುವುದರಿಂದ ಶ್ರೀಹರಿಗ ಹುತಾಶ ಎಂದು ಹೆಸರು. ಅವನು ಭಾರತೀಪ್ರಾಣರ ಅಂತರ್ಯಾಮಿ ಯಾಗಿದ್ದು ಅಖಿಲ ಜಗತ್ತನ್ನೂ ಸದಾ ಧರಿಸಿರುವನು.

### ಜೀವ ತ್ರೈವಿಧ್ಯ

**ಸ ಈಶೋ ಬ್ರಹ್ಮರುದ್ರಾದ್ಯಾ ಜೀವಾ ಏವ ಪ್ರಕೀರ್ತಿತಾಃ ।**
**ಏತಸ್ಯಾನಾದಿಸದ್ಭಕ್ತಾ ಮುಕ್ತಿಯೋಗ್ಯಾ ಹಿ ತೇ ಸ್ಮೃತಾಃ ॥ ೫೨ ॥**

**ಸಃ ಈಶಃ ಬ್ರಹ್ಮರುದ್ರಾದ್ಯಾಃ ಜೀವಾಃ ಏವ ಪ್ರಕೀರ್ತಿತಾಃ । ಏತಸ್ಯ ಅನಾದಿಸದ್ಭಕ್ತಾಃ ಮುಕ್ತಿಯೋಗ್ಯಾಃ ಹಿ ತೇ ಸ್ಮೃತಾಃ ॥**

**ಅರ್ಥ** :- **ಸಃ** = ಅವನು **ಈಶಃ** = ಈಶ್ವರ **ಬ್ರಹ್ಮರುದ್ರಾದ್ಯಾಃ** = ಬ್ರಹ್ಮ–ರುದ್ರ ಮೊದಲಾದವರೆಲ್ಲ **ಜೀವಾಃ ಏವ** = ಜೀವರು ಎಂದೇ **ಪ್ರಕೀರ್ತಿತಾಃ** = ಹೇಳಲ್ಪಟ್ಟವರು. **ಏತಸ್ಯ** = ಅವನಿಗೆ **ಅನಾದಿಸದ್ಭಕ್ತಾಃ** = ಅನಾದಿಕಾಲದಿಂದ ಉತ್ತಮಭಕ್ತರಾದವರೆಲ್ಲರೂ **ಮುಕ್ತಿಯೋಗ್ಯಾಃ ಹಿ** = ಮುಕ್ತಿಗೆ ಯೋಗ್ಯರೆಂದೇ **ತೇ** = ಅವರು **ಸ್ಮೃತಾಃ** = ಕರೆಯಲ್ಪಡುವರು.

**ತಾತ್ಪರ್ಯ** :- ಅವನು ಈಶ್ವರ. ಬ್ರಹ್ಮ, ರುದ್ರ ಮೊದಲಾದವರೆಲ್ಲ ಜೀವರೆಂದೇ ಹೇಳಲ್ಪಟ್ಟವರು. ಅವನಿಗೆ ಅನಾದಿಕಾಲದಿಂದ ಉತ್ತಮ ಭಕ್ತರಾದವರೆಲ್ಲ ಮುಕ್ತಿಯೋಗ್ಯರೆನ್ನಿಸುವರು.

**ಅನಾದಿದ್ವೇಷಿಣೋ ಯೇಽಸ್ಮಿಂಸ್ತಮೋಯೋಗ್ಯಾಃ ಸುಪಾಪಿನಃ ।**
**ಮಿಶ್ರಾ ಮಧ್ಯಾ ಇತಿ ಜ್ಞೇಯಾಃ ಸಂಸಾರಪರಿವರ್ತಿನಃ ॥ ೫೩ ॥**

**ಅನಾದಿದ್ವೇಷಿಣಃ ಯೇ ಅಸ್ಮಿನ್ ತಮೋಯೋಗ್ಯಾಃ ಸುಪಾಪಿನಃ । ಮಿಶ್ರಾಃ ಮಧ್ಯಾಃ ಇತಿ ಜ್ಞೇಯಾಃ ಸಂಸಾರಪರಿವರ್ತಿನಃ ॥ ೫೩ ॥**

**ಅರ್ಥ** :- **ಯೇ** = ಯಾರು **ಅಸ್ಮಿನ್** = ಇವನಲ್ಲಿ (ಶ್ರೀಹರಿಯಲ್ಲಿ) **ಅನಾದಿದ್ವೇಷಿಣಃ** = ಅನಾದಿಕಾಲದಿಂದಲೂ ದ್ವೇಷಿಗಳಾಗಿರುವವರೋ (**ತೇ**) = ಅವರು **ತಮೋಯೋಗ್ಯಾಃ** = ತಮಸ್ಸಿಗೆ ಯೋಗ್ಯರಾದವರು, **ಸುಪಾಪಿನಃ** = ಮಹಾಪಾಪಿಗಳು. **ಸಂಸಾರಪರಿವರ್ತಿನಃ** = ಸಂಸಾರದಲ್ಲಿ ಸುತ್ತುತ್ತಿರುವ **ಮಿಶ್ರಾಃ** = ಮಿಶ್ರಜೀವರು (ಭಕ್ತಿ-ದ್ವೇಷ ಮಿಶ್ರವುಳ್ಳ ಜೀವರು) **ಮಧ್ಯಾಃ** = ಮಧ್ಯಮರು **ಇತಿ** = ಎಂದು **ಜ್ಞೇಯಾಃ** = ತಿಳಿಯಲ್ಪಡಬೇಕಾದವರು.

**ಏವಂ ಜೀವಾಸ್ತ್ರಿಧಾ ಪ್ರೋಕ್ತಾ ಭವಂತ್ಯೇತೇ ನ ಚಾನ್ಯಥಾ ।**
**ತಾರತಮ್ಯಂ ಚ ವಿಜ್ಞೇಯಂ ಲಿಂಗೈರ್ದೈಹಿಕಮಾನಸೈಃ ॥ ೫೪ ॥**

**ಏವಂ ಜೀವಾಃ ತ್ರಿಧಾ ಪ್ರೋಕ್ತಾಃ ಭವಂತಿ ಏತೇ ನ ಚ ಅನ್ಯಥಾ । ತಾರತಮ್ಯಂ ಚ ವಿಜ್ಞೇಯಂ ಲಿಂಗೈಃ ದೈಹಿಕಮಾನಸೈಃ ॥ ೫೪ ॥**

**ಅರ್ಥ** :- **ಏವಂ** = ಹೀಗೆ **ಜೀವಾಃ** = ಜೀವರು **ತ್ರಿಧಾ** = ಮೂರುವಿಧವಾಗಿ **ಪ್ರೋಕ್ತಾಃ** = (ಶಾಸ್ತ್ರದಲ್ಲಿ) ಹೇಳಲ್ಪಟ್ಟಿರುವರು. **ಏತೇ** = ಇವರು (ಈ ಜೀವರು) **ಅನ್ಯಥಾ** = ಬೇರೆಯಾಗಿ (ಸ್ವರೂಪಕ್ಕೆ ಭಿನ್ನರಾಗಿ) **ನ ಚ ಭವಂತಿ** = ಆಗಲಾರರು. **ದೈಹಿಕಮಾನಸೈಃ** = ದೈಹಿಕ ಮತ್ತು ಮಾನಸಿಕವಾದ **ಲಿಂಗೈಃ** = ಲಕ್ಷಣಗಳಿಂದ **ತಾರತಮ್ಯಂ ಚ** = ತಾರತಮ್ಯವೂ ಸಹ **ವಿಜ್ಞೇಯಂ** = ಚೆನ್ನಾಗಿ ತಿಳಿಯಲ್ಪಡ ಬೇಕಾದುದು.

**ತಾತ್ಪರ್ಯ** :- ಶ್ರೀಹರಿಯ ಅನಾದಿದ್ವೇಷಿಗಳು ತಮೋಯೋಗ್ಯರು, ಅವರು ಮಹಾಪಾಪಿಗಳು. ಸಂಸಾರದಲ್ಲಿ ಸುತ್ತುತ್ತಿರುವ ಭಕ್ತಿದ್ವೇಷ ಮಿಶ್ರರು, ಮಧ್ಯಮರು ಎಂದು ತಿಳಿಯಬೇಕು. ಹೀಗೆ ಜೀವರು ತ್ರಿವಿಧರೆನ್ನಿಸಿರುವರು. ಇದೆಂದೂ ವ್ಯತ್ಯಾಸ ಹೊಂದದು. ದೈಹಿಕ ಮತ್ತು ಮಾನಸಿಕ ಲಕ್ಷಣಗಳಿಂದ ಜೀವರ ತಾರತಮ್ಯವನ್ನು ಅರಿಯಬೇಕು.

### ದೈಹಿಕ ಮಾನಸಿಕ ಲಕ್ಷಣಗಳು

**ವಿಷ್ಣೋರ್ಲಿಂಗಾನುಸಾರಿತ್ವಾತ್ ತಾರತಮ್ಯಾತ್ ತದೀಕ್ಷಣಮ್ ।**
**ವಿಷ್ಣೋಸ್ತದನುಗಾನಾಂ ಚ ಪ್ರೀತಿಕೃದ್ಧರ್ಮ ಈರಿತಃ ॥ ೫೫ ॥**

**ವಿಷ್ಣೋಃ ಲಿಂಗಾನುಸಾರಿತ್ವಾತ್ ತಾರತಮ್ಯಾತ್ ತದೀಕ್ಷಣಮ್ । ವಿಷ್ಣೋಃ ತದನುಗಾನಾಂ ಚ ಪ್ರೀತಿಕೃತ್ ಧರ್ಮಃ ಈರಿತಃ ॥ ೫೫ ॥**

**ಅರ್ಥ** :– **ವಿಷ್ಣೋಃ** = ವಿಷ್ಣುವಿನ **ಲಿಂಗಾನುಸಾರಿತ್ವಾತ್** = (ಭಕ್ತ್ಯಾದಿ)ಲಕ್ಷಣಗಳಿಗೆ ಅನುಸಾರವಾದ **ತಾರತಮ್ಯಾತ್** = ತಾರತಮ್ಯದಿಂದ **ತದೀಕ್ಷಣಮ್ (ಕಾರ್ಯಮ್)** = ಆ ಜೀವರನ್ನು ನೋಡಬೇಕು. **ವಿಷ್ಣೋಃ** = ವಿಷ್ಣುವಿನ **ಚ** = ಮತ್ತು **ತದನುಗಾನಾಂ** = ಅವನ ಅನುಗರಾದ ಭಕ್ತರ **ಪ್ರೀತಿಕೃತ್** = ಪ್ರೀತಿ ಉಂಟು ಮಾಡುವುದು **ಧರ್ಮಃ** = ಧರ್ಮವು **(ಇತಿ)** = ಎಂದು **ಈರಿತಃ** = ಹೇಳಲ್ಪಟ್ಟಿದೆ.

**ಅಧರ್ಮೋಽನ್ಯ ಇಯಂ ನಿಷ್ಠಾ ಪ್ರಲಾಪಃ ಕಿಂ ಕರಿಷ್ಯತಿ ।**
**ಏವಮಾದ್ಯನುಶಾಸ್ಯಾಜಃ ಪಾರ್ಥಂ ಪಾರ್ಥೈಃ ಸುಸತ್ಕೃತಃ ॥ ೫೬ ॥**

**ಅಧರ್ಮಃ ಅನ್ಯಃ ಇಯಂ ನಿಷ್ಠಾ ಪ್ರಲಾಪಃ ಕಿಂ ಕರಿಷ್ಯತಿ । ಏವಂ ಆದಿ ಅನುಶಾಸ್ಯ ಅಜಃ ಪಾರ್ಥಂ ಪಾರ್ಥೈಃ ಸುಸತ್ಕೃತಃ ॥ ೫೬ ॥**

**ಅರ್ಥ** :– **ಅನ್ಯಃ** = ಬೇರೆಯಾದುದು (ವಿಷ್ಣುವಿನ ಹಾಗೂ ಅವನ ಭಕ್ತರ ಪ್ರೀತಿಯನ್ನು ಉಂಟುಮಾಡದ್ದು) **ಅಧರ್ಮಃ** = ಅಧರ್ಮವು. **ಇಯಂ** = ಇದು **ನಿಷ್ಠಾ** = ನಿರ್ಣಯವು. **ಪ್ರಲಾಪಃ** = ಗೋಳಾಟವು **ಕಿಂ** = ಏನನ್ನು **ಕರಿಷ್ಯತಿ** = ಮಾಡೀತು? **ಏವಂ ಆದಿ** = ಇವೇ ಮೊದಲಾಗಿ **ಪಾರ್ಥಂ** = ಅರ್ಜುನನನ್ನು ಕುರಿತು **ಅನುಶಾಸ್ಯ** = ಬೋಧಿಸಿ **ಅಜಃ** = ಹುಟ್ಟಿಲ್ಲದ ಶ್ರೀಕೃಷ್ಣನು **ಪಾರ್ಥೈಃ** = ಪಾಂಡವರಿಂದ **ಸತ್ಕೃತಃ** = ಸತ್ಕರಿಸಲ್ಪಟ್ಟವನು **(ಅಭೂತ್)** = ಆದನು.

**ತಾತ್ಪರ್ಯ** :- ವಿಷ್ಣುವು ಈ ಲಕ್ಷಣಗಳಿಗೆ ಅನುಗುಣವಾಗಿ ಅನುಗ್ರಹಿಸುವುದರಿಂದ ಜೀವರನ್ನು ತಾರತಮ್ಯಕ್ರಮದಲ್ಲಿಯೇ ತಿಳಿಯಬೇಕು. ವಿಷ್ಣುವಿಗೂ ಅವನ ಭಕ್ತರಿಗೂ ಪ್ರಿಯವುಂಟುಮಾಡುವುದೇ ಧರ್ಮ ವೆನ್ನಿಸುವದು. ಬೇರೆ ಎಲ್ಲವೂ ಅಧರ್ಮ, ಇದೇ ಶಾಸ್ತ್ರಗಳ ನಿರ್ಣಯ. ವ್ಯರ್ಥವಾಗಿ ಶೋಕಿಸಿದರೆ ಏನು ಫಲ - ಇದೇ ಮೊದಲಾದುದನ್ನು ಅರ್ಜುನನಿಗೆ ಉಪದೇಶಿಸಿ ಕೃಷ್ಣ ಪಾಂಡವರಿಂದ ಬಹಳ ಸತ್ಕೃತನಾದ.

## ಸುಭದ್ರೆಯೊಂದಿಗೆ ದ್ವಾರಕೆಗೆ ಕೃಷ್ಣನ ಪ್ರಯಾಣ

**ಕಥಂಚಿತ್ ತಾನವಸ್ಥಾಪ್ಯ ಸುದೂರಾನುಗತಾನ್ ಪ್ರಭುಃ ।**
**ಸುಭದ್ರಾಸಹಿತಃ ಪ್ರಾಯಾದ್ಯಾನೇನ ದ್ವಾರಕಾಂ ಪುರೀಮ್ ॥ ೫೭ ॥**

ಕಥಂಚಿತ್ ತಾನ್ ಅವಸ್ಥಾಪ್ಯ ಸುದೂರಾನುಗತಾನ್ ಪ್ರಭುಃ । ಸುಭದ್ರಾಸಹಿತಃ ಪ್ರಾಯಾತ್ ಯಾನೇನ ದ್ವಾರಕಾಂ ಪುರೀಮ್ ॥ ೫೭ ॥

**ಅರ್ಥ** :– **ಪ್ರಭುಃ** = ಸಮರ್ಥನಾದ ಶ್ರೀಕೃಷ್ಣನು **ಸುದೂರಾನುಗತಾನ್** = ಬಹುದೂರದಿಂದ ಅನುಸರಿಸಿ ಬಂದ **ತಾನ್** = ಅವರನ್ನು **ಕಥಂಚಿತ್** = ಹೇಗೋ **ಅವಸ್ಥಾಪ್ಯ** = ತಡೆದು ನಿಲ್ಲಿಸಿ **ಸುಭದ್ರಾಸಹಿತಃ (ಸನ್)** = ಸುಭದ್ರೆಯಿಂದ ಕೂಡಿದವನಾಗಿ **ಯಾನೇನ** = ವಾಹನದಿಂದ **ದ್ವಾರಕಾಂ ಪುರೀಂ** = ದ್ವಾರಕಾಪುರಿಯನ್ನು ಕುರಿತು **ಪ್ರಾಯಾತ್** = ತೆರಳಿದನು.

**ತಾತ್ಪರ್ಯ** :- ತನ್ನನ್ನು ಬಹುದೂರದವರೆಗೆ ಹಿಂಬಾಲಿಸಿ ಬಂದ ಪಾಂಡವರನ್ನು ಕೃಷ್ಣ ಹೇಗೋ ಸಮಾಧಾನಪಡಿಸಿ ಸುಭದ್ರೆಯ ಸಮೇತನಾಗಿ ರಥದಿಂದ ದ್ವಾರಕಾಪುರಿಗೆ ತೆರಳಿದ.

**ಸಮಾಧಿವಿರತೋದಂಕಪರಿಪೃಷ್ಟಃ ಪಥಿ ಪ್ರಭುಃ ।**
**ಹತಂ ದುರ್ಯೋಧನಂ ಪ್ರಾಹ ಸಭ್ರಾತೃಸುತಸೈನಿಕಮ್ ॥ ೫೮ ॥**

ಸಮಾಧಿವಿರತೋದಂಕಪರಿಪೃಷ್ಟಃ ಪಥಿ ಪ್ರಭುಃ । ಹತಂ ದುರ್ಯೋಧನಂ ಪ್ರಾಹ ಸಭ್ರಾತೃಸುತಸೈನಿಕಮ್ ॥ ೫೮ ॥

**ಅರ್ಥ** :– **ಪಥಿ** = ದಾರಿಯಲ್ಲಿ **ಸಮಾಧಿವಿರತೋದಂಕಪರಿಪೃಷ್ಟಃ** = ಸಮಾಧಿಯಿಂದ ಎಚ್ಚೆತ್ತ ಉದಂಕನಿಂದ ಕೇಳಲ್ಪಟ್ಟ **ಪ್ರಭುಃ** = ಸಮರ್ಥನಾದ ಕೃಷ್ಣನು **ದುರ್ಯೋಧನಂ** = ದುರ್ಯೋಧನನನ್ನು **ಸಭ್ರಾತೃಸುತಸೈನಿಕಂ** = ಸೋದರರು ಮಕ್ಕಳು ಸೈನಿಕರ ಸಮೇತನಾಗಿ **ಹತಂ** = ಹತನಾದವನನ್ನಾಗಿ **ಪ್ರಾಹ** = ಹೇಳಿದನು.

**ತಾತ್ಪರ್ಯ** :- ದಾರಿಯಲ್ಲಿ ಸಮಾಧಿಯಿಂದ ಎಚ್ಚೆತ್ತಿದ್ದ ಉದಂಕಮುನಿ ಕೇಳಿದಾಗ ಪ್ರಭುವಾದ ಕೃಷ್ಣನು ದುರ್ಯೋಧನ ತನ್ನ ಸೋದರರು, ಮಕ್ಕಳು, ಸೈನಿಕರೊಂದಿಗೆ ಹತನಾದ ಎಂದು ತಿಳಿಸಿದ.

### ದುರ್ಯೋಧನನ ವಧೆಯಿಂದಾಗಿ ಕೆರಳಿದ ಉದಂಕ

**ತಂ ಶಿಷ್ಯವಧಕೋಪೇನ ಶಪ್ತುಮಾತ್ಮಾನಮುದ್ಯತಮ್ ।**
**ಕೇಶವೋऽಶಮಯದ್ವಾಕ್ಯೈರ್ವಿಶ್ವರೂಪಂ ಪ್ರದರ್ಶ್ಯ ಚ ॥ ೫೯ ॥**

ತಂ ಶಿಷ್ಯವಧಕೋಪೇನ ಶಪ್ತುಂ ಆತ್ಮಾನಂ ಉದ್ಯತಮ್ । ಕೇಶವಃ ಅಶಮಯತ್ ವಾಕ್ಯೈಃ ವಿಶ್ವರೂಪಂ ಪ್ರದರ್ಶ್ಯ ಚ ॥ ೫೯ ॥

**ಅರ್ಥ** :- **ಶಿಷ್ಯವಧಕೋಪೇನ** = ಶಿಷ್ಯನ ವಧೆಯ ಕೋಪದಿಂದ **ಆತ್ಮಾನಂ** = ತನ್ನನ್ನು **ಶಪ್ತುಂ** = ಶಪಿಸಲು **ಉದ್ಯತಂ** = ಉದ್ಯುಕ್ತನಾದ **ತಂ** = ಅವನನ್ನು (ಉದಂಕನನ್ನು) **ಕೇಶವಃ** = ಕೇಶವನು **ವಾಕ್ಯೈಃ** = ಮಾತುಗಳಿಂದ **ಚ** = ಮತ್ತು **ವಿಶ್ವರೂಪಂ** = ವಿಶ್ವರೂಪವನ್ನು **ಪ್ರದರ್ಶ್ಯ** = ಚೆನ್ನಾಗಿ ತೋರಿಸಿ **ಅಶಮಯತ್** = ಶಾಂತಗೊಳಿಸಿದ.

**ತಾತ್ಪರ್ಯ** :- ಶಿಷ್ಯನಾದ ದುರ್ಯೋಧನನ ವಧೆಯಿಂದಾಗಿ ಕೋಪಗೊಂಡ ಉದಂಕ ತನ್ನನ್ನು ಶಪಿಸಲು ಉದ್ಯುಕ್ತನಾದಾಗ ಕೃಷ್ಣ ತನ್ನ ವಿಶ್ವರೂಪವನ್ನು ತೋರಿ, ಹಿತವಚನಗಳಿಂದ ಸಾಂತ್ವನಪಡಿಸಿದ.

### ಉದಂಕನಿಗೆ ವಿಶ್ವರೂಪದರ್ಶನ

**ಮದ್ಭಕ್ತೋ ನಿತರಾಮೇಷ ಮದಾರಾಧನತತ್ಪರಃ ।**
**ಮಾಮವಜ್ಞಾಯ ನಿರಯಂ ಮಾऽನುತ್ತಾಂನಂ ವ್ರಜೇದಿತಿ ॥ ೬೦ ॥**

ಮದ್ಭಕ್ತಃ ನಿತರಾಂ ಏಷಃ ಮದಾರಾಧನತತ್ಪರಃ । ಮಾಂ ಅವಜ್ಞಾಯ ನಿರಯಂ ಮಾ ಅನುತ್ತಾಂನಂ ವ್ರಜೇತ್ ಇತಿ ॥ ೬೦ ॥

**ಕೃಪಯಾ ವಾಸುದೇವೇನ ಬೋಧಿತಃ ಶಾಂತಮಾನಸಃ ।**
**ಪಶ್ಚಾತ್ತಾಪಾಭಿತಪ್ತಾತ್ಮಾ ತಮೇವ ಶರಣಂ ಯಯೌ ॥ ೬೧ ॥**

ಕೃಪಯಾ ವಾಸುದೇವೇನ ಬೋಧಿತಃ ಶಾಂತಮಾನಸಃ । ಪಶ್ಚಾತ್ತಾಪಾಭಿತಪ್ತಾತ್ಮಾ ತಂ ಏವ ಶರಣಂ ಯಯೌ ॥ ೬೧ ॥

**ಅರ್ಥ** :- **ಏಷಃ** = ಇವನು (ಈ ಉದಂಕನು) **ನಿತರಾಂ** = ಬಹಳವಾಗಿ **ಮದ್ಭಕ್ತಃ** = ನನ್ನ ಭಕ್ತನು, **ಮದಾರಾಧನತತ್ಪರಃ** = ನನ್ನ

ಆರಾಧನೆಯಲ್ಲೇ ಆಸಕ್ತನಾದವನು. (**ಅತಃ ಏವ**) = ಆದ್ದರಿಂದಲೇ **ಮಾಂ** = ನನ್ನನ್ನು **ಅವಜ್ಞಾಯ** = ಅವಮಾನಿಸಿ **ಅನುತ್ಥಾನಂ** = ಮೇಲೇ ಏಳಲಾಗದ **ನಿರಯಂ** = ನರಕವನ್ನು **ಮಾ ವ್ರಜೇತ** = ಹೊಂದದಿರಲಿ **ಇತಿ** = ಎಂದು **ಕೃಪಯಾ** = ಕೃಪೆಯಿಂದ **ವಾಸುದೇವೇನ** = ವಾಸುದೇವನಿಂದ **ಬೋಧಿತಃ** = ಉಪದೇಶಿಸಲ್ಪಟ್ಟ **ಶಾಂತಮಾನಸಃ** = ಶಾಂತಮನಸ್ಕನಾದ ಉದಂಕನು **ಪಶ್ಚಾತ್ತಾಪಾಭಿತಪ್ತಾತ್ಮಾ** = ಪಶ್ಚಾತ್ತಾಪದಿಂದ ಪರಿತಪಿಸಿದ ಮನಸ್ಸುಳ್ಳವನಾಗಿ **ತಂ ಏವ** = ಅವನನ್ನೇ (ಆ ಕೃಷ್ಣನನ್ನೇ) **ಶರಣಂ ಯಯೌ** = ಶರಣುಹೊಕ್ಕನು.

**ತಾತ್ಪರ್ಯ** :- ನನ್ನಲ್ಲಿ ಬಹಳ ಭಕ್ತನಾದ ಈತ ನನ್ನ ಆರಾಧನೆಯಲ್ಲೇ ತೊಡಗಿದವನು. ನನ್ನನ್ನು ಅವಮಾನಿಸಿ ಶಾಶ್ವತ ನರಕವನ್ನು ಹೊಂದದಿರಲಿ ಎಂದು ಕರುಣೆಯಿಂದ ಕೃಷ್ಣ ಅವನಿಗೆ ಉಪದೇಶಿಸಿದ. ಉದಂಕಮುನಿ ಶಾಂತಮನಸ್ಕನಾದ. ಪಶ್ಚಾತ್ತಾಪದಿಂದ ಪರಿತಪಿಸಿದ ಮನಸ್ಸಿನಿಂದ ಅವನು ಕೃಷ್ಣನನ್ನೇ ಶರಣುಹೊಕ್ಕ.

**ತಸ್ಮೈ ದೇವೋಽಭಯಂ ದತ್ವಾ ಪ್ರೇಷಯಿಷ್ಯೇಽಮೃತಂ ತವ ।**
**ದಾತುಂ ಶಕ್ರಮಿತಿ ಪ್ರೋಕ್ತ್ವಾ ಯಯೌ ದ್ವಾರಾವತೀಂ ಪ್ರಭುಃ ॥ ೬೨ ॥**

**ತಸ್ಮೈ ದೇವಃ ಅಭಯಂ ದತ್ವಾ ಪ್ರೇಷಯಿಷ್ಯೇ ಅಮೃತಂ ತವ । ದಾತುಂ ಶಕ್ರಂ ಇತಿ ಪ್ರೋಕ್ತ್ವಾ ಯಯೌ ದ್ವಾರಾವತೀಂ ಪ್ರಭುಃ ॥ ೬೨ ॥**

**ಅರ್ಥ** :- **ದೇವಃ** = ದೇವನಾದ **ಪ್ರಭುಃ** = ಸಮರ್ಥನಾದ ಶ್ರೀಕೃಷ್ಣನು **ತಸ್ಮೈ** = ಅವನಿಗೆ **ಅಭಯಂ** = ಅಭಯವನ್ನು **ದತ್ವಾ** = ನೀಡಿ, **ತವ** = ನಿನಗೆ **ಅಮೃತಂ** = ಅಮೃತವನ್ನು **ದಾತುಂ** = ನೀಡಲೆಂದು **ಶಕ್ರಂ** = ಇಂದ್ರನನ್ನು **ಪ್ರೇಷಯಿಷ್ಯೇ** = ಕಳುಹಿಸುವೆ **ಇತಿ** = ಎಂದು **ಪ್ರೋಕ್ತ್ವಾ** = ಹೇಳಿ **ದ್ವಾರಾವತೀಂ** = ದ್ವಾರಕೆಯನ್ನು ಕುರಿತು **ಯಯೌ** = ಹೊರಟನು.

**ತಾತ್ಪರ್ಯ** :- ದೇವನಾದ ಪ್ರಭು ಕೃಷ್ಣ ಅವನಿಗೆ ಅಭಯ ನೀಡಿ - ''ನಿನಗೆ ಅಮೃತವನ್ನು ಕೊಡಲು ಇಂದ್ರನನ್ನು ಕಳುಹಿಸುವೆ'' ಎಂದು ನುಡಿದು ದ್ವಾರಕೆಗೆ ತೆರಳಿದ.

ಅಮೃತ ಕೊಡದೆ ವಂಚಿಸಿದ ಇಂದ್ರ

**ಅಥಾದಿದೇಶ ದೇವೇಶಂ ವಾಸುದೇವೋಽಮೃತಂ ಮುನೇಃ ।**
**ದೇಹೀತಿ ವಂಚಯಿಷ್ಯಾಮೀತ್ಯಾಹ ಸೋಽಪಿ ಕ್ಷಮಾಪಯನ್ ॥ ೬೩ ॥**

**ಅಥ ಆದಿದೇಶ ದೇವೇಶಂ ವಾಸುದೇವಃ ಅಮೃತಂ ಮುನೇಃ । ದೇಹಿ ಇತಿ ವಂಚಯಿಷ್ಯಾಮಿ ಇತಿ ಆಹ ಸಃ ಅಪಿ ಕ್ಷಮಾಪಯನ್ ॥ ೬೩ ॥**

**ಅರ್ಥ** :- **ಅಥ** = ಅನಂತರ **ವಾಸುದೇವಃ** = ವಾಸುದೇವನು **ಮುನೇಃ** = ಮುನಿಗೆ (ಉದಂಕಮುನಿಗೆ) **ಅಮೃತಂ** = ಅಮೃತವನ್ನು **ದೇಹಿ** = ಕೊಡು **ಇತಿ** = ಎಂದು **ದೇವೇಶಂ** = ದೇವರಾಜನಾದ ಇಂದ್ರನನ್ನು **ಆದಿದೇಶ** = ಆದೇಶಿಸಿದ. **ಸಃ ಅಪಿ** = ಅವನಾದರೋ **(ಕೃಷ್ಣಂ)** = ಕೃಷ್ಣನನ್ನು **ಕ್ಷಮಾಪಯನ್** = ಕ್ಷಮೆಯಾಚಿಸಿ **(ಉದಂಕಂ)** = ಉದಂಕನನ್ನು **ವಂಚಯಿಷಾಮಿ** = ವಂಚಿಸುವೆನು **ಇತಿ** = ಎಂದು **ಆಹ** = ಹೇಳಿದನು.

**ತಾತ್ಪರ್ಯ** :- ಬಳಿಕ ಕೃಷ್ಣ ''ಮುನಿಗೆ ಅಮೃತವನ್ನು ನೀಡು'' ಎಂದು ದೇವೇಂದ್ರನಿಗೆ ಅಪ್ಪಣೆ ಮಾಡಿದ. ಆಗ ಇಂದ್ರ ಕೃಷ್ಣನನ್ನು ಕ್ಷಮೆಯಾಚಿಸಿ ''ಮುನಿಯನ್ನು ವಂಚಿಸುವೆನು'' ಎಂದು ಕೇಳಿಕೊಂಡ.

**ಓಮಿತ್ಯುಕ್ತೋ ಭಗವತಾ ತತ್ಸ್ನೇಹಾತ್ ಸ ಶಚೀಪತಿಃ ।**
**ಸುಜುಗುಪ್ಸಿತಮಾತಂಗವೇಷೋ ಭೂತ್ವಾ ಮುನಿಂ ಯಯೌ ॥ ೬೪ ॥**

**ಓಂ ಇತಿ ಉಕ್ತಃ ಭಗವತಾ ತತ್ಸ್ನೇಹಾತ್ ಸಃ ಶಚೀಪತಿಃ । ಸುಜುಗುಪ್ಸಿತಮಾತಂಗವೇಷಃ ಭೂತ್ವಾ ಮುನಿಂ ಯಯೌ ॥ ೬೪ ॥**

**ಅರ್ಥ** :- **ತತ್ಸ್ನೇಹಾತ್** = ಅವನ (ಇಂದ್ರನ) ಮೇಲಿನ ಪ್ರೀತಿಯಿಂದ **ಭಗವತಾ** = ಭಗವಂತನಿಂದ (ಶ್ರೀಕೃಷ್ಣನಿಂದ) **ಓಂ** = 'ಆಗಲಿ' **ಇತಿ** = ಎಂದು **ಉಕ್ತಃ** = ಹೇಳಲ್ಪಟ್ಟ **ಸಃ** = ಆ **ಶಚೀಪತಿಃ** = ಶಚಿಯ ಪತಿಯು (ಇಂದ್ರನು) **ಸುಜುಗುಪ್ಸಿತಮಾತಂಗವೇಷಃ** = ಅತ್ಯಂತ ನಿಂದಿತವಾದ ಚಂಡಾಲವೇಷದವನು **ಭೂತ್ವಾ** = ಆಗಿ **ಮುನಿಂ** = ಮುನಿಯನ್ನು ಕುರಿತು **ಯಯೌ** = ಹೊರಟನು.

ತಾತ್ಪರ್ಯ :- ಕೃಷ್ಣ ಇಂದ್ರನ ಮೇಲಿನ ಪ್ರೀತಿಯಿಂದ 'ಆಗಲಿ' ಎಂದ. ಆಗ ಇಂದ್ರ ಅತ್ಯಂತ ಅಸಹ್ಯಕರವಾದ ಚಂಡಾಲವೇಷವನ್ನು ಧರಿಸಿ ಉದಂಕ ಮುನಿಯ ಬಳಿಗೆ ತೆರಳಿದ.

**ಮೂತ್ರಸ್ರೋತಸಿ ಸೌಧಂ ಚ ನಿಧಾಯ ಕಲಶಂ ವಶೀ ।**
**ಮೂತ್ರಯನ್ನಿವ ತಂ ಪ್ರಾಹ ವಾಸುದೇವಃ ಸುಧಾಮಿಮಾಮ್ ।**
**ಮಹರ್ಷೇ ಪ್ರೇಷಯಾಮಾಸ ತವಾರ್ಥೇ ತತ್ ಪಿಬೇತಿ ಚ ॥ ೬೫ ॥**

ಮೂತ್ರಸ್ರೋತಸಿ ಸೌಧಂ ಚ ನಿಧಾಯ ಕಲಶಂ ವಶೀ । ಮೂತ್ರಯನ್ ಇವ ತಂ ಪ್ರಾಹ ವಾಸುದೇವಃ ಸುಧಾಂ ಇಮಾಮ್ । ಮಹರ್ಷೇ ಪ್ರೇಷಯಾಮಾಸ ತವ ಅರ್ಥೇ ತತ್ ಪಿಬ ಇತಿ ಚ ॥ ೬೫ ॥

**ಅರ್ಥ** :- **ವಶೀ** = ಜಿತೇಂದ್ರಿಯನಾದ ಇಂದ್ರನು **ಮೂತ್ರಸ್ರೋತಸಿ** = ಮೂತ್ರದ್ವಾರದಲ್ಲಿ **ಸೌಧಂ** = ಅಮೃತಸಂಬಂಧಿಯಾದ **ಕಲಶಂ ಚ** = ಕಲಶವನ್ನೂ **ನಿಧಾಯ** = ಇರಿಸಿಕೊಂಡು **ಮೂತ್ರಯನ್ ಇವ** = ಮೂತ್ರ ಮಾಡುವವನಂತೆ **ತಂ** = ಅವನನ್ನು ಕುರಿತು **ಮಹರ್ಷೇ** = ಮಹರ್ಷಿಯೇ **ವಾಸುದೇವಃ** = ಶ್ರೀಕೃಷ್ಣನು **ತವ ಅರ್ಥೇ** = ನಿನಗೋಸ್ಕರ **ಇಮಾಂ** = ಈ **ಸುಧಾಂ** = ಅಮೃತವನ್ನು **ಪ್ರೇಷಯಾಮಾಸ** = ಕಳುಹಿಸಿರುವನು **ತತ್** = ಅದನ್ನು (ಅಮೃತವನ್ನು) **ಪಿಬ** = ಕುಡಿ **ಇತಿ** = ಎಂದು **ಪ್ರಾಹ ಚ** = ಹೇಳಿದನು ಕೂಡ.

ತಾತ್ಪರ್ಯ :- ಸಂಯಮಿಯಾದ ಇಂದ್ರ ಮೂತ್ರದ್ವಾರದಲ್ಲಿ ಅಮೃತ ಕಲಶವನ್ನು ಇರಿಸಿಕೊಂಡು ಮೂತ್ರ ಮಾಡುವವನಂತೆ ನಟಿಸುತ್ತಾ ಆ ಮುನಿಗೆ ತಿಳಿಸಿದ - ಮಹರ್ಷಿಯೇ ! ಕೃಷ್ಣ ಈ ಅಮೃತವನ್ನು ನಿನಗಾಗಿ ಕಳಿಸಿಕೊಟ್ಟಿರುವನು, ಇದನ್ನು ಕುಡಿ.

**ಸ ಮೂತ್ರಮಿತಿ ಮತ್ವಾ ತಂ ಯಾಹೀತ್ಯೇವಾಹ ಭರ್ತ್ಸಯನ್ ।**
**ವಂಚಯಿತ್ವೈವ ತಂ ಶಕ್ರೋ ಯಯೌ ಪ್ರೀತಃ ಸ್ವಮಾಲಯಮ್ ॥ ೬೬ ॥**

ಸಃ ಮೂತ್ರಂ ಇತಿ ಮತ್ವಾ ತಂ ಯಾಹಿ ಇತಿ ಏವ ಆಹ ಭರ್ತ್ಸಯನ್ । ವಂಚಯಿತ್ವಾ ಏವ ತಂ ಶಕ್ರಃ ಯಯೌ ಪ್ರೀತಃ ಸ್ವಂ ಆಲಯಮ್ ॥ ೬೬ ॥

### ಅಮೃತ ಕೊಡದೆ ವಂಚಿಸಿದ ಇಂದ್ರ

**ಅಥಾದಿದೇಶ ದೇವೇಶಂ ವಾಸುದೇವೋಽಮೃತಂ ಮುನೇಃ ।**
**ದೇಹೀತಿ ವಂಚಯಿಷ್ಯಾಮೀತ್ಯಾಹ ಸೋಽಪಿ ಕ್ಷಮಾಪಯನ್ ॥ ೬೩ ॥**

**ಅಥ ಆದಿದೇಶ ದೇವೇಶಂ ವಾಸುದೇವಃ ಅಮೃತಂ ಮುನೇಃ । ದೇಹಿ ಇತಿ ವಂಚಯಿಷ್ಯಾಮಿ ಇತಿ ಆಹ ಸಃ ಅಪಿ ಕ್ಷಮಾಪಯನ್ ॥ ೬೩ ॥**

**ಅರ್ಥ :-** **ಅಥ** = ಅನಂತರ **ವಾಸುದೇವಃ** = ವಾಸುದೇವನು **ಮುನೇಃ** = ಮುನಿಗೆ (ಉದಂಕಮುನಿಗೆ) **ಅಮೃತಂ** = ಅಮೃತವನ್ನು **ದೇಹಿ** = ಕೊಡು **ಇತಿ** = ಎಂದು **ದೇವೇಶಂ** = ದೇವರಾಜನಾದ ಇಂದ್ರನನ್ನು **ಆದಿದೇಶ** = ಆದೇಶಿಸಿದ. **ಸಃ ಅಪಿ** = ಅವನಾದರೋ **(ಕೃಷ್ಣಂ)** = ಕೃಷ್ಣನನ್ನು **ಕ್ಷಮಾಪಯನ್** = ಕ್ಷಮೆಯಾಚಿಸಿ **(ಉದಂಕಂ)** = ಉದಂಕನನ್ನು **ವಂಚಯಿಷಾಮಿ** = ವಂಚಿಸುವೆನು **ಇತಿ** = ಎಂದು **ಆಹ** = ಹೇಳಿದನು.

**ತಾತ್ಪರ್ಯ :-** ಬಳಿಕ ಕೃಷ್ಣ ''ಮುನಿಗೆ ಅಮೃತವನ್ನು ನೀಡು'' ಎಂದು ದೇವೇಂದ್ರನಿಗೆ ಅಪ್ಪಣೆ ಮಾಡಿದ. ಆಗ ಇಂದ್ರ ಕೃಷ್ಣನನ್ನು ಕ್ಷಮೆಯಾಚಿಸಿ ''ಮುನಿಯನ್ನು ವಂಚಿಸುವೆನು'' ಎಂದು ಕೇಳಿಕೊಂಡ.

**ಓಮಿತ್ಯುಕ್ತೋ ಭಗವತಾ ತತ್ಸ್ನೇಹಾತ್ ಸ ಶಚೀಪತಿಃ ।**
**ಸುಜುಗುಪ್ಸಿತಮಾತಂಗವೇಷೋ ಭೂತ್ವಾ ಮುನಿಂ ಯಯೌ ॥ ೬೪ ॥**

**ಓಂ ಇತಿ ಉಕ್ತಃ ಭಗವತಾ ತತ್ಸ್ನೇಹಾತ್ ಸಃ ಶಚೀಪತಿಃ । ಸುಜುಗುಪ್ಸಿತಮಾತಂಗವೇಷಃ ಭೂತ್ವಾ ಮುನಿಂ ಯಯೌ ॥ ೬೪ ॥**

**ಅರ್ಥ :-** **ತತ್ಸ್ನೇಹಾತ್** = ಅವನ (ಇಂದ್ರನ) ಮೇಲಿನ ಪ್ರೀತಿಯಿಂದ **ಭಗವತಾ** = ಭಗವಂತನಿಂದ (ಶ್ರೀಕೃಷ್ಣನಿಂದ) **ಓಂ** = 'ಆಗಲಿ' **ಇತಿ** = ಎಂದು **ಉಕ್ತಃ** = ಹೇಳಲ್ಪಟ್ಟ **ಸಃ** = ಆ **ಶಚೀಪತಿಃ** = ಶಚಿಯ ಪತಿಯು (ಇಂದ್ರನು) **ಸುಜುಗುಪ್ಸಿತಮಾತಂಗವೇಷಃ** = ಅತ್ಯಂತ ನಿಂದಿತವಾದ ಚಂಡಾಲವೇಷದವನು **ಭೂತ್ವಾ** = ಆಗಿ **ಮುನಿಂ** = ಮುನಿಯನ್ನು ಕುರಿತು **ಯಯೌ** = ಹೊರಟನು.

**ತಾತ್ಪರ್ಯ** :- ಕೃಷ್ಣ ಇಂದ್ರನ ಮೇಲಿನ ಪ್ರೀತಿಯಿಂದ 'ಆಗಲಿ' ಎಂದ. ಆಗ ಇಂದ್ರ ಅತ್ಯಂತ ಅಸಹ್ಯಕರವಾದ ಚಂಡಾಲವೇಷವನ್ನು ಧರಿಸಿ ಉದಂಕ ಮುನಿಯ ಬಳಿಗೆ ತೆರಳಿದ.

**ಮೂತ್ರಸ್ರೋತಸಿ ಸೌಧಂ ಚ ನಿಧಾಯ ಕಲಶಂ ವಶೀ ।**
**ಮೂತ್ರಯನ್ನಿವ ತಂ ಪ್ರಾಹ ವಾಸುದೇವಃ ಸುಧಾಮಿಮಾಮ್ ।**
**ಮಹರ್ಷೇ ಪ್ರೇಷಯಾಮಾಸ ತವಾರ್ಥೇ ತತ್ ಪಿಬೇತಿ ಚ ॥ ೬೫ ॥**

ಮೂತ್ರಸ್ರೋತಸಿ ಸೌಧಂ ಚ ನಿಧಾಯ ಕಲಶಂ ವಶೀ । ಮೂತ್ರಯನ್ ಇವ ತಂ ಪ್ರಾಹ ವಾಸುದೇವಃ ಸುಧಾಂ ಇಮಾಮ್ । ಮಹರ್ಷೇ ಪ್ರೇಷಯಾಮಾಸ ತವ ಅರ್ಥೇ ತತ್ ಪಿಬ ಇತಿ ಚ ॥ ೬೫ ॥

**ಅರ್ಥ** :- **ವಶೀ** = ಜಿತೇಂದ್ರಿಯನಾದ ಇಂದ್ರನು **ಮೂತ್ರಸ್ರೋತಸಿ** = ಮೂತ್ರದ್ವಾರದಲ್ಲಿ **ಸೌಧಂ** = ಅಮೃತಸಂಬಂಧಿಯಾದ **ಕಲಶಂ ಚ** = ಕಲಶವನ್ನೂ **ನಿಧಾಯ** = ಇರಿಸಿಕೊಂಡು **ಮೂತ್ರಯನ್ ಇವ** = ಮೂತ್ರ ಮಾಡುವವನಂತೆ **ತಂ** = ಅವನನ್ನು ಕುರಿತು **ಮಹರ್ಷೇ** = ಮಹರ್ಷಿಯೇ **ವಾಸುದೇವಃ** = ಶ್ರೀಕೃಷ್ಣನು **ತವ ಅರ್ಥೇ** = ನಿನಗೋಸ್ಕರ **ಇಮಾಂ** = ಈ **ಸುಧಾಂ** = ಅಮೃತವನ್ನು **ಪ್ರೇಷಯಾಮಾಸ** = ಕಳುಹಿಸಿರುವನು **ತತ್** = ಅದನ್ನು (ಅಮೃತವನ್ನು) **ಪಿಬ** = ಕುಡಿ **ಇತಿ** = ಎಂದು **ಪ್ರಾಹ ಚ** = ಹೇಳಿದನು ಕೂಡ.

**ತಾತ್ಪರ್ಯ** :- ಸಂಯಮಿಯಾದ ಇಂದ್ರ ಮೂತ್ರದ್ವಾರದಲ್ಲಿ ಅಮೃತ ಕಲಶವನ್ನು ಇರಿಸಿಕೊಂಡು ಮೂತ್ರ ಮಾಡುವವನಂತೆ ನಟಿಸುತ್ತಾ ಆ ಮುನಿಗೆ ತಿಳಿಸಿದ - ಮಹರ್ಷಿಯೇ ! ಕೃಷ್ಣ ಈ ಅಮೃತವನ್ನು ನಿನಗಾಗಿ ಕಳಿಸಿಕೊಟ್ಟಿರುವನು, ಇದನ್ನು ಕುಡಿ.

**ಸ ಮೂತ್ರಮಿತಿ ಮತ್ವಾ ತಂ ಯಾಹೀತ್ಯೇವಾಹ ಭರ್ತ್ಸಯನ್ ।**
**ವಂಚಯಿತ್ವೈವ ತಂ ಶಕ್ರೋ ಯಯೌ ಪ್ರೀತಃ ಸ್ವಮಾಲಯಮ್ ॥ ೬೬ ॥**

ಸಃ ಮೂತ್ರಂ ಇತಿ ಮತ್ವಾ ತಂ ಯಾಹಿ ಇತಿ ಏವ ಆಹ ಭರ್ತ್ಸಯನ್ । ವಂಚಯಿತ್ವಾ ಏವ ತಂ ಶಕ್ರಃ ಯಯೌ ಪ್ರೀತಃ ಸ್ವಂ ಆಲಯಮ್ ॥ ೬೬ ॥

**ಅರ್ಥ** :- **ಸಃ** = ಅವನು (ಉದಂಕನು) (**ತಂ**) = ಅದನ್ನು **ಮೂತ್ರಂ** = ಮೂತ್ರವು **ಇತಿ** = ಎಂದು **ಮತ್ವಾ** = ತಿಳಿದು **ತಂ** = ಅವನನ್ನು (ಇಂದ್ರನನ್ನು) ಕುರಿತು **ಭರ್ತ್ಸಯನ್** = ಗದರಿಸುತ್ತಾ **ಯಾಹಿ** = 'ತೆರಳು' **ಇತಿ ಏವ** = ಎಂದೇ **ಆಹ** = ಹೇಳಿದ. **ಪ್ರೀತಃ** = ಸಂತೋಷಗೊಂಡ **ಶಕ್ರಃ** = ಇಂದ್ರನು **ತಂ** = ಅವನನ್ನು (ಉದಂಕನನ್ನು) **ವಂಚಯಿತ್ವಾ ಏವ** = ವಂಚಿಸಿಯೇ **ಸ್ವಂ** = ತನ್ನ **ಆಲಯಂ** = ಮನೆಯನ್ನು ಕುರಿತು **ಯಯೌ** = ತೆರಳಿದನು.

**ತಾತ್ಪರ್ಯ** :- ಉದಂಕ ಅದನ್ನು ಮೂತ್ರವೆಂದೇ ಬಗೆದು ''ತೊಲಗು'' ಎಂದೇ ಬೈಯ್ದು ಕಳಿಸಿದ. ಇಂದ್ರ ಹೀಗೆ ಅವನನ್ನು ವಂಚಿಸಿ ಸಂತೃಪ್ತನಾಗಿ ತನ್ನ ಲೋಕಕ್ಕೆ ತೆರಳಿದ.

### ಹಾಗೆ ಇಂದ್ರ ವಂಚಿಸಲು ಕಾರಣ

**ಅಸಾಧಾರಣಮನ್ನಂ ಹಿ ದೇವಾನಾಮಮೃತಂ ಸದಾ ।**
**ಅನ್ಯಪೀತಿಸ್ತತಸ್ತಸ್ಯ ದೇವಾನಾಂ ಪರಮಾಪ್ರಿಯಾ ॥ ೬೭ ॥**

**ಅಸಾಧಾರಣಂ ಅನ್ನಂ ಹಿ ದೇವಾನಾಂ ಅಮೃತಂ ಸದಾ । ಅನ್ಯಪೀತಿಃ ತತಃ ತಸ್ಯ ದೇವಾನಾಂ ಪರಮಾಪ್ರಿಯಾ (ಪರಮಾ ಅಪ್ರಿಯಾ) ॥ ೬೭ ॥**

**ಅರ್ಥ** :- **ಸದಾ** = ಯಾವಾಗಲೂ **ಅಮೃತಂ** = ಅಮೃತವು **ದೇವಾನಾಂ ಹಿ** = ದೇವತೆಗಳದ್ದೇ **ಅಸಾಧಾರಣಂ** = ಮುಖ್ಯವಾದ **ಅನ್ನಂ** = ಅನ್ನವು. **ತತಃ** = ಆದ್ದರಿಂದ **ತಸ್ಯ** = ಅದರ (ಅಮೃತದ) **ಅನ್ಯಪೀತಿಃ** = ಬೇರೊಬ್ಬರ ಕುಡಿಯುವಿಕೆಯು **ದೇವಾನಾಂ** = ದೇವತೆಗಳಿಗೆ **ಪರಮಾಪ್ರಿಯಾ** = ಬಹಳ ಅಪ್ರಿಯವಾದುದು.

**ತಾತ್ಪರ್ಯ** :- ಅಮೃತ ದೇವತೆಗಳಿಗೆ ಮೀಸಲಾದ ಅಸಾಧಾರಣವಾದ ಅನ್ನ. ಇತರರು ಅದನ್ನು ಕುಡಿಯುವುದು ದೇವತೆಗಳಿಗೆ ತುಂಬಾ ಅಪ್ರಿಯ.

**ಆತ್ಮದತ್ತಪ್ರಸಾದಾಚ್ಚ ಸ್ವಾಪರಾಧಾತ್ ಪ್ರಚಾಲಿತೇ ।**
**ಉದಂಕೇ ವಾಸುದೇವಸ್ತು ಯುಕ್ತಮಿತ್ಯೇವ ಮನ್ಯತೇ ॥ ೬೮ ॥**

**ಆತ್ಮದತ್ತಪ್ರಸಾದಾತ್ ಚ ಸ್ವಾಪರಾಧಾತ್ ಪ್ರಚಾಲಿತೇ । ಉದಂಕೇ ವಾಸುದೇವಃ ತು ಯುಕ್ತಂ ಇತಿ ಏವ ಮನ್ಯತೇ ॥ ೬೮ ॥**

**ಅರ್ಥ** :- **ಸ್ವಾಪರಾಧಾತ್ ಚ** = ತನ್ನ (ಉದಂಕನ) ಅಪರಾಧದಿಂದಾಗಿಯೇ **ಆತ್ಮದತ್ತಪ್ರಸಾದಾತ್** = ತಾನು (ಪರಮಾತ್ಮನು) ನೀಡಿದ ಅನುಗ್ರಹದಿಂದ **ಉದಂಕೇ** = ಉದಂಕನು **ಪ್ರಚಾಲಿತೇ ಸತಿ** = ಜಾರಿಹೋಗಲು **ವಾಸುದೇವಃ ತು** = ವಾಸುದೇವನಾದರೋ **ಯುಕ್ತಂ ಏವ** = ಯೋಗ್ಯವೇ **ಇತಿ** = ಎಂದು **ಮನ್ಯತೇ** = ತಿಳಿದನು.

**ತಾತ್ಪರ್ಯ** :- ತಾನು ಮಾಡಿದ ಅನುಗ್ರಹವನ್ನು ಉದಂಕಮುನಿ ತನ್ನ ತಪ್ಪಿನಿಂದಾಗಿ ಕಳೆದುಕೊಂಡದ್ದರಿಂದ ಕೃಷ್ಣ ಅದನ್ನು ಯೋಗ್ಯವೆಂದೇ ಭಾವಿಸಿದ.

ಯಾದವರ ಸಭೆಯಲ್ಲಿ ಶ್ರೀಕೃಷ್ಣ

**ಸ್ವಪುರೀಂ ಪ್ರಾಪ್ಯ ಯದುಭಿಃ ಪೂಜಿತಃ ಶೂರಸೂನವೇ ।**
**ವೃತ್ತಾಂತಂ ಕಥಯಾಮಾಸ ಕೇಶವೋ ಯದುಸಂಸದಿ ॥ ೬೯ ॥**

ಸ್ವಪುರೀಂ ಪ್ರಾಪ್ಯ ಯದುಭಿಃ ಪೂಜಿತಃ ಶೂರಸೂನವೇ । ವೃತ್ತಾಂತಂ ಕಥಯಾಮಾಸ ಕೇಶವಃ ಯದುಸಂಸದಿ ॥ ೬೯ ॥

**ಅರ್ಥ** :- **ಸ್ವಪುರೀಂ** = ತನ್ನ ಪುರವನ್ನು **ಪ್ರಾಪ್ಯ** = ಸೇರಿ, **ಯದುಭಿಃ** = ಯಾದವರಿಂದ **ಪೂಜಿತಃ** = ಪೂಜಿತನಾದ **ಕೇಶವಃ** = ಬ್ರಹ್ಮರುದ್ರಾದಿಗಳ ನಿಯಾಮಕನಾದ ಶ್ರೀಕೃಷ್ಣನು **ಶೂರಸೂನವೇ** = ಶೂರನ ಮಗನಾದ ವಸುದೇವನಿಗೆ **ಯದುಸಂಸದಿ** = ಯಾದವರ ಸಭೆಯಲ್ಲಿ **ವೃತ್ತಾಂತಂ** = (ಯುದ್ಧದ) ವಾರ್ತೆಯನ್ನು **ಕಥಯಾಮಾಸ** = ತಿಳಿಸಿದ.

**ತಾತ್ಪರ್ಯ** :- ಕೃಷ್ಣ ದ್ವಾರಕೆಯನ್ನು ತಲುಪಿ ಯಾದವರಿಂದ ಪೂಜಿತನಾದ. ವಸುದೇವನಿಗೆ ಕೃಷ್ಣ ಯಾದವರ ಸಭೆಯಲ್ಲಿ ಕುರುಕ್ಷೇತ್ರ ಸಮರದ ವಾರ್ತೆಯನ್ನು ತಿಳಿಸಿದ.

**ವಧಮಂತರಿತಂ ಸೂನೋಃ ಸಾತ್ವತೇಶೇನ ಸಾತ್ವತೀ ।**
**ಪ್ರಣಮ್ಯ ಕಥಯೇತ್ಯೂಚೇ ತತ ಆಹ ಜನಾರ್ದನಃ ॥ ೭೦ ॥**

ವಧಂ ಅಂತರಿತಂ ಸೂನೋಃ ಸಾತ್ವತೇಶೇನ ಸಾತ್ವತೀ । ಪ್ರಣಮ್ಯ ಕಥಯ ಇತಿ ಊಚೇ ತತಃ ಆಹ ಜನಾರ್ದನಃ ॥ ೭೦ ॥

**ಅರ್ಥ** :- **ಸಃ** = ಅವನು (ಉದಂಕನು) (**ತಂ**) = ಅದನ್ನು **ಮೂತ್ರಂ** = ಮೂತ್ರವು **ಇತಿ** = ಎಂದು **ಮತ್ವಾ** = ತಿಳಿದು **ತಂ** = ಅವನನ್ನು (ಇಂದ್ರನನ್ನು) ಕುರಿತು **ಭರ್ತ್ಸಯನ್** = ಗದರಿಸುತ್ತಾ **ಯಾಹಿ** = 'ತೆರಳು' **ಇತಿ ಏವ** = ಎಂದೇ **ಆಹ** = ಹೇಳಿದ. **ಪ್ರೀತಃ** = ಸಂತೋಷಗೊಂಡ **ಶಕ್ರಃ** = ಇಂದ್ರನು **ತಂ** = ಅವನನ್ನು (ಉದಂಕನನ್ನು) **ವಂಚಯಿತ್ವಾ ಏವ** = ವಂಚಿಸಿಯೇ **ಸ್ವಂ** = ತನ್ನ **ಆಲಯಂ** = ಮನೆಯನ್ನು ಕುರಿತು **ಯಯೌ** = ತೆರಳಿದನು.

**ತಾತ್ಪರ್ಯ** :- ಉದಂಕ ಅದನ್ನು ಮೂತ್ರವೆಂದೇ ಬಗೆದು ''ತೊಲಗು'' ಎಂದೇ ಬೈಯ್ದು ಕಳಿಸಿದ. ಇಂದ್ರ ಹೀಗೆ ಅವನನ್ನು ವಂಚಿಸಿ ಸಂತೃಪ್ತನಾಗಿ ತನ್ನ ಲೋಕಕ್ಕೆ ತೆರಳಿದ.

**ಹಾಗೆ ಇಂದ್ರ ವಂಚಿಸಲು ಕಾರಣ**

**ಅಸಾಧಾರಣಮನ್ನಂ ಹಿ ದೇವಾನಾಮಮೃತಂ ಸದಾ ।**
**ಅನ್ಯಪೀತಿಸ್ತತಸ್ತಸ್ಯ ದೇವಾನಾಂ ಪರಮಾಪ್ರಿಯಾ ॥ ೬೭ ॥**

**ಅಸಾಧಾರಣಂ ಅನ್ನಂ ಹಿ ದೇವಾನಾಂ ಅಮೃತಂ ಸದಾ । ಅನ್ಯಪೀತಿಃ ತತಃ ತಸ್ಯ ದೇವಾನಾಂ ಪರಮಾಪ್ರಿಯಾ (ಪರಮಾ ಅಪ್ರಿಯಾ) ॥ ೬೭ ॥**

**ಅರ್ಥ** :- **ಸದಾ** = ಯಾವಾಗಲೂ **ಅಮೃತಂ** = ಅಮೃತವು **ದೇವಾನಾಂ ಹಿ** = ದೇವತೆಗಳದ್ದೇ **ಅಸಾಧಾರಣಂ** = ಮುಖ್ಯವಾದ **ಅನ್ನಂ** = ಅನ್ನವು. **ತತಃ** = ಆದ್ದರಿಂದ **ತಸ್ಯ** = ಅದರ (ಅಮೃತದ) **ಅನ್ಯಪೀತಿಃ** = ಬೇರೊಬ್ಬರ ಕುಡಿಯುವಿಕೆಯು **ದೇವಾನಾಂ** = ದೇವತೆಗಳಿಗೆ **ಪರಮಾಪ್ರಿಯಾ** = ಬಹಳ ಅಪ್ರಿಯವಾದುದು.

**ತಾತ್ಪರ್ಯ** :- ಅಮೃತ ದೇವತೆಗಳಿಗೆ ಮೀಸಲಾದ ಅಸಾಧಾರಣವಾದ ಅನ್ನ. ಇತರರು ಅದನ್ನು ಕುಡಿಯುವುದು ದೇವತೆಗಳಿಗೆ ತುಂಬಾ ಅಪ್ರಿಯ.

**ಆತ್ಮದತ್ತಪ್ರಸಾದಾಚ್ಚ ಸ್ವಾಪರಾಧಾತ್ ಪ್ರಚಾಲಿತೇ ।**
**ಉದಂಕೇ ವಾಸುದೇವಸ್ತು ಯುಕ್ತಮಿತ್ಯೇವ ಮನ್ಯತೇ ॥ ೬೮ ॥**

**ಆತ್ಮದತ್ತಪ್ರಸಾದಾತ್ ಚ ಸ್ವಾಪರಾಧಾತ್ ಪ್ರಚಾಲಿತೇ । ಉದಂಕೇ ವಾಸುದೇವಃ ತು ಯುಕ್ತಂ ಇತಿ ಏವ ಮನ್ಯತೇ ॥ ೬೮ ॥**

**ಅರ್ಥ** :- **ಸ್ವಾಪರಾಧಾತ್ ಚ** = ತನ್ನ (ಉದಂಕನ) ಅಪರಾಧದಿಂದಾಗಿಯೇ **ಆತ್ಮದತ್ತಪ್ರಸಾದಾತ್** = ತಾನು (ಪರಮಾತ್ಮನು) ನೀಡಿದ ಅನುಗ್ರಹದಿಂದ **ಉದಂಕೇ** = ಉದಂಕನು **ಪ್ರಚಾಲಿತೇ ಸತಿ** = ಜಾರಿಹೋಗಲು **ವಾಸುದೇವಃ ತು** = ವಾಸುದೇವನಾದರೋ **ಯುಕ್ತಂ ಏವ** = ಯೋಗ್ಯವೇ **ಇತಿ** = ಎಂದು **ಮನ್ಯತೇ** = ತಿಳಿದನು.

**ತಾತ್ಪರ್ಯ** :- ತಾನು ಮಾಡಿದ ಅನುಗ್ರಹವನ್ನು ಉದಂಕಮುನಿ ತನ್ನ ತಪ್ಪಿನಿಂದಾಗಿ ಕಳೆದುಕೊಂಡದ್ದರಿಂದ ಕೃಷ್ಣ ಅದನ್ನು ಯೋಗ್ಯವೆಂದೇ ಭಾವಿಸಿದ.

### ಯಾದವರ ಸಭೆಯಲ್ಲಿ ಶ್ರೀಕೃಷ್ಣ

**ಸ್ವಪುರೀಂ ಪ್ರಾಪ್ಯ ಯದುಭಿಃ ಪೂಜಿತಃ ಶೂರಸೂನವೇ ।**
**ವೃತ್ತಾಂತಂ ಕಥಯಾಮಾಸ ಕೇಶವೋ ಯದುಸಂಸದಿ ॥ ೬೯ ॥**

ಸ್ವಪುರೀಂ ಪ್ರಾಪ್ಯ ಯದುಭಿಃ ಪೂಜಿತಃ ಶೂರಸೂನವೇ । ವೃತ್ತಾಂತಂ ಕಥಯಾಮಾಸ ಕೇಶವಃ ಯದುಸಂಸದಿ ॥ ೬೯ ॥

**ಅರ್ಥ** :- **ಸ್ವಪುರೀಂ** = ತನ್ನ ಪುರವನ್ನು **ಪ್ರಾಪ್ಯ** = ಸೇರಿ, **ಯದುಭಿಃ** = ಯಾದವರಿಂದ **ಪೂಜಿತಃ** = ಪೂಜಿತನಾದ **ಕೇಶವಃ** = ಬ್ರಹ್ಮರುದ್ರಾದಿಗಳ ನಿಯಾಮಕನಾದ ಶ್ರೀಕೃಷ್ಣನು **ಶೂರಸೂನವೇ** = ಶೂರನ ಮಗನಾದ ವಸುದೇವನಿಗೆ **ಯದುಸಂಸದಿ** = ಯಾದವರ ಸಭೆಯಲ್ಲಿ **ವೃತ್ತಾಂತಂ** = (ಯುದ್ಧದ) ವಾರ್ತೆಯನ್ನು **ಕಥಯಾಮಾಸ** = ತಿಳಿಸಿದ.

**ತಾತ್ಪರ್ಯ** :- ಕೃಷ್ಣ ದ್ವಾರಕೆಯನ್ನು ತಲುಪಿ ಯಾದವರಿಂದ ಪೂಜಿತನಾದ. ವಸುದೇವನಿಗೆ ಕೃಷ್ಣ ಯಾದವರ ಸಭೆಯಲ್ಲಿ ಕುರುಕ್ಷೇತ್ರ ಸಮರದ ವಾರ್ತೆಯನ್ನು ತಿಳಿಸಿದ.

**ವಧಮಂತರಿತಂ ಸೂನೋಃ ಸಾತ್ವತೇಶೇನ ಸಾತ್ವತೀ ।**
**ಪ್ರಣಮ್ಯ ಕಥಯೇತ್ಯೂಚೇ ತತ ಆಹ ಜನಾರ್ದನಃ ॥ ೭೦ ॥**

ವಧಂ ಅಂತರಿತಂ ಸೂನೋಃ ಸಾತ್ವತೇಶೇನ ಸಾತ್ವತೀ । ಪ್ರಣಮ್ಯ ಕಥಯ ಇತಿ ಊಚೇ ತತಃ ಆಹ ಜನಾರ್ದನಃ ॥ ೭೦ ॥

**ಅರ್ಥ** :– **ಸಾತ್ವತೀ** = ಸುಭದ್ರೆಯು **ಸಾತ್ವತೇಶೇನ** = ಸಾತ್ವತರ (ಯಾದವರ) ಒಡೆಯನಾದ ಕೃಷ್ಣನಿಂದ **ಅಂತರಿತಂ** = ಹೇಳದೇ ಬಿಟ್ಟ **ಸೂನೋಃ** = ಮಗನಾದ ಅಭಿಮನ್ಯುವಿನ **ವಧಂ** = ವಧೆಯನ್ನು **ಕಥಯ** = ಹೇಳು ಇತಿ = ಎಂದು **ಪ್ರಣಮ್ಯ** = ನಮಸ್ಕರಿಸಿ **ಊಚೇ** = ಕೇಳಿದಳು. **ತತಃ** = ಅನಂತರ **ಜನಾರ್ದನಃ** = ಜನಾರ್ದನನಾದ ಕೃಷ್ಣನು **ಆಹ** = ಹೇಳಿದನು.

**ತಾತ್ಪರ್ಯ** :- ಕೃಷ್ಣ ಹಾಗೆ ಯುದ್ಧ ವಾರ್ತೆ ತಿಳಿಸುವಾಗ ಅಭಿಮನ್ಯುವಿನ ವಧೆಯನ್ನು ಮರೆಮಾಡಲು ಸುಭದ್ರೆ ಕೃಷ್ಣನಿಗೆ ನಮಸ್ಕರಿಸಿ ಅದನ್ನೂ ತಿಳಿಸಲು ಕೇಳಿಕೊಂಡಳು. ಕೃಷ್ಣ ಆಗ ಅದನ್ನು ತಿಳಿಸಿದ.

### ಅಭಿಮನ್ಯುವಿಗೆ ವಸುದೇವಾದಿಗಳಿಂದ ಶ್ರಾದ್ಧ ದಾನಾದಿಗಳು

**ತತಃ ಸುದುಃಖಿತಾಃ ಶೂರಪುತ್ರಾದ್ಯಾ ಅಭಿಮನ್ಯವೇ ।**
**ಶ್ರಾದ್ಧದಾನಾನಿ ಬಹುಶಶ್ಚಕ್ರುಃ ಕೇಶವಸಂಯುತಾಃ ॥ ೭೧ ॥**

ತತಃ ಸುದುಃಖಿತಾಃ ಶೂರಪುತ್ರಾದ್ಯಾಃ ಅಭಿಮನ್ಯವೇ । ಶ್ರಾದ್ಧದಾನಾನಿ ಬಹುಶಃ ಚಕ್ರುಃ ಕೇಶವಸಂಯುತಾಃ ॥ ೭೧ ॥

**ಅರ್ಥ** :– **ತತಃ** = ಬಳಿಕ **ಸುದುಃಖಿತಾಃ** = ಬಹಳ ದುಃಖಿತರಾದ **ಶೂರಪುತ್ರಾದ್ಯಃ** = ಶೂರಪುತ್ರನಾದ ವಸುದೇವ ಮೊದಲಾದವರು **ಕೇಶವಸಂಯುತಾಃ** = ಕೃಷ್ಣನೊಂದಿಗೆ ಕೂಡಿಕೊಂಡವರಾಗಿ **ಅಭಿಮನ್ಯವೇ** = ಅಭಿಮನ್ಯುವಿಗೆ **ಬಹುಶಃ** = ಬಹಳವಾಗಿ **ಶ್ರಾದ್ಧದಾನಾನಿ** = ಶ್ರಾದ್ಧ, ದಾನಗಳನ್ನು **ಚಕ್ರುಃ** = ಮಾಡಿದರು.

**ತಾತ್ಪರ್ಯ** :- ಬಳಿಕ ವಸುದೇವ ಮೊದಲಾದವರೆಲ್ಲ ತುಂಬಾ ದುಃಖಿತರಾಗಿ ಶ್ರೀಕೃಷ್ಣನೊಂದಿಗೆ ಕೂಡಿ ಅಭಿಮನ್ಯುವಿಗಾಗಿ ಶ್ರಾದ್ಧ, ದಾನ ಮೊದಲಾದವುಗಳನ್ನು ಬಹಳವಾಗಿ ನಡೆಸಿದರು.

### ಅಶ್ವಮೇಧಕ್ಕೆ ಯುಧಿಷ್ಠಿರನ ಚಿಂತೆ

**ನಿವಸತ್ಯತ್ರ ವಿಶ್ವೇಶೇ ಧರ್ಮಪುತ್ರಃ ಕ್ರತೂತ್ತಮಮ್ ।**
**ಅಶ್ವಮೇಧಮನುಷ್ಠಾತುಂ ನಾವಿಂದದ್ವಿತ್ತಮಂಜಸಾ ॥ ೭೨ ॥**

ನಿವಸತಿ ಅತ್ರ ವಿಶ್ವೇಶೇ ಧರ್ಮಪುತ್ರಃ ಕ್ರತೂತ್ತಮಮ್ । ಅಶ್ವಮೇಧಂ ಅನುಷ್ಠಾತುಂ ನ ಅವಿಂದತ್ ವಿತ್ತಂ ಅಂಜಸಾ ॥ ೭೨ ॥

**ಅರ್ಥ** :- **ಅತ್ರ** = ಇತ್ತ (ದ್ವಾರಕೆಯಲ್ಲಿ) **ವಿಶ್ವೇಶೇ** = ವಿಶ್ವೇಶನಾದ ಕೃಷ್ಣನು **ನಿವಸತಿ (ಸತಿ)** = ನೆಲೆಸಿರುವಾಗ **ಧರ್ಮಪುತ್ರಃ** = ಯಮಧರ್ಮನ ಮಗನಾದ ಯುಧಿಷ್ಠಿರನು **ಕ್ರತೂತ್ತಮಂ** = ಶ್ರೇಷ್ಠಯಜ್ಞವಾದ **ಅಶ್ವಮೇಧಂ** = ಅಶ್ವಮೇಧವನ್ನು **ಅಂಜಸಾ** = ಉತ್ತಮಕಲ್ಪದಿಂದ **ಅನುಷ್ಠಾತುಂ** = ನೆರವೇರಿಸಲು **ವಿತ್ತಂ** = ಧನವನ್ನು **ನ ಅವಿಂದತ್** = ಕಾಣದಾದ.

**ತಾತ್ಪರ್ಯ** :- ವಿಶ್ವೇಶನಾದ ಕೃಷ್ಣ ದ್ವಾರಕೆಯಲ್ಲಿ ನೆಲೆಸಿದ್ದಾಗ ಧರ್ಮರಾಜ ಶ್ರೇಷ್ಠ ಯಜ್ಞವಾದ ಅಶ್ವಮೇಧವನ್ನು ಮಾಡಲು ಅದಕ್ಕೆ ಅಗತ್ಯವಾದ ಧನವನ್ನು ಕಾಣದಾದ.

**ಹತಶೇಷಾತ್ ಕ್ಷತ್ರಸಂಘಾತ್ ಕರಂ ನೈಚ್ಛದ್ದಯಾಪರಃ ।**
**ನ ಚ ಮಧ್ಯಮಕಲ್ಪೇನ ಯಷ್ಟುಂ ತಸ್ಯ ಮನೋಗತಮ್ ॥ ೭೩ ॥**

ಹತಶೇಷಾತ್ ಕ್ಷತ್ರಸಂಘಾತ್ ಕರಂ ನ ಐಚ್ಛತ್ ದಯಾಪರಃ । ನ ಚ ಮಧ್ಯಮಕಲ್ಪೇನ ಯಷ್ಟುಂ ತಸ್ಯ ಮನೋಗತಮ್ ॥ ೭೩ ॥

ವೇದವ್ಯಾಸರು ನೀಡಿದ ಅಕ್ಷಯ ಸಂಪತ್ತು

**ವಿಜ್ಞಾಯ ನಿತ್ಯವಿಜ್ಞಾತನಿಖಿಲೋ ಬಾದರಾಯಣಃ ।**
**ಆವಿರ್ಭೂತೋ ಹಿಮವತಃ ಶೃಂಗಂ ಯತ್ರಾಭಿಸಂಗತಮ್ ॥ ೭೪ ॥**

ವಿಜ್ಞಾಯ ನಿತ್ಯವಿಜ್ಞಾತನಿಖಿಲಃ ಬಾದರಾಯಣಃ । ಆವಿರ್ಭೂತಃ ಹಿಮವತಃ ಶೃಂಗಂ ಯತ್ರ ಅಭಿಸಂಗತಮ್ ॥ ೭೪ ॥

**ಮೇರುಶೃಂಗೇಣ ಯತ್ರೈವ ವಿಷ್ಣುಃ ಸ್ವಾತ್ಮಾನಮವ್ಯಯಮ್ ।**
**ಲೋಕಸ್ಯ ಸಂಗ್ರಹಾಯೇಜೇ ಕರ್ಮಬಂಧೋಜ್ಝಿತೋಽಪಿ ಸನ್ ॥ ೭೫ ॥**

ಮೇರುಶೃಂಗೇಣ ಯತ್ರ ಏವ ವಿಷ್ಣುಃ ಸ್ವಾತ್ಮಾನಂ ಅವ್ಯಯಮ್ । ಲೋಕಸ್ಯ ಸಂಗ್ರಹಾಯ ಈಜೇ ಕರ್ಮಬಂಧೋಜ್ಝಿತಃ ಅಪಿ ಸನ್ ॥ ೭೫ ॥

**ಶಂಕರಾದ್ಯಾಃ ಸುರಾ ಯತ್ರ ಮರುತ್ತಶ್ಚೇಜಿರೇ ಹರಿಮ್ ।**
**ದಾನವೋ ವೃಷಪರ್ವಾ ಚ ತತ್ರಾಸ್ತಿ ಧನಮಕ್ಷಯಮ್ ॥ ೭೬ ॥**

ಶಂಕರಾದ್ಯಾಃ ಸುರಾಃ ಯತ್ರ ಮರುತ್ತಃ ಚ ಈಜಿರೇ ಹರಿಮ್ । ದಾನವಃ ವೃಷಪರ್ವಾ ಚ ತತ್ರ ಅಸ್ತಿ ಧನಂ ಅಕ್ಷಯಮ್ ॥ ೭೬ ॥

**ತಚ್ಛಂಕರಶರೀರಸ್ಥಂ ಜಾಮದಗ್ನ್ಯಂ ಹರಿಂ ಪರಮ್ ।**
**ಇಷ್ಟ್ವೈವಾನುಜ್ಞಯಾ ತಸ್ಯ ಸ್ವೀಕೃತ್ಯ ಯಜ ತೇನ ಚ ।**
**ಇತ್ಯಾಹ ವ್ಯಾಸವಾಕ್ಯಾನು ಭೀಮೋಽಪ್ಯಾಹ ನೃಪೋತ್ತಮಮ್ ॥ ೭೭ ॥**

ತತ್ ಶಂಕರಶರೀರಸ್ಥಂ ಜಾಮದಗ್ನ್ಯಂ ಹರಿಂ ಪರಮ್ । ಇಷ್ಟ್ವಾ ಏವ ಅನುಜ್ಞಯಾ ತಸ್ಯ ಸ್ವೀಕೃತ್ಯ ಯಜ ತೇನ ಚ । ಇತಿ ಆಹ ವ್ಯಾಸವಾಕ್ಯಾನು ಭೀಮಃ ಅಪಿ ಆಹ ನೃಪೋತ್ತಮಮ್ ॥ ೭೭ ॥

**ಅರ್ಥ** :- **ದಯಾಪರಃ** = ದಯಾಪರನಾದ ಯುಧಿಷ್ಠಿರನು **ಹತಶೇಷಾತ್** = ಅಳಿದುಳಿದ **ಕ್ಷತ್ರಸಂಘಾತ್** = ಕ್ಷತ್ರಿಯರ ಸಮೂಹದಿಂದ **ಕರಂ** = ಕಪ್ಪವನ್ನು **(ಆದಾತುಂ)** = ಸ್ವೀಕರಿಸಲು **ನ ಐಚ್ಛತ್** = ಇಚ್ಛಿಸಲಿಲ್ಲ. **ಚ** = ಮತ್ತು **ಮಧ್ಯಮಕಲ್ಪೇನ** = ಮಧ್ಯಮಕಲ್ಪದಿಂದ **ಯಷ್ಟುಂ** = ಯಾಗಮಾಡಲು **ನ ಐಚ್ಛತ್** = ಇಚ್ಛಿಸಲಿಲ್ಲ. **ನಿತ್ಯವಿಜ್ಞಾತನಿಖಿಲಃ** = ಸದಾ ಎಲ್ಲವನ್ನೂ ಪರಿಪೂರ್ಣವಾಗಿ ಬಲ್ಲವರಾದ **ಬಾದರಾಯಣಃ** = ವೇದವ್ಯಾಸರು **ತಸ್ಯ** = ಅವನ (ಧರ್ಮರಾಜನ) **ಮನೋಗತಂ** = ಮನೋಗತವನ್ನು **ವಿಜ್ಞಾಯ** = ಚೆನ್ನಾಗಿ ತಿಳಿದು **ಆವಿರ್ಭೂತಃ (ಸನ್)** = ಪ್ರತ್ಯಕ್ಷಗೊಂಡವರಾಗಿ **ನೃಪೋತ್ತಮಂ** = ರಾಜಶ್ರೇಷ್ಠನಾದ ಧರ್ಮರಾಜನನ್ನು ಕುರಿತು **ಯತ್ರ** = ಯಾವ ಹಿಮಾಲಯಪರ್ವತದಲ್ಲಿ **ಹಿಮವತಃ** = ಹಿಮಾಲಯಪರ್ವತದ **ಶೃಂಗಂ** = ಶಿಖರವು (ತುದಿಯು) **ಮೇರುಶೃಂಗೇಣ** = ಮೇರುಪರ್ವತದ ಶೃಂಗದೊಂದಿಗೆ **ಅಭಿಸಂಗತಂ** = ಕೂಡಿಕೊಂಡಿದೆಯೋ **ಯತ್ರ ಏವ** = ಯಾವ ಆ ಪರ್ವತದಲ್ಲಿ **ವಿಷ್ಣುಃ** = ವಿಷ್ಣುವು **ಕರ್ಮಬಂಧೋಜ್ಝಿತಃ ಸನ್ ಅಪಿ** = ಕರ್ಮಬಂಧರಹಿತನಾಗಿ ಇದ್ದರೂ ಸಹ **ಲೋಕಸಂಗ್ರಹಾಯ** = ಲೋಕಶಿಕ್ಷಣಕ್ಕೆಂದು **ಅವ್ಯಯಂ** = ಅವ್ಯಯನಾದ **ಸ್ವಾತ್ಮಾನಂ** =

ತನ್ನನ್ನು ಕುರಿತು **ಈಜೇ** = ಯಜ್ಞದ ಮೂಲಕ ಆರಾಧಿಸಿದನೋ **ಯತ್ರ** = ಯಾವ ಆ ಸ್ಥಳದಲ್ಲಿ **ಶಂಕರಾದ್ಯಾಃ** = ಶಿವ ಮೊದಲಾದ **ಸುರಾಃ** = ದೇವತೆಗಳು **ಚ** = ಮತ್ತು **ಮರುತ್ತಃ** = ಮರುತ್ತನು **ಹರಿಂ** = ಹರಿಯನ್ನು **ಈಜಿರೇ** = ಆರಾಧಿಸಿದರೋ **ಚ** = ಮತ್ತು **ದಾನವಃ** = ದಾನವನಾದ **ವೃಷಪರ್ವಾ** = ವೃಷಪರ್ವನು (**ಯತ್ರ ಹರಿಂ ಈಜೇ**) = ಯಾವ ಆ ಸ್ಥಳದಲ್ಲಿ ಹರಿಯನ್ನು ಅರಾಧಿಸಿದನೋ **ತತ್ರ** = ಆ ಸ್ಥಳದಲ್ಲಿ **ಅಕ್ಷಯಂ** = ಬರಿದಾಗದ **ಧನಂ** = ಧನವು **ಅಸ್ತಿ** = ಇದೆ. **ಶಂಕರಶರೀರಸ್ಥಂ** = ಆ ಶಿವನೊಳಗೆ ನೆಲೆಸಿರುವ **ಪರಂ** = ಸರ್ವೋತ್ತಮನೂ **ಜಾಮದಗ್ನ್ಯಂ ಹರಿಂ** = ಜಮದಗ್ನಿಯ ಮಗನಾದ ಹರಿಯನ್ನು (ಪರಶುರಾಮನನ್ನು) **ಇಷ್ಟ್ವಾ ಏವ** = ಆರಾಧಿಸಿಯೇ **ತಸ್ಯ** = ಅವನ **ಆಜ್ಞಯಾ** = ಆಜ್ಞೆಯಿಂದ **ತತ್** = ಆ ಧನವನ್ನು **ಸ್ವೀಕೃತ್ಯ** = ಸ್ವೀಕರಿಸಿ **ತೇನ** = ಆ ಧನದಿಂದ **ಯಜ ಚ** = ಯಜ್ಞವನ್ನೂ ಮಾಡು **ಇತಿ** = ಎಂದು **ಆಹ** = ಹೇಳಿದರು. **ಭೀಮಃ ಅಪಿ** = ಭೀಮನೂ ಸಹ **ವ್ಯಾಸವಾಕ್ಯಾನು** = ವೇದವ್ಯಾಸರ ಮಾತನ್ನು ಅನುಸರಿಸಿ **ಆಹ** = ಹೇಳಿದನು.(೭೩-೭೭)

**ತಾತ್ಪರ್ಯ** :- ಅಳಿದುಳಿದ ಕ್ಷತ್ರಿಯಸಮೂಹದಿಂದ ಕಪ್ಪ ಪಡೆಯಲು ದಯಾಲುವಾದ ಧರ್ಮರಾಜ ಇಚ್ಛಿಸಲಿಲ್ಲ. ಮಧ್ಯಮ ಕಲ್ಪದಿಂದ ಯಾಗ ಮಾಡಲು ಅವನ ಮನಸ್ಸು ಒಪ್ಪಲಿಲ್ಲ. ಸದಾ ಸಕಲವನ್ನೂ ಪೂರ್ಣವಾಗಿ ಬಲ್ಲ ವೇದವ್ಯಾಸರು ಅವನ ಚಿಂತೆಯನ್ನು ಅರಿತು ಅಲ್ಲಿ ಪ್ರತ್ಯಕ್ಷರಾದರು. ''ಹಿಮವತ್ಪರ್ವತದ ಶಿಖರ ಮೇರು ಶಿಖರದೊಂದಿಗೆ ಸೇರುವ ಸ್ಥಳದಲ್ಲಿ ಶ್ರೀಹರಿಯು ತಾನು ಕರ್ಮಬಂಧ ರಹಿತನಾಗಿದ್ದರೂ ಅವ್ಯಯನಾದ ತನ್ನನ್ನೇ ಕುರಿತು ಲೋಕಶಿಕ್ಷಣಕ್ಕೆಂದು ಯಜ್ಞದ ಮೂಲಕ ಆರಾಧಿಸಿಕೊಂಡರ. ಶಿವ ಮೊದಲಾದ ದೇವತೆಗಳು, ಮರುತ್ತರಾಜನು ಮತ್ತು ವೃಷಪರ್ವನೆಂಬ ದಾನವನು ಅಲ್ಲಿ ಶ್ರೀಹರಿಯನ್ನು ಆರಾಧಿಸಿರುವರು. ಅಲ್ಲಿ ಅಕ್ಷಯವಾದ ಧನವಿದೆ. ಆದ್ದರಿಂದ ಶಂಕರನ ಅಂತರ್ಯಾಮಿಯಾದ ಪರಶುರಾಮರೂಪದ ಸರ್ವೋತ್ತಮನಾದ ಶ್ರೀಹರಿಯನ್ನು ಯಜ್ಞದಿಂದ ಆರಾಧಿಸಿ ಅವನ ಅನುಮತಿ ಪಡೆದು ಅಲ್ಲಿಯ ಧನವನ್ನು ತಂದು ಅದರಿಂದ ಯಜ್ಞಮಾಡು''. ಹೀಗೆ ವೇದವ್ಯಾಸರು ನುಡಿಯುತ್ತಲೇ ಭೀಮನೂ ಧರ್ಮರಾಜನಿಗೆ ತಿಳಿಸಿದ.

**ಧನಸ್ಯ ದೇವತಾ ವಿಷ್ಣುರ್ಜಾಮದಗ್ನ್ಯೋಽಖಿಲೇಶ್ವರಃ ।**
**ಸ ಶಂಕರಶರೀರಸ್ಥೋ ಯಜ್ಞೋಚ್ಛಿಷ್ಟಧನಾಧಿಪಃ ॥ ೭೮ ॥**

ಧನಸ್ಯ ದೇವತಾ ವಿಷ್ಣುಃ ಜಾಮದಗ್ನ್ಯಃ ಅಖಿಲೇಶ್ವರಃ । ಸಃ ಶಂಕರಶರೀರಸ್ಥಃ ಯಜ್ಞೋಚ್ಛಿಷ್ಟಧನಾಧಿಪಃ ॥ ೭೮ ॥

**ಅರ್ಥ** :– **ಅಖಿಲೇಶ್ವರಃ** = ಎಲ್ಲರ ಒಡೆಯನಾದ **ವಿಷ್ಣುಃ** = ಸರ್ವತ್ರ ವ್ಯಾಪ್ತನಾದ **ಜಾಮದಗ್ನ್ಯಃ** = ಜಮದಗ್ನಿಪುತ್ರನಾದ ಪರಶುರಾಮನು **ಧನಸ್ಯ** = ಧನದ **ದೇವತಾ** = ದೇವತೆಯು. **ಶಂಕರಶರೀರಸ್ಥಃ** = ಶಿವನ ಶರೀರದಲ್ಲಿ ಅಂತರ್ಗತನಾಗಿರುವ **ಸಃ** = ಅವನು **ಯಜ್ಞೋಚ್ಛಿಷ್ಟ ಧನಾಧಿಪಃ** = ಯಜ್ಞದಲ್ಲಿ ಉಳಿದ ಧನಕ್ಕೆ ಅಧಿಪತಿಯಾಗಿರುವವನು.

**ತಾತ್ಪರ್ಯ** :- ಸರ್ವೇಶ್ವರನಾದ ಪರಶುರಾಮ ರೂಪದ ಶ್ರೀಹರಿಯೇ ಧನಕ್ಕೆ ದೇವತೆ, ಅವನೇ ಶಿವನ ಶರೀರದಲ್ಲಿ ಅಂತರ್ಗತನಾಗಿ ಯಜ್ಞಶೇಷವಾದ ಧನಕ್ಕೆ ಅಧಿಪತಿಯಾಗಿರುವನು.

**ತೇನೈವ ವಿಷ್ಣುನಾ ದತ್ತಮರ್ಜುನಾಯಾಸ್ತ್ರಮುತ್ತಮಮ್ ।**
**ಕಾರ್ಯಾಣ್ಯನ್ಯಾನಿ ಚಾಸ್ಮಾಕಂ ಕೃತಾನ್ಯೇತೇನ ವಿಷ್ಣುನಾ ॥ ೭೯ ॥**

ತೇನ ಏವ ವಿಷ್ಣುನಾ ದತ್ತಂ ಅರ್ಜುನಾಯ ಅಸ್ತ್ರಂ ಉತ್ತಮಮ್ । ಕಾರ್ಯಾಣಿ ಅನ್ಯಾನಿ ಚ ಅಸ್ಮಾಕಂ ಕೃತಾನಿ ಏತೇನ ವಿಷ್ಣುನಾ ॥ ೭೯ ॥

**ಅರ್ಥ** :– **ತೇನ** = ಆ **ವಿಷ್ಣುನಾ ಏವ** = ವಿಷ್ಣುವಿನಿಂದಲೇ **ಅರ್ಜುನಾಯ** = ಅರ್ಜುನನಿಗೆ **ಉತ್ತಮಂ** = ಉತ್ತಮವಾದ **ಅಸ್ತ್ರಂ** = ಅಸ್ತ್ರವು **ದತ್ತಂ** = ಕೊಡಲ್ಪಟ್ಟದ್ದಾಗಿದೆ. **ಅಸ್ಮಾಕಂ** = ನಮ್ಮ **ಅನ್ಯಾನಿ** = ಬೇರೆ **ಕಾರ್ಯಾಣಿ ಚ** = ಕಾರ್ಯಗಳೂ ಸಹ **ಏತೇನ** = ಈ **ವಿಷ್ಣುನಾ** = ವಿಷ್ಣುವಿನಿಂದಲೇ **ಕೃತಾನಿ** = ಮಾಡಲ್ಪಟ್ಟವು.

**ತಾತ್ಪರ್ಯ** :- ಅರ್ಜುನನಿಗೆ ಉತ್ತಮವಾದ ಅಸ್ತ್ರವನ್ನು ನೀಡಿದ್ದು ಆ ವಿಷ್ಣುವೇ; ನಮ್ಮ ಇತರ ಕಾರ್ಯಗಳು ಸಹ ಈಡೇರುವುದು ಈ ವಿಷ್ಣುವಿನಿಂದಲೇ.

**ಸ ಬ್ರಹ್ಮರುದ್ರಶಕ್ರಾದಿಪದದಾತಾಽಖಿಲೇಶ್ವರಃ ।**
**ಸ್ವತಂತ್ರಃ ಪರತಂತ್ರಾಂಸ್ತಾನಾವರ್ತಯತಿ ಚೇಚ್ಛಯಾ ॥ ೮೦ ॥**

ಸಃ ಬ್ರಹ್ಮರುದ್ರಶಕ್ರಾದಿಪದದಾತಾ ಅಖಿಲೇಶ್ವರಃ । ಸ್ವತಂತ್ರಃ ಪರತಂತ್ರಾನ್ ತಾನ್ ಆವರ್ತಯತಿ ಚ ಇಚ್ಛಯಾ ॥ ೮೦ ॥

**ಅರ್ಥ** :– **ಸಃ** = ಅವನು **ಬ್ರಹ್ಮರುದ್ರಶಕ್ರಾದಿಪದದಾತಾ** = ಬ್ರಹ್ಮ ರುದ್ರ ಇಂದ್ರ ಮೊದಲಾದ ಪದವಿಗಳನ್ನು ನೀಡುವವನು **ಅಖಿಲೇಶ್ವರಃ** = ಸರ್ವರ ಸ್ವಾಮಿಯು **ಸ್ವತಂತ್ರಃ** = ಸ್ವತಂತ್ರನು **ಚ** = ಮತ್ತು **ಪರತಂತ್ರಾನ್** = ಅಸ್ವತಂತ್ರರಾದ **ತಾನ್** = ಅವರನ್ನು (ಬ್ರಹ್ಮ ರುದ್ರಾದಿಗಳನ್ನು) **ಇಚ್ಛಯಾ** = ಇಚ್ಛೆಯಿಂದ **ಆವರ್ತಯತಿ** = ಪ್ರವರ್ತಿಸುವನು.

**ತಾತ್ಪರ್ಯ** :- ಆ ವಿಷ್ಣುವೇ ಬ್ರಹ್ಮ, ರುದ್ರ, ಇಂದ್ರ ಮೊದಲಾದ ಪದವಿಗಳನ್ನು ನೀಡುವ ಅಖಿಲೇಶ್ವರ, ಸ್ವತಂತ್ರ. ಪರತಂತ್ರರನ್ನೆಲ್ಲ ತನ್ನ ಇಚ್ಛೆಯಂತೆ ಪ್ರವರ್ತನೆ ಮಾಡುವವನು.

**ಪ್ರಿಯೋಽಸ್ಮಾಕಂ ಪ್ರಿಯಾಸ್ತಸ್ಯ ಸರ್ವದೈವ ವಯಂ ನೃಪ ।**
**ಅತಸ್ತದಭ್ಯನುಜ್ಞಾತಧನೇನೈವ ಯಜಾಮಹೇ ॥ ೮೧ ॥**

ಪ್ರಿಯಃ ಅಸ್ಮಾಕಂ ಪ್ರಿಯಾಃ ತಸ್ಯ ಸರ್ವದಾ ಏವ ವಯಂ ನೃಪ । ಅತಃ ತದಭ್ಯನುಜ್ಞಾತಧನೇನ ಏವ ಯಜಾಮಹೇ ॥ ೮೧ ॥

**ಅರ್ಥ** :– (**ಸಃ**) = ಅವನು **ಸರ್ವದಾ ಏವ** = ಯಾವಾಗಲೂ **ಅಸ್ಮಾಕಂ** = ನಮಗೆ **ಪ್ರಿಯಃ** = ಪ್ರಿಯನು. **ವಯಂ** = ನಾವು **ತಸ್ಯ** = ಅವನಿಗೆ **ಸರ್ವದಾ ಏವ** = ಯಾವಾಗಲೂ **ಪ್ರಿಯಾಃ** = ಪ್ರಿಯರು. **ಅತಃ** = ಆದ್ದರಿಂದ **ನೃಪ** = ರಾಜನೆ! **ತದಭ್ಯನುಜ್ಞಾತಧನೇನ ಏವ** = ಅವನಿಂದ ಅಪ್ಪಣೆ ಮಾಡಲ್ಪಟ್ಟ ಧನದಿಂದಲೇ **ಯಜಾಮಹೇ** = ಯಜ್ಞವನ್ನು ಮಾಡೋಣ.

**ತಾತ್ಪರ್ಯ** :- ಅವನು ನಮಗೆ ಪ್ರಿಯ; ಅವನಿಗೆ ನಾವೂ ಸಹ ಸದಾ ಪ್ರಿಯರು. ರಾಜನೇ, ಆದರಿಂದ ಅವನ ಅನುಮತಿಯಿಂದ ದೊರೆಯುವ ಹಣದಿಂದಲೇ ನಾವು ಯಜ್ಞವನ್ನು ಮಾಡೋಣ.

**ಸೋಽಯಂ ಪಿತಾಮಹೋಽಸ್ಮಾಕಂ ವ್ಯಾಸಸ್ತನ್ನಃ ಪ್ರದಾಸ್ಯತಿ ।**
**ಇತ್ಯುಕ್ತ್ವಾ ತಂ ಪುರಸ್ಕೃತ್ಯ ಕೃಷ್ಣದ್ವೈಪಾಯನಂ ಯಯುಃ ॥ ೮೨ ॥**

ಸಃ ಅಯಂ ಪಿತಾಮಹಃ ಅಸ್ಮಾಕಂ ವ್ಯಾಸಃ ತತ್ ನಃ ಪ್ರದಾಸ್ಯತಿ । ಇತಿ ಉಕ್ತ್ವಾ ತಂ ಪುರಸ್ಕೃತ್ಯ ಕೃಷ್ಣದ್ವೈಪಾಯನಂ ಯಯುಃ ॥ ೮೨ ॥

**ಅರ್ಥ :-** **ಸಃ** = ಅವನೇ (ಆ ಪರಶುರಾಮನೇ) **ಅಸ್ಮಾಕಂ** = ನಮ್ಮ **ಪಿತಾಮಹಃ** = ತಾತನಾದ **ಅಯಂ** = ಈ **ವ್ಯಾಸಃ** = ವೇದವ್ಯಾಸರು. **(ಸಃ)** = ಅವರು **ತತ್** = ಆ ಧನವನ್ನು **ನಃ** = ನಮಗೆ **ಪ್ರದಾಸ್ಯತಿ** = ನೀಡುವರು. **ಇತಿ** = ಹೀಗೆ **ಉಕ್ತ್ವಾ** = ಹೇಳಿ **ತಂ** = ಆ **ಕೃಷ್ಣದ್ವೈಪಾಯನಂ** = ವೇದವ್ಯಾಸರನ್ನು **ಪುರಸ್ಕೃತ್ಯ** = ಮುಂದೆಮಾಡಿಕೊಂಡು **ಯಯುಃ** = ಹೊರಟರು.

**ತಾತ್ಪರ್ಯ :-** ಆ ಪರಶುರಾಮನೇ ನಮಗೆ ತಾತನಾಗಿರುವ ಶ್ರೀವೇದವ್ಯಾಸರು. ಅವರೇ ನಮಗೆ ಸಂಪತ್ತನ್ನು ನೀಡುವರು - ಎಂದು ಹೇಳಿದ. ನಂತರ ಪಾಂಡವರು ವೇದವ್ಯಾಸರನ್ನು ಮುಂದೆ ಮಾಡಿಕೊಂಡು ತೆರಳಿದರು.

### ಪಾಂಡವರು ಹೊತ್ತು ತಂದ ಸಂಪತ್ತು

**ಧನಂ ಕೃಷ್ಣಃ ಸಮಾದಾಯ ಸಮಂತಾಚ್ಛತಯೋಜನಮ್ ।**
**ದದೌ ತೇಷಾಂ ತೇಽಪಿ ಚೋಹುರ್ಹಸ್ತ್ಯುಷ್ಟ್ರಾಶ್ವನರಾದಿಭಿಃ ॥ ೮೩ ॥**

ಧನಂ ಕೃಷ್ಣಃ ಸಮಾದಾಯ ಸಮಂತಾತ್ ಶತಯೋಜನಮ್ । ದದೌ ತೇಷಾಂ ತೇ ಅಪಿ ಚ ಊಹುಃ ಹಸ್ತ್ಯುಷ್ಟ್ರಾಶ್ವನರಾದಿಭಿಃ ॥ ೮೩ ॥

**ಅರ್ಥ :-** **ಕೃಷ್ಣಃ** = ವಾಸಿಷ್ಠಕೃಷ್ಣರಾದ ವೇದವ್ಯಾಸರು **ಸಮಂತಾತ್** = ಸುತ್ತಲೂ **ಶತಯೋಜನಂ** = ನೂರು ಯೋಜನ ವ್ಯಾಪ್ತಿಯ **ಧನಂ** = ಧನವನ್ನು **ಸಮಾದಾಯ** = ತೆಗೆದುಕೊಂಡು **ತೇಷಾಂ** = ಅವರಿಗೆ **ದದೌ** = ನೀಡಿದರು. **ತೇ ಅಪಿ ಚ** = ಅವರೂ ಕೂಡ **ಹಸ್ತ್ಯುಷ್ಟ್ರಾಶ್ವನರಾದಿಭಿಃ** = ಆನೆ ಒಂಟೆ ಕುದುರೆ ಮನುಷ್ಯ ಮೊದಲಾದವರಿಂದ **ಊಹುಃ** = ಹೊರಿಸಿದರು.

**ತಾತ್ಪರ್ಯ** :- ವೇದವ್ಯಾಸರು ಸುತ್ತಲೂ ನೂರು ಯೋಜನ ವ್ಯಾಪ್ತಿಯನ್ನು ಹೊಂದಿದ್ದ ಧನವನ್ನು ಅವರಿಗೆ ನೀಡಿದರು. ಪಾಂಡವರು ಅದನ್ನು ಆನೆ, ಒಂಟೆ, ಕುದುರೆ ಹಾಗೂ ಮನುಷ್ಯರ ಮೂಲಕ ಹೊರಿಸಿ ತಂದರು.

**ಯುಧಿಷ್ಠಿರಮೃತೇ ಸರ್ವೇ ಭೀಮಸೇನಪುರೋಗಮಾಃ ।**
**ಯಜ್ಞಾರ್ಥಮೂಹಿರೇ ಭೂರಿ ಸ್ವರ್ಣಮುದ್ಯದ್ರವಿಪ್ರಭಮ್ ॥ ೮೪ ॥**

ಯುಧಿಷ್ಠಿರಂ ಋತೇ ಸರ್ವೇ ಭೀಮಸೇನಪುರೋಗಮಾಃ । ಯಜ್ಞಾರ್ಥಂ ಊಹಿರೇ ಭೂರಿ ಸ್ವರ್ಣಂ ಉದ್ಯದ್ರವಿಪ್ರಭಮ್ ॥ ೮೪ ॥

**ಅರ್ಥ** :- **ಯುಧಿಷ್ಠಿರಂ** = ಯುಧಿಷ್ಠಿರನನ್ನು **ಋತೇ** = ಬಿಟ್ಟು **ಭೀಮಸೇನಪುರೋಗಮಾಃ** = ಭೀಮಸೇನ ಮೊದಲಾದ **ಸರ್ವೇ** = ಎಲ್ಲರೂ **ಭೂರಿ** = ಬಹಳವಾದ **ಉದ್ಯದ್ರವಿಪ್ರಭಂ** = ಉದಿಸುವ ಸೂರ್ಯನ ಪ್ರಭೆಯುಳ್ಳ **ಸ್ವರ್ಣಂ** = ಚಿನ್ನವನ್ನು **ಯಜ್ಞಾರ್ಥಂ** = ಯಜ್ಞಕ್ಕೋಸ್ಕರ **ಊಹಿರೇ** = ಹೊತ್ತರು.

**ತಾತ್ಪರ್ಯ** :- ಧರ್ಮರಾಜನನ್ನು ಹೊರತು ಭೀಮಸೇನ ಮೊದಲಾದವರೆಲ್ಲ ಉದಿಸುವ ರವಿಯಂತೆ ಹೊಳೆಯುವ ಅಪಾರ ಪ್ರಮಾಣದ ಚಿನ್ನವನ್ನು ಯಜ್ಞಕ್ಕೆಂದು ಹೊತ್ತರು.

### ಉದಂಕಮೇಘಗಳು

**ತದೈವ ವಾಸುದೇವೋಽಪಿ ಸಭಾರ್ಯಃ ಸಹ ಭದ್ರಯಾ ।**
**ಆಗಚ್ಛದ್ಧಸ್ತಿನಪುರಂ ಪಥ್ಯುದಂಕೇನ ಪೂಜಿತಃ ॥ ೮೫ ॥**

ತದಾ ಏವ ವಾಸುದೇವಃ ಅಪಿ ಸಭಾರ್ಯಃ ಸಹ ಭದ್ರಯಾ । ಆಗಚ್ಛತ್ ಹಸ್ತಿನಪುರಂ ಪಥಿ ಉದಂಕೇನ ಪೂಜಿತಃ ॥ ೮೫ ॥

**ಅರ್ಥ** :- **ತದಾ ಏವ** = ಆಗಲೇ **ಸಭಾರ್ಯಃ** = ಪತ್ನಿಯರಿಂದೊಡಗೂಡಿದ **ವಾಸುದೇವಃ ಅಪಿ** = ಕೃಷ್ಣನೂ ಸಹ **ಭದ್ರಯಾ ಸಹ** = ಸುಭದ್ರೆಯಿಂದ ಕೂಡಿಕೊಂಡವನಾಗಿ **ಪಥಿ** = ದಾರಿಯಲ್ಲಿ **ಉದಂಕೇನ** = ಉದಂಕನಿಂದ **ಪೂಜಿತಃ (ಸನ್)** = ಪೂಜಿತನಾಗಿ **ಹಸ್ತಿನಪುರಂ** = ಹಸ್ತಿನಪುರವನ್ನು ಕುರಿತು **ಆಗಚ್ಛತ್** = ಬಂದನು.

**ತಾತ್ಪರ್ಯ** :- ಆಗಲೇ ಶ್ರೀಕೃಷ್ಣ ಸಪತ್ನೀಕನಾಗಿ ಸುಭದ್ರೆಯೊಂದಿಗೆ ಹಸ್ತಿನಾಪುರಕ್ಕೆ ಆಗಮಿಸುತ್ತಾ ದಾರಿಯಲ್ಲಿ ಉದಂಕನಿಂದ ಪೂಜಿತನಾದ.

**ತತ್ಕಾಮವರ್ಷಿಣೋ ಮೇಘಾಂಸ್ತಸ್ಯ ದತ್ತ್ವೋದಕಾರ್ಥಿನಃ ।**
**ಸಫಲಂ ಸ್ವವರಂ ಕೃತ್ವಾ ಜಗಾಮ ಗಜಸಾಹ್ವಯಮ್ ॥ ೮೬ ॥**

**ತತ್ಕಾಮವರ್ಷಿಣಃ ಮೇಘಾನ್ ತಸ್ಯ ದತ್ವಾ ಉದಕಾರ್ಥಿನಃ । ಸಫಲಂ ಸ್ವವರಂ ಕೃತ್ವಾ ಜಗಾಮ ಗಜಸಾಹ್ವಯಮ್ ॥ ೮೬ ॥**

**ಅರ್ಥ** :- **ಉದಕಾರ್ಥಿನಃ** = ನೀರನ್ನು ಬಯಸಿದ್ದ **ತಸ್ಯ** = ಆ ಉದಂಕನಿಗೆ **ತತ್ಕಾಮವರ್ಷಿಣಃ** = ಅವನು ಬಯಸಿದಂತೆ ಮಳೆಗರೆಯುವ **ಮೇಘಾನ್** = ಮೋಡಗಳನ್ನು **ದತ್ವಾ** = ನೀಡಿ **ಸ್ವವರಂ** = ತನ್ನ ವರವನ್ನು **ಸಫಲಂ** = ಸಫಲವನ್ನಾಗಿ **ಕೃತ್ವಾ** = ಮಾಡಿ **ಗಜಸಾಹ್ವಯಂ** = ಹಸ್ತಿನಾಪುರಕ್ಕೆ **ಜಗಾಮ** = ತೆರಳಿದ.

**ತಾತ್ಪರ್ಯ** :- ನೀರನ್ನು ಬಯಸಿದ ಅವನಿಗೆ ಯಥೇಚ್ಛವಾಗಿ ಮಳೆ ನೀಡುವ ಮೋಡಗಳನ್ನು ಇತ್ತು ತನ್ನ ವರವನ್ನು ಸಫಲವನ್ನಾಗಿ ಮಾಡಿ ಶ್ರೀಕೃಷ್ಣ ಹಸ್ತಿನಾಪುರಕ್ಕೆ ನಡೆದ.

**ಆಸನ್ನೇಷ್ವೇವ ಪಾರ್ಥೇಷು ವ್ಯಾಸೇ ಚ ಪುರುಷೋತ್ತಮೇ ।**
**ಪ್ರವಿವೇಶ ಪುರಂ ಕೃಷ್ಣಸ್ತದಾಽಸೂತೋತ್ತರಾ ಮೃತಮ್ ॥ ೮೭ ॥**

**ಆಸನ್ನೇಷು ಏವ ಪಾರ್ಥೇಷು ವ್ಯಾಸೇ ಚ ಪುರುಷೋತ್ತಮೇ । ಪ್ರವಿವೇಶ ಪುರಂ ಕೃಷ್ಣಃ ತದಾ ಅಸೂತ ಉತ್ತರಾ ಮೃತಮ್ ॥ ೮೭ ॥**

**ಅರ್ಥ** :- **ಪಾರ್ಥೇಷು** = ಪಾಂಡವರು **ಚ** = ಮತ್ತು **ಪುರುಷೋತ್ತಮೇ** = ಪುರುಷೋತ್ತಮರಾದ **ವ್ಯಾಸೇ** = ವೇದವ್ಯಾಸರು **ಆಸನ್ನೇಷು** (ಸತ್ಸು) **ಏವ** = (ಹಸ್ತಿನಪುರವನ್ನು) ಸಮೀಪಿಸುತ್ತಿರುವಾಗಲೇ **ಕೃಷ್ಣಃ** = ಕೃಷ್ಣನು **ಪುರಂ** = ಹಸ್ತಿನಾಪುರವನ್ನು **ಪ್ರವಿವೇಶ** = ಪ್ರವೇಶಿಸಿದ. **ತದಾ** = ಆಗ **ಉತ್ತರಾ** = ಉತ್ತರೆಯು **ಮೃತಂ** = ಮೃತಶಿಶುವನ್ನು **ಅಸೂತ** = ಹೆತ್ತಳು.

**ತಾತ್ಪರ್ಯ** :- ಪುರುಷೋತ್ತಮನಾದ ಶ್ರೀವೇದವ್ಯಾಸರು, ಪಾಂಡವರು ಹಸ್ತಿನಾಪುರವನ್ನು ಸಮೀಪಿಸುತ್ತಿರುವಾಗಲೇ ಶ್ರೀಕೃಷ್ಣ ಹಸ್ತಿನಾಪುರವನ್ನು ಪ್ರವೇಶಿಸಿದ. ಆಗ ಉತ್ತರೆ ಮೃತ ಶಿಶುವನ್ನು ಹೆತ್ತಳು.

ಪರೀಕ್ಷಿದ್ರಾಜ ಬದುಕಿದ

**ದ್ರೌಣ್ಯಸ್ತ್ರಸೂದಿತಂ ಬಾಲಂ ದೃಷ್ಟ್ವಾ ಕುಂತ್ಯಾದಿಕಾಃ ಸ್ತ್ರಿಯಃ ।**
**ಶರಣ್ಯಂ ಶರಣಂ ಜಗ್ಮುರ್ವಾಸುದೇವಂ ಜಗತ್ಪತಿಮ್ ॥ ೮೮ ॥**

ದ್ರೌಣ್ಯಸ್ತ್ರಸೂದಿತಂ ಬಾಲಂ ದೃಷ್ಟ್ವಾ ಕುಂತ್ಯಾದಿಕಾಃ ಸ್ತ್ರಿಯಃ । ಶರಣ್ಯಂ ಶರಣಂ ಜಗ್ಮುಃ ವಾಸುದೇವಂ ಜಗತ್ಪತಿಮ್ ॥ ೮೮ ॥

**ಅರ್ಥ** :- **ದ್ರೌಣ್ಯಸ್ತ್ರಸೂದಿತಂ** = ದ್ರೋಣಪುತ್ರನಾದ ಅಶ್ವತ್ಥಾಮನ ಅಸ್ತ್ರದಿಂದಾಗಿ ಮೃತನಾದ **ಬಾಲಂ** = ಶಿಶುವನ್ನು **ದೃಷ್ಟ್ವಾ** = ನೋಡಿ **ಕುಂತ್ಯಾದಿಕಾಃ** = ಕುಂತೀ ಮೊದಲಾದ **ಸ್ತ್ರಿಯಃ** = ಸ್ತ್ರೀಯರು **ಶರಣ್ಯಂ** = ರಕ್ಷಕನಾದ **ಜಗತ್ಪತಿಂ** = ಜಗತ್ತಿನ ಸ್ವಾಮಿಯಾದ **ವಾಸುದೇವಂ** = ಕೃಷ್ಣನನ್ನು **ಶರಣಂ ಜಗ್ಮುಃ** = ಶರಣುಹೊಕ್ಕರು.

**ತಾತ್ಪರ್ಯ** :- ಅಶ್ವತ್ಥಾಮರ ಅಸ್ತ್ರದಿಂದಾಗಿ ಸತ್ತಿದ್ದ ಶಿಶುವನ್ನು ಕಂಡು ಕುಂತಿ ಮೊದಲಾದ ಸ್ತ್ರೀಯರು ಸರ್ವರಕ್ಷಕನೂ ಜಗತ್ಪತಿಯೂ ಆದ ಶ್ರೀಕೃಷ್ಣನನ್ನು ಶರಣುಹೊಕ್ಕರು.

**ಪ್ರತ್ಯಕ್ಷಮಾತ್ಮನಾ ಗರ್ಭೇ ರಕ್ಷಿತಂ ಪ್ರಸವೇ ಹತಮ್ ।**
**ಪುನರುಜ್ಜೀವಯಾಮಾಸ ಕೇಶವಃ ಪಾರ್ಥತಂತವೇ ॥ ೮೯ ॥**

ಪ್ರತ್ಯಕ್ಷಂ ಆತ್ಮನಾ ಗರ್ಭೇ ರಕ್ಷಿತಂ ಪ್ರಸವೇ ಹತಮ್ । ಪುನಃ ಉಜ್ಜೀವಯಾಮಾಸ ಕೇಶವಃ ಪಾರ್ಥತಂತವೇ ॥ ೮೯ ॥

**ಅರ್ಥ** :- **ಗರ್ಭೇ** = ಗರ್ಭದಲ್ಲಿ **ಆತ್ಮನಾ** = ತನ್ನಿಂದ **ಪ್ರತ್ಯಕ್ಷಂ** = ಪ್ರತ್ಯಕ್ಷವಾಗಿ **ರಕ್ಷಿತಂ** = ರಕ್ಷಿಸಿದ್ದ **ಪ್ರಸವೇ** = ಪ್ರಸವಕಾಲದಲ್ಲಿ **ಹತಂ** = ಹತನಾಗಿದ್ದ **(ಬಾಲಂ)** = ಶಿಶುವನ್ನು **ಕೇಶವಃ** = ಕೃಷ್ಣನು **ಪಾರ್ಥತಂತವೇ** = ಪಾಂಡವರ ಸಂತತಿಗೆಂದು **ಪುನಃ** = ಮರಳಿ **ಉಜ್ಜೀವಯಾಮಾಸ** = ಬದುಕಿಸಿದ.

**ತಾತ್ಪರ್ಯ** :- ಗರ್ಭದಲ್ಲಿ ಪ್ರತ್ಯಕ್ಷವಾಗಿ ತಾನೇ ರಕ್ಷಿಸಿದ್ದ, ಪ್ರಸವ ಕಾಲದಲ್ಲಿ ಹತವಾಗಿದ್ದ ಅದನ್ನು ಕೃಷ್ಣ ಪಾಂಡವರ ಸಂತತಿಗೆಂದು ಮರಳಿ ಬದುಕಿಸಿದ.

### ಪಾಂಡವರ ಹಸ್ತಿನಾಪುರಪ್ರವೇಶ

**ತದ್ಯೈವ ವಿವಿಶುಃ ಪಾರ್ಥಾಃ ಸಕೃಷ್ಣಾಃ ಸಧನೋಚ್ಚಯಾಃ ।**
**ಸರ್ವೇ ಮುಮುದಿರೇ ದೃಷ್ಟ್ವಾ ಪೌತ್ರಂ ಕೇಶವರಕ್ಷಿತಮ್ ॥ ೯೦ ॥**

ತದಾ ಏವ ವಿವಿಶುಃ ಪಾರ್ಥಾಃ ಸಕೃಷ್ಣಾಃ ಸಧನೋಚ್ಚಯಾಃ । ಸರ್ವೇ ಮುಮುದಿರೇ ದೃಷ್ಟ್ವಾ ಪೌತ್ರಂ ಕೇಶವರಕ್ಷಿತಮ್ ॥ ೯೦ ॥

**ಅರ್ಥ** :- **ತದಾ ಏವ** = ಆಗಲೇ **ಸಕೃಷ್ಣಾಃ** = ವಾಸಿಷ್ಠಕೃಷ್ಣರಾದ ವೇದವ್ಯಾಸರಿಂದ ಸಹಿತರಾದ **ಪಾರ್ಥಾಃ** = ಪಾಂಡವರು **ಸಧನೋಚ್ಚಯಾಃ** = ಬಹುವಾದ ಧನದೊಂದಿಗೆ **ವಿವಿಶುಃ** = ಪ್ರವೇಶಿಸಿದರು. **ಸರ್ವೇ** = ಎಲ್ಲರೂ **ಕೇಶವರಕ್ಷಿತಂ** = ಕೃಷ್ಣನಿಂದ ರಕ್ಷಿತನಾದ **ಪೌತ್ರಂ** = ಮೊಮ್ಮಗನನ್ನು **ದೃಷ್ಟ್ವಾ** = ನೋಡಿ **ಮುಮುದಿರೇ** = ಆನಂದಿಸಿದರು.

**ತಾತ್ಪರ್ಯ** :- ಆಗಲೇ ವೇದವ್ಯಾಸರೊಂದಿಗೆ ಪಾಂಡವರು ಅಪಾರ ಧನರಾಶಿಯಿಂದ ಕೂಡಿದವರಾಗಿ ಪಟ್ಟಣವನ್ನು ಪ್ರವೇಶಿಸಿದರು. ಅವರು ತಮ್ಮ ಮೊಮ್ಮಗ ಕೃಷ್ಣನಿಂದ ರಕ್ಷಿತನಾದುದನ್ನು ಕಂಡು ಆನಂದಿತರಾದರು.

**ದದೌ ದಾನಾನಿ ಬಹುಶೋ ಧರ್ಮಪುತ್ರೋ ಯುಧಿಷ್ಠಿರಃ ।**
**ಪೌತ್ರಜನ್ಮನಿ ಹೃಷ್ಟಾತ್ಮಾ ವಾಸುದೇವಂ ನನಾಮ ಚ ॥ ೯೧ ॥**

ದದೌ ದಾನಾನಿ ಬಹುಶಃ ಧರ್ಮಪುತ್ರಃ ಯುಧಿಷ್ಠಿರಃ । ಪೌತ್ರಜನ್ಮನಿ ಹೃಷ್ಟಾತ್ಮಾ ವಾಸುದೇವಂ ನನಾಮ ಚ ॥ ೯೧ ॥

**ಅರ್ಥ** :- **ಪೌತ್ರಜನ್ಮನಿ** = ಮೊಮ್ಮಗನ ಜನನದಿಂದಾಗಿ **ಹೃಷ್ಟಾತ್ಮಾ** = ಹರ್ಷಿತನಾದ **ಧರ್ಮಪುತ್ರಃ** = ಯಮಧರ್ಮನ ಮಗನಾದ **ಯುಧಿಷ್ಠಿರಃ** = ಯುಧಿಷ್ಠಿರನು **ಬಹುಶಃ** = ಬಹಳವಾಗಿ **ದಾನಾನಿ** = ದಾನಗಳನ್ನು **ದದೌ** = ನೀಡಿದನು **ಚ** = ಮತ್ತು **ವಾಸುದೇವಂ** = ಕೃಷ್ಣನನ್ನು **ನನಾಮ** = ನಮಿಸಿದ.

**ತಾತ್ಪರ್ಯ** :- ಧರ್ಮತನಯನಾದ ಯುಧಿಷ್ಠಿರ ಮೊಮ್ಮಗನ ಜನನದಿಂದ ಹರ್ಷಿತನಾಗಿ ಬಹುಬಗೆಯ ದಾನಗಳನ್ನು ನೀಡಿದ. ಶ್ರೀಕೃಷ್ಣನನ್ನು ವಂದಿಸಿದ.

**ಕುಂತೀಕೃಷ್ಣಾಸುಭದ್ರಾಭಿರ್ವೈರಾಟ್ಯಾಽನ್ಯಾಭಿರೇವ ಚ ।**
**ಪಾಂಡವೈಃ ಪುರುಷೈಶ್ಚಾನ್ಯೈಃ ಸಂಸ್ತುತಃ ಪ್ರಣತೋ ಹರಿಃ ॥ ೯೨ ॥**

ಕುಂತೀಕೃಷ್ಣಾಸುಭದ್ರಾಭಿಃ ವೈರಾಟ್ಯಾ ಅನ್ಯಾಭಿಃ ಏವ ಚ । ಪಾಂಡವೈಃ ಪುರುಷೈಃ ಚ ಅನ್ಯೈಃ ಸಂಸ್ತುತಃ ಪ್ರಣತಃ ಹರಿಃ ॥ ೯೨ ॥

**ಅರ್ಥ** :– **ಕುಂತೀಕೃಷ್ಣಾಸುಭದ್ರಾಭಿಃ** = ಕುಂತೀ, ದ್ರೌಪದೀ, ಸುಭದ್ರೆಯರಿಂದ **ವೈರಾಟ್ಯಾ** = ವಿರಾಟನ ಪುತ್ರಿಯಾದ ಉತ್ತರೆಯಿಂದ **ಚ** = ಮತ್ತು **ಅನ್ಯಾಭಿಃ** = ಇತರ ಸ್ತ್ರೀಯರಿಂದ **ಪಾಂಡವೈಃ** = ಪಾಂಡವರಿಂದ **ಚ** = ಮತ್ತು **ಅನ್ಯೈಃ** = ಇತರ **ಪುರುಷೈಃ** = ಪುರುಷರಿಂದ **ಹರಿಃ** = ಹರಿಯು **ಸಂಸ್ತುತಃ** = ಚೆನ್ನಾಗಿ ಸ್ತುತಿಸಲ್ಪಟ್ಟ **ಪ್ರಣತಃ** = ಚೆನ್ನಾಗಿ ನಮಸ್ಕರಿಸಲ್ಪಟ್ಟ

**ತಾತ್ಪರ್ಯ** :- ಕುಂತಿ, ದ್ರೌಪದಿ, ಸುಭದ್ರೆಯರಿಂದಲೂ, ಉತ್ತರೆಯಿಂದಲೂ, ಇತರ ಸ್ತ್ರೀಯರಿಂದಲೂ, ಪಾಂಡವರಿಂದಲೂ, ಇತರ ಪುರುಷರಿಂದಲೂ ಕೃಷ್ಣ ಸಂಸ್ತುತನಾದ, ನಮಸ್ಕೃತನಾದ.

### ಅಶ್ವಮೇಧದ ಆರಂಭ

**ತತಃ ಕೃಷ್ಣಾಭ್ಯನುಜ್ಞಾತಾಃ ಪಾರಾಶರ್ಯಸದಸ್ಯಕಾಃ ।**
**ಆರೇಭಿರೇಽಶ್ವಮೇಧಂ ತೇ ಮುನಿಭಿರ್ಬ್ರಹ್ಮವಾದಿಭಿಃ ॥ ೯೩ ॥**

ತತಃ ಕೃಷ್ಣಾಭ್ಯನುಜ್ಞಾತಾಃ ಪಾರಾಶರ್ಯಸದಸ್ಯಕಾಃ । ಆರೇಭಿರೇ ಅಶ್ವಮೇಧಂ ತೇ ಮುನಿಭಿಃ ಬ್ರಹ್ಮವಾದಿಭಿಃ ॥ ೯೩ ॥

**ಅರ್ಥ** :– **ತತಃ** = ಬಳಿಕ **ಪಾರಾಶರ್ಯಸದಸ್ಯಕಾಃ** = ಪರಾಶರರ ಪುತ್ರರಾದ ವೇದವ್ಯಾಸರನ್ನು ಸಭಾಧ್ಯಕ್ಷರನ್ನಾಗಿ ಹೊಂದಿದ **ತೇ** = ಪಾಂಡವರು **ಕೃಷ್ಣಾಭ್ಯನುಜ್ಞಾತಾಃ (ಸಂತಃ)** = ಕೃಷ್ಣನಿಂದ ಅಪ್ಪಣೆ ಪಡೆದವರಾಗಿ **ಬ್ರಹ್ಮವಾದಿಭಿಃ** = ಬ್ರಹ್ಮವಾದಿಗಳಾದ **ಮುನಿಭಿಃ** =

ಮುನಿಗಳೊಂದಿಗೆ **ಅಶ್ವಮೇಧಂ** = ಅಶ್ವಮೇಧವನ್ನು **ಆರೇಭಿರೇ** = ಆರಂಭಿಸಿದರು.

ಬಳಿಕ ಕೃಷ್ಣನಿಂದ ಅನುಮತಿ ಪಡೆದು ವೇದವ್ಯಾಸರನ್ನು ಸಭಾಧ್ಯಕ್ಷರನ್ನಾಗಿ ಮಾಡಿಕೊಂಡು ಪಾಂಡವರು ಬ್ರಹ್ಮವಾದಿಗಳಾದ ಮುನಿಗಳೊಂದಿಗೆ ಅಶ್ವಮೇಧವನ್ನು ಪ್ರಾರಂಭಿಸಿದರು.

**ಸರ್ವಯಜ್ಞಾತ್ಮಕಂ ತೇಷಾಮಶ್ವಮೇಧಂ ಜಗತ್ಪತಿಃ ।**
**ಕಾರಯಾಮಾಸ ಭಗವಾನ್ ಕೃಷ್ಣದ್ವೈಪಾಯನಃ ಸ್ವಯಮ್ ॥ ೯೪ ॥**

ಸರ್ವಯಜ್ಞಾತ್ಮಕಂ ತೇಷಾಂ ಅಶ್ವಮೇಧಂ ಜಗತ್ಪತಿಃ । ಕಾರಯಾಮಾಸ ಭಗವಾನ್ ಕೃಷ್ಣದ್ವೈಪಾಯನಃ ಸ್ವಯಮ್ ॥ ೯೪ ॥

**ಅರ್ಥ** :– **ಭಗವಾನ್** = ಭಗವಂತನೂ **ಜಗತ್ಪತಿಃ** = ಜಗತ್ತಿನ ಒಡೆಯನೂ ಆದ **ಕೃಷ್ಣದ್ವೈಪಾಯನಃ** = ವೇದವ್ಯಾಸರು **ಸ್ವಯಂ** = ಸ್ವತಃ **ತೇಷಾಂ** = ಅವರ (ಪಾಂಡವರ) **ಅಶ್ವಮೇಧಂ** = ಅಶ್ವಮೇಧ (ಯಜ್ಞ)ವನ್ನು **ಸರ್ವಯಜ್ಞಾತ್ಮಕಂ** = ಎಲ್ಲ ಯಜ್ಞ ಸ್ವರೂಪದ್ದನ್ನಾಗಿ **ಕಾರಯಾಮಾಸ** = ಮಾಡಿಸಿದರು.

**ತಾತ್ಪರ್ಯ** :- ಭಗವಂತನೂ, ಜಗದೊಡೆಯನೂ ಆದ ಸ್ವಯಂ ಶ್ರೀವೇದವ್ಯಾಸರು ಸಕಲ ಯಜ್ಞಾತ್ಮಕವಾಗುವಂತೆ ಆ ಅಶ್ವಮೇಧಯಾಗವನ್ನು ಮಾಡಿಸಿದರು.

ಯಜ್ಞಸಾಧನೆಗಳನ್ನು ಪೂರೈಸಿದ ಭೀಮಸೇನ

**ಸಾಧನಾನಿ ತು ಸರ್ವಾಣಿ ಶಾಲಾಂ ಚೈವ ಹಿರಣ್ಮಯೀಮ್ ।**
**ಪವಮಾನಸುತಶ್ಚಕ್ರೇ ಕೃಷ್ಣದ್ವೈಪಾಯನೇರಿತಃ ॥ ೯೫ ॥**

ಸಾಧನಾನಿ ತು ಸರ್ವಾಣಿ ಶಾಲಾಂ ಚ ಏವ ಹಿರಣ್ಮಯೀಮ್ । ಪವಮಾನಸುತಃ ಚಕ್ರೇ ಕೃಷ್ಣದ್ವೈಪಾಯನೇರಿತಃ ॥ ೯೫ ॥

**ಅರ್ಥ** :– **ಕೃಷ್ಣದ್ವೈಪಾಯನೇರಿತಃ** = ವೇದವ್ಯಾಸರಿಂದ ಪ್ರೇರಿತನಾದ **ಪವಮಾನಸುತಃ** = ವಾಯುಪುತ್ರನಾದ ಭೀಮಸೇನನು **ಸರ್ವಾಣಿ** =

ಎಲ್ಲಾ **ಸಾಧನಾನಿ ತು** = ಯಜ್ಞಸಾಧನಗಳನ್ನಾದರೋ **ಚ** = ಮತ್ತು **ಶಾಲಾಂ ಏವ** = ಯಾಗಶಾಲೆಯನ್ನೇ **ಹಿರಣ್ಮಯೀಂ** = ಸುವರ್ಣ ಮಯವನ್ನಾಗಿ **ಚಕ್ರೇ** = ಮಾಡಿದ.

**ತಾತ್ಪರ್ಯ** :- ಸಕಲಯಜ್ಞಸಾಧನಗಳನ್ನು, ಚಿನ್ನದ ಯಾಗಶಾಲೆಯನ್ನು ವೇದವ್ಯಾಸರ ಆದೇಶದಂತೆ ಭೀಮಸೇನ ಸಿದ್ಧಪಡಿಸಿದ.

**ಅಶ್ವಮೇಧದ ಕುದುರೆಯ ಹಿಂದೆ ಅರ್ಜುನ**

**ಅಥಾನುಮಂತ್ರಿತೋತ್ಸೃಷ್ಟಂ ಪುರೋಹಿತಪುರಸ್ಕೃತಮ್ ।**
**ತುರಂಗಂ ಕೃಷ್ಣಸಾರಂಗಮನುವವ್ರಾಜ ವಾಸವಿಃ॥ ೯೬ ॥**

**ಅಥ ಅನುಮಂತ್ರಿತೋತ್ಸೃಷ್ಟಂ ಪುರೋಹಿತಪುರಸ್ಕೃತಮ್ । ತುರಂಗಂ ಕೃಷ್ಣಸಾರಂಗಂ ಅನುವವ್ರಾಜ ವಾಸವಿಃ ॥ ೯೬ ॥**

**ಅರ್ಥ** :- **ಅಥ** = ಬಳಿಕ **ವಾಸವಿಃ** = ಇಂದ್ರಪುತ್ರನಾದ ಅರ್ಜುನನು **ಅನುಮಂತ್ರಿತೋತ್ಸೃಷ್ಟಂ** = (ಮೊದಲು)ಅನುಮಂತ್ರಿಸಿ, (ಬಳಿಕ)ಹೊರಕ್ಕೆ ಬಿಡಲ್ಪಟ್ಟ, **ಪುರೋಹಿತಪುರಸ್ಕೃತಂ** = ಪುರೋಹಿತರಾದ ಧೌಮ್ಯರನ್ನು ಮುಂದುಮಾಡಿಕೊಂಡ **ಕೃಷ್ಣಸಾರಂಗಂ** = ಕಪ್ಪು ಮತ್ತು ನಾನಾ ಬಣ್ಣಗಳ **ತುರಂಗಂ** = ಕುದುರೆಯನ್ನು **ಅನುವವ್ರಾಜ** = ಹಿಂಬಾಲಿಸಿ ನಡೆದ.

**ತಾತ್ಪರ್ಯ** :- ಬಳಿಕ ಪಾಂಡವರು ಕಪ್ಪು ಮತ್ತು ಚಿತ್ರವರ್ಣಗಳ ಕುದುರೆಯನ್ನು ಅಭಿಮಂತ್ರಿಸಿ ಬಿಟ್ಟರು. ಅರ್ಜುನ ಪುರೋಹಿತರಾದ ಧೌಮ್ಯರನ್ನು ಮುಂದಿರಿಸಿಕೊಂಡು ಆ ಅಶ್ವವನ್ನು ಹಿಂಬಾಲಿಸಿದ.

**ಸ ಜಿತ್ವಾ ರುಂಧತಃ ಸರ್ವಾನ್ ನೃಪತೀಂಛಸ್ತ್ರತೇಜಸಾ ।**
**ಚಾರಯಾಮಾಸ ಸರ್ವೇಷು ರಾಷ್ಟ್ರೇಷ್ವವಿಜಿತೋಽರಿಭಿಃ ॥ ೯೭ ॥**

**ಸಃ ಜಿತ್ವಾ ರುಂಧತಃ ಸರ್ವಾನ್ ನೃಪತೀನ್ ಶಸ್ತ್ರತೇಜಸಾ । ಚಾರಯಾಮಾಸ ಸರ್ವೇಷು ರಾಷ್ಟ್ರೇಷು ಅವಿಜಿತಃ ಅರಿಭಿಃ ॥ ೯೭ ॥**

**ಅರ್ಥ** :- **ಅರಿಭಿಃ** = ಶತ್ರುಗಳಿಂದ **ಅವಿಜಿತಃ** = ಪರಾಜಿತನಾಗದ **ಸಃ** = ಅವನು **ರುಂಧತಃ** = (ಕುದುರೆಯನ್ನು) ತಡೆಹಿಡಿದ **ಸರ್ವಾನ್**

= ಎಲ್ಲಾ **ನೃಪತೀನ್** = ರಾಜರನ್ನು **ಶಸ್ತ್ರತೇಜಸಾ** = ಶಸ್ತ್ರದ ತೇಜಸ್ಸಿನಿಂದ **ಜಿತ್ವಾ** = ಜಯಿಸಿ, **ಸರ್ವೇಷು** = ಎಲ್ಲ **ರಾಷ್ಟ್ರೇಷು** = ರಾಷ್ಟ್ರಗಳಲ್ಲೂ **ಚಾರಯಾಮಾಸ** = (ಕುದುರೆಯನ್ನು) ಓಡಾಡಿಸಿದ.

**ತಾತ್ಪರ್ಯ** :- ಅರ್ಜುನನು ತಡೆದ ಸಕಲ ರಾಜರುಗಳನ್ನೂ ಶಸ್ತ್ರದ ಬಲದಿಂದ ಜಯಿಸಿ ಸಕಲ ರಾಷ್ಟ್ರಗಳಲ್ಲೂ ಶತ್ರುಗಳಿಗೆ ಅಜೇಯನಾಗಿ ಆ ಕುದುರೆಯನ್ನು ಓಡಾಡಿಸಿದ.

### ಒಬ್ಬರನ್ನೂ ಕೊಲ್ಲದ ಅರ್ಜುನ

**ಯುಧಿಷ್ಠಿರಾಜ್ಞಯಾ ತೇನ ನ ಕಶ್ಚಿನ್ನಿಹತಸ್ತದಾ ।**
**ಆಹೂತಾಶ್ಚ ನೃಪಾಸ್ತೇನ ಯಜ್ಞಾರ್ಥಂ ಪ್ರೀಯತಾಽಖಿಲಾಃ ॥ ೯೮ ॥**

**ಯುಧಿಷ್ಠಿರಾಜ್ಞಯಾ ತೇನ ನ ಕಶ್ಚಿತ್ ನಿಹತಃ ತದಾ । ಆಹೂತಾಃ ಚ ನೃಪಾಃ ತೇನ ಯಜ್ಞಾರ್ಥಂ ಪ್ರೀಯತಾ ಅಖಿಲಾಃ ॥ ೯೮ ॥**

**ಅರ್ಥ** :– **ಯುಧಿಷ್ಠಿರಾಜ್ಞಯಾ** = ಧರ್ಮರಾಜನ ಆಜ್ಞೆಯಿಂದಾಗಿ **ತೇನ** = ಅವನಿಂದ **ತದಾ** = ಆಗ **ಕಶ್ಚಿತ್** = ಯಾವನೂ **ನ ನಿಹತಃ** = ಕೊಲ್ಲಲ್ಪಡಲಿಲ್ಲ. **ಚ** = ಮತ್ತು **ಪ್ರೀಯತಾ** = ಪ್ರೀತಿಯುಳ್ಳ **ತೇನ** = ಅವನಿಂದ **ಅಖಿಲಾಃ** = ಎಲ್ಲಾ **ನೃಪಾಃ** = ರಾಜರೂ **ಯಜ್ಞಾರ್ಥಂ** = ಯಜ್ಞಕ್ಕೋಸ್ಕರ **ಆಹೂತಾಃ** = ಆಹ್ವಾನಿಸಲ್ಪಟ್ಟರು.

**ತಾತ್ಪರ್ಯ** :- ಧರ್ಮರಾಜನ ಆದೇಶದಿಂದಾಗಿ ಅರ್ಜುನ ಆಗ ಯಾರನ್ನೂ ಸಂಹರಿಸಲಿಲ್ಲ. ಅವನು ಪ್ರೀತಿಯಿಂದ ಸಕಲ ರಾಜರುಗಳನ್ನೂ ಯಜ್ಞಕ್ಕೆಂದು ಆಹ್ವಾನಿಸಿದ.

### ಅರ್ಜುನ ಬಭ್ರುವಾಹನರ ಸಮಾಗಮ

**ಮಣಲೂರಂ ಕ್ರಮಾತ್ ಪ್ರಾಪ್ತಸ್ತತ್ರೈನಂ ಬಭ್ರುವಾಹನಃ ।**
**ಅಭ್ಯಯಾದರ್ಘ್ಯಪಾದ್ಯಾದ್ಯೈಸ್ತಮಾಹ ವಿಜಯಃ ಸುತಮ್ ॥ ೯೯ ॥**

**ಮಣಲೂರಂ ಕ್ರಮಾತ್ ಪ್ರಾಪ್ತಃ ತತ್ರ ಏನಂ ಬಭ್ರುವಾಹನಃ । ಅಭ್ಯಯಾತ್ ಅರ್ಘ್ಯಪಾದ್ಯಾದ್ಯೈಃ ತಂ ಆಹ ವಿಜಯಃ ಸುತಮ್ ॥ ೯೯ ॥**

**ಅರ್ಥ** :- **ಕ್ರಮಾತ್** = ಕ್ರಮವಾಗಿ **ಮಣಲೂರಂ** = ಮಣಲೂರನ್ನು **ಪ್ರಾಪ್ತಃ** = ಹೊಂದಿದನು. **ತತ್ರ** = ಅಲ್ಲಿ **ಏನಂ** = ಅವನನ್ನು **ಬಭ್ರುವಾಹನಃ** = ಬಭ್ರುವಾಹನನು **ಅರ್ಘ್ಯಪಾದ್ಯಾದ್ಯೈಃ** = **ಅರ್ಘ್ಯ**-ಪಾದ್ಯಗಳಿಂದ **ಅಭ್ಯಯಾತ್** = ಎದುರುಗೊಂಡ. **ವಿಜಯಃ** = ಅರ್ಜುನನು **ತಂ** = ಆ **ಸುತಂ** = ಮಗನನ್ನು ಕುರಿತು **ಆಹ** = ಹೇಳಿದ.

**ತಾತ್ಪರ್ಯ** :- ಕ್ರಮವಾಗಿ ಅರ್ಜುನ ಮಣಲೂರಿಗೆ ಬಂದಾಗ ಅಲ್ಲಿ ಬಭ್ರುವಾಹನ ಅರ್ಘ್ಯಪಾದ್ಯಾದಿಗಳೊಂದಿಗೆ ಸ್ವಾಗತಿಸಿದ. ಅರ್ಜುನ ಮಗನಾದ ಅವನಿಗೆ ನುಡಿದ -

**ಯೋದ್ಧುಕಾಮೋಽರ್ಘ್ಯಮಾದಾಯ ತ್ವಯಾಽದ್ಯಾಭಿಗತೋ ಹ್ಯಹಮ್ ।**
**ನ ಪ್ರೀಯೇ ಪೌರುಷಂ ಧಿಕ್ ತೇ ಯನ್ಮೇಧ್ಯಾಶ್ವೋ ನ ವಾರಿತಃ ॥ ೧೦೦ ॥**

**ಯೋದ್ಧುಕಾಮಃ ಅರ್ಘ್ಯಂ ಆದಾಯ ತ್ವಯಾ ಅದ್ಯ ಅಭಿಗತಃ ಹಿ ಅಹಮ್ । ನ ಪ್ರೀಯೇ ಪೌರುಷಂ ಧಿಕ್ ತೇ ಯತ್ ಮೇಧ್ಯಾಶ್ವಃ ನ ವಾರಿತಃ ॥ ೧೦೦ ॥**

**ಅರ್ಥ** :- **ಯೋದ್ಧುಕಾಮಃ** = ಯುದ್ಧಮಾಡಲು ಬಯಸಿರುವ **ಅಹಂ** = ನಾನು **ಅದ್ಯ** = ಇಂದು **ತ್ವಯಾ** = ನಿನ್ನಿಂದ **ಅರ್ಘ್ಯಂ** = ಅರ್ಘ್ಯವನ್ನು **ಆದಾಯ** = ತೆಗೆದುಕೊಂಡು **ಅಭಿಗತಃ ಹಿ** = ಎದುರುಗೊಳ್ಳಲ್ಪಟ್ಟಿರುವೆನು. **(ತಸ್ಮಾತ್)** = ಆದ್ದರಿಂದ **ನ ಪ್ರೀಯೇ** = ನಾನು ಪ್ರೀತನಾಗಲಾರೆ. **ಮೇಧ್ಯಾಶ್ವಃ** = ಯಜ್ಞಾರ್ಹವಾದ ಕುದುರೆಯು **ಯತ್** = ಯಾವ ಕಾರಣದಿಂದ **ನ ವಾರಿತಃ** = ತಡೆಯಲ್ಪಡಲಿಲ್ಲವೋ, **(ತಸ್ಮಾತ್)** = ಆ ಕಾರಣದಿಂದ **ತೇ** = ನಿನ್ನ **ಪೌರುಷಂ** = ಪೌರುಷಕ್ಕೆ **ಧಿಕ್** = ಧಿಕ್ಕಾರ.

**ತಾತ್ಪರ್ಯ** :- ''ಯುದ್ಧ ಬಯಸಿ ಬಂದಿರುವ ನನ್ನನ್ನು ನೀನು ಅರ್ಘ್ಯವನ್ನು ಹಿಡಿದು ಸ್ವಾಗತಿಸುತ್ತಿರುವಿ. ಇದು ನನಗೆ ಪ್ರಿಯವಲ್ಲ, ನನ್ನ ಯಜ್ಞದ ಕುದುರೆಯನ್ನು ನೀನು ತಡೆಯಲಿಲ್ಲ, ನಿನ್ನ ಪೌರುಷಕ್ಕೆ ಧಿಕ್ಕಾರ''.

ಅರ್ಜುನನೊಂದಿಗೆ ಯುದ್ಧ ಮಾಡಲು ಉಲೂಪಿಯ ಪ್ರಚೋದನೆ

**ತದಾಽಪಿ ಪಿತೃಭಕ್ತ್ಯೈನಮಯುಧ್ಯಂತಮುಲೂಪಿಕಾ ।**
**ಪ್ರಾಹ ಯುಧ್ಯಸ್ವ ಯತ್ಪ್ರೀತ್ಯೈ ಗುರೋಃ ಕಾರ್ಯಮಸಂಶಯಮ್ ॥ ೧೦೧ ॥**

**ತದಾ ಅಪಿ ಪಿತೃಭಕ್ತ್ಯಾ ಏನಂ ಅಯುಧ್ಯಂತಂ ಉಲೂಪಿಕಾ । ಪ್ರಾಹ ಯುಧ್ಯಸ್ವ ಯತ್ ಪ್ರೀತ್ಯೈ ಗುರೋಃ ಕಾರ್ಯಂ ಅಸಂಶಯಮ್ ॥ ೧೦೧ ॥**

**ಅರ್ಥ** :- **ತದಾ ಅಪಿ** = ಆಗಲೂ ಸಹ **ಪಿತೃಭಕ್ತ್ಯಾ** = ತಂದೆಯ ಮೇಲಿನ ಭಕ್ತಿಯಿಂದ **ಅಯುಧ್ಯಂತಂ** = ಯುದ್ಧವನ್ನು ಮಾಡದಿರುವ **ಏನಂ** = ಇವನನ್ನು ಕುರಿತು **ಉಲೂಪಿಕಾ** = ಉಲೂಪಿಯು **ಪ್ರಾಹ** = ಹೇಳಿದಳು - **ಯುಧ್ಯಸ್ವ** = ಯುದ್ಧ ಮಾಡು, **ಯತ್** = ಯಾವ ಕರ್ಮವು **ಗುರೋಃ** = ಗುರುವಿನ (ತಂದೆಯ) **ಪ್ರೀತ್ಯೈ** = ಪ್ರೀತಿಗಾಗಿಯೋ (**ತತ್**) = ಅದು **ಅಸಂಶಯಂ** = ಸಂಶಯವಿಲ್ಲದೇ **ಕಾರ್ಯಂ** = ಮಾಡಲ್ಪಡಬೇಕು.

**ತಾತ್ಪರ್ಯ** :- ಆಗಲೂ ಪಿತೃಭಕ್ತಿಯಿಂದ ಬಭ್ರುವಾಹನ ಯುದ್ಧಕ್ಕೆ ತೊಡಗದಿರಲು ಉಲೂಪಿ ಹೇಳಿದಳು "ತಂದೆಗೆ ಯಾವುದು ಪ್ರಿಯವೋ ಅದನ್ನೇ ಮಾಡಬೇಕು ; ಇದರಲ್ಲಿ ಸಂಶಯವಿಲ್ಲ. ಆದ್ದರಿಂದ ಯುದ್ಧಮಾಡು".

**ಪ್ರೀಣನಾಯೈವ ಯುಧ್ಯಸ್ವ ಪಿತ್ರೇ ಸಂದರ್ಶಯನ್ ಬಲಮ್ ।**
**ಇತ್ಯುಕ್ತೋ ಯುಯುಧೇ ಪಿತ್ರಾ ಬಲಂ ಸರ್ವಂ ಪ್ರದರ್ಶಯನ್ ॥೧೦೨॥**

**ಪ್ರೀಣನಾಯ ಏವ ಯುಧ್ಯಸ್ವ ಪಿತ್ರೇ ಸಂದರ್ಶಯನ್ ಬಲಮ್ । ಇತಿ ಉಕ್ತಃ ಯುಯುಧೇ ಪಿತ್ರಾ ಬಲಂ ಸರ್ವಂ ಪ್ರದರ್ಶಯನ್ ॥ ೧೦೨ ॥**

**ಅರ್ಥ** :- **ಪ್ರೀಣನಾಯ ಏವ** = ಪ್ರೀತಿಪಡಿಸಲೆಂದೇ **ಪಿತ್ರೇ** = ತಂದೆಗೆ **ಬಲಂ** = ಬಲವನ್ನು **ಸಂದರ್ಶಯನ್** = ತೋರಿಸುತ್ತಾ **ಯುಧ್ಯಸ್ವ** = ಯುದ್ಧಮಾಡು. **ಇತಿ** = ಹೀಗೆ **ಉಕ್ತಃ** = ಹೇಳಲ್ಪಟ್ಟ ಬಭ್ರುವಾಹನನು **ಸರ್ವಂ** = ಎಲ್ಲಾ **ಬಲಂ** = ಬಲವನ್ನು **ಪ್ರದರ್ಶಯನ್** = ಚೆನ್ನಾಗಿ ತೋರಿಸುತ್ತಾ **ಪಿತ್ರಾ** = ತಂದೆಯೊಂದಿಗೆ **ಯುಯುಧೇ** = ಯುದ್ಧಮಾಡಿದ.

**ತಾತ್ಪರ್ಯ** :- ನಿನ್ನ ತಂದೆಗೆ ನಿನ್ನ ಬಲವನ್ನು ತೋರಿಸುತ್ತಾ ಅವನನ್ನು ಪ್ರೀತಿಪಡಿಸಲೆಂದು ಯುದ್ಧ ಮಾಡು" ಉಲೂಪಿ ಹೀಗೆನ್ನಲು ಬಭ್ರುವಾಹನ

ತನ್ನ ಸರ್ವಸಾಮರ್ಥ್ಯವನ್ನು ತೋರುತ್ತಾ ಅರ್ಜುನನೊಂದಿಗೆ ಯುದ್ಧಕ್ಕೆ ತೊಡಗಿದ.

ಮಗನ ಬಾಣಕ್ಕೆ ಮೂರ್ಛಿತನಾದ ಅರ್ಜುನ

**ಅರ್ಜುನಸ್ತು ಸುತಸ್ನೇಹಾನ್ಮಂದಂ ಯೋಧಯತಿ ಸ್ಮಯನ್ ।**
**ಸ ತು ಸರ್ವಾಯುಧಕ್ಷೇಪೇಽಪ್ಯವಿಕಾರಂ ಧನಂಜಯಮ್ ॥ ೧೦೩ ॥**

ಅರ್ಜುನಃ ತು ಸುತಸ್ನೇಹಾತ್ ಮಂದಂ ಯೋಧಯತಿ ಸ್ಮಯನ್ । ಸಃ ತು ಸರ್ವಾಯುಧಕ್ಷೇಪೇ ಅಪಿ ಅವಿಕಾರಂ ಧನಂಜಯಮ್ ॥ ೧೦೩ ॥

**ದೃಷ್ಟ್ವಾ ಬಾಲ್ಯಾತ್ ಪರೀಕ್ಷಾಯೈ ಮಂತ್ರಪೂತಂ ಮಹಾಶರಮ್ ।**
**ಚಿಕ್ಷೇಪ ಪಿತ್ರೇ ದೈವೇನ ತೇನೈನಂ ಮೋಹ ಆವಿಶತ್ ॥ ೧೦೪ ॥**

ದೃಷ್ಟ್ವಾ ಬಾಲ್ಯಾತ್ ಪರೀಕ್ಷಾಯೈ ಮಂತ್ರಪೂತಂ ಮಹಾಶರಮ್ । ಚಿಕ್ಷೇಪ ಪಿತ್ರೇ ದೈವೇನ ತೇನ ಏನಂ ಮೋಹಃ ಆವಿಶತ್ ॥ ೧೦೪ ॥

**ಅರ್ಥ :–** **ಅರ್ಜುನಃ ತು** = ಅರ್ಜುನನಾದರೋ **ಸುತಸ್ನೇಹಾತ್** = ಮಗನ ಮೇಲಿನ ಸ್ನೇಹದಿಂದಾಗಿ **ಸ್ಮಯನ್** = ನಸುನಗುತ್ತಾ **ಮಂದಂ** = ಮೆಲ್ಲನೆ **ಯೋಧಯತಿ (ಸ್ಮ)** = ಯುದ್ಧಮಾಡುತ್ತಿದ್ದ. **ಸಃ ತು** = ಅವನಾದರೋ **ಸರ್ವಾಯುಧಕ್ಷೇಪೇ ಅಪಿ** = ಎಲ್ಲ ಆಯುಧಗಳನ್ನು ಎಸೆದಾಗಲೂ ಸಹ **ಅವಿಕಾರಂ** = ವಿಕಾರಗೊಳ್ಳದ **ಧನಂಜಯಂ** = ಅರ್ಜುನನನ್ನು **ದೃಷ್ಟ್ವಾ** = ನೋಡಿ **ಬಾಲ್ಯಾತ್** = ಹುಡುಗತನದಿಂದ **ಪರೀಕ್ಷಾಯೈ** = ಪರೀಕ್ಷಿಸಲೆಂದು **ಮಂತ್ರಪೂತಂ** = ಮಂತ್ರದಿಂದ ಅಭಿಮಂತ್ರಿತವಾದ **ಮಹಾಶರಂ** = ದೊಡ್ಡಬಾಣವನ್ನು **ದೈವೇನ** = ದೈವಪ್ರೇರಿತನಾಗಿ **ಪಿತ್ರೇ** = ತಂದೆಗೆ **ಚಿಕ್ಷೇಪ** = ಎಸೆದನು. **ತೇನ** = ಅದರಿಂದ **ಏನಂ** = ಅವನನ್ನು (ಅರ್ಜುನನನ್ನು) **ಮೋಹಃ** = ಮೂರ್ಛೆಯು **ಆವಿಶತ್** = ಆವರಿಸಿತು.

**ತಾತ್ಪರ್ಯ :-** ಅರ್ಜುನನಾದರೂ ಪುತ್ರಸ್ನೇಹದಿಂದಾಗಿ ನಸುನಗುತ್ತಾ ಮೆಲ್ಲಗೆ ಯುದ್ಧ ಮಾಡಿದ. ಬಭ್ರುವಾಹನ ತಾನು ಎಲ್ಲ ಆಯುಧಗಳನ್ನು ಎಸೆದಾಗಲೂ ಅರ್ಜುನ ಯಾವ ವಿಕಾರಕ್ಕೂ ಒಳಗಾಗದಿದ್ದುದನ್ನು ಕಂಡು ಹುಡುಗತನದಿಂದ ಅರ್ಜುನನ ಸಾಮರ್ಥ್ಯವನ್ನು ಪರೀಕ್ಷಿಸಲೆಂದು

ದೈವಪ್ರೇರಿತನಾಗಿ ಮಂತ್ರಪೂತವಾದ ಮಹಾಶರವೊಂದನ್ನು ಅವನ ಮೇಲೆ ಪ್ರಯೋಗಿಸಿದ. ಅರ್ಜುನ ಮೂರ್ಛೆಗೊಳಗಾದ.

### ಬಭ್ರುವಾಹನನ ಪ್ರಾಯೋಪವೇಶ

**ಮೂರ್ಚ್ಛಿತಂ ತಂ ಗುರುಂ ದೃಷ್ಟ್ವಾ ತದ್ಭಕ್ತ್ಯಾ ಭೃಶದುಃಖಿತಃ ।**
**ಪ್ರಾಯೋಪವಿಷ್ಟಸ್ತನ್ಮಾತಾ ವಿಲಲಾಪಾತಿದುಃಖಿತಾ ॥ ೧೦೫ ॥**

ಮೂರ್ಚ್ಛಿತಂ ತಂ ಗುರುಂ ದೃಷ್ಟ್ವಾ ತದ್ಭಕ್ತ್ಯಾ ಭೃಶದುಃಖಿತಃ । ಪ್ರಾಯೋಪವಿಷ್ಟಃ ತನ್ಮಾತಾ ವಿಲಲಾಪ ಅತಿದುಃಖಿತಾ ॥ ೧೦೫ ॥

**ಅರ್ಥ** :- **ಮೂರ್ಛಿತಂ** = ಮೂರ್ಛಿತನಾದ **ತಂ** = ಆ **ಗುರುಂ** = ತಂದೆಯನ್ನು **ದೃಷ್ಟ್ವಾ** = ನೋಡಿ **ತದ್ಭಕ್ತ್ಯಾ** = ಅವನ ಮೇಲಿನ ಭಕ್ತಿಯಿಂದ **ಭೃಶದುಃಖಿತಃ** = ಬಹಳವಾಗಿ ದುಃಖಿತನಾಗಿ **ಪ್ರಾಯೋಪವಿಷ್ಟಃ (ಅಭೂತ್)** = ಪ್ರಾಣತ್ಯಾಗಕ್ಕಾಗಿ ಕುಳಿತವನಾದನು. **ಅತಿದುಃಖಿತಾ** = ಅತ್ಯಂತದುಃಖಿತಳಾದ **ತನ್ಮಾತಾ** = ಅವನ ತಾಯಿಯಾದ ಚಿತ್ರಾಂಗದೆಯು **ವಿಲಲಾಪ** = ಜೋರಾಗಿ ಅತ್ತಳು.

**ತಾತ್ಪರ್ಯ** :- ಅರ್ಜುನ ಮೂರ್ಛಿತನಾದುದ್ದನ್ನು ಕಂಡು ಅವನ ಮೇಲಿನ ಭಕ್ತಿಯಿಂದಾಗಿ ಬಭ್ರುವಾಹನ ತುಂಬಾ ದುಃಖಿತನಾಗಿ ಪ್ರಾಯೋಪ ವೇಶಕ್ಕೆ ತೊಡಗಿದ. ಅವನ ತಾಯಿ ಚಿತ್ರಾಂಗದೆ ತುಂಬ ದುಃಖದಿಂದ ವಿಲಾಪ ಮಾಡತೊಡಗಿದಳು.

### ಚಿತ್ರಾಂಗದೆ ಮಾಡಿದ ಉಲೂಪಿಯ ಧಿಕ್ಕಾರ

**ವಿಜಗರ್ಹ ತದೋಲೂಪೀಂ ಧಿಗ್ಜಗತ್ತ್ರಯಪೂಜಿತಮ್ ।**
**ಅಜೇಘನೋ ಮೇ ಭರ್ತಾರಂ ಪುತ್ರೇಣೈವಾವಿಜಾನತಾ ॥ ೧೦೬ ॥**

ವಿಜಗರ್ಹ ತದಾ ಉಲೂಪೀಂ ಧಿಕ್ ಜಗತ್ತ್ರಯಪೂಜಿತಮ್ । ಅಜೇಘನಃ ಮೇ ಭರ್ತಾರಂ ಪುತ್ರೇಣ ಏವ ಅವಿಜಾನತಾ ॥ ೧೦೬ ॥

**ಅರ್ಥ** :- **ತದಾ** = ಆಗ **ಉಲೂಪೀಂ** = ಉಲೂಪಿಯನ್ನು **ವಿಜಗರ್ಹ** = ಬಹಳವಾಗಿ ತೆಗಳಿದಳು. **ಜಗತ್ತ್ರಯಪೂಜಿತಂ** = ಮೂರು

ಲೋಕಗಳಲ್ಲೂ ಪೂಜಿತನಾದ **ಮೇ** = ನನ್ನ **ಭರ್ತಾರಂ** = ಗಂಡನನ್ನು **ಅವಿಜಾನತಾ** = ಏನೂ ತಿಳಿಯದ **ಪುತ್ರೇಣ** ಏವ = ಮಗನಿಂದಲೇ **ಅಜೀಘನಃ** = ಕೊಲ್ಲಿಸಿರುವೆ **ಧಿಕ್ (ತೇ)** = ನಿನಗೆ ಧಿಕಾರ.

ಚಿತ್ರಾಂಗದೆ ಆಗ ಉಲೂಪಿಯನ್ನು ತೆಗಳಿದಳು ''ನಿನಗೆ ಧಿಕ್ಕಾರ, ತ್ರಿಲೋಕವಂದಿತನಾದ ನನ್ನ ಪತಿಯನ್ನು ಏನೂ ತಿಳಿಯದ ಅವನ ಮಗನಿಂದಲೇ ಕೊಲ್ಲಿಸಿದೆ.

**ಲೋಕವೀರಂ ಪತಿಂ ಹತ್ವಾ ನ ಮೇ ಕಾರ್ಯಂ ಸುತೇನ ಚ ।**
**ಪತಿಲೋಕಮಹಂ ಯಾಸ್ಯೇ ತೃಪ್ತಾ ಭವ ಕಲಿಪ್ರಿಯೇ ॥ ೧೦೭ ॥**

**ಲೋಕವೀರಂ ಪತಿಂ ಹತ್ವಾ ನ ಮೇ ಕಾರ್ಯಂ ಸುತೇನ ಚ । ಪತಿಲೋಕಂ ಅಹಂ ಯಾಸ್ಯೇ ತೃಪ್ತಾ ಭವ ಕಲಿಪ್ರಿಯೇ ॥ ೧೦೭ ॥**

**ಅರ್ಥ** :- **ಲೋಕವೀರಂ** = ಲೋಕವೀರನಾದ **ಪತಿಂ** = ಗಂಡನನ್ನು **ಹತ್ವಾ** = ಕೊಂದು **ನ ಮೇ ಕಾರ್ಯಂ** = ನನಗೆ ಮಾಡುವುದೇನೂ ಇಲ್ಲ. **ಚ** = ಮತ್ತು **ಸುತೇನ** = ಮಗನೊಂದಿಗೆ **ಪತಿಲೋಕಂ** = ಗಂಡನ ಲೋಕವನ್ನು ಕುರಿತು **ಅಹಂ** = ನಾನು **ಯಾಸ್ಯೇ** = ಹೋಗುವೆ. **ಕಲಿಪ್ರಿಯೇ** = ಹೇ ಜಗಳಗಂಟಿ **ತೃಪ್ತಾ ಭವ** = ತೃಪ್ತಳಾಗು.

**ತಾತ್ಪರ್ಯ** :- ಲೋಕವೀರನಾದ ಪತಿಯನ್ನು ಬಿಟ್ಟು ನಾನು ಮಾಡುವುದೇನೂ ಇಲ್ಲ, ಮಗನೊಂದಿಗೆ ಪತಿಲೋಕವನ್ನೇ ಸೇರುವೆ, ಜಗಳಗಂಟಿಯಾದ ನೀನು ತೃಪ್ತಳಾಗು.

ವಿ :- ಇಲ್ಲಿ ಕಲಿ ಎಂದರೆ ಕಲಹ ಎಂದರ್ಥ; ತಂದೆ ಮಕ್ಕಳಲ್ಲಿ ಯುದ್ಧವೇರ್ಪಡಿಸಿದ್ದರಿಂದ ಅವಳನ್ನು ಹಾಗೆ ಕರೆದಿರುವಳು.

**ಇತ್ಯುಕ್ತ್ವಾ ಮರಣಾಯೈವ ತಾಂ ವಿನಿಶ್ಚಿತಮಾನಸಾಮ್ ।**
**ಧರಾಯಾಂ ವಿಲುಠಂತೀಂ ಚ ದೃಷ್ಟ್ವಾ ಭುಜಗನಂದಿನೀ ॥ ೧೦೮ ॥**

**ಇತಿ ಉಕ್ತ್ವಾ ಮರಣಾಯ ಏವ ತಾಂ ವಿನಿಶ್ಚಿತಮಾನಸಾಮ್ । ಧರಾಯಾಂ ವಿಲುಠಂತೀಂ ಚ ದೃಷ್ಟ್ವಾ ಭುಜಗನಂದಿನೀ ॥ ೧೦೮ ॥**

### ಪ್ರಜ್ಞೆ ಮರಳಿದ ಅರ್ಜುನ

**ನಾಗಲೋಕಾತ್ ಸಮಾದಾಯ ವಿಶಲ್ಯಕರಣೀಂ ಕ್ಷಣಾತ್ ।**
**ಉತ್ಥಾಪಯಾಮಾಸ ಪತಿಂ ತ್ರಿಲೋಕಾಧಿರಥಂ ತಯಾ ॥ ೧೦೯ ॥**

ನಾಗಲೋಕಾತ್ ಸಮಾದಾಯ ವಿಶಲ್ಯಕರಣೀಂ ಕ್ಷಣಾತ್ । ಉತ್ಥಾಪಯಾಮಾಸ ಪತಿಂ ತ್ರಿಲೋಕಾಧಿರಥಂ ತಯಾ ॥ ೧೦೯ ॥

**ಅರ್ಥ** :- ಇತಿ = ಹೀಗೆ **ಉಕ್ತ್ವಾ** = ಹೇಳಿ, **ಮರಣಾಯ ಏವ** = ಮರಣಕ್ಕಾಗಿಯೇ **ವಿನಿಶ್ಚಿತಮಾನಸಾಂ** = ಚೆನ್ನಾಗಿ ನಿಶ್ಚಿತಮನಸ್ಕಳಾದ **ಚ** = ಮತ್ತು **ಧರಾಯಾಂ** = ಭೂಮಿಯಲ್ಲಿ **ವಿಲುಠಂತೀಂ** = ಹೊರಳಾಡುತ್ತಿದ್ದ **ತಾಂ** = ಅವಳನ್ನು **ದೃಷ್ಟ್ವಾ** = ನೋಡಿ **ಭುಜಗನಂದಿನೀ** = ನಾಗಕನ್ಯೆಯಾದ ಉಲೂಪಿಯು **ನಾಗಲೋಕಾತ್** = ನಾಗಲೋಕದಿಂದ **ವಿಶಲ್ಯಕರಣೀಂ** = ವಿಶಲ್ಯಕರಣಿಯನ್ನು **ಕ್ಷಣಾತ್** = ಕ್ಷಣದಲ್ಲೇ **ಸಮಾದಾಯ** = ತಂದು, **ತಯಾ** = ಆ ವಿಶಲ್ಯಕರಣಿಯಿಂದ **ತ್ರಿಲೋಕಾಧಿರಥಂ** = ಮೂರುಲೋಕದ ಅತಿರಥನಾದ **ಪತಿಂ** = ಗಂಡನನ್ನು **ಉತ್ಥಾಪಯಾಮಾಸ** = ಎಬ್ಬಿಸಿದಳು.

**ತಾತ್ಪರ್ಯ** :- ಹೀಗೆ ಹೇಳಿ ಸಾಯಲೆಂದೇ ಮನಸ್ಸಿನಲ್ಲಿ ನಿಶ್ಚಯಿಸಿ ಭೂಮಿಯ ಮೇಲೆ ಹೊರಳಾಡುತ್ತಿದ್ದ ಚಿತ್ರಾಂಗದೆಯನ್ನು ಕಂಡು ಉಲೂಪಿ ಕ್ಷಣಮಾತ್ರದಲ್ಲಿ ನಾಗಲೋಕದಿಂದ ವಿಶಲ್ಯಕರಣಿಯನ್ನು ತಂದು ಅದರಿಂದ ಮೂರುಲೋಕದ ಅತಿರಥನಾದ ಅರ್ಜುನನನ್ನು ಎಬ್ಬಿಸಿದಳು.

### ಅರ್ಜುನ ಪರಾಭವದ ದೈವಿಕ ಹಿನ್ನೆಲೆ

**ಪ್ರಹಸ್ಯೋವಾಚ ಚ ತದಾ ಶ್ರುತಂ ವಾಕ್ಯಂ ಪುರಾ ಮಯಾ ।**
**ಸುರಲೋಕೇ ಸುರೈಃ ಪ್ರೋಕ್ತಂ ಭೀಷ್ಮಾದ್ಯಾ ನಾತಿಧರ್ಮತಃ ॥ ೧೧೦ ॥**

ಪ್ರಹಸ್ಯ ಉವಾಚ ಚ ತದಾ ಶ್ರುತಂ ವಾಕ್ಯಂ ಪುರಾ ಮಯಾ । ಸುರಲೋಕೇ ಸುರೈಃ ಪ್ರೋಕ್ತಂ ಭೀಷ್ಮಾದ್ಯಾಃ ನ ಅತಿಧರ್ಮತಃ ॥ ೧೧೦ ॥

**ಯದ್ಧತಾಸ್ತೇನ ದೋಷೇಣ ಪಾರ್ಥಸ್ತೇನಾತಿವೇದನಾಮ್ ।**
**ರಣೇ ವ್ರಜೇದಿತಿ ನ ತತ್ ಪರತಃ ಸ್ಯಾದಿತಿ ಹ್ಯಹಮ್ ।**
**ವಚನಾದೇವ ದೇವಾನಾಂ ಯುದ್ಧ್ಯೇತ್ಯಾತ್ಮಜಮಬ್ರುವಮ್ ॥ ೧೧೧ ॥**

**ಯತ್ ಹತಾಃ ತೇನ ದೋಷೇಣ ಪಾರ್ಥಃ ತೇನ ಅತಿವೇದನಾಮ್ । ರಣೇ ವ್ರಜೇತ್ ಇತಿ ನ ತತ್ ಪರತಃ ಸ್ಯಾತ್ ಇತಿ ಹಿ ಅಹಮ್ । ವಚನಾತ್ ಏವ ದೇವಾನಾಂ ಯುದ್ಧ್ಯ ಇತಿ ಆತ್ಮಜಂ ಅಬ್ರುವಮ್ ॥ ೧೧೧ ॥**

**ಅರ್ಥ :-** **ತದಾ** = ಆಗ **(ಉಲೂಪಿಕಾ)** = ಉಲೂಪಿಕೆಯು **ಪ್ರಸಹ್ಯ** = ನಕ್ಕು **ಉವಾಚ ಚ** = ಹೇಳಿದಳು ಸಹ. **ಪುರಾ** = ಹಿಂದೆ **ಮಯಾ** = ನನ್ನಿಂದ **ಸುರಲೋಕೇ** = ದೇವಲೋಕದಲ್ಲಿ **ಸುರೈಃ** = ದೇವತೆಗಳಿಂದ **ಪ್ರೋಕ್ತಂ** = ಹೇಳಲ್ಪಟ್ಟದ್ದು **ಶ್ರುತಂ** = ಕೇಳಲ್ಪಟ್ಟಿದೆ. **ಯತ್** = ಯಾವ ಕಾರಣದಿಂದ **ಭೀಷ್ಮಾದ್ಯಾಃ** = ಭೀಷ್ಮಾದಿಗಳು **ತೇನ** = ಆ ಅರ್ಜುನನಿಂದ **ಅತಿಧರ್ಮತಃ** = ಅತಿಧಾರ್ಮಿಕರೀತಿಯಲ್ಲಿ ನ **ಹತಾಃ** = ಹತರಾಗಿಲ್ಲವೋ, **ತೇನ** = ಆ **ದೋಷೇಣ** = ದೋಷದಿಂದ **ಪಾರ್ಥಃ** = ಅರ್ಜುನನು **ರಣೇ** = ಯುದ್ಧದಲ್ಲಿ **ಅತಿವೇದನಾಂ** = ತುಂಬಾ ನೋವನ್ನು **ವ್ರಜೇತ್** = ಹೊಂದಲಿ **ಇತಿ** = ಎಂದು **(ಶ್ರುತಂ)** = ಕೇಳಲ್ಪಟ್ಟಿದೆ. **ತತ್** = ಅದು **ಪರತಃ** = ಬೇರೊಬ್ಬರಿಂದ ನ **ಸ್ಯಾತ್** = ಆಗದಿರಲಿ **ಇತಿ ಹಿ** = ಎಂದೇ **ಅಹಂ** = ನಾನು **ದೇವಾನಾಂ** = ದೇವತೆಗಳ **ವಚನಾತ್** ಏವ = ಮಾತಿನಿಂದಲೇ **ಯುಧ್ಯ** = ಯುದ್ಧ ಮಾಡು **ಇತಿ** = ಎಂದು **ಆತ್ಮಜಂ** = ಮಗನನ್ನು ಕುರಿತು **ಅಬ್ರುವಮ್** = ಹೇಳಿದೆ.

**ತಾತ್ಪರ್ಯ :-** ಬಳಿಕ ನಕ್ಕು ಉಲೂಪಿ ತಿಳಿಸಿದಳು ''ಹಿಂದೆ ನಾನು ದೇವಲೋಕದಲ್ಲಿ ದೇವತೆಗಳು ನುಡಿದ ಮಾತನ್ನು ಕೇಳಿಸಿಕೊಂಡೆ ''ಭೀಷ್ಮ ಮೊದಲಾದವರು ಅರ್ಜುನನಿಂದ ಅತಿ ಧಾರ್ಮಿಕವಾದ ರೀತಿಯಲ್ಲಿ ಹತರಾಗಿಲ್ಲ. ಆ ದೋಷದಿಂದಾಗಿ ಅರ್ಜುನ ಯುದ್ಧದಲ್ಲಿ ತುಂಬಾ ನೋವನ್ನು ಹೊಂದುವಂತಾಗಬೇಕು''. ಅದು ಬೇರೊಬ್ಬರಿಂದ ಆಗದಿರಲಿ ಎಂದು 'ನಾನು ಆ ದೇವತೆಗಳ ಮಾತಿನಿಂದಲೇ ಬಭ್ರುವಾಹನನಿಗೆ ಯುದ್ಧ ಮಾಡು' ಎಂದು ಹೇಳಿದೆ.

**ದೇವಾನಾಮೇವ ಸಂಕಲ್ಪಾನ್ಮೂರ್ಛಿತಶ್ಚಾರ್ಜುನೋಽಭವತ್ ।**
**ಭುಕ್ತದೋಷಫಲಶ್ಚಾಯಂ ಪುನರ್ಭೋಕ್ಷ್ಯತಿ ನಾನ್ಯತಃ ॥ ೧೧೨ ॥**

**ದೇವಾನಾಂ ಏವ ಸಂಕಲ್ಪಾತ್ ಮೂರ್ಛಿತಃ ಚ ಅರ್ಜುನಃ ಅಭವತ್ । ಭುಕ್ತದೋಷಫಲಃ ಚ ಅಯಂ ಪುನಃ ಭೋಕ್ಷ್ಯತಿ ನ ಅನ್ಯತಃ ॥ ೧೧೨ ॥**

**ಅರ್ಥ** :- **ದೇವಾನಾಂ** = ದೇವತೆಗಳ **ಸಂಕಲ್ಪಾತ್ ಏವ** = ಸಂಕಲ್ಪದಿಂದಾಗಿಯೇ **ಅರ್ಜುನಃ** = ಅರ್ಜುನನು **ಮೂರ್ಛಿತಃ ಚ** = ಮೂರ್ಛಿತನೂ **ಅಭವತ್** = ಆದ. **ಚ** = ಮತ್ತು **ಭುಕ್ತದೋಷಫಲಃ** = ದೋಷದ ಫಲವನ್ನು ಅನುಭವಿಸಿದ **ಅಯಂ** = ಇವನು **ಪುನಃ** = ಮತ್ತೆ **ಅನ್ಯತಃ** = ಬೇರೊಬ್ಬರಿಂದ **ನ ಭೋಕ್ಷ್ಯತಿ** = ಅನುಭವಿಸನು.

**ತಾತ್ಪರ್ಯ** :- ದೇವತೆಗಳ ಸಂಕಲ್ಪದಿಂದಾಗಿಯೇ ಅರ್ಜುನ ಹಾಗೆ ಮೂರ್ಛಿತನಾಗಿದ್ದ. ತನ್ನ ತಪ್ಪಿಗೆ ಫಲ ಅನುಭವಿಸಿದ್ದರಿಂದ ಅರ್ಜುನನಿಗೆ ಆದನ್ನು ಬೇರೆಯವರಿಂದ ಅನುಭವಿಸುವ ಪ್ರಸಂಗ ಒದಗದು.

**ಅನ್ಯೇನ ಪಾತಿತಸ್ಯಾಸ್ಯ ಯಶೋ ನಶ್ಯೇತ್ ತ್ರಿಲೋಕಗಮ್ ।**
**ನಾರ್ಜುನಸ್ಯ ಯಶೋ ನಶ್ಯೇದಿತಿ ದೇವೈರಿದಂ ಕೃತಮ್ ॥ ೧೧೩ ॥**

**ಅನ್ಯೇನ ಪಾತಿತಸ್ಯ ಅಸ್ಯ ಯಶಃ ನಶ್ಯೇತ್ ತ್ರಿಲೋಕಗಮ್ । ನ ಅರ್ಜುನಸ್ಯ ಯಶಃ ನಶ್ಯೇತ್ ಇತಿ ದೇವೈಃ ಇದಂ ಕೃತಮ್ ॥ ೧೧೩ ॥**

**ಅರ್ಥ** :- **ಅನ್ಯೇನ** = ಬೇರೆಯವನಿಂದ **ಪಾತಿತಸ್ಯ** = ಬೀಳಿಸಲ್ಪಟ್ಟ **ಅಸ್ಯ** = ಇವನ (ಅರ್ಜುನನ) **ತ್ರಿಲೋಕಗಂ** = ಮೂರುಲೋಕದಲ್ಲಿ ಹರಡಿದ **ಯಶಃ** = ಕೀರ್ತಿಯು **ನಶ್ಯೇತ್** = ನಾಶವಾದೀತು. **ಚ** = ಮತ್ತು **ಅರ್ಜುನಸ್ಯ** = ಅರ್ಜುನನ **ಯಶಃ** = ಕೀರ್ತಿಯು **ನ ನಶ್ಯೇತ್** = ನಾಶವಾಗದಿರಲಿ **ಇತಿ** = ಎಂದು **ದೇವೈಃ** = ದೇವತೆಗಳಿಂದ **ಇದಂ** = ಇದು **ಕೃತಮ್** = ಮಾಡಲ್ಪಟ್ಟಿತು.

**ತಾತ್ಪರ್ಯ** :- ಬೇರೆಯವನಿಂದ ಅರ್ಜುನ ಯುದ್ಧದಲ್ಲಿ ಸೋತರೆ ಅವನ ಮೂರು ಲೋಕದಲ್ಲಿ ಹರಡಿದ್ದ ಕೀರ್ತಿ ಕಳಂಕಿತವಾಗುವುದು. ಅವನಿಗೆ ಹಾಗೆ ಕೀರ್ತಿ ನಾಶವಾಗದಿರಲೆಂದೇ ದೇವತೆಗಳು ಇದನ್ನು ಮಾಡಿದರು''.

### ಪ್ರಸನ್ನನಾದ ಅರ್ಜುನ

**ಇತ್ಯುಕ್ತಃ ಪ್ರೀತಿಮಾಪೇದೇ ಪುತ್ರಭಾರ್ಯಾಯುತೋಽರ್ಜುನಃ ।**
**ಯಜ್ಞಾರ್ಥಂ ತಾವಥಾಹೂಯ ಪೂಜಿತಃ ಪ್ರಯಯೌ ತತಃ ॥ ೧೧೪ ॥**

**ಇತಿ ಉಕ್ತಃ ಪ್ರೀತಿಂ ಆಪೇದೇ ಪುತ್ರಭಾರ್ಯಾಯುತಃ ಅರ್ಜುನಃ । ಯಜ್ಞಾರ್ಥಂ ತೌ ಅಥ ಆಹೂಯ ಪೂಜಿತಃ ಪ್ರಯಯೌ ತತಃ ॥ ೧೧೪ ॥**

**ಅರ್ಥ** :- **ಇತಿ** = ಹೀಗೆ **ಉಕ್ತಃ** = ಹೇಳಲ್ಪಟ್ಟ **ಪುತ್ರಭಾರ್ಯಾಯುತಃ** = ಮಗ ಹಾಗೂ ಪತ್ನಿಯಿಂದ ಕೂಡಿದ **ಅರ್ಜುನಃ** = ಅರ್ಜುನನು **ಪ್ರೀತಿಂ** = ಪ್ರೀತಿಯನ್ನು **ಆಪೇದೇ** = ಹೊಂದಿದ. **ಅಥ** = ಬಳಿಕ **ತೌ** = ಅವರಿಬ್ಬರನ್ನು **ಯಜ್ಞಾರ್ಥಂ** = ಯಜ್ಞಕ್ಕೋಸ್ಕರ **ಆಹೂಯ** = ಆಹ್ವಾನಿಸಿ **ಪೂಜಿತಃ (ಸನ್)** = ಪೂಜಿತನಾಗಿ **ತತಃ** = ಅಲ್ಲಿಂದ **ಪ್ರಯಯೌ** = ತೆರಳಿದ.

**ತಾತ್ಪರ್ಯ** :- ಉಲೂಪಿ ಹೀಗೆ ತಿಳಿಸಿದಾಗ ಅರ್ಜುನ ಹೆಂಡತಿ ಹಾಗೂ ಮಗನೊಂದಿಗೆ ಪ್ರೀತಿ ಹೊಂದಿದವನಾದ. ಅವರಿಬ್ಬರನ್ನು ಯಜ್ಞಕ್ಕೆ ಆಹ್ವಾನಿಸಿ ಅಲ್ಲಿಂದ ಮುಂದಕ್ಕೆ ತೆರಳಿದ.

### ದ್ವಾರಕೆಯಲ್ಲಿ ಅರ್ಜುನ

**ದ್ವಾರಕಾಯಾಃ ಸಮೀಪಸ್ಥಂ ಪ್ರದ್ಯುಮ್ನಾದ್ಯಾಃ ಸುತಾ ಹರೇಃ ।**
**ಪ್ರಸಹ್ಯಾಶ್ವಮಪಾಜಹ್ರುರಾಹ್ವಯಂತೋಽರ್ಜುನಂ ಮೃಧೇ ॥ ೧೧೫ ॥**

ದ್ವಾರಕಾಯಾಃ ಸಮೀಪಸ್ಥಂ ಪ್ರದ್ಯುಮ್ನಾದ್ಯಾಃ ಸುತಾಃ ಹರೇಃ । ಪ್ರಸಹ್ಯ ಅಶ್ವಂ ಅಪಾಜಹ್ರುಃ ಆಹ್ವಯಂತಃ ಅರ್ಜುನಂ ಮೃಧೇ ॥ ೧೧೫ ॥

**ಅರ್ಥ** :- **ದ್ವಾರಕಾಯಾಃ** = ದ್ವಾರಕೆಯ **ಸಮೀಪಸ್ಥಂ** = ಸಮೀಪದಲ್ಲಿದ್ದ ಅರ್ಜುನನನ್ನು **ಹರೇಃ** = ಶ್ರೀಕೃಷ್ಣನ **ಸುತಾಃ** = ಪುತ್ರರಾದ **ಪ್ರದ್ಯುಮ್ನಾದ್ಯಃ** = ಪ್ರದ್ಯುಮ್ನ ಮೊದಲಾದವರು **ಪ್ರಸಹ್ಯ** = ಬಲಾತ್ಕರಿಸಿ **ಅರ್ಜುನಂ** = ಅರ್ಜುನನನ್ನು **ಮೃಧೇ** = ಯುದ್ಧದಲ್ಲಿ **ಆಹ್ವಯಂತಃ (ಸಂತಃ)** = ಆಹ್ವಾನಿಸುವವರಾಗಿ **ಅಶ್ವಂ** = ಕುದುರೆಯನ್ನು **ಅಪಾಜಹ್ರುಃ** = ಅಪಹರಿಸಿದರು.

**ತಾತ್ಪರ್ಯ** :- ದ್ವಾರಕೆಯ ಸಮೀಪದಲ್ಲಿ ಅರ್ಜುನ ಬಂದಾಗ ಪ್ರದ್ಯುಮ್ನ ಮೊದಲಾದ ಕೃಷ್ಣಪುತ್ರರು ಅರ್ಜುನನನ್ನು ಯುದ್ಧಕ್ಕೆ ಕರೆಯುತ್ತಾ ಬಲಾತ್ಕಾರವಾಗಿ ಕುದುರೆಯನ್ನು ಅಪಹರಿಸಿದರು.

### ವಸುದೇವ ಕೊಡಿಸಿದ ಅಶ್ವಮೇಧದ ಕುದುರೆ

**ಸುಭದ್ರಾಹರಣಂ ಮಾರ್ಷ್ಟುಂ ನೀತೇಽಶ್ವೇ ತೈರ್ಧನಂಜಯಃ ।**
**ಗೌರವಾದ್ವಾಸುದೇವಸ್ಯ ಮಾತುಲಸ್ಯ ಚ ಕೇವಲಮ್ ॥ ೧೧೬ ॥**

ಸುಭದ್ರಾಹರಣಂ ಮಾರ್ಷ್ಟುಂ ನೀತೇ ಅಶ್ವೇ ತೈಃ ಧನಂಜಯಃ । ಗೌರವಾತ್ ವಾಸುದೇವಸ್ಯ ಮಾತುಲಸ್ಯ ಚ ಕೇವಲಮ್ ॥ ೧೧೬ ॥

**ಮಾತುಲಾಯಾಬ್ರವೀದಶ್ವಂ ಹೃತಂ ಪೌತ್ರೈರಬಂಧುವತ್ ।**
**ಸ ನಿರ್ಭರ್ತ್ಸ್ಯ ಕುಮಾರಾಂಸ್ತಾನ್ ಮೇಧ್ಯಮಶ್ವಮಮೋಚಯತ್ ॥ ೧೧೭ ॥**

ಮಾತುಲಾಯ ಅಬ್ರವೀತ್ ಅಶ್ವಂ ಹೃತಂ ಪೌತ್ರೈಃ ಅಬಂಧುವತ್ । ಸಃ ನಿರ್ಭರ್ತ್ಸ್ಯ ಕುಮಾರಾನ್ ತಾನ್ ಮೇಧ್ಯಂ ಅಶ್ವಂ ಅಮೋಚಯತ್ ॥ ೧೧೭ ॥

**ಅರ್ಥ** :- **ಸುಭದ್ರಾಹರಣಂ** = ಸುಭದ್ರೆಯ ಅಪಹರಣವನ್ನು **ಮಾರ್ಷ್ಟುಂ** = ತೊಡೆದುಕೊಳ್ಳಲು **ತೈಃ** = ಅವರಿಂದ **ಅಶ್ವೇ** = ಕುದುರೆಯು **ನೀತೇ (ಸತಿ)** = ಒಯ್ಯಲ್ಪಡಲು **ಧನಂಜಯಃ** = ಅರ್ಜುನನು **ಕೇವಲಂ** = ಕೇವಲ **ವಾಸುದೇವಸ್ಯ** = ಕೃಷ್ಣನ **ಚ** = ಮತ್ತು **ಮಾತುಲಸ್ಯ** = ಮಾವನಾದ ವಸುದೇವನ **ಗೌರವಾತ್** = ಗೌರವದಿಂದ **ಅಬಂಧುವತ್** = ಶತ್ರುಗಳಂತೆ **ಪೌತ್ರೈಃ** = ಮೊಮ್ಮಕ್ಕಳಿಂದ **ಅಶ್ವಂ** = ಕುದುರೆಯು **ಹೃತಂ** = ಅಪಹರಿಸಲ್ಪಟ್ಟದ್ದನ್ನು **ಮಾತುಲಾಯ** = ಮಾವನಿಗೆ **ಅಬ್ರವೀತ್** = ಹೇಳಿದ. **ಸಃ** = ಅವನು (ವಸುದೇವನು) **ತಾನ್** = ಆ **ಕುಮಾರಾನ್** = ಕುಮಾರರನ್ನು **ನಿರ್ಭರ್ತ್ಸ್ಯ** = ಬೈದ **ಮೇಧ್ಯಂ** = ಯಜ್ಞದ **ಅಶ್ವಂ** = ಕುದುರೆಯನ್ನು **ಅಮೋಚಯತ್** = ಬಿಡುಗಡೆ ಮಾಡಿದ.

**ತಾತ್ಪರ್ಯ** :- ಸುಭದ್ರಾಹರಣದ ಸೇಡು ತೀರಿಸಿಕೊಳ್ಳಲು ಅವರು ಹಾಗೆ ಕುದುರೆಯನ್ನು ಒಯ್ಯಲು ಅರ್ಜುನ ಕೇವಲ ಕೃಷ್ಣನ ಹಾಗೂ ವಸುದೇವನ ಮೇಲಿನ ಗೌರವದಿಂದ ವಸುದೇವನಿಗೆ ''ನಿನ್ನ ಮೊಮ್ಮಕ್ಕಳು ಶತ್ರುಗಳಂತೆ ನಮ್ಮ ಕುದುರೆಯನ್ನು ಅಪಹರಿಸಿರುವರು'' ಎಂದು ತಿಳಿಸಿದ. ವಸುದೇವ ಕುಮಾರರನ್ನು ಬೈಯ್ದು ಯಜ್ಞದ ಕುದುರೆಯನ್ನು ಬಿಡುಗಡೆ ಮಾಡಿಸಿದ.

### ಹಸ್ತಿನಾಪುರಕ್ಕೆ ಮರಳಿದ ಅರ್ಜುನ

**ಮಾತುಲಂ ಸ ಪ್ರಣಮ್ಯಾಥ ಯಜ್ಞಾರ್ಥಂ ತಾನ್ ನಿಮಂತ್ರ್ಯ ಚ ।**
**ಗಚ್ಛನ್ ಗಜಾಹ್ವಯಂ ದೂತಮಗ್ರತೋಽಯಾಪಯನ್ನೃಪೇ ॥ ೧೧೮ ॥**

ಮಾತುಲಂ ಸಃ ಪ್ರಣಮ್ಯ ಅಥ ಯಜ್ಞಾರ್ಥಂ ತಾನ್ ನಿಮಂತ್ರ್ಯ ಚ । ಗಚ್ಛನ್ ಗಜಾಹ್ವಯಂ ದೂತಂ ಅಗ್ರತಃ ಅಯಾಪಯತ್ ನೃಪೇ ॥ ೧೧೮ ॥

**ಅರ್ಥ** :- **ಸಃ** = ಅವನು (ಅರ್ಜುನನು) **ಮಾತುಲಂ** = ಮಾವನನ್ನು **ಪ್ರಣಮ್ಯ** = ನಮಸ್ಕರಿಸಿ **ಚ** = ಮತ್ತು **ಯಜ್ಞಾರ್ಥಂ** = ಯಜ್ಞಕ್ಕಾಗಿ **ತಾನ್** = ಅವರನ್ನು **ನಿಮಂತ್ರ್ಯ** = ಆಹ್ವಾನಿಸಿ **ಗಜಾಹ್ವಯಂ** = ಹಸ್ತಿನಾಪುರವನ್ನು ಕುರಿತು **ಗಚ್ಛನ್** = ಹೋಗುವವನಾಗಿ **ಅಗ್ರತಃ** = ಮೊದಲಿಗೆ **ದೂತಂ** = ದೂತನನ್ನು **ನೃಪೇ** = ರಾಜನಲ್ಲಿ (ಯುಧಿಷ್ಠಿರನಲ್ಲಿ) **ಅಯಾಪಯತ್** = ಕಳುಹಿಸಿದ.

**ತಾತ್ಪರ್ಯ** :- ಬಳಿಕ ಅರ್ಜುನ ಸೋದರ ಮಾವನಾದ ವಸುದೇವನಿಗೆ ನಮಸ್ಕರಿಸಿ, ಅವರನ್ನು ಯಜ್ಞಕ್ಕೆ ಆಹ್ವಾನಿಸಿ ಹಸ್ತಿನಾವತಿಗೆ ತೆರಳುತ್ತಾ ಮುಂಚಿತವಾಗಿ ದೂತನನ್ನು ಯುಧಿಷ್ಠಿರನ ಬಳಿಗೆ ಕಳಿಸಿದ.

### ಯುಧಿಷ್ಠಿರನ ಸಾಮುದ್ರಿಕ ಜಿಜ್ಞಾಸೆ

**ಸಕೃಷ್ಣಃ ಸಹಸೋದರ್ಯಃ ಶ್ರುತ್ವಾಽಸೌ ಪ್ರಾಪ್ತಮರ್ಜುನಮ್ ।**
**ಪ್ರೀತೋ ಬಾಷ್ಪಾಭಿಪೂರ್ಣಾಕ್ಷೋ ಭ್ರಾತೃಸ್ನೇಹಾದಭಾಷತ ॥ ೧೧೯ ॥**

ಸಕೃಷ್ಣಃ ಸಹಸೋದರ್ಯಃ ಶ್ರುತ್ವಾ ಅಸೌ ಪ್ರಾಪ್ತಂ ಅರ್ಜುನಮ್ । ಪ್ರೀತಃ ಬಾಷ್ಪಾಭಿಪೂರ್ಣಾಕ್ಷಃ ಭ್ರಾತೃಸ್ನೇಹಾತ್ ಅಭಾಷತ ॥ ೧೧೯ ॥

**ಅರ್ಥ** :- **ಸಕೃಷ್ಣಃ** = ಕೃಷ್ಣನೊಂದಿಗೆ ಕೂಡಿದ **ಸಹಸೋದರ್ಯಃ** = ಸೋದರರ ಸಹಿತನಾದ **ಅಸೌ** = ಅವನು (ಯುಧಿಷ್ಠಿರನು) **ಪ್ರಾಪ್ತಂ** = ಬಂದುಸೇರಿದ **ಅರ್ಜುನಂ** = ಅರ್ಜುನನನ್ನು ಕುರಿತು **ಶ್ರುತ್ವಾ** = ಕೇಳಿ **ಪ್ರೀತಃ** = ಸಂತುಷ್ಟನಾಗಿ **ಬಾಷ್ಪಾಭಿಪೂರ್ಣಾಕ್ಷಃ** = ನೀರುತುಂಬಿದ ಕಣ್ಣುಳ್ಳವನಾಗಿ **ಭ್ರಾತೃಸ್ನೇಹಾತ್** = ತಮ್ಮನ ಮೇಲಿನ ಪ್ರೀತಿಯಿಂದ **ಅಭಾಷತ** = ಮಾತನಾಡಿದನು.

**ತಾತ್ಪರ್ಯ** :- ಶ್ರೀಕೃಷ್ಣನೊಂದಿಗೂ, ಸೋದರರೊಂದಿಗೂ ಸಮೇತನಾದ ಧರ್ಮರಾಜ ಅರ್ಜುನ ಮರಳಿ ಬಂದದ್ದನ್ನು ಕೇಳಿ ಆನಂದಿತನಾದ; ನೀರು ತುಂಬಿದ ಕಣ್ಣುಗಳುಳ್ಳವನಾಗಿ ಭ್ರಾತೃವಾತ್ಸಲ್ಯದಿಂದ ಕೃಷ್ಣನನ್ನು ಕೇಳಿದ.

**ವಾಸುದೇವ ನ ಪಶ್ಯಾಮಿ ದುರ್ಲಕ್ಷಣಮಜಾರ್ಜುನೇ ।**
**ಕೇನ ದುರ್ಲಕ್ಷಣೇನಾಯಂ ಬಹುದುಃಖೀ ಪ್ರವಾಸಗಃ ॥ ೧೨೦ ॥**

**ವಾಸುದೇವ ನ ಪಶ್ಯಾಮಿ ದುರ್ಲಕ್ಷಣಂ ಅಜ ಅರ್ಜುನೇ । ಕೇನ ದುರ್ಲಕ್ಷಣೇನ ಅಯಂ ಬಹುದುಃಖೀ ಪ್ರವಾಸಗಃ ॥ ೧೨೦ ॥**

**ಅರ್ಥ :-** ಅಜ = ಹುಟ್ಟಿಲ್ಲದ ಕೃಷ್ಣನೆ! **ವಾಸುದೇವ** = ವಾಸುದೇವನೆ! **ಅರ್ಜುನೇ** = ಅರ್ಜುನನಲ್ಲಿ **ದುರ್ಲಕ್ಷಣಂ** = ದುರ್ಲಕ್ಷಣವನ್ನು **ನ ಪಶ್ಯಾಮಿ** = ಕಾಣುತ್ತಿಲ್ಲ. **ಅಯಂ** = ಇವನು **ಕೇನ** = ಯಾವ **ದುರ್ಲಕ್ಷಣೇನ** = ದುರ್ಲಕ್ಷಣದಿಂದ **ಬಹುದುಃಖೀ** = ಬಹಳ ಕ್ಲೇಶವುಳ್ಳವನಾಗಿ **ಪ್ರವಾಸಗಃ** = ಪ್ರವಾಸ ಮಾಡುವವನಾಗಿರುವನು?

**ತಾತ್ಪರ್ಯ :-** 'ಅಜನಾದ ಕೃಷ್ಣ ! ನಾನು ಅರ್ಜುನನಲ್ಲಿ ದುರ್ಲಕ್ಷಣವನ್ನೇನೂ ಕಾಣೆ, ಯಾವ ದುರ್ಲಕ್ಷಣದಿಂದಾಗಿ ಇವನು ಸದಾ ಸಂಚರಿಸುವಂತಾಗಿ ಬಹಳ ಕ್ಲೇಶಪಡುತ್ತಿರುವನು'.

### ಅರ್ಜುನನಲ್ಲಿದ್ದ ದುರ್ಲಕ್ಷಣಗಳು

**ಪೃಷ್ಟಸ್ತಂ ಕೇಶವಃ ಪ್ರಾಹ ಭ್ರಾತಾ ತೇ ದೀರ್ಘಪಿಂಡಿಕಃ ।**
**ತೇನಾಯಂ ದುಃಖಬಹುಲ ಇತ್ಯುಕ್ತ್ವಾ ಪುನರೇವ ಚ ।**
**ವದಂತಮೇವ ಪಾಂಚಾಲೀ ಕಟಾಕ್ಷೇಣ ನ್ಯವಾರಯತ್ ॥ ೧೨೧ ॥**

**ಪೃಷ್ಟಃ ತಂ ಕೇಶವಃ ಪ್ರಾಹ ಭ್ರಾತಾ ತೇ ದೀರ್ಘಪಿಂಡಿಕಃ । ತೇನ ಅಯಂ ದುಃಖಬಹುಲಃ ಇತಿ ಉಕ್ತ್ವಾ ಪುನಃ ಏವ ಚ । ವದಂತಂ ಏವ ಪಾಂಚಾಲೀ ಕಟಾಕ್ಷೇಣ ನ್ಯವಾರಯತ್ ॥ ೧೨೧ ॥**

**ಅರ್ಥ :-** (ಇತಿ) **ಪೃಷ್ಟಃ** = (ಹೀಗೆ) ಕೇಳಲ್ಪಟ್ಟ **ಕೇಶವಃ** = ಕೇಶವನು **ತಂ** = ಅವನನ್ನು ಕುರಿತು **ಪ್ರಾಹ** = ಹೇಳಿದ. **ತೇ** = ನಿನ್ನ **ಭ್ರಾತಾ** = ಸಹೋದರನು **ದೀರ್ಘಪಿಂಡಿಕಃ** = ಉದ್ದ ದೇಹದವನು. **ತೇನ** = ಆದ್ದರಿಂದ **ಅಯಂ** = ಇವನು **ದುಃಖಬಹುಲಃ** = ಬಹುದುಃಖವುಳ್ಳವನು **ಇತಿ** = ಎಂದು **ಉಕ್ತ್ವಾ** = ಹೇಳಿ **ಚ** = ಮತ್ತು **ಪುನಃ ಏವ** = ಮತ್ತೂ ಸಹ **ವದಂತಂ** = ಹೇಳಲು ಹೊರಟ ಕೃಷ್ಣನನ್ನೇ **ಪಾಂಚಾಲೀ** = ದ್ರೌಪದಿಯು **ಕಟಾಕ್ಷೇಣ ಏವ** = ಕುಡಿನೋಟದಿಂದಲೇ **ನ್ಯವಾರಯತ್** = ತಡೆದಳು.

**ತಾತ್ಪರ್ಯ** :- ಅವನು ಹಾಗೆ ಕೇಳಲು ಕೃಷ್ಣ ತಿಳಿಸಿದ 'ನಿನ್ನ ಸೋದರನಾದ ಅರ್ಜುನ ಸ್ವಲ್ಪ ಉದ್ದ ದೇಹದವನು, ಆದರಿಂದಾಗಿಯೇ ಅವನು ಬಹಳ ದುಃಖ ಅನುಭವಿಸುತ್ತಿರುವನು, ಎಂದು ನುಡಿದು; ಮತ್ತೂ ಹೇಳಲು ತೊಡಗಿದ ಅವನನ್ನು ದ್ರೌಪದಿ ಕುಡಿಗಣ್ಣ ನೋಟದಿಂದ ತಡೆದಳು.

ಲಕ್ಷಣ ಶಾಸ್ತ್ರಕ್ಕೆ ವಿಶೇಷಾಧಿಕಾರಿಗಳು

**ಸಮಸ್ತಲಕ್ಷಣಾಭಿಜ್ಞಾಃ ಕೃಷ್ಣಃ ಸತ್ಯಾ ವೃಕೋದರಃ ।**
**ಕೃಷ್ಣಾ ಚ ಪಂಚಮೋ ನಾಸ್ತಿ ವಿದ್ಯಾ ಶುದ್ಧೇಯಮಂಜಸಾ ॥ ೧೨೨ ॥**

ಸಮಸ್ತಲಕ್ಷಣಾಭಿಜ್ಞಾಃ ಕೃಷ್ಣಃ ಸತ್ಯಾ ವೃಕೋದರಃ । ಕೃಷ್ಣಾ ಚ ಪಂಚಮಃ ನ ಅಸ್ತಿ ವಿದ್ಯಾ ಶುದ್ಧಾ ಇಯಂ ಅಂಜಸಾ ॥ ೧೨೨ ॥

**ಅರ್ಥ** :– **ಸಮಸ್ತಲಕ್ಷಣಾಭಿಜ್ಞಾಃ** = ಎಲ್ಲ ಲಕ್ಷಣಗಳನ್ನು ಪೂರ್ಣವಾಗಿ ಬಲ್ಲವರು **ಕೃಷ್ಣಃ** = ಕೃಷ್ಣನು **ಸತ್ಯಾ** = ಸತ್ಯಭಾಮೆಯು (ಮಹಾಲಕ್ಷ್ಮಿಯು) **ವೃಕೋದರಃ** = ಭೀಮಸೇನನು **ಚ** = ಮತ್ತು **ಕೃಷ್ಣಾ** = ದ್ರೌಪದಿಯು. **ಪಂಚಮಃ** = ಐದನೆಯವನು **ನ ಅಸ್ತಿ** = ಇಲ್ಲ. **ಇಯಂ** = ಈ **ವಿದ್ಯಾ** = ವಿದ್ಯೆಯು **ಅಂಜಸಾ** = ಅತ್ಯಂತ **ಶುದ್ಧಾ** = ಶುದ್ಧವಾದುದು.

**ತಾತ್ಪರ್ಯ** :- ಸಕಲ ಸಾಮುದ್ರಿಕ ಲಕ್ಷಣಗಳನ್ನು ಪೂರ್ಣ ಬಲ್ಲವರು ಕೃಷ್ಣ, ಸತ್ಯಭಾಮೆ ಭೀಮಸೇನ ಹಾಗೂ ದ್ರೌಪದಿ - ಈ ನಾಲ್ವರು ಮಾತ್ರ, ಐದನೆಯವರಿಲ್ಲ. ಇದು ತುಂಬಾ ಶುದ್ಧವಾದ ವಿದ್ಯೆ.

**ಪ್ರಸಂಗಾತ್ ಪ್ರಾಪ್ತುಮಿಚ್ಛೇತ್ ತಾಂ ವಿದ್ಯಾಶೀಲೋ ಯುಧಿಷ್ಠಿರಃ ।**
**ಇತಿ ಲೋಭಾತ್ ತು ಪಾಂಚಾಲೀ ವಾಸುದೇವಂ ನ್ಯವಾರಯತ್ ॥೧೨೩॥**

ಪ್ರಸಂಗಾತ್ ಪ್ರಾಪ್ತುಂ ಇಚ್ಛೇತ್ ತಾಂ ವಿದ್ಯಾಶೀಲಃ ಯುಧಿಷ್ಠಿರಃ । ಇತಿ ಲೋಭಾತ್ ತು ಪಾಂಚಾಲೀ ವಾಸುದೇವಂ ನ್ಯವಾರಯತ್ ॥ ೧೨೩ ॥

**ಅರ್ಥ** :– **ವಿದ್ಯಾಶೀಲಃ** = ವಿದ್ಯೆಯನ್ನು ಸ್ವೀಕರಿಸುವ ಸ್ವಭಾವವುಳ್ಳ **ಯುಧಿಷ್ಠಿರಃ** = ಧರ್ಮರಾಜನು **ಪ್ರಸಂಗಾತ್** = (ಲಕ್ಷಣವನ್ನು ಹೇಳಿದ ಆ) ಪ್ರಸಂಗದಿಂದ **ತಾಂ** = ಅದನ್ನು (ಆ ವಿದ್ಯೆಯನ್ನು) **ಪ್ರಾಪ್ತುಂ** = ಪಡೆಯಲು **ಇಚ್ಛೇತ್** = ಬಯಸಿಯಾನು **ಇತಿ** = ಎಂದು **ಲೋಭಾತ್**

**ತು** = ಲೋಭದಿಂದಲಾದರೋ **ಪಾಂಚಾಲೀ** = ದ್ರೌಪದಿಯು **ವಾಸುದೇವಂ** = ಕೃಷ್ಣನನ್ನು **ನ್ಯವಾರಯತ್** = ತಡೆದಳು.

**ತಾತ್ಪರ್ಯ** :- ವಿದ್ಯಾಶೀಲನಾದ ಯುಧಿಷ್ಠಿರ ಆ ಪ್ರಸಂಗದಿಂದಾಗಿ ಅದನ್ನು ತಿಳಿದುಕೊಳ್ಳಲು ಬಯಸಿಯಾನು ಎಂಬ ಲೋಭದಿಂದ ದ್ರೌಪದಿ ಕೃಷ್ಣನನ್ನು ಹಾಗೆ ತಡೆದಳು.

**ತದ್ಗೌರವಾದ್ವಾಸುದೇವೋ ನೋತ್ತರಂ ಪ್ರತ್ಯಭಾಷತ ।**
**ವಿಸ್ಮಾರಯಾಮಾಸ ಚ ತಂ ಪ್ರಬ್ರುವಾಣಃ ಕಥಾಂತರಮ್ ॥ ೧೨೪ ॥**

ತದ್ಗೌರವಾತ್ ವಾಸುದೇವಃ ನ ಉತ್ತರಂ ಪ್ರತ್ಯಭಾಷತ । ವಿಸ್ಮಾರಯಾಮಾಸ ಚ ತಂ ಪ್ರಬ್ರುವಾಣಃ ಕಥಾಂತರಮ್ ॥ ೧೨೪ ॥

**ಅರ್ಥ** :– **ವಾಸುದೇವಃ** = ಕೃಷ್ಣನು **ತದ್ಗೌರವಾತ್** = ಅವಳ ಮೇಲಿನ ಆದರದಿಂದಾಗಿ **ಉತ್ತರಂ** = ಮುಂದಿನದನ್ನು **ನ ಪ್ರತ್ಯಭಾಷತ** = ನುಡಿಯಲಿಲ್ಲ **ಚ** = ಮತ್ತು **ತಂ** = ಅವನನ್ನು (ಧರ್ಮರಾಜನನ್ನು) ಕುರಿತು **ಕಥಾಂತರಂ** = ಬೇರೊಂದು ವಿಷಯವನ್ನು **ಪ್ರಬ್ರುವಾಣಃ** (ಸನ್) = ಹೇಳುವವನಾಗಿ **ವಿಸ್ಮಾರಯಾಮಾಸ** = ಮರೆಸಿದ.

**ತಾತ್ಪರ್ಯ** :- ಕೃಷ್ಣ ದ್ರೌಪದಿಯ ಮೇಲಿನ ಪ್ರೀತಿಯಿಂದಾಗಿ ಮುಂದುವರಿಸಲಿಲ್ಲ. ಬೇರೊಂದು ವಿಷಯವನ್ನು ತೆಗೆದು ಅದನ್ನು ಮರೆಸಿದ.

### ಅರ್ಜುನನ ಇತರ ದುರ್ಲಕ್ಷಣಗಳು

**ಉದರಸ್ಯ ಕಿಂಚಿದಾಧಿಕ್ಯಂ ವೃಷಣಾಧಿಕ್ಯಮೇವ ಚ ।**
**ಸವ್ಯಬಾಹೋಸ್ತಥಾಽಽಧಿಕ್ಯಂ ದುರ್ಲಕ್ಷಣಮಥೋಽರ್ಜುನೇ ॥ ೧೨೫ ॥**

ಉದರಸ್ಯ ಕಿಂಚಿತ್ ಆಧಿಕ್ಯಂ ವೃಷಣಾಧಿಕ್ಯಂ ಏವ ಚ । ಸವ್ಯಬಾಹೋಃ ತಥಾ ಆಧಿಕ್ಯಂ ದುರ್ಲಕ್ಷಣಂ ಅಥೋ ಅರ್ಜುನೇ ॥ ೧೨೫ ॥

**ಅರ್ಥ** :– **ಅಥೋ** = ಅಲ್ಲದೆ **ಉದರಸ್ಯ** = ಹೊಟ್ಟೆಯ **ಕಿಂಚಿತ್** = ಸ್ವಲ್ಪ **ಆಧಿಕ್ಯಂ** = ಆಧಿಕ್ಯವು **ಏವ ಚ** = ಹಾಗೆಯೇ **ವೃಷಣಾಧಿಕ್ಯಂ** = ವೃಷಣದ ಆಧಿಕ್ಯವು **ತಥಾ** = ಹಾಗೂ **ಸವ್ಯಬಾಹೋಃ** =

ಎಡತೋಳಿನ **ಆಧಿಕ್ಯಂ** = ಆಧಿಕ್ಯವು **ಅರ್ಜುನೇ** = ಅರ್ಜುನನಲ್ಲಿ **ದುರ್ಲಕ್ಷಣಮ್** = ದುರ್ಲಕ್ಷಣವು.

**ತಾತ್ಪರ್ಯ** :- ಹೊಟ್ಟೆ ಸ್ವಲ್ಪ ದೊಡ್ಡದಾಗಿದ್ದುದು, ವೃಷಣವೂ ದೊಡ್ಡದಾಗಿದ್ದುದು, ಎಡತೋಳು ಹೆಚ್ಚು ಉದ್ದವಾಗಿದ್ದುದು ಅರ್ಜುನನ ಇತರ ದುರ್ಲಕ್ಷಣಗಳು.

ದುರ್ಲಕ್ಷಣಗಳ ಫಲ

**ನೈವೋಕ್ತಂ ವಾಸುದೇವೇನ ದೃಶ್ಯಮಾನಮಪಿ ಸ್ಫುಟಮ್ ।**
**ಜ್ಞಾನಾನಂದಹ್ರಾಸಕರಾ ಹ್ಯೇತೇ ದೋಷಾಃ ಸದಾತನಾಃ ॥ ೧೨೬ ॥**

**ನ ಏವ ಉಕ್ತಂ ವಾಸುದೇವೇನ ದೃಶ್ಯಮಾನಂ ಅಪಿ ಸ್ಫುಟಮ್ ।**
**ಜ್ಞಾನಾನಂದಹ್ರಾಸಕರಾಃ ಹಿ ಏತೇ ದೋಷಾಃ ಸದಾತನಾಃ ॥ ೧೨೬ ॥**

**ಅರ್ಥ** :– **(ಅರ್ಜುನೇ)** = ಅರ್ಜುನನಲ್ಲಿ **(ದುರ್ಲಕ್ಷಣಂ)** = ದುರ್ಲಕ್ಷಣವು **ಸ್ಫುಟಂ** = ಸ್ಫುಟವಾಗಿ **ದೃಶ್ಯಮಾನಂ ಅಪಿ** = ಕಾಣಿಸುತ್ತಿದ್ದರೂ ಸಹ **ನ ಉಕ್ತಂ ಏವ** = ಹೇಳಲ್ಪಡಲಿಲ್ಲ. **ಹಿ** = ಯಾವ ಕಾರಣದಿಂದ **ಏತೇ** = ಈ **ದೋಷಾಃ** = ದೋಷಗಳು **ಸದಾತನಾಃ** = ಸಾರ್ವಕಾಲಿಕಗಳೋ, **(ಅತಃ)** = ಆ ಕಾರಣದಿಂದ **ಜ್ಞಾನಾನಂದಹ್ರಾಸಕರಾಃ** = ಜ್ಞಾನ ಹಾಗೂ ಆನಂದಗಳ ಹ್ರಾಸವನ್ನು ಉಂಟುಮಾಡುವವು.

**ತಾತ್ಪರ್ಯ** :- ಅವೆಲ್ಲಾ ಸ್ಫುಟವಾಗಿ ಕಾಣುತ್ತಿದ್ದರೂ ಕೃಷ್ಣ ತಿಳಿಸಲಿಲ್ಲ, ಇವೆಲ್ಲ ಜ್ಞಾನ, ಆನಂದಗಳಿಗೆ ಸದಾ ಹ್ರಾಸ ಉಂಟುಮಾಡುವಂತಹ ದುರ್ಲಕ್ಷಣಗಳು.

ಪರಶುಕ್ಲತ್ರಯರಿಗೆ ಸರ್ವಥಾ ದುಃಖವಿಲ್ಲ

**ಸಮಸ್ತಜೀವರಾಶೌ ತು ದುರ್ಲಕ್ಷಣವಿವರ್ಜಿತೌ ।**
**ಪೂರ್ಣಚಿತ್ಸುಖಶಕ್ತ್ಯಾದೇರ್ಯೋಗ್ಯೌ ಕೃಷ್ಣಾ ಚ ಮಾರುತಿಃ ॥ ೧೨೭ ॥**

**ಸಮಸ್ತಜೀವರಾಶೌ ತು ದುರ್ಲಕ್ಷಣವಿವರ್ಜಿತೌ । ಪೂರ್ಣಚಿತ್ಸುಖಶಕ್ತ್ಯಾದೇಃ ಯೋಗ್ಯೌ ಕೃಷ್ಣಾ ಚ ಮಾರುತಿಃ ॥ ೧೨೭ ॥**

**ತು** = ಲೋಭದಿಂದಲಾದರೋ **ಪಾಂಚಾಲೀ** = ದ್ರೌಪದಿಯು **ವಾಸುದೇವಂ** = ಕೃಷ್ಣನನ್ನು **ನ್ಯವಾರಯತ್** = ತಡೆದಳು.

**ತಾತ್ಪರ್ಯ** :- ವಿದ್ಯಾಶೀಲನಾದ ಯುಧಿಷ್ಠಿರ ಆ ಪ್ರಸಂಗದಿಂದಾಗಿ ಅದನ್ನು ತಿಳಿದುಕೊಳ್ಳಲು ಬಯಸಿಯಾನು ಎಂಬ ಲೋಭದಿಂದ ದ್ರೌಪದಿ ಕೃಷ್ಣನನ್ನು ಹಾಗೆ ತಡೆದಳು.

**ತದ್ಗೌರವಾದ್ವಾಸುದೇವೋ ನೋತ್ತರಂ ಪ್ರತ್ಯಭಾಷತ ।**
**ವಿಸ್ಮಾರಯಾಮಾಸ ಚ ತಂ ಪ್ರಬ್ರುವಾಣಃ ಕಥಾಂತರಮ್ ॥ ೧೨೪ ॥**

ತದ್ಗೌರವಾತ್ ವಾಸುದೇವಃ ನ ಉತ್ತರಂ ಪ್ರತ್ಯಭಾಷತ । ವಿಸ್ಮಾರಯಾಮಾಸ ಚ ತಂ ಪ್ರಬ್ರುವಾಣಃ ಕಥಾಂತರಮ್ ॥ ೧೨೪ ॥

**ಅರ್ಥ** :- **ವಾಸುದೇವಃ** = ಕೃಷ್ಣನು **ತದ್ಗೌರವಾತ್** = ಅವಳ ಮೇಲಿನ ಆದರದಿಂದಾಗಿ **ಉತ್ತರಂ** = ಮುಂದಿನದನ್ನು **ನ ಪ್ರತ್ಯಭಾಷತ** = ನುಡಿಯಲಿಲ್ಲ **ಚ** = ಮತ್ತು **ತಂ** = ಅವನನ್ನು (ಧರ್ಮರಾಜನನ್ನು) ಕುರಿತು **ಕಥಾಂತರಂ** = ಬೇರೊಂದು ವಿಷಯವನ್ನು **ಪ್ರಬ್ರುವಾಣಃ** (**ಸನ್**) = ಹೇಳುವವನಾಗಿ **ವಿಸ್ಮಾರಯಾಮಾಸ** = ಮರೆಸಿದ.

**ತಾತ್ಪರ್ಯ** :- ಕೃಷ್ಣ ದ್ರೌಪದಿಯ ಮೇಲಿನ ಪ್ರೀತಿಯಿಂದಾಗಿ ಮುಂದುವರಿಸಲಿಲ್ಲ. ಬೇರೊಂದು ವಿಷಯವನ್ನು ತೆಗೆದು ಅದನ್ನು ಮರೆಸಿದ.

### ಅರ್ಜುನನ ಇತರ ದುರ್ಲಕ್ಷಣಗಳು

**ಉದರಸ್ಯ ಕಿಂಚಿದಾಧಿಕ್ಯಂ ವೃಷಣಾಧಿಕ್ಯಮೇವ ಚ ।**
**ಸವ್ಯಬಾಹೋಸ್ತಥಾಽಽಧಿಕ್ಯಂ ದುರ್ಲಕ್ಷಣಮಥೋಽರ್ಜುನೇ ॥ ೧೨೫ ॥**

ಉದರಸ್ಯ ಕಿಂಚಿತ್ ಆಧಿಕ್ಯಂ ವೃಷಣಾಧಿಕ್ಯಂ ಏವ ಚ । ಸವ್ಯಬಾಹೋಃ ತಥಾ ಆಧಿಕ್ಯಂ ದುರ್ಲಕ್ಷಣಂ ಅಥೋ ಅರ್ಜುನೇ ॥ ೧೨೫ ॥

**ಅರ್ಥ** :- **ಅಥೋ** = ಅಲ್ಲದೆ **ಉದರಸ್ಯ** = ಹೊಟ್ಟೆಯ **ಕಿಂಚಿತ್** = ಸ್ವಲ್ಪ **ಆಧಿಕ್ಯಂ** = ಆಧಿಕ್ಯವು **ಏವ ಚ** = ಹಾಗೆಯೇ **ವೃಷಣಾಧಿಕ್ಯಂ** = ವೃಷಣದ ಆಧಿಕ್ಯವು **ತಥಾ** = ಹಾಗೂ **ಸವ್ಯಬಾಹೋಃ** =

ಎಡತೋಳಿನ **ಆಧಿಕ್ಯಂ** = ಆಧಿಕ್ಯವು **ಅರ್ಜುನೇ** = ಅರ್ಜುನನಲ್ಲಿ **ದುರ್ಲಕ್ಷಣಮ್** = ದುರ್ಲಕ್ಷಣವು.

**ತಾತ್ಪರ್ಯ** :- ಹೊಟ್ಟೆ ಸ್ವಲ್ಪ ದೊಡ್ಡದಾಗಿದ್ದುದು, ವೃಷಣವೂ ದೊಡ್ಡದಾಗಿದ್ದುದು, ಎಡತೋಳು ಹೆಚ್ಚು ಉದ್ದವಾಗಿದ್ದುದು ಅರ್ಜುನನ ಇತರ ದುರ್ಲಕ್ಷಣಗಳು.

ದುರ್ಲಕ್ಷಣಗಳ ಫಲ

**ನೈವೋಕ್ತಂ ವಾಸುದೇವೇನ ದೃಶ್ಯಮಾನಮಪಿ ಸ್ಫುಟಮ್ ।**
**ಜ್ಞಾನಾನಂದಹ್ರಾಸಕರಾ ಹ್ಯೇತೇ ದೋಷಾಃ ಸದಾತನಾಃ ॥ ೧೨೬ ॥**

ನ ಏವ ಉಕ್ತಂ ವಾಸುದೇವೇನ ದೃಶ್ಯಮಾನಂ ಅಪಿ ಸ್ಫುಟಮ್ ।
ಜ್ಞಾನಾನಂದಹ್ರಾಸಕರಾಃ ಹಿ ಏತೇ ದೋಷಾಃ ಸದಾತನಾಃ ॥ ೧೨೬ ॥

**ಅರ್ಥ** :– **(ಅರ್ಜುನೇ)** = ಅರ್ಜುನನಲ್ಲಿ **(ದುರ್ಲಕ್ಷಣಂ)** = ದುರ್ಲಕ್ಷಣವು **ಸ್ಫುಟಂ** = ಸ್ಫುಟವಾಗಿ **ದೃಶ್ಯಮಾನಂ ಅಪಿ** = ಕಾಣಿಸುತ್ತಿದ್ದರೂ ಸಹ **ನ ಉಕ್ತಂ ಏವ** = ಹೇಳಲ್ಪಡಲಿಲ್ಲ. **ಹಿ** = ಯಾವ ಕಾರಣದಿಂದ **ಏತೇ** = ಈ **ದೋಷಾಃ** = ದೋಷಗಳು **ಸದಾತನಾಃ** = ಸಾರ್ವಕಾಲಿಕಗಳೋ, **(ಅತಃ)** = ಆ ಕಾರಣದಿಂದ **ಜ್ಞಾನಾನಂದಹ್ರಾಸಕರಾಃ** = ಜ್ಞಾನ ಹಾಗೂ ಆನಂದಗಳ ಹ್ರಾಸವನ್ನು ಉಂಟುಮಾಡುವವು.

**ತಾತ್ಪರ್ಯ** :- ಅವೆಲ್ಲಾ ಸ್ಫುಟವಾಗಿ ಕಾಣುತ್ತಿದ್ದರೂ ಕೃಷ್ಣ ತಿಳಿಸಲಿಲ್ಲ, ಇವೆಲ್ಲ ಜ್ಞಾನ, ಆನಂದಗಳಿಗೆ ಸದಾ ಹ್ರಾಸ ಉಂಟುಮಾಡುವಂತಹ ದುರ್ಲಕ್ಷಣಗಳು.

ಪರಶುಕ್ಲತ್ರಯರಿಗೆ ಸರ್ವಥಾ ದುಃಖವಿಲ್ಲ

**ಸಮಸ್ತಜೀವರಾಶೌ ತು ದುರ್ಲಕ್ಷಣವಿವರ್ಜಿತೌ ।**
**ಪೂರ್ಣಚಿತ್ಸುಖಶಕ್ತ್ಯಾದೇರ್ಯೋಗ್ಯೌ ಕೃಷ್ಣಾ ಚ ಮಾರುತಿಃ ॥ ೧೨೭ ॥**

ಸಮಸ್ತಜೀವರಾಶೌ ತು ದುರ್ಲಕ್ಷಣವಿವರ್ಜಿತೌ । ಪೂರ್ಣಚಿತ್ಸುಖಶಕ್ತ್ಯಾದೇಃ ಯೋಗ್ಯೌ ಕೃಷ್ಣಾ ಚ ಮಾರುತಿಃ ॥ ೧೨೭ ॥

**ಅರ್ಥ** :- **ಸಮಸ್ತಜೀವರಾಶೌ ತು** = ಇಡೀ ಜೀವಸಮೂಹದಲ್ಲಾದರೋ **ಕೃಷ್ಣಾ** = ದ್ರೌಪದೀ **ಚ** = ಮತ್ತು **ಮಾರುತಿಃ** = ಭೀಮಸೇನ **ದುರ್ಲಕ್ಷಣವಿವರ್ಜಿತೌ** = ದುರ್ಲಕ್ಷಣವಿಲ್ಲದವರು, **ಪೂರ್ಣಚಿತ್ಸುಖಶಕ್ತ್ಯಾದೇಃ** = ಪೂರ್ಣ ಜ್ಞಾನ ಆನಂದ ಶಕ್ತಿ ಮೊದಲಾದವುಗಳಿಗೆ **ಯೋಗ್ಯೌ** = ಯೋಗ್ಯರಾದವರು.

**ತಾತ್ಪರ್ಯ** :- ಸಮಸ್ತ ಚೇತನರಾಶಿಯಲ್ಲಿ ಸಂಪೂರ್ಣದುರ್ಲಕ್ಷಣ ರಹಿತರಾಗಿದ್ದು ಪೂರ್ಣಜ್ಞಾನ, ಆನಂದ, ಶಕ್ತಿ ಮೊದಲಾದವುಗಳಿಗೆ ಯೋಗ್ಯರಾದವರು ದ್ರೌಪದಿ ಮತ್ತು ಭೀಮಸೇನ ಮಾತ್ರ.

**ಅನಾದಿದುಃಖಹೀನತ್ವೇ ಸುಖಾಧಿಕ್ಯೇ ಚ ಲಕ್ಷಣಮ್ ।**
**ರುಗ್ಮಿಣೀಸತ್ಯಭಾಮಾದಿರೂಪಾಯಾಃ ಶ್ರಿಯ ಏವ ತು ॥ ೧೨೮ ॥**

**ಅನಾದಿದುಃಖಹೀನತ್ವೇ ಸುಖಾಧಿಕ್ಯೇ ಚ ಲಕ್ಷಣಮ್ । ರುಗ್ಮಿಣೀಸತ್ಯಭಾಮಾದಿ-ರೂಪಾಯಾಃ ಶ್ರಿಯಃ ಏವ ತು ॥ ೧೨೮ ॥**

**ಅರ್ಥ** :- **ರುಗ್ಮಿಣೀಸತ್ಯಭಾಮಾದಿರೂಪಾಯಾಃ** = ರುಗ್ಮಿಣೀ-ಸತ್ಯಭಾಮಾ ಮೊದಲಾದ ರೂಪಗಳ **ಶ್ರಿಯಃ ಏವ ತು** = ಮಹಾಲಕ್ಷ್ಮಿಯ ರೂಪಗಳಿಗೆ ಮಾತ್ರ (**ಕೃಷ್ಣಾಮಾರುತ್ಯೋಃ ಸಕಾಶಾತ್**) = ದ್ರೌಪದೀ-ಭೀಮಸೇನರಿಗಿಂತ **ಅನಾದಿದುಃಖಹೀನತ್ವೇ** = ಅನಾದಿಕಾಲದಿಂದಲೂ ದುಃಖವಿಲ್ಲದಿರುವಿಕೆಯಲ್ಲಿ **ಚ** = ಮತ್ತು **ಸುಖಾಧಿಕ್ಯೇ** = ಸುಖವು ಅಧಿಕವಾಗಿರುವಿಕೆಯ ವಿಷಯದಲ್ಲಿ **ಮುಖ್ಯಂ** = ಮುಖ್ಯವಾದ **ಲಕ್ಷಣಂ** = ಲಕ್ಷಣವು (ಅಸ್ತಿ) = ಇದೆ.

**ಮುಖ್ಯಂ ತತೋಽಪಿ ಮುಖ್ಯಂ ತು ಸ್ವಾತಂತ್ರ್ಯಾದೇರಶೇಷತಃ ।**
**ಗುಣರಾಶೇಃ ಪರಂ ಲಿಂಗಂ ನಿತ್ಯಂ ವ್ಯಾಸಾದಿರೂಪಿಣಃ ।**
**ವಿಷ್ಣೋರೇವ ನ ಚಾನ್ಯಸ್ಯ ಸ ಹ್ಯೇಕಃ ಪೂರ್ಣಸದ್ಗುಣಃ ॥ ೧೨೯ ॥**

**ಮುಖ್ಯಂ ತತಃ ಅಪಿ ಮುಖ್ಯಂ ತು ಸ್ವಾತಂತ್ರ್ಯಾದೇಃ ಅಶೇಷತಃ । ಗುಣರಾಶೇಃ ಪರಂ ಲಿಂಗಂ ನಿತ್ಯಂ ವ್ಯಾಸಾದಿರೂಪಿಣಃ । ವಿಷ್ಣೋಃ ಏವ ನ ಚ ಅನ್ಯಸ್ಯ ಸಃ ಹಿ ಏಕಃ ಪೂರ್ಣಸದ್ಗುಣಃ ॥ ೧೨೯ ॥**

**ಅರ್ಥ** :- **ತತಃ ಅಪಿ** = ಅದಕ್ಕಿಂತಲೂ **ಮುಖ್ಯಂ ತು** = ಮುಖ್ಯವಾಗಿಯಾದರೋ **ಸ್ವಾತಂತ್ರ್ಯಾದೇಃ** = ಸ್ವಾತಂತ್ರ್ಯ ಮೊದಲಾದ **ಗುಣರಾಶೇಃ** = ಗುಣಸಮೂಹದ **ಅಶೇಷತಃ** = ಪರಿಪೂರ್ಣವಾಗಿ **ನಿತ್ಯಂ** = ನಿತ್ಯವೂ **ಪರಂ** = ಉತ್ಕೃಷ್ಟವೂ ಆದ **ಲಿಂಗಂ** = ಲಕ್ಷಣವು **ವ್ಯಾಸಾದಿರೂಪಿಣಃ** = ವ್ಯಾಸ ಮೊದಲಾದ ರೂಪವುಳ್ಳ **ವಿಷ್ಣೋಃ ಏವ** = ವಿಷ್ಣುವಿಗೇ (**ಅಸ್ತಿ**) = ಇದೆ. **ಅನ್ಯಸ್ಯ** = ಬೇರೊಬ್ಬರಿಗೆ **ನ ಚ** = ಇಲ್ಲ. **ಸಃ ಏಕಃ ಹಿ** = ಅವನೊಬ್ಬನೇ **ಪೂರ್ಣಸದ್ಗುಣಃ** = ಪೂರ್ಣಸದ್ಗುಣನು.

**ತಾತ್ಪರ್ಯ** :- ಅನಾದಿ ಕಾಲದಿಂದ ದುಃಖರಹಿತರಾಗಿರುವುದಕ್ಕೂ, ಅಧಿಕ ಸುಖಿಗಳಾಗಿರುವುದಕ್ಕೂ ಲಕ್ಷಣಗಳು ಸೂಚಕ. ಅಂತಹ ಸಲ್ಲಕ್ಷಣಗಳು ಮಹಾಲಕ್ಷ್ಮಿಗೆ ವಾಯು, ಭಾರತಿಯರಿಗಿಂತಲೂ ಹೆಚ್ಚು ಸ್ಪಷ್ಟ. ಅದಕ್ಕಿಂತ ಮುಖ್ಯವಾಗಿ ಆ ಲಕ್ಷಣಗಳು ವ್ಯಾಸಾದಿ ರೂಪದ ಶ್ರೀಹರಿಗೆ ಹೊರತು ಬೇರಾರಿಗೂ ಇರುವುದಿಲ್ಲ. ಅವನೊಬ್ಬನೇ ಸಂಪೂರ್ಣ ಸದ್ಗುಣಗಳಿಂದ ಪೂರ್ಣನಾದವನು.

**ಸಾಶ್ವೇಽರ್ಜುನೇ ಯಜ್ಞವಾಟಂ ಪ್ರವಿಷ್ಟೇಽಸ್ಯ ಸಹೋದರಾಃ ।**
**ಪೂಜಿತಾಃ ಪೂಜಯಾಮಾಸುರ್ಮುದಿತಾಃ ಸಹಕೇಶವಾಃ ॥ ೧೩೦ ॥**

ಸಾಶ್ವೇ ಅರ್ಜುನೇ ಯಜ್ಞವಾಟಂ ಪ್ರವಿಷ್ಟೇ ಅಸ್ಯ ಸಹೋದರಾಃ । ಪೂಜಿತಾಃ ಪೂಜಯಾಮಾಸುಃ ಮುದಿತಾಃ ಸಹಕೇಶವಾಃ ॥ ೧೩೦ ॥

**ಅರ್ಥ** :- **ಅರ್ಜುನೇ** = ಅರ್ಜುನನು **ಸಾಶ್ವೇ** = ಕುದುರೆಯ ಸಮೇತನಾಗಿ **ಯಜ್ಞವಾಟಂ** = ಯಜ್ಞಶಾಲೆಯನ್ನು **ಪ್ರವಿಷ್ಟೇ** (**ಸತಿ**) = ಪ್ರವೇಶಿಸುತ್ತಿರಲು **ಸಹಕೇಶವಾಃ** = ಕೃಷ್ಣನ ಸಮೇತರಾದ **ಮುದಿತಾಃ** = ಸಂತೋಷಗೊಂಡ **ಅಸ್ಯ** = ಅವನ **ಸಹೋದರಾಃ** = ಸೋದರರು **ಪೂಜಿತಾಃ** (**ಸಂತಃ**) = (ಅವನಿಂದ) ಪೂಜಿಸಲ್ಪಟ್ಟವರಾಗಿ **ಪೂಜಯಾಮಾಸುಃ** = (ಅರ್ಜುನನನ್ನು) ಸತ್ಕರಿಸಿದರು.

**ತಾತ್ಪರ್ಯ** :- ಅರ್ಜುನ ಯಜ್ಞಾಶ್ವದೊಂದಿಗೆ ಯಜ್ಞಶಾಲೆಯನ್ನು ಪ್ರವೇಶಿಸಿದಾಗ ಅವನ ಸಹೋದರರನ್ನು, ಕೃಷ್ಣನನ್ನು ಅವನು ಆದರಿಸಿದ; ಅವರೂ ಸಹ ಅರ್ಜುನನನ್ನು ಸತ್ಕರಿಸಿದರು.

ಪಾಂಡವರ ಅಪೂರ್ವ ಅಶ್ವಮೇಧ

**ತತಃ ಸ ಯಜ್ಞೋ ಯದುವೀರರಕ್ಷಿತೋ**
**ವ್ಯಾಸೋಪದಿಷ್ಟೋ ಮುನಿಭಿಃ ಪ್ರವರ್ತಿತಃ ।**
**ಅಶೋಭತಾಲಂ ಸಕಲೈರ್ನೃಪೈಶ್ಚ**
**ಸಮಾಗತೈರ್ವಿಪ್ರವರೈಶ್ಚ ಜುಷ್ಟಃ ॥ ೧೩೧ ॥**

**ತತಃ ಸಃ ಯಜ್ಞಃ ಯದುವೀರರಕ್ಷಿತಃ ವ್ಯಾಸೋಪದಿಷ್ಟಃ ಮುನಿಭಿಃ ಪ್ರವರ್ತಿತಃ । ಅಶೋಭತ ಅಲಂ ಸಕಲೈಃ ನೃಪೈಃ ಚ ಸಮಾಗತೈಃ ವಿಪ್ರವರೈಃ ಚ ಜುಷ್ಟಃ ॥ ೧೩೧ ॥**

**ಅರ್ಥ :-** **ತತಃ** = ಬಳಿಕ **ಯದುವೀರರಕ್ಷಿತಃ** = ಯದುವೀರನಾದ ಕೃಷ್ಣನಿಂದ ರಕ್ಷಿತವಾದ **ವ್ಯಾಸೋಪದಿಷ್ಟಃ** = ವೇದವ್ಯಾಸರಿಂದ ಉಪದಿಷ್ಟವಾದ **ಮುನಿಭಿಃ** = ಮುನಿಗಳಿಂದ **ಪ್ರವರ್ತಿತಃ** = ಪ್ರವರ್ತಿತವಾದ **ಸಃ** = ಆ **ಯಜ್ಞಃ** = ಯಜ್ಞವು **ಸಮಾಗತೈಃ** = ಆಗಮಿಸಿದ **ಸಕಲೈಃ** = ಎಲ್ಲ **ನೃಪೈಃ ಚ** = ರಾಜರಿಂದಲೂ **ಚ** = ಮತ್ತು **ವಿಪ್ರವರೈಃ** = ಬ್ರಾಹ್ಮಣಶ್ರೇಷ್ಠರಿಂದಲೂ **ಜುಷ್ಟಃ** = ಸೇವಿಸಲ್ಪಟ್ಟದ್ದಾಗಿ **ಅಲಂ** = ಚೆನ್ನಾಗಿ **ಅಶೋಭತ** = ಶೋಭಿಸಿತು.

**ತಾತ್ಪರ್ಯ :-** ಬಳಿಕ ಯದುಶ್ರೇಷ್ಠನಾದ ಕೃಷ್ಣನಿಂದ ರಕ್ಷಿತವಾಗಿ ವೇದವ್ಯಾಸರಿಂದ ಉಪದಿಷ್ಟವಾಗಿ, ಮುನಿಗಳಿಂದ ಪ್ರವರ್ತಿತವಾದ ಆ ಯಜ್ಞ ವಿಶೇಷವಾಗಿ ಶೋಭಿಸಿತು. ಎಲ್ಲ ರಾಜರುಗಳೂ ವಿಪ್ರಶ್ರೇಷ್ಠರುಗಳು ಅಲ್ಲಿಗೆ ಆಗಮಿಸಿ ಅದರಲ್ಲಿ ಪಾಲ್ಗೊಂಡರು.

**ಸ ಕೃಷ್ಣಯುಗ್ಮೇನ ಚ ಭಾರ್ಗವೇಣ**
**ತ್ರಿಧಾ ವಿಭಕ್ತೇನ ಪರೇಣ ಪುಂಸಾ ।**
**ಅಧಿಷ್ಠಿತೋಽಶೋಭತ ವಿಶ್ವಮೇತ-**
**ದ್ವಿಶ್ವಾದಿರೂಪೇಣ ಯಥೈವ ತೇನ ॥ ೧೩೨ ॥**

**ಸಃ ಕೃಷ್ಣಯುಗ್ಮೇನ ಚ ಭಾರ್ಗವೇಣ ತ್ರಿಧಾ ವಿಭಕ್ತೇನ ಪರೇಣ ಪುಂಸಾ । ಅಧಿಷ್ಠಿತಃ ಅಶೋಭತ ವಿಶ್ವಂ ಏತತ್ ವಿಶ್ವಾದಿರೂಪೇಣ ಯಥಾ ಏವ ತೇನ ॥ ೧೩೨ ॥**

**ಅರ್ಥ :-** **ಸಃ** = ಆ ಯಜ್ಞವು **ಪರೇಣ** = ಸರ್ವೋತ್ತಮನಾದ **ಪುಂಸಾ** = ಪುರುಷನಾದ ಶ್ರೀಹರಿಯಿಂದ **ತ್ರಿಧಾ** = ಮೂರು ರೀತಿಯ

**ವಿಭಕ್ತೇನ** = ರೂಪದಿಂದ ಕೂಡಿದ **ಕೃಷ್ಣಯುಗ್ಮೇನ** = ಇಬ್ಬರು ಕೃಷ್ಣರಿಂದ **ಚ** = ಮತ್ತು **ಭಾರ್ಗವೇಣ** = ಭೃಗುವಂಶದ ಪರಶುರಾಮನಿಂದ **ಅಧಿಷ್ಠಿತಃ (ಸನ್)** = ಅಧಿಷ್ಠಿತವಾಗಿ **ಅಶೋಭತ** = ಶೋಭಿಸಿತು. **ಏತತ್** = ಈ **ವಿಶ್ವಂ** = ವಿಶ್ವವು **ಯಥಾ ಏವ** = ಹೇಗೆ **ತೇನ** = ಅ ಶ್ರೀಹರಿಯಿಂದ **ವಿಶ್ವಾದಿರೂಪೇಣ** = ವಿಶ್ವ ಮೊದಲಾದ ರೂಪದಿಂದ **(ಅಶೋಭತ)** = ಶೋಭಿಸಿತೋ, **(ತಥಾ)** = ಹಾಗೆ **(ಅಶೋಭತ)** = ಶೋಭಿಸಿತು.

**ತಾತ್ಪರ್ಯ** :- ವಾಸಿಷ್ಠಕೃಷ್ಣ, ಯಾದವಕೃಷ್ಣ ಹಾಗೂ ಪರಶುರಾಮ ಎಂಬ ಮೂರು ರೂಪಗಳಿಂದ ಕೂಡಿದ್ದ ಪರಮಪುರುಷನಾದ ಶ್ರೀಹರಿಯಿಂದ ಅಧಿಷ್ಠಿತವಾದ ಆ ಯಜ್ಞವು ವಿಶ್ವ, ತೈಜಸ ಮತ್ತು ಪ್ರಾಜ್ಞ ಎಂಬ ಆ ಶ್ರೀಹರಿಯ ಮೂರು ರೂಪಗಳಿಂದ ಈ ಜಗತ್ತು ಶೋಭಿಸುವಂತೆ ಶೋಭಿಸಿತು.

### ಪಾಂಡವರ ಯಜ್ಞದ ಅಪೂರ್ವತೆ

**ಯಥಾ ವಿರಿಂಚಸ್ಯ ಪುರಾ ಸ ಯಜ್ಞೋ**
**ಯಥೈವ ಶಕ್ರಸ್ಯ ಶತಕ್ರತುತ್ವೇ ।**
**ತಥೈವ ಸೋಽಭೂದ್ವಿಧಿಶರ್ವಶಕ್ರ-**
**ಪೂರ್ವೈಃ ಸುರೈರಾವಿರಲಂಕೃತೋಽಧಿಕಮ್ ॥ ೧೩೩ ॥**

ಯಥಾ ವಿರಿಂಚಸ್ಯ ಪುರಾ ಸಃ ಯಜ್ಞಃ ಯಥಾ ಏವ ಶಕ್ರಸ್ಯ ಶತಕ್ರತುತ್ವೇ । ತಥಾ ಏವ ಸಃ ಅಭೂತ್ ವಿಧಿಶರ್ವಶಕ್ರಪೂರ್ವೈಃ ಸುರೈಃ ಆವಿಃ ಅಲಂಕೃತಃ ಅಧಿಕಮ್ ॥ ೧೩೩ ॥

**ಅರ್ಥ** :- **ಪುರಾ** = ಹಿಂದೆ **ವಿರಿಂಚಸ್ಯ** = ಬ್ರಹ್ಮನ **ಸಃ** = ಆ **ಯಜ್ಞಃ** = ಯಜ್ಞವು **ಯಥಾ** = ಹೇಗೋ, **ಶಕ್ರಸ್ಯ** = ಇಂದ್ರನ **ಶತಕ್ರತುತ್ವೇ** = ಶತಕ್ರತುತ್ವ(ಇಂದ್ರಪದವಿ) ತಂದುಕೊಡುವಲ್ಲಿ ಮಾಡಿದ **ಯಜ್ಞಃ** = ಯಜ್ಞವು **ಯಥಾ ಏವ** = ಹೇಗೋ, **ತಥಾ ಏವ** = ಹಾಗೆಯೇ **ಸಃ** = ಆ **ಯಜ್ಞಃ** = ಯಜ್ಞವು **ವಿಧಿಶರ್ವಶಕ್ರಪೂರ್ವೈಃ** = ಬ್ರಹ್ಮ-ಶಿವ-ಇಂದ್ರ ಮೊದಲಾದ **ಸುರೈಃ** = ದೇವತೆಗಳಿಂದ **ಆವಿಃ** = ಪ್ರತ್ಯಕ್ಷವಾಗಿ **ಅಧಿಕಂ** = ಬಹಳ **ಅಲಂಕೃತಃ** = ಅಲಂಕೃತವಾಗಿ **ಅಭೂತ್** = ಆಯಿತು.

**ತಾತ್ಪರ್ಯ** :- ಹಿಂದೆ ಬ್ರಹ್ಮನ ಯಜ್ಞ ಹೇಗೋ, ಇಂದ್ರ ಶತಕ್ರತು ವಾಗುವಾಗ ಮಾಡಿದ ಯಜ್ಞ ಹೇಗೋ ಹಾಗೆಯೇ ಆ ಪಾಂಡವರ ಯಜ್ಞ ಬ್ರಹ್ಮ, ಶಿವ, ಇಂದ್ರ ಮೊದಲಾದ ದೇವತೆಗಳಿಂದ ಅಲಂಕೃತಗೊಂಡು ವಿಶೇಷವಾಗಿ ಕಂಗೊಳಿಸಿತು.

**ನ ದೇವಗಂಧರ್ವಮುನಿಸ್ವಧರ್ಮ-**
**ಮರ್ತ್ಯಾದಿಕೇಷ್ವಾಸ ಸ ಯೋऽತ್ರ ನಾಸ ।**
**ಸ್ವಲಂಕೃತೈರ್ನಾಕಿಜನೈಃ ಸಕಾಂತೈ-**
**ರರೂರುಚನ್ನಾಕವದೇತದೋಕಃ ॥ ೧೩೪ ॥**

**ನ ದೇವಗಂಧರ್ವಮುನಿಸ್ವಧರ್ಮಮರ್ತ್ಯಾದಿಕೇಷು ಆಸ ಸಃ ಯಃ ಅತ್ರ ನ ಆಸ । ಸ್ವಲಂಕೃತೈಃ ನಾಕಿಜನೈಃ ಸಕಾಂತೈಃ ಅರೂರುಚತ್ ನಾಕವತ್ ಏತದೋಕಃ ॥ ೧೩೪ ॥**

**ಅರ್ಥ** :- **ದೇವಗಂಧರ್ವಮುನಿಸ್ವಧರ್ಮಮರ್ತ್ಯಾದಿಕೇಷು** = ದೇವತೆಗಳು, ಗಂಧರ್ವರು, ಮುನಿಗಳು ಮತ್ತು ತಮ್ಮ ತಮ್ಮ ವರ್ಣಾಶ್ರಮಧರ್ಮದಲ್ಲಿ ನಿರತರಾದ ಮನುಷ್ಯ ಮೊದಲಾದವರಲ್ಲಿ **ಯಃ** = ಯಾವನು **ಅತ್ರ** = ಈ ಯಜ್ಞದಲ್ಲಿ **ನ ಆಸ** = ಇರಲಿಲ್ಲವೋ (ಪಾಲ್ಗೊಂಡಿರಲಿಲ್ಲವೋ) **ಸಃ** = ಅವನು **ನ ಆಸ** = ಎಲ್ಲೂ ಇರಲಿಲ್ಲ. **ಏತದೋಕಃ** = ಈ ಯಜ್ಞಸದನವು **ಸಕಾಂತೈಃ** = ಸ್ತ್ರೀಯರೊಂದಿಗೆ ಸಹಿತರಾದ **ಸ್ವಲಂಕೃತೈಃ** = ಚೆನ್ನಾಗಿ ಅಲಂಕೃತರಾದ **ನಾಕಿಜನೈಃ** = ದೇವಲೋಕದವರಿಂದ **ನಾಕವತ್** = ಸ್ವರ್ಗದಂತೆ **ಅರೂರುಚತ್** = ಕಂಗೊಳಿಸಿತು.

**ತಾತ್ಪರ್ಯ** :- ದೇವತೆಗಳು, ಗಂಧರ್ವರು, ಮುನಿಗಳು ಮತ್ತು ಸ್ವಧರ್ಮನಿರತರಾದ ಮನುಷ್ಯರುಗಳಲ್ಲಿ ಆ ಯಜ್ಞದಲ್ಲಿ ಭಾಗವಹಿಸದಿದ್ದವರೇ ಇರಲಿಲ್ಲ. ಚೆನ್ನಾಗಿ ಅಲಂಕೃತರಾದ ಸಪತ್ನೀಕರಾದ ದೇವತೆಗಳಿಂದಾಗಿ ಆ ಸದನ ದೇವಲೋಕದಂತೆ ಕಂಗೊಳಿಸಿತು.

### ಯಾಗಸಭೆಯಲ್ಲಿ ನಡೆದ ವಾದಕಥೆಗಳು

**ತತ್ರೈವ ತತ್ತ್ವಾನಿ ಸಸಂಶಯಾನಿ**
**ನಿಃಸಂಶಯಾನ್ಯಾಸುರಲಂ ವಿವಾದೇ ।**

**ಪರಸ್ಪರೋತ್ಥೇ ಹರಿಣಾ ತ್ರಿರೂಪಿಣಾ**
**ಸಂಸ್ಥಾಪಿತಾನ್ಯಗ್ರ್ಯವಚೋಭಿರುಚ್ಚೈಃ ॥ ೧೩೫ ॥**

ತತ್ರ ಏವ ತತ್ತ್ವಾನಿ ಸಸಂಶಯಾನಿ ನಿಃಸಂಶಯಾನಿ ಆಸುಃ ಅಲಂ ವಿವಾದೇ । ಪರಸ್ಪರೋತ್ಥೇ ಹರಿಣಾ ತ್ರಿರೂಪಿಣಾ ಸಂಸ್ಥಾಪಿತಾನಿ ಅಗ್ರ್ಯವಚೋಭಿಃ ಉಚ್ಚೈಃ ॥ ೧೩೫ ॥

**ಅರ್ಥ** :- **ತತ್ರ ಏವ** = ಆ ಯಜ್ಞಶಾಲೆಯಲ್ಲೇ **ಪರಸ್ಪರೋತ್ಥೇ** = ಪರಸ್ಪರ ಹುಟ್ಟಿದ **ವಿವಾದೇ (ಸತಿ)** = ವಿವಾದವು ನಡೆಯುತ್ತಿರಲು **ಸಸಂಶಯಾನಿ** = ಸಂಶಯದಿಂದ ಕೂಡಿದ್ದ **ತತ್ತ್ವಾನಿ** = ತತ್ತ್ವಗಳು **ಅಲಂ** = ಚೆನ್ನಾಗಿ **ತ್ರಿರೂಪಿಣಾ** = ಮೂರು ರೂಪದ **ಹರಿಣಾ** = ಹರಿಯಿಂದ **ಉಚ್ಚೈಃ** = ಉಚ್ಚಸ್ವರಗಳಿಂದ **ಅಗ್ರ್ಯವಚೋಭಿಃ** = ಶ್ರೇಷ್ಠ ಮಾತುಗಳಿಂದ **ಸಂಸ್ಥಾಪಿತಾನಿ** = ಚೆನ್ನಾಗಿ ಪ್ರತಿಪಾದಿಸಲ್ಪಟ್ಟ **ನಿಃಸಂಶಯಾನಿ** = ಸಂಶಯವಿಲ್ಲದವುಗಳಾಗಿ **ಆಸುಃ** = ಆದವು.

**ತಾತ್ಪರ್ಯ** :- ಆ ಸಭೆಯಲ್ಲಿ ಪರಸ್ಪರ ತತ್ವವಿಚಾರ ನಡೆದು ಶ್ರೀಹರಿಯ ಮೂರು ರೂಪಗಳಿಂದ ಶ್ರೇಷ್ಠವಾದ ಉತ್ತಮ ವಚನಗಳಿಂದಾಗಿ ಸಂಶಯ ಕ್ಕೊಳಗಾಗಿದ್ದ ಪ್ರಮೇಯಗಳೆಲ್ಲವೂ ಸಂದೇಹಕ್ಕೆ ಎಡೆಯಿಲ್ಲದಂತೆ ನಿರ್ಣಯಗೊಂಡವು.

### ದೇವತೆಗಳೂ ಕೊಂಡಾಡಿದ ಅಶ್ವಮೇಧ

**ಪ್ರಗೀತಗಂಧರ್ವವರಃ ಪ್ರನೃತ್ತ-**
**ಸದಪ್ಸರಾಃ ಸಂತತವಾದಿವಿಪ್ರಃ ।**
**ವಿವೇಚಯದ್ದೇವನೃಪೌಘ ಏಕೋ**
**ರರಾಜ ರಾಜಾಽಖಿಲಸತ್ಕ್ರತೂನಾಮ್ ॥ ೧೩೬ ॥**

ಪ್ರಗೀತಗಂಧರ್ವವರಃ ಪ್ರನೃತ್ತಸದಪ್ಸರಾಃ ಸಂತತವಾದಿವಿಪ್ರಃ । ವಿವೇಚಯದ್ದೇವನೃ- ಪೌಘಃ ಏಕಃ ರರಾಜ ರಾಜಾ ಅಖಿಲಸತ್ಕ್ರತೂನಾಮ್ ॥ ೧೩೬ ॥

**ಅರ್ಥ** :- **ಪ್ರಗೀತಗಂಧರ್ವವರಃ** = ಉತ್ಕೃಷ್ಟವಾಗಿ ಹಾಡಿದ ಗಂಧರ್ವಶ್ರೇಷ್ಠರನ್ನು ಹೊಂದಿದ **ಪ್ರನೃತ್ತಸದಪ್ಸರಾಃ** = ಶ್ರೇಷ್ಠನೃತ್ಯದ ಉತ್ತಮ ಅಪ್ಸರೆಯರನ್ನು ಹೊಂದಿದ **ಸಂತತವಾದಿವಿಪ್ರಃ** = ನಿರಂತರವಾಗಿ

ತತ್ತ್ವನಿರ್ಣಯುವನ್ನು ಮಾಡುವ ಬ್ರಾಹ್ಮಣರನ್ನು ಹೊಂದಿದ, **ವಿವೇಚಯದ್ದೇವನೃಪೌಘಃ** = ತತ್ತ್ವವಿವೇಚನೆಯನ್ನು ಮಾಡುವ ದೇವತೆಗಳ ಹಾಗೂ ರಾಜರ ಸಮೂಹವನ್ನು ಹೊಂದಿದ **ಅಖಿಲಸತ್ತ್ರತೂನಾಂ** = ಎಲ್ಲ ಉತ್ತಮವಾದ ಯಾಗಗಳ **ಏಕಃ** = ಮುಖ್ಯವಾದ **ರಾಜಾ** = ಚಕ್ರವರ್ತಿಯಾದ ಆ ಯಾಗವು **ರರಾಜ** = ಮೆರೆಯಿತು.

**ತಾತ್ಪರ್ಯ** :- ಆ ಶ್ರೇಷ್ಠವಾದ ಯಜ್ಞದಲ್ಲಿ ಗಂಧರ್ವಶ್ರೇಷ್ಠರುಗಳು ಉತ್ತಮವಾಗಿ ಹಾಡಿದರು. ಶ್ರೇಷ್ಠ ಅಪ್ಸರೆಯರು ಚೆನ್ನಾಗಿ ನರ್ತಿಸಿದರು. ವಿಪ್ರರುಗಳು ತತ್ವನಿರ್ಣಯದ ವಿಚಾರವನ್ನು ಸದಾ ಮಾಡಿದರು. ದೇವತೆಗಳ ಹಾಗೂ ರಾಜರ ಗುಂಪುಗಳು ತಮ್ಮ ಹಿರಿಮೆಯನ್ನು ಪ್ರತ್ಯೇಕವಾಗಿ ಮೆರೆದವು. ಹೀಗೆ ಎಲ್ಲ ಉತ್ತಮ ಯಾಗಗಳಿಗೂ ಚಕ್ರವರ್ತಿಯಂತಹ ಆ ಯಾಗ ನಡೆಯಿತು.

**ಸಮಸ್ತದೇವ್ಯಃ ಸಹವಾಸುದೇವ್ಯಃ**
**ಸ್ವಲಂಕೃತಾಃ ಫುಲ್ಲಮುಖಾರವಿಂದಾಃ ।**
**ವಿಚೇರುರತ್ರೈವ ಸಹಾಪ್ಸರೋಭಿ-**
**ರ್ನಿಷೇದುರಪ್ಯಚ್ಯುತಸತ್ಕಥಾರಮಾಃ ॥ ೧೩೭ ॥**

**ಸಮಸ್ತದೇವ್ಯಃ ಸಹವಾಸುದೇವ್ಯಃ ಸ್ವಲಂಕೃತಾಃ ಫುಲ್ಲಮುಖಾರವಿಂದಾಃ । ವಿಚೇರುಃ ಅತ್ರ ಏವ ಸಹ ಅಪ್ಸರೋಭಿಃ ನಿಷೇದುಃ ಅಪಿ ಅಚ್ಯುತಸತ್ಕಥಾರಮಾಃ ॥ ೧೩೭ ॥**

**ಅರ್ಥ** :- **ಸಹವಾಸುದೇವ್ಯಃ** = ವಾಸುದೇವನಾದ ಕೃಷ್ಣನ ಪತ್ನಿಯರೊಂದಿಗೆ ಕೂಡಿದ **ಸ್ವಲಂಕೃತಾಃ** = ಚೆನ್ನಾಗಿ ಅಲಂಕೃತಗೊಂಡ **ಫುಲ್ಲಮುಖಾರವಿಂದಾಃ** = ಅರಳಿದ ಮುಖಕಮಲವನ್ನು ಉಳ್ಳ **ಸಮಸ್ತದೇವ್ಯಃ** = ಎಲ್ಲ ದೇವತಾಸ್ತ್ರೀಯರು **ಅತ್ರ ಏವ** = ಆ ಯಜ್ಞಶಾಲೆಯಲ್ಲಿಯೇ **ಅಪ್ಸರೋಭಿಃ ಸಹ** = ಅಪ್ಸರೆಯರೊಂದಿಗೆ ಕೂಡಿಕೊಂಡು **ವಿಚೇರುಃ** = ಓಡಾಡಿದರು. **ಅಚ್ಯುತಸತ್ಕಥಾರಮಾಃ** = ಅಚ್ಯುತನ ಉತ್ತಮಕಥೆಗಳಲ್ಲಿ ಆನಂದಿಸುವವರಾಗಿ **ನಿಷೇದುಃ** = ನೆಲೆಸಿದರು.

**ತಾತ್ಪರ್ಯ** :- ಅರಳಿದ ಮುಖಕಮಲ ಹೊಂದಿದಂತಹ ಸಮಸ್ತ ದೇವತಾಸ್ತ್ರೀಯರು ಕೃಷ್ಣಪತ್ನಿಯರೊಂದಿಗೆ ಚೆನ್ನಾಗಿ ಅಲಂಕೃತರಾದವರಾಗಿ

ಅಪ್ಸರೆಯರೊಂದಿಗೆ ಆ ಯಜ್ಞಶಾಲೆಯಲ್ಲಿ ಓಡಾಡಿದರು. ಶ್ರೀಹರಿಯ ಉತ್ತಮಕಥೆಗಳಲ್ಲಿ ನಲಿಯುತ್ತಾ ಪಾಲ್ಗೊಂಡರು.

**ಅಶ್ವಮೇಧದ ವೈಭವ**

**ನ ವೈ ಮುಮುಕ್ಷುರ್ನ ಬುಭೂಷುರತ್ರ**
**ನ ವೈ ವಿವಿತ್ಸುಶ್ಚ ಕುತೋ ಬುಭುಕ್ಷುಃ ।**
**ನಾಸತ್ಯಕಾಮಾ ಅಭವನ್ ಕುತಶ್ಚಿತ್**
**ಪ್ರದಾತರಿ ಪ್ರಾಜ್ಞವರೇಽನಿಲಾತ್ಮಜೇ ॥ ೧೩೮ ॥**

ನ ವೈ ಮುಮುಕ್ಷುಃ ನ ಬುಭೂಷುಃ ಅತ್ರ ನ ವೈ ವಿವಿತ್ಸುಃ ಚ ಕುತಃ ಬುಭುಕ್ಷುಃ । ನ ಅಸತ್ಯಕಾಮಾಃ ಅಭವನ್ ಕುತಶ್ಚಿತ್ ಪ್ರದಾತರಿ ಪ್ರಾಜ್ಞವರೇ ಅನಿಲಾತ್ಮಜೇ ॥ ೧೩೮ ॥

**ಅರ್ಥ** :- **ಪ್ರಾಜ್ಞವರೇ** = ಶ್ರೇಷ್ಠಜ್ಞಾನಿಯಾದ **ಅನಿಲಾತ್ಮಜೇ** = ವಾಯುಪುತ್ರನಾದ ಭೀಮಸೇನನು **ಪ್ರದಾತರಿ** (**ಸತಿ**) = ದಾನ ಕೊಡುತ್ತಿರುವಲ್ಲಿ **ಅತ್ರ** = ಈ ಯಜ್ಞಸಭೆಯಲ್ಲಿ **ಮುಮುಕ್ಷುಃ** = ಮೋಕ್ಷವನ್ನು ಬಯಸುವವನು **ನ** (**ಅಭವತ್**) **ವೈ** = ಇರಲೇ ಇಲ್ಲ. **ಬುಭೂಷುಃ** = ಸಂಪತ್ತನ್ನು ಬಯಸುವವನು **ನ ವೈ** = ಇರಲೇ ಇಲ್ಲ. **ಚ** = ಮತ್ತು **ವಿವಿತ್ಸುಃ** = ತತ್ತ್ವವನ್ನು ತಿಳಿಯಬಯಸುವವನು **ನ ವೈ** = ಇರಲೇ ಇಲ್ಲ. **ಬುಭುಕ್ಷುಃ** = ಭೋಜನಮಾಡಲು ಬಯಸಿದವನು **ಕುತಃ** = ಎಲ್ಲಿ ತಾನೆ ಇದ್ದನು? (ಎಲ್ಲಿಯೂ ಇರಲಿಲ್ಲ). **ಕುತಶ್ಚಿತ್** = ಎಲ್ಲಿಯೂ **ಅಸತ್ಯಕಾಮಾಃ** = ಬಯಕೆ ಈಡೇರದವರು **ನ ಅಭವನ್** = ಇರಲಿಲ್ಲ.

**ತಾತ್ಪರ್ಯ** :- ಪ್ರಾಜ್ಞವರ್ಯನಾದ ಭೀಮಸೇನ ದಾನ ನೀಡಲು ನಿಂತಾಗ ಯಾರ ಬಯಕೆಗಳೂ ಸಹ ಈಡೇರದೇ ಉಳಿಯಲಿಲ್ಲ. ಅಲ್ಲಿ ಮೋಕ್ಷ ಬಯಸುವವನಾಗಲೀ, ಸಂಪತ್ತು ಬಯಸುವವ- ನಾಗಲೀ, ತತ್ವಜಿಜ್ಞಾಸುವಾಗಲೀ, ಅನ್ನಾರ್ಥಿಯಾಗಲೀ ಇರಲೇ ಇಲ್ಲ.

**ದಿನೇ ದಿನೇ ತತ್ರ ಮಹಾನ್ನಪರ್ವತಾಃ**
**ಸಭಕ್ಷಸಾರಾ ರಸವಂತ ಊರ್ಜಿತಾಃ ।**
**ನದ್ಯಃ ಪಯಃಸರ್ಪಿರಜಸ್ರಪೂರ್ಣಾಃ**
**ಸಮಾಕ್ಷಿಕಾದ್ಯಾ ಅಪಿ ಪಾಯಸಹ್ರದಾಃ ॥ ೧೩೯ ॥**

ದಿನೇ ದಿನೇ ತತ್ರ ಮಹಾನ್ನಪರ್ವತಾಃ ಸಭಕ್ಷ್ಯಸಾರಾಃ ರಸವಂತಃ ಊರ್ಜಿತಾಃ । ನದ್ಯಃ ಪಯಃಸರ್ಪಿರಜಸ್ರಪೂರ್ಣಾಃ ಸಮಾಕ್ಷಿಕಾದ್ಯಾಃ ಅಪಿ ಪಾಯಸಹ್ರದಾಃ ॥ ೧೩೯ ॥

**ಅರ್ಥ** :- **ತತ್ರ** = ಆ ಯಜ್ಞದಲ್ಲಿ **ದಿನೇ ದಿನೇ** = ಪ್ರತಿದಿನವೂ **ಊರ್ಜಿತಾಃ** = ಉತ್ಕೃಷ್ಟಗಳಾದ **ರಸವಂತಃ** = ರಸದಿಂದ ತುಂಬಿದ **ಸಭಕ್ಷ್ಯಸಾರಾಃ** = ಭಕ್ಷ್ಯವಿಶೇಷಗಳಿಂದ ಸಹಿತವಾದ **ಮಹಾನ್ನಪರ್ವತಾಃ** = ಉತ್ತಮವಾದ ಅನ್ನದ ಪರ್ವತಗಳು **ಸಮಾಕ್ಷಿಕಾದ್ಯಾಃ** = ಜೇನು–ಕಬ್ಬು ಮೊದಲಾದವುಗಳು **ಪಯಃಸರ್ಪಿರಜಸ್ರಪೂರ್ಣಾಃ** = ಹಾಲು–ತುಪ್ಪಗಳಿಂದ ನಿರಂತರ ಪೂರ್ಣವಾದ **ನದ್ಯಃ** = ನದಿಗಳು, **ಪಾಯಸಹ್ರದಾಃ ಅಪಿ** = ಪಾಯಸದ ಮಡುಗಳೂ ಸಹ

**ಹ್ರದಾ ಮಹಾಂತಸ್ತ್ರಿದಶಾದಿಯೋಗ್ಯಾಃ**
**ಸುಯೋಗಯುಕ್ತಾ ಹರಿಚಂದನಾದೇಃ ।**
**ತಥಾಽಂಜನಾಲಕ್ತಕಮುಖ್ಯಮಂಡನ-**
**ದ್ರವ್ಯಾಗ್ರ್ಯವಾಪ್ಯೋ ಮಣಿಕಾಂಚನೋದ್ಭವಾಃ ॥ ೧೪೦ ॥**

ಹ್ರದಾಃ ಮಹಾಂತಃ ತ್ರಿದಶಾದಿಯೋಗ್ಯಾಃ ಸುಯೋಗಯುಕ್ತಾಃ ಹರಿಚಂದನಾದೇಃ । ತಥಾ ಅಂಜನಾಲಕ್ತಕಮುಖ್ಯಮಂಡನದ್ರವ್ಯಾಗ್ರ್ಯವಾಪ್ಯಃ ಮಣಿಕಾಂಚನೋದ್ಭವಾಃ ॥ ೧೪೦ ॥

**ಅರ್ಥ** :- **ತ್ರಿದಶಾದಿಯೋಗ್ಯಾಃ** = ದೇವತೆಗಳು ಮೊದಲಾದವರಿಗೆ ಯೋಗ್ಯವಾದ **ಸುಯೋಗಯುಕ್ತಾಃ** = (ಕಸ್ತೂರಿ ಮೊದಲಾದ) ದ್ರವ್ಯಯೋಗದಿಂದ ಕೂಡಿದ **ಹರಿಚಂದನಾದೇಃ** = ಶ್ರೀಗಂಧ–ದೇವದಾರು–ಕೃಷ್ಣಾಗರು ಮೊದಲಾದವುಗಳ ಗಂಧದ **ಮಹಾಂತಃ** = ದೊಡ್ಡ ವಿಸ್ತೀರ್ಣದ **ಹ್ರದಾಃ** = ಮಡುಗಳು, **ತಥಾ** = ಅದರಂತೆ **ಮಣಿಕಾಂಚನೋದ್ಭವಾಃ** = ರತ್ನ–ಸುವರ್ಣಗಳಿಂದ ನಿರ್ಮಾಣಗೊಂಡ **ಅಂಜನಾಲಕ್ತಕಮುಖ್ಯಮಂಡನದ್ರವ್ಯಾಗ್ರ್ಯವಾಪ್ಯಃ** = ಕಾಡಿಗೆ, ಅಲಕ್ತಕ (ಅರಗಿನಿಂದ ಮಾಡಿದ್ದು) ಮೊದಲಾದ ಅಲಂಕಾರನಿಮಿತ್ತವಾದ ಹರಿದ್ರಾ–ಕುಂಕುಮದ್ರವ್ಯಶ್ರೇಷ್ಠಗಳ ಬಾವಿಗಳು,

**ಯಥೇಷ್ಟಪಾನಾಶನಭೋಗಶಿಷ್ಟಾಃ**
**ಸಹಸ್ರಶೋ ಮಾರುತಿನಾ ತು ಕಾರಿತಾಃ ।**

**ಗಂಧಾ ರಸಾದ್ಯಾಶ್ಚ ಸಮಸ್ತಭೋಗಾ**
**ದಿವೀವ ತತ್ರಾಸುರತೀವ ಹೃದ್ಯಾಃ ॥ ೧೪೧ ॥**

ಯಥೇಷ್ಟಪಾನಾಶನಭೋಗಶಿಷ್ಟಾಃ ಸಹಸ್ರಶಃ ಮಾರುತಿನಾ ತು ಕಾರಿತಾಃ । ಗಂಧಾಃ ರಸಾದ್ಯಾಃ ಚ ಸಮಸ್ತಭೋಗಾಃ ದಿವಿ ಇವ ತತ್ರ ಆಸುಃ ಅತೀವಹೃದ್ಯಾಃ ॥ ೧೪೧ ॥

**ಅರ್ಥ** :- **ಯಥೇಷ್ಟಪಾನಾಶನಭೋಗಶಿಷ್ಟಾಃ** = ಇಷ್ಟದಂತೆ ಕುಡಿಯುವ, ತಿನ್ನುವ ಭೋಗ್ಯವಸ್ತುಗಳಿಂದ ವಿಶಿಷ್ಟವಾದವುಗಳು **ಮಾರುತಿನಾ** = ವಾಯುಪುತ್ರನಾದ ಭೀಮಸೇನನಿಂದ **ಕಾರಿತಾಃ** = ನಿರ್ಮಿಸಲ್ಪಟ್ಟವು **ಸಹಸ್ರಸಂಖ್ಯಾಕಾಃ** = ಸಾವಿರಾರು ಸಂಖ್ಯೆಯವು **ಗಂಧಾಃ** = ಗಂಧಗಳು **ಚ** = ಮತ್ತು **ರಸಾದ್ಯಾಃ** = ರಸ ಮೊದಲಾದವುಗಳು **ಸಮಸ್ತಭೋಗಾಃ** = ಎಲ್ಲ ಭೋಗಗಳು **ದಿವಿ ಇವ** = ದೇವಲೋಕದಲ್ಲೆಂಬಂತೆ **ತತ್ರ** = ಆ ಯಜ್ಞದಲ್ಲಿ **ಅತೀವಹೃದ್ಯಾಃ** = ಅತ್ಯಂತ ಮನೋಹರಗಳಾಗಿ **ಆಸುಃ** = ಆದವು.

**ತಾತ್ಪರ್ಯ** :- ಪ್ರತಿ ದಿನವೂ ಅಲ್ಲಿ ಅನ್ನದ ಮಹಾಪರ್ವತಗಳು, ಭಕ್ಷ್ಯಗಳ ಸಾರಗಳು, ರಸ ತುಂಬಿದ ದೊಡ್ಡ ನದಿಗಳು, ಹಾಲು, ಜೇನುಗಳಿಂದ ತುಂಬಿದ್ದ ಪಾಯಸದ ಮಡುಗಳು, ಉಂಟಾದವು. ದೇವತೆಗಳೇ ಮೊದಲಾದವರಿಗೆ ಯೋಗ್ಯವಾದ, ಮಹತ್ತರವಾದ ಶ್ರೀಗಂಧ ಮೊದಲಾದವುಗಳ ದೊಡ್ಡ ಮಡುಗಳು, ಅದರಂತೆ ಕಾಡಿಗೆ, ಅಲಕ್ತಕ ಮೊದಲಾದ ಅಲಂಕಾರ ದ್ರವ್ಯಗಳಿಂದ ತುಂಬಿದ್ದ, ರತ್ನ, ಚಿನ್ನಗಳ ಶ್ರೇಷ್ಠ ಬಾವಿಗಳು, ಇತರ ಯಥೇಚ್ಛವಾದ ಅನ್ನ, ಪಾನಯೋಗ್ಯವಾದ ಭೋಗವಸ್ತುಗಳಿಂದ ಕೂಡಿದ್ದವು. ಗಂಧ, ರಸ ಮೊದಲಾದ ಸಕಲ ಭೋಗವಸ್ತುಗಳೂ ಎಲ್ಲವೂ ಸಹಸ್ರ ಸಂಖ್ಯೆಯಲ್ಲಿ ಭೀಮಸೇನನಿಂದ ಏರ್ಪಡಿಸಲ್ಪಟ್ಟವುಗಳಾಗಿ ಅತ್ಯಂತ ಹೃದ್ಯವಾಗಿ ದೇವಲೋಕದಲ್ಲಿ ಹೇಗೋ ಹಾಗೆ ಅಲ್ಲಿ ತುಂಬಿದ್ದವು.

**ನೈತಾದೃಶಃ ಕಶ್ಚನ ಭೂತಪೂರ್ವೋ**
**ಮಖೋ ವಿನಾ ರಾಮವಿರಿಂಚವಜ್ರಿಣಾಮ್ ।**
**ಮಖಾನಿತಿ ಪ್ರೋಚುರಶೇಷಲೋಕಾ**
**ದೃಷ್ಟ್ವಾ ಮಖಂ ತಂ ಪುರುಷೋತ್ತಮೇರಿತಮ್ ॥ ೧೪೨ ॥**

**ನ ಏತಾದೃಶಃ ಕಶ್ಚನ ಭೂತಪೂರ್ವಃ ಮಖಃ ವಿನಾ ರಾಮವಿರಿಂಚವಜ್ರಿಣಾಮ್ । ಮಖಾನ್ ಇತಿ ಪ್ರೋಚುಃ ಅಶೇಷಲೋಕಾಃ ದೃಷ್ಟ್ವಾ ಮಖಂ ತಂ ಪುರುಷೋತ್ತಮೇರಿತಮ್ ॥ ೧೪೨ ॥**

**ಅರ್ಥ** :- **ಅಶೇಷಲೋಕಾಃ** = ಎಲ್ಲ ಜನರೂ **ಪುರುಷೋತ್ತಮೇರಿತಂ** = ಪುರುಷೋತ್ತಮನಿಂದ ಪ್ರೇರಿತವಾದ **ತಂ** = ಆ **ಮಖಂ** = ಯಜ್ಞವನ್ನು **ದೃಷ್ಟ್ವಾ** = ನೋಡಿ, **ರಾಮವಿರಿಂಚವಜ್ರಿಣಾಂ** = ರಾಮ-ಬ್ರಹ್ಮ-ಇಂದ್ರರ **ಮಖಾನ್** = ಯಜ್ಞಗಳನ್ನು **ವಿನಾ** = ಹೊರತುಪಡಿಸಿ **ಭೂತಪೂರ್ವಃ** = ಈ ಮೊದಲು **ಏತಾದೃಶಃ** = ಇಂತಹ **ಕಶ್ಚನ** = ಯಾವ **ಮಖಃ** = ಯಜ್ಞವು **ನ (ಅಭೂತ್)** = ಆಗಲಿಲ್ಲ **ಇತಿ** = ಎಂದು **ಪ್ರೋಚುಃ** = ಹೇಳಿದರು.

**ತಾತ್ಪರ್ಯ** :- ಕೃಷ್ಣನಿಂದ ನಡೆಸಲ್ಪಟ್ಟಂತಹ ಅಂತಹ ಯಜ್ಞ ರಾಮ, ಬ್ರಹ್ಮ ಮತ್ತು ಇಂದ್ರರ ಯಜ್ಞಗಳನ್ನು ಹೊರತು ಮತ್ತೊಂದು ಯಾವುದೂ ಇಲ್ಲ ಎಂದು ಆ ಯಜ್ಞವನ್ನು ನೋಡಿದ ಸಕಲ ಜನರೂ ಸಹ ನುಡಿದರು

ಹದಿನೈದು ವರ್ಷಗಳ ಯಜ್ಞ

**ಸ ಏವಮದ್ಧಾ ಹರಿದೈವತಃ ಕ್ರತುಃ**
**ಪಂಚಾಶ್ವಮೇಧಾತ್ಮಕ ಉಚ್ಚಕಲ್ಪಃ ।**
**ದಿನೇ ದಿನೇ ಸ್ವೃದ್ಧಗುಣೋ ಬಭೂವ**
**ಮುದಾವಹೋ ವತ್ಸರಪಂಚಕತ್ರಯಮ್ ॥ ೧೪೩ ॥**

**ಸಃ ಏವಂ ಅದ್ಧಾ ಹರಿದೈವತಃ ಕ್ರತುಃ ಪಂಚಾಶ್ವಮೇಧಾತ್ಮಕಃ ಉಚ್ಚಕಲ್ಪಃ । ದಿನೇ ದಿನೇ ಸ್ವೃದ್ಧಗುಣಃ ಬಭೂವ ಮುದಾವಹಃ ವತ್ಸರಪಂಚಕತ್ರಯಮ್ ॥ ೧೪೩ ॥**

**ಅರ್ಥ** :- **ವತ್ಸರಪಂಚಕತ್ರಯಂ** = ಹದಿನೈದು ವರ್ಷಗಳ ಪರ್ಯಂತ **ದಿನೇ ದಿನೇ** = ಪ್ರತಿದಿನವೂ **ಸ್ವೃದ್ಧಗುಣಃ** = ಚೆನ್ನಾಗಿ ವೃದ್ಧಿಸಿದ ಗುಣವುಳ್ಳ **ಉಚ್ಚಕಲ್ಪಃ** = ಉತ್ತಮಕಲ್ಪದ **ಪಂಚಾಶ್ವಮೇಧಾತ್ಮಕಃ** = ಐದು ಅಶ್ವಮೇಧ ಸ್ವರೂಪದ **ಹರಿದೈವತಃ** = ಹರಿಯನ್ನು ದೇವತೆಯನ್ನಾಗಿ ಉಳ್ಳ **ಸಃ** = ಆ **ಕ್ರತುಃ** = ಯಜ್ಞವು **ಏವಂ** = ಹೀಗೆ **ಅದ್ಧಾ** = ಚೆನ್ನಾಗಿ **ಮುದಾವಹಃ** = ಆನಂದವನ್ನು ತಂದುಕೊಡುವುದಾಗಿ **ಬಭೂವ** = ಆಯಿತು.

**ತಾತ್ಪರ್ಯ** :- ಹೀಗೆ ಶ್ರೀಹರಿಯನ್ನೇ ದೇವತೆಯನ್ನಾಗಿ ಹೊಂದಿದ ಪಂಚಾಶ್ವಮೇಧಾತ್ಮಕವಾದ ಉತ್ತಮ ಕಲ್ಪದ ಆ ಯಜ್ಞ ಹದಿನೈದು ವರ್ಷಗಳ ವರೆಗೆ ದಿನೇದಿನೇ ಹೆಚ್ಚು ಗುಣಗಳಿಂದ ಕೂಡಿ ಆನಂದದಾಯಕವಾಗಿ ನಡೆಯಿತು.

### ಪಾಂಡವರು ಮಾಡಿದ ಸರ್ವಸಮರ್ಪಣೆ

**ಯಜ್ಞಾವಸಾನೇ ನಿಖಿಲಾಶ್ಚ ಪಾಂಡವಾಃ**
**ಕೃಷ್ಣಾ ಚ ಪೃಥ್ವೀಮಖಿಲಾಂ ಸವಿತ್ತಾಮ್ ।**
**ಮಾಂಗಲ್ಯಮಾತ್ರಂ ದಯಿತಾಶರೀರೇ**
**ನಿಧಾಯ ಸರ್ವಾಭರಣಾನಿ ಚೈವ ॥ ೧೪೪ ॥**

ಯಜ್ಞಾವಸಾನೇ ನಿಖಿಲಾಃ ಚ ಪಾಂಡವಾಃ ಕೃಷ್ಣಾ ಚ ಪೃಥ್ವೀಂ ಅಖಿಲಾಂ ಸವಿತ್ತಾಮ್ । ಮಾಂಗಲ್ಯಮಾತ್ರಂ ದಯಿತಾಶರೀರೇ ನಿಧಾಯ ಸರ್ವಾಭರಣಾನಿ ಚ ಏವ ॥ ೧೪೪ ॥

**ಸಮರ್ಪಯಾಮಾಸುರಜೇ ವರೇಣ್ಯೇ**
**ವ್ಯಾಸೇ ವಿಭಾಗಾಯ ಯಥೋಕ್ತಮೃತ್ವಿಜಾಮ್ ।**
**ಪ್ರಿಯೋ ವಿಭಾಗೋ ಯದಮುಷ್ಯ ವಿಷ್ಣೋ-**
**ರತೋ ವಿಭಾಗಾರ್ಥಮಿವಾರ್ಪಯಂಸ್ತೇ ॥ ೧೪೫ ॥**

ಸಮರ್ಪಯಾಮಾಸುಃ ಅಜೇ ವರೇಣ್ಯೇ ವ್ಯಾಸೇ ವಿಭಾಗಾಯ ಯಥೋಕ್ತಂ ಋತ್ವಿಜಾಮ್ । ಪ್ರಿಯಃ ವಿಭಾಗಃ ಯತ್ ಅಮುಷ್ಯ ವಿಷ್ಣೋಃ ಅತಃ ವಿಭಾಗಾರ್ಥಂ ಇವ ಅರ್ಪಯನ್ ತೇ ॥ ೧೪೫ ॥

**ಅರ್ಥ** :– **ಯಜ್ಞಾವಸಾನೇ** = ಯಜ್ಞವು ಮುಗಿದ ಮೇಲೆ **ನಿಖಿಲಾಃ ಚ** = ಎಲ್ಲಾ **ಪಾಂಡವಾಃ** = ಪಾಂಡವರು **ಚ** = ಮತ್ತು **ಕೃಷ್ಣಾ** = ದ್ರೌಪದಿಯು **ಸವಿತ್ತಾಂ** = ಕೋಶಸಮೇತವಾದ **ಅಖಿಲಾಂ** = ಇಡೀ **ಪೃಥ್ವೀಂ** = ಭೂಮಿಯನ್ನು, **ದಯಿತಾಶರೀರೇ** = ಪತ್ನಿಯರ ದೇಹದಲ್ಲಿ **ಮಾಂಗಲ್ಯಮಾತ್ರಂ** = ಮಾಂಗಲ್ಯವನ್ನು ಮಾತ್ರ **ನಿಧಾಯ** = ಇರಿಸಿ **ಚ** = ಮತ್ತು **ಸರ್ವಾಭರಣಾನಿ ಏವ** = ಎಲ್ಲ ಆಭರಣಗಳನ್ನು **ಯಥಾ ಉಕ್ತಂ** = (ಶಾಸ್ತ್ರದಲ್ಲಿ) ಹೇಳಲ್ಪಟ್ಟಂತೆ **ಋತ್ವಿಜಾಂ** = ಋತ್ವಿಜರಿಗೆ

**ವಿಭಾಗಾಯ** = ವಿಭಾಗಿಸಲು **ಅಜೇ** = ಹುಟ್ಟಿಲ್ಲದ **ವರೇಣ್ಯೇ** = ಭಜನೀಯನಾದ **ವ್ಯಾಸೇ** = ವೇದವ್ಯಾಸರಲ್ಲಿ **ಸಮರ್ಪಯಾಮಾಸುಃ** = ಸಮರ್ಪಿಸಿದರು. **ಅಮುಷ್ಯ** = ಈ **ವಿಷ್ಣೋಃ** = ವ್ಯಾಸರೂಪದ ವಿಷ್ಣುವಿಗೆ **ವಿಭಾಗಃ** = ವಿಭಾಗವು **ಯತ್** = ಯಾವ ಕಾರಣದಿಂದ **ಪ್ರಿಯಃ** = ಪ್ರಿಯವ್ವೋ, **ಅತಃ** = ಆ ಕಾರಣದಿಂದ **ವಿಭಾಗಾರ್ಥಂ** = ವಿಭಾಗಮಾಡಿ ಕೊಡುವುದಕ್ಕೋಸ್ಕರ **ಇವ** = ಎಂಬಂತೆ **ತೇ** = ಅವರು (ಪಾಂಡವರು) **(ಹರಯೇ)** = ಶ್ರೀಹರಿಯಾದ ವೇದವ್ಯಾಸರಿಗೆ **ಅರ್ಪಯನ್** = ಅರ್ಪಿಸಿದರು.

**ತಾತ್ಪರ್ಯ** :- ಯಜ್ಞ ಮುಗಿದ ಮೇಲೆ ಸಕಲ ಪಾಂಡವರು ಹಾಗೂ ದ್ರೌಪದಿ ಕೋಶ ಸಮೇತವಾಗಿ ಸಮಸ್ತ ಪೃಥ್ವಿಯನ್ನೂ, ಪತ್ನಿಯರ ಮೈಮೇಲಿನ ಮಾಂಗಲ್ಯವನ್ನು ಮಾತ್ರ ಬಿಟ್ಟು ಸಕಲ ಆಭರಣಗಳನ್ನೂ ಸಹ ಋತ್ವಿಕ್‌ಗಳಿಗೆ ಶಾಸ್ತ್ರೋಕ್ತವಾದ ರೀತಿಯಾಗಿ ವಿಭಾಗ ಮಾಡಿ ನೀಡಲೆಂದು ಅಜನೂ, ಭಜನೀಯನೂ ಆದ ವೇದವ್ಯಾಸರಿಗೆ ಒಪ್ಪಿಸಿದರು. ವ್ಯಾಸರೂಪದ ಶ್ರೀಹರಿಗೆ ವಿಭಾಗ ಮಾಡುವುದು ಪ್ರಿಯವಾದುದಲ್ಲವೇ. ಆದರಿಂದ ವಿಭಾಗ ಮಾಡಿ ನೀಡಲೆಂಬಂತೆ ಅವನಿಗೆ ಸಮರ್ಪಿಸಿದರು.

**ಹೃದಾ ಸಮಸ್ತಂ ಹರಯೇಽರ್ಪಿತಂ ತೈಃ**
**ಸ ಹಿ ದ್ವಿಜಸ್ಥೋಽಪಿ ಸಮಸ್ತಕರ್ತಾ ।**
**ದೇಹೇಂದ್ರಿಯಪ್ರಾಣಮನಾಂಸಿ ಚೇತನ್ಯೈಃ**
**ಸಹೈವ ತಸ್ಮಾ ಅತಿಸೃಜ್ಯ ನೇಮುಃ ॥ ೧೪೬ ॥**

ಹೃದಾ ಸಮಸ್ತಂ ಹರಯೇ ಅರ್ಪಿತಂ ತೈಃ ಸಃ ಹಿ ದ್ವಿಜಸ್ಥಃ ಅಪಿ ಸಮಸ್ತಕರ್ತಾ । ದೇಹೇಂದ್ರಿಯಪ್ರಾಣಮನಾಂಸಿ ಚೇತನ್ಯೈಃ ಸಹ ಏವ ತಸ್ಮೈ ಅತಿಸೃಜ್ಯ ನೇಮುಃ ॥ ೧೪೬ ॥

**ಅರ್ಥ** :- **ತೈಃ** = ಅವರಿಂದ (ಆ ಪಾಂಡವರಿಂದ) **ಹರಯೇ** = ಶ್ರೀಹರಿಗೆ **ಹೃದಾ** = ಹೃತ್ಪೂರ್ವಕದಿಂದ **ಸಮಸ್ತಂ** = ಎಲ್ಲವೂ **ಅರ್ಪಿತಂ** = ಅರ್ಪಿತವು (ಆಯಿತು). **ದ್ವಿಜಸ್ಥಃ (ಸನ್)** = ಬ್ರಾಹ್ಮಣರಲ್ಲಿ ನೆಲೆಸಿರುವವರಾಗಿ **ಸಃ ಅಪಿ** = ಅವರೂ ಸಹ (ವೇದವ್ಯಾಸರೂ ಸಹ) **ಸಮಸ್ತಕರ್ತಾ ಹಿ** = ಸರ್ವಕರ್ತೃವೇ ಅಲ್ಲವೆ. **ಚೇತನ್ಯೈಃ ಸಹ** =

ಸ್ವರೂಪಗಳೊಂದಿಗೆ **ದೇಹೇಂದ್ರಿಯಪ್ರಾಣಮನಾಂಸಿ** = ದೇಹ, ಇಂದ್ರಿಯ, ಪ್ರಾಣ, ಮನಸ್ಸುಗಳನ್ನು **ತಸ್ಮೈ ಏವ** = ಅವನಿಗೇ (ಆ ವ್ಯಾಸರಿಗೇ) **ಅತಿಸೃಜ್ಯ** = ಸಮರ್ಪಿಸಿ **ನೇಮುಃ** = ನಮಸ್ಕರಿಸಿದರು.

**ತಾತ್ಪರ್ಯ** :- ಹೀಗೆ ಹೃತ್ಪೂರ್ವಕವಾಗಿ ಎಲ್ಲವನ್ನೂ ಶ್ರೀಹರಿಗೆ ಅರ್ಪಿಸಿಲು ಅವನು ಸಕಲ ದ್ವಿಜರಲ್ಲಿದ್ದು ಸಮಸ್ತ ಕಾರ್ಯಗಳನ್ನು ಮಾಡಿಸುವವನು ಎಂಬುದೂ ಕಾರಣ. ದೇಹ, ಇಂದ್ರಿಯ, ಪ್ರಾಣ, ಮನಸ್ಸುಗಳನ್ನು ಚೇತನ ಸಮೇತವಾಗಿ ಅವನಿಗೆ ಒಪ್ಪಿಸಿ ನಮಸ್ಕರಿಸಿದರು.

**ತ್ವದೀಯಮೇತನ್ನಿಖಿಲಂ ವಯಂ ಚ**
**ನಾಸ್ತ್ಯಸ್ಮದೀಯಂ ಕ್ವ ಚ ಕಿಂಚನೇಶ ।**
**ಸ್ವತಂತ್ರ ಏಕೋಽಸಿ ನ ಕಶ್ಚಿದನ್ಯಃ**
**ಸರ್ವತ್ರ ಪೂರ್ಣೋಽಸಿ ಸದೇತಿ ಹೃಷ್ಟಾಃ ॥ ೧೪೭ ॥**

**ತ್ವದೀಯಂ ಏತತ್ ನಿಖಿಲಂ ವಯಂ ಚ ನ ಅಸ್ತಿ ಅಸ್ಮದೀಯಂ ಕ್ವ ಚ ಕಿಂಚನ ಈಶ । ಸ್ವತಂತ್ರಃ ಏಕಃ ಅಸಿ ನ ಕಶ್ಚಿತ್ ಅನ್ಯಃ ಸರ್ವತ್ರ ಪೂರ್ಣಃ ಅಸಿ ಸದಾ ಇತಿ ಹೃಷ್ಟಾಃ ॥ ೧೪೭ ॥**

**ಅರ್ಥ** :- **ವಯಂ** = ನಾವು **ಚ** = ಮತ್ತು **ಏತತ್** = ಈ **ನಿಖಿಲಂ** = ಎಲ್ಲವು **ತ್ವದೀಯಂ** = ನಿಮ್ಮದೇ. **ಈಶ** = ಈಶನೇ **ಕ್ವ ಚ** = ಎಲ್ಲೂ **ಅಸ್ಮದೀಯಂ** = ನಮ್ಮದೆಂಬುದು **ಕಿಂಚನ** = ಎಷ್ಟೂ **ನ ಅಸ್ತಿ** = ಇಲ್ಲ. **(ತ್ವಂ) ಏಕಃ** = ನೀನೊಬ್ಬನೇ **ಸ್ವತಂತ್ರಃ** = ಸ್ವತಂತ್ರನು **ಅಸಿ** = ಆಗಿರುವಿ. **ಅನ್ಯಃ ಕಶ್ಚಿತ್** = ಬೇರಾವನೂ **ನ** = ಅಲ್ಲ. **(ತ್ವಂ)** = ನೀನು **ಸರ್ವತ್ರ** = ಎಲ್ಲೆಡೆಯೂ **ಪೂರ್ಣಃ** = ಪೂರ್ಣನು **ಅಸಿ** = ಆಗಿರುವಿ **ಇತಿ** = ಎಂದು **ಹೃಷ್ಟಾಃ (ಸಂತಃ)** = ಸಂತೋಷವುಳ್ಳವರಾಗಿ **(ಊಚುಃ/ನೇಮುಃ)** = ನುಡಿದರು (ನಮಸ್ಕರಿಸಿದರು).

**ತಾತ್ಪರ್ಯ** :- ಈ ಸಕಲವೂ ನಿಮ್ಮದೇ, ನಾವೂ ಸಹ. ನಮ್ಮದೆಂಬುದು ಎಲ್ಲೂ, ಎಷ್ಟೂ ಇಲ್ಲ. ಈಶನೇ ನೀನೊಬ್ಬನೇ ಸ್ವತಂತ್ರನಾದವನು, ಬೇರಾವನೂ ಅಲ್ಲ. ನೀನು ಸದಾ ಸರ್ವತ್ರಪೂರ್ಣನಾದವನು ಎಂದು ಆನಂದದಿಂದ ನುಡಿದರು.

**ತತೋ ವಿಭಕ್ತೇ ಮುನಯೋಽವದಂಸ್ತೇ**
**ಪ್ರತ್ಯರ್ಪಯಾಮೋ ವಯಮೇಷು ರಾಜ್ಯಮ್ ।**
**ಪೂರ್ಣಾ ಹಿರಣ್ಯೇನ ವಯಂ ಧರಾಯಾಃ**
**ಪ್ರಪಾಲನೇ ಯೋಗ್ಯತಮಾ ಇಮೇ ಹಿ ॥ ೧೪೮ ॥**

**ತತಃ ವಿಭಕ್ತೇ ಮುನಯಃ ಅವದನ್ ತೇ ಪ್ರತ್ಯರ್ಪಯಾಮಃ ವಯಂ ಏಷು ರಾಜ್ಯಮ್ । ಪೂರ್ಣಾಃ ಹಿರಣ್ಯೇನ ವಯಂ ಧರಾಯಾಃ ಪ್ರಪಾಲನೇ ಯೋಗ್ಯತಮಾಃ ಇಮೇ ಹಿ ॥ ೧೪೮ ॥**

**ಅರ್ಥ** :- **ತತಃ** = ಅದರಂತೆ **ವಿಭಕ್ತೇ** (ಸತಿ) = (ದಕ್ಷಿಣೆಯು) ವಿಭಾಗವಾಗಲು **ಮುನಯಃ** = ಮುನಿಗಳು **ತೇ** = ಅವನಿಗೆ (ಶ್ರೀವೇದವ್ಯಾಸರಿಗೆ) **ಅವದನ್** = ಹೇಳಿದರು. **ವಯಂ** = ನಾವು **ಏಷು** = ಇವರಲ್ಲಿ (ಪಾಂಡವರಲ್ಲಿ) **ರಾಜ್ಯಂ** = ರಾಜ್ಯವನ್ನು **ಪ್ರತ್ಯರ್ಪಯಾಮಃ** = ಮರಳಿ ಅರ್ಪಿಸುವೆವು. **ವಯಂ** = ನಾವು **ಹಿರಣ್ಯೇನ** = ಬಂಗಾರದಿಂದ **ಪೂರ್ಣಾಃ** = ತೃಪ್ತರು. **ಧರಾಯಾಃ** = ಭೂಮಿಯ **ಪ್ರಪಾಲನೇ** = ಚೆನ್ನಾದ ಪಾಲನೆಯಲ್ಲಿ **ಇಮೇ ಹಿ** = ಇವರೇ **ಯೋಗ್ಯತಮಾಃ** = ಅತ್ಯಂತಯೋಗ್ಯರು.

**ತಾತ್ಪರ್ಯ** :- ಅದರಂತೆ ಶ್ರೀವೇದವ್ಯಾಸರು ದಕ್ಷಿಣೆಯನ್ನು ಹಂಚಿದಾಗ ಆ ಮುನಿಗಳು ನುಡಿದರು 'ನಾವು ರಾಜ್ಯವನ್ನು ಈ ಪಾಂಡವರಿಗೇ ಮರಳಿ ನೀಡುವೆವು. ನಮಗೆ ಈ ದ್ರವ್ಯ ಮಾತ್ರ ಸಾಕು. ಭೂಮಿಯನ್ನು ಚೆನ್ನಾಗಿ ಪಾಲಿಸುವ ಕಾರ್ಯದಲ್ಲಿ ಇವರೇ ಅತ್ಯಂತ ಯೋಗ್ಯರು'.

**ಪಾರ್ಥಾಃ ಸಭಾರ್ಯಾಃ ದ್ವಿಜವಾಕ್ಯಮೇತ-**
**ನ್ನಿಶಮ್ಯ ಕೃಷ್ಣಾಯ ಪುನಃ ಪ್ರಣಮ್ಯ ।**
**ಊಚುಸ್ತಪೋ ನೋಽಸ್ತು ವನೇಽರ್ಪಯಿತ್ವಾ**
**ರಾಜ್ಯಂ ಮಖಾಂತೇ ತ್ವಯಿ ಧರ್ಮಲಬ್ಧಮ್ ॥ ೧೪೯ ॥**

**ಪಾರ್ಥಾಃ ಸಭಾರ್ಯಾಃ ದ್ವಿಜವಾಕ್ಯಂ ಏತತ್ ನಿಶಮ್ಯ ಕೃಷ್ಣಾಯ ಪುನಃ ಪ್ರಣಮ್ಯ । ಊಚುಃ ತಪಃ ನಃ ಅಸ್ತು ವನೇ ಅರ್ಪಯಿತ್ವಾ ರಾಜ್ಯಂ ಮಖಾಂತೇ ತ್ವಯಿ ಧರ್ಮಲಬ್ಧಮ್ ॥ ೧೪೯ ॥**

**ಅರ್ಥ** :– **ಏತತ್** = ಈ **ದ್ವಿಜವಾಕ್ಯಂ** = ಬ್ರಾಹ್ಮಣರ ವಾಕ್ಯವನ್ನು **ಸಭಾರ್ಯಾಃ** = ಪತ್ನೀಸಮೇತರಾದ **ಪಾರ್ಥಾಃ** = ಪಾಂಡವರು **ನಿಶಮ್ಯ** = ಕೇಳಿ, **ಕೃಷ್ಣಾಯ** = ವೇದವ್ಯಾಸರಿಗೆ **ಪುನಃ** = ಮತ್ತೆ **ಪ್ರಣಮ್ಯ** = ಭಕ್ತಿಯಿಂದ ನಮಸ್ಕರಿಸಿ **ಊಚುಃ** = ಹೇಳಿದರು. **ಮಖಾಂತೇ** = ಯಾಗದ ಕೊನೆಯಲ್ಲಿ **ತ್ವಯಿ** = ನಿಮ್ಮಲ್ಲಿ **ಧರ್ಮಲಬ್ಧಂ** = ಧರ್ಮದಿಂದ ಲಭಿಸಿದ **ರಾಜ್ಯಂ** = ರಾಜ್ಯವನ್ನು **ಅರ್ಪಯಿತ್ವಾ** = ಅರ್ಪಿಸಿ, **ನಃ** = ನಮ್ಮ ಪಾಲಿಗೆ **ವನೇ** = ಕಾಡಿನಲ್ಲಿ **ತಪಃ** = ತಪಸ್ಸು **ಅಸ್ತು** = ಇರಲಿ.

**ತಾತ್ಪರ್ಯ** :– ಮುನಿಗಳ ಆ ಮಾತನ್ನು ಕೇಳಿ ಪಾಂಡವರು ಸಪತ್ನೀಕರಾಗಿ ವೇದವ್ಯಾಸರಿಗೆ ಪುನಃ ನಮಸ್ಕರಿಸಿ ಕೇಳಿಕೊಂಡರು 'ನಾವು ಧರ್ಮದಿಂದ ಸಂಪಾದಿಸಿದ ಈ ರಾಜ್ಯವನ್ನು ಯಾಗದ ಕೊನೆಯಲ್ಲಿ ನಿಮಗೆ ಒಪ್ಪಿಸಿ ಕಾಡಿನಲ್ಲಿ ತಪಸ್ಸು ಮಾಡಲು ತೆರಳುವೆವು'.

**ಇತೀರಿತಃ ಪ್ರಾಹ ಸ ಬಾದರಾಯಣೋ**
**ಮುನೀಶ್ವರೈರಪ್ಯನುಯಾಚಿತಃ ಪ್ರಭುಃ ।**
**ಹಿರಣ್ಯಮೇವ ಸ್ವಮಿದಂ ಮುನೀನಾಂ**
**ಮದಾಜ್ಞಯಾ ಭುಂಗ್ಧ್ವಮಶೇಷರಾಜ್ಯಮ್ ॥ ೧೫೦ ॥**

ಇತೀರಿತಃ ಪ್ರಾಹ ಸಃ ಬಾದರಾಯಣಃ ಮುನೀಶ್ವರೈಃ ಅಪಿ ಅನುಯಾಚಿತಃ ಪ್ರಭುಃ । ಹಿರಣ್ಯಂ ಏವ ಸ್ವಂ ಇದಂ ಮುನೀನಾಂ ಮದಾಜ್ಞಯಾ ಭುಂಗ್ಧ್ವಂ ಅಶೇಷರಾಜ್ಯಮ್ ॥ ೧೫೦ ॥

**ಅರ್ಥ** :– **ಇತಿ** = ಹೀಗೆ **ಈರಿತಃ** = ಹೇಳಲ್ಪಟ್ಟ **ಪ್ರಭುಃ** = ಪ್ರಭುವಾದ **ಸಃ** = ಆ **ಬಾದರಾಯಣಃ** = ವೇದವ್ಯಾಸರು **ಮುನೀಶ್ವರೈಃ ಅಪಿ** = ಮುನಿಶ್ರೇಷ್ಠರಿಂದಲೂ ಸಹ **ಅನುಯಾಚಿತಃ (ಸನ್)** = ಬೇಡಲ್ಪಟ್ಟವರಾಗಿ **ಪ್ರಾಹ** = ಹೇಳಿದರು. **ಇದಂ** = ಈ **ಹಿರಣ್ಯಂ ಏವ** = ಬಂಗಾರ ಮಾತ್ರವೇ **ಮುನೀನಾಂ** = ಮುನಿಗಳ **ಸ್ವಂ** = ಸಂಪತ್ತು. **ಮದಾಜ್ಞಯಾ** = ನನ್ನ ಅಪ್ಪಣೆಯಿಂದ **ಅಶೇಷರಾಜ್ಯಂ** = ಇಡೀರಾಜ್ಯವನ್ನು **(ಯೂಯಂ)** = ನೀವು **ಭುಂಗ್ಧ್ವಮ್** = ಭೋಗಿಸಿರಿ.

**ತಾತ್ಪರ್ಯ** :- ಅವರು ಹೀಗೆನ್ನಲು, ಮುನಿಗಳೂ ಸಹ ವೇದವ್ಯಾಸರನ್ನು ಪ್ರಾರ್ಥಿಸಿಕೊಳ್ಳಲು ಪ್ರಭುವಾದ ವೇದವ್ಯಾಸರು ನುಡಿದರು 'ಮುನಿಗಳಿಗೆ ಈ ಸುವರ್ಣವೇ ಸಂಪತ್ತು, ನನ್ನ ಆದೇಶದಂತೆ ನೀವು ಸಮಸ್ತ ರಾಜ್ಯವನ್ನು ಭೋಗಿಸಿರಿ'.

**ಸಮರ್ಪಿತಂ ಮೇ ಫಲವಚ್ಚ ತತ್ಸ್ಯಾತ್**
**ಪುನರ್ಗ್ರಹೋ ನೈವ ಚ ದೋಷಕಾರೀ ।**
**ಪಿತಾಮಹೋಽಹಂ ಭವತಾಂ ವಿಶೇಷತೋ**
**ಗುರುಃ ಪತಿಶ್ಚೈವ ತತೋ ಮದರ್ಹಥ ॥ ೧೫೧ ॥**

**ಸಮರ್ಪಿತಂ ಮೇ ಫಲವತ್ ಚ ತತ್ ಸ್ಯಾತ್ ಪುನರ್ಗ್ರಹಃ ನ ಏವ ಚ ದೋಷಕಾರೀ । ಪಿತಾಮಹಃ ಅಹಂ ಭವತಾಂ ವಿಶೇಷತಃ ಗುರುಃ ಪತಿಃ ಚ ಏವ ತತಃ ಮದರ್ಹಥ ॥ ೧೫೧ ॥**

**ಅರ್ಥ** :- **ಮೇ** = ನನಗೆ **ಸಮರ್ಪಿತಂ** = ಸಮರ್ಪಿತವಾದ **ತತ್** = ಅದು **ಫಲವತ್ ಚ** = ಫಲವಾಗಿಯೂ **ಸ್ಯಾತ್** = ಆಗುವುದು. (**ಅತಃ ಏವ**) = ಆದ್ದರಿಂದಲೇ **ಪುನರ್ಗ್ರಹಃ ಚ** = ಪುನಃ ಸ್ವೀಕಾರವೂ ಸಹ **ದೋಷಕಾರೀ** = ದೋಷವನ್ನು ಉಂಟುಮಾಡುವುದು **ನ ಏವ** = ಅಲ್ಲ. **ಅಹಂ** = ನಾನು **ಭವತಾಂ** = ನಿಮ್ಮ **ಪಿತಾಮಹಃ** = ತಾತ, **ವಿಶೇಷತಃ** = ವಿಶೇಷವಾಗಿ **ಗುರುಃ** = ಗುರು, **ಚ** = ಮತ್ತು **ಪತಿಃ ಏವ** = ಸ್ವಾಮಿಯೇ (ಆಗಿರುವೆನು), **ತತಃ** = ಆದ್ದರಿಂದ **ಮದರ್ಹಥ** = ನನ್ನಿಂದ (ಸ್ವೀಕರಿಸಲು) ಅರ್ಹರು.

**ತಾತ್ಪರ್ಯ** :- ನನಗೆ ಸಮರ್ಪಿತವಾದ ಅದು ನಿಮಗೆ ಫಲದಂತೆ ನೀಡಲ್ಪಡುವುದು. ಆದ್ದರಿಂದ ಅದನ್ನು ಮರಳಿ ಸ್ವೀಕರಿಸುವುದು ನಿಮಗೆ ದೋಷಕ್ಕೆ ಕಾರಣವಾಗದು. ನಾನು ನಿಮಗೆ ತಾತ, ವಿಶೇಷವಾಗಿ ಗುರು ಹಾಗೂ ಸ್ವಾಮಿ. ಆದ್ದರಿಂದ ನನ್ನಿಂದ ನೀವು ಅದನ್ನು ಪಡೆಯಲು ಅರ್ಹರು.

**ಇತೀರಿತಾಸ್ತೇ ಪ್ರತಿಪದ್ಯ ರಾಜ್ಯಂ**
**ದದುರ್ಹಿರಣ್ಯಂ ನಿಖಿಲಂ ಚ ತಸ್ಮೈ ।**
**ವಿಭಜ್ಯ ವಿಪ್ರಾನ್ ಸ ನಿಜಂ ತು ಭಾಗ-**
**ಮದಾತ್ ಪೃಥಾಯೈ ನಿಖಿಲಂ ಪ್ರಸನ್ನಃ ॥ ೧೫೨ ॥**

ಇತೀರಿತಾಃ ತೇ ಪ್ರತಿಪದ್ಯ ರಾಜ್ಯಂ ದದುಃ ಹಿರಣ್ಯಂ ನಿಖಿಲಂ ಚ ತಸ್ಮೈ । ವಿಭಜ್ಯ ವಿಪ್ರಾನ್ ಸಃ ನಿಜಂ ತು ಭಾಗಂ ಅದಾತ್ ಪೃಥಾಯೈ ನಿಖಿಲಂ ಪ್ರಸನ್ನಃ ॥ ೧೫೨ ॥

**ಅರ್ಥ** :- **ಇತಿ** = ಹೀಗೆ **ಈರಿತಾಃ** = ಹೇಳಲ್ಪಟ್ಟ **ತೇ** = ಅವರು **ರಾಜ್ಯಂ** = ರಾಜ್ಯವನ್ನು **ಪ್ರತಿಪದ್ಯ** = ಸ್ವೀಕರಿಸಿ **ತಸ್ಮೈ** = ಅವರಿಗೆ **ನಿಖಿಲಂ** = ಎಲ್ಲ **ಹಿರಣ್ಯಂ ಚ** = ಸುವರ್ಣವನ್ನೆಲ್ಲ **ದದುಃ** = ನೀಡಿದರು. **ಸಃ** = ಅವರು **ವಿಪ್ರಾನ್** = ಬ್ರಾಹ್ಮಣರನ್ನು ಕುರಿತು **ವಿಭಜ್ಯ** = ವಿಭಾಗಿಸಿ **ನಿಜಂ** = ತಮ್ಮ **ನಿಖಿಲಂ** = ಸಮಸ್ತ **ಭಾಗಂ ತು** = ಭಾಗವನ್ನಾದರೋ **ಪ್ರಸನ್ನಃ** (ಸನ್) = ಪ್ರಸನ್ನರಾಗಿ **ಪೃಥಾಯೈ** = ಕುಂತಿಗೆ **ಅದಾತ್** = ನೀಡಿದರು.

**ತಾತ್ಪರ್ಯ** :- ವೇದವ್ಯಾಸರು ಹೀಗೆನ್ನಲು ಪಾಂಡವರು ರಾಜ್ಯವನ್ನು ಸ್ವೀಕರಿಸಿ ಸಕಲ ಸುವರ್ಣವನ್ನೂ ಅವರಿಗೆ ಒಪ್ಪಿಸಿದರು. ಅವರು ಅದನ್ನು ವಿಪ್ರರಿಗೆ ಹಂಚಿದರು; ಮತ್ತು ತಮ್ಮ ಭಾಗವನ್ನೆಲ್ಲ ಪ್ರಸನ್ನರಾಗಿ ಕುಂತಿಗೆ ನೀಡಿದರು.

**ಸಭಾರ್ಯಕಾಣಾಂ ವರರತ್ನಭೂಷಣಾ-**
**ನ್ಯಶೇಷತಃ ಪುತ್ರಭುವಾಂ ಪ್ರದಾಯ ।**
**ಪೃಥಕ್ ಪೃಥಗ್ಯೋಗ್ಯವರಾಂಸ್ತಥೈಭ್ಯಃ**
**ಪ್ರಾದಾತ್ ಪ್ರಭುಸ್ತೇ ಮುದಿತಾಃ ಪ್ರಣೇಮುಃ ॥ ೧೫೩ ॥**

ಸಭಾರ್ಯಕಾಣಾಂ ವರರತ್ನಭೂಷಣಾನಿ ಅಶೇಷತಃ ಪುತ್ರಭುವಾಂ ಪ್ರದಾಯ । ಪೃಥಕ್ ಪೃಥಕ್ ಯೋಗ್ಯವರಾನ್ ತಥಾ ಏಭ್ಯಃ ಪ್ರಾದಾತ್ ಪ್ರಭುಃ ತೇ ಮುದಿತಾಃ ಪ್ರಣೇಮುಃ ॥ ೧೫೩ ॥

**ಅರ್ಥ** :- **ಪ್ರಭುಃ** = ಪ್ರಭುವಾದ ವೇದವ್ಯಾಸರು **ಸಭಾರ್ಯಕಾಣಾಂ** = ಪತ್ನೀಸಮೇತರಾದ **ಪುತ್ರಭುವಾಂ** = ತಮ್ಮ ಮಗನಾದ ಪಾಂಡುವಿನ ಮಕ್ಕಳಿಗೆ **ಅಶೇಷತಃ** = ಸಮಗ್ರವಾಗಿ **ವರರತ್ನಭೂಷಣಾನಿ** = ಶ್ರೇಷ್ಠವಾದ ರತ್ನಾಭರಣಗಳನ್ನು **ಪ್ರದಾಯ** = ನೀಡಿ, **ತಥಾ** = ಹಾಗೂ **ಏಭ್ಯಃ** = ಅವರಿಗೆ **ಯೋಗ್ಯವರಾನ್** = ಯೋಗ್ಯವಾದ ವರಗಳನ್ನು **ಪೃಥಕ್ ಪೃಥಕ್** = ಪ್ರತ್ಯೇಕ ಪ್ರತ್ಯೇಕ **ಪ್ರಾದಾತ್** = ನೀಡಿದರು. **ಮುದಿತಾಃ** =

ಆನಂದಗೊಂಡ **ತೇ** = ಅವರು **ಪ್ರಣೇಮುಃ** = ಭಕ್ತಿಯಿಂದ ನಮಸ್ಕರಿಸಿದರು.

**ತಾತ್ಪರ್ಯ** :- ಸಪತ್ನೀಕರಾದ ಪಾಂಡವರಿಗೆ ಪ್ರಭು ಶ್ರೀವೇದವ್ಯಾಸರು ಶ್ರೇಷ್ಠವಾದ ರತ್ನಾಭರಣಗಳನ್ನು ಸಮಗ್ರವಾಗಿ ನೀಡಿ ಅವರಿಗೆಲ್ಲ ಪ್ರತ್ಯೇಕ ಪ್ರತ್ಯೇಕವಾಗಿ ಯೋಗ್ಯವಾದ ವರಗಳನ್ನು ನೀಡಿದರು. ಪಾಂಡವರು ಆನಂದದಿಂದ ಅವರಿಗೆ ನಮಸ್ಕರಿಸಿದರು.

### ಬಹುಸುವರ್ಣಕವಾದ ಅಶ್ವಮೇಧ

**ತದ್ಯಜ್ಞಪಂಚಕಮಜಸ್ತ್ರಿಗುಣಾಂ ಸ ಏಭ್ಯಃ**
**ಸದ್ದಕ್ಷಿಣಾಂ ಕ್ರತುಪತಿರ್ನಿಖಿಲಾಮವಾಪ್ಯ ।**
**ಚಕ್ರೇಽಶ್ವಮೇಧತ್ರಯಮೇಕಮೇಕಂ**
**ತೇಷಾಂ ಹರಿರ್ಬಹುಸುವರ್ಣಕನಾಮಧೇಯಮ್ ॥ ೧೫೪ ॥**

**ತತ್ ಯಜ್ಞಪಂಚಕಂ ಅಜಃ ತ್ರಿಗುಣಾಂ ಸಃ ಏಭ್ಯಃ ಸದ್ದಕ್ಷಿಣಾಂ ಕ್ರತುಪತಿಃ ನಿಖಿಲಾಂ ಅವಾಪ್ಯ । ಚಕ್ರೇ ಅಶ್ವಮೇಧತ್ರಯಂ ಏಕಂ ಏಕಂ ತೇಷಾಂ ಹರಿಃ ಬಹುಸುವರ್ಣಕನಾಮಧೇಯಮ್ ॥ ೧೫೪ ॥**

**ಅರ್ಥ** :- **ಏಭ್ಯಃ** = ಆ ಪಾಂಡವರಿಗೆ **ಕ್ರತುಪತಿಃ** = ಯಜ್ಞಸ್ವಾಮಿ ಯಾದ **ಅಜಃ** = ಅಜನಾದ **ಸಃ** = ಆ **ಹರಿಃ** = ಹರಿಯು **ತ್ರಿಗುಣಾಂ** = ಮೂರು ಪಟ್ಟು **ನಿಖಿಲಾಂ** = ಪೂರ್ಣವಾದ **ಸದ್ದಕ್ಷಿಣಾಂ** = ಉತ್ತಮದಕ್ಷಿಣೆಯನ್ನು **ಅವಾಪ್ಯ** = ಹೊಂದಿ, **ತೇಷಾಂ** = ಅವರ (ಪಾಂಡವರ) **ತತ್** = ಆ **ಯಜ್ಞಪಂಚಕಂ** = ಐದು ಯಜ್ಞಗಳನ್ನು **ಬಹುಸುವರ್ಣಕನಾಮಧೇಯಂ** = ಬಹುಸುವರ್ಣಕ ಎಂಬುದಾಗಿ **ಚಕ್ರೇ** = ಮಾಡಿದರು. **ಏಕಂ ಏಕಂ** = ಒಂದೊಂದು (**ಯಜ್ಞಂ**) = ಯಜ್ಞವನ್ನು **ಅಶ್ವಮೇಧತ್ರಯಂ** = ಮೂರು ಅಶ್ವಮೇಧವನ್ನಾಗಿ **ಚಕ್ರೇ** = ಮಾಡಿದರು.

**ತಾತ್ಪರ್ಯ** :- ಶ್ರೀವೇದವ್ಯಾಸರು ಉತ್ತಮ ದಕ್ಷಿಣೆಗಳಿಂದ ಕೂಡಿದ ಆ ಐದು ಯಜ್ಞಗಳನ್ನು ಅವರಿಗೆ ಉತ್ತಮ ದಕ್ಷಿಣಗಳಿಂದ ಕೂಡಿದ ಮುಮ್ಮಡಿ ಯಜ್ಞವನ್ನಾಗಿಸಿ ಆ ಮೂರು ಅಶ್ವಮೇಧಗಳಲ್ಲಿ ಒಂದೊಂದನ್ನೂ ಸಹ ಬಹುಸುವರ್ಣಕ ಎಂಬ ಯಜ್ಞವನ್ನಾಗಿ ಮಾಡಿದರು.

ದೈತ್ಯ ಮುಂಗುಸಿಯ ಕಥೆ

**ಸಕೃಷ್ಣೇಷ್ವಥ ಪಾರ್ಥೇಷು ಸುಸ್ನಾತಾವಭೃಥೇಷ್ವಲಮ್ ।**
**ಪಂಚೇಂದ್ರವದ್ವಿರಾಜತ್ಸು ಸ್ತೂಯಮಾನೇಷ್ವಪೀಶ್ವರೈಃ ॥ ೧೫೫ ॥**

ಸಕೃಷ್ಣೇಷು ಅಥ ಪಾರ್ಥೇಷು ಸುಸ್ನಾತಾವಭೃಥೇಷು ಅಲಮ್ । ಪಂಚ ಇಂದ್ರವತ್ ವಿರಾಜತ್ಸು ಸ್ತೂಯಮಾನೇಷು ಅಪಿ ಈಶ್ವರೈಃ ॥ ೧೫೫ ॥

**ಅರ್ಥ** :- **ಅಥ** = ಅನಂತರ **ಸಕೃಷ್ಣೇಷು** = ಕೃಷ್ಣಸಮೇತರಾದ **ಪಾರ್ಥೇಷು** = ಪಾಂಡವರು **ಅಲಂ** = ಚೆನ್ನಾಗಿ **ಸುಸ್ನಾತಾವಭೃಥೇಷು** = ಅವಭೃಥಸ್ನಾನವನ್ನು ಪೂರೈಸಿ **ಪಂಚ** = ಐವರು **ಇಂದ್ರವತ್** = ಇಂದ್ರರಂತೆ **ವಿರಾಜತ್ಸು** = ವಿರಾಜಿಸುತ್ತಾ **ಈಶ್ವರೈಃ ಅಪಿ** = ದೇವತೆಗಳಿಂದಲೂ ಸಹ **ಸ್ತೂಯಮಾನೇಷು (ಸತ್ಸು)** = ಕೊಂಡಾಡಲ್ಪಡುತ್ತಿರಲು,

**ತಾತ್ಪರ್ಯ** :- ಪಾಂಡವರು ಕೃಷ್ಣ ಸಮೇತರಾಗಿ ಚೆನ್ನಾಗಿ ಅವಭೃಥ ಸ್ನಾನವನ್ನು ಪೂರೈಸಿ ಐವರು ಇಂದ್ರರಂತೆ ಕಂಗೊಳಿಸಿದರು. ದೇವತೆಗಳು ಅವರನ್ನು ಕೊಂಡಾಡಿದರು.

ಯಮನಿಗೆ ಆತಿಥ್ಯ ನೀಡಿದ ವಿಪ್ರಕುಟುಂಬ

**ಸ್ತೂಯಮಾನೇ ಚ ತದ್ಯಜ್ಞೇ ಕ್ರೋಧೋ ನಕುಲತಾಂ ಗತಃ ।**
**ಕೃತ್ವೋಗ್ರಗರ್ಜನಂ ಯಜ್ಞಂ ತಾಂಶ್ಚ ಯಜ್ಞಕೃತೋಽಖಿಲಾನ್ ॥ ೧೫೬ ॥**

ಸ್ತೂಯಮಾನೇ ಚ ತದ್ಯಜ್ಞೇ ಕ್ರೋಧಃ ನಕುಲತಾಂ ಗತಃ । ಕೃತ್ವಾ ಉಗ್ರಗರ್ಜನಂ ಯಜ್ಞಂ ತಾನ್ ಚ ಯಜ್ಞಕೃತಃ ಅಖಿಲಾನ್ ॥ ೧೫೬ ॥

**ಅರ್ಥ** :- **ತದ್ಯಜ್ಞೇ ಚ** = ಆ ಯಜ್ಞವು ಸಹ **ಸ್ತೂಯಮಾನೇ** (ಸತಿ) = ಕೊಂಡಾಡಲ್ಪಡುತ್ತಿರಲು **ಕ್ರೋಧಃ** = ಕ್ರೋಧನು (ಕ್ರೋಧಾಭಿಮಾನಿ ದೈತ್ಯನು) **ನಕುಲತಾಂ** = ಮುಂಗುಸಿಯ ಜನ್ಮವನ್ನು **ಗತಃ** (**ಸನ್**) = ಹೊಂದಿದವನಾಗಿ **ಉಗ್ರಗರ್ಜನಂ** = ಭಯಂಕರವಾದ ಗರ್ಜನೆಯನ್ನು **ಕೃತ್ವಾ** = ಮಾಡಿ **ಯಜ್ಞಂ** = ಯಜ್ಞವನ್ನು **ಚ** = ಮತ್ತು **ಯಜ್ಞಕೃತಃ** = ಯಜ್ಞವನ್ನು ಮಾಡಿದ **ತಾನ್ ಅಖಿಲಾನ್** = ಅವರೆಲ್ಲರನ್ನು

**ಗರ್ಹಯನ್ನೂಚಿವಾನಿತ್ಥಂ ಭಾರ್ಯಾಪುತ್ರಸ್ನುಷಾಯುತಃ ।**
**ಸಕ್ತುಪ್ರಸ್ಥಮದಾದ್ವಿಪ್ರ ಉಂಛವೃತ್ತಿಃ ಸುಭಕ್ತಿತಃ ॥ ೧೫೭ ॥**

ಗರ್ಹಯನ್ ಊಚಿವಾನ್ ಇತ್ಥಂ ಭಾರ್ಯಾಪುತ್ರಸ್ನುಷಾಯುತಃ । ಸಕ್ತುಪ್ರಸ್ಥಂ ಅದಾತ್ ವಿಪ್ರಃ ಉಂಛವೃತ್ತಿಃ ಸುಭಕ್ತಿತಃ ॥ ೧೫೭ ॥

**ಧರ್ಮಾಯಾತಿಥಯೇ ತಸ್ಯ ಕಲಾಂ ನಾರ್ಹತಿ ಷೋಡಶೀಮ್ ।**
**ಯಜ್ಞೋಽಯಮಿತಿ ಹೇತುಂ ಚ ವಿಪ್ರೈಃ ಪೃಷ್ಟೇಽಭ್ಯಭಾಷತ ॥ ೧೫೮ ॥**

ಧರ್ಮಾಯ ಅತಿಥಯೇ ತಸ್ಯ ಕಲಾಂ ನ ಅರ್ಹತಿ ಷೋಡಶೀಮ್ । ಯಜ್ಞಃ ಅಯಂ ಇತಿ ಹೇತುಂ ಚ ವಿಪ್ರೈಃ ಪೃಷ್ಟೇ ಅಭ್ಯಭಾಷತ ॥ ೧೫೮ ॥

**ಅರ್ಥ :- ಗರ್ಹಯನ್** = ನಿಂದಿಸುತ್ತಾ **ಇತ್ಥಂ** = ಹೀಗೆ **ಊಚಿವಾನ್** = ಹೇಳುವವನಾದ. **ಭಾರ್ಯಾಪುತ್ರಸ್ನುಷಾಯುತಃ** = ಹೆಂಡತಿ ಮಗ ಹಾಗೂ ಸೊಸೆಯಿಂದ ಕೂಡಿದ **ಊಂಛವೃತ್ತಿಃ** = ಊಂಛವೃತ್ತಿಯ **ವಿಪ್ರಃ** = ಬ್ರಾಹ್ಮಣನು **ಸುಭಕ್ತಿತಃ** = ಅತ್ಯಂತಭಕ್ತಿಯಿಂದ **ಅತಿಥಯೇ** = ಅತಿಥಿಯಾದ **ಧರ್ಮಾಯ** = ಯಮಧರ್ಮನಿಗೆ **ಸಕ್ತುಪ್ರಸ್ಥಂ** = ಸಕ್ತುಪ್ರಸ್ಥವನ್ನು **ಅದಾತ್** = ನೀಡಿದ. **ಅಯಂ** = ಈ **ಯಜ್ಞಃ** = ಯಜ್ಞವು **ತಸ್ಯ** = ಅದರ (ಅವನು ಮಾಡಿದ ಅತಿಥಿಪೂಜೆಯ) **ಷೋಡಶೀಂ** = ಹದಿನಾರನೆಯ **ಕಲಾಂ** = ಭಾಗಕ್ಕೂ **ನ ಅರ್ಹತಿ** = ಅರ್ಹವಾಗದು. **ಇತಿ (ಊಚಿವಾನ್)** = ಎಂದು ಹೇಳಿದ. **ವಿಪ್ರೈಃ** = ಬ್ರಾಹ್ಮಣರಿಂದ **ಪೃಷ್ಟೇ (ಸತಿ)** = ಕೇಳಲ್ಪಡಲು **ಹೇತುಂ ಚ** = ಕಾರಣವನ್ನೂ **ಅಭ್ಯಭಾಷತ** = ಹೇಳಿದ.

**ತಾತ್ಪರ್ಯ :-** ಯಜ್ಞವು ಹಾಗೆ ಪ್ರಶಂಸಿಸಲ್ಪಡುತ್ತಿದ್ದಾಗ ಕ್ರೋಧಾಭಿಮಾನಿಯಾದ ಒಬ್ಬ ಅಸುರ ಮುಂಗುಸಿಯ ರೂಪವನ್ನು ತಳೆದು ಭಯಂಕರವಾಗಿ ಗರ್ಜಿಸಿ ಆ ಯಜ್ಞವನ್ನು ಹಾಗೂ ಯಜ್ಞ ಮಾಡಿದ ಅವರೆಲ್ಲರನ್ನೂ ನಿಂದಿಸುತ್ತ ಹೀಗೆ ಹೇಳತೊಡಗಿದ ''ಹೆಂಡತಿ, ಮಗ ಹಾಗೂ ಸೊಸೆಯೊಂದಿಗೆ ಕೂಡಿದ ಒಬ್ಬ ವಿಪ್ರ ಉಂಛವೃತ್ತಿಯಲ್ಲಿ ಜೀವಿಸುತ್ತಾ ಅತ್ಯಂತ ಭಕ್ತಿಯಿಂದ ಸಕ್ತುಪ್ರಸ್ಥವನ್ನು ಅತಿಥಿರೂಪದಲ್ಲಿ ಬಂದಿದ್ದ ಯಮನಿಗೆ ನೀಡಿದ, ಆ ಪುಣ್ಯಕ್ಕೆ ಈ ಯಜ್ಞವು ಹದಿನಾರನೇ ಒಂದಂಶಕ್ಕೂ ಸಾಟಿಯಾಗದು ಎಂದು ನುಡಿದ. ಮುನಿಗಳು ಅದಕ್ಕೆ ಕಾರಣವನ್ನು ಕೇಳಲು ಹೇಳತೊಡಗಿದ.

ಅತಿಥಿಯ ಪಾದೋದಕದ ಮಹಿಮೆ - ತಮಸ್ಸಿಗೆ ತೆರಳಿದ ಮುಂಗುಸಿ

**ಅತಿಥೇಸ್ತಸ್ಯ ಪಾದೋದಕ್ಲಿನ್ನಃ ಪಾರ್ಶ್ವೋ ಹಿರಣ್ಮಯಃ ।**
**ಏಕೋ ಮಮಾಭೂದಪರಃ ಸರ್ವತೀರ್ಥಾದಿಕೇಷ್ವಪಿ ॥ ೧೫೯ ॥**

ಅತಿಥೇಃ ತಸ್ಯ ಪಾದೋದಕ್ಲಿನ್ನಃ ಪಾರ್ಶ್ವಃ ಹಿರಣ್ಮಯಃ । ಏಕಃ ಮಮ ಅಭೂತ್ ಅಪರಃ ಸರ್ವತೀರ್ಥಾದಿಕೇಷು ಅಪಿ ॥ ೧೫೯ ॥

**ಮಜ್ಜತೋಽವಭೃಥೇಷ್ವದ್ಧಾ ಯಜ್ಞಾನಾಮತ್ರ ಚಾದರಾತ್ ।**
**ನಾಭೂದಿತ್ಯಥ ತತ್ತತ್ತ್ವವೇದಿಭಿರ್ಮುನಿಪುಂಗವೈಃ ॥ ೧೬೦ ॥**

ಮಜ್ಜತಃ ಅವಭೃಥೇಷು ಅದ್ಧಾ ಯಜ್ಞಾನಾಂ ಅತ್ರ ಚ ಆದರಾತ್ । ನ ಅಭೂತ್ ಇತಿ ಅಥ ತತ್ತತ್ತ್ವವೇದಿಭಿಃ ಮುನಿಪುಂಗವೈಃ ॥ ೧೬೦ ॥

**ಕೃಷ್ಣೇನ ಚ ತಮೋಽಂಧಂ ತಂ ಪ್ರಾಪಯದ್ಭಿಃ ಸ್ಮಿತೇ ಕೃತೇ ।**
**ಅದರ್ಶನಂ ಜಗಾಮಾಶು ತಮಃ ಪ್ರಾಪ ಚ ಕಾಲತಃ ।**
**ತದರ್ಥಮೇವ ಹೈರಣ್ಯಃ ಪಾರ್ಶ್ವಸ್ತಸ್ಯಾಭವತ್ ಪುರಾ ॥ ೧೬೧ ॥**

ಕೃಷ್ಣೇನ ಚ ತಮಃ ಅಂಧಂ ತಂ ಪ್ರಾಪಯದ್ಭಿಃ ಸ್ಮಿತೇ ಕೃತೇ । ಅದರ್ಶನಂ ಜಗಾಮ ಆಶು ತಮಃ ಪ್ರಾಪ ಚ ಕಾಲತಃ । ತದರ್ಥಂ ಏವ ಹೈರಣ್ಯಃ ಪಾರ್ಶ್ವಃ ತಸ್ಯ ಅಭವತ್ ಪುರಾ ॥ ೧೬೧ ॥

**ಅರ್ಥ** :- **ತಸ್ಯ** = ಆ **ಅತಿಥೇಃ** = ಅತಿಥಿಯ (ಯಮನ) **ಪಾದೋದಕ್ಲಿನ್ನಃ** = ಪಾದೋದಕದಿಂದ ತೋಯ್ದ **ಮಮ** = ನನ್ನ **ಏಕಃ** = ಒಂದು **ಪಾರ್ಶ್ವಃ** = ಭಾಗವು **ಹಿರಣ್ಮಯಃ** = ಬಂಗಾರಮಯವಾಗಿ **ಅಭೂತ್** = ಆಯಿತು. **ಸರ್ವತೀರ್ಥಾದಿಕೇಷು** = ಎಲ್ಲ ತೀರ್ಥಾದಿಗಳಲ್ಲಿ **ಯಜ್ಞಾನಾಂ** = ಯಜ್ಞಗಳ **ಅವಭೃಥೇಷು** = ಅವಭೃಥಗಳಲ್ಲಿ **ಅತ್ರ ಚ** = ಈ ಅಶ್ವಮೇಧದ ಅವಭೃಥದಲ್ಲೂ ಸಹ **ಆದರಾತ್** = ಶ್ರದ್ಧೆಯಿಂದ **ಮಜ್ಜತಃ ಅಪಿ** = ಮುಳುಗಿದರೂ ಸಹ **ಮಮ** = ನನ್ನ **ಅಪರಃ** = ಇನ್ನೊಂದು (**ಪಾರ್ಶ್ವಃ**) = ಪಕ್ಕವು (**ಹಿರಣ್ಮಯಃ**) = ಬಂಗಾರಮಯವು **ನ ಅಭೂತ್** = ಆಗಲಿಲ್ಲ. **ಇತಿ** = ಎಂದು (**ಹೇತುಂ ಅಬ್ರುಭಾಷತ**) = ಕಾರಣವನ್ನು ಹೇಳಿದ. **ಅಥ** = ಬಳಿಕ **ತಂ** = ಅವನನ್ನು **ಅಂಧಂ ತಮಃ** = ಅಂಧಂತಮಸ್ಸನ್ನು

ಕುರಿತು **ಪ್ಲಾಪಯದ್ಭಿಃ** = ಕಳುಹಿಸುವ **ತತ್ತತ್ತ್ವವೇದಿಭಿಃ** = ಅದರ ತತ್ತ್ವವನ್ನು ತಿಳಿದ **ಮುನಿಪುಂಗವೈಃ** = ಮುನಿಶ್ರೇಷ್ಠರಿಂದ **ಚ** = ಮತ್ತು **ಕೃಷ್ಣೇನ** = ಕೃಷ್ಣನಿಂದ **ಸ್ಮಿತೇ ಕೃತೇ (ಸತಿ)** = ಸ್ವಲ್ಪವೇ ನಕ್ಕಾಗ **ಆಶು** = ಬೇಗನೆ **ಅದರ್ಶನಂ** = ದೃಷ್ಟಿಗೆ ಗೋಚರನಾಗದೇ **ಜಗಾಮ** = ಹೋದ. **ಕಾಲತಃ** = ಕಾಲಕ್ರಮದಿಂದ **ತಮಃ** = ತಮಸ್ಸನ್ನು **ಪ್ರಾಪ ಚ** = ಹೊಂದಿದ ಕೂಡ. **ತದರ್ಥಂ ಏವ** = ಅದಕ್ಕಾಗಿಯೇ (ಅಂಧಂತಮಸ್ಸನ್ನು ಹೊಂದುವುದಕ್ಕಾಗಿಯೇ) **ಪುರಾ** = ಹಿಂದೆ **ತಸ್ಯ** = ಅವನ **ಪಾರ್ಶ್ವಃ** = ಒಂದು ಪಕ್ಕವು **ಹೈರಣ್ಯಃ** = ಬಂಗಾರದ್ದು **ಅಭವತ್** = ಆಯಿತು.

**ತಾತ್ಪರ್ಯ** :- ಆ ಅತಿಥಿಯ ಪಾದೋದಕದಿಂದ ತೊಯ್ದ ನನ್ನ ಒಂದು ಪಕ್ಕ ಚಿನ್ನದ್ದಾಯಿತು, ಇನ್ನೊಂದು ಪಕ್ಕ ಸಕಲತೀರ್ಥಾದಿಗಳಲ್ಲಿ ಮಿಂದರೂ, ಯಜ್ಞಗಳ ಅವಭೃಥಗಳಲ್ಲಿ ಆದರದಿಂದ ಸ್ನಾನ ಮಾಡಿದರೂ ಚಿನ್ನದ್ದಾಗಲಿಲ್ಲ ಎಂದು ನುಡಿದ ; ಆಗ ಅದರ ತತ್ವವನ್ನು ತಿಳಿದಿದ್ದ ಮುನಿಶ್ರೇಷ್ಠರುಗಳು ಮತ್ತು ಕೃಷ್ಣ ಅವನನ್ನು ಅಂಧಂತಮಸ್ಸಿಗೆ ಕಳಿಸಲೆಂದು ನಕ್ಕರು. ಕೂಡಲೇ ಅವನು ಕಣ್ಮರೆಯಾದ. ಮುಂದೆ ಕ್ರಮವಾಗಿ ಅಂಧಂತಮಸ್ಸನ್ನು ಸಹ ಸೇರಿದ. ಅದಕ್ಕೆಂದೇ ಹಿಂದೆ ಅದರ ಒಂದು ಪಕ್ಕ ಚಿನ್ನದ್ದಾಗಿತ್ತು.

**ಕೃಷ್ಣಸ್ಯ ಪಾಂಡವಾನಾಂ ಚ ಮಖಾದೇಶ್ಚ ಗುಣಾನ್ ಬಹೂನ್ ।**
**ವದಂತೋ ಭರ್ತ್ಸಯಾಂಚಕ್ರುಸ್ತನ್ಮತಜ್ಞಾ ಮಧುದ್ವಿಷಃ ॥ ೧೬೨ ॥**

ಕೃಷ್ಣಸ್ಯ ಪಾಂಡವಾನಾಂ ಚ ಮಖಾದೇಃ ಚ ಗುಣಾನ್ ಬಹೂನ್ । ವದಂತಃ ಭರ್ತ್ಸಯಾಂಚಕ್ರುಃ ತತ್ ಮತಜ್ಞಾಃ ಮಧುದ್ವಿಷಃ ॥ ೧೬೨ ॥

**ಅರ್ಥ** :- **ಕೃಷ್ಣಸ್ಯ** = ಕೃಷ್ಣನ **ಚ** = ಮತ್ತು **ಪಾಂಡವಾನಾಂ** = ಪಾಂಡವರ **ಚ** = ಮತ್ತು **ಮಖಾದೇಃ** = ಯಜ್ಞಾದಿಗಳ **ಬಹೂನ್** = ಬಹಳವಾದ **ಗುಣಾನ್** = ಗುಣಗಳನ್ನು **ವದಂತಃ** = ಹೇಳುವವರಾದ **(ಮುನಯಃ)** = ಮುನಿಗಳು **ತತ್** = ಅದನ್ನು (ಅಸುರನ ನಿಂದನೆಯನ್ನು) **ಮಧುದ್ವಿಷಃ** = ಮಧುವೈರಿಯಾದ ಕೃಷ್ಣನ **ಮತಜ್ಞಾಃ** = ಅಭಿಮತವೆಂದು ಅರಿತವರಾಗಿ **(ತಂ ಅಸುರಂ)** = ಆ ಅಸುರನನ್ನು **ಭರ್ತ್ಸಯಾಂಚಕ್ರುಃ** = ನಿಂದನೆಯನ್ನು ಮಾಡಿದರು.

**ತಾತ್ಪರ್ಯ** :- ಕೃಷ್ಣನ ಅಭಿಪ್ರಾಯವನ್ನು ಅರಿತಿದ್ದ ಮುನಿಗಳು ಕೃಷ್ಣನ ಹಾಗೂ ಪಾಂಡವರ ಮತ್ತು ಯಜ್ಞಾದಿಗಳ ಬಹಳ ಗುಣಗಳನ್ನು ವರ್ಣಿಸುತ್ತಾ ಆ ಅಸುರನನ್ನು ನಿಂದಿಸಿದರು.

ದೈತ್ಯ ಮುಂಗುಸಿಯ ಹಿನ್ನೆಲೆ

**ಶ್ರಾದ್ಧಾರ್ಥಂ ಹಿ ಪಯಃ ಪೂರ್ವಂ ಜಮದಗ್ನೇರದೂಷಯತ್ ।**
**ನಾಕುಲೇನೈವ ರೂಪೇಣ ಕ್ರೋಧಸ್ತಂ ಪಿತರೋಽಶಪನ್ ॥ ೧೬೩ ॥**

ಶ್ರಾದ್ಧಾರ್ಥಂ ಹಿ ಪಯಃ ಪೂರ್ವಂ ಜಮದಗ್ನೇಃ ಅದೂಷಯತ್ । ನಾಕುಲೇನ ಏವ ರೂಪೇಣ ಕ್ರೋಧಃ ತಂ ಪಿತರಃ ಅಶಪನ್ ॥ ೧೬೩ ॥

**ಅರ್ಥ** :- **ಕ್ರೋಧಃ** = ಕ್ರೋಧನು **ನಾಕುಲೇನ** = ಮುಂಗುಸಿಯ **ರೂಪೇಣ ಏವ** = ರೂಪದಿಂದಲೇ **ಪೂರ್ವಂ** = ಹಿಂದೆ **ಶ್ರಾದ್ಧಾರ್ಥಂ** = ಶ್ರಾದ್ಧಕ್ಕೆಂದು ಕಲ್ಪಿತವಾಗಿದ್ದ **ಜಮದಗ್ನೇಃ** = ಜಮದಗ್ನಿಋಷಿಗಳ **ಪಯಃ** = ಹಾಲನ್ನು **ಅದೂಷಯತ್ ಹಿ** = ಎಂಜಲು ಮಾಡಿದನು. **ತಂ** = ಅವನನ್ನು **ಪಿತರಃ** = ಪಿತೃದೇವತೆಗಳು **ಅಶಪನ್** = ಶಪಿಸಿದರು.

**ಭವ ತ್ವಂ ನಕುಲಸ್ತಾವದ್ಯಾವದ್ಧರ್ಮಾದಿಕಾನ್ ಸುರಾನ್ ।**
**ಕ್ಷೇಪ್ಸ್ಯಸೀತಿ ತಮೋ ಘೋರಂ ಭೂಯಃ ಪಾಪೇನ ಯಾತ್ವಯಮ್ ।**
**ಇತ್ಯಭಿಪ್ರೇತ್ಯ ತೈಃ ಶಪ್ತಸ್ತಥಾ ಕೃತ್ವಾ ತಮೋಽಭ್ಯಯಾತ್ ॥ ೧೬೪ ॥**

ಭವ ತ್ವಂ ನಕುಲಃ ತಾವತ್ ಯಾವತ್ ಧರ್ಮಾದಿಕಾನ್ ಸುರಾನ್ । ಕ್ಷೇಪ್ಸ್ಯಸಿ ಇತಿ ತಮಃ ಘೋರಂ ಭೂಯಃ ಪಾಪೇನ ಯಾತು ಅಯಮ್ । ಇತಿ ಅಭಿಪ್ರೇತ್ಯ ತೈಃ ಶಪ್ತಃ ತಥಾ ಕೃತ್ವಾ ತಮಃ ಅಭ್ಯಯಾತ್ ॥ ೧೬೪ ॥

**ಅರ್ಥ** :- **ತೈಃ** = ಆ ಪಿತೃಗಳಿಂದ **ಅಯಂ** = ಈ ಕ್ರೋಧನು **ಭೂಯಃ** = (ಮುಂಗುಸಿ ಜನ್ಮವನ್ನು ಪಡೆದ ಅನಂತರ) ಬಹಳವಾದ **ಪಾಪೇನ** = (ವಿಷ್ಣುವೈಷ್ಣವನಿಂದಾರೂಪವಾದ)ಪಾಪದಿಂದ **ಘೋರಂ** = ಘೋರವಾದ **ತಮಃ** = ತಮಸ್ಸನ್ನು ಕುರಿತು **ಯಾತು** = ಹೋಗಲಿ **ಇತಿ** = ಎಂದು **ಅಭಿಪ್ರೇತ್ಯ** = ಅಭಿಪ್ರಾಯವನ್ನು ಹೊಂದಿ **ತ್ವಂ** = ನೀನು **ಯಾವತ್** = ಎಲ್ಲಿಯವರೆಗೆ **ಧರ್ಮಾದಿಕಾನ್** = ಧರ್ಮರಾಜ

ಮೊದಲಾದ **ಸುರಾನ್** = ದೇವತೆಗಳನ್ನು **ಕ್ಷೇಪ್ಸ್ಯಸಿ** = ನಿಂದಿಸುವೆಯೋ **ತಾವತ್** = ಅಲ್ಲಿಯವರೆಗೂ **ನಕುಲಃ** = ಮುಂಗುಸಿಯು **ಭವ** = ಆಗು **ಇತಿ** = ಎಂದು **ಶಪ್ತಃ** = ಶಾಪ್ತನಾದ ಕ್ರೋಧನು **ತಥಾ** = ಹಾಗೆ **ಕೃತ್ವಾ** = ಮಾಡಿ **ತಮಃ** = ತಮಸ್ಸನ್ನು ಕುರಿತು **ಅಭ್ಯಯಾತ್** = ಹೋದನು.

**ತಾತ್ಪರ್ಯ** :- ಹಿಂದೆ ಶ್ರಾದ್ಧಕ್ಕಾಗಿ ಇರಿಸಿದ್ದ ಜಮದಗ್ನಿಯ ಹಾಲನ್ನು ಆ ಕ್ರೋಧಾಭಿಮಾನಿಯಾದ ಅಸುರನು ಮುಂಗುಸಿರೂಪದಿಂದಲೇ ಎಂಜಲು ಮಾಡಿದ್ದ. ಅವನಿಗೆ ಪಿತೃದೇವತೆಗಳು ಶಾಪವಿತ್ತರು- ''ನೀನು ಧರ್ಮರಾಜಾದಿ ದೇವತೆಗಳನ್ನು ನಿಂದಿಸುವವರೆಗೂ ಮುಂಗುಸಿಯಾಗಿಯೇ ಇರು'' ಎಂದು. ಆ ಪಾಪದಿಂದ ಅವನು ಘೋರವಾದ ತಮಸ್ಸನ್ನು ಹೊಂದಲಿ ಎಂಬ ಅಭಿಪ್ರಾಯದಿಂದ ಅವರು ಶಪಿಸಿದ್ದರು. ಅವನು ಹಾಗೆ ಮಾಡಿ ತಮಸ್ಸಿಗೆ ತೆರಳಿದ.

### ಅರ್ಹತೆಯಿಂದಲೇ ಮುಖ್ಯಫಲ

**ಯದ್ಯಪ್ಯಲ್ಪಧನತ್ಯಕ್ತಂ ವಿತ್ತಂ ಬಹುಫಲಂ ಭವೇತ್ ।**
**ತಥಾಽಪ್ಯನಂತಫಲದಾಃ ಕರ್ತುರೇವ ಮಹಾಗುಣಾಃ ॥ ೧೬೫ ॥**

**ಯದ್ಯಪಿ ಅಲ್ಪಧನತ್ಯಕ್ತಂ ವಿತ್ತಂ ಬಹುಫಲಂ ಭವೇತ್ । ತಥಾ ಪಿ ಅನಂತಫಲದಾಃ ಕರ್ತುಃ ಏವ ಮಹಾಗುಣಾಃ ॥ ೧೬೫ ॥**

**ಅರ್ಥ** :- **ಅಲ್ಪಧನತ್ಯಕ್ತಂ** = ಅಲ್ಪಧನವುಳ್ಳವನಿಂದ ಕೊಡಲ್ಪಟ್ಟ **ವಿತ್ತಂ** = ಧನವು **ಬಹುಫಲಂ** = ಬಹುಫಲವು **ಯದ್ಯಪಿ ಭವೇತ್** = ಆಗುವುದು ನಿಜ. **ತಥಾ ಪಿ** = ಆದರೂ **ಕರ್ತುಃ** = ಆಚರಿಸುವವನ **ಮಹಾಗುಣಾಃ ಏವ** = (ಜ್ಞಾನಾದಿ)ಮಹಾಗುಣಗಳೇ **ಅನಂತಫಲದಾಃ** = ಅನಂತಫಲವನ್ನು ಕೊಡುವವು.

**ತಾತ್ಪರ್ಯ** :- ಅಲ್ಪ ಧನವುಳ್ಳವನು ನೀಡಿದ ಧನ ಅಧಿಕ ಫಲವನ್ನು ಕೊಡುವುದು ನಿಜ, ಆದರೆ ಅಧಿಕಫಲವನ್ನು ಮುಖ್ಯವಾಗಿ ನೀಡುವುದು ಅದನ್ನು ಆಚರಿಸುವವನ ಜ್ಞಾನಭಕ್ತ್ಯಾದಿ ಮಹಾಗುಣಗಳೇ.

**ಸತಾಂ ಪ್ರೀತಿಶ್ಚ ತತ್ರಾಪಿ ಸದ್ವರೋ ಹರಿರೇವ ಹಿ ।**
**ಪಾರ್ಥೇಭ್ಯೋಽಭ್ಯಧಿಕಃ ಕರ್ತಾ ಸಮೋ ವಾ ಕೋ ಗುಣೈರ್ಭವೇತ್ ॥ ೧೬೬ ॥**

ಸತಾಂ ಪ್ರೀತಿಃ ಚ ತತ್ರ ಅಪಿ ಸದ್ವರಃ ಹರಿಃ ಏವ ಹಿ । ಪಾರ್ಥೇಭ್ಯಃ ಅಭ್ಯಧಿಕಃ ಕರ್ತಾ ಸಮಃ ವಾ ಕಃ ಗುಣೈಃ ಭವೇತ್ ॥೧೬೬॥

**ಅರ್ಥ** :- (**ತಥಾಪಿ**) = ಆಚರಿಸುವವನ ಗುಣಗಳಲ್ಲೂ **ಸತಾಂ** = ಸಜ್ಜನರ **ಪ್ರೀತಿಃ ಚ** = ಪ್ರೀತಿಯೂ (**ಅನಂತಫಲದಾ**) = ಅಧಿಕ ಫಲದಾಯಕವು. **ತತ್ರ ಅಪಿ** = ಸಜ್ಜನರಲ್ಲೂ **ಸದ್ವರಃ** = ಅತ್ಯುತ್ತಮನಾದವನು **ಹರಿಃ ಏವ** = ಹರಿಯೇ **ಹಿ** = (ಇದು) ಪ್ರಸಿದ್ಧ. (**ಅತಃ ತತ್ಪ್ರೀತಿಃ ಅನಂತಫಲದಾ**) = ಆದ್ದರಿಂದ ಅವನ ಪ್ರೀತಿಯು ಅನಂತಫಲವನ್ನು ಕೊಡುವುದು. **ಗುಣೈಃ** = ಗುಣಗಳಿಂದ **ಪಾರ್ಥೇಭ್ಯಃ** = ಪಾಂಡವರಿಗಿಂತ **ಅಭ್ಯಧಿಕಃ** = ಅಧಿಕನಾದ **ವಾ** = ಅಥವಾ **ಸಮಃ** = ಸಮನಾದ **ಕರ್ತಾ** = ಕರ್ತೃವು **ಕಃ** = ಯಾವನು **ಭವೇತ್** = ಆಗುವನು?

**ತಾತ್ಪರ್ಯ** :- ಸಜ್ಜನರ ಸಂತೋಷ ಮತ್ತೊಂದು ಕಾರಣ, ಸಜ್ಜನರಲ್ಲಿ ಅತ್ಯುತ್ತಮನಾದವನು ಶ್ರೀಹರಿಯೇ ಆಗಿರುವನು. ಗುಣಗಳಿಂದಾಗಿ ಪಾಂಡವರಿಗಿಂತ ಮಿಗಿಲಾದ ಅಥವಾ ಸಮನಾದ ಕರ್ತೃ ಬೇರಾವನಿರುವನು.

### ಪಾಂಡವರ ಯಜ್ಞದ ಪ್ರಶಂಸೆ

**ಸತಾಂ ಚ ಪ್ರವರೋ ವಿಷ್ಣುಃ ಸದ್ಭಿರ್ಮುನಿಸುರೈರ್ಯುತಃ ।**
**ಪ್ರತ್ಯಕ್ಷತಃ ಕಾರಯತಿ ಪಾರ್ಥೈಃ ಪ್ರಿಯತಮೈಶ್ಚ ತೈಃ ॥ ೧೬೭ ॥**

ಸತಾಂ ಚ ಪ್ರವರಃ ವಿಷ್ಣುಃ ಸದ್ಭಿಃ ಮುನಿಸುರೈಃ ಯುತಃ । ಪ್ರತ್ಯಕ್ಷತಃ ಕಾರಯತಿ ಪಾರ್ಥೈಃ ಪ್ರಿಯತಮೈಃ ಚ ತೈಃ ॥ ೧೬೭ ॥

**ಯಂ ಮಖಪ್ರವರಂ ತಸ್ಯ ಸಮಂ ಕಿಂ ಶುಭಸಾಧನಮ್ ।**
**ಪಠಂತಿ ಪೈಂಗಿನಶ್ಚೈತಾನ್ಮಂತ್ರಾನನ್ವರ್ಥಕಾನಿಹ ॥ ೧೬೮ ॥**

ಯಂ ಮಖಪ್ರವರಂ ತಸ್ಯ ಸಮಂ ಕಿಂ ಶುಭಸಾಧನಮ್ । ಪಠಂತಿ ಪೈಂಗಿನಃ ಚ ಏತಾನ್ ಮಂತ್ರಾನ್ ಅನ್ವರ್ಥಕಾನ್ ಇಹ ॥ ೧೬೮ ॥

**ಅರ್ಥ** :– **ಸತಾಂ ಚ** = ಸಜ್ಜನರಲ್ಲಿ **ಪ್ರವರಃ** = ಅತ್ಯುತ್ತಮನಾದ **ವಿಷ್ಣುಃ** = ವಿಷ್ಣುವು **ಸದ್ಭಿಃ** = ಸಜ್ಜನರಾದ **ಮುನಿಸುರೈಃ** = ಮುನಿ–ದೇವತೆಗಳಿಂದ **ಯುತಃ (ಸನ್)** = ಕೂಡಿಕೊಂಡವನಾಗಿ **ಪ್ರಿಯತಮೈಃ** = ತನಗೆ ಅತ್ಯಂತಪ್ರಿಯರಾದ **ತೈಃ ಪಾರ್ಥೈಃ** = ಆ ಪಾಂಡವರಿಂದ **ಯಂ** = ಯಾವ **ಮಖಪ್ರವರಂ** = ಶ್ರೇಷ್ಠಯಜ್ಞವನ್ನು **ಪ್ರತ್ಯಕ್ಷತಃ** = ಪ್ರತ್ಯಕ್ಷವಾಗಿ **ಕಾರಯತಿ** = ಮಾಡಿಸುವನೋ **ತಸ್ಯ** = ಆ ಯಜ್ಞಕ್ಕೆ **ಸಮಂ** = ಸಮನಾದ **ಶುಭಸಾಧನಂ** = ಶುಭಸಾಧನವಾದ ಕರ್ಮವು **ಕಿಂ (ಅಸ್ತಿ)** = ಯಾವುದಿದೆ? **ಇಹ** = ಈ ವಿಚಾರದಲ್ಲಿ **ಪೈಂಗಿನಃ** = ಪೈಂಗಿಶಾಖೆಯವರು **ಏತಾನ್** = (ಮುಂದೆ ಹೇಳುವ) ಈ **ಅನ್ವರ್ಥಕಾನ್** = ಈಗ ಹೇಳಿದ ಅರ್ಥದ **ಮಂತ್ರಾನ್** = ಮಂತ್ರಗಳನ್ನು **ಪಠಂತಿ** = ಪಠಿಸುವರು.

**ತಾತ್ಪರ್ಯ** :- ಸಜ್ಜನರಲ್ಲಿ ಸರ್ವಶ್ರೇಷ್ಠನಾದ ವಿಷ್ಣುವು, ಸಜ್ಜನರಾದ ಮುನಿಗಳಿಂದಲೂ, ದೇವತೆಗಳಿಂದಲೂ ಕೂಡಿದವನಾಗಿ, ಅತ್ಯಂತಪ್ರಿಯರಾದ ಪಾಂಡವರಿಂದ ಆ ಶ್ರೇಷ್ಠಯಜ್ಞವನ್ನು ಪ್ರತ್ಯಕ್ಷತಃ ಮಾಡಿಸಿರುವಾಗ, ಅಂತಹ ಯಜ್ಞಕ್ಕೆ ಸಮಾನವಾದ ಇತರ ಶುಭಸಾಧನಗಳಾವು? ಪೈಂಗಿಶಾಖೆಯವರು ಅನ್ವರ್ಥಕವಾದ ಈ ಮಂತ್ರಗಳನ್ನು ಪಠಿಸುವರು.

### ವೈಷ್ಣವಕೃತವಾದದ್ದು ಅನಂತ

**ಅವೈಷ್ಣವಕೃತಂ ಕರ್ಮ ಸರ್ವಮಂತವದುಚ್ಯತೇ ।**
**ಅನಂತಂ ವೈಷ್ಣವಕೃತಂ ತತ್ರ ವರ್ಣಕ್ರಮಾತ್ ಪರಮ್ ॥ ೧೭೯ ॥**

**ಅವೈಷ್ಣವಕೃತಂ ಕರ್ಮ ಸರ್ವಂ ಅಂತವತ್ ಉಚ್ಯತೇ । ಅನಂತಂ ವೈಷ್ಣವಕೃತಂ ತತ್ರ ವರ್ಣಕ್ರಮಾತ್ ಪರಮ್ ॥ ೧೭೯ ॥**

**ಅರ್ಥ** :– **ಅವೈಷ್ಣವಕೃತಂ** = ವಿಷ್ಣುಭಕ್ತಿ ಇಲ್ಲದವರು ಮಾಡಿದ **ಸರ್ವಂ** = ಸಕಲ **ಕರ್ಮ** = ಕರ್ಮವು **ಅಂತವತ್** = ನಾಶವುಳ್ಳವು **ಉಚ್ಯತೇ** = (ಎಂದು) ಹೇಳಲ್ಪಡುವುದು. **ವೈಷ್ಣವಕೃತಂ** = ವಿಷ್ಣುಭಕ್ತರು ಮಾಡಿದ **ಕರ್ಮ** = ಕರ್ಮವು **ಅನಂತಂ** = ಅನಂತ **ಉಚ್ಯತೇ** = (ಎಂದು) ಹೇಳಲ್ಪಡುವುದು. **ತತ್ರ** = ವಿಷ್ಣುಭಕ್ತರು ಮಾಡುವ ಕರ್ಮದಲ್ಲಿ **ವರ್ಣಕ್ರಮಾತ್** = ವರ್ಣಕ್ರಮದಿಂದ **ಪರಮ್** = ಶ್ರೇಷ್ಠನು.

**ತಾತ್ಪರ್ಯ :-** ವಿಷ್ಣುಭಕ್ತಿ ಇಲ್ಲದವರು ಮಾಡಿದ ಸಕಲಕರ್ಮವೂ ನಶ್ವರಫಲ ನೀಡುವುದು. ವಿಷ್ಣುಭಕ್ತರು ಮಾಡಿದ ಕರ್ಮ ಅನಂತಫಲ ನೀಡುವುದು. ಅದರಲ್ಲೂ ವರ್ಣಕ್ರಮದಿಂದ ಮೇಲುಮೇಲಿನವರ ಕರ್ಮ ಹೆಚ್ಚು ಸಫಲ.

**ವೈಷ್ಣವೇಷ್ವಪಿ ಮರ್ತ್ಯೈರ್ಯತ್ಕೃತಂ ಶತಗುಣಂ ತತಃ ।**
**ಗಾಂಧರ್ವಂ ಕರ್ಮ ತಸ್ಮಾಚ್ಚ ಪಿತೃಭಿರ್ಮುನಿಭಿಸ್ತತಃ ॥ ೧೭೦ ॥**

**ವೈಷ್ಣವೇಷು ಅಪಿ ಮರ್ತ್ಯೈಃ ಯತ್ ಕೃತಂ ಶತಗುಣಂ ತತಃ । ಗಾಂಧರ್ವಂ ಕರ್ಮ ತಸ್ಮಾತ್ ಚ ಪಿತೃಭಿಃ ಮುನಿಭಿಃ ತತಃ ॥ ೧೭೦ ॥**

**ದೇವಶಕ್ರಶಿವಬ್ರಹ್ಮಕೃತಂ ತಸ್ಮಾತ್ ಕ್ರಮೇಣ ಚ ।**
**ಶತೋತ್ತರಮಿತಿ ಜ್ಞೇಯಂ ನಾನ್ಯದ್ಬ್ರಹ್ಮಕೃತೋಪಮಮ್ ॥ ೧೭೧ ॥**

**ದೇವಶಕ್ರಶಿವಬ್ರಹ್ಮಕೃತಂ ತಸ್ಮಾತ್ ಕ್ರಮೇಣ ಚ । ಶತೋತ್ತರಂ ಇತಿ ಜ್ಞೇಯಂ ನ ಅನ್ಯತ್ ಬ್ರಹ್ಮಕೃತೋಪಮಮ್ ॥ ೧೭೧ ॥**

**ಅರ್ಥ :- ವೈಷ್ಣವೇಷು ಅಪಿ** = ವೈಷ್ಣವರಲ್ಲೂ ಸಹ **ಮರ್ತ್ಯೈಃ** = ಮನುಷ್ಯರಿಂದ **ಯತ್ ಕರ್ಮ** = ಯಾವ ಕರ್ಮವು **ಕೃತಂ** = ಮಾಡಲ್ಪಟ್ಟದ್ದೋ **ತತಃ** = ಅದಕ್ಕಿಂತಲೂ **ಶತಗುಣಂ** = ನೂರು ಪಟ್ಟು **ಗಾಂಧರ್ವಂ** = ಗಂಧರ್ವರು ಮಾಡಿದ **ಕರ್ಮ** = ಕರ್ಮವು. **ತಸ್ಮಾತ್ ಚ** = ಅದಕ್ಕಿಂತಲೂ **ಪಿತೃಭಿಃ** = ಪಿತೃಗಳಿಂದ **(ಕೃತಂ ಕರ್ಮ)** = ಮಾಡಲ್ಪಟ್ಟ ಕರ್ಮವು, **ತತಃ** = ಅದಕ್ಕಿಂತ **ಮುನಿಭಿಃ** = ಮುನಿಗಳಿಂದ **(ಕೃತಂ ಕರ್ಮ)** = ಮಾಡಲ್ಪಟ್ಟ ಕರ್ಮವು, **ತಸ್ಮಾತ್ ಚ** = ಅದಕ್ಕಿಂತಲೂ **ಕ್ರಮೇಣ** = ಕ್ರಮವಾಗಿ **ದೇವಶಕ್ರಶಿವಬ್ರಹ್ಮಕೃತಂ** = ದೇವತೆಗಳು, ಇಂದ್ರ, ಶಿವ, ಬ್ರಹ್ಮರು ಮಾಡಿದ್ದು **ಶತೋತ್ತರಂ** = ನೂರು ಗುಣ ಅಧಿಕವು **ಇತಿ** = ಎಂದು **ಜ್ಞೇಯಂ** = ತಿಳಿಯಲ್ಪಡಬೇಕು. **ಬ್ರಹ್ಮಕೃತೋಪಂ** = ಬ್ರಹ್ಮದೇವರು ಮಾಡಿದ್ದಕ್ಕೆ ಸಮನಾದುದು **ಅನ್ಯತ್ (ಕರ್ಮ)** = ಬೇರೊಂದು ಕರ್ಮವು **ನ** = ಇಲ್ಲ.

**ತಾತ್ಪರ್ಯ :-** ವೈಷ್ಣವರಲ್ಲೂ ಮನುಷ್ಯರು ಮಾಡುವ ಕರ್ಮಗಳಿಗಿಂತ ಗಂಧರ್ವರು ಮಾಡುವ ಕರ್ಮ ನೂರುಗುಣ ಮಿಗಿಲು ; ಅದಕ್ಕಿಂತ

ಪಿತೃಗಳಿಂದ ಮಾಡುವುದು ; ಅದಕ್ಕಿಂತ ಮುನಿಗಳಿಂದ ಮಾಡುವುದು ; ಅದಕ್ಕಿಂತ ದೇವತೆಗಳಾದ ಇಂದ್ರ, ಶಿವ, ಬ್ರಹ್ಮರು ಮಾಡುವುದು ಕ್ರಮವಾಗಿ ನೂರುಗುಣ ಶ್ರೇಷ್ಠವಾದದ್ದು ಎಂದು ತಿಳಿಯಬೇಕು. ಬ್ರಹ್ಮ ಮಾಡಿದ ಕರ್ಮಕ್ಕೆ ಸಮಾನವಾದಂತಹದು ಮತ್ತೊಂದಿಲ್ಲ.

### ವೈಷ್ಣವತ್ವದ ತಾರತಮ್ಯ

**ವೈಷ್ಣವತ್ವಂ ಕ್ರಮಾದ್ವೃದ್ಧಂ ಬ್ರಹ್ಮಾಂತಂ ಜೀವರಾಶಿಷು ।**
**ಫಲಾಧಿಕ್ಯಂ ಕರ್ಮಣಾಂ ಹಿ ವಿಷ್ಣೋಃ ಪ್ರೀತ್ಯೈವ ನಾನ್ಯಥಾ ॥ ೧೭೨ ॥**

**ವೈಷ್ಣವತ್ವಂ ಕ್ರಮಾತ್ ವೃದ್ಧಂ ಬ್ರಹ್ಮಾಂತಂ ಜೀವರಾಶಿಷು । ಫಲಾಧಿಕ್ಯಂ ಕರ್ಮಣಾಂ ಹಿ ವಿಷ್ಣೋಃ ಪ್ರೀತ್ಯಾ ಏವ ನ ಅನ್ಯಥಾ ॥ ೧೭೨ ॥**

**ಅರ್ಥ** :- **ಜೀವರಾಶಿಷು** = ಜೀವರಾಶಿಗಳಲ್ಲಿ **ವೈಷ್ಣವತ್ವಂ** = ವೈಷ್ಣವತ್ವವು **ಬ್ರಹ್ಮಾಂತಂ** = ಬ್ರಹ್ಮದೇವರವರೆಗೆ **ಕ್ರಮಾತ್** = ಕ್ರಮವಾಗಿ **ವೃದ್ಧಂ (ಏಧಿತಂ)** = ಹೆಚ್ಚುತ್ತಾ ಹೋಗುವುದು. **ಕರ್ಮಣಾಂ** = ಕರ್ಮಗಳಿಗೆ **ಫಲಾಧಿಕ್ಯಂ** = ಹೆಚ್ಚಿನ ಫಲವು **ವಿಷ್ಣೋಃ** = ವಿಷ್ಣುವಿನ **ಪ್ರೀತ್ಯಾ ಏವ ಹಿ** = ಪ್ರೀತಿಯಿಂದಲೇ, **ಅನ್ಯಥಾ ನ** = ಬೇರೆ ರೀತಿಯಲ್ಲಿ ಅಲ್ಲ.

**ತಾತ್ಪರ್ಯ** :- ಜೀವರಾಶಿಗಳಲ್ಲಿ ವಿಷ್ಣುಭಕ್ತಿಯು ಬ್ರಹ್ಮದೇವರವರೆಗೆ ಕ್ರಮವಾಗಿ ಹೆಚ್ಚುತ್ತಾ ಹೋಗುವುದು. ಕರ್ಮಗಳಿಗೆ ಅಧಿಕಫಲ ಸಿಗುವುದೂ ಸಹ ಶ್ರೀವಿಷ್ಣುಪ್ರೀತಿಯಿಂದಲೇ ಹೊರತು, ಇತರ ಕಾರಣಗಳಿಂದಲ್ಲ.

**ಇತಿ ತೇನ ನ ಪಾರ್ಥಾನಾಂ ಕರ್ಮಣಾಽನ್ಯತ್ಸಮಂ ಕ್ವಚಿತ್ ।**
**ಗುಣೈರ್ಜ್ಞಾನಾದಿಭಿರ್ವಾಽಪಿ ತಸ್ಮಾತ್ ಕ್ರೋಧಃ ಸ ತಾಮಸಃ ।**
**ವಿನಿಂದ್ಯ ತಾನ್ ಸುಸತ್ವಸ್ಥಾಂಸ್ತಮೋಽಂಧಮುಪಜಗ್ಮಿವಾನ್ ॥ ೧೭೩ ॥**

**ಇತಿ ತೇನ ನ ಪಾರ್ಥಾನಾಂ ಕರ್ಮಣಾ ಅನ್ಯತ್ ಸಮಂ ಕ್ವಚಿತ್ । ಗುಣೈಃ ಜ್ಞಾನಾದಿಭಿಃ ವಾ ಅಪಿ ತಸ್ಮಾತ್ ಕ್ರೋಧಃ ಸಃ ತಾಮಸಃ । ವಿನಿಂದ್ಯ ತಾನ್ ಸುಸತ್ವಸ್ಥಾನ್ ತಮಃ ಅಂಧಂ ಉಪಜಗ್ಮಿವಾನ್ ॥ ೧೭೩ ॥**

**ಅರ್ಥ** :- **ಇತಿ** = ಹೀಗೆ **(ಪೈಂಗಿನಃ ಮಂತ್ರಾನ್ ಪಠಂತಿ)** = ಪೈಂಗಿಶಾಖೆಯವರು ಮಂತ್ರಗಳನ್ನು ಪಠಿಸುತ್ತಾರೆ. **ತೇನ** = ಆದ್ದರಿಂದ

**ಪಾರ್ಥಾನಾಂ** = ಪಾಂಡವರ **ಕರ್ಮಣಾ** = ಕರ್ಮದಿಂದ **ವಾ** = ಅಥವಾ **ಜ್ಞಾನಾದಿಭಿಃ** = ಜ್ಞಾನಾದಿ **ಗುಣೈಃ ಅಪಿ** = ಗುಣಗಳಿಂದಲೂ **ಸಮಂ** = ಸಮವಾದದ್ದು **ಅನ್ಯತ್** = ಬೇರೊಂದು **ಕ್ವಚಿತ್** = ಎಲ್ಲೂ ನ **(ಅಸ್ತಿ)** = ಇಲ್ಲ. **ತಸ್ಮಾತ್** = ಆದ್ದರಿಂದ **ತಾಮಸಃ** = ತಾಮಸನಾದ **ಸಃ** = ಆ **ಕ್ರೋಧಃ** = ಕ್ರೋಧನು **ಸುಸತ್ವಸ್ಥಾನ್** = ಸುಸತ್ವನಾದ ಪರಮಾತ್ಮನಲ್ಲಿ ಮನಸ್ಸನ್ನು ನೆಲೆಗೊಳಿಸ್ದ **ತಾನ್** = ಅವರನ್ನು (ಪಾಂಡವರನ್ನು) **ವಿನಿಂದ್ಯ** = ಬಹುವಾಗಿ ನಿಂದಿಸಿ **ಅಂಧಂ ತಮಃ** = ಅಂಧಂತಮಸ್ಸನ್ನು ಕುರಿತು **ಉಪಜಗ್ಮಿವಾನ್** = ಹೋದನು.

**ತಾತ್ಪರ್ಯ** :- ಆದ್ದರಿಂದ ಪಾಂಡವರ ಕರ್ಮಕ್ಕೆ ಸಮನಾದ ಮತ್ತೊಂದು ಕರ್ಮ ಎಲ್ಲೂ ಇಲ್ಲ. ಜ್ಞಾನಾದಿಗುಣಗಳಲ್ಲಿ ಅವರಿಗೆ ಸಮರಾದವರೂ ಬೇರಿಲ್ಲ. ಆದ್ದರಿಂದ ಕ್ರೋಧಾಭಿಮಾನಿಯಾದ ಆ ದೈತ್ಯ ಮಹಾತಾಮಸಿ ಯಾಗಿದ್ದು ಅತ್ಯಂತಸಾತ್ತ್ವಿಕರಾದ ಪಾಂಡವರನ್ನು ನಿಂದಿಸಿ, ಅಂಧಂತಮಸ್ಸಿಗೇ ತೆರಳಿದ.

### ಯುಧಿಷ್ಠಿರನಿಗೆ ಕೃಷ್ಣ ತಿಳಿಸಿದ ವೈಷ್ಣವ ಧರ್ಮಗಳು

**ಅಥ ಪೃಷ್ಟೋ ವಾಸುದೇವಃ ಸುರವಿಪ್ರಾದಿಸಂಸದಿ ।**
**ಯುಧಿಷ್ಠಿರೇಣ ಸಂಹೃಷ್ಟೋ ಜಗಾದಾಶೇಷತಃ ಪ್ರಭುಃ ॥ ೧೭೪ ॥**

ಅಥ ಪೃಷ್ಟಃ ವಾಸುದೇವಃ ಸುರವಿಪ್ರಾದಿಸಂಸದಿ । ಯುಧಿಷ್ಠಿರೇಣ ಸಂಹೃಷ್ಟಃ ಜಗಾದ ಅಶೇಷತಃ ಪ್ರಭುಃ ॥ ೧೭೪ ॥

**ಅರ್ಥ** :- **ಅಥ** = ಬಳಿಕ **ಸುರವಿಪ್ರಾದಿಸಂಸದಿ** = ದೇವತೆಗಳು ಬ್ರಾಹ್ಮಣರು ಮೊದಲಾದವರಿದ್ದ ಸಭೆಯಲ್ಲಿ **ಯುಧಿಷ್ಠಿರೇಣ** = ಯುಧಿಷ್ಠಿರನಿಂದ **ಪೃಷ್ಟಃ** = ಕೇಳಲ್ಪಟ್ಟ **ಪ್ರಭುಃ** = ಸಮರ್ಥನಾದ **ವಾಸುದೇವಃ** = ಕೃಷ್ಣನು **ಸಂಹೃಷ್ಟಃ** = ಬಹಳ ಸಂತೋಷಗೊಂಡವನಾಗಿ **(ಧರ್ಮಾನ್)** = ವೈಷ್ಣವಧರ್ಮಗಳನ್ನು **ಅಶೇಷತಃ** = ಪೂರ್ಣವಾಗಿ **ಜಗಾದ** = ಹೇಳಿದ.

**ತಾತ್ಪರ್ಯ** :- ಬಳಿಕ ದೇವತೆಗಳು, ಮುನಿಗಳು ನೆರೆದಿದ್ದ ಆ ದೇವಸಭೆಯಲ್ಲಿ ಧರ್ಮರಾಜ ಕೇಳಿಕೊಳ್ಳಲು ಪ್ರಭುವಾದ ಶ್ರೀಕೃಷ್ಣ ಬಹಳ ಸಂತೋಷದಿಂದ ಸಕಲವೈಷ್ಣವಧರ್ಮಗಳನ್ನೂ ಉಪದೇಶಿಸಿದ.

**ತೇ ಚ ಶ್ರುತ್ವಾऽಖಿಲಾನ್ ಧರ್ಮಾನ್ ಭಕ್ತ್ಯಾ ಪರಮಯಾ ಯುತಾಃ ।**
**ಪೂಜಯಂತೋ ಜಗನ್ನಾಥಮಾಪುಶ್ಚ ಪರಮಾಂ ಮುದಮ್ ॥ ೧೭೫ ॥**

ತೇ ಚ ಶ್ರುತ್ವಾ ಅಖಿಲಾನ್ ಧರ್ಮಾನ್ ಭಕ್ತ್ಯಾ ಪರಮಯಾ ಯುತಾಃ ।
ಪೂಜಯಂತಃ ಜಗನ್ನಾಥಂ ಆಪುಃ ಚ ಪರಮಾಂ ಮುದಮ್ ॥ ೧೭೫ ॥

**ಅರ್ಥ** :- **ತೇ ಚ** = ಅವರೂ ಸಹ **ಪರಮಯಾ** = ಶ್ರೇಷ್ಠವಾದ **ಭಕ್ತ್ಯಾ** = ಭಕ್ತಿಯಿಂದ **ಯುತಾಃ** = ಕೂಡಿದವರಾಗಿ **ಅಖಿಲಾನ್** = ಎಲ್ಲ **ಧರ್ಮಾನ್** = ಧರ್ಮಗಳನ್ನು **ಶ್ರುತ್ವಾ** = ಕೇಳಿ, **ಜಗನ್ನಾಥಂ** = ಜಗನ್ನಾಥನಾದ ಕೃಷ್ಣನನ್ನು **ಪೂಜಯಂತಃ** (**ಸಂತಃ**) = ಪೂಜಿಸುವವರಾಗಿ **ಪರಮಾಂ** = ಶ್ರೇಷ್ಠವಾದ **ಮುದಂ ಚ** = ಆನಂದವನ್ನು ಸಹ **ಆಪುಃ** = ಹೊಂದಿದರು.

**ತಾತ್ಪರ್ಯ** :- ಅವರೆಲ್ಲರೂ ಸಕಲಧರ್ಮಗಳನ್ನು ಕೃಷ್ಣನ ಬಾಯಿಂದ ಕೇಳಿ ಅತ್ಯಂತಶ್ರೇಷ್ಠವಾದ ಭಕ್ತಿಯಿಂದ ಕೂಡಿದವರಾಗಿ ಜಗನ್ನಾಥನಾದ ಕೃಷ್ಣನನ್ನು ಪೂಜಿಸುತ್ತಾ ಪರಮಾನಂದವನ್ನು ಹೊಂದಿದರು.

॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ
ಶ್ರೀಮಹಾಭಾರತತಾತ್ಪರ್ಯನಿರ್ಣಯೇ ಪಾಂಡವಾಶ್ವಮೇಧಕಥನಂ ನಾಮ
ತ್ರಿಂಶೋऽಧ್ಯಾಯಃ ॥ ೩೦ ॥

# ಅಧ್ಯಾಯ - 31

ಧೃತರಾಷ್ಟ್ರಾದಿಸ್ವರ್ಗಪ್ರಾಪ್ತಿಃ

**ಓಂ ॥ ಯಜ್ಞೇಶ್ವರೇಣಾಭಿಯುತೇಷು ಭಕ್ತ್ಯಾ**
**ಮಹೀಂ ಪ್ರಶಾಸತ್ಸು ಪೃಥಾಸುತೇಷು ।**
**ಯಿಯಕ್ಷುರಾಗಾನ್ನಿಶಿ ವಿಪ್ರವರ್ಯೋ**
**ಯುಧಿಷ್ಠಿರಂ ವಿತ್ತಮಭೀಪ್ಸಮಾನಃ ॥ ೧ ॥**

**ಅರ್ಥ** :- **ಯಜ್ಞೇಶ್ವರೇಣ** = ಯಜ್ಞೇಶ್ವರನಾದ ಕೃಷ್ಣನಿಂದ, **ಅಭಿಯುತೇಷು ಪೃಥಾಸುತೇಷು** = ನಿಯುಕ್ತರಾದ ಪಾಂಡವರು, **ಭಕ್ತ್ಯಾ** = ಭಕ್ತಿಯಿಂದ, **ಮಹೀಂ ಪ್ರಶಾಸತ್ಸು** = ಭೂಮಿಯನ್ನು ಆಳುತ್ತಿರಲು, **ಯಿಯಕ್ಷುಃ ವಿಪ್ರವರ್ಯಃ** = ಯಾಗಮಾಡಬೇಕೆಂಬ ಇಚ್ಛೆಯುಳ್ಳ ಬ್ರಾಹ್ಮಣ ಶ್ರೇಷ್ಠನೊಬ್ಬನು, **ವಿತ್ತಂ ಅಭೀಪ್ಸಮಾನಃ** = ಹಣವನ್ನು ಬಯಸಿದವನಾಗಿ, **ನಿಶಿ** = ರಾತ್ರಿಯಲ್ಲಿ, **ಯುಧಿಷ್ಠಿರಂ ಆಗಾತ್** = ಯುಧಿಷ್ಠಿರನನ್ನು ಕುರಿತು ಬಂದನು.

**ತಾತ್ಪರ್ಯ** :- ಯಜ್ಞಪತಿಯಾದ ಶ್ರೀಕೃಷ್ಣನಿಂದ ನಿಯುಕ್ತರಾದ ಪಾಂಡವರು ಭಕ್ತಿಯಿಂದ ಭೂಮಿಯನ್ನು ಆಳುತ್ತಿದ್ದಾಗ ಯಾಗಮಾಡುವ ಇಚ್ಛೆಯುಳ್ಳವನಾಗಿ ಬ್ರಾಹ್ಮಣನೊಬ್ಬನು ಹಣವನ್ನು ಅಪೇಕ್ಷಿಸಿ ರಾತ್ರಿಯಲ್ಲಿ ಯುಧಿಷ್ಠಿರನ ಬಳಿಗೆ ಬಂದನು.

**ಪ್ರಾತರ್ದದಾನೀತಿ ನೃಪಸ್ಯ ವಾಕ್ಯಂ**
**ನಿಶಮ್ಯ ವಿಪ್ರಸ್ತ್ವರಿತೋ ಮಖಾರ್ಥೇ ।**
**ಭೀಮಂ ಯಯಾಚೇ ಸ ನೃಪೋಕ್ತಮಾಶು**
**ನಿಶಮ್ಯ ಚಾದಾನ್ನಿಜಹಸ್ತಭೂಷಣಮ್ ॥ ೨ ॥**

**ಅರ್ಥ :- ಪ್ರಾತಃ ದದಾನಿ** = ಬೆಳಗ್ಗೆ ಕೊಡುವೆನು, **ಇತಿ** = ಎಂಬುದಾಗಿ, **ನೃಪಸ್ಯ ವಾಕ್ಯಂ** = ರಾಜನಾದ ಯುಧಿಷ್ಠಿರನ ಮಾತನ್ನು, **ನಿಶಮ್ಯ** = ಕೇಳಿ, **ವಿಪ್ರಃ** = ಬ್ರಾಹ್ಮಣನು, **ತ್ವರಿತಃ** = ವೇಗ ಉಳ್ಳವನಾಗಿ, **ಮಖಾರ್ಥೇ** = ಯಾಗಕ್ಕೋಸ್ಕರ, **ಭೀಮಂ ಯಯಾಚೇ** = ಭೀಮನ ಬಳಿ ಹಣವನ್ನು ಬೇಡಿದನು, **ಸಃ** = ಆ ಭೀಮನು, **ನೃಪೋಕ್ತಂ** = ಯುಧಿಷ್ಠಿರನಿಂದ ಹೇಳಲ್ಪಟ್ಟಿದ್ದನ್ನು, **ನಿಶಮ್ಯ** = ಕೇಳಿ, **ಆಶು** = ಬೇಗನೇ, **ನಿಜಹಸ್ತಭೂಷಣಂ ಚ ಅದಾತ್** = ತನ್ನ ಕೈಯ ಆಭರಣವನ್ನು ಕೊಟ್ಟನು.

**ತಾತ್ಪರ್ಯ :-** ಬೆಳಗ್ಗೆ ಕೊಡುವೆನು ಎಂದು ರಾಜನಾದ ಯುಧಿಷ್ಠಿರ ಹೇಳಿದ ಮಾತನ್ನು ಕೇಳಿ ಬ್ರಾಹ್ಮಣನು ಬೇಗನೇ ಯಾಗಕ್ಕೋಸ್ಕರ ಭೀಮನ ಬಳಿ ಹಣವನ್ನು ಕೇಳಿದ. ಭೀಮ ಯುಧಿಷ್ಠಿರ ಹೇಳಿದ ಮಾತನ್ನು ಕೇಳಿ ಬೇಗನೇ ತನ್ನ ಕೈಯಲ್ಲಿದ್ದ ಆಭರಣವನ್ನು ಕೊಟ್ಟ.

**ಅನರ್ಘಮಗ್ನಿಪ್ರತಿಮಂ ವಿಚಿತ್ರ-**
**ರತ್ನಾಂಚಿತಂ ವಿಪ್ರವರಸ್ತದಾಪ್ಯ ।**
**ಯಯೌ ಕೃತಾರ್ಥೋಽಥ ಚ ನಂದಿಘೋಷ-**
**ಮಕಾರಯದ್ ವಾಯುಸುತಸ್ತದೈವ ॥ ೩ ॥**

**ಅರ್ಥ :- ಅನರ್ಘಂ** = ಅನರ್ಘ್ಯವಾದ, **ಅಗ್ನಿಪ್ರತಿಮಂ** = ಬೆಂಕಿ ಯಂತೆ ಹೊಳೆಯುವ, **ವಿಚಿತ್ರ ರತ್ನಾನ್ವಿತಂ ತತ್** = ವಿಚಿತ್ರವಾದ ರತ್ನಗಳಿಂದ ಕೂಡಿದ ಆಭರಣವನ್ನು, **ವಿಪ್ರವರಃ** = ಬ್ರಾಹ್ಮಣ ಶ್ರೇಷ್ಠನು, **ಆಪ್ಯ** = ಹೊಂದಿ, **ಕೃತಾರ್ಥಃ** = ಕೃತಾರ್ಥನಾಗಿ, **ಯಯೌ** = ಹೊರಟುಹೋದನು, **ಅಥ** = ಆನಂತರ, **ವಾಯುಸುತಃ** = ಭೀಮನು, **ತದೈವ** = ಆಗಲೇನೇ, **ನಂದಿಘೋಷಂ ಅಕಾರಯತ್** = ಭೇರೀನಾದವನ್ನು ಮಾಡಿಸಿದ.

**ತಾತ್ಪರ್ಯ :-** ಬ್ರಾಹ್ಮಣ ಅಮೂಲ್ಯವಾದ ಬೆಂಕಿಯಂತೆ ಕಂಗೊಳಿಸುತ್ತಿದ್ದ ಚಿತ್ರ ವಿಚಿತ್ರ ರತ್ನಗಳಿಂದ ಕೂಡಿದ ಆ ಹಸ್ತಾಭರಣವನ್ನು ಪಡೆದು ಕೃತಾರ್ಥನಾಗಿ ಹೊರಟುಹೋದನು. ಅನಂತರ ಭೀಮನು ಆವಾಗಲೇ ಭೇರೀನಾದವನ್ನೂ ಮಾಡಿಸಿದ.

**ಅಕಾಲಜಂ ತಂ ತು ನಿಶಮ್ಯ ರಾಜಾ**
**ಪಪ್ರಚ್ಛ ದೂತೈಸ್ತಮುವಾಚ ಭೀಮಃ ।**
**ಯನ್ಮರ್ತ್ಯದೇಹೋಽಪಿ ವಿನಿಶ್ಚಿತಾಯು-**
**ರಭೂನ್ನೃಪಸ್ತೇನ ಮಮಾಽಸ ಹರ್ಷಃ ॥ ೪ ॥**

**ಅರ್ಥ :- ಅಕಾಲಜಂ ತಂ ನಿಶಮ್ಯ** = ಅಕಾಲದಲ್ಲಿ ಉಂಟಾದ ಆ ಭೇರೀನಾದವನ್ನು ಕೇಳಿ, **ರಾಜಾ** = ರಾಜನಾದ ಯುಧಿಷ್ಠಿರನು, **ದೂತೈಃ ತಂ ಪಪ್ರಚ್ಛ** = ದೂತರಿಂದ ಭೀಮನನ್ನು ವಿಚಾರಿಸಿದ, **ಭೀಮಃ** = ಭೀಮನು, **ಮರ್ತ್ಯ ದೇಹೋಽಪಿ** = ಮನುಷ್ಯ ದೇಹದವನಾದರೂ ಕೂಡ, **ನೃಪಃ** = ಯುಧಿಷ್ಠಿರನು, **ಯತ್** = ಯಾವ ಕಾರಣದಿಂದ, **ವಿನಿಶ್ಚಿತಾಯುಃ ಅಭೂತ್** = ನಿಶ್ಚಯಿಸಲ್ಪಟ್ಟ ಆಯುಷ್ಯವುಳ್ಳವನು ಆಗಿದ್ದಾನೆ, **ತೇನ** = ಆದ್ದರಿಂದ, **ಮಮ** = ನನಗೆ, **ಹರ್ಷಃ ಆಸ** = ಸಂತೋಷವುಂಟಾಯಿತು, **ಇತಿ** = ಎಂಬುದಾಗಿ, **ಉವಾಚ** = ಹೇಳಿದನು.

**ತಾತ್ಪರ್ಯ :-** ಅಕಾಲದಲ್ಲಿ ಭೇರೀನಾದವನ್ನು ಕೇಳಿಸಿಕೊಂಡು ಯುಧಿಷ್ಠಿರ ದೂತರನ್ನು ಕಳುಹಿಸಿ ಭೀಮನನ್ನು ವಿಚಾರಿಸಿದ. ಭೀಮ ಹೇಳಿದ- ಮನುಷ್ಯ ದೇಹದವನಾದರೂ ಯುಧಿಷ್ಠಿರ ತನ್ನ ಆಯುಷ್ಯದ ಮಿತಿಯನ್ನು ತಿಳಿದಿದ್ದಾನೆ. ಆದ್ದರಿಂದ ನನಗೆ ಸಂತೋಷವಾಯಿತು.

**ಇತೀರಿತೋಽಸೌ ನೃಪತಿಸ್ತ್ವರೇತ**
**ಧರ್ಮಾರ್ಥಮಿತ್ಯಸ್ಯ ಮತಂ ಪ್ರಪೂಜಯನ್ ।**
**ಜಗಾದ ಸಾಧ್ವಿತ್ಯಥ ಭೂಯ ಏವ**
**ಧರ್ಮೇ ತ್ವರಾವಾನಪಿ ಸಂಬಭೂವ ॥ ೫ ॥**

**ಅರ್ಥ :- ಇತಿ** = ಈ ರೀತಿಯಾಗಿ, **ಈರಿತಃ** = ಹೇಳಲ್ಪಟ್ಟ, **ಅಸೌ ನೃಪತಿಃ** = ಈ ಯುಧಿಷ್ಠಿರನು, **ಧರ್ಮಾರ್ಥಂ ತ್ವರೇತ** = ಧರ್ಮಾಚರಣೆ ಗೋಸ್ಕರ ತ್ವರೆ ಮಾಡಬೇಕು, **ಇತಿ** = ಎಂಬ, **ಅಸ್ಯ** = ಈ ಭೀಮನ, **ಮತಂ** = ಅಭಿಪ್ರಾಯವನ್ನು, **ಪ್ರಪೂಜಯನ್** = ಹೊಗಳುತ್ತಾ, **ಸಾಧು ಇತಿ ಜಗಾದ** = ಭೀಮ ಮಾಡಿದ್ದು ಯುಕ್ತ ಎಂದು ಹೇಳಿದ, **ಅಥ** = ಅನಂತರ, **ಧರ್ಮೇ** = ಧರ್ಮಾಚರಣೆಯಲ್ಲಿ, **ಭೂಯ ಏವ ತ್ವರಾವಾನಪಿ ಸಂಬಭೂವ** = ಇನ್ನೂ ಹೆಚ್ಚು ತ್ವರೆಯುಳ್ಳವನಾದ.

**ತಾತ್ಪರ್ಯ** :- ಭೀಮ ಈ ರೀತಿಯಾಗಿ ಹೇಳಿದಾಗ ಯುಧಿಷ್ಠಿರ 'ಧರ್ಮಾಚರಣೆಯಲ್ಲಿ ತ್ವರೆ ಮಾಡಬೇಕು. ಎಂಬ ಭೀಮನ ಮಾತಿನ ಅಭಿಪ್ರಾಯವನ್ನು ತಿಳಿದು ಅಭಿನಂದಿಸುತ್ತಾ 'ಭೀಮ ಮಾಡಿದ್ದು ಸರಿ' ಎಂದು ಹೇಳಿದ. ಅನಂತರ ಧರ್ಮಾಚರಣೆಯಲ್ಲಿ ಇನ್ನೂ ಹೆಚ್ಚು ತ್ವರೆ ಮಾಡಿದ.

**ಅಥಾಽಂಬಿಕೇಯಂ ವಿಷಯೇಷು ಸಕ್ತಂ**
**ದುಸ್ಸಂಗದುಷ್ಟಂ ಕೃತಭೂರಿದೋಷಮ್ ।**
**ಸಮಸ್ತರಾಜಾಪ್ಯಯಹೇತುಭೂತಂ**
**ನಿಚಾಯ್ಯ ತಂ ಮಾರುತಿರನ್ವಕಂಪತ ॥ ೬ ॥**

**ಅರ್ಥ** :- **ಅಥ** = ಅನಂತರ, **ದುಸ್ಸಂಗದುಷ್ಟಂ** = ದುರ್ಜನರ ಸಂಗದಿಂದ ದುಷ್ಟನಾದ, **ಸಮಸ್ತರಾಜಾಪ್ಯಯಹೇತುಭೂತಂ** = ಸಮಸ್ತ ರಾಜರ ನಾಶಕ್ಕೆ ಕಾರಣನಾದ, **ಕೃತಭೂರಿ ದೋಷಂ** = ಮಾಡಲ್ಪಟ್ಟ ಬಹಳ ಪಾಪವುಳ್ಳ, **ವಿಷಯೇಷು ಸಕ್ತಂ** = ವಿಷಯ ಭೋಗದಲ್ಲಿ ಆಸಕ್ತನಾದ, **ತಂ ಆಂಬಿಕೇಯಂ** = ಆ ಧೃತರಾಷ್ಟ್ರನನ್ನು, **ನಿಚಾಯ್ಯ** = ನೋಡಿ, **ಮಾರುತಿಃ** = ಭೀಮನು, **ಅನ್ವಕಂಪತ** = ಅನುಕಂಪೆ ತೋರಿದ.

**ತಾತ್ಪರ್ಯ** :- ಅನಂತರ ಧೃತರಾಷ್ಟ್ರ ದುರ್ಜನರ ಸಹವಾಸದಿಂದ ಎಲ್ಲಾ ರಾಜರ ನಾಶಕ್ಕೆ ಕಾರಣನಾದ ಮಹಾಪಾಪಿಯಾಗಿದ್ದರೂ ವಿಷಯ ಭೋಗದಲ್ಲಿ ಆಸಕ್ತನಾಗಿದ್ದನ್ನು ನೋಡಿ ಭೀಮ ಅವನ ಮೇಲೆ ಅನುಕಂಪೆ ತೋರಿದ.

**ಅಕುರ್ವತಸ್ತೀಕ್ಷ್ಣ ತಪಃ ಕುತಶ್ಚಿ-**
**ನ್ನೈವಾಸ್ಯ ಲೋಕಾಪ್ತಿರಮುಷ್ಯ ಭೂಯಾತ್ ।**
**ರಾಗಾಧಿಕೋಽಯಂ ನ ತಪಶ್ಚ ಕುರ್ಯಾ-**
**ದಿತ್ಯಸ್ಯ ವೈರಾಗ್ಯಕರಾಣಿ ಚಕ್ರೇ ॥ ೭ ॥**

**ಅರ್ಥ** :- **ತೀಕ್ಷ್ಣತಪಃ** = ತೀವ್ರವಾದ ತಪಸ್ಸನ್ನು, **ಅಕುರ್ವತಃ** = ಮಾಡದೆ ಇರುವ, **ಅಮುಷ್ಯ** = ಈ ಧೃತರಾಷ್ಟ್ರನಿಗೆ, **ಸ್ವಲೋಕಾಪ್ತಿಃ** = ತನ್ನ ಗಂಧರ್ವ ಲೋಕ ಪ್ರಾಪ್ತಿಯು, **ಕುತಶ್ಚಿತ್** = ಯಾವಕಾರಣದಿಂದಲೂ, **ನೈವ ಭೂಯಾತ್** = ಆಗಲಾರದು, **ರಾಗಾಧಿಕಃ** = ಬಹಳ ವಿಷಯಾಸಕ್ತಿವುಳ್ಳ, **ಅಯಂ** = ಇವನು, **ತಪಶ್ಚ** = ತಪಸ್ಸನ್ನು, **ನ ಕುರ್ಯಾತ್** = ಮಾಡಲಾರ,

**ಇತಿ** = ಎಂಬುದಾಗಿ, **ಅಸ್ಯ** = ಇವನಿಗೆ, **ವೈರಾಗ್ಯಕರಾಣಿ** = ವೈರಾಗ್ಯ ವನ್ನುಂಟು ಮಾಡುವ ಉಪಾಯಗಳನ್ನು, **ಚಕ್ರೇ** = ಮಾಡಿದನು.

**ತಾತ್ಪರ್ಯ** :- ತೀವ್ರ ತಪಸ್ಸನ್ನು ಮಾಡದೆ ಇದ್ದರೆ ಆವಾಗ ಧೃತರಾಷ್ಟ್ರನಿಗೆ ತನ್ನ ಗಂಧರ್ವಲೋಕಪ್ರಾಪ್ತಿಯು ಯಾವ ಕಾರಣದಿಂದಲೂ ಆಗಲಾರದು. ವಿಷಯಾಸಕ್ತಿ ಬಹಳ ಇರುವುದರಿಂದ ಅವನು ತಪಸ್ಸನ್ನೂ ಮಾಡಲಾರ, ಈ ರೀತಿಯಾಗಿ ಯೋಚಿಸಿ ಅವನಿಗೆ ವೈರಾಗ್ಯವನ್ನುಂಟು ಮಾಡುವ ಉಪಾಯಗಳನ್ನು ಮಾಡಿದ.

**ಆಜ್ಞಾಂ ಪರೈರಸ್ಯ ನಿಹಂತಿ ಸೋದರೈ-**
**ರ್ವಧೂಜನೈರಪ್ಯತಿಪೂಜಿತೇಽಸ್ಮಿನ್ ।**
**ಸ ನಿಷ್ಪನತ್ಯೇವಮಪೀತರೈಃ ಸ**
**ಸುಪೂಜಿತೋ ನಾಽಸ ತದಾ ವಿರಾಗಃ ॥ ೮ ॥**

**ಅರ್ಥ** :- **ಸೋದರೈಃ** = ಸೋದರರಿಂದ, **ವಧೂಜನೈರಪಿ** = ಸ್ತ್ರೀಯರಿಂದಲೂ ಕೂಡ, **ಅಸ್ಮಿನ್** = ಈ ಧೃತರಾಷ್ಟ್ರನು, **ಅತಿಪೂಜಿತೇ** = ಅತಿಯಾಗಿ ಸತ್ಕರಿಸಲ್ಪಡುತ್ತಿದ್ದರೂ, **ಸಃ** = ಆ ಭೀಮನು, **ಪರೈಃ** = ಬೇರೆಯವರಿಂದ, **ಅಸ್ಯ** = ಇವನ, **ಆಜ್ಞಾಂ** = ಆಜ್ಞೆಯನ್ನು, **ನಿಹಂತಿ** = ನಿರಾಕರಿಸಿದ, **ಏವಂ ಅಪಿ** = ಹೀಗಿದ್ದರೂ ಕೂಡ, **ಇತರೈಃ** = ಬೇರೆಯವ ರಿಂದ, **ಸಃ** = ಅವನು, **ಸಂಪೂಜಿತಃ** = ಸತ್ಕರಿಸಲ್ಪಟ್ಟನು, **ತದಾ** = ಆವಾಗ, **ವಿರಾಗಃ** = ವೈರಾಗ್ಯವು, **ನಾಸ** = ಇರಲಿಲ್ಲ.

**ತಾತ್ಪರ್ಯ** :- ಸೋದರರೂ, ಸ್ತ್ರೀಯರೂ ಅತಿಯಾಗಿ ಸತ್ಕರಿಸುತ್ತಿದ್ದರೂ ಕೂಡ ಭೀಮ ಇತರ ಜನರಿಂದ ಮತ್ತು ತಾನೂ ಧೃತರಾಷ್ಟ್ರನ ಮಾತನ್ನು ಉಲ್ಲಂಘಿಸಿದ, ಹೀಗಿದ್ದರೂ ಕೂಡ ಇತರರು ಚೆನ್ನಾಗಿ ಸತ್ಕರಿಸುತ್ತಿದ್ದರಿಂದ ಅವನಿಗೆ ವೈರಾಗ್ಯ ಬರಲಿಲ್ಲ.

**ಸರ್ವೇ ಹಿ ಪಾರ್ಥಾಸ್ತಮೃತೇ ಸಭಾರ್ಯಾ**
**ವೈಚಿತ್ರವೀರ್ಯಂ ಪರಮಾದರೇಣ ।**
**ಪರ್ಯೇವ ಚಕ್ರುಃ ಸತತಂ ಸಭಾರ್ಯಂ**
**ಕೃಷ್ಣಾ ಚ ನ ಸ್ಯಾತ್ ತನಯಾರ್ತಿಮಾನಿತಿ ॥ ೯ ॥**

**ಅರ್ಥ** :- **ತಮೃತೇ** = ಆ ಭೀಮನನ್ನು ಹೊರತುಪಡಿಸಿ, **ಸರ್ವೇ** = ಎಲ್ಲಾ, **ಪಾರ್ಥಾಃ** = ಪಾಂಡವರು, **ಸಭಾರ್ಯಾಃ** = ಪತ್ನಿಯರಿಂದ ಕೂಡಿದವರಾಗಿ, **ಸತತಂ** = ಯಾವಾಗಲೂ, **ಪರಮಾದರೇಣ** = ಪರಮಾದರಿಂದ, **ಸಭಾರ್ಯಂ** = ಹೆಂಡತಿಯಿಂದ ಕೂಡಿದ, **ವೈಚಿತ್ರವೀರ್ಯಂ** = ಧೃತರಾಷ್ಟ್ರನನ್ನು, **ಪರ್ಯೇವ ಚಕ್ರುಃ** = ಉಪಚರಿಸಿದರು, **ತನಯಾರ್ತಿಮಾನ್** = ಪುತ್ರಶೋಕದಿಂದ ಕೂಡಿದವನು, **ನ ಸ್ಯಾತ್**= ಆಗದಿರಲಿ, **ಇತಿ** = ಎಂದು, **ಕೃಷ್ಣಾ ಚ** = ದ್ರೌಪದಿಯೂ ಕೂಡ ಉಪಚರಿಸಿದಳು.

**ತಾತ್ಪರ್ಯ** :- ಭೀಮನೊಬ್ಬನನ್ನು ಬಿಟ್ಟು ಉಳಿದ ಎಲ್ಲಾ ಪಾಂಡವರು ಪತ್ನಿ ಸಮೇತರಾಗಿ ಸತತವಾಗಿ ಪರಮಾದರದಿಂದ ಪತ್ನಿ ಸಮೇತನಾದ ಧೃತರಾಷ್ಟ್ರನನ್ನು ಉಪಚಾರ ಮಾಡಿದರು. ಅವನು ಪುತ್ರಶೋಕದಿಂದ ಪೀಡಿತನಾಗದಿರಲೆಂದು ದ್ರೌಪದಿಯೂ ಉಪಚರಿಸಿದಳು.

**ಸ ಪ್ರೀಯಮಾಣೋ ನಿತರಾಂ ಚ ತೇಷು**
**ನೈವಾಧಿಕಂ ಪ್ರೀಯತೇ ಭೀಮಸೇನೇ ।**
**ಸ್ಮರನ್ ಸುತಾಂಸ್ತೇನ ಹತಾನ್ ಸಮಸ್ತಾ-**
**ನಪಿ ಪ್ರಭಾವಂ ಪರಮಸ್ಯ ಜಾನನ್ ॥ ೧೦ ॥**

**ಅರ್ಥ** :- **ಸಃ** = ಆ ಧೃತರಾಷ್ಟ್ರನು, **ಅಸ್ಯ** = ಈ ಭೀಮನ, **ಪರಂ** = ಉತ್ತಮವಾದ, **ಪ್ರಭಾವಂ** = ಬಲವನ್ನು, **ಜಾನನ್ನಪಿ** = ತಿಳಿದವನಾಗಿದ್ದರೂ ಕೂಡ, **ತೇನ** = ಆ ಭೀಮನಿಂದ, **ಹತಾನ್** = ಹತರಾದ, **ಸುತಾನ್** = ಮಕ್ಕಳನ್ನು, **ಸ್ಮರನ್** = ಸ್ಮರಿಸುತ್ತಾ, **ತೇಷು** = ಆ ಉಳಿದ ಪಾಂಡವರಲ್ಲಿ, **ನಿತರಾಂ** = ಬಹಳವಾಗಿ, **ಪ್ರೀಯ ಮಾಣಃ** = ಪ್ರೀತಿಮಾಡುವವನಾದರೂ, **ಭೀಮಸೇನೇ** = ಭೀಮಸೇನನಲ್ಲಿ, **ಅಧಿಕಂ** = ಬಹಳವಾಗಿ, **ನೈವ ಪ್ರೀಯತೇ** = ಪ್ರೀತಿಮಾಡಲಿಲ್ಲ.

**ತಾತ್ಪರ್ಯ** :- ಧೃತರಾಷ್ಟ್ರ ಭೀಮನ ಬಲವನ್ನು ತಿಳಿದಿದ್ದರೂ ಕೂಡ ಬೇರೆ ಪಾಂಡವರನ್ನು ಬಹಳ ಪ್ರೀತಿಮಾಡುವ ಸಮಯದಲ್ಲೂ ಕೂಡ ಭೀಮಸೇನನ ಮೇಲೆ ಹೆಚ್ಚು ಪ್ರೀತಿ ಮಾಡಲಿಲ್ಲ. ಕಾರಣವೇನೆಂದರೆ ಅವನು ತನ್ನೆಲ್ಲಾ ಮಕ್ಕಳನ್ನು ಕೊಂದದ್ದನ್ನೇ ನೆನೆಯುತ್ತಿದ್ದ.

**ತಸ್ಯಾಪನೇತುಂ ವಿಷಯೇಷು ಸಕ್ತಿಂ**
**ದ್ವೇಷಂ ತಥೈವಾಽತ್ಮನಿ ಭೀಮಸೇನಃ ।**
**ಜಗಾದ ಮಾದ್ರೀಸುತಯೋಃ ಸಮಕ್ಷ-**
**ಮಾಸ್ಫೋಟ್ಯ ಸಂಶೃಣ್ವತ ಏವ ತಸ್ಯ ॥ ೧೧ ॥**

**ಅರ್ಥ** :- **ಭೀಮಸೇನಃ** = ಭೀಮನು, **ತಸ್ಯ** = ಆ ಧೃತರಾಷ್ಟ್ರನ, **ವಿಷಯೇಷು ಸಕ್ತಿಂ** = ವಿಷಯ ಭೋಗದಲ್ಲಿ ಆಸಕ್ತಿಯನ್ನು, **ತಥೈವ** = ಹಾಗೆಯೇ, **ಆತ್ಮ ನಿ** = ತನ್ನಲ್ಲಿ, **ದ್ವೇಷಂ** = ದ್ವೇಷವನ್ನು, **ಅಪನೇತುಂ** = ಕಳೆಯುವುದಕ್ಕಾಗಿ, **ಮಾದ್ರೀಸುತಯೋಃ** = ಮಾದ್ರಿಯ ಮಕ್ಕಳಾದ ನಕುಲ ಸಹದೇವರ, **ಸಮಕ್ಷಂ** = ಸಮಕ್ಷಮದಲ್ಲಿ, **ತಸ್ಯ ಸಂಶೃಣ್ವತ ಏವ** = ಆ ಧೃತರಾಷ್ಟ್ರನಿಗೆ ಕೇಳುವಂತೇ, **(ಭುಜೌ) ಆಸ್ಫೋಟ್ಯ** = ಭುಜಗಳನ್ನು ತಟ್ಟಿಕೊಂಡು, **ಜಗಾದ** = ಹೇಳಿದನು.

**ತಾತ್ಪರ್ಯ** :- ಭೀಮಸೇನ ಧೃತರಾಷ್ಟ್ರನಿಗೆ ವಿಷಯ ಭೋಗದಲ್ಲಿ ಆಸಕ್ತಿಯನ್ನೂ ತನ್ನ ಮೇಲಿದ್ದ ದ್ವೇಷವನ್ನು ನಾಶಮಾಡುವುದಕ್ಕಾಗಿ ನಕುಲ ಸಹದೇವರ ಸಮಕ್ಷಮದಲ್ಲಿ ಧೃತರಾಷ್ಟ್ರನಿಗೆ ಕೇಳುವಂತೆ ಭುಜ ತಟ್ಟಿಕೊಂಡು ಹೇಳಿದ.

**ತಾವಿಮೌ ಮೇ ಭುಜೌ ವೃತ್ತೌ ಪೀನೌ ಚಂದನರೂಷಿತೌ ।**
**ಯಯೋರಂತರಮಾಸಾದ್ಯ ಜರಠಸ್ಯ ಸುತಾ ಹತಾಃ ॥ ೧೨ ॥**

**ಅರ್ಥ** :- **ಯಯೋಃ** = ಯಾವ ಭುಜಗಳ, **ಅಂತರಂ ಆಸಾದ್ಯ** = ನಡುವೆ ಸಿಲುಕಿ, **ಜರಠಸ್ಯ** = ಮುದುಕನ, **ಸುತಾಃ** = ಮಕ್ಕಳು, **ಹತಾಃ** = ಹತರಾದರೋ, **ತೌ** = ಅಂತಹ, **ವೃತ್ತೌ** = ದುಂಡಾದ, **ಪೀನೌ** = ಪುಷ್ಟವಾದ, **ಚಂದನ ರೂಷಿತೌ** = ಗಂಧ ಲೇಪದಿಂದ ಕೂಡಿದ, **ಮೇ** = ನನ್ನ, **ಭುಜೌ** = ಭುಜಗಳು, **ಇಮೌ** = ಇವುಗಳು.

**ತಾತ್ಪರ್ಯ** :- ದುಂಡಾಗಿ ಪುಷ್ಟವಾಗಿ ಗಂಧ ಲೇಪದಿಂದ ಕೂಡಿದ ಈ ನನ್ನ ಭುಜಗಳ ನಡುವೆ ಸಿಲುಕಿಕೊಂಡೇ ಈ ಮುದುಕನ ಮಕ್ಕಳು ಹತರಾದರು ಎಂದು.

**ಯಮೌ ತದನ್ವಮೋದೇತಾಂ ತತ್ಸ್ನೇಹಾದ್ ಗೌರವಾದಪಿ ।**
**ನೈವ ತತ್ ಕೃಷ್ಣಯಾ ಜ್ಞಾತಂ ಪೃಥಯಾ ಚ ಸಪುತ್ರಯಾ ॥ ೧೩ ॥**

**ತಚ್ಛ್ರುತ್ವೋತ್ಪನ್ನನಿರ್ವೇದಂ ಕ್ಷತ್ತಾ ಜ್ಯೇಷ್ಠಸ್ಯ ವರ್ಧಯನ್ ।**
**ಉವಾಚ ಜೀವಿತಾಶಾ ತೇ ನನು ರಾಜನ್ ಗರೀಯಸೀ ॥ ೧೪ ॥**

**ಅರ್ಥ :- ಯಮೌ** = ನಕುಲ ಸಹದೇವರು, **ತತ್ಸ್ನೇಹಾತ್** = ಭೀಮನಲ್ಲಿ ಸ್ನೇಹದಿಂದ, **ಗೌರವಾದಪಿ** = ಗೌರವದಿಂದಲೂ, **ತತ್** = ಆ ಭೀಮನ ಮಾತನ್ನು, **ಅನ್ವಮೋದೇತಾಂ** = ಒಪ್ಪಿದರು, **ತತ್** = ಅದು, **ಕೃಷ್ಣಯಾ** = ದ್ರೌಪದಿಯಿಂದ, **ಸಪುತ್ರಯಾ** = ಮಕ್ಕಳಿಂದ ಕೂಡಿದ, **ಪೃಥಯಾ ಚ** = ಕುಂತಿಯಿಂದಲೂ ಕೂಡ, **ನೈವ ಜ್ಞಾತಂ** = ತಿಳಿಯಲ್ಪಡಲಿಲ್ಲ, **ತತ್** = ಆ ಭೀಮನ ಮಾತನ್ನು, **ಶ್ರುತ್ವಾ** = ಕೇಳಿ, **ಜ್ಯೇಷ್ಠಸ್ಯ** = ಅಣ್ಣನಿಗೆ, **ಉತ್ಪನ್ನ ನಿರ್ವೇದಂ** = ಉದಯಿಸಲ್ಪಟ್ಟ ವೈರಾಗ್ಯವನ್ನು, **ಕ್ಷತ್ತಾ** = ವಿದುರನು, **ವರ್ಧಯನ್** = ಹೆಚ್ಚಿಸುತ್ತಾ, **ರಾಜನ್** = ರಾಜನೇ, **ತೇ** = ನಿನಗೆ, **ಜೀವಿತಾಶಾ** = ಬದುಕುವ ಆಸೆ, **ಗರೀಯಸೀ ನನು** = ಬಹಳವಾಗಿದೆಯೇ, **ಇತಿ** = ಎಂಬುದಾಗಿ, **ಉವಾಚ** = ಹೇಳಿದನು.

**ತಾತ್ಪರ್ಯ :-** ನಕುಲ ಸಹದೇವರು ಭೀಮನ ಮಾತನ್ನು ಅನುಮೋದಿಸಿದರು. ಆದರೆ ಧೃತರಾಷ್ಟ್ರನ ಮೇಲಿನ ಪ್ರೀತಿಯಿಂದ ಮತ್ತೂ ಗೌರವದಿಂದಲೂ ಏನೂ ಹೇಳಲಿಲ್ಲ. ಈ ವಿಷಯ ದ್ರೌಪದಿಗಾಗಲೀ ಕುಂತಿಗಾಗಲಿ ಧರ್ಮರಾಜ ಅರ್ಜುನರಿಗಾಗಲಿ ತಿಳಿಯಲಿಲ್ಲ. ಈ ಮಾತನ್ನು ಕೇಳಿ ಧೃತರಾಷ್ಟ್ರನಿಗೆ ವೈರಾಗ್ಯ ಮೂಡಿತು. ಆ ವೈರಾಗ್ಯವನ್ನು ಹೆಚ್ಚಿಸಲು ವಿದುರ ಧೃತರಾಷ್ಟ್ರನಿಗೆ ಹೇಳಿದ. 'ರಾಜನೇ! ನಿನಗೆ ಬದುಕುವ ಆಸೆ ಅತಿಯಾಗಿದೆ.

**ಅಹೋ ಗರೀಯಸೀ ಜಂತೋರ್ಜೀವಿತಾಶಾ ಯಯಾ ಭವಾನ್ ।**
**ಭೀಮಾಪವರ್ಜಿತಂ ಪಿಂಡಮಾದತ್ತೇ ಗೃಹಪಾಲವತ್ ॥ ೧೫ ॥**

**ಅರ್ಥ :- ಅಹೋ** = ಆಶ್ಚರ್ಯ, **ಜಂತೋಃ** = ಜಂತುವಿಗೆ, **ಜೀವಿತಾಶಾ** = ಬದುಕುವ ಆಸೆಯು, **ಗರೀಯಸೀ** = ದೊಡ್ಡದು, **ಯಯಾ** = ಯಾವ ಆಸೆಯಿಂದ, **ಭವಾನ್** = ನೀನು, **ಭೀಮಾಪವರ್ಜಿತಂ** =

ಭೀಮನಿಂದ ಎಸೆಯಲ್ಪಟ್ಟ, **ಪಿಂಡಂ** = ಪಿಂಡವನ್ನು, **ಗೃಹಪಾಲವತ್** = ಮನೆ ಕಾಯುವ ನಾಯಿಯಂತೆ, **ಆದತ್ಸೇ** = ತಿನ್ನುತ್ತೀ.

**ತಾತ್ಪರ್ಯ** :- 'ಆಶ್ಚರ್ಯ! ಜಂತುವಿಗೆ ಬದುಕುವಾಸೆ ದೊಡ್ಡದು. ಆದ್ದರಿಂದಲೇನೇ ನೀನು ಭೀಮನೆಸೆವ ಅನ್ನದ ಪಿಂಡವನ್ನು ಮನೆ ಕಾಯುವ ನಾಯಿಯಂತೆ ತಿನ್ನುತ್ತೀ.

**ನಚಾಪರಾಧೋ ಭೀಮಸ್ಯ ಬ್ರುವತಸ್ತ್ವಾಮಿದಂ ವಚಃ ।**
**ಅಗ್ನಿರ್ನಿಸೃಷ್ಟೋ ದತ್ತಶ್ಚ ಗರೋ ದಾರಾಶ್ಚ ದೂಷಿತಾಃ ॥ ೧೬ ॥**

**ಹೃತಂ ಕ್ಷೇತ್ರಂ ಧನಂ ಯಸ್ಯ ಕಿಂ ಭೀಮೇನ ಕೃತಂ ತ್ವಯಿ ।**
**ಅಲಮಾಸಜ್ಜತಸ್ತೇಽದ್ಯ ನಿರ್ವೇದಕರಮೀರಿತಮ್ ॥ ೧೭ ॥**

**ಉಪಕಾರಾಯ ಭೀಮೇನ ತವ ದ್ವೇಷಂ ತ್ಯಜಾತ್ರ ತತ್ ।**
**ವಿಮುಚ್ಯ ದ್ವೇಷಕಾಮೌ ತ್ವಂ ವನೇ ತೀರ್ಥನಿಷೇವಕಃ ॥ ೧೮ ॥**

**ತಪಸಾಽಽರಾಧಯ ಹರಿಂ ತತಃ ಪೂತೋ ಭವಿಷ್ಯಸಿ ।**
**ಇತ್ಯುಕ್ತೋ ದ್ವೇಷಮುತ್ಸೃಜ್ಯ ಭೀಮೇ ನಿರ್ವೇದಮಾಗತಃ ॥ ೧೯ ॥**

**ಅರ್ಥ** :- **ಇದಂ** = ಈ, **ವಚಃ** = ಮಾತನ್ನು, **ಬ್ರುವತಃ** = ಹೇಳುತ್ತಿರುವ, **ಭೀಮಸ್ಯ** = ಭೀಮನ, **ಅಪರಾಧಃ** = ಅಪರಾಧವು, **ನ** = ಏನೂ ಇಲ್ಲ, **ಯಸ್ಯ** = ಯಾವ ಭೀಮನಿಗೆ, **ಗರಃ** = ವಿಷವು, **ದತ್ತಃ** = ಕೊಡಲ್ಪಟ್ಟಿತೋ, **ಅಗ್ನಿಃ** = ಬೆಂಕಿಯು, **ವಿಸೃಷ್ಟಃ** = ಹಚ್ಚಲ್ಪಟ್ಟಿತೋ, **ದಾರಾಶ್ಚ** = ಹೆಂಡಂದಿರೂ, **ದೂಷಿತಾಃ** = ಅವಮಾನಿಸಲ್ಪಟ್ಟಿರೋ, **ಕ್ಷೇತ್ರಂ** = ಭೂಮಿಯು, **ಧನಂ ಚ** = ಸಂಪತ್ತೂ, **ಹೃತಂ** = ಅಪಹೃತವಾಯಿತೋ ಅಂತಹ, **ಭೀಮೇನ** = ಭೀಮನಿಂದ, **ತ್ವಯಿ** = ನಿನ್ನಲ್ಲಿ, **ಕಿಂ ಕೃತಂ** = ಏನು ಮಾಡಲ್ಪಟ್ಟಿತು? **ಅಲಂ ಆಸಜ್ಜತಃ** = ಅತಿಯಾಗಿ ವಿಷಯಾಸಕ್ತನಾದ, **ತೇ** = ನಿನಗೆ, **ಅದ್ಯ** = ಇಂದು, **ತವ** = ನಿನ್ನ, **ಉಪಕಾರಾಯ** = ಉಪಕಾರಕ್ಕಾಗಿ, **ಭೀಮೇನ** = ಭೀಮನಿಂದ, **ನಿರ್ವೇದಕಂ** = ವೈರಾಗ್ಯ ಮೂಡಿಸುವ ಮಾತು, **ಈರಿತಂ** = ಹೇಳಲ್ಪಟ್ಟಿತು. **ತತ್** = ಆದ್ದರಿಂದ, **ದ್ವೇಷಂ** = ದ್ವೇಷವನ್ನು, **ತ್ಯಜ** = ಬಿಡು, **ದ್ವೇಷಕಾಮೌ** = ರಾಗದ್ವೇಷಗಳನ್ನು, **ವಿಮುಚ್ಯ** = ಬಿಟ್ಟು,

**ವನೇ** = ಕಾಡಿನಲ್ಲಿ, **ತೀರ್ಥ ನಿಷೇವಕಃ** = ತೀರ್ಥಗಳನ್ನು ಸೇವಿಸುವವನಾಗಿ, **ತಪಸಾ** = ತಪಸ್ಸಿನಿಂದ, **ಹರಿಂ** = ಹರಿಯನ್ನು, **ಆರಾಧಯ** = ಆರಾಧಿಸು, **ತತಃ** = ನಂತರ, **ಪೂತೋ ಭವಿಷ್ಯಸಿ** = ಪವಿತ್ರನಾಗುತ್ತೀ, **ಇತಿ** = ಈ ರೀತಿಯಾಗಿ, **ಈರಿತಃ** = ಹೇಳಲ್ಪಟ್ಟ ಧೃತರಾಷ್ಟ್ರನು, **ಭೀಮೇ** = ಭೀಮನಲ್ಲಿ, **ದ್ವೇಷಂ** = ದ್ವೇಷವನ್ನು, **ಉತ್ಸೃಜ್ಯ** = ಬಿಟ್ಟು, **ನಿರ್ವೇದಂ ಆಗತಃ** = ವೈರಾಗ್ಯ ಹೊಂದಿದ.

**ತಾತ್ಪರ್ಯ** :- ಭೀಮ ನಿನಗೆ ಈ ಮಾತನ್ನು ಹೇಳಿದರೂ ಅವನದೇನೂ ತಪ್ಪಿಲ್ಲ. ನಿನ್ನ ಮಕ್ಕಳು ಅವನಿಗೆ ಬೆಂಕಿ ಹಚ್ಚಿದ್ದಾರೆ. ವಿಷ ಹಾಕಿದ್ದಾರೆ. ಹೆಂಡತಿಯನ್ನು ಅವಮಾನಿಸಿದ್ದಾರೆ. ಭೂಮಿ ಮತ್ತು ಸಂಪತ್ತನ್ನು ಅಪಹರಿಸಿದ್ದಾರೆ. ಇದನ್ನೆಲ್ಲಾ ಮಾಡಿಸಿದ ನಿನಗೆ ಪ್ರತಿಯಾಗಿ ಭೀಮ ಏನೂ ಅಪಕಾರ ಮಾಡಿಲ್ಲ. ಅತಿಯಾಗಿ ವಿಷಯಾಸಕ್ತನಾದ ನಿನಗೆ ಇಂದು ಉಪಕಾರಕ್ಕಾಗಿ ವೈರಾಗ್ಯ ಉಂಟು ಮಾಡುವ ಮಾತುಗಳನ್ನು ನುಡಿದಿದ್ದಾನೆ. ಆದ್ದರಿಂದ ಭೀಮನಲ್ಲಿ ದ್ವೇಷವನ್ನು ಬಿಡು. ರಾಗದ್ವೇಷಗಳನ್ನು ತ್ಯಜಿಸಿ ಕಾಡಿನಲ್ಲಿ ತೀರ್ಥಗಳನ್ನು ಸೇವಿಸುತ್ತಾ ತಪಸ್ಸಿನಿಂದ ಹರಿಯನ್ನು ಆರಾಧಿಸು. ಆಗ ನೀನು ಪಾಪರಹಿತನಾಗುವಿ. ಹೀಗೆ ವಿದುರ ಹೇಳಿದಾಗ ಧೃತರಾಷ್ಟ್ರ ಭೀಮನಲ್ಲಿ ದ್ವೇಷವನ್ನು ಬಿಟ್ಟು ವೈರಾಗ್ಯ ಹೊಂದಿದ.

**ಅನುಜ್ಞಾಂ ತಪಸೇ ಪ್ರಾಪ್ತುಮುಪವಾಸಪರೋಽಭವತ್ ।**
**ಅನಶ್ನಂತಂ ಚತುರ್ಥೇಽಹ್ನಿ ಧೃತರಾಷ್ಟ್ರಂ ಯುಧಿಷ್ಠಿರಃ ॥ ೨೦ ॥**

**ಜ್ಞಾತ್ವಾ ಸಂಪ್ರಾರ್ಥಯಾಮಾಸ ಭೋಜನಾರ್ಥಂ ಪುನಃಪುನಃ ।**
**ಅನುಜ್ಞಾಂ ವನವಾಸಾಯ ತ್ವತ್ತಃ ಪ್ರಾಪ್ಯೈವ ಸರ್ವಥಾ ॥ ೨೧ ॥**

**ಭೋಕ್ಷ್ಯೇಽನ್ಯಥಾ ನೇತಿ ವದನ್ ಧೃತರಾಷ್ಟ್ರಃ ಶ್ರಮಾನ್ವಿತಃ ।**
**ಉಪವಾಸಕೃಶೋ ಭಾರ್ಯಾಂ ಶಿಶ್ರಿಯೇ ಮೂರ್ಛಿತಃ ಕ್ಷಣಾತ್ ॥ ೨೨ ॥**

**ಅರ್ಥ** :- **ತಪಸೇ** = ತಪಸ್ಸಿಗೆ, **ಅನುಜ್ಞಾಂ** = ಅನುಜ್ಞೆಯನ್ನು, **ಪ್ರಾಪ್ತುಂ** = ಪಡೆಯಲು, **ಉಪವಾಸಪರಃ ಅಭವತ್** = ಉಪವಾಸ ಪರನಾದನು, **ಚತುರ್ಥೇ ಅಹ್ನಿ** = ನಾಲ್ಕನೆಯ ದಿನದಲ್ಲಿ, **ಧೃತರಾಷ್ಟ್ರಂ** = ಧೃತರಾಷ್ಟ್ರನನ್ನು, **ಅನಶ್ನಂತಂ** = ಊಟ ಮಾಡದೆ ಇದ್ದವನನ್ನಾಗಿ, **ಜ್ಞಾತ್ವಾ** = ತಿಳಿದು,

**ಭೋಜನಾರ್ಥಂ** = ಭೋಜನಕ್ಕಾಗಿ, **ಪುನಃ ಪುನಃ** = ಮತ್ತೆ ಮತ್ತೆ, **ಸಂಪ್ರಾರ್ಥಯಾಮಾಸ** = ಪ್ರಾರ್ಥಿಸಿದ, **ವನವಾಸಾಯ** = ವನವಾಸಕ್ಕಾಗಿ, **ತ್ವತ್ತಃ** = ನಿನ್ನಿಂದ, **ಅನುಜ್ಞಾಂ** = ಅಪ್ಪಣೆಯನ್ನು, **ಪ್ರಾಪ್ಯೈವ** = ಪಡೆದೇ, **ಭೋಕ್ಷ್ಯೇ** = ಉಣ್ಣುತ್ತೇನೆ, **ಅನ್ಯಥಾ** = ಅಪ್ಪಣೆ ಪಡೆಯದೇ, **ಸರ್ವಥಾ ನ ಭೋಕ್ಷ್ಯೇ** = ಸರ್ವಥಾ ಊಟ ಮಾಡುವುದಿಲ್ಲ, **ಇತಿ** = ಎಂಬುದಾಗಿ, **ವದನ್** = ಹೇಳುತ್ತಾ, **ಉಪವಾಸ ಕೃಶಃ** = ಉಪವಾಸದಿಂದ ಸೊರಗಿದ, **ಶ್ರಮಾನ್ವಿತಃ** = ಆಯಾಸದಿಂದ ಕೂಡಿದ್ದ, **ಧೃತರಾಷ್ಟ್ರಃ** = ಧೃತರಾಷ್ಟ್ರನು, **ಭಾರ್ಯಾಂ** = ಹೆಂಡತಿಯಾದ ಗಾಂಧಾರಿಯನ್ನು, **ಶಿಶ್ರಿಯೇ** = ಆಶ್ರಯಿಸಿದನು. **ಕ್ಷಣಾತ್** = ಒಂದು ಕ್ಷಣದಲ್ಲಿ, **ಮೂರ್ಛಿತಃ** = ಮೂರ್ಛಿತನಾದ.

**ತಾತ್ಪರ್ಯ :-** ಧೃತರಾಷ್ಟ್ರ ತಪಸ್ಸಿಗೆ ಧರ್ಮರಾಜನಿಂದ ಅಪ್ಪಣೆ ಪಡೆಯಲು ಉಪವಾಸ ಮಾಡಲಾರಂಭಿಸಿದ. ನಾಲ್ಕನೇ ದಿನ ಧೃತರಾಷ್ಟ್ರ ಊಟ ಮಾಡದಿದ್ದುದನ್ನು ತಿಳಿದು ಯುಧಿಷ್ಠಿರ ಭೋಜನಕ್ಕಾಗಿ ಮತ್ತೆ ಮತ್ತೆ ಪ್ರಾರ್ಥಿಸಿದ. ವನವಾಸಕ್ಕೆ ನಿನ್ನಿಂದ ಒಪ್ಪಿಗೆಯನ್ನು ಪಡೆದೇ ನಾನು ಊಟ ಮಾಡುವೆ. ಇಲ್ಲದಿದ್ದರೆ ಸರ್ವಥಾ ಮಾಡುವುದಿಲ್ಲ. ಹೀಗೆ ಹೇಳುತ್ತಾ ಉಪವಾಸದಿಂದ ಸೊರಗಿ ಆಯಾಸಗೊಂಡಿದ್ದ ಧೃತರಾಷ್ಟ್ರ ಗಾಂಧಾರಿಯನ್ನು ಆಶ್ರಯಿಸಿದ. ಕ್ಷಣದಲ್ಲಿ ಮೂರ್ಛೆಗೊಂಡ.

**ಶಂತಮೇನ ಕರೇಣಾಥ ಧರ್ಮಜಸ್ತಂ ಮೃದು ಸ್ಪೃಶನ್ ।**
**ಶನೈಃ ಸಂಜ್ಞಾಮಗಮಯದಬ್ರವೀಚ್ಚ ಸುದುಃಖಿತಃ ॥ ೨೩ ॥**

**ಅರ್ಥ :- ಧರ್ಮಜಃ** = ಧರ್ಮರಾಜನು, **ಶಂತಮೇನ** = ಅತ್ಯಂತ ಸುಖಕರವಾದ, **ಕರೇಣ** = ಕೈಯಿಂದ, **ತಂ** = ಆ ಧೃತರಾಷ್ಟ್ರನನ್ನು, **ಮೃದು** = ಮೃದುವಾಗಿ, **ಸ್ಪೃಶನ್** = ಸ್ಪರ್ಶಿಸುತ್ತಾ, **ಶನೈಃ** = ಮೆಲ್ಲಗೆ, **ಸಂಜ್ಞಾಂ ಅಗಮಯತ್** = ಎಚ್ಚರ ಗೊಳಿಸಿದ, **ಚ** = ಮತ್ತು, **ಸು ದುಃಖಿತಃ** = ಬಹಳ ದುಃಖಗೊಂಡವನಾಗಿ, **ಅಬ್ರವೀತ್** = ಹೇಳಿದನೂ ಕೂಡ.

**ತಾತ್ಪರ್ಯ :-** ಧರ್ಮರಾಜ ಅತ್ಯಂತ ಸುಖಕರವಾದ ಕೈಯಿಂದ ಧೃತರಾಷ್ಟ್ರನನ್ನು ಸ್ಪರ್ಶಿಸಿ ಮೆಲ್ಲಗೆ ಎಚ್ಚರಗೊಳಿಸಿದ ಬಹಳ ದುಃಖಿತನಾಗಿ ಹೇಳಿದ.

**ಪುರಸ್ಕೃತ್ಯ ಯುಯುತ್ಸುಂ ತ್ವಂ ಕುರು ರಾಜ್ಯಮಕಂಟಕಮ್ ।**
**ವಯಮೇವ ತ್ವದರ್ಥಾಯ ಕುರ್ಮಃ ಸರ್ವೇ ತಪೋ ವನೇ ॥ ೨೪ ॥**

**ಅರ್ಥ** :- **ಯುಯುತ್ಸುಂ** = ಯುಯುತ್ಸುವನ್ನು, **ಪುರಸ್ಕೃತ್ಯ** = ಮುಂದೆ ಮಾಡಿ, **ತ್ವಂ** = ನೀನು, **ಅಕಂಟಕಂ** = ನಿಷ್ಕಂಟಕವಾಗಿ, **ರಾಜ್ಯಂ ಕುರು** = ರಾಜ್ಯವನ್ನಾಳು, **ವಯಂ ಸರ್ವೇ** = ನಾವೆಲ್ಲರೂ, **ತ್ವದರ್ಥಾಯ ಏವ** = ನಿನಗಾಗಿಯೇ, **ವನೇ** = ಕಾಡಿನಲ್ಲಿ, **ತಪಃ** = ತಪಸ್ಸನ್ನು, **ಕುರ್ಮಃ** = ಮಾಡುತ್ತೇವೆ.

**ತಾತ್ಪರ್ಯ** :- ಯುಯುತ್ಸುವನ್ನು ಮುಂದೆ ಮಾಡಿಕೊಂಡು ನೀನು ನಿಷ್ಕಂಟಕವಾಗಿ ರಾಜ್ಯವಾಳು. ನಾವೇ ಎಲ್ಲರೂ ನಿನಗಾಗಿ ಕಾಡಿನಲ್ಲಿ ತಪಸ್ಸು ಮಾಡುತ್ತೇವೆ.

**ನೇತ್ಯಾಹ ಧೃತರಾಷ್ಟ್ರಸ್ತಂ ಕುಲಧರ್ಮೋ ಹಿ ನೋ ವನೇ ।**
**ಅಂತೇ ದೇಹಪರಿತ್ಯಾಗಸ್ತನ್ಮಾಽನುಜ್ಞಾತುಮರ್ಹತಿ ॥ ೨೫ ॥**

**ಅರ್ಥ** :- **ಧೃತರಾಷ್ಟ್ರಃ** = ಧೃಡತರಾಷ್ಟನು, **ತಂ** = ಆ ಯುಧಿಷ್ಠಿರನನ್ನು ಕುರಿತು, ನ = ಬೇಡ, ಇತಿ = ಎಂಬುದಾಗಿ, **ಆಹ** = ಹೇಳಿದನು, **ಅಂತೇ** = ಅಂತ್ಯ ಕಾಲದಲ್ಲಿ, **ವನೇ** = ಕಾಡಿನಲ್ಲಿ, **ದೇಹಪರಿತ್ಯಾಗಃ** = ದೇಹ ಪರಿತ್ಯಾಗ ಮಾಡುವುದು, ನಃ = ನಮ್ಮ, **ಕುಲಧರ್ಮಃ** = ಕುಲಧರ್ಮವು, **ತತ್** = ಆದ್ದರಿಂದ, **ಮಾ** = ನನ್ನನ್ನು, **ಅನುಜ್ಞಾತುಂ ಅರ್ಹಸಿ** = ಅನುಮತಿಸಲು ಅರ್ಹನಾಗಿದ್ದಿ.

**ತಾತ್ಪರ್ಯ** :- ಧೃತರಾಷ್ಟ್ರ ಬೇಡ ಎಂದ. ಅಂತ್ಯಕಾಲದಲ್ಲಿ ಕಾಡಿನಲ್ಲಿ ದೇಹಪರಿತ್ಯಾಗ ಮಾಡುವುದು. ನಮಗೆ ಕುಲಧರ್ಮ. ಅದಕ್ಕೆ ನನಗೆ ನೀನು ಒಪ್ಪಿಗೆ ನೀಡು ಎಂದ.

**ತಯೋರ್ವಿವದತೋರೇವಂ ಕೃಷ್ಣದ್ವೈಪಾಯನಃ ಪ್ರಭುಃ ।**
**ಸರ್ವಜ್ಞಃ ಸರ್ವಕರ್ತೇಶ ಆವಿರ್ಭೂತೋಽಬ್ರವೀನ್ನೃಪಮ್ ॥ ೨೬ ॥**

**ಅರ್ಥ** :- **ಏವಂ** = ಹೀಗೆ, **ತಯೋಃ** = ಆ ಧೃತರಾಷ್ಟ್ರ ಧರ್ಮರಾಜರು, **ವಿವದತೋಃ** = ವಾದ ಮಾಡುತ್ತಿರಲು, **ಸರ್ವಜ್ಞಃ** = ಸರ್ವಜ್ಞನಾದ,

**ಸರ್ವಕರ್ತಾ** = ಸರ್ವಕರ್ತನಾದ, **ಈಶಃ** = ಸರ್ವ ಸ್ವಾಮಿಯಾದ, **ಪ್ರಭುಃ** = ಪ್ರಭುವಾದ, **ಕೃಷ್ಣದ್ವೈಪಾಯನಃ** = ಶ್ರೀವೇದವ್ಯಾಸದೇವರು, **ಆವಿರ್ಭೂತಃ** = ಆವಿರ್ಭೂತರಾಗಿ, **ನೃಪಂ** = ಧರ್ಮರಾಜನನ್ನು ಕುರಿತು, **ಅಬ್ರವೀತ್** = ಹೇಳಿದರು.

**ತಾತ್ಪರ್ಯ** :- ಈ ರೀತಿಯಾಗಿ ಧೃತರಾಷ್ಟ್ರ ಧರ್ಮರಾಜರು ವಾದ ಮಾಡುತ್ತಿದ್ದಾಗ ಸರ್ವಜ್ಞ ಸರ್ವಕರ್ತ ಸರ್ವಸ್ವಾಮಿಯಾದ ಪ್ರಭುವಾದ ಶ್ರೀ ವೇದವ್ಯಾಸ ದೇವರು ಆವಿರ್ಭವಿಸಿ ಧರ್ಮರಾಜನಿಗೆ ಹೇಳಿದರು.

**ತಪಸಾಽಶೇಷದೋಷಾಣಾಂ ಕ್ಷಯಕಾಮಮಿಮಂ ನೃಪಮ್ ।**
**ಅನುಜಾನೀಹಿ ನೈವಾಸ್ಯ ಧರ್ಮವಿಘ್ನಕರೋ ಭವ ॥ ೨೭ ॥**

**ಅರ್ಥ** :- **ತಪಸಾ** = ತಪಸ್ಸಿನಿಂದ, **ಅಶೇಷ ದೋಷಾಣಾಂ** = ಎಲ್ಲಾ ಪಾಪಗಳ, **ಕ್ಷಯಕಾಮಂ** = ನಾಶದ ಇಚ್ಛೆಯುಳ್ಳ, **ಇಮಂ** = ಈ, **ನೃಪಂ** = ರಾಜನನ್ನು ಕುರಿತು, **ಅನುಜಾನೀಹಿ** = ಒಪ್ಪಿಗೆ ನೀಡು, **ಅಸ್ಯ** = ಇವನಿಗೆ, **ಧರ್ಮವಿಘ್ನಕರಃ** = ಧರ್ಮಕ್ಕೆ ವಿಘ್ನ ಮಾಡುವವನು, **ನೈವ ಭವ** = ಆಗಲೇ ಬೇಡ.

**ತಾತ್ಪರ್ಯ** :- ತಪ್ಪಿನಿಂದ ಎಲ್ಲಾ ಪಾಪಪರಿಹರಿಸಿಕೊಳ್ಳಲು ಇಚ್ಛಿಸುತ್ತಿರುವ ಧೃತರಾಷ್ಟ್ರನಿಗೆ ನೀನು ಒಪ್ಪಿಗೆ ನೀಡು. ಅವನ ಧರ್ಮ ಸಾಧನೆಗೆ ನೀನು ಅಡ್ಡಿ ಮಾಡಬೇಡ.

**ಕಾಲೇ ನಿರ್ವೇದಮಾಪನ್ನಸ್ತಪಸಾ ದಗ್ಧಕಿಲ್ಬಿಷಃ ।**
**ಶುಭಾಂ ಗತಿಮಯಂ ಯಾಯಾದನ್ಯಥಾ ನ ಕಥಂಚನ ॥ ೨೮ ॥**

**ಅರ್ಥ** :- **ಕಾಲೇ** = ಯೋಗ್ಯ ಕಾಲದಲ್ಲಿ, **ನಿರ್ವೇದಂ** = ವೈರಾಗ್ಯವನ್ನು, **ಆಪನ್ನಃ** = ಹೊಂದಿದವನಾಗಿ, **ತಪಸಾ** = ತಪಸ್ಸಿನಿಂದ, **ದಗ್ಧಕಿಲ್ಬಿಷಃ** = ಸುಡಲ್ಪಟ್ಟ ಪಾಪವುಳ್ಳವನಾಗಿ, **ಅಯಂ** = ಈ ಧೃತರಾಷ್ಟ್ರನು, **ಶುಭಾಂ ಗತಿಂ** = ಸದ್ಗತಿಯನ್ನು, **ಯಾಯಾತ್** = ಹೊಂದಿಯಾನು, **ಅನ್ಯಥಾ** = ಇಲ್ಲದಿದ್ದರೆ, **ಕಥಂಚನ** = ಸರ್ವಥಾ, **ನೈವ ಯಾಯಾತ್** = ಹೊಂದಲಾರ.

**ತಾತ್ಪರ್ಯ** :- ಯೋಗ್ಯ ಸಮಯದಲ್ಲಿ ವೈರಾಗ್ಯ ಹೊಂದಿ ತಪಸ್ಸಿನಿಂದ ಪಾಪಗಳನ್ನು ಸುಟ್ಟುಕೊಂಡರೆ ಮಾತ್ರ ಇವನು ಸದ್ಗತಿಯನ್ನು ಹೊಂದುತ್ತಾನೆ. ಇಲ್ಲದಿದ್ದರೆ ಸರ್ವಥಾ ಹೊಂದುವುದಿಲ್ಲ.

**ಇತ್ಯುಕ್ತೋ ಧರ್ಮರಾಜಸ್ತಮನುಜಜ್ಞೇ ಸ ಚಾಶಿತಃ ।**
**ಶಿಕ್ಷಯಾಮಾಸ ಸದ್ಧರ್ಮಾನ್ ನೀತಿಂ ಚ ವಿದುಷೇಽಪ್ಯಲಮ್ ॥ ೨೯ ॥**

**ಕೇವಲಸ್ನೇಹತೋ ರಾಜ್ಞೇ ಶುಶ್ರಾವ ವಿನಯಾಯ ಸಃ ।**
**ಅನುಜ್ಞಾಯ ಗೃಹಂ ಪ್ರಾಪ್ತೇ ಧರ್ಮಜೇ ವಿದುರಂ ಪುನಃ ॥ ೩೦ ॥**

**ಶ್ರಾದ್ಧಾಯ ವಿತ್ತಮಾಕಾಂಕ್ಷನ್ ಪ್ರೇಷಯಾಮಾಸ ತದ್ವಚಃ ।**
**ಶ್ರುತ್ವಾ ಯುಧಿಷ್ಠಿರೋ ಭೀಮಮಾಹ ದಾತವ್ಯಮದ್ಯ ನಃ ॥ ೩೧ ॥**

**ಪುತ್ರಪೌತ್ರಾಪ್ತಬಂಧೂನಾಂ ಶ್ರಾದ್ಧೇಚ್ಛೋರ್ವಿತ್ತಮಂಜಸಾ ।**
**ತಮಾಹ ಭೀಮಃ ಪಾಪಾನಾಂ ವಿಮುಖಾನಾಂ ಮಧುದ್ವಿಷಃ ।**
**ಪಾರಲೌಕಿಕಸಾಹಾಯ್ಯಂ ನ ಕಾರ್ಯಮಿತರಾರ್ಥತಃ ॥ ೩೨ ॥**

**ದತ್ತೇನಾಪಿ ಹಿ ವಿತ್ತೇನ ಪುತ್ರಶ್ರಾದ್ಧಂ ಕರಿಷ್ಯತಿ ।**
**ತಜ್ಜ್ಞಾತ್ವಾ ದದತಾಂ ದೋಷೋ ಭವೇದಿತಿ ವಿಚಿಂತಯನ್ ॥ ೩೩ ॥**

**ಅರ್ಥ** :- **ಇತಿ** = ಈ ರೀತಿಯಾಗಿ, **ಉಕ್ತಃ** = ಹೇಳಲ್ಪಟ್ಟ, **ಧರ್ಮರಾಜಃ** = ಧರ್ಮರಾಜನು, **ತಂ ಅನುಜಜ್ಞೇ** = ಧೃತರಾಷ್ಟ್ರನಿಗೆ ಒಪ್ಪಿಗೆ ನೀಡಿದ, **ಸ ಚ** = ಆ ಧೃತರಾಷ್ಟ್ರನೂ, **ಅಶಿತಃ** = ಊಟ ಮಾಡಿದನು, **ಚ** = ಮತ್ತೂ, **ವಿದುಷೇ** = ತಿಳಿದವನಾದ, **ರಾಜ್ಞೇ** = ದರ್ಮರಾಜನಿಗೆ, **ಕೇವಲ ಸ್ನೇಹತಃ** = ಕೇವಲ ಪ್ರೀತಿಯಿಂದ, **ಸದ್ಧರ್ಮಾನ್** = ಸದ್ಧರ್ಮಗಳನ್ನು, **ನೀತಿಂ ಚ** = ನೀತಿಯನ್ನೂ, **ಶಿಕ್ಷಯಾಮಾಸ** = ಉಪದೇಶಿಸಿದ, **ಸ ಚ** = ಆ ಧರ್ಮರಾಜನಾದರೂ, **ವಿನಯಾತ್** = ವಿನಯದಿಂದ, **ಶುಶ್ರಾವ** = ಕೇಳಿದನು, **ಚ** = ಮತ್ತು, **ಅನುಜ್ಞಾಯ** = ವನವಾಸಕ್ಕೆ ಒಪ್ಪಿಗೆ ಕೊಟ್ಟು, **ಧರ್ಮಜೇ** = ಯುಧಿಷ್ಠಿರನು, **ಗೃಹಂ** = ಮನೆಯನ್ನು, **ಪ್ರಾಪ್ತೇ** = ಹೊಂದುತ್ತಿರಲು, **ಶ್ರಾದ್ಧಾಯ** = ಮಕ್ಕಳ ಶ್ರಾದ್ಧಕ್ಕಾಗಿ, **ವಿತ್ತಂ** = ಹಣವನ್ನು, **ಆಕಾಂಕ್ಷನ್** = ಬಯಸಿದ ಧೃತರಾಷ್ಟ್ರನು, **ಪುನಃ** = ಮತ್ತೆ, **ವಿದುರಂ** = ವಿದುರನನ್ನು,

**ಪ್ರೇಷಯಾಮಾಸ** = ಕಳುಹಿಸಿದ, **ಯುಧಿಷ್ಠಿರಃ** = ಯುಧಿಷ್ಠಿರನು, **ತದ್ವಚಃ** = ಅವನ ಮಾತನ್ನು, **ಶ್ರುತ್ವಾ** = ಕೇಳಿ, **ಪುತ್ರ ಪೌತ್ರಾಪ್ತಬಂಧೂನಾಂ** = ಮಕ್ಕಳಿಗೆ ಮೊಮ್ಮಕ್ಕಳಿಗೆ ಆಪ್ತರಿಗೆ ಬಂಧುಗಳಿಗೆ, **ನಃ** = ನಮ್ಮಿಂದ, **ಅದ್ಯ** = ಈಗ, **ವಿತ್ತಂ** = ಹಣವು, **ದಾತವ್ಯಂ** = ಕೊಡಲ್ಪಡಬೇಕು, **ಇತಿ** = ಎಂಬುದಾಗಿ, **ಭೀಮಂ** = ಭೀಮನನ್ನು ಕುರಿತು, **ಆಹ** = ಹೇಳಿದನು, **ಭೀಮಃ** = ಭೀಮನು, **ಮಧುದ್ವಿಷಃ** = ಶ್ರೀಕೃಷ್ಣನ, **ವಿಮುಖಾನಾಂ** = ದ್ವೇಷಿಗಳಾದ, **ಪಾಪಾನಾಂ** = ಪಾಪಿಷ್ಠರಾದ ದುರ್ಯೋಧನಾದಿಗಳಿಗೆ, **ಪಾರಲೌಕಿಕ ಸಾಹಾಯ್ಯಂ** = ಪರಲೋಕದ ಸಹಾಯವು, **ನ ಕಾರ್ಯಂ** = ಮಾಡಲ್ಪಡ ಬಾರದು, **ಇತರಾರ್ಥತಃ** = ಭೀಷ್ಮಾದಿ ಬೇರೆ ಬಂಧುಗಳಿಗಾಗಿ, **ದತ್ತೇನ** = ಕೊಡಲ್ಪಟ್ಟ, **ವಿತ್ತೇನಾಪಿ** = ಹಣದಿಂದಲೂ ಕೂಡ, **ಪುತ್ರ ಶ್ರಾದ್ಧಂ** = ಮಕ್ಕಳಿಗೆ ಶ್ರಾದ್ಧವನ್ನು, **ಕರಿಷ್ಯತಿ** = ಮಾಡುತ್ತಾನೆ, **ಹಿ** = ನಿಶ್ಚಯವಾಗಿ, **ತತ್** = ಅದನ್ನು, **ಜ್ಞಾತ್ವಾ** = ತಿಳಿದು, **ದದತಾಂ** = ಕೊಡುವವರಿಗೆ, **ದೋಷಃ ಭವೇತ್** = ಪಾಪ ಉಂಟಾದೀತು, **ಇತಿ** = ಎಂದು, **ವಿಚಿಂತಯನ್** = ಆಲೋಚಿಸುತ್ತಾ, **ತಂ** = ಆ ಧರ್ಮರಾಜನನ್ನು, ಕುರಿತು, **ಆಹ** = ಹೇಳಿದನು.

**ತಾತ್ಪರ್ಯ** :- ವೇದವ್ಯಾಸರು ಹೀಗೆ ಹೇಳಿದಾಗ ಧರ್ಮರಾಜ ಧೃತರಾಷ್ಟ್ರನಿಗೆ ಒಪ್ಪಿಗೆ ನೀಡಿದ. ಧೃತರಾಷ್ಟ್ರನೂ ಭೋಜನ ಮಾಡಿದ. ಧರ್ಮರಾಜ ತಿಳಿದವನೇ ಆಗಿದ್ದರೂ ಕೇವಲ ಪ್ರೀತಿಯಿಂದ ಧೃತರಾಷ್ಟ್ರ ಅವನಿಗೆ ಸದ್ಧರ್ಮಗಳನ್ನೂ ನೀತಿಯನ್ನೂ ಉಪದೇಶಿಸಿದ ಆ ಯುಧಿಷ್ಠಿರನು ವಿನಯದಿಂದ ಆ ಉಪದೇಶವನ್ನು ಕೇಳಿದ. ಆನಂತರ ವನವಾಸಕ್ಕೆ ಒಪ್ಪಿಗೆಯಿತ್ತು ಯುಧಿಷ್ಠಿರ ತನ್ನ ಅರಮನೆಗೆ ತೆರಳಿದ. ತೆರಳಿದಾಗ ಧೃತರಾಷ್ಟ್ರ ಮಕ್ಕಳಿಗೆ ಶ್ರಾದ್ಧ ಮಾಡುವುದಕ್ಕಾಗಿ ಹಣವನ್ನು ಬಯಸಿ ವಿದುರನನ್ನು ಕಳುಹಿಸಿಕೊಟ್ಟ. ಯುಧಿಷ್ಠಿರ ಅವನ ಮಾತನ್ನು ಕೇಳಿ ಭೀಮನಿಗೆ ಹೇಳಿದ. ಮಕ್ಕಳು ಮೊಮ್ಮಕ್ಕಳಿಗೂ ಆಪ್ತರಿಗೂ ಬಂಧುಗಳಿಗೂ ಶ್ರಾದ್ಧ ಮಾಡಲು ಬಯಸುವ ಧೃತರಾಷ್ಟ್ರನಿಗೆ ನಾವು ಹಣವನ್ನು ಕೊಡಬೇಕು ಎಂದು. ಭೀಮ ಆಲೋಚಿಸಿದ. ''ಕೃಷ್ಣನ ದ್ವೇಷಿಗಳೂ ಪಾಪಿಷ್ಠರೂ ಆದ ಕೌರವರಿಗೆ ಪಾರಲೌಕಿಕ ಸಹಾಯವನ್ನು ಮಾಡಬಾರದು. ಭೀಷ್ಮ ಮೊದಲಾದ ಬೇರೆ ಬಂಧುಗಳಿಗಾಗಿ ಧೃತರಾಷ್ಟ್ರನಿಗೆ ಹಣ ಕೊಟ್ಟರೂ ಅದರಿಂದ ಅವನು ತನ್ನ

ಮಕ್ಕಳಿಗೆ ಶ್ರಾದ್ಧ ಮಾಡುತ್ತಾನೆ ಎಂದು ಅದನ್ನು ನಾವು ತಿಳಿದೂ ಹಣ ಕೊಟ್ಟರೆ ನಮಗೆ ಪಾಪ ಬರುತ್ತದೆ'' ಎಂದು ಆಲೋಚಿಸಿ ಭೀಮ ಹೇಳಿದ.

**ಕಷ್ಟಾತ್ ಕಷ್ಟತರಂ ಯಾಂತು ಸರ್ವೇ ದುರ್ಯೋಧನಾದಯಃ ।**
**ಭೀಷ್ಮಾದೀನಾಂ ವಯಂ ಶ್ರಾದ್ಧಕರ್ತಾರಸ್ತೇನ ಕಿಂ ತತಃ ॥ ೩೪ ॥**

**ಅರ್ಥ** :- **ದುರ್ಯೋಧನಾದಯಃ ಸರ್ವೇ** = ದುರ್ಯೋಧನ ಮೊದಲಾದವರೆಲ್ಲರೂ, **ಕಷ್ಟಾತ್ ಕಷ್ಟತರಂ** = ಕಷ್ಟಕ್ಕಿಂತ ಅಧಿಕ ಕಷ್ಟಕರವಾದ ಲೋಕವನ್ನು, **ಯಾಂತು** = ಹೊಂದಲಿ, **ಭೀಷ್ಮಾದೀನಾಂ** = ಭೀಷ್ಮಾದಿಗಳಿಗೆ, **ಶ್ರಾದ್ಧಕರ್ತಾರಃ** = ಶ್ರಾದ್ಧ ಮಾಡುವವರು, **ವಯಂ** = ನಾವು, **ತೇನ** = ಅವನಿಂದ, **ತತಃ** = ಶ್ರಾದ್ಧ ಮಾಡುವುದರಿಂದ, **ಕಿಂ** = ಏನು ಪ್ರಯೋಜನ?

**ತಾತ್ಪರ್ಯ** :- ದುರ್ಯೋಧನ ಮೊದಲಾದವರೆಲ್ಲರೂ ಕಷ್ಟಕ್ಕಿಂತ ಅಧಿಕ ಕಷ್ಟತರವಾದ ಲೋಕವನ್ನು ಹೊಂದಲಿ. ಭೀಷ್ಮ ಮೊದಲಾದವರಿಗೆ ನಾವು ಶ್ರಾದ್ಧ ಮಾಡುವೆವು. ಶ್ರಾದ್ಧಕ್ಕಾಗಿ ನಾವು ಹಣ ಕೊಡುವುದರಿಂದ ಏನು ಪ್ರಯೋಜನ?

**ಕಾನೀನತ್ವಾತ್ತು ಕರ್ಣಸ್ಯ ಸಹಾಸ್ಮಾಭಿಃ ಪೃಥೈವ ಹಿ ।**
**ಶ್ರಾದ್ಧಕರ್ಮಣ್ಯಧಿಕೃತಾ ಕಿಂ ತಸ್ಮೈ ದೀಯತೇ ಧನಮ್ ॥ ೩೫ ॥**

**ಅರ್ಥ** :- **ಕಾನೀನತ್ವಾತ್** = ಕನ್ಯಾಪುತ್ರನಾದ್ದರಿಂದ, **ಕರ್ಣಸ್ಯ** = ಕರ್ಣನಿಗೆ, **ಅಸ್ಮಾಭಿಃ ಸಹ** = ನಮ್ಮ ಜೊತೆಗೆ, **ಪೃಥಾ ಏವ** = ಕುಂತಿಯೇ, **ಶ್ರಾದ್ಧಕರ್ಮಣಿ** = ಶ್ರಾದ್ಧ ಕರ್ಮದಲ್ಲಿ, **ಅಧಿಕೃತಾ** = ಅಧಿಕಾರ ಹೊಂದಿದ್ದಾಳೆ, **ತಸ್ಮೈ** = ಆ ಧೃತರಾಷ್ಟ್ರನಿಗೆ, **ಕಿಂ** = ಏತಕ್ಕಾಗಿ, **ಧನಂ** = ಹಣವು, **ದೀಯತೇ** = ಕೊಡಲ್ಪಡುತ್ತದೆ?

**ತಾತ್ಪರ್ಯ** :- ಕುಂತಿಯು ಕನ್ಯಾವಸ್ಥೆಯಲ್ಲಿದ್ದಾಗ ಕರ್ಣನು ಹುಟ್ಟಿದ್ದರಿಂದ ನಮ್ಮೊಂದಿಗೆ ಕರ್ಣನಿಗೆ ಶ್ರಾದ್ಧ ಮಾಡುವ ವಿಷಯದಲ್ಲಿ ಕುಂತಿಯು ಅಧಿಕಾರವನ್ನು ಹೊಂದಿದ್ದಾಳೆ. ಅಂದ ಮೇಲೆ ಕರ್ಣನಿಗೆ ಶ್ರಾದ್ಧ ಮಾಡಲು ಧೃತರಾಷ್ಟ್ರನಿಗೆ ಏಕೆ ಹಣ ಕೊಡಬೇಕು?

ಇತ್ಯುಕ್ತವಂತಂ ನೃಪತಿರರ್ಜುನಶ್ಚೋಚತುಃ ಪುನಃ ।
ಯಿಯಾಸೋರ್ಯಾಚಮಾನಾಯ ನಿಜಬಾಹುಬಲಾರ್ಜಿತಮ್ ॥ ೩೬ ॥

ದೇಹಿ ವಿತ್ತಂ ಪರಮತಃ ಕಿಂ ತ್ವಾಮೇಷೋಽಭಿಯಾಚತೇ ।
ಇತ್ಯುಕ್ತಮಪಿ ನೇತ್ಯೇವ ಬ್ರುವಾಣಂ ಶುದ್ಧಧಾರ್ಮಿಕಮ್ ॥ ೩೭ ॥

ಅಪ್ರೀತ್ಯಾ ಜೋಷಮಾಸ್ಸ್ವೇತಿ ಪ್ರೋಚ್ಯೋವಾಚ ಯುಧಿಷ್ಠಿರಃ ।
ಕೋಶತೋ ಯದ್ ಬಹಿರ್ವಿತ್ತಂ ದಾನಭೋಗಾದಿಕಾರಣಮ್ ॥ ೩೮ ॥

ಮಮ ಸನ್ನಿಹಿತಂ ಸರ್ವಂ ತತ್ ಪಿತ್ರೇಽದ್ಯಾರ್ಪಿತಂ ಮಯಾ ।
ಏವಮೇವಾರ್ಜುನೋಽಪ್ಯಾಹ ವಿದುರಂ ಪುನರೂಚತುಃ ॥ ೩೯ ॥

ಮುಖ್ಯಧರ್ಮರತೇ ಭೀಮೇ ನ ಪಿತಾ ಕ್ರೋದ್ಧುಮರ್ಹತಿ ॥ ೪೦ ॥

**ಅರ್ಥ** :- **ಇತಿ** = ಈ ರೀತಿಯಾಗಿ, **ಉಕ್ತವಂತಂ** = ಹೇಳುತ್ತಿರುವ ಭೀಮನನ್ನು ಕುರಿತು, **ನೃಪತಿಃ** = ಧರ್ಮರಾಜನು, **ಅರ್ಜುನಶ್ಚ** = ಅರ್ಜುನನೂ, **ಪುನಃ** = ಮತ್ತೆ, **ಊಚತುಃ** = ಹೇಳಿದರು, **ಯಿಯಾಸೋಃ** = ಕಾಡಿಗೆ ಹೋಗಲು ಇಚ್ಛಿಸಿದ, **ಯಾಚಮಾನಸ್ಯ** = ಬೇಡುತ್ತಿರುವ ಧೃತರಾಷ್ಟ್ರನಿಗೆ, **ನಿಜಬಾಹುಬಲಾರ್ಜಿತಂ** = ಅವನ ಬಾಹುಬಲದಿಂದ ಸಂಪಾದಿಸಲ್ಪಟ್ಟ, **ವಿತ್ತಂ** = ಹಣವನ್ನು, **ದೇಹಿ** = ಕೊಡು, **ಅತಃ ಪರಂ** = ಇನ್ನು ಮುಂದೆ, **ತ್ವಾಂ** = ನಿನ್ನನ್ನು, **ಅಭಿಯಾಚತೇ ಕಿಂ** = ಬೇಡುತ್ತಾನೇನು ?, **ಇತಿ** = ಈ ರೀತಿಯಾಗಿ, **ಉಕ್ತಂ ಅಪಿ** = ಹೇಳಲ್ಪಟ್ಟರೂ ಕೂಡ, **ನ ಇತ್ಯೇವ** = ಕೊಡುವುದಿಲ್ಲ ಎಂದೇ, **ಬ್ರುವಾಣಂ** = ಹೇಳುತ್ತಿದ್ದ, **ಶುದ್ಧಧಾರ್ಮಿಕಂ** = ಶುದ್ಧ ಧಾರ್ಮಿಕನಾದ ಭೀಮನನ್ನು ಕುರಿತು, **ಜೋಷಮಾಸ್ಸ್ವ** = ಸುಮ್ಮನಿರು, **ಇತಿ** = ಎಂದು, **ಪ್ರೋಚ್ಯ** = ಹೇಳಿ, **ಯುಧಿಷ್ಠಿರಃ** = ಯುಧಿಷ್ಠಿರನು, **ಯತ್** = ಯಾವುದು, **ಕೋಶತಃ** = ಕೋಶದಿಂದ, **ಬಹಿಃ** = ಬೇರೆಯಾಗಿ ಇದೆಯೋ ಅಂತಹ, **ಮಮ** = ನನ್ನ, **ದಾನಭೋಗಾದಿಕಾರಣಂ** = ದಾನಭೋಗಾದಿಗಳಿಗೆ ಉಪಯುಕ್ತವಾದ, **ಸನ್ನಿಹಿತಂ** = ಇರುವ, **ಸರ್ವಂ** = ಎಲ್ಲಾ, **ವಿತ್ತಂ** = ಹಣವು, **ಮಯಾ** = ನನ್ನಿಂದ, **ಪಿತ್ರೇ** = ತಂದೆಯಾದ ಧೃತರಾಷ್ಟ್ರನಿಗೆ, **ಅರ್ಪಿತಂ** = ಅರ್ಪಿಸಲ್ಪಡುತ್ತದೆ, **ಇತಿ** = ಎಂದು, **ಪ್ರೋವಾಚ** = ಹೇಳಿದನು, **ಅರ್ಜುನೋಽಪಿ** = ಅರ್ಜುನನೂ ಕೂಡ, **ಏವಮೇವ** = ಇದೇ ರೀತಿಯಾಗಿ,

**ಆಹ** = ಹೇಳಿದನು, **ಪುನಃ** = ಮತ್ತೆ, **ವಿದುರಂ** = ವಿದುರನನ್ನು ಕುರಿತು, **ಊಚತುಃ** = ಹೇಳಿದರು, **ಮುಖ್ಯಧರ್ಮರತೇ** = ಮುಖ್ಯ ಧರ್ಮರತನಾದ, **ಭೀಮೇ** = ಭೀಮನಲ್ಲಿ, **ಪಿತಾ** = ತಂದೆಯಾದ ಧೃತರಾಷ್ಟ್ರನು, **ಕ್ರೋದ್ಧುಂ ನ ಅರ್ಹತಿ** = ಕೋಪಗೊಳ್ಳಬಾರದು.

**ತಾತ್ಪರ್ಯ** :- ಭೀಮ ಈ ರೀತಿಯಾಗಿ ಹೇಳಿದಾಗ ಧರ್ಮರಾಜ ಮತ್ತು ಅರ್ಜುನನೂ ಪುನಃ ಹೇಳಿದರು. 'ಧೃತರಾಷ್ಟ್ರ, ವನವಾಸಕ್ಕೆ ಹೋಗಲು ಬಯಸಿ ಶ್ರಾದ್ಧಕ್ಕೆ ಹಣವನ್ನು ಕೇಳುತ್ತಿರುವಾಗ ಧೃತರಾಷ್ಟ್ರ ತನ್ನ ಬಾಹುಬಲದಿಂದ ತಾನೇ ಸಂಪಾದಿಸಿದ ಹಣವನ್ನು ಅವನಿಗೆ ಕೊಡು. ಇನ್ನು ಮುಂದೆ ಅವನು ನಿನ್ನನ್ನು ಕೇಳುತ್ತಾನೆಯೇ ? ಹೀಗೆ ಹೇಳಿದರೂ ಶುದ್ಧ ಧರ್ಮದಲ್ಲಿ ನಿರತನಾದ ಭೀಮ 'ಕೊಡಲಾರೆ' ಎಂದು ಹೇಳಿದಾಗ ಧರ್ಮರಾಜ ಅಸಮಾಧಾನದಿಂದ 'ಹಾಗಾದರೆ ಸುಮ್ಮನಿರು' ಎಂದು ಹೇಳಿದ. ಕೋಶಕ್ಕೆ ಸೇರದೆ ಹೊರಗಿರುವ, ನನ್ನ ದಾನ ಭೋಗಾದಿಗಳಿಗೆ ಉಪಯುಕ್ತವಾದ ನನ್ನ ಹಣವನ್ನು ನಾನು ಧೃತರಾಷ್ಟ್ರನಿಗೆ ಕೊಡುತ್ತೇನೆ' ಎಂದು. ಇದೇ ರೀತಿ ಅರ್ಜುನನೂ ಹೇಳಿದ. ಅನಂತರ ಇವರಿಬ್ಬರು ವಿದುರನಿಗೆ ಹೇಳಿದರು. ಮುಖ್ಯ ಧರ್ಮದಲ್ಲಿ ನಿರತನಾದ ಭೀಮನ ಮೇಲೆ ತಂದೆ ಕೋಪಗೊಳ್ಳಬಾರದು ಎಂದು.

**ಇತ್ಯುಕ್ತೋ ವಿತ್ತಮಾದಾಯ ಗತ್ವಾ ಕ್ಷತ್ತಾಽಗ್ರಜೇಽಬ್ರವೀತ್ ।**
**ಯುಧಿಷ್ಠಿರಾರ್ಜುನೌ ಭಕ್ತಿಂ ನಿತರಾಂ ತ್ವಯಿ ಚಕ್ರತುಃ ।। ೪೧ ।।**

**ಅರ್ಥ** :- **ಇತಿ** = ಈ ರೀತಿಯಾಗಿ, **ಉಕ್ತಃ** = ಹೇಳಲ್ಪಟ್ಟ, **ಕ್ಷತ್ತಾ** = ವಿದುರನು, **ವಿತ್ತಂ** = ಹಣವನ್ನು, **ಆದಾಯ** = ತೆಗೆದುಕೊಂಡು, **ಗತ್ವಾ** = ಹೋಗಿ, **ಅಗ್ರಜೇ** = ಅಣ್ಣನಾದ ಧೃತರಾಷ್ಟ್ರನಿಗೆ, ''**ಯುಧಿಷ್ಠಿರಾರ್ಜುನೌ** = ಧರ್ಮರಾಜ ಅರ್ಜುನರು, **ತ್ವಯಿ** = ನಿನ್ನಲ್ಲಿ, **ನಿತರಾಂ** = ಬಹಳವಾದ, **ಭಕ್ತಿಂ** = ಭಕ್ತಿಯನ್ನು, **ಚಕ್ರತುಃ** = ಮಾಡಿದರು'' **ಇತಿ** = ಎಂದು, **ಅಬ್ರವೀತ್** = ಹೇಳಿದನು.

**ತಾತ್ಪರ್ಯ** :- ಧರ್ಮರಾಜ ಅರ್ಜುನರು ಹೀಗೆ ಹೇಳಿದಾಗ ವಿದುರ ಹಣವನ್ನು ತೆಗೆದುಕೊಂಡು ಹೋಗಿ ಧೃತರಾಷ್ಟ್ರನ ಬಳಿಯಲ್ಲಿ ಹೇಳಿದ. 'ಯುಧಿಷ್ಠಿರ ಅರ್ಜುನರು ನಿನ್ನಲ್ಲಿ ಬಹಳ ಭಕ್ತಿ ತೋರಿದರು.'

**ನಾತಿಹೃಷ್ಟಸ್ತ್ವದಾಜ್ಞಾಯಾಂ ಭೀಮಸ್ತನ್ಮಾ ಕ್ರುಧೋಽತ್ರ ಚ ।**
**ಶುದ್ಧೇ ಕ್ಷತ್ರಿಯಧರ್ಮೇ ಹಿ ನಿರತೋಽಯಂ ವೃಕೋದರಃ ॥ ೪೨ ॥**

**ಅರ್ಥ** :- **ಭೀಮಃ** = ಭೀಮನು, **ತ್ವದಾಜ್ಞಾಯಾಂ** = ನಿನ್ನಾಜ್ಞೆ ಪಾಲಿಸುವ ವಿಷಯದಲ್ಲಿ, **ನ ಅತಿಹೃಷ್ಟಃ** = ಅತಿ ಸಂತುಷ್ಟನಾಗಿರಲಿಲ್ಲ. **ಯತ್** = ಯಾಕೆಂದರೆ, **ವೃಕೋದರಃ** = ಭೀಮನು, **ಶುದ್ಧೇ** = ಶುದ್ಧವಾದ, **ಕ್ಷತ್ರಿಯಧರ್ಮೇ** = ಕ್ಷತ್ರಿಯಧರ್ಮದಲ್ಲಿ, **ನಿರತಃ** = ನಿರತನಾಗಿದ್ದಾನೆ. **ತತ್** = ಆದ್ದರಿಂದ, **ಅತ್ರ** = ಭೀಮನ ವಿಷಯದಲ್ಲಿ, **ಮಾ ಕ್ರುಧಃ** = ಕೋಪಗೊಳ್ಳಬೇಡ.

**ತಾತ್ಪರ್ಯ** :- ನಿನ್ನಾಜ್ಞೆ ಪಾಲಿಸುವುದರಲ್ಲಿ ಭೀಮ ಹೆಚ್ಚು ಉತ್ಸಾಹ ತೋರಲಿಲ್ಲ. ಅವನು ಶುದ್ಧ ಕ್ಷತ್ರಿಯ ಧರ್ಮದಲ್ಲಿ ನಿರತನಾಗಿದ್ದಾನೆ. ಆದ್ದರಿಂದ ಅವನಲ್ಲಿ ಕೋಪ ಮಾಡಬೇಡ,

**ನೃಪಾರ್ಜುನೌ ಧರ್ಮರತಾವಪಿ ಲೋಕಕೃಪಾಪರೌ ।**
**ಅಜಾತಕೋಪಸ್ತಚ್ಛ್ರುತ್ವಾ ಧೃತರಾಷ್ಟ್ರಃ ಪ್ರಶಾಂತಧೀಃ ॥ ೪೩ ॥**

**ಅರ್ಥ** :- **ನೃಪಾರ್ಜುನೌ** = ಧರ್ಮರಾಜ ಅರ್ಜುನರು, **ಧರ್ಮರತೌ ಅಪಿ** = ಕ್ಷತ್ರಿಯ ಧರ್ಮದಲ್ಲಿ ನಿರತರಾದರೂ ಕೂಡ, **ಲೋಕಕೃಪಾಪರೌ** = ಲೋಕದಲ್ಲಿ ಕೃಪಾ ಮಾಡುವವರು ಎಂದು, **ತತ್** = ಆ ವಿಷಯವನ್ನು, **ಶ್ರುತ್ವಾ** = ಕೇಳಿ, **ಪ್ರಶಾಂತಧೀಃ** = ಶಾಂತವಾದ ಬುದ್ಧಿಯುಳ್ಳ, **ಧೃತರಾಷ್ಟ್ರಃ** = ಧೃತರಾಷ್ಟ್ರನು, **ಅಜಾತಕೋಪಃ (ಅಭವತ್)** = ಕೋಪರಹಿತನಾದನು.

**ತಾತ್ಪರ್ಯ** :- ಯುಧಿಷ್ಠಿರ ಅರ್ಜುನರು ಕ್ಷತ್ರಿಯ ಧರ್ಮದಲ್ಲಿ ನಿರತರಾಗಿದ್ದರೂ ಕೂಡ.ಅವರು ಲೋಕದ ಮೇಲೆ ಕೃಪೆ ಮಾಡುವವರು ಎಂದು ವಿದುರ ಹೀಗೆ ಹೇಳಿದ್ದನ್ನು ಕೇಳಿ ಧೃತರಾಷ್ಟ್ರ ಶಾಂತ ಬುದ್ಧಿಯವನಾದ. ಅವನಿಗೆ ಭೀಮನ ಬಗ್ಗೆ ಕೋಪ ಉಂಟಾಗಲಿಲ್ಲ.

**ಕೃತ್ವಾ ಶ್ರಾದ್ಧಾನಿ ಸರ್ವೇಷಾಂ ಮಹಾದಾನಾನ್ಯನಾರತಮ್ ।**
**ದಶರಾತ್ರಂ ದದೌ ಶುದ್ಧಮನಸಾ ನಿರ್ಘುಣತ್ವಧೀಃ ॥ ೪೪ ॥**

**ಅರ್ಥ** :- **ನಿರ್ಋಣತ್ವಧೀಃ** = ಋಣರಹಿತತೆಯ ಬುದ್ಧಿಯುಳ್ಳ ಧೃತರಾಷ್ಟ್ರನು, **ಶುದ್ಧಮನಸಾ** = ಶುದ್ಧವಾದ ಮನಸ್ಸಿನಿಂದ, **ಸರ್ವೇಷಾಂ** = ಎಲ್ಲರಿಗೂ, **ಶ್ರಾದ್ಧಾನಿ ಕೃತ್ವಾ** = ಶ್ರಾದ್ಧ ಮಾಡಿ, **ದಶರಾತ್ರಂ** = ಹತ್ತುದಿನಗಳ ಕಾಲ, **ಅನಾರತಂ** = ನಿರಂತರವಾಗಿ, **ಮಹಾದಾನಾನಿ** = ಮಹಾದಾನಗಳನ್ನು, **ದದೌ** = ಕೊಟ್ಟನು.

**ತಾತ್ಪರ್ಯ** :- ಮಕ್ಕಳ ಋಣ ಪರಿಹಾರವಾಗಲಿ ಎಂಬ ಇಚ್ಛೆಯುಳ್ಳ ಧೃತರಾಷ್ಟ್ರ ಶುದ್ಧ ಮನಸ್ಸಿನಿಂದ ಎಲ್ಲರಿಗೂ ಶ್ರಾದ್ಧ ಮಾಡಿ ಹತ್ತು ದಿನಗಳ ಕಾಲ ನಿರಂತರ ಮಹಾದಾನಗಳನ್ನು ಕೊಟ್ಟನು.

**ಸರ್ವಂ ಸಮರ್ಪ್ಯ ಗೋವಿಂದೇ ಪಾರ್ಥೇಭ್ಯೋಽನ್ಯೇಭ್ಯ ಏವ ಚ ।**
**ಸ್ವಜನೇಭ್ಯಃ ಸಮಾದಾಯ ಸ್ರವನ್ನೇತ್ರೇಭ್ಯ ಉಚ್ಚಧೀಃ ॥ ೪೫ ॥**

**ಅನುಜ್ಞಾಂ ನಿರ್ಗತಃ ಪ್ರಾಹ ಪೌರಜಾನಪದಾನ್ ನೃಪಃ ।**
**ಧರ್ಮತೋ ರಕ್ಷಿತಾ ಯೂಯಮಸ್ಮತ್ಪೂರ್ವೈರ್ಮಹಾತ್ಮಭಿಃ ॥ ೪೬ ॥**

**ನಚಾಹಂ ಪರಮಸ್ನೇಹಾದ್ ಯುಷ್ಮಾಭಿಃ ಸುಕೃಪಾಲುಭಿಃ ।**
**ಅರಕ್ಷಿತೇತಿ ಕಥಿತಃ ಪ್ರಮಾದಾದಪಿ ಸಜ್ಜನಾಃ ॥ ೪೭ ॥**

**ಅರ್ಥ** : **ಉಚ್ಚಧೀಃ ನೃಪಃ** = ಉತ್ತಮ ಬುದ್ಧಿಯುಳ್ಳ ಧೃತರಾಷ್ಟ್ರನು, **ಸರ್ವಂ** = ಎಲ್ಲವನ್ನೂ, **ಗೋವಿಂದೇ** = ಶ್ರೀಹರಿಯಲ್ಲಿ, **ಸಮರ್ಪ್ಯ** = ಸಮರ್ಪಿಸಿ, **ಸ್ರವನ್ನೇತ್ರೇಭ್ಯಃ** = ನೀರು ಸುರಿಸುವ ಕಣ್ಣುಗಳುಳ್ಳ, **ಪಾರ್ಥೇಭ್ಯಃ** = ಪಾಂಡವರಿಂದ, **ಅನ್ಯೇಭ್ಯಃ ಸ್ವಜನೇಭ್ಯಃ ಚ** = ಬೇರೆ ಬಂಧುಗಳಿಂದಲೂ, **ಅನುಜ್ಞಾಂ** = ಷಪ್ಪಣೆಯನ್ನು, **ಸಮಾದಾಯ** = ಪಡೆದು, **ನಿರ್ಗತಃ** = ಕಾಡಿಗೆ ಹೊರಟವನಾಗಿ, **ಪೌರಜಾನಪದಾನ್** = ಪೌರರನ್ನು ಮತ್ತು ಗ್ರಾಮೀಣರನ್ನು ಕುರಿತು, **ಪ್ರಾಹ** = ಹೇಳಿದನು, '**ಯೂಯಂ** = ನೀವು, **ಮಹಾತ್ಮಭಿಃ** = ಮಹಾತ್ಮರಾದ, **ಅಸ್ಮತ್ಪೂರ್ವೈಃ** = ನಮ್ಮ ಪೂರ್ವಿಕರಿಂದ, **ಧರ್ಮತಃ** = ಧರ್ಮದಿಂದ, **ರಕ್ಷಿತಾಃ** = ರಕ್ಷಿಸಲ್ಪಟ್ಟಿದ್ದೀರಿ.

**ಪರಮಸ್ನೇಹಾತ್** = ಪರಮ ಸ್ನೇಹವಿದ್ದ ಕಾರಣ, **ಸುಕೃಪಾಲುಭಿಃ** = ಬಹಳ ಕೃಪಾಶೀಲರಾದ, **ಯುಷ್ಮಾಭಿಃ** = ನಿಮ್ಮಿಂದ, **ಅಹಂ** = ನಾನು,

**ಅರಕ್ಷಿತಾ ಇತಿ** = ರಕ್ಷಕನಲ್ಲವೆಂದು, **ಪ್ರಮಾದಾದಪಿ** = ತಪ್ಪಿಯೂ ಕೂಡ, **ನ ಕಥಿತಃ** = ಹೇಳಲ್ಪಡಲಿಲ್ಲ.

**ತಾತ್ಪರ್ಯ :-** ಉತ್ತಮ ಬುದ್ಧಿವಂತನಾದ ಧೃತರಾಷ್ಟ್ರ ಎಲ್ಲಾ ಕರ್ಮವನ್ನೂ ಪರಮಾತ್ಮನಿಗರ್ಪಿಸಿ, ಕಣ್ಣೀರು ಸುರಿಸುತ್ತಿದ್ದ ಪಾಂಡವರಿಂದಲೂ ಬೇರೆ ಬಂಧುಗಳಿಂದಲೂ ಅಪ್ಪಣೆ ಪಡೆದು ಕಾಡಿಗೆ ಹೊರಟು ಪೌರರಿಗೂ ಗ್ರಾಮಸ್ಥರಿಗೂ ಹೇಳಿದ. 'ಸಜ್ಜನರೇ! ಮಹಾತ್ಮರಾದ ನಮ್ಮ ಪೂರ್ವಿಕರು ನಿಮ್ಮನ್ನು ಧರ್ಮದಿಂದ ಕಾಪಾಡಿದರು. ಆದರೆ ನಾನು ಆ ರೀತಿ ಸಂರಕ್ಷಿಸಲಿಲ್ಲ. ಆದರೂ ಬಹಳ ಕೃಪಾಲುಗಳಾದ ನೀವು ನನ್ನಲ್ಲಿ ಇದ್ದ ಬಹಳ ಪ್ರೀತಿಯಿಂದ ತಪ್ಪಿಯೂ ಕೂಡ ನನ್ನನ್ನು ನಿಮ್ಮ ರಕ್ಷಕನಲ್ಲವೆಂದು ಹೇಳಲಿಲ್ಲ.

**ಇಷ್ಟಂ ಚ ಯಜ್ಞೈಃ ಪೂರ್ತೈಶ್ಚ ಚರಿತಂ ಯುಷ್ಮದಾಶ್ರಯಾತ್ ।**
**ಪುತ್ರಸ್ತು ಮಮ ಪಾಪಾತ್ಮಾ ಸರ್ವಕ್ಷತ್ರವಿನಾಶಕಃ ॥ ೪೮ ॥**

**ಸರ್ವಾತಿಶಂಕೀ ಮೂಢಶ್ಚ ವೃದ್ಧಾನಾಂ ಶಾಸನಾತಿಗಃ ।**
**ಸೌಭ್ರಾತ್ರಂ ಯೇನ ಸಂತ್ಯಜ್ಯ ಪಾಂಡವೇಷು ಮಹಾತ್ಮಸು ।**
**ಕೃತಂ ವಿರೂಪಂ ಸುಮಹತ್ ಕುರ್ಯಾದ್ ಯನ್ನಾಪರಃ ಕ್ವಚಿತ್ ॥ ೪೯ ॥**

**ಅರ್ಥ :- ಯುಷ್ಮದಾಶ್ರಯಾತ್** = ನಿಮ್ಮ ಆಶ್ರಯದಿಂದ, **ಯಜ್ಞೈಃ ಇಷ್ಟಂ** = ಯಜ್ಞ ಮಾಡಲ್ಪಟ್ಟಿತು, **ಪೂರ್ತೈಶ್ಚ ಚರಿತಂ** = ಬಾವಿಕೆರೆ ತೋಡಿಸಲ್ಪಟ್ಟಿತು. **ಮಮ** = ನನ್ನ, **ಪುತ್ರಸ್ತು** = ಮಗನಾದರೂ (ದುರ್ಯೋಧನನಾದರೂ), **ಪಾಪಾತ್ಮಾ** = ಪಾಪಿಷ್ಠನು, **ಸರ್ವಕ್ಷತ್ರ ವಿನಾಶಕಃ** = ಎಲ್ಲಾ ಕ್ಷತ್ರಿಯರ ನಾಶಕ್ಕೆ ಕಾರಣನಾದವನು, **ಸರ್ವಾತಿಶಂಕೀ** = ಎಲ್ಲರಲ್ಲಿಯೂ ಸಂದೇಹ ಪಡುವವನು, **ಮೂಢಃ** = ಮೂಢನು, **ವೃದ್ಧಾನಾಂ** = ಹಿರಿಯರ, **ಶಾಸನಾತಿಗಃ** = ಆಜ್ಞೆಯನ್ನು ಮೀರುವವನು, **ಯೇನ** = ಯಾವ ಆ ದುರ್ಯೋಧನನಿಂದ, **ಮಹಾತ್ಮಸು** = ಮಹಾತ್ಮರಾದ, **ಪಾಂಡವೇಷು** = ಪಾಂಡವರಲ್ಲಿ, **ಸೌಭ್ರಾತ್ರಂ** = ಸ್ನೇಹವನ್ನು, **ಸಂತ್ಯಜ್ಯ** = ಬಿಟ್ಟು, **ಅಪರಃ** = ಬೇರೆಯವರು, **ಕ್ವಚಿತ್** = ಯಾರ ವಿಷಯದಲ್ಲೂ, **ಯತ್** = ಯಾವ ದ್ವೇಷವನ್ನು, **ನ ಕುರ್ಯಾತ್** = ಮಾಡಲಾರರೋ, **ತತ್** = ಅಂತಹ, **ಸುಮಹತ್** = ಬಹಳವಾದ, **ವಿರೂಪಂ** = ದ್ವೇಷವು, **ಕೃತಂ** = ಮಾಡಲ್ಪಟ್ಟಿತು.

**ತಾತ್ಪರ್ಯ** :- ನಿಮ್ಮ ಆಶ್ರಯ ಪಡೆದು ನಾನು ಯಾಗಗಳನ್ನು ನಡೆಸಿದೆ. ಕೆರೆ ಬಾವಿಗಳನ್ನು ನಿರ್ಮಾಣ ಮಾಡಿಸಿದೆ. ನನ್ನ ಮಗನಾದ ದುರ್ಯೋಧನ ಮಾತ್ರ ಪಾಪಿಷ್ಠ. ಎಲ್ಲಾ ಕ್ಷತ್ರಿಯರ ನಾಶಕ್ಕೆ ಕಾರಣನಾದವ. ಎಲ್ಲರಲ್ಲಿಯೂ ಸಂದೇಹ ಪಡುವವ, ಮೂಢ, ಹಿರಿಯರ ಮಾತನ್ನು ಉಲ್ಲಂಘಿಸುವವ, ಅವನು ಮಹಾತ್ಮರಾದ ಪಾಂಡವರಲ್ಲಿ ಸ್ನೇಹ ಮಾಡದೆ ಬೇರೆಯವರಾರೂ ಇನ್ನೆಲ್ಲಿಯೂ ಮಾಡದ ಮಹಾದ್ವೇಷವನ್ನೇ ಮಾಡಿದ.

**ಅಪ್ರಿಯಾಣಿ ಚ ಕೃಷ್ಣಸ್ಯ ಸುಬಹೂನ್ಯಾಚರತ್ ಕುಧೀಃ ।**
**ಪ್ರಾಯಸ್ತೇನಾಪಿ ಮಂದೇನ ನ ಯುಷ್ಮಾಸ್ವಶಿವಂ ಕೃತಮ್ ॥ ೫೦ ॥**

**ಭ್ರಾತರೋಽಸ್ಯ ಚ ಸರ್ವೇಽಪಿ ತಚ್ಛೀಲಮನುವರ್ತಿನಃ ।**
**ಹತಾಶ್ಚ ಸ್ವೇನ ಪಾಪೇನ ಸಸುತಾಮಾತ್ಯಬಾಂಧವಾಃ ॥ ೫೧ ॥**

**ಅರ್ಥ** :- **ಕುಧೀಃ** = ದುರ್ಬುದ್ಧಿಯವನಾದ ದುರ್ಯೋಧನನು, **ಕೃಷ್ಣಸ್ಯ** = ಕೃಷ್ಣನಿಗೆ, **ಅಪ್ರಿಯಾಣಿ** = ಅಪ್ರಿಯವಾದ, **ಸುಬಹೂನಿ** = ಬಹಳ ಕಾರ್ಯಗಳನ್ನು, **ಆಚರತ್** = ಮಾಡಿದ್ದಾನೆ. **ಮಂದೇನ** = ಮೂರ್ಖನಾದ, **ತೇನ** = ಆ ದುರ್ಯೋಧನನಿಂದ, **ಯುಷ್ಮಾಸ್ವಪಿ** = ನಿಮ್ಮಲ್ಲಿಯೂ ಕೂಡ, **ಪ್ರಾಯಃ** = ಬಹಳ, **ಅಶಿವಂ ಕೃತಂ** = ಕೆಟ್ಟದ್ದು ಮಾಡಲ್ಪಟ್ಟಿದೆ, **ಅಸ್ಯ** = ಇವನ, **ಭ್ರಾತರಃ ಸರ್ವೇಽಪಿ** = ಸೋದರರೆಲ್ಲರೂ ಕೂಡ, **ತಚ್ಛೀಲಂ** = ಆ ದುರ್ಯೋಧನನ ಗುಣವನ್ನು, **ಅನುವರ್ತಿನಃ** = ಅನುಸರಿಸಿದವರು. **ಸ್ವೇನ ಪಾಪೇನ** = ಸ್ವಕೀಯವಾದ ಪಾಪದಿಂದ, **ಸಸುತಾಮಾತ್ಮಬಾಂಧವಾಃ** = ಮಕ್ಕಳು ಮಿತ್ರರು ಬಾಂಧವರಿಂದ ಕೂಡಿದವರಾಗಿ, **ಹತಾಃ** = ಹತರಾದರು.

**ತಾತ್ಪರ್ಯ** :- ದುರ್ಬುದ್ಧಿಯವನಾದ ನನ್ನ ಮಗ ಕೃಷ್ಣನಿಗೆ ಅಪ್ರಿಯ ವಾದ ಬಹಳ ಕೆಟ್ಟ ಕೆಲಸಗಳನ್ನು ಮಾಡಿದ. ಮೂರ್ಖನಾದ ಅವನು ನಿಮ್ಮಲ್ಲಿಯೂ ಬಹಳ ಕೆಟ್ಟದ್ದನ್ನು ಮಾಡಿದ್ದಾನೆ. ಅವನ ಸೋದರರೆಲ್ಲರೂ ಅವನ ಗುಣವನ್ನೇ ಅನುಸರಿಸಿದರು. ತಾವೇ ಮಾಡಿದ ಪಾಪದಿಂದ ಮಕ್ಕಳು ಮಿತ್ರರು ಬಾಂಧವರೊಂದಿಗೆ ಹತರಾದರು.

**ಸೋಹಂ ವಯೋಗತಶ್ಚೈವ ಪುತ್ರಾಧಿಭಿರಭಿಪ್ಲುತಃ ।**
**ತತ್ಸಂಬಂಧಕೃತಂ ಪಾಪಂ ಸ್ವಕೃತಂ ಚಾತ್ಯಪೇಶಲಮ್ ॥ ೫೨ ॥**

**ಪಾಂಡವೇಷು ಸಕೃಷ್ಣೇಷು ತಪಸಾ ಮಾರ್ಷ್ಟುಮುದ್ಯತಃ ॥ ೫೩ ॥**

**ಅರ್ಥ :- ಸೋಽಹಂ** = ನಾನು, **ವಯೋಗತಃ** = ವೃದ್ಧನಾಗಿದ್ದೇನೆ. **ಪುತ್ರಾಧಿಭಿಃ** = ಮಕ್ಕಳಿಂದ ಉಂಟಾದ ಮನೋವ್ಯಥೆಗಳಿಂದ, **ಅಭಿಪ್ಲುತಃ** = ಪೀಡಿತನಾಗಿದ್ದೇನೆ, **ಸಕೃಷ್ಣೇಷು** = ಕೃಷ್ಣನಿಂದ ಕೂಡಿದ, **ಪಾಂಡವೇಷು** = ಪಾಂಡವರಲ್ಲಿ, **ತತ್ಸಂಬಂಧಾತ್ ಕೃತಂ** = ಆ ನನ್ನ ಮಕ್ಕಳ ಸಂಸರ್ಗದಿಂದ ಮಾಡಲ್ಪಟ್ಟ, **ಪಾಪಂ** = ಪಾಪವನ್ನು, **ಸ್ವಕೃತಂ ಅತ್ಯಪೇಶಲಂ ಚ** = ನನ್ನಿಂದ ಮಾಡಲ್ಪಟ್ಟ ಪಾಪವನ್ನೂ, **ತಪಸಾ** = ತಪಸ್ಸಿನಿಂದ, **ಮಾರ್ಷ್ಟುಂ** = ತೊಳೆಯಲು, **ಉದ್ಯತಃ** = ಉದ್ಯುಕ್ತನಾಗಿದ್ದೇನೆ.

**ತಾತ್ಪರ್ಯ :-** ನಾನು ಮುದುಕನಾಗಿದ್ದೇನೆ. ಮಕ್ಕಳು ಉಂಟುಮಾಡಿದ ಮನೋವ್ಯಥೆಗಳಿಂದ ಪೀಡಿತನಾಗಿದ್ದೇನೆ. ಅವರ ಸಂಸರ್ಗದಿಂದ ನಾನು ಪಾ,ಡವರಲ್ಲಿ ಮತ್ತು ಕೃಷ್ಣನಲ್ಲಿ ಮಾಡಿದ ಪಾಪಕರ್ಮ ಕ್ರೂರವಾದದ್ದು. ತಪಸ್ಸಿನಿಂದ ಆ ಪಾಪಕರ್ಮವನ್ನು ತೊಳೆದುಕೊಳ್ಳುವುದಕ್ಕೆ ನಿರತನಾಗಿದ್ದೇನೆ.

**ತತ್ರ ಮಾಮನುಜಾನೀಧ್ವಂ ಕೃಪಯಾ ಮಿತ್ರವತ್ಸಲಾಃ ।**
**ಮತ್ಪ್ರಿಯಾರ್ಥಮಪಿ ಸ್ನೇಹಃ ಪಾಂಡವೇಷು ಮಹಾತ್ಮಸು ।**
**ಕ್ರಿಯಮಾಣೋಽಪಿ ಕರ್ತವ್ಯೋ ಭೂಯ ಏವ ಸದಾಽಚಲಃ ॥ ೫೪ ॥**

**ಅರ್ಥ :- ಮಿತ್ರ ವತ್ಸಲಾಃ** = ಮಿತ್ರರಲ್ಲಿ ಪ್ರೀತಿಯುಳ್ಳ ಜನರೇ!, **ತತ್ರ** = ಆ ತಪಸ್ಸಿನ ವಿಷಯದಲ್ಲಿ, **ಮಾಂ** = ನನ್ನನ್ನು, **ಅನುಜಾನೀಧ್ವಂ** = ಅನುಮತಿಸಿರಿ, **ಮಹಾತ್ಮಸು** = ಮಹಾತ್ಮರಾದ, **ಪಾಂಡವೇಷು** = ಪಾಂಡವರಲ್ಲಿ, **ಸ್ನೇಹಃ** = ಸ್ನೇಹವು, **ಕ್ರಿಯಾಮಾಣೋಽಪಿ** = ಮಾಡಲ್ಪಡುತ್ತಿದ್ದರೂ, **ಮತ್ಪ್ರಿಯಾರ್ಥಮಪಿ** = ನನ್ನ ಸಂತೋಷಕ್ಕಾಗಿಯೂ ಕೂಡ, **ಭೂಯಃ** = ಇನ್ನೂ ಹೆಚ್ಚಾಗಿ, **ಸದಾ** = ಯಾವಾಗಲೂ, **ಅಚಲಃ** = ಅಚಲವಾಗಿ, **ಕರ್ತವ್ಯಃ** = ಮಾಡಲ್ಪಡಬೇಕು.

**ತಾತ್ಪರ್ಯ :-** ಮಿತ್ರರಲ್ಲಿ ಪ್ರೀತಿಯುಳ್ಳ ಜನರೇ! ನೀವು ಕೃಪೆಯಿಂದ ನನಗೆ ಅನುಮತಿ ಕೊಡಿ. ನೀವು ಮಹಾತ್ಮರಾದ ಪಾಂಡವರ ಮೇಲೆ ಪ್ರೀತಿ ಮಾಡುತ್ತಾ ಇದ್ದೀರಿ. ಅದನ್ನು ನನ್ನ ಸಂತೋಷಕ್ಕಾಗಿ ಹೆಚ್ಚಿಸಿರಿ ಮತ್ತು ನಿಶ್ಚಲವಾಗಿಯೇ ಪ್ರೀತಿಯನ್ನು ಮಾಡಿರಿ.

**ತಾತ್ಪರ್ಯ** :- ನಿಮ್ಮ ಆಶ್ರಯ ಪಡೆದು ನಾನು ಯಾಗಗಳನ್ನು ನಡೆಸಿದೆ. ಕೆರೆ ಬಾವಿಗಳನ್ನು ನಿರ್ಮಾಣ ಮಾಡಿಸಿದೆ. ನನ್ನ ಮಗನಾದ ದುರ್ಯೋಧನ ಮಾತ್ರ ಪಾಪಿಷ್ಠ. ಎಲ್ಲಾ ಕ್ಷತ್ರಿಯರ ನಾಶಕ್ಕೆ ಕಾರಣನಾದವ. ಎಲ್ಲರಲ್ಲಿಯೂ ಸಂದೇಹ ಪಡುವವ, ಮೂಢ, ಹಿರಿಯರ ಮಾತನ್ನು ಉಲ್ಲಂಘಿಸುವವ, ಅವನು ಮಹಾತ್ಮರಾದ ಪಾಂಡವರಲ್ಲಿ ಸ್ನೇಹ ಮಾಡದೆ ಬೇರೆಯವರಾರೂ ಇನ್ನೆಲ್ಲಿಯೂ ಮಾಡದ ಮಹಾದ್ವೇಷವನ್ನೇ ಮಾಡಿದ.

**ಅಪ್ರಿಯಾಣಿ ಚ ಕೃಷ್ಣಸ್ಯ ಸುಬಹೂನ್ಯಾಚರತ್ ಕುಧೀಃ ।**
**ಪ್ರಾಯಸ್ತೇನಾಪಿ ಮಂದೇನ ನ ಯುಷ್ಮಾಸ್ವಶಿವಂ ಕೃತಮ್ ॥ ೫೦ ॥**

**ಭ್ರಾತರೋಽಸ್ಯ ಚ ಸರ್ವೇಽಪಿ ತಚ್ಛೀಲಮನುವರ್ತಿನಃ ।**
**ಹತಾಶ್ಚ ಸ್ವೇನ ಪಾಪೇನ ಸಸುತಾಮಾತ್ಯಬಾಂಧವಾಃ ॥ ೫೧ ॥**

**ಅರ್ಥ** :- **ಕುಧೀಃ** = ದುರ್ಬುದ್ಧಿಯವನಾದ ದುರ್ಯೋಧನನು, **ಕೃಷ್ಣಸ್ಯ** = ಕೃಷ್ಣನಿಗೆ, **ಅಪ್ರಿಯಾಣಿ** = ಅಪ್ರಿಯವಾದ, **ಸುಬಹೂನಿ** = ಬಹಳ ಕಾರ್ಯಗಳನ್ನು, **ಆಚರತ್** = ಮಾಡಿದ್ದಾನೆ. **ಮಂದೇನ** = ಮೂರ್ಖನಾದ, **ತೇನ** = ಆ ದುರ್ಯೋಧನನಿಂದ, **ಯುಷ್ಮಾಸ್ವಪಿ** = ನಿಮ್ಮಲ್ಲಿಯೂ ಕೂಡ, **ಪ್ರಾಯಃ** = ಬಹಳ, **ಅಶಿವಂ ಕೃತಂ** = ಕೆಟ್ಟದ್ದು ಮಾಡಲ್ಪಟ್ಟಿದೆ, **ಅಸ್ಯ** = ಇವನ, **ಭ್ರಾತರಃ ಸರ್ವೇಽಪಿ** = ಸೋದರರೆಲ್ಲರೂ ಕೂಡ, **ತಚ್ಛೀಲಂ** = ಆ ದುರ್ಯೋಧನನ ಗುಣವನ್ನು, **ಅನುವರ್ತಿನಃ** = ಅನುಸರಿಸಿದವರು. **ಸ್ವೇನ ಪಾಪೇನ** = ಸ್ವಕೀಯವಾದ ಪಾಪದಿಂದ, **ಸಸುತಾಮಾತ್ಯಬಾಂಧವಾಃ** = ಮಕ್ಕಳು ಮಿತ್ರರು ಬಾಂಧವರಿಂದ ಕೂಡಿದವರಾಗಿ, **ಹತಾಃ** = ಹತರಾದರು.

**ತಾತ್ಪರ್ಯ** :- ದುರ್ಬುದ್ಧಿಯವನಾದ ನನ್ನ ಮಗ ಕೃಷ್ಣನಿಗೆ ಅಪ್ರಿಯವಾದ ಬಹಳ ಕೆಟ್ಟ ಕೆಲಸಗಳನ್ನು ಮಾಡಿದ. ಮೂರ್ಖನಾದ ಅವನು ನಿಮ್ಮಲ್ಲಿಯೂ ಬಹಳ ಕೆಟ್ಟದ್ದನ್ನು ಮಾಡಿದ್ದಾನೆ. ಅವನ ಸೋದರರೆಲ್ಲರೂ ಅವನ ಗುಣವನ್ನೇ ಅನುಸರಿಸಿದರು. ತಾವೇ ಮಾಡಿದ ಪಾಪದಿಂದ ಮಕ್ಕಳು ಮಿತ್ರರು ಬಾಂಧವರೊಂದಿಗೆ ಹತರಾದರು.

**ಸೋಹಂ ವಯೋಗತಶ್ಚೈವ ಪುತ್ರಾಧಿಭಿರಭಿಪ್ಲುತಃ ।**
**ತತ್ಸಂಬಂಧಕೃತಂ ಪಾಪಂ ಸ್ವಕೃತಂ ಚಾತ್ಯಪೇಶಲಮ್ ॥ ೫೨ ॥**

**ಪಾಂಡವೇಷು ಸಕೃಷ್ಣೇಷು ತಪಸಾ ಮಾರ್ಷ್ಟುಮುದ್ಯತಃ ॥ ೫೩ ॥**

**ಅರ್ಥ :- ಸೋಽಹಂ** = ನಾನು, **ವಯೋಗತಃ** = ವೃದ್ಧನಾಗಿದ್ದೇನೆ. **ಪುತ್ರಾಧಿಭಿಃ** = ಮಕ್ಕಳಿಂದ ಉಂಟಾದ ಮನೋವ್ಯಥೆಗಳಿಂದ, **ಅಭಿಪ್ಲುತಃ** = ಪೀಡಿತನಾಗಿದ್ದೇನೆ, **ಸಕೃಷ್ಣೇಷು** = ಕೃಷ್ಣನಿಂದ ಕೂಡಿದ, **ಪಾಂಡವೇಷು** = ಪಾಂಡವರಲ್ಲಿ, **ತತ್ಸಂಬಂಧಾತ್ ಕೃತಂ** = ಆ ನನ್ನ ಮಕ್ಕಳ ಸಂಸರ್ಗದಿಂದ ಮಾಡಲ್ಪಟ್ಟ, **ಪಾಪಂ** = ಪಾಪವನ್ನು, **ಸ್ವಕೃತಂ ಅತ್ಯಪೇಶಲಂ ಚ** = ನನ್ನಿಂದ ಮಾಡಲ್ಪಟ್ಟ ಪಾಪವನ್ನೂ, **ತಪಸಾ** = ತಪಸ್ಸಿನಿಂದ, **ಮಾರ್ಷ್ಟುಂ** = ತೊಳೆಯಲು, **ಉದ್ಯತಃ** = ಉದ್ಯುಕ್ತನಾಗಿದ್ದೇನೆ.

**ತಾತ್ಪರ್ಯ :-** ನಾನು ಮುದುಕನಾಗಿದ್ದೇನೆ. ಮಕ್ಕಳು ಉಂಟುಮಾಡಿದ ಮನೋವ್ಯಥೆಗಳಿಂದ ಪೀಡಿತನಾಗಿದ್ದೇನೆ. ಅವರ ಸಂಸರ್ಗದಿಂದ ನಾನು ಪಾ,ಡವರಲ್ಲಿ ಮತ್ತು ಕೃಷ್ಣನಲ್ಲಿ ಮಾಡಿದ ಪಾಪಕರ್ಮ ಕ್ರೂರವಾದದ್ದು. ತಪಸ್ಸಿನಿಂದ ಆ ಪಾಪಕರ್ಮವನ್ನು ತೊಳೆದುಕೊಳ್ಳುವುದಕ್ಕೆ ನಿರತನಾಗಿದ್ದೇನೆ.

**ತತ್ರ ಮಾಮನುಜಾನೀಧ್ವಂ ಕೃಪಯಾ ಮಿತ್ರವತ್ಸಲಾಃ ।**
**ಮತ್ಪ್ರಿಯಾರ್ಥಮಪಿ ಸ್ನೇಹಃ ಪಾಂಡವೇಷು ಮಹಾತ್ಮಸು ।**
**ಕ್ರಿಯಮಾಣೋಽಪಿ ಕರ್ತವ್ಯೋ ಭೂಯ ಏವ ಸದಾಽಚಲಃ ॥ ೫೪ ॥**

**ಅರ್ಥ :- ಮಿತ್ರ ವತ್ಸಲಾಃ** = ಮಿತ್ರರಲ್ಲಿ ಪ್ರೀತಿಯುಳ್ಳ ಜನರೇ!, **ತತ್ರ** = ಆ ತಪಸ್ಸಿನ ವಿಷಯದಲ್ಲಿ, **ಮಾಂ** = ನನ್ನನ್ನು, **ಅನುಜಾನೀಧ್ವಂ** = ಅನುಮತಿಸಿರಿ, **ಮಹಾತ್ಮಸು** = ಮಹಾತ್ಮರಾದ, **ಪಾಂಡವೇಷು** = ಪಾಂಡವರಲ್ಲಿ, **ಸ್ನೇಹಃ** = ಸ್ನೇಹವು, **ಕ್ರಿಯಾಮಾಣೋಽಪಿ** = ಮಾಡಲ್ಪಡುತ್ತಿದ್ದರೂ, **ಮತ್ಪ್ರಿಯಾರ್ಥಮಪಿ** = ನನ್ನ ಸಂತೋಷಕ್ಕಾಗಿಯೂ ಕೂಡ, **ಭೂಯಃ** = ಇನ್ನೂ ಹೆಚ್ಚಾಗಿ, **ಸದಾ** = ಯಾವಾಗಲೂ, **ಅಚಲಃ** = ಅಚಲವಾಗಿ, **ಕರ್ತವ್ಯಃ** = ಮಾಡಲ್ಪಡಬೇಕು.

**ತಾತ್ಪರ್ಯ :-** ಮಿತ್ರರಲ್ಲಿ ಪ್ರೀತಿಯುಳ್ಳ ಜನರೇ! ನೀವು ಕೃಪೆಯಿಂದ ನನಗೆ ಅನುಮತಿ ಕೊಡಿ. ನೀವು ಮಹಾತ್ಮರಾದ ಪಾಂಡವರ ಮೇಲೆ ಪ್ರೀತಿ ಮಾಡುತ್ತಾ ಇದ್ದೀರಿ. ಅದನ್ನು ನನ್ನ ಸಂತೋಷಕ್ಕಾಗಿ ಹೆಚ್ಚಿಸಿರಿ ಮತ್ತು ನಿಶ್ಚಲವಾಗಿಯೇ ಪ್ರೀತಿಯನ್ನು ಮಾಡಿರಿ.

**ತೇ ಹಿ ಮೇ ಪುತ್ರಕಾಃ ಸಂತ ಇಹಾಮುತ್ರ ಚ ಸೌಖ್ಯದಾಃ ॥ ೫೫ ॥**

**ಇತ್ಯುಕ್ತೈಃ ಸ್ವಗುಣಾನುಚ್ಚೈಃ ಕೀರ್ತಯದ್ಭಿಃ ಸುದುಃಖಿತೈಃ ।**
**ಪರ್ಯಶ್ರುನಯನೈಃ ಕೃಚ್ಛ್ರಾತ್ ಪೌರಜಾನಪದೈಶ್ಚಿರಾತ್ ।**
**ಅನುಜ್ಞಾತೋ ಯಯೌ ಪಾರ್ಥೈರನುಯಾತಃ ಸುದೂರತಃ ॥ ೫೬ ॥**

**ಅರ್ಥ** :- **ಹಿ** = ಏಕೆಂದರೆ, **ತೇ** = ಅವರು, **ಮೇ** = ನನ್ನ, **ಸಂತಃ** = ಒಳ್ಳೆಯ, **ಪುತ್ರಕಾಃ** = ಮಕ್ಕಳು, **ಇಹ** = ಇಲ್ಲಿಯೂ, **ಅಮುತ್ರ ಚ** = ಪರದಲ್ಲಿಯೂ, **ಸೌಖ್ಯದಾಃ** = ಸೌಖ್ಯ ಕೊಡುವವರು, **ಇತಿ** = ಈ ರೀತಿಯಾಗಿ, **ಉಕ್ತೇ** = ಹೇಳಲ್ಪಡುತ್ತಿರಲು, **ಪರ್ಯಶ್ರುನಯನೈಃ** = ಕಣ್ಣೀರು ಸುರಿಸಿದ ಕಣ್ಣುಗಳುಳ್ಳ, **ಸುದುಃಖಿತೈಃ** = ಬಹಳ ದುಃಖಿತರಾದ, **ಸ್ವಗುಣಾನ್** = ತನ್ನ ಗುಣಗಳನ್ನು, **ಉಚ್ಚೈಃ** = ಗಟ್ಟಿಯಾಗಿ, **ಕೀರ್ತಯದ್ಭಿಃ** = ಪ್ರಶಂಸೆ ಮಾಡುತ್ತಿದ್ದ, **ಪೌರಜಾನಪದೈಃ** = ಪೌರರು ಮತ್ತು ಗ್ರಾಮಸ್ಥರಿಂದ, **ಚಿರಾತ್** = ಬಹಳ ಸಮಯದ ನಂತರ, **ಕೃಚ್ಛ್ರಾತ್** = ಕಷ್ಟದಿಂದ, **ಅನುಜ್ಞಾತಃ** = ಅನುಜ್ಞೆ ಪಡೆದವನಾಗಿ, **ಯಯೌ** = ಹೊರಟನು, **ಸುದೂರತಃ** = ಬಹಳ ದೂರದವರೆಗೆ, **ಪಾರ್ಥೈಃ** = ಪಾಂಡವರಿಂದ, **ಅನುಯಾತಃ** = ಹಿಂಬಾಲಿಸಲ್ಪಟ್ಟನು.

**ತಾತ್ಪರ್ಯ** :- ಏಕೆಂದರೆ ಅವರು ನನ್ನ ಒಳ್ಳೆಯ ಮಕ್ಕಳು. ಇಹಲೋಕದಲ್ಲಿ ಮತ್ತು ಪರಲೋಕದಲ್ಲಿಯೂ ಸೌಖ್ಯಪ್ರದರು. ಹೀಗೆ ಧೃತರಾಷ್ಟ್ರ ಪೌರರನ್ನು ಮತ್ತು ಗ್ರಾಮಸ್ಥರನ್ನು ಕುರಿತು ಹೇಳಿದಾಗ ಅವರು ಕಣ್ಣೀರಿಟ್ಟರು. ಬಹಳ ದುಃಖಿತರಾದರು. ಧೃತರಾಷ್ಟ್ರನ ಗುಣಗಳನ್ನು ಗಟ್ಟಿಯಾಗಿ ಪ್ರಶಂಸೆ ಮಾಡಿದರು. ಬಹಳ ಸಮಯದ ನಂತರ ಬಹಳ ಕಷ್ಟದಿಂದ ಕಾಡಿಗೆ ಹೋಗಲು ಅನುಮತಿ ಕೊಟ್ಟರು. ಧೃತರಾಷ್ಟ್ರ ಹೊರಟನು. ಪಾಂಡವರು ಬಹಳ ದೂರದವರೆಗೆ ಹಿಂಬಾಲಿಸಿದರು.

**ಸಂಜಯೋ ವಿದುರಶ್ಚೈನಂ ಸಭಾರ್ಯಮನುಜಗ್ಮತುಃ ।**
**ಅನುವವ್ರಾಜ ತಂ ಕುಂತೀ ವನಾಯ ಕೃತನಿಶ್ಚಯಾ ॥ ೫೭ ॥**

**ಅರ್ಥ** :- **ಸಂಜಯಃ** = ಸಂಜಯನು, **ವಿದುರಶ್ಚ** = ವಿದುರನೂ, **ಸಭಾರ್ಯಂ** = ಪತ್ನೀ ಸಮೇತನಾದ ಧೃತರಾಷ್ಟ್ರನನ್ನು, **ಅನುಜಗ್ಮತುಃ** =

ಅನುಸರಿಸಿ ನಡೆದರು. **ಕುಂತೀ** = ಕುಂತಿಯು, **ವನಾಯ** = ವನವಾಸಕ್ಕಾಗಿ, **ಕೃತನಿಶ್ಚಯಾ** = ಮಾಡಲ್ಪಟ್ಟ ನಿಶ್ಚಯವುಳ್ಳವನಾಗಿ, **ತಂ** = ಆ ಧೃತರಾಷ್ಟ್ರನನ್ನು, **ಅನುವವ್ರಾಜ** = ಅನುಸರಿಸಿ ನಡೆದಳು.

**ತಾತ್ಪರ್ಯ** :- ಸಂಜಯ ವಿದುರರು ಪತ್ನೀ ಸಹಿತನಾದ ಧೃತರಾಷ್ಟ್ರನನ್ನು ಹಿಂಬಾಲಿಸಿದರು. ಕುಂತಿಯೂ ವನವಾಸಕ್ಕೆ ಹೊರಡಲು ನಿಶ್ಚಯಿಸಿ ದೃತರಾಷ್ಟ್ರನನ್ನು ಅನುಸರಿಸಿ ನಡೆದಳು.

**ವಾರ್ಯಮಾಣಾಽಪಿ ತನಯೈಃ**
**ಸಭಾರ್ಯೈರ್ಭೃಶದುಃಖಿತೈಃ ।**
**ಸಂಸ್ಥಾಪ್ಯ ತಾನ್ ಸುಕೃಚ್ಛ್ರೇಣ**
**ಯಯೌ ಸಾಽನ್ವೇವ ತಂ ನೃಪಮ್ ॥ ೫೮ ॥**

**ಅರ್ಥ** :- **ಸಭಾರ್ಯೈಃ** = ಹೆಂಡತಿಯರಿಂದ ಕೂಡಿದ, **ಸುದುಃಖಿತೈಃ** = ಬಹಳ ದುಃಖಿತರಾದ, **ತನಯೈಃ** = ಮಕ್ಕಳಿಂದ, **ವಾರ್ಯ ಮಾಣಾಽಪಿ** = ತಡೆಯಲ್ಪಟ್ಟರೂ, **ಸಾ** = ಆ ಕುಂತಿಯು, **ಸುಕೃಚ್ಛ್ರೇಣ** = ಬಹಳ ಕಷ್ಟದಿಂದ, **ತಾನ್** = ಆ ಮಕ್ಕಳನ್ನು, **ಸಂಸ್ಥಾಪ್ಯ** = ಅಲ್ಲಿಯೇ ನಿಲ್ಲಿಸಿ, **ತಂ ನೃಪಂ** = ಆ ಧೃತರಾಷ್ಟ್ರನನ್ನು, **ಅನ್ವೇವ** = ಅನುಸರಿಸಿಯೇ, **ಯಯೌ** = ಹೋದಳು.

**ತಾತ್ಪರ್ಯ** :- ಬಹಳ ದು.ಖಿತರಾಗಿ ಹೆಂಡತಿಯರಿಂದ ಕೂಡಿ ಮಕ್ಕಳು ತಡೆದರೂ ಕೂಡ ಕುಂತಿಯು ಅವರನ್ನು ಅಲ್ಲಿಯೇ ಇರಿಸಿ ಧೃತರಾಷ್ಟ್ರನನ್ನು ಅನುಸರಿಸಿ ಹೋದಳು.

**ಸಂದರ್ಶಿತಪಥೋ ರಾಜಾ ಕುಂತೀವಿದುರಸಂಜಯೈಃ ।**
**ಗಾಂಧಾರೀಸಹಿತಃ ಪ್ರಾಪ ಕುರುಕ್ಷೇತ್ರೇ ಜಗದ್ಗುರೋಃ ॥ ೫೯ ॥**

**ಕ್ರಮೇಣೈವಾಽಶ್ರಮಂ ವ್ಯಾಸದೇವಸ್ಯ ಸುರಪೂಜಿತಮ್ ॥ ೬೦ ॥**

**ಅರ್ಥ** :- **ಕುಂತೀ ವಿದುರ ಸಂಜಯೈ** = ಕುಂತಿ ವಿದುರ ಸಂಜಯ ರಿಂದ, **ಸಂದರ್ಶಿತ ಪಥಃ** = ತೋರಿಸಲ್ಪಟ್ಟ ದಾರಿಯುಳ್ಳ, **ಗಾಂಧಾರೀ ಸಹಿತಃ** = ಗಾಂಧಾರೀ ಸಮೇತನಾದ, **ರಾಜಾ** = ಧೃತರಾಷ್ಟ್ರನು, **ಕ್ರಮೇಣೈವ** =

ಕ್ರಮವಾಗಿಯೆ, **ಕುರುಕ್ಷೇತ್ರಂ** = ಕುರುಕ್ಷೇತ್ರವನ್ನು, **ಪ್ರಾಪ** = ಹೊಂದಿದನು, **ಜಗದ್ಗುರೋಃ** = ಜಗದ್ಗುರುವಾದ, **ವ್ಯಾಸದೇವಸ್ಯ** = ವೇದವ್ಯಾಸದೇವರ, **ಸುರಪೂಜಿತಂ** = ದೇವತೆಗಳಿಂದ ಪೂಜಿತವಾದ, **ಆಶ್ರಮಂ** = ಆಶ್ರಮವನ್ನು, **ಪ್ರಾಪ** = ಹೊಂದಿದನು.

**ತಾತ್ಪರ್ಯ** :- ಗಾಂಧಾರೀ ಧೃತರಾಷ್ಟ್ರರಿಗೆ ಕುಂತೀ ವಿದುರ ಸಂಜಯರು ದಾರಿ ತೋರಿಸಿದರು. ಅವನು ಕುರುಕ್ಷೇತ್ರಕ್ಕೆ ಬಂದನು. ಅನಂತರ ಜಗದ್ಗುರುಗಳಾದ ಶ್ರೀ ವೇದವ್ಯಾಸದೇವರ ದೇವತೆಗಳಿಂದ ಪೂಜಿತವಾದ ಆಶ್ರಮಕ್ಕೆ (ಬದರಿಕಾಶ್ರಮಕ್ಕೆ) ಬಂದನು.

**ತ್ರಿವತ್ಸರಾದಸ್ಯ ನಿಜಸ್ಯ ಲೋಕ-**
**ಸ್ಯಾಽಪ್ತಿಂ ಸಭಾರ್ಯಸ್ಯ ಜಗಾದ ತತ್ರ ।**
**ಬ್ರಹ್ಮಾಂಕಜಸ್ತೇನ ಭೃಶಂ ಪ್ರತೀತೋ**
**ವ್ಯಾಸೋಪದಿಷ್ಟಂ ವ್ಯಚರತ್ ತಪೋಽಗ್ರ್ಯಮ್ ॥ ೬೧ ॥**

**ಅರ್ಥ** :- **ತತ್ರ** = ಆ ಬದರಿಕಾಶ್ರಮದಲ್ಲಿ, **ಬ್ರಹ್ಮಾಂಕಜಃ** = ನಾರದರು, **ತ್ರಿವತ್ಸರಾತ್** = ಮೂರು ವರ್ಷಗಳ ಅನಂತರ, **ನಿಜಸ್ಯ** = ತನ್ನ, **ಲೋಕಸ್ಯ** = ಲೋಕದ, **ಆಪ್ತಿಂ** = ಪ್ರಾಪ್ತಿಯನ್ನು, **ಸಭಾರ್ಯಸ್ಯ** = ಪತ್ನೀ ಸಹಿತನಾದ ಧೃತರಾಷ್ಟ್ರನಿಗೆ, **ಜಗಾದ** = ಹೇಳಿದರು. **ತೇನ** = ಅದರಿಂದ, **ಭೃಶಂ** = ಬಹಳ, **ಪ್ರತೀತಃ** = ವಿಶ್ವಸಿತನಾದ ಧೃತರಾಷ್ಟ್ರನು, **ವ್ಯಾಸೋಪದಿಷ್ಟಂ** = ವೇದವ್ಯಾಸ ದೇವರಿಂದ ಉಪದಿಷ್ಟವಾದ, **ಅಗ್ರ್ಯಂ** = ಉತ್ತಮವಾದ, **ತಪಃ** = ತಪಸ್ಸನ್ನು, **ವ್ಯಚರತ್** = ಆಚರಿಸಿದನು.

**ತಾತ್ಪರ್ಯ** :- ಬದರಿಕಾಶ್ರಮದಲಲ್ಲಿ ನಾರದರು ''ನಿನಗೆ ಮೂರು ವರ್ಷಗಳಲ್ಲಿ ನಿನ್ನ ಲೋಕಪ್ರಾಪ್ತಿಯಾಗುತ್ತದೆ'' ಎಂದು ಧೃತರಾಷ್ಟ್ರನಿಗೆ ಹೇಳಿದರು. ಆ ಮಾತಿನಲ್ಲಿ ಧೃತರಾಷ್ಟ್ರ ಬಹಳ ವಿಶ್ವಾಸ ಮಾಡಿ ವೇದವ್ಯಾಸರು ಉಪದೇಶಿಸಿದ ಉತ್ತಮವಾದ ತಪಸ್ಸನ್ನು ಮಾಡಿದರು.

**ಸಕ್ಷತ್ತೃಗಾಂಧಾರಿಪೃಥೇ ಸಸಂಜಯೇ**
**ತಪೋಭಿರಾರಾಧಯತಿ ಪ್ರಭುಂ ಹರಿಮ್ ।**

**ವೈಚಿತ್ರವೀರ್ಯೇಽತ್ರ ಸದಾರಬಂಧು-**
**ಭೃತ್ಯಾಸ್ತು ಪಾರ್ಥಾ ದೃಶಯೇ ಸಮಾಯಯುಃ ॥ ೬೨ ॥**

**ಅರ್ಥ** :- **ಅತ್ರ** = ಈ ಆಶ್ರಮದಲ್ಲಿ, **ಸಕ್ಷತೃಗಾಂಧಾರಿಪೃಥೇ** = ವಿದುರ ಗಾಂಧಾರಿ ಕುಂತಿಯರಿಂದ ಕೂಡಿದ, **ಸಸಂಜಯೇ ಚ** = ಸಂಜಯನಿಂದಲೂ ಕೂಡಿದ, **ವೈಚಿತ್ರವೀರ್ಯೇ** = ಧೃತರಾಷ್ಟನು, **ತಪೋಭಿಃ** = ತಪಸ್ಸುಗಳಿಂದ, **ಪ್ರಭುಂ** = ಪ್ರಭುವಾದ, **ಹರಿಂ** = ಶ್ರೀಹರಿಯನ್ನು, **ಆರಾಧಯತಿ (ಸತಿ)** = ಆರಾಧಿಸುತ್ತಿರಲು, **ದೃಶಯೇ** = ಅವರನ್ನು ನೋಡಲು, **ಸದಾರ ಬಂಧುಭೃತ್ಯಾಃ** = ಹೆಂಡತಿ ಬಂಧು ಸೇವಕರಿಂದ ಕೂಡಿದ, **ಪಾರ್ಥಾಃ** = ಪಾಂಡವರು, **ಸಮಾಯಯುಃ** = ಬಂದರು.

**ತಾತ್ಪರ್ಯ** :- ಗಾಂಧಾರೀ ವಿದುರ ಸಂಜಯ ಕುಂತಿ ಇವರೊಡನೆ ಧೃತರಾಷ್ಟ ತಪಸ್ಸಿನಿಂದ ಪರಮಾತ್ಮನನ್ನು ಆರಾಧಿಸುತ್ತಿದ್ದಾಗ ಇವರನ್ನು ನೋಡಲು ಪಾಂಡವರು ಹೆಂಡತಿಯರು ಭೃತ್ಯರು ಬಂಧುಗಳೊಡನೆ ಕೂಡಿ ಬಂದರು.

**ಕ್ಷತ್ತೈಕತಾಮತ್ರ ಯುಧಿಷ್ಠಿರೇಣ**
**ಪ್ರಾಪ್ತೋಽಥ ಭಾರ್ಯಾಸಹಿತಂ ಸಸಂಜಯಮ್ ।**
**ಉಪಾಸಮಾನೇಷು ವಿಚಿತ್ರವೀರ್ಯ-**
**ಪುತ್ರಂ ಪೃಥಾಂ ಚೈವ ಪೃಥಾಸುತೇಷು ॥ ೬೩ ॥**

**ಪ್ರಾದುರ್ಬಭೂವಾಮಿತಶಕ್ತಿತೇಜೋ-**
**ಜ್ಞಾನಾದ್ಭುತೈಶ್ವರ್ಯಸುಖಾದಿರೂಪಃ ।**
**ವ್ಯಾಸೋ ಹರಿಸ್ತತ್ರ ಸಮೀಕ್ಷ್ಯ ಸರ್ವೇ**
**ಸಂಪೂಜಯಾಮಾಸುರುದಗ್ರಭಕ್ತ್ಯಾ ॥ ೬೪ ॥**

**ಅರ್ಥ** :- **ಅತ್ರ** = ಈ ಬದರಿಕಾಶ್ರಮದಲ್ಲಿ, **ಕ್ಷತ್ತಾ** = ವಿದುರನು, **ಯುಧಿಷ್ಠಿರೇಣ** = ಯುಧಿಷ್ಠಿರನ ಜೊತೆ, **ಏಕತಾಂ** = ಐಕ್ಯವನ್ನು, **ಪ್ರಾಪ್ತಃ** = ಹೊಂದಿದನು. **ಅಥ** = ಅನಂತರ, **ಸಸಂಜಯಂ** = ಸಂಜಯನಿಂದ ಕೂಡಿದ, **ಸಭಾರ್ಯಂ** = ಹೆಂಡತಿಯಿಂದ ಕೂಡಿದ, **ವಿಚಿತ್ರವೀರ್ಯಪುತ್ರಂ** = ಧೃತರಾಷ್ಟನನ್ನು, **ಪೃಥಾಂ ಚ** = ಕುಂತಿಯನ್ನೂ, **ಪೃಥಾಸುತೇಷು** =

ಪಾಂಡವರು, **ಉಪಾಸಮಾನೇಷು** = ಸೇವಿಸುತ್ತಿರಲು, **ಅಮಿತಶಕ್ತಿತೇಜೋಜ್ಞಾನಾದ್ಭುತೈಶ್ವರ್ಯ ಸುಖಾದಿರೂಪಃ** = ಅಪರಿಮಿತವಾದ ಶಕ್ತಿ ತೇಜಸ್ಸು ಜ್ಞಾನ ಅದ್ಭುತವಾದ ಐಶ್ವರ್ಯ ಸುಖ ಮೊದಲಾದ ಗುಣವುಳ್ಳ, **ಹರಿಃ ವ್ಯಾಸಃ** = ಹರಿ ಸ್ವರೂಪರಾದ ಶ್ರೀ ವೇದವ್ಯಾಸರು, **ಪ್ರಾದುರ್ಬಭೂವ** = ಆವಿರ್ಭೂತರಾದರು, **ಸರ್ವೇ** = ಎಲ್ಲರೂ, **ಉದಗ್ರಭಕ್ತ್ಯಾ** = ಉತ್ತಮಭಕ್ತಿಯಿಂದ, **ಸಂಪೂಜಯಾಮಾಸುಃ** = ಪೂಜಿಸಿದರು.

**ತಾತ್ಪರ್ಯ** :- ಬದರಿಕಾಶ್ರಮದಲ್ಲಿ ವಿದುರ ಧರ್ಮರಾಜನಲ್ಲಿ ಐಕ್ಯ ಹೊಂದಿದ. ಸಂಜಯ ಕುಂತಿ ಗಾಂಧಾರಿ ಇವರೊಡನೆ ಇದ್ದ ಧೃತರಾಷ್ಟ್ರನನ್ನು ಪಾಂಡವರು ಸೇವಿಸುತ್ತಾ ಇದ್ದಾಗ ಅಪರಿಮಿತ ಶಕ್ತಿ ತೇಜಸ್ಸು ಜ್ಞಾನ ಅದ್ಭುತ ಐಶ್ವರ್ಯ ಸುಖ ಮೊದಲಾದ ಗುಣಗಳುಳ್ಳ ವೇದವ್ಯಾಸದೇವರು ಅಲ್ಲಿ ಪ್ರಾದುರ್ಭೂತರಾದರು. ಎಲ್ಲರೂ ಬಹಳ ಭಕ್ತಿಯಿಂದ ಪೂಜಿಸಿದರು.

**ತೈಃ ಪೂಜಿತಸ್ತತ್ರ ನಿಷಣ್ಣ ಆಹ**
**ಯದ್ಯದ್ ಯದಿಷ್ಟಂ ಪ್ರವದಂತು ತತ್ತತ್ ।**
**ದಾಸ್ಯಾಮಿ ತಸ್ಯಾದ್ಯ ತದಿತ್ಯಮುಷ್ಮಿನ್**
**ಭಕ್ತ್ಯುಚ್ಚ್ರಯಃ ಪಾಂಡುಸುತೈಃ ಸದಾರೈಃ ॥ ೬೫ ॥**

**ವೃತೋಽತ್ರ ಕುಂತೀ ರವಿಸೂನುಜನ್ಮ-**
**ಮೃತ್ಯೂತ್ಥದೋಷಾಪಗಮಂ ಯಯಾಚೇ ॥ ೬೬ ॥**

**ಅರ್ಥ** :- **ತೈಃ** = ಅವರಿಂದ, **ಪೂಜಿತಃ** = ಪೂಜಿತರಾದ ವೇದವ್ಯಾಸರು, **ತತ್ರ** = ಅಲ್ಲಿ, **ನಿಷಣ್ಣಃ** = ಕೂತವರಾಗಿ, **ಯದ್ಯತ್** = ಯಾವುದಾವುದು, **ಯದಿಷ್ಟಂ** = ಯಾರಿಗೆ ಇಷ್ಟವೋ, **ತತ್ತತ್** = ಅದನ್ನು, **ಪ್ರವದಂತು** = ಹೇಳಲಿ, **ತಸ್ಯ** = ಅವರಿಗೆ, **ಅದ್ಯ** = ಈಗ, **ತತ್** = ಅದನ್ನು , **ದಾಸ್ಯಾಮಿ** = ಕೊಡುತ್ತೇನೆ ಎಂದು, **ಆಹ** = ಹೇಳಿದರು, **ಸದಾರೈಃ** = ಹೆಂಡತಿಯರಿಂದ ಕೂಡಿದ, **ಪಾಂಡುಸುತೈಃ** = ಪಾಂಡವರಿಂದ, **ಅಮುಷ್ಮಿನ್** = ಈ ವೇದವ್ಯಾಸರಲ್ಲಿ, **ಭಕ್ತ್ಯುಚ್ಚ್ರಯಃ** = ಭಕ್ತ್ಯಭಿವೃದ್ಧಿಯು, **ವೃತಃ** = ಬೇಡಲ್ಪಟ್ಟಿತು, **ಕುಂತೀ** = ಕುಂತಿಯು, **ಅತ್ರ** = ಈ ಜನ್ಮದಲ್ಲಿ, **ರವಿಸೂನು ಜನ್ಮಮೃತ್ಯೂತ್ಥದೋಷಾಪಗಮಂ** = ಕರ್ಣನ ಜನ್ಮ ಮರಣಗಳಿಂದ ಉಂಟಾದ ಪಾಪದ ಪರಿಹಾರವನ್ನು, **ಯಯಾಚೇ** = ಬೇಡಿದಳು.

**ತಾತ್ಪರ್ಯ** :- ಅವರಿಂದ ಪೂಜಿತರಾದ ವೇದವ್ಯಾಸರು ಕುಳಿತುಕೊಂಡು ಹೇಳಿದರು. ನಿಮಗೆ ಏನೇನು ಇಷ್ಟವೋ ಅದೆಲ್ಲವನ್ನೂ ಕೇಳಿರಿ. ನಾನು ನಿಮಗೆ ಇಷ್ಟವಾದದ್ದನ್ನೆಲ್ಲಾ ಪೂರೈಸುತ್ತೇನೆ ಎಂದು. ಆಗ ಪಾಂಡವರು ಮತ್ತು ಅವರ ಹೆಂಡತಿಯರು ವ್ಯಾಸರಲ್ಲಿರುವ ಭಕ್ತಿ ಅಭಿವೃದ್ಧಿ ಹೊಂದಲಿ ಎಂದು ಕೇಳಿದರು. ಕುಂತಿಯು ಕರ್ಣನ ಹುಟ್ಟು ಸಾವುಗಳಿಂದ ನನಗೆ ಉಂಟಾದ ಪಾಪದ ಪರಿಹಾರವಾಗಲೆಂದು ಕೇಳಿಕೊಂಡಳು.

**ತೇಷಾಂ ಪ್ರದತ್ತೇಷ್ವಭಿವಾಂಛಿತೇಷು**
**ವೈಚಿತ್ರವೀರ್ಯಃ ಸಹ ಭಾರ್ಯಯೈವ ।**
**ಸಮ್ಮಂತ್ರ್ಯ ನಿಃಶೇಷರಣೇಹತಾನಾಂ**
**ಸಂದರ್ಶನಂ ಪ್ರಾರ್ಥಿತವಾಂಸ್ತಮೀಶಮ್ ॥ ೬೭ ॥**

**ಅರ್ಥ** :- **ತೇಷಾಂ** = ಕುಂತೀ ಪಾಂಡವರಿಗೆ, **ಅಭಿವಾಂಛಿತೇಷು** = ಕೇಳಲ್ಪಟ್ಟಿದ್ದು, **ಪ್ರದತ್ತೇಷು** = ಕೊಡಲ್ಪಡುತ್ತಿರಲು, **ವೈಚಿತ್ರವೀರ್ಯಃ** = ಧೃತರಾಷ್ಟ್ರನು, **ಭಾರ್ಯಯಾ ಸಹ** = ಹೆಂಡತಿಯೊಡನೆ, **ಸಮ್ಮಂತ್ರ್ಯ** = ಆಲೋಚಿಸಿ, **ತಂ ಈಶಂ** = ಆ ವ್ಯಾಸರನ್ನು ಕುರಿತು, **ನಿಃಶೇಷರಣೇಹತಾನಾಂ** = ಯುದ್ಧದಲ್ಲಿ ಸತ್ತವರೆಲ್ಲರ, **ಸಂದರ್ಶನಂ** = ನೋಡುವಿಕೆಯನ್ನು, **ಪ್ರಾರ್ಥಿತ ವಾನ್** = ಕೇಳಿಕೊಂಡನು.

**ತಾತ್ಪರ್ಯ** :- ಪಾಂಡವರಿಗೆ ಮತ್ತು ಕುಂತಿಗೆ ಅಭೀಷ್ಟವಾದದ್ದನ್ನು ವೇದವ್ಯಾಸರು ಕೊಟ್ಟಾಗ ಧೃತರಾಷ್ಟ್ರ ಗಾಂಧಾರಿಯೊಡನೆ ಆಲೋಚಿಸಿ ಯುದ್ಧದಲ್ಲಿ ಸತ್ತವರೆಲ್ಲರನ್ನೂ ಕಾಣಬೇಕೆಂದು ಪ್ರಾರ್ಥನೆಗೈದನು.

**ತತಸ್ತು ತೇ ಸತ್ಯವತೀಸುತಸ್ಯ**
**ಸರ್ವೇಶ್ವರಸ್ಯಾಽಜ್ಞಯಾ ಸರ್ವ ಏವ ।**
**ಸಮಾಗತಾಃ ಸ್ವರ್ಗಲೋಕಾತ್ ಕ್ಷಣೇನ**
**ದತ್ತಾ ಚ ದಿವ್ಯಾ ದೃಗಮುಷ್ಯ ರಾಜ್ಞಃ ।**
**ಊಷುಶ್ಚ ರಾತ್ರಿಂ ಪರಮಾಜ್ಞಯೈವ**
**ಸರ್ವೇ ಸ್ವಭಾರ್ಯಾಸಹಿತಾ ಯಥಾ ಪುರಾ ॥ ೬೮ ॥**

**ಅರ್ಥ** :- **ತತಃ** = ಅನಂತರ, **ತೇ ಸರ್ವೇ ಏವ** = ಅವರೆಲ್ಲರೂ, **ಸರ್ವೇಶ್ವರಸ್ಯ** = ಸರ್ವೇಶ್ವರನಾದ, **ಸತ್ಯವತೀಸುತಸ್ಯ** = ವೇದವ್ಯಾಸರ, **ಆಜ್ಞಯಾ** = ಆಜ್ಞೆಯಿಂದ, **ಕ್ಷಣೇನ** = ಒಂದು ಕ್ಷಣದಲ್ಲಿ, **ಸ್ವರ್ಗಲೋಕಾತ್** = ವೀರಸ್ವರ್ಗದಿಂದ, **ಸಮಾಗತಾಃ** = ಬಂದರು. **ಅಮುಷ್ಯರಾಜ್ಞಃ** = ಈ ಧೃತರಾಷ್ಟ್ರನಿಗೆ, **ದಿವ್ಯಾ** = ದಿವ್ಯವಾದ, **ದೃಕ್ ಚ** = ದೃಷ್ಟಿಯೂ, **ದತ್ತಾ** = ಕೊಡಲ್ಪಟ್ಟಿತು, **ಯಥಾ** = ಹೇಗೆ, **ಪುರಾ** = ಹಿಂದೆ, **ಸರ್ವೇ** = ಎಲ್ಲರೂ, **ಸ್ವಭಾರ್ಯಾ ಸಹಿತಾಃ** = ತಮ್ಮ ಹೆಂಡತಿಯರಿಂದ ಕೂಡಿ ಇದ್ದರೋ, **ತಥಾ** = ಹಾಗೆಯೇ, **ಪರಮಾಜ್ಞಯೈವ** = ಶ್ರೀವೇದವ್ಯಾಸರ ಇಚ್ಛೆಯಿಂದ, **ರಾತ್ರಿಂ** = ಒಂದು ರಾತ್ರಿಯ ಕಾಲ, **ಊಷುಃ** = ವಾಸ ಮಾಡಿದರು.

**ತಾತ್ಪರ್ಯ** :- ಆಗ ಜಗದೊಡೆಯರಾದ ಶ್ರೀವೇದವ್ಯಾಸರ ಆಜ್ಞೆಯಿಂದ ಸತ್ತವರೆಲ್ಲರೂ ವೀರಸ್ವರ್ಗದಿಂದ ಆಗಮಿಸಿದರು. ವ್ಯಾಸರು ಧೃತರಾಷ್ಟ್ರನಿಗೆ ದಿವ್ಯದೃಷ್ಟಿಯನ್ನಿತ್ತರು. ಯುದ್ಧದಲ್ಲಿ ಸತ್ತವರೆಲ್ಲರೂ ವೇದವ್ಯಾಸರ ಆಜ್ಞೆ ಯಂತೆ ಆಗಮಿಸಿ ಹಿಂದೆ ಮನುಷ್ಯದೇಹದಲ್ಲಿ ಹೇಗೆ ಇದ್ದರೋ ಹಾಗೆ ಮನುಷ್ಯದೇಹದಿಂದ ಬಂದು ಒಂದು ರಾತ್ರಿ ಇಡೀ ಹೆಂಡತಿ ಸಮೇತರಾಗಿ ವಾಸ ಮಾಡಿದರು.

**ತೃಪ್ತಃ ಸದಾರೋ ನೃಪತಿಶ್ಚ ತತ್ರ**
**ಸರ್ವೇಽಪಿ ದೃಷ್ಟ್ವಾ ಮಹದದ್ಭುತಂ ತತ್ ॥ ೬೯ ॥**

**ಅಥಾಽಜ್ಞಯೈವಾಸ್ಯ ಪರಸ್ಯ ಸರ್ವಾಃ**
**ಸ್ತ್ರಿಯೋ ನಿಜೇಶೈಃ ಸಹಿತಾ ಯಯುಃ ಸ್ವಮ್ ।**
**ವಿನೋತ್ತರಾಂ ತಾಂ ತು ಕಥಾಂ ನಿಶಮ್ಯ**
**ಪಾರೀಕ್ಷಿತೋಽಯಾಚತ ತಾತದೃಷ್ಟಿಮ್ ।**
**ತಂ ಚಾಽನಯಾಮಾಸ ತದೈವ ಕೃಷ್ಣೋ**
**ಹ್ಯಚಿಂತ್ಯಶಕ್ತಿಃ ಸ ವಿಕುಂಠಲೋಕಾತ್ ॥ ೭೦ ॥**

**ಅರ್ಥ** :- **ಸದಾರಃ** = ಹೆಂಡತಿಯಿಂದ ಕೂಡಿದ, **ನೃಪತಿಃ** = ಧೃತರಾಷ್ಟ್ರನು, **ತೃಪ್ತಃ (ಅಭವತ್)** = ತೃಪ್ತನಾದನು, **ಸರ್ವೇಽಪಿ** = ಎಲ್ಲರೂ ಕೂಡ, **ಪರಮಾದ್ಭುತಂ ತತ್** = ಪರಮಾದ್ಭುತವಾದ ಸತ್ತವರ ಆಗಮನವನ್ನು,

**ದೃಷ್ಟ್ವಾ** = ನೋಡಿ, (**ತೃಪ್ತಾಃ ಬಭೂವುಃ** = ತೃಪ್ತರಾದರು) **ಉತ್ತರಾಂ ವಿನಾ** = ಉತ್ತರೆಯನ್ನು ಹೊರತುಪಡಿಸಿ, **ಸರ್ವಾಃ** = ಎಲ್ಲಾ, **ಸ್ತ್ರೀಯಃ** = ಹೆಂಗಸರು, **ಪರಸ್ಯ** = ಉತ್ತಮರಾದ, **ಅಸ್ಯ** = ಈ ವೇದವ್ಯಾಸರ, **ಆಜ್ಞಯಾ** = ಅಪ್ಪಣೆಯಂತೆ, **ನಿಜೇಶೈಃ ಸಹಿತಾಃ** = ತಮ್ಮ ಗಂಡಂದಿರಿಂದ ಕೂಡಿದವರಾಗಿ, **ಸ್ವಃ** = ಸ್ವರ್ಗವನ್ನು ಕುರಿತು, **ಯಯುಃ** = ಹೋದರು, **ತಾಂ ಕಥಾಂ** = ಆ ಕಥೆಯನ್ನು, **ನಿಶಮ್ಯ** = ಕೇಳಿ, **ಪಾರೀಕ್ಷಿತಃ** = ಜನಮೇಜಯನು, **ತಾತದೃಷ್ಟಿಂ** = ತಂದೆಯಾದ ಪರೀಕ್ಷಿತನ ನೋಡುವಿಕೆಯನ್ನು, **ಅಯಾಚತ** = ಬೇಡಿದನು, **ತದೈವ** = ಆವಾಗಲೇ, **ಅಚಿಂತ್ಯಶಕ್ತಿಃ ಕೃಷ್ಣಃ** = ಅಚಿಂತ್ಯ ಶಕ್ತಿಯುಳ್ಳ ವೇದವ್ಯಾಸರು, **ವಿಕುಂಠಲೋಕಾತ್** = ವೈಕುಂಠಲೋಕದಿಂದ, **ತಂ ಚ** = ಆ ಪರೀಕ್ಷಿತನನ್ನೂ, **ಆನಯಾಮಾಸ** = ತರಿಸಿದರು.

**ತಾತ್ಪರ್ಯ** :- ಧೃತರಾಷ್ಟ್ರ ಗಾಂಧಾರೀ ಪಾಂಡವರು ಇವರೆಲ್ಲಾ ಪರಮಾದ್ಭುತವಾದ ಸತ್ತವರ ಆಗಮನವನ್ನು ನೋಡಿ ಸಂತೋಷಗೊಂಡರು. ಅನಂತರ ವೇದವ್ಯಾಸರ ಆಜ್ಞೆಯಂತೆ ಉತ್ತರಾ ದೇವಿಯನ್ನು ಹೊರತುಪಡಿಸಿ ಉಳಿದ ಎಲ್ಲಾ ಸ್ತ್ರೀಯರು ತಮ್ಮ ಗಂಡಂದಿರೊಂದಿಗೆ ಸ್ವರ್ಗಕ್ಕೆ ಹೋದರು. ಈ ಕಥೆಯನ್ನು ಜನಮೇಜಯ ಕೇಳಿ ತನ್ನ ತಂದೆಯಾದ ಪರೀಕ್ಷಿತನನ್ನು ಕರೆದು ತೋರಿಸಲು ಬೇಡಿದ. ಬಳಿಕ ವೇದವ್ಯಾಸರು ಪರೀಕ್ಷಿತನನ್ನು ವೈಕುಂಠ ಲೋಕದಿಂದ ತರಿಸಿದರು.

**ದೃಷ್ಟ್ವಾಸ ಪಾರೀಕ್ಷಿತ ಆಪ ತುಷ್ಟಿಂ**
**ಸ್ವತಾತಮೀಶೇನ ಸಮಾಹೃತಂ ಪುನಃ ।**
**ಸಂಪೂಜ್ಯ ತಂ ಕೃಷ್ಣಮಪೀಶವಂದ್ಯಂ**
**ಕ್ಷಮಾಪಯಾಮಾಸ ಪರೀಕ್ಷಿದಾತ್ಮಜಃ ।**
**ಚಕ್ರೇ ಚ ವಿಸ್ರಂಭಮತೀವ ಭಾರತೇ**
**ಪುನಶ್ಚ ತತ್ರತ್ಯಜನೈಃ ಸಮೇತಃ ॥ ೭೧ ॥**

**ಅರ್ಥ** :- **ಸಃ ಪಾರೀಕ್ಷಿತಃ** = ಆ ಜನಮೇಜಯನು, **ಈಶೇನ** = ವೇದ ವ್ಯಾಸರಿಂದ, **ಸಮಾಹೃತಂ** = ತರಿಸಲ್ಪಟ್ಟ, **ಸ್ವತಾತಂ** = ತನ್ನ ತಂದೆಯನ್ನು, **ಪುನಃ** = ಮತ್ತೆ, **ದೃಷ್ಟ್ವಾ** = ನೋಡಿ, **ತುಷ್ಟಿಂ** = ಸಂತೋಷವನ್ನು, **ಆಪ** = ಹೊಂದಿದನು, **ತಂ** = ಆ ಪರೀಕ್ಷಿತನನ್ನು, **ಈಶವಂದ್ಯಂ** = ಬ್ರಹ್ಮಾದಿ

ವಂದ್ಯನಾದ, **ತಂ** = ಆ, **ಕೃಷ್ಣಮಪಿ ಚ** = ವೇದವ್ಯಾಸರನ್ನೂ ಕೂಡ, **ಸಂಪೂಜ್ಯ** = ಆರಾಧಿಸಿ, **ಕ್ಷಮಾಪಯಾಮಾಸ** = ಕ್ಷಮೆ ಬೇಡಿದ, **ತತ್ರತ್ಯಜನೈಃ ಸಮೇತಃ** = ಅಲ್ಲಿದ್ದ ಜನರಿಂದ ಕೂಡಿದವನಾಗಿ, **ಪುನಶ್ಚ** = ಸತ್ತ ತಂದೆಯ ನೋಡಿದ ನಂತರ, **ಭಾರತೇ** = ಮಹಾಭಾರತದಲ್ಲಿ, **ಅತೀವ** = ಬಹಳ, **ವಿಸ್ರಂಭಂ ಚ** = ವಿಶ್ವಾಸವನ್ನೂ, **ಚಕ್ರೇ** = ಮಾಡಿದನು.

**ತಾತ್ಪರ್ಯ** :- ವೇದವ್ಯಾಸರು ತನ್ನ ತಂದೆಯನ್ನು ತರಿಸಿದ್ದನ್ನು ನೋಡಿ ಜನಮೇಜಯನಿಗೆ ಬಹಳ ಸಂತೋಷವಾಯಿತು. ಪರೀಕ್ಷಿತನನ್ನು ಮತ್ತು ಬ್ರಹ್ಮಾದಿ ವಂದ್ಯರಾದ ವ್ಯಾಸರನ್ನೂ ಸೇವಿಸಿ ಕ್ಷಮೆ ಯಾಚಿಸಿದ. ಸತ್ತುಹೋದ ಪರೀಕ್ಷಿತನನ್ನು ಪುನಃ ನೋಡಿದ ನಂತರ ಮಹಾಭಾರತ ಗ್ರಂಥದಲ್ಲಿ ಬಹಳ ವಿಶ್ವಾಸ ಮಾಡಿದ.

**ಪಾರ್ಥಾಃ ಪುನಃ ಪ್ರಾಪ್ಯ ಪುರಂ ಸ್ವಕೀಯಂ**
**ಧರ್ಮೇಣ ಪೃಥ್ವೀಂ ಪರಿಪಾಲಯಂತಃ ।**
**ಭೋಗಾನರಾಗಾ ಅಜುಷಂತ ಯೋಗ್ಯಾನ್**
**ಯುಕ್ತಾ ಜಗದ್ಧಾತರಿ ವಾಸುದೇವೇ ॥ ೭೨ ॥**

**ಅರ್ಥ** :- **ಪಾರ್ಥಾಃ** = ಪಾಂಡವರು, **ಪುನಃ** = ಮತ್ತೆ, **ಸ್ವಕೀಯಂ** = ತಮ್ಮದಾದ, **ಪುರಂ** = ಪಟ್ಟಣವನ್ನು, **ಪ್ರಾಪ್ಯ** = ಹೊಂದಿ, **ಧರ್ಮೇಣ** = ಧರ್ಮದಿಂದ, **ಪೃಥ್ವೀಂ** = ಭೂಮಿಯನ್ನು, **ಪರಿಪಾಲಯಂತಃ** = ಆಳುವವರಾಗಿ, **ಜಗದ್ಧಾತರಿ** = ಜಗತ್ತಿನ ಧಾರಕನಾದ, **ವಾಸುದೇವೇ** = ಶ್ರೀಕೃಷ್ಣನಲ್ಲಿ, **ಯುಕ್ತಾಃ** = ಭಕ್ತಿಯುಕ್ತರಾಗಿ, **ಅರಾಗಾಃ** = ವಿಷಯ ಭೋಗದಲ್ಲಿ ಅನಾಸಕ್ತರಾಗಿ, **ಯೋಗ್ಯಾನ್** = ಯೋಗ್ಯವಾದ, **ಭೋಗಾನ್** = ಭೋಗಗಳನ್ನು, **ಅಜುಷಂತ** = ಅನುಭವಿಸಿದರು.

**ತಾತ್ಪರ್ಯ** :- ಪಾಂಡವರು ಮತ್ತೆ ತಮ್ಮ ಪಟ್ಟಣಕ್ಕೆ ಹೋದರು. ಹೋಗಿ ಧರ್ಮದಿಂದ ಭೂಮಿಯನ್ನಾಳುತ್ತಾ ಸರ್ವಧಾರಕನಾದ ಶ್ರೀಕೃಷ್ಣನಲ್ಲಿ ಭಕ್ತಿ ಮಾಡುತ್ತಾ ವಿಷಯ ಭೋಗದಲ್ಲಿ ಅನಾಸಕ್ತರಾಗಿ ಯೋಗ್ಯವಾದ ಭೋಗಗಳನ್ನು ಅನುಭವಿಸಿದರು.

**ವರ್ಷತ್ರಯಾಂತೇತ್ಮಸಮಾಹಿತಾಗ್ನಿಂ**
**ತ್ಯಕ್ತ್ವಾಗ್ನಿಭಿಸ್ಸೈರ್ವನಮಾಲಿಹದ್ಭಿಃ ।**
**ತೇ ಶುಶ್ರುವುರ್ಧೃತರಾಷ್ಟ್ರಂ ಸಭಾರ್ಯಂ**
**ಸಹೈವ ಕುಂತ್ಯಾ ಪರಿದಗ್ಧದೇಹಮ್ ॥ ೭೩ ॥**

**ಅರ್ಥ :- ವರ್ಷತ್ರಯಾಂತೇ** = ಮೂರು ವರ್ಷಗಳ ಕೊನೆಯಲ್ಲಿ, **ಆತ್ಮ ಸಮಾಹಿತಾಗ್ನಿಂ** = ಮೊದಲೇ ತನ್ನಲ್ಲಿ ಇರಿಸಲ್ಪಟ್ಟ ಬೆಂಕಿಯನ್ನು, **ತ್ಯಕ್ತ್ವಾ** = ಹೊರಗಿಟ್ಟು, **ವನಂ** = ಕಾಡನ್ನು, **ಆಲಿಹದ್ಭಿಃ** = ಸುಡುತ್ತಿರುವ, **ಅಗ್ನಿಭಿಃ** = ಬೆಂಕಿಗಳಿಂದ, **ಕುಂತ್ಯಾ ಸಹ** = ಕುಂತಿಯೊಡನೆ, **ಸಭಾರ್ಯಂ** = ಹೆಂಡತಿಯೊಡನೆ ಕೂಡಿದ ಧೃತರಾಷ್ಟ್ರನನ್ನು, **ಪರಿದಗ್ಧದೇಹಂ** = ಸುಡಲ್ಪಟ್ಟ ದೇಹವುಳ್ಳವನನ್ನಾಗಿ, **ತೇ** = ಆ ಪಾಂಡವರು, **ಶುಶ್ರುವುಃ** = ಕೇಳಿದರು.

**ತಾತ್ಪರ್ಯ :-** ಔಪಾಸಾಗ್ನಿಯನ್ನು ಎದೆಯಲ್ಲೇ ಇಟ್ಟುಕೊಂಡಿದ್ದ ಧೃತರಾಷ್ಟ್ರ ಮೂರು ವರ್ಷಗಳ ಕೊನೆಯಲ್ಲಿ, ಅಗ್ನಿಯನ್ನು ಹೊರಗೆ ಇಟ್ಟ. ಇದು ಕಾಡನ್ನು ಸುಡಲಾರಂಭಿಸಿತು. ಧೃತರಾಷ್ಟ್ರ ಗಾಂಧಾರೀ ಕುಂತಿಯ ರೊಂದಿಗೆ ಬೆಂಕಿಯಲ್ಲಿ ದೇಹತ್ಯಾಗ ಮಾಡಿದ್ದನ್ನು ಪಾಂಡವರ ಕೇಳಿ ತಿಳಿದರು.

**ವ್ರೀಳಾಮುಖಾ ಧ್ಯಾನಪರಾ ನಿಶಮ್ಯ**
**ಸ್ವರ್ಯಾತಮಾತ್ಮೀಯಪಿತೃವ್ಯಮಾಶು ।**
**ಸಮೇತ್ಯ ಭರ್ತ್ರಾ ಪ್ರತಿಪೂಜ್ಯಮಾನಾಂ**
**ಕುಂತೀಂ ಚ ತಪ್ತಾ ವಿದಧುಃ ಕ್ರಿಯಾಶ್ಚ ॥ ೭೪ ॥**

**ಅರ್ಥ :- ವ್ರೀಳಾಮುಖಾಃ** = ಕೆಳಗೆ ಹಾಕಿದ ಮುಖವುಳ್ಳ ಪಾಂಡವರು, **ಧ್ಯಾನಪರಂ** = ಧ್ಯಾನಪರನಾದ, **ಆತ್ಮೀಯ ಪಿತೃವ್ಯಂ** = ತಮ್ಮ ದೊಡ್ಡಪ್ಪ ನಾದ ಧೃತರಾಷ್ಟ್ರನನ್ನು, **ಸ್ವಃ** = ಸ್ವರ್ಗವನ್ನು ಕುರಿತು, **ಯಾತಂ** = ಹೋದವನನ್ನಾಗಿ, **ಕುಂತೀಂ** = ಕುಂತಿಯನ್ನು, **ಸ್ವಃ** = ಸ್ವರ್ಗವನ್ನು, **ಸಮೇತ್ಯ** = ಹೊಂದಿ, **ಭರ್ತ್ರಾ (ಸಹ) ಪ್ರತಿಪೂಜ್ಯಮಾನಾಂ** = ಗಂಡನೊಂದಿಗೆ ಪೂಜಿತಳಾಗುತ್ತಿರುವುದನ್ನು, **ನಿಶಮ್ಯ** = ಕೇಳಿ, **ತಪ್ತಾಶ್ಚ** = ದುಃಖಿತರೂ ಆಗಿ, **ಕ್ರಿಯಾಶ್ಚ** = ಕ್ರಿಯೆಗಳನ್ನೂ, **ವಿದುಧುಃ** = ಮಾಡಿದರು.

**ತಾತ್ಪರ್ಯ :-** ನಾಚಿಕೆಯಿಂದ ಮುಖ ಕೆಳಗೆ ಮಾಡಿದ ಪಾಂಡವರು ಧ್ಯಾನ ಮಾಡುತ್ತಾ ಧೃತರಾಷ್ಟ್ರ ಸ್ವರ್ಗಕ್ಕೆ ಹೋದ ಸುದ್ದಿಯನ್ನು ಕುಂತಿ ಸ್ವರ್ಗ ಪ್ರವೇಶಿಸಿ ತನ್ನ ಗಂಡನೊಡನೆ ಪೂಜಿತಳಾಗುತ್ತಿರುವುದನ್ನು ತಿಳಿದು ದುಃಖ ತಪ್ತರಾಗಿ ಮುಂದಿನ ಕ್ರಿಯೆಗಳನ್ನು ಕೈಗೊಂಡರು.

**ತೇ ವಿಷ್ಣುಭಕ್ತ್ಯಾ ಪರಿಪೂತಕರ್ಮಭಿ-**
**ರ್ಜ್ಞಾನೇನ ಚಾಂತೇ ತಮನುಸ್ಮರಂತಃ ।**
**ಪಾರ್ಥೈಃ ಸುಪುತ್ರೈಃ ಸುಕೃತೋಽರ್ಧ್ವಕರ್ಮಭಿ-**
**ರ್ವೃದ್ಧಿಂ ಸುಖಸ್ಯಾಽಪುರನಪ್ಯಯಾಂ ಶುಭಾಮ್ ॥ ೭೫ ॥**

**ಅರ್ಥ :- ತೇ** = ಆ ಕುಂತಿ ಗಾಂಧಾರಿ ಧೃತರಾಷ್ಟ್ರರು, **ವಿಷ್ಣುಭಕ್ತ್ಯಾ** = ವಿಷ್ಣು ಭಕ್ತಿಯಿಂದ, **ಪರಿಪೂತಕರ್ಮಭಿಃ** = ಪುಣ್ಯಕರ್ಮಗಳಿಂದ, **ಜ್ಞಾನೇನ ಚ** = ಜ್ಞಾನದಿಂದಲೂ, **ಅಂತೇ** = ಅಂತ್ಯಕಾಲದಲ್ಲಿ, **ತಂ** = ಆ ಪರಮಾತ್ಮನನ್ನು, **ಅನುಸ್ಮರಂತಃ** = ಸ್ಮರಿಸುವವರಾಗಿ, **ಸುಪುತ್ರೈಃ** = ಸುಪುತ್ರರಿಂದ, **ಸುಕೃತೋರ್ಧ್ವ ಕರ್ಮಭಿಃ** = ಚೆನ್ನಾಗಿ ಮಾಡಲ್ಪಟ್ಟ ಊರ್ಧ್ವ ಕರ್ಮಗಳಿಂದ, **ಸುಖಸ್ಯ** = ಮೋಕ್ಷದ, **ಅನಪ್ಯಯಾಂ** = ಶಾಶ್ವತವಾದ, **ಶುಭಾಂ ವೃದ್ಧಿಂ** = ಆನಂದಾಭಿವೃದ್ಧಿಯನ್ನು, **ಆಪುಃ** = ಹೊಂದಿದರು.

**ತಾತ್ಪರ್ಯ :-** ಕುಂತಿ ಗಾಂಧಾರೀ ಧೃತರಾಷ್ಟ್ರರ ವಿಷ್ಣುಭಕ್ತಿಯಿಂದ ಪುಣ್ಯಕರ್ಮದಿಂದ ಮತ್ತೂ ಜ್ಞಾನದಿಂದಲೂ ಅಂತ್ಯಕಾಲದಲ್ಲಿ ಪರಮಾತ್ಮನನ್ನು ಸ್ಮರಿಸಿದರು. ಪಾಂಡವರೂ ಕೂಡ ಅವರ ಉತ್ತರ ಕ್ರಿಯೆಯನ್ನು ಚೆನ್ನಾಗಿ ನಡೆಸಿದರು. ಅದರಿಂದ ಅವರು ಶಾಶ್ವತವಾದ ಆನಂದಾಭಿವೃದ್ಧಿಯನ್ನು ಹೊಂದಿದರು.

**ಗಾವದ್ಗಣಿರ್ವ್ಯಾಸಸಕಾಶಮೇತ್ಯ**
**ಶುಶ್ರೂಷಯಾ ತಸ್ಯ ಪುನರ್ನಿಜಾಂ ಗತಿಮ್ ।**
**ಪ್ರಪೇದಿವಾನ್ ಪಾಂಡುಸುತಾಶ್ಚ ಕೃಷ್ಣಂ**
**ಪ್ರತೀಕ್ಷಮಾಣಾಃ ಪೃಥಿವೀಮಶಾಸನ್ ॥ ೭೬ ॥**

**ಅರ್ಥ :- ಗಾವದ್ಗಣಿಃ** = ಸಂಜಯನು, **ವ್ಯಾಸಸಕಾಶಂ ಏತ್ಯ** = ವೇದವ್ಯಾಸರನ್ನು ಹೊಂದಿ, **ತಸ್ಯ** = ಆ ವ್ಯಾಸರ, **ಶುಶ್ರೂಷಯಾ** =

ಸೇವೆಯಿಂದ, **ಪುನಃ** = ಮತ್ತೆ, **ನಿಜಾಂ ಗತಿಂ** = ತನ್ನ ಗತಿಯನ್ನು, **ಪ್ರಪೇದಿವಾನ್** = ಹೊಂದಿದನು. **ಪಾಂಡುಸುತಾಶ್ಚ** = ಪಾಂಡವರಾದರೂ, **ಕೃಷ್ಣಂ ಪ್ರತೀಕ್ಷಮಾಣಾಃ** = ಶ್ರೀಕೃಷ್ಣನ ಪರಂಧಾಮ ಪ್ರವೇಶವನ್ನು ಎದುರು ನೋಡುವವರಾಗಿ, **ಪೃಥಿವೀಂ** = ಭೂಮಿಯನ್ನು, **ಅಶಾಸನ್** = ಆಳಿದರು.

**ತಾತ್ಪರ್ಯ** :- ಸಂಜಯ ವೇದವ್ಯಾಸರ ಹತ್ತಿರ ಹೋಗಿ ಅವರ ಸೇವೆ ಮಾಡಿ ನಿಜಗತಿಯನ್ನು ಪಡೆದನು. ಪಾಂಡವರು ಕೃಷ್ಣ ಪರಂಧಾಮಕ್ಕೆ ಹೋಗುವುದನ್ನು ಕಾಯುತ್ತಾ ಭೂಮಿಯನ್ನು ಆಳಿದರು.

**ಅಷ್ಟಾದಶಾಬ್ದಾಃ ಪೃಥಿವೀಂ ಸಮಸ್ತಾಂ**
**ಪ್ರಶಾಸತಾಮೇವಮಗುರ್ಮಹಾತ್ಮನಾಮ್ ।**
**ಅರಿಕ್ತಧರ್ಮಾರ್ಥಸುಖೋತ್ತಮಾನಾ-**
**ಮನುಜ್ಝಿತಾನಂತಪದಸ್ಮೃತೀನಾಮ್ ॥ ೭೭ ॥**

**ಅರ್ಥ** :- ಏವಂ = ಈ ರೀತಿಯಾಗಿ, **ಅರಿಕ್ತಧರ್ಮಾರ್ಥ ಸುಖೋತ್ತಮಾನಾಂ** = ಪರಿಪೂರ್ಣವಾದ ಧರ್ಮ ಅರ್ಥ ಮೋಕ್ಷಗಳಿಗೆ ಭಾಜನರಾದ, **ಅನುಜ್ಝಿತಾನಂತಪದಸ್ಮೃತೀನಾಂ** = ಬಿಡದೆ ಪರಮಾತ್ಮನ ಪಾದದ ಸ್ಮರಣೆಯುಳ್ಳ **ಪೃಥಿವೀಂ** = ಭೂಮಿಯನ್ನು, **ಪ್ರಶಾಸತಾಂ** = ಆಳುತ್ತಿದ್ದ, **ಮಹಾತ್ಮನಾಂ** = ಮಹಾತ್ಮರಾದ ಪಾಂಡವರ, **ಅಷ್ಟಾದಶಾಬ್ದಾಃ** = ಹದಿನೆಂಟು ವರ್ಷಗಳು, **ಅಗುಃ** = ಕಳೆದವು.

**ತಾತ್ಪರ್ಯ** :- ಪಾಂಡವರು ಪರಮಾತ್ಮನ ಪಾದದ ಸ್ಮರಣೆ ಎಡಬಿಡದೆ ಮಾಡುತ್ತಾ ಸಂಪೂರ್ಣವಾದ ಧರ್ಮಾರ್ಥ ಮೋಕ್ಷಗಳಿಗೆ ಭಾಜನರಾಗಿ ಸಮಸ್ತ ಭೂಮಂಡಲವನ್ನು ಆಳುತ್ತಾ ಹದಿನೆಂಟು ವರ್ಷಗಳನ್ನು ಕಳೆದರು.

ಇತಿ ಶ್ರೀಮದಾನಂದತೀರ್ಥಭಗವತ್ಪಾದವಿರಚಿತೇ
ಶ್ರೀಮಹಾಭಾರತತಾತ್ಪರ್ಯನಿರ್ಣಯೇ ಧೃತರಾಷ್ಟ್ರಾದಿಸ್ವರ್ಗಪ್ರಾಪ್ತಿರ್ನಾಮ
ಏಕತ್ರಿಂಶೋऽಧ್ಯಾಯಃ

## ಅಧ್ಯಾಯ - 32

(ಶ್ರೀಮನ್ನಾರಾಯಣಾವತಾರಚರಿತಮ್)

(ಕುರುಕ್ಷೇತ್ರದಲ್ಲಿ ಶ್ರೀಕೃಷ್ಣ ಮಾಡಿದ ದ್ವಾದಶಾಬ್ದಸತ್ರ, ಯಾದವರ ನಿರ್ಯಾಣ, ಶ್ರೀಕೃಷ್ಣಪರಂಧಾಮಗಮನ, ಪಾಂಡವರ ಮಹಾಪ್ರಸ್ಥಾನ, ಯುಧಿಷ್ಠಿರನ ಸ್ವರ್ಗಾರೋಹಣ, ದೇವದಾನವರ ಮೂಲರೂಪಪ್ರಾಪ್ತಿ, ಬುದ್ಧಾವತಾರ, ಮಧ್ವಾವತಾರ, ದುರ್ಗಾವತಾರ, ಕಲ್ಕ್ಯವತಾರ, ಗ್ರಂಥ ಪರಿಸಮಾಪ್ತಿ)

### ಕುರುಕ್ಷೇತ್ರದಲ್ಲಿ ಕೃಷ್ಣ ಮಾಡಿದ ಸತ್ರಯಾಗ

**ತತಃ ಕುರುಕ್ಷೇತ್ರಮವಾಪ್ಯ ಕೃಷ್ಣೋ**
**ದೀಕ್ಷಾಂ ಪ್ರಪೇದೇ ದ್ವಿಷಡಬ್ದಸತ್ರೇ ।**
**ಸ ಏವ ಚ ವ್ಯಾಸಭೃಗೂದ್ವಹಾತ್ಮಾ**
**ಚಕ್ರೇಽತ್ರ ಸಾದಸ್ಯಮಜೋಽಪ್ರಮೇಯಃ ॥ ೧ ॥**

**ತತಃ ಕುರುಕ್ಷೇತ್ರಂ ಅವಾಪ್ಯ ಕೃಷ್ಣಃ ದೀಕ್ಷಾಂ ಪ್ರಪೇದೇ ದ್ವಿಷಡಬ್ದಸತ್ರೇ । ಸಃ ಏವ ಚ ವ್ಯಾಸಭೃಗೂದ್ವಹಾತ್ಮಾ ಚಕ್ರೇ ಅತ್ರ ಸಾದಸ್ಯಂ ಅಜಃ ಅಪ್ರಮೇಯಃ ॥ ೧ ॥**

**ಅರ್ಥ** :– **ತತಃ** = ಬಳಿಕ **ಕೃಷ್ಣಃ** = ಕೃಷ್ಣನು **ಕುರುಕ್ಷೇತ್ರಂ** = ಕುರುಕ್ಷೇತ್ರವನ್ನು **ಅವಾಪ್ಯ** = ಹೊಂದಿ **ದ್ವಿಷಡಬ್ದಸತ್ರೇ** = ಹನ್ನೆರಡು ವರ್ಷಗಳ ಯಜ್ಞದಲ್ಲಿ **ದೀಕ್ಷಾಂ** = ದೀಕ್ಷೆಯನ್ನು **ಪ್ರಪೇದೇ** = ಕೈಗೊಂಡನು. **ಚ** = ಮತ್ತು **ಅಜಃ** = ಅಜನೂ **ಅಪ್ರಮೇಯಃ** = ಯಾರಿಂದಲೂ ಸಾಕಲ್ಯೇನ ತಿಳಿಯಲಾಗದವನೂ **ವ್ಯಾಸಭೃಗೂದ್ವಹಾತ್ಮಾ** = ವೇದವ್ಯಾಸ–ಪರಶುರಾಮರೂಪನಾದ **ಸಃ ಏವ** = ಅವನೇ **ಅತ್ರ** = ಈ ಯಜ್ಞದಲ್ಲಿ **ಸಾದಸ್ಯಂ** = ಮಂತ್ರಪೂರ್ವಕವಿಧಿಯನ್ನು ಹೇಳುವ ಕೆಲಸವನ್ನು **ಚಕ್ರೇ** = ಮಾಡಿದನು.

**ತಾತ್ಪರ್ಯ** :- ಬಳಿಕ ಶ್ರೀಕೃಷ್ಣ ಕುರುಕ್ಷೇತ್ರಕ್ಕೆ ತೆರಳಿ ಅಲ್ಲಿ ಹನ್ನೆರಡು ವರ್ಷಗಳ ಯಜ್ಞದಲ್ಲಿ ದೀಕ್ಷೆ ಕೈಗೊಂಡ. ಅಪ್ರಮೇಯನಾದ ಅವನೇ ತನ್ನ ವೇದವ್ಯಾಸ ಪರಶುರಾಮ ರೂಪಗಳಿಂದ ಸದಸ್ಯತ್ವ ಕಾರ್ಯವನ್ನೂ ನಿರ್ವಹಿಸಿದ.

### ದೇವತೆಗಳು ಮುನಿಗಳು ಮಾಡಿದ ಶ್ರೀಕೃಷ್ಣಸೇವೆ

**ತತ್ರರ್ತ್ವಿಜೋ ದಕ್ಷಭೃಗುಪ್ರಧಾನಾಃ**
**ಪಾರ್ಥಾ ಯದೂನಾಂ ಪ್ರವರೈಃ ಸಮೇತಾಃ ।**
**ಬ್ರಹ್ಮೇಶಶಕ್ರಪ್ರಮುಖಾಃ ಸುರಾಶ್ಚ**
**ಚಕ್ರುಃ ಸುಸಾಚಿವ್ಯಮನಂತದಾಸಾಃ ॥ ೨ ॥**

ತತ್ರ ಋತ್ವಿಜಃ ದಕ್ಷಭೃಗುಪ್ರಧಾನಾಃ ಪಾರ್ಥಾಃ ಯದೂನಾಂ ಪ್ರವರೈಃ ಸಮೇತಾಃ । ಬ್ರಹ್ಮೇಶಶಕ್ರಪ್ರಮುಖಾಃ ಸುರಾಃ ಚ ಚಕ್ರುಃ ಸುಸಾಚಿವ್ಯಂ ಅನಂತದಾಸಾಃ ॥ ೨ ॥

**ಅರ್ಥ** :– **ತತ್ರ** = ಆ ಯಜ್ಞದಲ್ಲಿ **ಅನಂತದಾಸಾಃ** = ಭಗವಂತನ ಭಕ್ತರಾದ **ದಕ್ಷಭೃಗುಪ್ರಧಾನಾಃ** = ದಕ್ಷ ಭೃಗು ಮೊದಲಾದ **ಋತ್ವಿಜಃ** = ಋತ್ವಿಕ್‌ಗಳು, **ಯದೂನಾಂ** = ಯಾದವರ **ಪ್ರವರೈಃ** = ಶ್ರೇಷ್ಠರಿಂದ **ಸಮೇತಾಃ** = ಕೂಡಿದ **ಪಾರ್ಥಾಃ** = ಪಾಂಡವರು, **ಚ** = ಮತ್ತು **ಬ್ರಹ್ಮೇಶಶಕ್ರಪ್ರಮುಖಾಃ** = ಬ್ರಹ್ಮ ರುದ್ರ ಇಂದ್ರ ಮೊದಲಾದ **ಸುರಾಃ** = ದೇವತೆಗಳು **ಸುಸಾಚಿವ್ಯಂ** = ಸೇವೆಯನ್ನು **ಚಕ್ರುಃ** = ಮಾಡಿದರು.

**ತಾತ್ಪರ್ಯ** :- ಆ ಯಜ್ಞದಲ್ಲಿ ಶ್ರೀಹರಿಭಕ್ತರಾದ ದಕ್ಷ, ಭೃಗು ಮೊದಲಾದ ಋತ್ವಿಕ್‌ಗಳು, ಪಾಂಡವರು, ಯಾದವಶ್ರೇಷ್ಠರು, ಬ್ರಹ್ಮ, ರುದ್ರ, ಇಂದ್ರ, ಮೊದಲಾದ ದೇವತೆಗಳು ಅನೇಕ ಬಗೆಯಲ್ಲಿ ಸೇವಕರಾಗಿ ಪಾಲ್ಗೊಂಡರು.

### ಜಗತ್ತಿಗೇ ಮುದ ನೀಡಿದ ಯಾಗ

**ಸರ್ವೇ ಚ ಜೀವಾ ವಸುಧಾತಲಸ್ಥಾ**
**ಯೇಽನ್ಯೇಽಂತರಿಕ್ಷದ್ಯುಮುಖೋತ್ತರೇಷು ।**
**ವಸಂತಿ ನಾರಾಯಣಪಾದಸಂಶ್ರಯಾ-**
**ಸ್ತೇ ಚಾತ್ರ ಸರ್ವೇ ಮುಮುದುಃ ಸನಾಗಾಃ ॥ ೩ ॥**

**ಸರ್ವೇ ಚ ಜೀವಾಃ ವಸುಧಾತಲಸ್ಥಾಃ ಯೇ ಅನ್ಯೇ ಅಂತರಿಕ್ಷದ್ಯುಮುಖೋತ್ತರೇಷು । ವಸಂತಿ ನಾರಾಯಣಪಾದಸಂಶ್ರಯಾಃ ತೇ ಚ ಅತ್ರ ಸರ್ವೇ ಮುಮುದುಃ ಸನಾಗಾಃ ॥ ೩ ॥**

**ಅರ್ಥ** :- **ವಸುಧಾತಲಸ್ಥಾಃ** = ಭೂಮಿಯಲ್ಲಿ ನೆಲೆಸಿರುವ **ಸರ್ವೇ** = ಎಲ್ಲ **ಜೀವಾಃ ಚ** = ಜೀವರೂ, **ಅನ್ಯೇ** = ಇತರ **ಯೇ** = ಯಾರು **ಅಂತರಿಕ್ಷದ್ಯುಮುಖೋತ್ತರೇಷು** = ಅಂತರಿಕ್ಷ, ದ್ಯು ಮೊದಲಾದ ಮೇಲಿನ ಲೋಕಗಳಲ್ಲಿ **ವಸಂತಿ** = ನೆಲೆಸಿರುವರೋ **ಚ** = ಮತ್ತು **ಸನಾಗಾಃ** = ನಾಗಗಳ ಸಮೇತರಾದ **ನಾರಾಯಣಪಾದಸಂಶ್ರಯಾಃ** = ನಾರಾಯಣನ ಪಾದಗಳನ್ನು ಚೆನ್ನಾಗಿ ಆಶ್ರಯಿಸುರುವವರು **ತೇ ಸರ್ವೇ** = ಅವರೆಲ್ಲರೂ **ಅತ್ರ** = ಈ ಯಜ್ಞದಲ್ಲಿ **ಮುಮುದುಃ** = ಸಂತೋಷಿಸಿದರು.

**ತಾತ್ಪರ್ಯ** :- ಭೂಮಿಯ ಮೇಲಿನ ಸಕಲಜೀವಿಗಳು ಅದರಂತೆಯೇ ಅಂತರಿಕ್ಷ, ದ್ಯು ಮೊದಲಾದ ಮೇಲಿನ ಲೋಕಗಳಲ್ಲಿ ನೆಲೆಸಿರುವವರು, ಪಾತಾಳ ಲೋಕವಾಸಿಗಳಾದ ನಾಗರು ಮೊದಲಾಗಿ ಶ್ರೀಹರಿಯ ಸಮಸ್ತ ಪಾದಸೇವಕರು ಅದರಲ್ಲಿ ಪಾಲ್ಗೊಂಡು ಸಂತೋಷಿಸಿದರು.

### ಜಿಜ್ಞಾಸುಗಳಿಗೆ ತತ್ತ್ವನಿರ್ಣಯ

**ಸುನಿರ್ಣಯಸ್ತತ್ತ್ವವಿನಿರ್ಣಯಾರ್ಥಿನಾಂ**
**ತತ್ತ್ವಸ್ಯ ಚಾಭೂದಿಹ ವಾದಶೀಲಿನಾಮ್ ।**
**ಮಿಥೋ ವಿವಾದಾತ್ ಸುರಭೂಸುರಾಣಾಂ**
**ವಾಕ್ಯಾದ್ಧರೇರ್ವ್ಯಾಸಭೃಗೂದ್ವಹಾತ್ಮನಃ ॥ ೪ ॥**

ಸುನಿರ್ಣಯಃ ತತ್ತ್ವವಿನಿರ್ಣಯಾರ್ಥಿನಾಂ ತತ್ತ್ವಸ್ಯ ಚ ಅಭೂತ್ ಇಹ ವಾದಶೀಲಿನಾಮ್ । ಮಿಥಃ ವಿವಾದಾತ್ ಸುರಭೂಸುರಾಣಾಂ ವಾಕ್ಯಾತ್ ಹರೇಃ ವ್ಯಾಸಭೃಗೂದ್ವಹಾತ್ಮನಃ ॥ ೪ ॥

**ಅರ್ಥ** :- **ಸುರಭೂಸುರಾಣಾಂ** = ದೇವತೆಗಳು ಹಾಗೂ ಬ್ರಾಹ್ಮಣರ ನಡುವೆ **ಮಿಥಃ** = ಪರಸ್ಪರ **ವಿವಾದಾತ್** = ವಾದದ ನಿಮಿತ್ತದಿಂದ, **ವ್ಯಾಸಭೃಗೂದ್ವಹಾತ್ಮನಃ** = ವ್ಯಾಸ-ಪರಶುರಾಮರೂಪದ ಶ್ರೀಹರಿಯ

**ವಾಕ್ಯಾತ್** = ಮಾತಿನಿಂದಲೂ **ವಾದಶೀಲಿನಾಂ** = ತತ್ತ್ವನಿರ್ಣಯ ಮಾಡುವ ಸ್ವಭಾವದ **ವಿನಿರ್ಣಯಾರ್ಥಿನಾಂ** = ವಿಶೇಷವಾದ ತತ್ತ್ವ ನಿರ್ಣಯವನ್ನು ಬಯಸುವವರಿಗೆ **ತತ್ತ್ವಸ್ಯ** = ತತ್ತ್ವದ **ಸುನಿರ್ಣಯಃ ಚ** = ಉತ್ತಮ ತತ್ತ್ವನಿರ್ಣಯವು **ಅಭೂತ್** = ಆಯಿತು.

**ತಾತ್ಪರ್ಯ** :- ದೇವತೆಗಳೊಳಗೂ, ಮುನಿಗಳೊಳಗೂ ಪರಸ್ಪರ ನಡೆದ ತತ್ವಗೋಷ್ಠಿಗಳಿಂದಲೂ, ವ್ಯಾಸ-ಪರಶುರಾಮರೂಪದ ಶ್ರೀಹರಿಯ ಮಾತುಗಳಿಂದಲೂ, ವಾದಶೀಲರಾದ ತತ್ವಜಿಜ್ಞಾಸುಗಳಿಗೆ ಆ ಯಜ್ಞದಲ್ಲಿ ಉತ್ತಮ ತತ್ವನಿರ್ಣಯ ಉಂಟಾಯಿತು.

### ಸಕಲ ಪುರುಷಾರ್ಥಗಳ ಪ್ರಾಪ್ತಿ

**ಧರ್ಮಾರ್ಥಕಾಮಾನಖಿಲಾನವಾಪು-**
**ಸ್ತದರ್ಥಿನೋ ಮುಕ್ತಿಮಪೀಹ ಕೃಷ್ಣಾತ್ ।**
**ಯಥೇಷ್ಟಪಾನಾಶನವಾಸಸೋ ಜನಾ**
**ವಿಚೇರುರತ್ರಾಮರಮಾನವಾದಯಃ ॥ ೫ ॥**

**ಧರ್ಮಾರ್ಥಕಾಮಾನ್ ಅಖಿಲಾನ್ ಅವಾಪುಃ ತದರ್ಥಿನಃ ಮುಕ್ತಿಂ ಅಪಿ ಇಹ ಕೃಷ್ಣಾತ್ । ಯಥೇಷ್ಟಪಾನಾಶನವಾಸಸಃ ಜನಾಃ ವಿಚೇರುಃ ಅತ್ರ ಅಮರಮಾನವಾದಯಃ ॥ ೫ ॥**

**ಅರ್ಥ** :- **ಇಹ** = ಈ ಯಜ್ಞದಲ್ಲಿ **ತದರ್ಥಿನಃ** = ಆ ಧರ್ಮಾರ್ಥಗಳನ್ನು ಬಯಸುವವರು **ಅಖಿಲಾನ್** = ಎಲ್ಲ **ಧರ್ಮಾರ್ಥಕಾಮಾನ್** = ಧರ್ಮ-ಅರ್ಥ-ಕಾಮಗಳನ್ನು **ಮುಕ್ತಿಂ ಅಪಿ** = ಮುಕ್ತಿಯನ್ನು ಸಹ **ಕೃಷ್ಣಾತ್** = ಕೃಷ್ಣನಿಂದ **ಅವಾಪುಃ** = ಪಡೆದರು. **ಅತ್ರ** = ಈ ಯಜ್ಞದಲ್ಲಿ **ಯಥೇಷ್ಟಪಾನಾಸನವಾಸಸಃ** = ಇಷ್ಟಪಟ್ಟಷ್ಟು ಪಾನ ಅನ್ನ ವಸ್ತ್ರಗಳನ್ನು **ಜನಾಃ** = ಜನರು **ಅವಾಪುಃ** = ಪಡೆದರು, **ಅಮಾಮಾನವಾದಯಃ** = ದೇವತೆಗಳು ಮಾನವರು **ವಿಚೇರುಃ** = ಓಡಾಡಿದರು.

**ತಾತ್ಪರ್ಯ** :- ಧರ್ಮ, ಅರ್ಥ, ಕಾಮಗಳನ್ನೆಲ್ಲ ಅದನ್ನು ಬಯಸುವ ಜನ ಕೃಷ್ಣನಿಂದ ಪಡೆದುಕೊಂಡರು. ಮೋಕ್ಷೇಚ್ಛುಗಳಿಗೆ ಮೋಕ್ಷವೂ ಅಲ್ಲಿ ಕೃಷ್ಣನಿಂದ ಲಭಿಸಿತು. ಸುರರು, ಮಾನವರು ಮೊದಲಾದ ಸಕಲಜನರು

ಅವರಿಗೆ ಬೇಕೆನ್ನಿಸುವಷ್ಟು ಅನ್ನ, ಪಾನ, ವಸ್ತ್ರಗಳನ್ನು ಹೊಂದಿದವರಾಗಿ ಆ ಯಜ್ಞದಲ್ಲಿ ಓಡಾಡಿದರು.

ವೈಕುಂಠದ ವಾತಾವರಣ

**ಕ್ಷೇತ್ರಂ ತದಾಸೀದ್ಧರಿಲೋಕಸಮ್ಮಿತಂ**
**ಯದೀಯುರತ್ರಾಖಿಲಸಜ್ಜನಾ ಯುತಿಮ್ ।**
**ನಾನಾಪ್ತಕಾಮಾಶ್ಚ ತತೋ ಬಭೂವು-**
**ರ್ನಿರ್ಯತ್ನದೃಶ್ಯಶ್ಚ ಯತೋಽತ್ರ ಕೇಶವಃ ॥ ೬ ॥**

**ಕ್ಷೇತ್ರಂ ತದಾ ಆಸೀತ್ ಹರಿಲೋಕಸಮ್ಮಿತಂ ಯತ್ ಈಯುಃ ಅತ್ರ ಅಖಿಲಸಜ್ಜನಾಃ ಯುತಿಮ್ । ನ ಅನಾಪ್ತಕಾಮಾಃ ಚ ತತಃ ಬಭೂವುಃ ನಿರ್ಯತ್ನದೃಶ್ಯಃ ಚ ಯತಃ ಅತ್ರ ಕೇಶವಃ ॥ ೬ ॥**

**ಅರ್ಥ** :- **ತದಾ** = ಆಗ **ಕ್ಷೇತ್ರಂ** = ಕುರುಕ್ಷೇತ್ರವು **ಹರಿಲೋಕಸಮ್ಮಿತಂ** = ವೈಕುಂಠಲೋಕಕ್ಕೆ ಸಮನಾದುದಾಗಿ **ಆಸೀತ್** = ಆಗಿತ್ತು. **ಯತ್** = ಯಾವ ಕಾರಣದಿಂದ **ಅತ್ರ** = ಇಲ್ಲಿ **ಅಖಿಲಸಜ್ಜನಾಃ** = ಎಲ್ಲ ಸಜ್ಜನರೂ **ಯುತಿಂ** = ಸಂಯೋಗವನ್ನು **ಈಯುಃ** = ಹೊಂದಿದರೋ, **ಅನಾಪ್ತಕಾಮಾಃ** = ಈಡೇರದ ಬಯಕೆಯವರು **ನ ಬಭೂವುಃ** = ಆಗಲಿಲ್ಲವೋ, **ಚ** = ಮತ್ತು **ಯತಃ** = ಯಾವ ಕಾರಣದಿಂದ **ಕೇಶವಃ** = ಕೃಷ್ಣನು **ನಿರ್ಯತ್ನದೃಶ್ಯಃ** = ಅಪ್ರಯಾಸವಾಗಿ ಕಾಣಿಸಿಕೊಳ್ಳುತ್ತಿದ್ದನೋ **(ತತಃ)** = ಆದ್ದರಿಂದ **(ಹರಿಲೋಕಸಮ್ಮಿತಂ ಆಸೀತ್)** = ವೈಕುಂಠಕ್ಕೆ ಸಮನಾದುದಾಗಿ ಆಗಿತ್ತು.

**ತಾತ್ಪರ್ಯ** :- ಕುರುಕ್ಷೇತ್ರ ಆಗ ವೈಕುಂಠಲೋಕಕ್ಕೆ ಸದೃಶವಾಗಿತ್ತು. ಏಕೆಂದರೆ ಅಲ್ಲಿ ಸಕಲಸಜ್ಜನರು ಒಂದೆಡೆ ನೆರೆದಿದ್ದರು. ಅವರಲ್ಲಿ ತಮ್ಮ ಬಯಕೆಗಳನ್ನು ಈಡೇರಿಸಿಕೊಳ್ಳದಿದ್ದವರೇ ಇರಲಿಲ್ಲ ; ಮತ್ತು ಅಲ್ಲಿ ಬ್ರಹ್ಮರುದ್ರಾದಿ ಪ್ರವರ್ತಕನಾದ ಶ್ರೀಕೃಷ್ಣ ಪ್ರಯತ್ನವಿಲ್ಲದೇ ಪ್ರತ್ಯಕ್ಷ ಕಾಣಿಸಿಕೊಳ್ಳುತ್ತಿದ್ದ.

ಸತ್ರಯಾಗದ ಪರಿಸಮಾಪ್ತಿ

**ದ್ವಾದಶಾಬ್ದಂ ಮಹಾಸತ್ರಮೇವಮೇತಾದೃಶಂ ಹರಿಃ ।**
**ಸಮಾಪ್ಯಾವಭೃಥಸ್ನಾತಃ ಪೂಜಯಿತ್ವಾಽಖಿಲಾನ್ ಜನಾನ್ ।**
**ಅನುಜಜ್ಞೇ ಕ್ರಮೇಣೈವ ವತ್ಸರೇಣ ಸಮಾಗತಾನ್ ॥ ೭ ॥**

ದ್ವಾದಶಾಬ್ದಂ ಮಹಾಸತ್ರಂ ಏವಂ ಏತಾದೃಶಂ ಹರಿಃ । ಸಮಾಪ್ಯ ಅವಭೃಥಸ್ನಾತಃ ಪೂಜಯಿತ್ವಾ ಅಖಿಲಾನ್ ಜನಾನ್ । ಅನುಜಜ್ಞೇ ಕ್ರಮೇಣ ಏವ ವತ್ಸರೇಣ ಸಮಾಗತಾನ್ ॥ ೭ ॥

**ಅರ್ಥ** :- **ಏವಂ** = ಹೀಗೆ **ಹರಿಃ** = ಕೃಷ್ಣನು **ದ್ವಾದಶಾಬ್ದಂ** = ಹನ್ನೆರಡು ವರ್ಷ **ಏತಾದೃಶಂ** = ಇಂತಹ **ಮಹಾಸತ್ರಂ** = ಮಹಾ ಯಾಗವನ್ನು **ಸಮಾಪ್ಯ** = ಪೂರೈಸಿ, **ಅವಭೃಥಸ್ನಾತಃ (ಸನ್)** = ಅವಭೃಥಸ್ನಾನವನ್ನು ಮಾಡಿದವನಾಗಿ **ಅಖಿಲಾನ್** = ಎಲ್ಲ **ಜನಾನ್** = ಜನರನ್ನು **ಪೂಜಯಿತ್ವಾ** = ಸತ್ಕರಿಸಿ, **ಸಮಾಗತಾನ್** = ಆಗಮಿಸಿದ್ದವರನ್ನು **ಕ್ರಮೇಣ ಏವ** = ಕ್ರಮವಾಗಿಯೇ **ವತ್ಸರೇಣ** = ಒಂದು ವರ್ಷದಲ್ಲಿ **ಅನುಜಜ್ಞೇ** = ಕಳುಹಿಸಿಕೊಟ್ಟನು.

**ತಾತ್ಪರ್ಯ** :- ಹೀಗೆ ಶ್ರೀಕೃಷ್ಣನು ಹನ್ನೆರಡು ವರ್ಷಗಳ ಕಾಲ ಅಂತಹ ಮಹಾಯಜ್ಞವನ್ನು ಮಾಡಿ ಪೂರೈಸಿ ಅವಭೃಥಸ್ನಾನ ಮಾಡಿ, ಅಲ್ಲಿಗೆ ಬಂದಿದ್ದ ಸಕಲಸಜ್ಜನರನ್ನೂ ಸತ್ಕರಿಸಿ, ಕ್ರಮವಾಗಿ ಒಂದು ವರ್ಷದಲ್ಲಿ ಬೀಳ್ಕೊಟ್ಟ.

### ಯಾದವರಿಗೆ ವಿಪ್ರಶಾಪ - ಉದ್ಧವನಿಗೆ ತತ್ತ್ವೋಪದೇಶ

**ಸ್ವಕುಲಂ ಸಂಜಿಹೀರ್ಷುಃ ಸ ವಿಪ್ರಶಾಪಮಜೀಜನತ್ ।**
**ಉಪದಿಶ್ಯ ಪರಂ ಜ್ಞಾನಮುದ್ಧವಾಯಾಮುಮಾಶ್ರಮಮ್ ॥ ೮ ॥**

ಸ್ವಕುಲಂ ಸಂಜಿಹೀರ್ಷುಃ ಸಃ ವಿಪ್ರಶಾಪಂ ಅಜೀಜನತ್ । ಉಪದಿಶ್ಯ ಪರಂ ಜ್ಞಾನಂ ಉದ್ಧವಾಯ ಅಮುಂ ಆಶ್ರಮಮ್ ॥ ೮ ॥

**ಬದರ್ಯಾಖ್ಯಂ ಪ್ರಾಪಯಿತ್ವಾ ಸಪ್ತಮಾಬ್ದಂ ಶತೋತ್ತರಮ್ ।**
**ಪ್ರತೀಕ್ಷನ್ ಪಾಲಯಾಮಾಸ ಪಾರ್ಥೈಃ ಸಹ ಭುವಂ ಪ್ರಭುಃ ॥ ೯ ॥**

ಬದರ್ಯಾಖ್ಯಂ ಪ್ರಾಪಯಿತ್ವಾ ಸಪ್ತಮಾಬ್ದಂ ಶತೋತ್ತರಮ್ । ಪ್ರತೀಕ್ಷನ್ ಪಾಲಯಾಮಾಸ ಪಾರ್ಥೈಃ ಸಹ ಭುವಂ ಪ್ರಭುಃ ॥ ೯ ॥

**ಅರ್ಥ** :- **ಸ್ವಕುಲಂ** = ತನ್ನ ಕುಲವನ್ನು **ಸಂಜಿಹೀರ್ಷುಃ** = ಉಪಸಂಹಾರಗೊಳಿಸಲು ಬಯಸಿದ **ಸಃ** = ಆ ಕೃಷ್ಣನು **ವಿಪ್ರಶಾಪಂ** = ಬ್ರಾಹ್ಮಣಶಾಪವನ್ನು **ಅಜೀಜನತ್** = ಹುಟ್ಟಿಸಿದನು. **ಪ್ರಭುಃ** =

ಸಮರ್ಥನಾದ ಕೃಷ್ಣನು **ಉದ್ಧವಾಯ** = ಉದ್ಧವನಿಗೆ **ಪರಂ** = ಉತ್ತಮವಾದ **ಜ್ಞಾನಂ** = ಜ್ಞಾನವನ್ನು **ಉಪದಿಶ್ಯ** = ಉಪದೇಶಿಸಿ, **ಅಮುಂ** = ಅವನನ್ನು **ಬದರ್ಯಾಖ್ಯಂ** = ಬದರೀ ಎಂಬ ಹೆಸರಿನ **ಆಶ್ರಮಂ** = ಆಶ್ರಮವನ್ನು ಕುರಿತು **ಪ್ರಾಪಯಿತ್ವಾ** = ಕಳುಹಿಸಿಕೊಟ್ಟು, **ಶತಾತ್** = ನೂರಕ್ಕಿಂತ **ಉತ್ತರಂ** = ಅಧಿಕವಾದ **ಸಪ್ತಮಾಬ್ದಂ** = ಏಳನೆಯ ವರ್ಷವನ್ನು **ಪ್ರತೀಕ್ಷನ್** **(ಸನ್)** = ನಿರೀಕ್ಷಿಸುವವನಾಗಿ **ಪಾರ್ಥೈಃ ಸಹ** = ಪಾಂಡವರಿಂದ ಕೂಡಿಕೊಂಡು **ಭುವಂ** = ಭೂಮಿಯನ್ನು **ಪಾಲಯಾಮಾಸ** = ಪಾಲಿಸಿದ.

**ತಾತ್ಪರ್ಯ** :- ಕೃಷ್ಣ ತನ್ನ ಯದುಕುಲವನ್ನು ಉಪಸಂಹರಿಸ ಬಯಸಿದವನಾಗಿ ಬ್ರಾಹ್ಮಣಶಾಪವನ್ನು ಉಂಟುಮಾಡಿದ. ಉತ್ತಮಜ್ಞಾನವನ್ನು ಉದ್ಧವನಿಗೆ ಉಪದೇಶಿಸಿ, ಅವನನ್ನು ಬದರಿಕಾಶ್ರಮಕ್ಕೆ ಕಳುಹಿಸಿ, ನೂರ ಏಳನೆಯ ವರ್ಷವನ್ನು ನಿರೀಕ್ಷಿಸುತ್ತಾ ಪಾಂಡವರೊಂದಿಗೆ ಭೂಮಿಯನ್ನು ಪಾಲಿಸತೊಡಗಿದ.

### ಕೃತಯುಗವನ್ನು ಮೀರಿಸಿದ ಕಲಿಯುಗ

**ಸಮಾರಬ್ಧಂ ಕಲಿಯುಗಂ ಯದಾ ದುರ್ಯೋಧನೋಽಪತತ್ ।**
**ಷಟ್ತ್ರಿಂಶಾಬ್ದಂ ಪುನಃ ಕೃಷ್ಣಃ ಕೃತಮೇವಾನ್ವವರ್ತಯತ್ ॥ ೧೦ ॥**

**ಸಮಾರಬ್ಧಂ ಕಲಿಯುಗಂ ಯದಾ ದುರ್ಯೋಧನಃ ಅಪತತ್ । ಷಟ್ತ್ರಿಂಶಾಬ್ದಂ ಪುನಃ ಕೃಷ್ಣಃ ಕೃತಂ ಏವ ಅನ್ವವರ್ತಯತ್ ॥ ೧೦ ॥**

**ಅರ್ಥ** :- **ಯದಾ** = ಯಾವಾಗ **ದುರ್ಯೋಧನಃ** = ದುರ್ಯೋಧನನು **ಅಪತತ್** = ಬಿದ್ದನೋ, **(ತದಾ)** = ಆಗ **ಕಲಿಯುಗಂ** = ಕಲಿಯುಗವು **ಸಮಾರಬ್ಧಂ** = ಪ್ರಾರಂಭವಾದುದು **(ಅಭೂತ್)** = ಆಯಿತು. **ಕೃಷ್ಣಃ** = ಕೃಷ್ಣನು **ಪುನಃ** = ಪುನಃ **ಷಟ್ತ್ರಿಂಶಾಬ್ದಂ** = ಮೂವತ್ತಾರು ವರ್ಷವನ್ನು **ಕೃತಂ ಏವ** = ಕೃತ(ಯುಗ)ವನ್ನಾಗಿಯೇ **ಅನ್ವವರ್ತಯತ್** = ಪ್ರವರ್ತಿಸಿದನು.

**ತಾತ್ಪರ್ಯ** :- ಯಾವಾಗ ದುರ್ಯೋಧನ ಬಿದ್ದನೋ ಆಗಲೇ ಕಲಿಯುಗ ಪ್ರಾರಂಭವಾಯಿತು. ಕೃಷ್ಣ ಪುನಃ ಮೂವತ್ತಾರು ವರ್ಷಗಳ ಕಾಲ ಕೃತಯುಗವನ್ನೇ ಪ್ರವರ್ತಿಸಿದ.

**ಕೃತಾದಪಿ ವಿಶೇಷೋಽಯಂ ಯತ್ಪುಣ್ಯಸ್ಯಾಧಿಕಂ ಫಲಮ್ ।**
**ಅಲ್ಪಮೇವ ಚ ಪಾಪಸ್ಯ ಕಾಲಾತ್ ಕೃಷ್ಣಾಜ್ಞಯಾ ತಥಾ ॥ ೧೧ ॥**

ಕೃತಾತ್ ಅಪಿ ವಿಶೇಷಃ ಅಯಂ ಯತ್ ಪುಣ್ಯಸ್ಯ ಅಧಿಕಂ ಫಲಮ್ । ಅಲ್ಪಂ ಏವ ಚ ಪಾಪಸ್ಯ ಕಾಲಾತ್ ಕೃಷ್ಣಾಜ್ಞಯಾ ತಥಾ ॥ ೧೧ ॥

**ಅರ್ಥ** :- **ಕಾಲಾತ್** = ಕಲಿಕಾಲದ ಸ್ವಭಾವದಿಂದ **ತಥಾ** = ಹಾಗೂ **ಕೃಷ್ಣಾಜ್ಞಯಾ** = ಕೃಷ್ಣನ ಆಜ್ಞೆಯಿಂದ **ಪುಣ್ಯಸ್ಯ** = (ಅಲ್ಪವಾದ) ಪುಣ್ಯಕ್ಕೆ **ಅಧಿಕಂ** = ಹೆಚ್ಚಿನ **ಫಲಂ** = ಫಲವು (ಭವತಿ) = ಆಗುವುದು. **ಚ** = ಮತ್ತು **ಪಾಪಸ್ಯ** = (ಹೆಚ್ಚಿನ)ಪಾಪಕ್ಕೆ **ಅಲ್ಪಂ ಏವ** = ಸ್ವಲ್ಪವೇ **ಫಲಂ** = ಫಲವು (ಭವತಿ) = ಆಗುವುದು **ಯತ್** = ಯಾವ ಈ ಕಾರಣದಿಂದಲೋ (**ತತ್**) = ಆ ಕಾರಣದಿಂದ **ಕೃತಾತ್ ಅಪಿ** = ಕೃತಯುಗಕ್ಕಿಂತಲೂ **ಅಯಂ** = ಈ **ವಿಶೇಷಃ** = ಗುಣವಿಶೇಷವು (**ಉಕ್ತಃ**) = ಹೇಳಲ್ಪಟ್ಟಿದೆ.

**ತಾತ್ಪರ್ಯ** :- ಕೃಷ್ಣನ ಆದೇಶದಿಂದಾಗಿ ಪುಣ್ಯಕ್ಕೆ ಅಧಿಕಫಲ, ಪಾಪಕ್ಕೆ ಅಲ್ಪಫಲವೆಂಬ ಕಾರಣದಿಂದಾಗಿ ಆ ಕಾಲ ಕೃತಯುಗಕ್ಕಿಂತಲೂ ವಿಶೇಷವೆನ್ನಿಸಿತ್ತು.

ಬ್ರಹ್ಮಾದಿಗಳಿಂದ ಅವತಾರ ಪರಿಸಮಾಪ್ತಿಗೆ ಪ್ರಾರ್ಥನೆ

**ಏವಂ ಸುಧಾರ್ಮಿಕೇ ಲೋಕೇ ಹರಿಭಕ್ತಿಪರಾಯಣೇ ।**
**ನಷ್ಟೇಷು ಕಲಿಲಿಂಗೇಷು ಯುಗವೃತ್ತಿಮಭೀಪ್ಸವಃ ॥ ೧೨ ॥**

ಏವಂ ಸುಧಾರ್ಮಿಕೇ ಲೋಕೇ ಹರಿಭಕ್ತಿಪರಾಯಣೇ । ನಷ್ಟೇಷು ಕಲಿಲಿಂಗೇಷು ಯುಗವೃತ್ತಿಂ ಅಭೀಪ್ಸವಃ ॥ ೧೨ ॥

**ಬ್ರಹ್ಮರುದ್ರಾದಯೋ ದೇವಾಃ ಸ್ತುತ್ವಾ ಕೇಶವಮವ್ಯಯಮ್ ।**
**ವ್ಯಜ್ಞಾಪಯನ್ ಸ್ವಲೋಕಾಪ್ತಿಮೋಮಿತ್ಯಾಹ ಸ ಚಾಚ್ಯುತಃ ॥ ೧೩ ॥**

ಬ್ರಹ್ಮರುದ್ರಾದಯಃ ದೇವಾಃ ಸ್ತುತ್ವಾ ಕೇಶವಂ ಅವ್ಯಯಮ್ । ವ್ಯಜ್ಞಾಪಯನ್ ಸ್ವಲೋಕಾಪ್ತಿಂ ಓಂ ಇತಿ ಆಹ ಸಃ ಚ ಅಚ್ಯುತಃ ॥ ೧೩ ॥

**ಅರ್ಥ** :– ಏವಂ = ಹೀಗೆ **ಹರಿಭಕ್ತಿಪರಾಯಣೇ** = ಹರಿಭಕ್ತಿಯಲ್ಲಿ ನಿರತವಾದ **ಸುಧಾರ್ಮಿಕೇ** = ಉತ್ತಮ ಧಾರ್ಮಿಕದ **ಲೋಕೇ** = ಲೋಕದಲ್ಲಿ **ಕಲಿಲಿಂಗೇಷು** = ಕಲಿಯುಗದ ಚಿಹ್ನೆಗಳು **ನಷ್ಟೇಷು (ಸತ್ಸು)** = ಕಾಣದಿರಲು **ಯುಗವೃತ್ತಿಂ** = (ಕಲಿ)ಯುಗದ ಧರ್ಮಪ್ರವೃತ್ತಿಯನ್ನು **ಅಭೀಪ್ಸವಃ** = ಇಚ್ಛಿಸುವ **ಬ್ರಹ್ಮರುದ್ರಾದಯಃ** = ಬ್ರಹ್ಮ ರುದ್ರ ಮೊದಲಾದ **ದೇವಾಃ** = ದೇವತೆಗಳು **ಅವ್ಯಯಂ** = ಅವ್ಯಯನಾದ **ಕೇಶವಂ** = ಕೇಶವನನ್ನು **ಸ್ತುತ್ವಾ** = ಸ್ತುತಿಸಿ **ಸ್ವಲೋಕಾಪ್ತಿಂ** = ತನ್ನ ಲೋಕವನ್ನು ಹೊಂದುವುದನ್ನು ಕುರಿತು **ವ್ಯಜ್ಞಾಪಯನ್** = ಪ್ರಾರ್ಥಿಸಿದರು. **ಸಃ** = ಆ **ಅಚ್ಯುತಃ ಚ** = ಅಚ್ಯುತನೂ ಸಹ **ಓಂ** = ಆಗಲಿ **ಇತಿ** = ಎಂದು **ಆಹ** = ನುಡಿದನು.

**ತಾತ್ಪರ್ಯ** :- ಹೀಗೆ ಲೋಕವು ಹರಿಭಕ್ತಿಯಲ್ಲಿ ನಿರತವಾಗಿ ಧರ್ಮನಿಷ್ಠೆಯಿಂದ ಕೂಡಲು ಕಲಿಯುಗದ ಲಕ್ಷಣಗಳು ಕಾಣೆಯಾಗಲು ಕಲಿಯುಗದ ಪ್ರವೃತ್ತಿ ನಡೆಯಬೇಕೆಂದು ಬಯಸಿದ ಬ್ರಹ್ಮರುದ್ರಾದಿದೇವತೆಗಳು ಅವ್ಯಯನಾದ ಶ್ರೀಕೃಷ್ಣನನ್ನು ಸ್ತೋತ್ರ ಮಾಡಿ ಅವನು ತನ್ನ ಲೋಕಕ್ಕೆ ಹಿಂದಿರುಗಬೇಕೆಂದು ವಿಜ್ಞಾಪಿಸಿಕೊಂಡರು. ಕೃಷ್ಣನು ''ಆಗಲಿ'' ಎಂದ.

### ಯದುಕುಲದ ಉಪಸಂಹಾರದ ಹಿನ್ನೆಲೆ

**ಪ್ರಾಚುರ್ಯೇ ಸಜ್ಜನಸ್ಯ ಸ್ಯಾನ್ನ ಕಲೇರ್ವೃದ್ಧಿರಂಜಸಾ ।**
**ಇತಿ ಸ್ವಕುಲಸಂಹೃತ್ಯೈ ಪ್ರಭಾಸಮನಯತ್ ಪ್ರಭುಃ ॥ ೧೪ ॥**

ಪ್ರಾಚುರ್ಯೇ ಸಜ್ಜನಸ್ಯ ಸ್ಯಾತ್ ನ ಕಲೇಃ ವೃದ್ಧಿಃ ಅಂಜಸಾ । ಇತಿ ಸ್ವಕುಲಸಂಹೃತ್ಯೈ ಪ್ರಭಾಸಂ ಅನಯತ್ ಪ್ರಭುಃ ॥ ೧೪ ॥

**ಅರ್ಥ** :– **ಸಜ್ಜನಸ್ಯ** = ಸಜ್ಜನರ **ಪ್ರಾಚುರ್ಯೇ (ಸತಿ)** = ಬಾಹುಲ್ಯವಿರುವಲ್ಲಿ **ಕಲೇಃ** = ಕಲಿಯ **ವೃದ್ಧಿಃ** = (ಯುಗಧರ್ಮರೂಪ)ವೃದ್ಧಿಯು **ಅಂಜಸಾ** = ಸರಿಯಾಗಿ **ನ ಸ್ಯಾತ್** = ಆಗದು **ಇತಿ** = ಎಂದು **ಸ್ವಕುಲಸಂಹೃತ್ಯೈ** = ತನ್ನ ಕುಲವನ್ನು ಸಂಹರಿಸಬೇಕೆಂದು **ಪ್ರಭುಃ** = ಸಮರ್ಥನಾದ ಕೃಷ್ಣನು **(ಸ್ವಕುಲಂ)** = ತನ್ನ ಕುಲವನ್ನು **ಪ್ರಭಾಸಂ** = ಪ್ರಭಾಸವನ್ನು ಕುರಿತು **ಅನಯತ್** = ಕರೆದೊಯ್ದನು.

**ತಾತ್ಪರ್ಯ** :- ಸಜ್ಜನರೇ ಭೂಮಿಯಲ್ಲಿ ಅಧಿಕ ಸಂಖ್ಯೆಯಲ್ಲಿದ್ದರೆ ಕಲಿಯ ಪ್ರಾಬಲ್ಯ ಸರಿಯಾಗಿ ಆಗದು ಎಂದು ಪ್ರಭುವಾದ ಶ್ರೀಕೃಷ್ಣ ತನ್ನ ಕುಲವನ್ನು ಸಂಹರಿಸಲೆಂದು ಪ್ರಭಾಸಕ್ಕೆ ಕರೆದೊಯ್ದ.

ಸ್ವಗೃಹದಲ್ಲಿ ಮರಣ ಪುಣ್ಯಕರವಲ್ಲ

**ಪುಣ್ಯಕ್ಷೇತ್ರೇಽಪಿ ನ ಮೃತಿಃ ಸ್ವಗೃಹೇ ತ್ವತಿಧರ್ಮದಾ ।**
**ಗತ್ವೈವಾಲ್ಪಮಪಿ ಕ್ಷೇತ್ರಂ ಸ್ಯಾನ್ಮಹತ್ಫಲಮಿತ್ಯಜಃ ॥ ೧೫ ॥**

**ಪುಣ್ಯಕ್ಷೇತ್ರೇ ಅಪಿ ನ ಮೃತಿಃ ಸ್ವಗೃಹೇ ತು ಅತಿಧರ್ಮದಾ । ಗತ್ವಾ ಏವ ಅಲ್ಪಂ ಅಪಿ ಕ್ಷೇತ್ರಂ ಸ್ಯಾತ್ ಮಹತ್ಫಲಂ ಇತಿ ಅಜಃ ॥ ೧೫ ॥**

ದ್ವಾರಕೆಯಿಂದ ಪ್ರಭಾಸಕ್ಕೆ ಯಾದವರು

**ಪ್ರಕಾಶಯಿತುಮೇವೈತಾನ್ ಪ್ರಭಾಸಾಯ ಕುಶಸ್ಥಲಾತ್ ।**
**ನೀತ್ವಾ ದಾನಾನಿ ಸದ್ಧರ್ಮಾಂಸ್ತೈರಕಾರಯದಚ್ಯುತಃ ॥ ೧೬ ॥**

**ಪ್ರಕಾಶಯಿತುಂ ಏವ ಏತಾನ್ ಪ್ರಭಾಸಾಯ ಕುಶಸ್ಥಲಾತ್ । ನೀತ್ವಾ ದಾನಾನಿ ಸದ್ಧರ್ಮಾನ್ ತೈಃ ಅಕಾರಯತ್ ಅಚ್ಯುತಃ ॥ ೧೬ ॥**

**ಅರ್ಥ** :– **ಪುಣ್ಯಕ್ಷೇತ್ರೇ ಅಪಿ** = ಪುಣ್ಯಕ್ಷದಲ್ಲೇ ಆಗಿದ್ದರೂ **ಮೃತಿಃ** = ಮರಣವು **ಸ್ವಗೃಹೇ ತು** = ತನ್ನ ಮನೆಯಲ್ಲಾದರೋ **ನ ಅತಿಧರ್ಮದಾ** = ಅತ್ಯಂತ ಪುಣ್ಯಪ್ರದವಲ್ಲ. **ಅಲ್ಪಂ** = ಅಲ್ಪವಾದ **ಕ್ಷೇತ್ರಂ ಅಪಿ** = ಕ್ಷೇತ್ರವನ್ನು ಕುರಿತಾದರೂ **ಗತ್ವಾ** = ಹೋಗಿ (**ಮೃತಸ್ಯ**) = ಮರಣ ಹೊಂದಿದವನಿಗೆ **ಮಹತ್ಫಲಂ** = ಮಹತ್ಫಲವು **ಸ್ಯಾತ್** = ಆಗುವುದು **ಇತಿ** = ಎಂದು **ಪ್ರಕಾಶಯಿತುಂ ಏವ** = ಚೆನ್ನಾಗಿ ತೋರಿಸಿಕೊಡಲೆಂದೇ **ಅಜಃ** = ಅಜನಾದ **ಅಚ್ಯುತಃ** = ಅಚ್ಯುತನಾದ ಕೃಷ್ಣನು **ಏತಾನ್** = ಈ ಯಾದವರನ್ನು **ಕುಶಸ್ಥಲಾತ್** = ದ್ವಾರಕೆಯಿಂದ **ಪ್ರಭಾಸಾಯ** = ಪ್ರಭಾಸಕ್ಕೆ **ನೀತ್ವಾ** = ಕರೆದೊಯ್ದು **ತೈಃ** = ಅವರಿಂದ **ದಾನಾನಿ** = ದಾನಗಳನ್ನು **ಸದ್ಧರ್ಮಾನ್** = ಉತ್ತಮ ಪುಣ್ಯಕಾರ್ಯಗಳನ್ನು **ಅಕಾರಯತ್** = ಮಾಡಿಸಿದ.

**ತಾತ್ಪರ್ಯ** :- ಪುಣ್ಯಕ್ಷೇತ್ರವಾಗಿದ್ದರೂ ಸ್ವಗೃಹದಲ್ಲಿ ಮರಣ ಹೆಚ್ಚು ಪುಣ್ಯಕರವಾದುದಲ್ಲ, ಆದ್ದರಿಂದ ಅಲ್ಪವಾಗಿದ್ದರೂ ಬೇರೊಂದು ಕ್ಷೇತ್ರಕ್ಕೆ ಹೋಗಿ ಮರಣ ಹೊಂದುವುದು ಮಹತ್ಫಲಕ್ಕೆ ಕಾರಣ ಎಂಬ ತತ್ವವನ್ನು ತಿಳಿಸಿಕೊಡಲೆಂದು ಕೃಷ್ಣ ಅವರನ್ನೆಲ್ಲ ದ್ವಾರಕೆಯಿಂದ ಪ್ರಭಾಸಕ್ಕೆ ಕರೆದೊಯ್ದು ಅವರಿಂದ ದಾನಗಳನ್ನು, ಉತ್ತಮ ಪುಣ್ಯಕಾರ್ಯಗಳನ್ನು ಮಾಡಿಸಿದ.

### ಯಾದವರ ವಿನಾಶ - ಬಲರಾಮನ ದೇಹತ್ಯಾಗ

**ತೇ ತತಃ ಶಾಪದೋಷೇಣ ಕೃಷ್ಣೇನೈವ ವಿಮೋಹಿತಾಃ ।**
**ಮೈರೇಯಮತ್ತಾ ಅನ್ಯೋನ್ಯಂ ನಿಪಾತ್ಯ ಸ್ವಾಂ ತನುಂ ಗತಾಃ ।**
**ತದ್ದೃಷ್ಟ್ವಾ ಬಲದೇವೋಽಪಿ ಯೋಗೇನ ಸ್ವತನುಂ ಯಯೌ ॥ ೧೭॥**

**ತೇ ತತಃ ಶಾಪದೋಷೇಣ ಕೃಷ್ಣೇನ ಏವ ವಿಮೋಹಿತಾಃ । ಮೈರೇಯಮತ್ತಾಃ ಅನ್ಯೋನ್ಯಂ ನಿಪಾತ್ಯ ಸ್ವಾಂ ತನುಂ ಗತಾಃ । ತತ್ ದೃಷ್ಟ್ವಾ ಬಲದೇವಃ ಅಪಿ ಯೋಗೇನ ಸ್ವತನುಂ ಯಯೌ ॥ ೧೭॥**

**ಅರ್ಥ** :- **ತತಃ** = ನಂತರ **ತೇ** = ಅವರು (ಯಾದವರು) **ಶಾಪದೋಷೇಣ** = (ಬ್ರಾಹ್ಮಣ)ಶಾಪದೋಷದಿಂದ **ಕೃಷ್ಣೇನ ಏವ** = ಕೃಷ್ಣನಿಂದಲೇ **ವಿಮೋಹಿತಾಃ** = ಮುಖ್ಯವಾಗಿ ಮೋಹಿತರಾಗಿ **ಮೈರೇಯಮತ್ತಾಃ (ಸಂತಃ)** = ಮಧುಪಾನದಿಂದ ಮತ್ತರಾದವರಾಗಿ **ಅನ್ಯೋನ್ಯಂ** = ಒಬ್ಬರನ್ನೊಬ್ಬರು **ನಿಪಾತ್ಯ** = ನಾಶಪಡಿಸಿಕೊಂಡು **ಸ್ವಾಂ** = ತಮ್ಮ **ತನುಂ** = ದೇಹವನ್ನು (ರೂಪವನ್ನು) **ಗತಾಃ** = ಸೇರಿದರು. **ಬಲದೇವಃ ಅಪಿ** = ಬಲರಾಮನೂ ಸಹ **ತತ್** = ಅದನ್ನು **ದೃಷ್ಟ್ವಾ** = ನೋಡಿ **ಯೋಗೇನ** = ಯೋಗದಿಂದ **ಸ್ವತನುಂ** = ತನ್ನರೂಪವನ್ನು **ಯಯೌ** = ಹೊಂದಿದನು.

**ತಾತ್ಪರ್ಯ** :- ಅವರೆಲ್ಲ ಕೃಷ್ಣನಿಂದಲೇ ಮೋಹಕ್ಕೊಳಗಾಗಿ, ಆ ಶಾಪದೋಷದಿಂದಾಗಿ ಮದ್ಯಪಾನದಿಂದ ಮೈಮರೆತು ಒಬ್ಬರನ್ನೊಬ್ಬರು ಸಂಹರಿಸಿಕೊಂಡು ತಮ್ಮ ಮೂಲರೂಪವನ್ನು ಸೇರಿದರು. ಅದನ್ನು ಕಂಡು ಬಲರಾಮನೂ ಸಹ ಯೋಗದಿಂದ ತನ್ನ ಮೂಲರೂಪವನ್ನು ಸೇರಿದ.

ಪಾಂಡವರಿಗೆ ದಾರುಕನ ಮೂಲಕ ಸಂದೇಶ

**ತತಃ ಪರೇಶೋಽಗಣಿತಾನುಭಾವಃ**
**ಸ್ವಸಾರಥಿಂ ಪಾಂಡವಾನಾಂ ಸಕಾಶಮ್ ।**
**ಸ್ವಲೋಕಯಾನಪ್ರತಿವೇದನಾಯ**
**ಸ್ವಸ್ಯಾನು ಚೈಷಾಂ ತ್ವರಯಾಽಭ್ಯಯಾತಯತ್ ॥ ೧೮ ॥**

ತತಃ ಪರೇಶಃ ಅಗಣಿತಾನುಭಾವಃ ಸ್ವಸಾರಥಿಂ ಪಾಂಡವಾನಾಂ ಸಕಾಶಮ್ । ಸ್ವಲೋಕಯಾನಪ್ರತಿವೇದನಾಯ ಸ್ವಸ್ಯ ಅನು ಚ ಏಷಾಂ ತ್ವರಯಾ ಅಭ್ಯಯಾತಯತ್ ॥ ೧೮ ॥

**ಅರ್ಥ** :- **ತತಃ** = ಬಳಿಕ **ಪರೇಶಃ** = ಸರ್ವೋತ್ತಮನೂ **ಅಗಣಿತಾನುಭಾವಃ** = ಎಣಿಕೆಯಿಲ್ಲದ ಸಾಮರ್ಥ್ಯದ ಕೃಷ್ಣನು **ಸ್ವಸಾರಥಿಂ** = ತನ್ನ ಸಾರಥಿಯನ್ನು (ದಾರುಕನನ್ನು) **ಸ್ವಸ್ಯ** = ತನ್ನ **ಅನು** = ಅನಂತರ **ಏಷಾಂ ಚ** = ಈ ಪಾಂಡವರ **ಸ್ವಲೋಕಯಾನಪ್ರತಿವೇದನಾಯ** = ತಮ್ಮ ಲೋಕಗಳ ಕುರಿತು ತೆರಳುವ ಬಗ್ಗೆ ತಿಳಿಸಲೆಂದು **ತ್ವರಯಾ** = ಬೇಗನೆ **ಅಭ್ಯಯಾತಯತ್** = ಕಳುಹಿಸಿಕೊಟ್ಟನು.

**ತಾತ್ಪರ್ಯ** :- ಬಳಿಕ ಸರ್ವೋತ್ತಮ ದೇವತೆಯೂ, ಅಪರಿಮಿತ ಸಾಮರ್ಥ್ಯಶಾಲಿಯೂ ಆದ ಶ್ರೀಕೃಷ್ಣ ತನ್ನ ಹಿಂದೆಯೇ ಅವರು ತಮ್ಮ ಲೋಕಕ್ಕೆ ತೆರಳಬೇಕು ಎಂದು ತಿಳಿಸಲೆಂದು ತನ್ನ ಸಾರಥಿಯನ್ನು ಪಾಂಡವರ ಬಳಿಗೆ ತ್ವರೆಯಿಂದ ಕಳುಹಿಸಿಕೊಟ್ಟ.

ಜರಾ ಬೇಡನಿಂದ ಶರಪ್ರಯೋಗ

**ಅಥಾಸತಃ ಪಿಪ್ಪಲಮೂಲ ಈಶಿತು-**
**ರೂರುಸ್ಥಿತಂ ಪಾದತಲಂ ಸುತಾಮ್ರಮ್ ।**
**ದೃಷ್ಟ್ವಾ ಜರಾ ನಾಮ ಸಸರ್ಜ ಶಲ್ಯಂ**
**ಭಕ್ತೋಽಪ್ಯಲಂ ರೋಹಿತಂ ಶಂಕಮಾನಃ ॥ ೧೯ ॥**

ಅಥ ಆಸತಃ ಪಿಪ್ಪಲಮೂಲೇ ಈಶಿತುಃ ಊರುಸ್ಥಿತಂ ಪಾದತಲಂ ಸುತಾಮ್ರಮ್ । ದೃಷ್ಟ್ವಾ ಜರಾ ನಾಮ ಸಸರ್ಜ ಶಲ್ಯಂ ಭಕ್ತಃ ಅಪಿ ಅಲಂ ರೋಹಿತಂ ಶಂಕಮಾನಃ ॥ ೧೯ ॥

**ಅರ್ಥ** :- **ಅಥ** = ಅನಂತರ **ಪಿಪ್ಪಲಮೂಲೇ** = ಅಶ್ವತ್ಥದ ಬುಡದಲ್ಲಿ **ಆಸತಃ** = ಕುಳಿತ **ಈಶಿತುಃ** = ಸರ್ವಸ್ವಾಮಿಯಾದ ಕೃಷ್ಣನ **ಊರುಸ್ಥಿತಂ** = ತೊಡೆಯ ಮೇಲಿರುವ **ಸುತಾಮ್ರಂ** = ತುಂಬಾ ಕೆಂಪಾದ **ಪಾದತಲಂ** = ಅಂಗಾಲನ್ನು **ದೃಷ್ಟ್ವಾ** = ನೋಡಿ **ಜರಾ ನಾಮ** = ಜರಾ ಎಂಬವನು **ಅಲಂ ಭಕ್ತಃ ಅಪಿ** = ಉತ್ತಮ ಭಕ್ತನಾದರೂ **ರೋಹಿತಂ** = ಕೆಂಪಾದ ರೋಹಿತ ಮೃಗವನ್ನು **ಶಂಕಮಾನಃ** = ಶಂಕಿಸುವವನಾಗಿ **ಶಲ್ಯಂ** = ಬಾಣವನ್ನು **ಸಸರ್ಜ** = ಪ್ರಯೋಗಿಸಿದ.

**ತಾತ್ಪರ್ಯ** :- ಸರ್ವೇಶನಾದ ಕೃಷ್ಣ ಒಂದು ಅಶ್ವತ್ಥದ ಬುಡದಲ್ಲಿ ತನ್ನ ತೊಡೆಯ ಮೇಲೆ ತುಂಬಾ ಕೆಂಪಾಗಿದ್ದ ತನ್ನ ಅಂಗಾಲನ್ನು ಇರಿಸಿ ಕೊಂಡಿದ್ದನ್ನು ಕಂಡು ಜರಾ ಎಂಬ ಒಬ್ಬ ಬೇಡ, ಅವನು ಸ್ವಭಾವತಃ ಶ್ರೇಷ್ಠ ಕೃಷ್ಣಭಕ್ತನೇ ಆಗಿದ್ದರೂ, ಅದನ್ನು ರೋಹಿತಮೃಗವೆಂದು ಶಂಕಿಸಿ ಬಾಣವನ್ನು ಪ್ರಯೋಗಿಸಿದ.

### ಬೇಡನಿಗೆ ಸದ್ಗತಿ ನೀಡಿದ ಕೃಷ್ಣ

**ಅಚ್ಛೇದ್ಯಾಭೇದ್ಯದೇಹಸ್ಯ ಶಲ್ಯೇ ಪಾದಮುಪಸ್ಥಿತೇ ।**
**ಸಮೀಪಮಾಗತೋ ವ್ಯಾಧೋ ದೃಷ್ಟ್ವಾ ಭೀತೋಽಪತದ್ಭುವಿ ॥ ೨೦ ॥**

**ಅಚ್ಛೇದ್ಯಾಭೇದ್ಯದೇಹಸ್ಯ ಶಲ್ಯೇ ಪಾದಂ ಉಪಸ್ಥಿತೇ । ಸಮೀಪಂ ಆಗತಃ ವ್ಯಾಧಃ ದೃಷ್ಟ್ವಾ ಭೀತಃ ಅಪತತ್ ಭುವಿ ॥ ೨೦ ॥**

**ಅರ್ಥ** :- **ಶಲ್ಯೇ** = ಬಾಣವು **ಅಚ್ಛೇದ್ಯಾಭೇದ್ಯದೇಹಸ್ಯ** = ಅಚ್ಛೇದ್ಯ-ಅಭೇದ್ಯದೇಹದ ಕೃಷ್ಣನ **ಪಾದಂ** = ಪಾದವನ್ನು ಕುರಿತು **ಉಪಸ್ಥಿತೇ** (**ಸತಿ**) = ಬೀಳುತ್ತಿರಲು **ಸಮೀಪಂ** = ಹತ್ತಿರ **ಆಗತಃ** = ಬಂದ **ವ್ಯಾಧಃ** = ಬೇಡನು **ದೃಷ್ಟ್ವಾ** = ನೋಡಿ **ಭೀತಃ** (**ಸನ್**) = ಭಯಗೊಂಡವನಾಗಿ **ಭುವಿ** = ಭೂಮಿಯಲ್ಲಿ **ಅಪತತ್** = ಬಿದ್ದನು.

**ತಾತ್ಪರ್ಯ** :- ಕೃಷ್ಣನ ದೇಹ ಅಚ್ಛೇದ್ಯವೂ,ಅಭೇದ್ಯವೂ ಆದುದು. ಆ ಬಾಣ ಅವನ ಪಾದಕ್ಕೆ ಬೀಳುತ್ತಲೇ ಸಮೀಪಕ್ಕೆ ಬಂದ ಆ ಬೇಡ ಅದನ್ನು ನೋಡಿ ಭಯಪಟ್ಟು ನೆಲದ ಮೇಲೆ ಬಿದ್ದ.

**ವಿಪ್ರವಾಕ್ಯಂ ಮಾನಯಾನಃ ಕಾರಯಿತ್ವಾಽಮುನಾ ಹರಿಃ ।**
**ಪಾಪಂ ಮಾಂ ಜಹಿ ದೇವೇತಿ ಯಾಚಂತಮನಯದ್ದಿವಮ್ ॥ ೨೧ ॥**

ವಿಪ್ರವಾಕ್ಯಂ ಮಾನಯಾನಃ ಕಾರಯಿತ್ವಾ ಅಮುನಾ ಹರಿಃ । ಪಾಪಂ ಮಾಂ ಜಹಿ ದೇವ ಇತಿ ಯಾಚಂತಂ ಅನಯತ್ ದಿವಮ್ ॥ ೨೧ ॥

**ಅರ್ಥ** :- **ವಿಪ್ರವಾಕ್ಯಂ** = ಬ್ರಾಹ್ಮಣವಾಕ್ಯವನ್ನು **ಮಾನಯಾನಃ** = ಗೌರವಿಸುವವನಾಗಿ **ಹರಿಃ** = ಕೃಷ್ಣನು **ಅಮುನಾ** = ಈ ವ್ಯಾಧನಿಂದ **ಕಾರಯಿತ್ವಾ** = ಮಾಡಿಸಿ, **ದೇವ** = ಎಲೈ ದೇವನೇ! **ಪಾಪಂ** = ಪಾಪಿಷ್ಠನಾದ **ಮಾಂ** = ನನ್ನನ್ನು **ಜಹಿ** = ಕೊಲ್ಲು **ಇತಿ** = ಎಂದು **ಯಾಚಂತಂ** = ಬೇಡುತ್ತಿರುವ (ತಂ) = ಆ ಬೇಡನನ್ನು **ದಿವಂ** = ಸ್ವರ್ಗವನ್ನು ಕುರಿತು **ಅನಯತ್** = ಕಳುಹಿಸಿದ.

**ತಾತ್ಪರ್ಯ** :- ವಿಪ್ರವಾಕ್ಯವನ್ನು ಗೌರವಿಸಲೆಂದು ಕೃಷ್ಣ ಅವನಿಂದ ಹಾಗೆ ಮಾಡಿಸಿದ. ''ಪಾಪಿಯಾದ ನನ್ನನ್ನು ಎಲೈ ದೇವನಾದ ಕೃಷ್ಣನೆ ! ಕೊಲ್ಲು'' ಎಂದು ಬೇಡತೊಡಗಿದ ಅವನನ್ನು ಕೃಷ್ಣ ಸ್ವರ್ಗಕ್ಕೆ ಕಳುಹಿಸಿದ.

### ಬೇಡನಾಗಿ ಬಂದಿದ್ದ ಭೃಗು

**ಪಾದಪ್ರಹಾರದೋಷೇಣ ತಂ ಭೃಗುಂ ವ್ಯಾಧತಾಂ ಗತಮ್ ।**
**ಪಶ್ಚಾತ್ತಾಪೇನ ಭಕ್ತ್ಯಾ ಚ ಸುಪ್ರೀತಸ್ತಚ್ಛರೀರಿಣಮ್ ।**
**ಸ್ವಾಜ್ಞಾಪ್ರಾಪ್ತವಿಮಾನೇನ ದಿವಂ ನಿನ್ಯೇ ಜನಾರ್ದನಃ ॥ ೨೨ ॥**

ಪಾದಪ್ರಹಾರದೋಷೇಣ ತಂ ಭೃಗುಂ ವ್ಯಾಧತಾಂ ಗತಮ್ । ಪಶ್ಚಾತ್ತಾಪೇನ ಭಕ್ತ್ಯಾ ಚ ಸುಪ್ರೀತಃ ತಚ್ಛರೀರಿಣಮ್ । ಸ್ವಾಜ್ಞಾಪ್ರಾಪ್ತವಿಮಾನೇನ ದಿವಂ ನಿನ್ಯೇ ಜನಾರ್ದನಃ ॥ ೨೨ ॥

**ಅರ್ಥ** :- **ಪಾದಪ್ರಹಾರದೋಷೇಣ** = (ಶ್ರೀಹರಿಯನ್ನು) ಕಾಲಿನಿಂದ ಒದ್ದ ದೋಷದಿಂದಾಗಿ **ವ್ಯಾಧತಾಂ** = ಬೇಡತ್ವವನ್ನು **ಗತಂ** = ಹೊಂದಿದ, **ತಚ್ಛರೀರಿಣಂ** = ಆ ವ್ಯಾಧದೇಹದ **ತಂ** = ಆ **ಭೃಗುಂ** = ಭೃಗು ಮುನಿಯನ್ನು **ಪಶ್ಚಾತ್ತಾಪೇನ** = ಪಶ್ಚಾತ್ತಾಪದಿಂದ **ಚ** = ಮತ್ತು **ಭಕ್ತ್ಯಾ** = ಭಕ್ತಿಯಿಂದ **ಸುಪ್ರೀತಃ** = ಬಹಳ ಪ್ರೀತನಾದ **ಜನಾರ್ದನಃ** = ಜನಾರ್ದನನಾದ ಕೃಷ್ಣನು **ಸ್ವಾಜ್ಞಾಪ್ರಾಪ್ತವಿಮಾನೇನ** = ತನ್ನ ಆಜ್ಞೆಯಿಂದ

ಬಂದ ವಿಮಾನದಿಂದ **ದಿವಂ** = ಸ್ವರ್ಗವನ್ನು ಕುರಿತು **ನಿನ್ಯೇ** = ಕಳುಹಿಸಿದ.

**ತಾತ್ಪರ್ಯ** :- ಶ್ರೀಹರಿಯನ್ನು ಕಾಲಿನಿಂದ ಒದ್ದ ಪಾಪದಿಂದಾಗಿ ಭೃಗುಮುನಿ ಹಾಗೆ ಬೇಡನಾಗಿ ಜನಿಸಿದ್ದ. ಶ್ರೀಕೃಷ್ಣ ಅವನ ಪಶ್ಚಾತ್ತಾಪಕ್ಕೂ, ಭಕ್ತಿಗೂ ಸುಪ್ರೀತನಾಗಿ ಅವನನ್ನು ಆ ಶರೀರದಿಂದಲೇ ತನ್ನ ಆಜ್ಞೆಯಂತೆ ಆಗಮಿಸಿದ ವಿಮಾನದಲ್ಲಿ ಸ್ವರ್ಗಕ್ಕೆ ಕಳುಹಿಸಿದ.

**ನೀಚಾಂ ಯೋನಿಂ ನೀಚನೀಚಕರ್ಮಾಪ್ತಂ ನೀಚಕರ್ಮತಃ ।**
**ಅದುಷ್ಟತ್ವಾತ್ ತು ಮನಸೋ ಭಕ್ತಿಲೋಪೋ ನ ಚಾಪ್ಯಭೂತ್ ।**
**ಭೃಗೋರತ್ರಾಬುದ್ಧಿಪೂರ್ವಂ ನಾತಿದೋಷಕೃದಪ್ಯಭೂತ್ ॥ ೨೩ ॥**

**ನೀಚಾಂ ಯೋನಿಂ ನೀಚನೀಚಕರ್ಮ ಆಪ್ತಂ ನೀಚಕರ್ಮತಃ । ಅದುಷ್ಟತ್ವಾತ್ ತು ಮನಸೋ ಭಕ್ತಿಲೋಪಃ ನ ಚ ಅಪಿ ಅಭೂತ್ । ಭೃಗೋಃ ಅತ್ರ ಅಬುದ್ಧಿಪೂರ್ವಂ ನ ಅತಿದೋಷಕೃತ್ ಅಪಿ ಅಭೂತ್ ॥ ೨೩ ॥**

**ಅರ್ಥ** :- **ನೀಚಕರ್ಮತಃ** = (ವಿಷ್ಣುವಿಗೆ ಪಾದತಾಡನ ಮಾಡಿದ) ನೀಚಕರ್ಮದಿಂದ **ನೀಚಾಂ** = ಹೀನವಾದ **ಯೋನಿಂ** = ಯೋನಿಯನ್ನು **(ಚ)** = ಮತ್ತು **ನೀಚನೀಚಕರ್ಮ** = (ಕೃಷ್ಣನ ಪಾದದಲ್ಲಿ ಬಾಣವನ್ನು ಬಿಟ್ಟ) ನೀಚಕ್ಕಿಂತಲೂ ನೀಚವಾದ ಕರ್ಮವನ್ನು **ಆಪ್ತಂ** = ಹೊಂದಿದ **(ತಂ)** = ಆ ಭೃಗುವನ್ನು **(ದಿವಂ ನಿನ್ಯೇ)** = ಸ್ವರ್ಗವನ್ನು ಕುರಿತು ಕಳುಹಿಸಿದ. **ಮನಸಃ ತು** = ವಿಶೇಷವಾಗಿ ಮನಸ್ಸಿನ **ಅದುಷ್ಟತ್ವಾತ್** = ನಿರ್ಮಲತ್ವದಿಂದ **ಭಕ್ತಿಲೋಪಃ ಚ ಅಪಿ** = ಭಕ್ತಿಲೋಪವು ಸಹ (ವ್ಯಾಧಯೋನಿಯನ್ನು ಹೊಂದಿದರೂ) **ನ ಅಭೂತ್** = ಆಗಲಿಲ್ಲ. **ಅತ್ರ ಅಪಿ** = ಈ ವ್ಯಾಧಜನ್ಮದಲ್ಲೂ ಸಹ **ಅಬುದ್ಧಿಪೂರ್ವಂ** = (ಕೃಷ್ಣನ ಅಂಗಾಲು ಎಂದು ತಿಳಿಯದೆ) ಅಬುದ್ಧಿಪೂರ್ವಕವಾಗಿ **(ವಿದ್ಧಂ)** = ಬಾಣದಿಂದ ಹೊಡೆದದ್ದು **ಭೃಗೋಃ** = ಭೃಗುವಿಗೆ **ಅತಿದೋಷಕೃತ್** = ಅತಿಯಾದ ದೋಷಕರವು **ನ ಅಭೂತ್** = ಆಗಲಿಲ್ಲ.

**ತಾತ್ಪರ್ಯ** :- ತುಂಬಾ ನೀಚಕರ್ಮದಿಂದಾಗಿ ನೀಚಯೋನಿಯನ್ನು ಹೊಂದಿ ನೀಚಕ್ಕಿಂತ ನೀಚವಾದ ಕರ್ಮವನ್ನು ಮಾಡಿದ್ದ ಅವನನ್ನು ಕೃಷ್ಣ ಉದ್ಧರಿಸಿದ. ಮನಸ್ಸು ನಿರ್ಮಲವಾದದ್ದರಿಂದ ಆ ಭೃಗುಮುನಿಗೆ

ಭಕ್ತಿಲೋಪವೂ ಸಹ ಆಗಲಿಲ್ಲ. ತಿಳಿಯದೆ ಬಾಣ ಪ್ರಯೋಗಿಸಿದ್ದರಿಂದ ಅದು ಅವನಿಗೆ ಹೆಚ್ಚು ಪಾಪಕರವೂ ಆಗಲಿಲ್ಲ.

ಶ್ರೀಕೃಷ್ಣನ ಪರಂಧಾಮಗಮನ ವೈಭವ

**ತತೋ ವಿರಿಂಚೇಶಪುರಂದರಾದ್ಯಾಃ**
**ಪುನಃ ಸ್ತುವಂತೋಽಭಿಯಯುಃ ಪ್ರಣಮ್ಯ ।**
**ಕೃಷ್ಣಂ ಸ ಚಾಶ್ವೇವ ಯಯೌ ಸ್ವಲೋಕಂ**
**ಸ್ವತೇಜಸಾ ಸರ್ವಮಿದಂ ಪ್ರಕಾಶಯನ್ ॥ ೨೪ ॥**

**ತತಃ ವಿರಿಂಚೇಶಪುರಂದರಾದ್ಯಾಃ ಪುನಃ ಸ್ತುವಂತಃ ಅಭಿಯಯುಃ ಪ್ರಣಮ್ಯ । ಕೃಷ್ಣಂ ಸಃ ಚ ಆಶು ಏವ ಯಯೌ ಸ್ವಲೋಕಂ ಸ್ವತೇಜಸಾ ಸರ್ವಂ ಇದಂ ಪ್ರಕಾಶಯನ್ ॥ ೨೪ ॥**

**ಅರ್ಥ** :- **ತತಃ** = ಬಳಿಕ **ವಿರಿಂಚೇಶಪುರಂದರಾದ್ಯಾಃ** = ಬ್ರಹ್ಮ ರುದ್ರ ಇಂದ್ರ ಮೊದಲಾದವರು **ಪುನಃ** = ಮತ್ತೆ **ಸ್ತುವಂತಃ (ಸಂತಃ)** = ಸ್ತುತಿಸುವವರಾಗಿ **ಕೃಷ್ಣಂ** = ಕೃಷ್ಣನನ್ನು **ಪ್ರಣಮ್ಯ** = ಭಕ್ತಿಯಿಂದ ನಮಸ್ಕರಿಸಿ **ಅಭಿಯಯುಃ** = ಹಿಂಬಾಲಿಸಿ ನಡೆದರು. **ಸಃ ಚ** = ಅವನೂ ಸಹ **ಸ್ವತೇಜಸಾ** = ತನ್ನ ತೇಜಸ್ಸಿನಿಂದ ಇದಂ **ಸರ್ವಂ** = ಈ ಎಲ್ಲವನ್ನೂ (ಜಗತ್ತನ್ನೂ) **ಪ್ರಕಾಶಯನ್** = ಪ್ರಕಾಶಿಸುತ್ತಾ **ಆಶು ಏವ** = ಬೇಗನೇ **ಸ್ವಲೋಕಂ** = ತನ್ನ ಲೋಕವನ್ನು ಕುರಿತು **ಯಯೌ** = ತೆರಳಿದನು.

**ತಾತ್ಪರ್ಯ** :- ಬಳಿಕ ಬ್ರಹ್ಮ, ಶಿವ, ಇಂದ್ರ ಮೊದಲಾದವರು ಪುನಃ ಸ್ತುತಿಸುತ್ತಾ ಕೃಷ್ಣನ ಬಳಿಗೆ ಬಂದು ನಮಸ್ಕರಿಸಿ ಹಿಂಬಾಲಿಸಿದರು. ಕೃಷ್ಣ ತನ್ನ ಕಾಂತಿಯಿಂದ ಇದೆಲ್ಲವನ್ನೂ ಬೆಳಗುತ್ತಾ, ಬೇಗನೆ ತನ್ನ ಲೋಕಕ್ಕೆ ತೆರಳಿದನು.

ಭೂಲೋಕದಲ್ಲಿ ಕೃಷ್ಣರೂಪ - ಸೂರ್ಯಮಂಡಲದಲ್ಲಿ ಮತ್ತೊಂದು ರೂಪ

**ಗೋಪಾಲಮಂತ್ರಂ ಭಜತಾಂ ಫಲಪ್ರದೋ**
**ಹ್ಯೇಕೇನ ರೂಪೇಣ ಸ ಭುವ್ಯದೃಶ್ಯಃ ।**
**ತಸ್ಥೌ ದ್ವಿತೀಯೇನ ಚ ಸೂರ್ಯಮಂಡಲೇ**
**ತೃತೀಯಮಾಸೀಚ್ಛಿವಪೂಜಿತಂ ವಪುಃ ॥ ೨೫ ॥**

**ಗೋಪಾಲಮಂತ್ರಂ ಭಜತಾಂ ಫಲಪ್ರದಃ ಹಿ ಏಕೇನ ರೂಪೇಣ ಸಃ ಭುವಿ ಅದೃಶ್ಯಃ । ತಸ್ಥೌ ದ್ವಿತೀಯೇನ ಚ ಸೂರ್ಯಮಂಡಲೇ ತೃತೀಯಂ ಆಸೀತ್ ಶಿವಪೂಜಿತಂ ವಪುಃ ॥ ೨೫ ॥**

**ಅರ್ಥ :– ಗೋಪಾಲಮಂತ್ರಂ** = ಗೋಪಾಲಮಂತ್ರವನ್ನು **ಭಜತಾಂ** = ಉಪಾಸಿಸುವವರಿಗೆ **ಫಲಪ್ರದಃ (ಸನ್)** = ಫಲವನ್ನು ಕೊಡುವವನಾಗಿ **ಏಕೇನ** = ಒಂದು **ರೂಪೇಣ** = ರೂಪದಿಂದ **ಸಃ** = ಅವನು **ಭುವಿ** = ಭೂಮಿಯಲ್ಲಿ **ಅದೃಶ್ಯಃ** = ಅದೃಶ್ಯನಾಗಿ **ತಸ್ಥೌ ಹಿ** = ನೆಲೆಸಿದನು. **ಚ** = ಮತ್ತು **ದ್ವಿತೀಯೇನ** = ಎರಡನೆಯ ರೂಪದಿಂದ **ಸೂರ್ಯಮಂಡಲೇ** = ಸೂರ್ಯಮಂಡಲದಲ್ಲಿ **ತಸ್ಥೌ** = ನೆಲೆಸಿದನು. **ತೃತೀಯಂ** = ಮೂರನೆಯ **ವಪುಃ** = ರೂಪವು **ಶಿವಪೂಜಿತಂ** = ಶಿವನಿಂದ ಪೂಜಿತವಾದುದಾಗಿ **ಆಸೀತ್** = ಆಯಿತು.

**ತಾತ್ಪರ್ಯ :-** ಕೃಷ್ಣಮಂತ್ರವನ್ನು ಭಜಿಸುವವರಿಗೆ ಫಲ ನೀಡುವವನಾಗಿ ಅವನು ಒಂದು ರೂಪದಿಂದ ಭೂಮಿಯಲ್ಲಿ ಅದೃಶ್ಯನಾಗಿ ನೆಲೆಸಿದ. ಎರಡನೆಯ ರೂಪದಿಂದ ಸೂರ್ಯಮಂಡಲದಲ್ಲಿ ನೆಲೆಸಿದ. ಮೂರನೆಯ ರೂಪ ಶಿವನಿಂದ ಪೂಜಿತವಾಗಿ ನೆಲೆಸಿತು.

### ಬ್ರಹ್ಮಲೋಕದಲ್ಲಿ ನಾಲ್ಕನೆಯ ರೂಪ

**ಸಂಪೂಜಿತಂ ಬ್ರಹ್ಮಲೋಕೇ ಚತುರ್ಥಂ**
**ಕಂಜೋದ್ಭವೇನಾಥ ಪರಂ ಸ್ವಧಾಮ ।**
**ಸಮಾಪ್ನುವಾನಂ ವಪುರಸ್ಯ ಪಂಚಮಂ**
**ಭಕ್ತ್ಯಾऽನ್ವಯುರ್ದೇವವರಾಃ ಸ್ವಶಕ್ತ್ಯಾ ॥ ೨೬ ॥**

**ಸಂಪೂಜಿತಂ ಬ್ರಹ್ಮಲೋಕೇ ಚತುರ್ಥಂ ಕಂಜೋದ್ಭವೇನ ಅಥ ಪರಂ ಸ್ವಧಾಮ । ಸಮಾಪ್ನುವಾನಂ ವಪುಃ ಅಸ್ಯ ಪಂಚಮಂ ಭಕ್ತ್ಯಾ ಅನ್ವಯುಃ ದೇವವರಾಃ ಸ್ವಶಕ್ತ್ಯಾ ॥ ೨೬ ॥**

**ಅರ್ಥ :– ಚತುರ್ಥಂ** = ನಾಲ್ಕನೆಯದು **ಬ್ರಹ್ಮಲೋಕೇ** = ಬ್ರಹ್ಮ ಲೋಕದಲ್ಲಿ **ಕಂಜೋದ್ಭವೇನ** = ಬ್ರಹ್ಮನಿಂದ **ಸಂಪೂಜಿತಂ** = ವಿಶೇಷವಾಗಿ ಪೂಜಿತವಾದು **ಆಸೀತ್** = ಆಯಿತು. **ಪರಂ** =

ಉತ್ತಮವಾದ **ಸ್ವಧಾಮ** = ತನ್ನ ಧಾಮವಾದ ವೈಕುಂಠವನ್ನು **ಸಮಾಪ್ನುವಂತಂ** = ಸೇರುತ್ತಿರುವ **ಅಸ್ಯ** = ಈ ಕೃಷ್ಣನ **ಪಂಚಮಂ** = ಐದನೆಯ **ವಪುಃ** = ರೂಪವನ್ನು **ದೇವವರಾಃ** = ದೇವಶ್ರೇಷ್ಠರು **ಭಕ್ತ್ಯಾ** = ಭಕ್ತಿಯಿಂದ **ಸ್ವಶಕ್ತ್ಯಾ** = ತಮ್ಮ ಶಕ್ತಿಗೆ ಅನುಸಾರವಾಗಿ **ಅನ್ವಯುಃ** = ಅನುಸರಿಸಿ ನಡೆದರು.

**ತಾತ್ಪರ್ಯ** :- ನಾಲ್ಕನೆಯ ರೂಪ ಬ್ರಹ್ಮಲೋಕದಲ್ಲಿ ಬ್ರಹ್ಮನಿಂದ ವಿಶೇಷವಾಗಿ ಪೂಜಿತವಾಗಿ ನೆಲೆಸಿತು. ಬಳಿಕ ಶ್ರೇಷ್ಠವಾದ ತನ್ನ ಮೂಲ ರೂಪವನ್ನು ಸೇರುತ್ತಿದ್ದ ಶ್ರೀಕೃಷ್ಣನ ಐದನೆಯ ರೂಪವನ್ನು ದೇವಶ್ರೇಷ್ಠರುಗಳು ಭಕ್ತಿಯಿಂದ ತಮ್ಮ ಶಕ್ತಿಗೆ ಅನುಸಾರವಾಗಿ ಹಿಂಬಾಲಿಸಿದರು.

**ತತ್ತೇಜಸಾ ತೇ ಪ್ರತಿಮುಷ್ಟದೃಷ್ಟಯಃ**
**ಪುರುಷ್ಟುತಾದ್ಯಾ ಅಮಿತೋರುದೀಧಿತೇಃ ।**
**ಯಾವತ್ ಸ್ವಗಮ್ಯಂ ತ್ವನುಗಮ್ಯ ತಸ್ಥು-**
**ರ್ನಿಮೀಲಿತಾಕ್ಷಾ ವಿಹತೋರ್ಧ್ವಚಾರಾಃ ॥ ೨೭ ॥**

ತತ್ತೇಜಸಾ ತೇ ಪ್ರತಿಮುಷ್ಟದೃಷ್ಟಯಃ ಪುರುಷ್ಟುತಾದ್ಯಾಃ ಅಮಿತೋರುದೀಧಿತೇಃ । ಯಾವತ್ ಸ್ವಗಮ್ಯಂ ತು ಅನುಗಮ್ಯ ತಸ್ಥುಃ ನಿಮೀಲಿತಾಕ್ಷಾಃ ವಿಹತೋರ್ಧ್ವ ಚಾರಾಃ ॥ ೨೭ ॥

**ಅರ್ಥ** :- **ಅಮಿತೋರುದೀಧಿತೇಃ** = ಅಪರಿಮಿತವಾದ ಮಹಾ ಪ್ರಕಾಶದ **ತತ್ತೇಜಸಾ** = ಆ ಕೃಷ್ಣನ (ವೈಕುಂಠದ) ಕಾಂತಿಯಿಂದ **ತೇ** = ಆ **ಪುರುಷ್ಟುತಾದ್ಯಾಃ** = ಇಂದ್ರ ಮೊದಲಾದವರು **ನಿಮೀಲಿತಾಕ್ಷಾಃ** **(ಸಂತಃ)** = ಮುಚ್ಚಿದ ಕಣ್ಣಿನವರಾಗಿ **ವಿಹತೋರ್ಧ್ವಚಾರಾಃ (ಸಂತಃ)** = ಮೇಲೆ ಹೋಗಲಾರದವರಾಗಿ **ಯಾವತ್** = ಎಲ್ಲಿಯವರೆಗೆ **ಸ್ವಗಮ್ಯಂ** = ತಮ್ಮಿಂದ ಗಮಿಸಲು ಸಾಧ್ಯವೋ **(ತಾವತ್) ತು** = ಅಲ್ಲಿಯವರೆಗೆ ಮಾತ್ರ **ಅನುಗಮ್ಯ** = ಅನುಸರಿಸಿ ನಡೆದು **ತಸ್ಥುಃ** = ನಿಂತುಬಿಟ್ಟರು.

**ತಾತ್ಪರ್ಯ** :- ಅಪರಿಮಿತ ಮಹಾಪ್ರಕಾಶದಿಂದ ಕೂಡಿದ ಶ್ರೀಕೃಷ್ಣನ ಐದನೆಯ ರೂಪದ ಕಾಂತಿಯಿಂದ ಇಂದ್ರಾದಿದೇವತೆಗಳಿಗೆ ದೃಷ್ಟಿ ಮಂಕಾಯಿತು. ತಮ್ಮಿಂದ ಎಷ್ಟು ದೂರ ಹಿಂಬಾಲಿಸಲು ಸಾಧ್ಯವೋ, ಅಷ್ಟು

ದೂರ ಅನುಸರಿಸಿ ಕಣ್ಣು ಮುಚ್ಚಿದವರಾಗಿ, ಮೇಲೆ ಹೋಗಲಾಗದೆ ನಿಂತುಬಿಟ್ಟರು.

### ಶ್ರೀಕೃಷ್ಣನೊಂದಿಗೆ ಬ್ರಹ್ಮನ ಏಕಾಂತ ಸಂಭಾಷಣೆ

**ವೀಂದ್ರೇಶಶೇಷಾನುಗತಃ ಸ್ವಯಂಭೂ-**
**ರ್ಧಾಮ ಪ್ರವಿಷ್ಟಂ ತಮಜಂ ಪ್ರಣಮ್ಯ ।**
**ವೀಂದ್ರಾದಿಕೈರಪ್ಯಯುತಃ ಸ್ವಪಿತ್ರಾಽಽ-**
**ಶ್ಲಿಷ್ಟೋ ರಹಶ್ಚಾಕಥಯತ್ ತಥಾಽಸ್ತೌತ್ ॥ ೨೮ ॥**

**ವೀಂದ್ರೇಶಶೇಷಾನುಗತಃ ಸ್ವಯಂಭೂಃ ಧಾಮ ಪ್ರವಿಷ್ಟಂ ತಂ ಅಜಂ ಪ್ರಣಮ್ಯ । ವೀಂದ್ರಾದಿಕೈಃ ಅಪಿ ಅಯುತಃ ಸ್ವಪಿತ್ರಾ ಆಶ್ಲಿಷ್ಟಃ ರಹಃ ಚ ಅಕಥಯತ್ ತಥಾ ಅಸ್ತೌತ್ ॥ ೨೮ ॥**

**ಅರ್ಥ :-** **ವೀಂದ್ರೇಶಶೇಷಾನುಗತಃ** = ಗರುಡ ರುದ್ರ ಶೇಷರಿಂದ ಹಿಂಬಾಲಿಸಲ್ಪಟ್ಟ **ಸ್ವಯಂಭೂಃ** = ಬ್ರಹ್ಮದೇವರು **ಧಾಮ** = ವೈಕುಂಠವನ್ನು **ಪ್ರವಿಷ್ಟಂ** = ಪ್ರವೇಶಿಸಿದ **ತಂ** = ಆ **ಅಜಂ** = ಅಜನಾದ ಕೃಷ್ಣನನ್ನು **ಪ್ರಣಮ್ಯ** = ಭಕ್ತಿಯಿಂದ ನಮಸ್ಕರಿಸಿ **ವೀಂದ್ರಾದಿಕೈಃ ಅಪಿ** = ಗರುಡಾದಿ ಗಳಿಂದಲೂ ಸಹ **ಅಯುತಃ** = ವಿಯುಕ್ತನಾಗಿ (ತಾನೊಬ್ಬನೇ) **ಸ್ವಪಿತ್ರಾ** = ತನ್ನ ತಂದೆಯಿಂದ **ಆಶ್ಲಿಷ್ಟಃ (ಸನ್)** = ಆಲಿಂಗಿತನಾದವನಾಗಿ **ಚ** = ಮತ್ತು **ರಹಃ** = ಏಕಾಂತದಲ್ಲಿ **ಅಕಥಯತ್** = ಸಂಭಾಷಿಸಿದನು **ತಥಾ** = ಹಾಗೂ **ಅಸ್ತೌತ್** = ಸ್ತುತಿಸಿದನು.

**ತಾತ್ಪರ್ಯ :-** ಗರುಡ, ರುದ್ರ, ಶೇಷರಿಂದ ಹಿಂಬಾಲಿಸಲ್ಪಟ್ಟು, ಬ್ರಹ್ಮ ದೇವರು ತನ್ನ ಪರಂಧಾಮವನ್ನು ಪ್ರವೇಶಿಸಿದ ಆ ಶ್ರೀಕೃಷ್ಣನನ್ನು ನಮಿಸಿ, ಗರುಡಾದಿಗಳನ್ನು ಬಿಟ್ಟು ತಾನೊಬ್ಬನೇ ತನ್ನ ತಂದೆಯಾದ ಆ ಶ್ರೀಹರಿಯಿಂದ ಆಲಿಂಗಿತನಾಗಿ ರಹಸ್ಯವಾಗಿ ಸಂಭಾಷಿಸಿದ. ಹಾಗೆಯೇ ಸ್ತುತಿಸಿದ.

### ಮೂಲರೂಪದೊಂದಿಗೆ ಶ್ರೀಕೃಷ್ಣನ ಐಕ್ಯ

**ಸ ಪೂರ್ವರೂಪೇಣ ಸಮಾಪ್ಯ ಚೈಕ್ಯಂ**
**ವಿಭಜ್ಯ ಚೇಚ್ಛಾನುಸೃತೋಽಥ ರೇಮೇ ।**

**ಹರಿಃ ಶ್ರಿಯಾ ಬ್ರಹ್ಮಮುಖ್ಯೈಶ್ಚ ಮುಕ್ತೈಃ**
**ಸಂಪೂಜ್ಯಮಾನೋಽಮಿತಸದ್ಗುಣಾತ್ಮಾ ॥ ೨೯ ॥**

ಸಃ ಪೂರ್ವರೂಪೇಣ ಸಮಾಪ್ಯ ಚ ಐಕ್ಯಂ ವಿಭಜ್ಯ ಚ ಇಚ್ಛಾನುಸೃತಃ ಅಥ ರೇಮೇ । ಹರಿಃ ಶ್ರಿಯಾ ಬ್ರಹ್ಮಮುಖ್ಯೈಃ ಚ ಮುಕ್ತೈಃ ಸಂಪೂಜ್ಯಮಾನಃ ಅಮಿತಸದ್ಗುಣಾತ್ಮಾ ॥ ೨೯ ॥

**ಅರ್ಥ :-** **ಅಥ** = ಬಳಿಕ **ಅಮಿತಸದ್ಗುಣಾತ್ಮಾ** = ಮಿತಿಯಿಲ್ಲದ ಉತ್ತಮ ಗುಣಗಳ ಸ್ವರೂಪನಾದ **ಸಃ** = ಆ **ಹರಿಃ** = ಹರಿಯು (ಕೃಷ್ಣನು) **ಪೂರ್ವರೂಪೇಣ** = ಮೊದಲಿನ ಮೂಲರೂಪದಿಂದ ಐಕ್ಯಂ **ಚ** = ಐಕ್ಯವನ್ನು ಸಹ **ಸಮಾಪ್ಯ** = ಹೊಂದಿ **ವಿಭಜ್ಯ ಚ** = ಪ್ರತ್ಯೇಕವಾಗಿಸಿಯೂ ಸಹ (ಪ್ರತ್ಯೇಕವಾಗಿ ಕೃಷ್ಣರೂಪದಿಂದಲೂ) **ಶ್ರಿಯಾ** = ಮಹಾಲಕ್ಷ್ಮಿಯಿಂದ **ಚ** = ಮತ್ತು **ಬ್ರಹ್ಮಮುಖ್ಯೈಃ** = ಬ್ರಹ್ಮ ಮೊದಲಾದವರಿಂದಲೂ **ಮುಕ್ತೈಃ** = ಮುಕ್ತರಿಂದಲೂ **ಸಂಪೂಜ್ಯಮಾನಃ (ಸನ್)** = ಚೆನ್ನಾಗಿ ಪೂಜಿಸಲ್ಪಡುವವನಾಗಿ **ಇಚ್ಛಾನುಸಾರತಃ** = (ತನ್ನ) ಇಚ್ಛೆಗೆ ಅನುಸಾರವಾಗಿ **ರೇಮೇ** = ಕ್ರೀಡಿಸಿದನು.

**ತಾತ್ಪರ್ಯ :-** ಅಮಿತಸದ್ಗುಣಸ್ವರೂಪನಾದ ಶ್ರೀಕೃಷ್ಣ ತನ್ನ ಮೂಲ ರೂಪದೊಂದಿಗೆ ಐಕ್ಯವನ್ನು ಹೊಂದಿಯೂ, ಪ್ರತ್ಯೇಕವಾಗಿಯೂ ಇರುತ್ತಾ, ಮಹಾಲಕ್ಷ್ಮಿಯಿಂದಲೂ, ಬ್ರಹ್ಮ ಮೊದಲಾದ ಮುಕ್ತರಿಂದಲೂ ಬಹಳವಾಗಿ ಪೂಜಿತನಾಗಿ, ಸ್ವೇಚ್ಛಾನುಸಾರವಾಗಿ ವಿಹರಿಸಿದ.

### ತಮ್ಮ ಲೋಕಗಳಿಗೆ ಮರಳಿದ ಬ್ರಹ್ಮಾದಿಗಳು

**ಬ್ರಹ್ಮಾಽಪಿ ಶರ್ವಾದಿಯುತಃ ಸ್ವಲೋಕಂ**
**ಪ್ರಾಪ್ತಃ ಪುನಸ್ತತ್ರ ಗತಂ ಚ ಕೃಷ್ಣಮ್ ।**
**ರೇಮೇಽಭಿಪಶ್ಯನ್ ಪ್ರತಿಪೂಜಯಂಸ್ತಂ**
**ಸುರಾಶ್ಚ ಸರ್ವೇ ರವಿಬಿಂಬಸಂಸ್ಥಮ್ ॥ ೩೦ ॥**

ಬ್ರಹ್ಮಾ ಅಪಿ ಶರ್ವಾದಿಯುತಃ ಸ್ವಲೋಕಂ ಪ್ರಾಪ್ತಃ ಪುನಃ ತತ್ರ ಗತಂ ಚ ಕೃಷ್ಣಮ್ । ರೇಮೇ ಅಭಿಪಶ್ಯನ್ ಪ್ರತಿಪೂಜಯನ್ ತಂ ಸುರಾಃ ಚ ಸರ್ವೇ ರವಿಬಿಂಬಸಂಸ್ಥಮ್ ॥ ೩೦ ॥

ದೂರ ಅನುಸರಿಸಿ ಕಣ್ಣು ಮುಚ್ಚಿದವರಾಗಿ, ಮೇಲೆ ಹೋಗಲಾಗದೆ ನಿಂತುಬಿಟ್ಟರು.

### ಶ್ರೀಕೃಷ್ಣನೊಂದಿಗೆ ಬ್ರಹ್ಮನ ಏಕಾಂತ ಸಂಭಾಷಣೆ

**ವೀಂದ್ರೇಶಶೇಷಾನುಗತಃ ಸ್ವಯಂಭೂ-**
**ರ್ಧಾಮ ಪ್ರವಿಷ್ಟಂ ತಮಜಂ ಪ್ರಣಮ್ಯ ।**
**ವೀಂದ್ರಾದಿಕೈರಪ್ಯಯುತಃ ಸ್ವಪಿತ್ರಾಽಽ-**
**ಶ್ಲಿಷ್ಟೋ ರಹಶ್ಚಾಕಥಯತ್ ತಥಾಽಸ್ತೌತ್ ॥ ೨೮ ॥**

**ವೀಂದ್ರೇಶಶೇಷಾನುಗತಃ ಸ್ವಯಂಭೂಃ ಧಾಮ ಪ್ರವಿಷ್ಟಂ ತಂ ಅಜಂ ಪ್ರಣಮ್ಯ । ವೀಂದ್ರಾದಿಕೈಃ ಅಪಿ ಅಯುತಃ ಸ್ವಪಿತ್ರಾ ಆಶ್ಲಿಷ್ಟಃ ರಹಃ ಚ ಅಕಥಯತ್ ತಥಾ ಅಸ್ತೌತ್ ॥ ೨೮ ॥**

**ಅರ್ಥ** :- **ವೀಂದ್ರೇಶಶೇಷಾನುಗತಃ** = ಗರುಡ ರುದ್ರ ಶೇಷರಿಂದ ಹಿಂಬಾಲಿಸಲ್ಪಟ್ಟ **ಸ್ವಯಂಭೂಃ** = ಬ್ರಹ್ಮದೇವರು **ಧಾಮ** = ವೈಕುಂಠವನ್ನು **ಪ್ರವಿಷ್ಟಂ** = ಪ್ರವೇಶಿಸಿದ **ತಂ** = ಆ **ಅಜಂ** = ಅಜನಾದ ಕೃಷ್ಣನನ್ನು **ಪ್ರಣಮ್ಯ** = ಭಕ್ತಿಯಿಂದ ನಮಸ್ಕರಿಸಿ **ವೀಂದ್ರಾದಿಕೈಃ ಅಪಿ** = ಗರುಡಾದಿಗಳಿಂದಲೂ ಸಹ **ಅಯುತಃ** = ವಿಯುಕ್ತನಾಗಿ (ತಾನೊಬ್ಬನೇ) **ಸ್ವಪಿತ್ರಾ** = ತನ್ನ ತಂದೆಯಿಂದ **ಆಶ್ಲಿಷ್ಟಃ (ಸನ್)** = ಆಲಿಂಗಿತನಾದವನಾಗಿ **ಚ** = ಮತ್ತು **ರಹಃ** = ಏಕಾಂತದಲ್ಲಿ **ಅಕಥಯತ್** = ಸಂಭಾಷಿಸಿದನು **ತಥಾ** = ಹಾಗೂ **ಅಸ್ತೌತ್** = ಸ್ತುತಿಸಿದನು.

**ತಾತ್ಪರ್ಯ** :- ಗರುಡ, ರುದ್ರ, ಶೇಷರಿಂದ ಹಿಂಬಾಲಿಸಲ್ಪಟ್ಟು, ಬ್ರಹ್ಮದೇವರು ತನ್ನ ಪರಂಧಾಮವನ್ನು ಪ್ರವೇಶಿಸಿದ ಆ ಶ್ರೀಕೃಷ್ಣನನ್ನು ನಮಿಸಿ, ಗರುಡಾದಿಗಳನ್ನು ಬಿಟ್ಟು ತಾನೊಬ್ಬನೇ ತನ್ನ ತಂದೆಯಾದ ಆ ಶ್ರೀಹರಿಯಿಂದ ಆಲಿಂಗಿತನಾಗಿ ರಹಸ್ಯವಾಗಿ ಸಂಭಾಷಿಸಿದ. ಹಾಗೆಯೇ ಸ್ತುತಿಸಿದ.

### ಮೂಲರೂಪದೊಂದಿಗೆ ಶ್ರೀಕೃಷ್ಣನ ಐಕ್ಯ

**ಸ ಪೂರ್ವರೂಪೇಣ ಸಮಾಪ್ಯ ಚೈಕ್ಯಂ**
**ವಿಭಜ್ಯ ಚೇಚ್ಛಾನುಸೃತೋಽಥ ರೇಮೇ ।**

**ಹರಿಃ ಶ್ರಿಯಾ ಬ್ರಹ್ಮಮುಖ್ಯೈಶ್ಚ ಮುಕ್ತೈಃ**
**ಸಂಪೂಜ್ಯಮಾನೋಽಮಿತಸದ್ಗುಣಾತ್ಮಾ ॥ ೨೯ ॥**

ಸಃ ಪೂರ್ವರೂಪೇಣ ಸಮಾಪ್ಯ ಚ ಐಕ್ಯಂ ವಿಭಜ್ಯ ಚ ಇಚ್ಛಾನುಸೃತಃ ಅಥ ರೇಮೇ । ಹರಿಃ ಶ್ರಿಯಾ ಬ್ರಹ್ಮಮುಖ್ಯೈಃ ಚ ಮುಕ್ತೈಃ ಸಂಪೂಜ್ಯಮಾನಃ ಅಮಿತಸದ್ಗುಣಾತ್ಮಾ ॥ ೨೯ ॥

**ಅರ್ಥ :-** **ಅಥ** = ಬಳಿಕ **ಅಮಿತಸದ್ಗುಣಾತ್ಮಾ** = ಮಿತಿಯಿಲ್ಲದ ಉತ್ತಮ ಗುಣಗಳ ಸ್ವರೂಪನಾದ **ಸಃ** = ಆ **ಹರಿಃ** = ಹರಿಯು (ಕೃಷ್ಣನು) **ಪೂರ್ವರೂಪೇಣ** = ಮೊದಲಿನ ಮೂಲರೂಪದಿಂದ ಐಕ್ಯಂ **ಚ** = ಐಕ್ಯವನ್ನು ಸಹ **ಸಮಾಪ್ಯ** = ಹೊಂದಿ **ವಿಭಜ್ಯ ಚ** = ಪ್ರತ್ಯೇಕವಾಗಿಸಿಯೂ ಸಹ (ಪ್ರತ್ಯೇಕವಾಗಿ ಕೃಷ್ಣರೂಪದಿಂದಲೂ) **ಶ್ರಿಯಾ** = ಮಹಾಲಕ್ಷ್ಮಿಯಿಂದ **ಚ** = ಮತ್ತು **ಬ್ರಹ್ಮಮುಖ್ಯೈಃ** = ಬ್ರಹ್ಮ ಮೊದಲಾದವರಿಂದಲೂ **ಮುಕ್ತೈಃ** = ಮುಕ್ತರಿಂದಲೂ **ಸಂಪೂಜ್ಯಮಾನಃ (ಸನ್)** = ಚೆನ್ನಾಗಿ ಪೂಜಿಸಲ್ಪಡುವವನಾಗಿ **ಇಚ್ಛಾನುಸಾರತಃ** = (ತನ್ನ) ಇಚ್ಛೆಗೆ ಅನುಸಾರವಾಗಿ **ರೇಮೇ** = ಕ್ರೀಡಿಸಿದನು.

**ತಾತ್ಪರ್ಯ :-** ಅಮಿತಸದ್ಗುಣಸ್ವರೂಪನಾದ ಶ್ರೀಕೃಷ್ಣ ತನ್ನ ಮೂಲ ರೂಪದೊಂದಿಗೆ ಐಕ್ಯವನ್ನು ಹೊಂದಿಯೂ, ಪ್ರತ್ಯೇಕವಾಗಿಯೂ ಇರುತ್ತಾ, ಮಹಾಲಕ್ಷ್ಮಿಯಿಂದಲೂ, ಬ್ರಹ್ಮ ಮೊದಲಾದ ಮುಕ್ತರಿಂದಲೂ ಬಹಳವಾಗಿ ಪೂಜಿತನಾಗಿ, ಸ್ವೇಚ್ಛಾನುಸಾರವಾಗಿ ವಿಹರಿಸಿದ.

### ತಮ್ಮ ಲೋಕಗಳಿಗೆ ಮರಳಿದ ಬ್ರಹ್ಮಾದಿಗಳು

**ಬ್ರಹ್ಮಾಽಪಿ ಶರ್ವಾದಿಯುತಃ ಸ್ವಲೋಕಂ**
**ಪ್ರಾಪ್ತಃ ಪುನಸ್ತತ್ರ ಗತಂ ಚ ಕೃಷ್ಣಮ್ ।**
**ರೇಮೇಽಭಿಪಶ್ಯನ್ ಪ್ರತಿಪೂಜಯಂಸ್ತಂ**
**ಸುರಾಶ್ಚ ಸರ್ವೇ ರವಿಬಿಂಬಸಂಸ್ಥಮ್ ॥ ೩೦ ॥**

ಬ್ರಹ್ಮಾ ಅಪಿ ಶರ್ವಾದಿಯುತಃ ಸ್ವಲೋಕಂ ಪ್ರಾಪ್ತಃ ಪುನಃ ತತ್ರ, ಗತಂ ಚ ಕೃಷ್ಣಮ್ । ರೇಮೇ ಅಭಿಪಶ್ಯನ್ ಪ್ರತಿಪೂಜಯನ್ ತಂ ಸುರಾಃ ಚ ಸರ್ವೇ ರವಿಬಿಂಬಸಂಸ್ಥಮ್ ॥ ೩೦ ॥

**ಅರ್ಥ** :- **ಶರ್ವಾದಿಯುತಃ** = ರುದ್ರಾದಿಗಳಿಂದ ಕೂಡಿಕೊಂಡ **ಬ್ರಹ್ಮಾ ಅಪಿ** = ಬ್ರಹ್ಮದೇವರು ಸಹ **ಸ್ವಲೋಕಂ** = ತಮ್ಮ ಲೋಕವನ್ನು **ಪ್ರಾಪ್ತಃ (ಸನ್)** = ಸೇರಿದವರಾಗಿ **ಪುನಃ** = ಮತ್ತೆ **ತತ್ರ ಚ** = ಅಲ್ಲಿಯೂ (ಸತ್ಯಲೋಕದಲ್ಲಿಯೂ) **ಗತಂ** = ಹೋಗಿ ನೆಲೆಸಿರುವ **ತಂ** = ಆ **ಕೃಷ್ಣಂ** = ಕೃಷ್ಣನನ್ನು **ಅಭಿಪಶ್ಯನ್ (ಸನ್)** = ನೋಡುವವರಾಗಿ **ಪ್ರತಿಪೂಜಯನ್ (ಸನ್)** = ಪೂಜಿಸುವವರಾಗಿ **ರೇಮೇ** = ಆನಂದಿಸಿದರು. **ಚ** = ಮತ್ತು **ಸರ್ವೇ** = ಎಲ್ಲ **ಸುರಾಃ** = ದೇವತೆಗಳು **ರವಿಬಿಂಬಸಂಸ್ಥಂ** = ಸೂರ್ಯಮಂಡಲದಲ್ಲಿ ನೆಲೆಸಿದ **ತಂ** = ಆ ಕೃಷ್ಣನನ್ನು **(ಅಭಿಪಶ್ಯಂತಃ ಸಂತಃ)** = ನೋಡುವವರಾಗಿ **(ಪೂಜಯಂತಃ ಸಂತಃ)** = ಪೂಜಿಸುವವರಾಗಿ **(ರೇಮಿರೇ)** = ಆನಂದಿಸಿದರು.

**ತಾತ್ಪರ್ಯ** :- ಬ್ರಹ್ಮದೇವರು ರುದ್ರಾದಿಗಳೊಂದಿಗೆ ಕೂಡಿ, ತನ್ನ ಲೋಕಕ್ಕೆ ತೆರಳಿ, ಅಲ್ಲಿದ್ದ ಕೃಷ್ಣನನ್ನು ವಿಶೇಷವಾಗಿ ನೋಡುತ್ತಲೂ, ಪರಿಪರಿಯಿಂದ ಪೂಜಿಸುತ್ತಲೂ ಆನಂದಿಸಿದರು. ಇತರ ಎಲ್ಲ ದೇವತೆಗಳು ಸೂರ್ಯಬಿಂಬದಲ್ಲಿದ್ದ ಕೃಷ್ಣನನ್ನು ನೋಡುತ್ತಾ, ಪೂಜಿಸಿ, ನಲಿದರು.

### ಶ್ರೀಕೃಷ್ಣನ ದೇಹತ್ಯಾಗದ ನಾಟಕ

**ಯತೋ ನ ದರ್ಶಿತಾ ಭ್ರಾಂತಿಃ ಪ್ರಾದುರ್ಭಾವೇಷ್ವಪಿ ಕ್ವಚಿತ್ ।**
**ದೇಹತ್ಯಾಗಾನುಕಾರೇಣ ಹರಿಣಾ ತದಿಹಾಚ್ಯುತಃ ॥ ೩೦ ॥**

ಯತಃ ನ ದರ್ಶಿತಾ ಭ್ರಾಂತಿಃ ಪ್ರಾದುರ್ಭಾವೇಷು ಅಪಿ ಕ್ವಚಿತ್ ।
ದೇಹತ್ಯಾಗಾನುಕಾರೇಣ ಹರಿಣಾ ತತ್ ಇಹ ಅಚ್ಯುತಃ ॥ ೩೦ ॥

**ಮೋಹಯಿತ್ವಾಽಸುರಾನಂಧಂತಮಃ ಪ್ರಾಪಯಿತುಂ ಪ್ರಭುಃ ।**
**ಚಿದಾನಂದೈಕದೇಹೋಽಪಿ ತ್ಯಕ್ತಂ ದೇಹಮಿವಾಪರಮ್ ॥ ೩೧ ॥**

ಮೋಹಯಿತ್ವಾ ಅಸುರಾನ್ ಅಂಧಂತಮಃ ಪ್ರಾಪಯಿತುಂ ಪ್ರಭುಃ ।
ಚಿದಾನಂದೈಕದೇಹಃ ಅಪಿ ತ್ಯಕ್ತಂ ದೇಹಂ ಇವ ಅಪರಮ್ ॥ ೩೧ ॥

**ಸೃಷ್ಟ್ವಾ ಸ್ವದೇಹೋಪಮಿತಂ ಶಯಾನಂ ಭುವ್ಯಗಾದ್ದಿವಮ್ ।**
**ದಾರುಕೋಕ್ತ್ಯಾ ಸಮಾಯಾತಃ ಪಾರ್ಥಸ್ತಮದಹತ್ ತದಾ ॥ ೩೨ ॥**

**ಸೃಷ್ಟ್ವಾ ಸ್ವದೇಹೋಪಮಿತಂ ಶಯಾನಂ ಭುವಿ ಅಗಾತ್ ದಿವಮ್ । ದಾರುಕೋಕ್ತ್ಯಾ ಸಮಾಯಾತಃ ಪಾರ್ಥಃ ತಂ ಅದಹತ್ ತದಾ ॥ ೩೩ ॥**

**ಅರ್ಥ** :– **ಯತಃ** = ಯಾವ ಕಾರಣದಿಂದ **ಹರಿಣಾ** = ಶ್ರೀಹರಿಯಿಂದ **ಪ್ರಾದುರ್ಭಾವೇಷು** = ಅವತಾರಗಳಲ್ಲಿ **ಕ್ವಚಿತ್ ಅಪಿ** = ಎಲ್ಲೂ ಸಹ **ದೇಹತ್ಯಾಗಾನುಕಾರೇಣ** = ದೇಹತ್ಯಾಗವನ್ನು ಅನುಕರಿಸುವ ರೂಪದ **ಭ್ರಾಂತಿಃ** = ಭ್ರಾಂತಿಯು **ನ ದರ್ಶಿತಾ** = ತೋರಿಸಿರಲಿಲ್ಲವೋ **ತತ್** = ಆ ಕಾರಣದಿಂದ **ಅಚ್ಯುತಃ** = ನಾಶರಹಿತನಾದ ಶ್ರೀಹರಿಯು **ಇಹ** = ಇಲ್ಲಿ **ಅಸುರಾನ್** = ಅಸುರರನ್ನು **ಮೋಹಯಿತ್ವಾ** = ಮೋಹಗೊಳಿಸಿ **ಅಂಧಂತಮಃ** = ಅಂಧಂತಮಸ್ಸನ್ನು **ಪ್ರಾಪಯಿತುಂ** = ಹೊಂದಿಸಲೆಂದು **ಚಿದಾನಂದೈಕದೇಹಃ ಅಪಿ** = ಕೇವಲ ಜ್ಞಾನ–ಆನಂದಗಳೇ ದೇಹವಾಗಿ ಉಳ್ಳವನಾದರೂ ಸಹ **ಪ್ರಭುಃ** = ಸಮರ್ಥನಾದ ಕೃಷ್ಣನು **ಸ್ವದೇಹೋಪಮಿತಂ** = ತನ್ನ ದೇಹವನ್ನು ಹೋಲುವ **ಭುವಿ** = ಭೂಮಿಯಲ್ಲಿ **ಶಯಾನಂ** = (ಸತ್ತಂತೆ) ಮಲಗಿದ **ಅಪರಂ** = ಬೇರೊಂದು **ತ್ಯಕ್ತಂ ಇವ** = ತ್ಯಜಿಸಿದಂತೆ ಇರುವ **ದೇಹಂ** = ದೇಹವನ್ನು **ಸೃಷ್ಟ್ವಾ** = ಸೃಷ್ಟಿಸಿ **ದಿವಂ** = ವೈಕುಂಠಕ್ಕೆ **ಅಗಾತ್** = ತೆರಳಿದನು. **ತದಾ** = ಆಗ **ದಾರುಕೋಕ್ತ್ಯಾ** = ದಾರುಕನ ಮಾತಿನಂತೆ **ಸಮಾಯಾತಃ** = ಆಗಮಿಸಿದ **ಪಾರ್ಥಃ** = ಅರ್ಜುನನು **ತಂ** = ಆ ದೇಹವನ್ನು **ಅದಹತ್** = ದಹಿಸಿದನು.

**ತಾತ್ಪರ್ಯ** :- ಅಚ್ಯುತನಾದ ಶ್ರೀಹರಿ ತನ್ನ ಆ ಮುಂಚಿನ ಯಾವ ಅವತಾರಗಳಲ್ಲೂ ಒಮ್ಮೆಯೂ ದೇಹತ್ಯಾಗರೂಪದ ಭ್ರಾಂತಿಯನ್ನು ಉಂಟು ಮಾಡಿರಲಿಲ್ಲ. ಅದರಿಂದ ಇಲ್ಲಿ ಅಸುರರನ್ನು ಮೋಹಗೊಳಿಸಿ, ಅಂಧಂತಮಸ್ಸಿಗೆ ಕಳುಹಿಸಲೆಂದು ತಾನು ಕೇವಲ ಜ್ಞಾನಾನಂದದೇಹನಾದರೂ, ತನ್ನ ದೇಹದಂತಹ ಮತ್ತೊಂದು ದೇಹವನ್ನು ನಿರ್ಮಿಸಿ, ಅದನ್ನು ತೊರೆದು, ಭೂಮಿಯಲ್ಲಿ ಒರಗಿಸಿ, ವೈಕುಂಠಕ್ಕೆ ತೆರಳಿದ. ಅರ್ಜುನ ದಾರುಕನ ಮಾತಿನಂತೆ ಅಲ್ಲಿಗೆ ಬಂದು ಅದನ್ನು ದಹನಮಾಡಿದ.

### ಬಲರಾಮಾದಿಗಳಿಗೆ ಅರ್ಜುನನಿಂದ ಅಂತ್ಯಕಾರ್ಯ

**ರೌಹಿಣೇಯಾದಿಕಾನಾಂ ಚ ಶರೀರಾಣಿ ಪ್ರಧಾನತಃ ।**
**ದಾರುಕೋ ವಿಷ್ಣುಲೋಕಂ ತು ಪುನರಾಪ ಯಥಾಗತಮ್ ॥ ೩೪ ॥**

**ರೌಹಿಣೇಯಾದಿಕಾನಾಂ ಚ ಶರೀರಾಣಿ ಪ್ರಧಾನತಃ । ದಾರುಕಃ ವಿಷ್ಣುಲೋಕಂ ತು ಪುನಃ ಆಪ ಯಥಾಗತಮ್ ॥ ೩೪ ॥**

**ಅರ್ಥ** :- **ಚ** = ಮತ್ತು **ರೌಹಿಣೇಯಾದಿಕಾನಾಂ** = ಬಲರಾಮ ಮೊದಲಾದವರ **ಶರೀರಾಣಿ** = ಶರೀರಗಳನ್ನು **ಪ್ರಧಾನತಃ** = ಮುಖ್ಯವಾಗಿ **(ಅದಹತ್)** = ದಹನ ಮಾಡಿದ. **ದಾರುಕಃ** = ದಾರುಕನು ವಿಷ್ಣುಲೋಕಂ **ತು** = ವಿಷ್ಣುಲೋಕವನ್ನಾದರೋ **ಯಥಾಗತಂ** = ಹೇಗೆ ಬಂದಿದ್ದನೋ **(ತಥಾ)** = ಹಾಗೆಯೇ **ಪುನಃ** = ಮತ್ತೆ **ಆಪ** = ಸೇರಿದನು.

**ತಾತ್ಪರ್ಯ** :- ಅರ್ಜುನನು ಬಲರಾಮ ಮೊದಲಾದವರ ಶರೀರಗಳನ್ನು ಸಹ ಮುಖ್ಯವಾಗಿ ದಹನಮಾಡಿದ. ದಾರುಕ ಬಂದಿದ್ದಂತೆಯೇ ಮರಳಿ ವಿಷ್ಣುಲೋಕಕ್ಕೆ ತೆರಳಿದ.

ರುಗ್ಮಿಣೀ ಸತ್ಯಭಾಮೆಯರು ಅದೃಶ್ಯರಾದರು

**ತಥೈವ ಜನಮೋಹಾಯ ಪ್ರಾಪ್ಯ ವಹ್ನಾವದೃಶ್ಯತಾಮ್ ।**
**ರುಗ್ಮಿಣ್ಯಗಾದ್ಧರೇಃ ಪಾರ್ಶ್ವಂ ಸತ್ಯಾ ಕೃತ್ವಾ ತಪಸ್ತಥಾ ॥ ೩೫ ॥**

**ತಥಾ ಏವ ಜನಮೋಹಾಯ ಪ್ರಾಪ್ಯ ವಹ್ನೌ ಅದೃಶ್ಯತಾಮ್ । ರುಗ್ಮಿಣೀ ಅಗಾತ್ ಹರೇಃ ಪಾರ್ಶ್ವಂ ಸತ್ಯಾ ಕೃತ್ವಾ ತಪಃ ತಥಾ ॥ ೩೫ ॥**

**ಅರ್ಥ** :- **(ತಥಾ) ಏವ** = ಹಾಗೆಯೇ (ಕೃಷ್ಣನಂತೆಯೇ) **ಜನಮೋಹಾಯ** = (ಅಸುರ)ಜನರನ್ನು ಮೋಹಿಸಲೆಂದು **ರುಗ್ಮಿಣೀ** = ರುಗ್ಮಿಣೀದೇವಿಯು **ವಹ್ನೌ** = ಅಗ್ನಿಯಲ್ಲಿ **ಅದೃಶ್ಯತಾಂ** = ಕಾಣದಿರುವಿಕೆಯನ್ನು **ಪ್ರಾಪ್ಯ** = ಹೊಂದಿ **ಹರೇಃ** = ಶ್ರೀಹರಿಯ **ಪಾರ್ಶ್ವಂ** = ಬಳಿಗೆ **ಅಗಾತ್** = ತೆರಳಿದಳು. **ತಥಾ** = ಹಾಗೆಯೇ **ಸತ್ಯಾ** = ಸತ್ಯಭಾಮಾದೇವಿಯು **ತಪಃ** = ತಪಸ್ಸನ್ನು **ಕೃತ್ವಾ** = ಮಾಡಿ **(ಹರೇಃ ಪಾರ್ಶ್ವಂ ಅಗಾತ್)** = ಶ್ರೀಹರಿಯ ಬಳಿಸಾರಿದಳು.

**ತಾತ್ಪರ್ಯ** :- ಅದರಂತೆ ಅಸುರಜನಮೋಹಕ್ಕೆಂದು ರುಗ್ಮಿಣಿಯು ಅಗ್ನಿಯಲ್ಲಿ ಅದೃಶ್ಯಳಾಗಿ ಶ್ರೀಹರಿಯ ಬಳಿಗೆ ತೆರಳಿದಳು. ಅದರಂತೆಯೇ ಸತ್ಯಭಾಮಾದೇವಿ ತಪಸ್ಸು ಮಾಡಿ ಕಾಡಿನಲ್ಲಿ ಅದೃಶ್ಯಳಾಗಿ ಹರಿಯನ್ನು ಸೇರಿದಳು.

ಅವರಿಬ್ಬರದು ಅಪ್ರಾಕೃತ ಶರೀರ

**ಚಿದಾನಂದೈಕದೇಹೇऽಪಿ ದ್ವಿರೂಪೇ ಇವ ತೇ ಯತಃ ।**
**ಏಕೈವಾತಃ ಕೃಷ್ಣವತ್ ತೇ ದುಷ್ಟಾನ್ ಮೋಹಯತಸ್ತಥಾ ॥ ೩೬ ॥**

**ಚಿದಾನಂದೈಕದೇಹೇ ಅಪಿ ದ್ವಿರೂಪೇ ಇವ ತೇ ಯತಃ । ಏಕಾ ಏವ ಅತಃ ಕೃಷ್ಣವತ್ ತೇ ದುಷ್ಟಾನ್ ಮೋಹಯತಃ ತಥಾ ॥ ೩೬ ॥**

**ಅರ್ಥ :–** **ಏಕಾ ಏವ** = ಒಬ್ಬಳೇ (ಮಹಾಲಕ್ಷ್ಮಿಯು) **ದ್ವಿರೂಪೇ ಇವ** (ಸ್ಥಿತೇ) = ಎರಡು ರೂಪಗಳಂತೆ ಇರುವ **ತೇ** = ಅವರಿಬ್ಬರು (ರುಗ್ಮಿಣೀ–ಸತ್ಯಭಾಮೆಯರು) **ಯತಃ** = ಯಾವ ಕಾರಣದಿಂದ **ಚಿದಾನಂದೈಕದೇಹೇ** = ಕೇವಲ ಜ್ಞಾನ–ಆನಂದ ದೇಹದವರೋ **ಅತಃ** = ಆದ್ದರಿಂದ **ತೇ** = ಅವರಿಬ್ಬರು **ಕೃಷ್ಣವತ್** = ಕೃಷ್ಣನಂತೆ **ದುಷ್ಟಾನ್** = ದುಷ್ಟರನ್ನು **ಮೋಹಯತಃ** = ಮೋಹಿಸುವವರು.

**ತಾತ್ಪರ್ಯ :-** ರುಗ್ಮಿಣೀ, ಸತ್ಯಭಾಮೆಯರು ಒಬ್ಬ ಮಹಾಲಕ್ಷ್ಮಿಯೇ ಎರಡು ಪ್ರತ್ಯೇಕ ರೂಪದವರಂತೆ ಇದ್ದವರು; ಅವರೂ ಸಹ ಕೃಷ್ಣನಂತೆ ದುಷ್ಟರನ್ನು ಮೋಹಗೊಳಿಸುವರು.

ಇತರ ಮಹಾಮಹಿಷಿಯರ ದೇಹತ್ಯಾಗ

**ಅನ್ಯಾ ಮಹಾಮಹಿಷ್ಯಸ್ತು ತ್ಯಕ್ತ್ವಾ ದೇಹಂ ಹುತಾಶನೇ ।**
**ಕಾಶ್ಚಿತ್ ಕಾಶ್ಚಿತ್ ತು ತಪಸಾ ತ್ಯಕ್ತದೇಹಾ ಹರಿಂ ಯಯುಃ ॥ ೩೭ ॥**

**ಅನ್ಯಾಃ ಮಹಾಮಹಿಷ್ಯಃ ತು ತ್ಯಕ್ತ್ವಾ ದೇಹಂ ಹುತಾಶನೇ । ಕಾಶ್ಚಿತ್ ಕಾಶ್ಚಿತ್ ತು ತಪಸಾ ತ್ಯಕ್ತದೇಹಾಃ ಹರಿಂ ಯಯುಃ ॥ ೩೭ ॥**

**ಅರ್ಥ :–** **ತಥಾ** = ಹಾಗೆಯೇ **ಅನ್ಯಾಃ** = ಇತರ **ಮಹಾಮಹಿಷ್ಯಃ** = (ಕೃಷ್ಣನ) ಮಹಾಮಹಿಷಿಯರಾದರೋ **ದೇಹಂ** = ದೇಹವನ್ನು **ತ್ಯಕ್ತ್ವಾ** = ತೊರೆದು **ಹರಿಂ** = ಹರಿಯನ್ನು ಕುರಿತು **ಯಯುಃ** = ತೆರಳಿದರು. **(ತಾಸು)** = ಅವರಲ್ಲಿ **ಕಾಶ್ಚಿತ್** = ಕೆಲವರು **ಹುತಾಶನೇ** = ಅಗ್ನಿಯಲ್ಲಿ **ದೇಹಂ** = ದೇಹವನ್ನು **ತ್ಯಕ್ತ್ವಾ** = ತ್ಯಜಿಸಿ, **ಕಾಶ್ಚಿತ್ ತು** = ಕೆಲವರಾದರೋ **ತಪಸಾ** = ತಪಸ್ಸಿನಿಂದ **ತ್ಯಕ್ತದೇಹಾಃ** = ದೇಹಬಿಟ್ಟವರಾಗಿ **ಹರಿಂ** = ಹರಿಯನ್ನು ಕುರಿತು **ಯಯುಃ** = ತೆರಳಿದರು.

**ತಾತ್ಪರ್ಯ** :- ಇತರ ಆರು ಮಹಾಮಹಿಷಿಯರು ಅಗ್ನಿಯಲ್ಲಿ ದೇಹವನ್ನು ತೊರೆದು, ಕೆಲವರು ತಪಸ್ಸು ಮಾಡಿ ದೇಹವನ್ನು ತೊರೆದು ಕೆಲವರು ಶ್ರೀಹರಿಯನ್ನು ಹೊಂದಿದರು.

ರೇವತಿ ಮೊದಲಾದವರ ದೇಹತ್ಯಾಗ

**ರೌಹಿಣೇಯಾದಿಕಾನಾಂ ಚ ಭಾರ್ಯಾ ವಹ್ನಿಮುಖೇ ತನುಮ್ ।**
**ತ್ಯಕ್ತ್ವಾ ಸ್ವಭರ್ತೄನೇವಾಪುಃ ಸರ್ವಾ ಏವ ಪತಿವ್ರತಾಃ ॥ ೩೮ ॥**

ರೌಹಿಣೇಯಾದಿಕಾನಾಂ ಚ ಭಾರ್ಯಾಃ ವಹ್ನಿಮುಖೇ ತನುಮ್ । ತ್ಯಕ್ತ್ವಾ ಸ್ವಭರ್ತೄನ್ ಏವ ಆಪುಃ ಸರ್ವಾಃ ಏವ ಪತಿವ್ರತಾಃ ॥ ೩೮ ॥

**ಅರ್ಥ** :- **ರೌಹಿಣೇಯಾದಿಕಾನಾಂ** = ರೋಹಿಣೀಪುತ್ರನಾದ ಬಲರಾಮ ಮೊದಲಾದವರ **ಭಾರ್ಯಾಃ ಚ** = ಪತ್ನಿಯರೂ ಸಹ **ವಹ್ನಿಮುಖೇ** = ಅಗ್ನಿಯ ಮೂಲಕ **ತನುಂ** = ದೇಹವನ್ನು **ತ್ಯಕ್ತ್ವಾ** = ತ್ಯಜಿಸಿ **ಸ್ವಭರ್ತೄನ್ ಏವ** = ತಮ್ಮ ಪತಿಗಳನ್ನೇ **ಆಪುಃ** = ಸೇರಿದರು. **ಸರ್ವಾಃ** = ಎಲ್ಲರೂ **ಪತಿವ್ರತಾಃ ಏವ** = ಪತಿವ್ರತೆಯರೇ.

**ತಾತ್ಪರ್ಯ** :- ಬಲರಾಮ ಮೊದಲಾದವರ ಪತ್ನಿಯರು ಅಗ್ನಿಯಲ್ಲಿ ದೇಹವನ್ನು ತೊರೆದು ತಮ್ಮ ಪತಿಗಳನ್ನೇ ಸೇರಿದರು; ಅವರೆಲ್ಲ ಮಹಾ ಪತಿವ್ರತೆಯರೇ ಆದವರು.

ವಸುದೇವನ ದೇಹತ್ಯಾಗ

**ವಸುದೇವಃ ಪಾರ್ಥಮುಖಾತ್ ಶ್ರುತ್ವೈತದ್ಯೋಗಮಾಸ್ಥಿತಃ ।**
**ತ್ಯಕ್ತ್ವಾ ದೇಹಂ ಕಶ್ಯಪತ್ವಂ ಪ್ರಾಪ ಕೃಷ್ಣಾನುರಾಗತಃ ॥ ೩೯ ॥**

ವಸುದೇವಃ ಪಾರ್ಥಮುಖಾತ್ ಶ್ರುತ್ವಾ ಏತತ್ ಯೋಗಂ ಆಸ್ಥಿತಃ । ತ್ಯಕ್ತ್ವಾ ದೇಹಂ ಕಶ್ಯಪತ್ವಂ ಪ್ರಾಪ ಕೃಷ್ಣಾನುರಾಗತಃ ॥ ೩೯ ॥

**ಅರ್ಥ** :- **ವಸುದೇವಃ** = ವಸುದೇವನು **ಪಾರ್ಥಮುಖಾತ್** = ಅರ್ಜುನನ ಮೂಲಕ **ಏತತ್** = ಇದನ್ನು (ಯಾದವರ ಮರಣವನ್ನು) **ಶ್ರುತ್ವಾ** = ಕೇಳಿ **ಯೋಗಂ** = ಯೋಗವನ್ನು **ಆಸ್ಥಿತಃ** = ಹೊಂದಿದವನಾಗಿ

**ದೇಹಂ** = ದೇಹವನ್ನು **ತ್ಯಕ್ತ್ವಾ** = ತ್ಯಜಿಸಿ **ಕೃಷ್ಣಾನುರಾಗತಃ** = ಕೃಷ್ಣಭಕ್ತಿಯಿಂದಾಗಿ **ಕಶ್ಯಪತ್ವಂ** = ಕಶ್ಯಪತ್ವವನ್ನು **ಪ್ರಾಪ** = ಪಡೆದನು.

**ತಾತ್ಪರ್ಯ** :- ಅರ್ಜುನನ ಮುಖದಿಂದ ವಸುದೇವ ಅದನ್ನು ಕೇಳಿ ಯೋಗಾರೂಢನಾಗಿ ದೇಹವನ್ನು ತೊರೆದು ಕೃಷ್ಣನ ಮೇಲಿನ ಭಕ್ತಿಯಿಂದಾಗಿ ಕಶ್ಯಪತ್ವವನ್ನು ಹೊಂದಿದ.

### ಅರ್ಜುನನಿಂದ ವಸುದೇವಾದಿಗಳಿಗೆ ಅಂತ್ಯಕ್ರಿಯೆ

**ತಸ್ಯಾರ್ಜುನೋಽಶ್ವಮೇಧಾಗ್ನಾವಂತ್ಯಕರ್ಮಾಕರೋತ್ ತದಾ ।**
**ತ್ಯಕ್ತದೇಹಾಸ್ತಸ್ಯ ಭಾರ್ಯಾ ವಹ್ನೌ ಪ್ರಾಪುಸ್ತಮೇವ ಚ ॥ ೪೦ ॥**

**ತಸ್ಯ ಅರ್ಜುನಃ ಅಶ್ವಮೇಧಾಗ್ನೌ ಅಂತ್ಯಕರ್ಮ ಅಕರೋತ್ ತದಾ । ತ್ಯಕ್ತದೇಹಾಃ ತಸ್ಯ ಭಾರ್ಯಾಃ ವಹ್ನೌ ಪ್ರಾಪುಃ ತಂ ಏವ ಚ ॥ ೪೦ ॥**

**ಅರ್ಥ** :- **ತದಾ** = ಆಗ **ಅರ್ಜುನಃ** = ಅರ್ಜುನನು **ಅಶ್ವಮೇಧಾಗ್ನೌ** = ಅಶ್ವಮೇಧಾಗ್ನಿಯಲ್ಲಿ **ತಸ್ಯ** = ಅವನ **ಅಂತ್ಯಕರ್ಮ** = ಅಂತ್ಯಕರ್ಮವನ್ನು **ಅಕರೋತ್** = ಮಾಡಿದನು. **ವಹ್ನೌ** = ಅಗ್ನಿಯಲ್ಲಿ **ತ್ಯಕ್ತದೇಹಾಃ** = ದೇಹಬಿಟ್ಟ **ತಸ್ಯ** = ಅವನ (ವಸುದೇವನ) **ಭಾರ್ಯಾಃ ಚ** = ಪತ್ನಿಯರು ಸಹ **ತಂ ಏವ** = ಅವನನ್ನೇ **ಪ್ರಾಪುಃ** = ಸೇರಿದರು.

**ತಾತ್ಪರ್ಯ** :- ಅರ್ಜುನ ಅಶ್ವಮೇಧಾಗ್ನಿಯಲ್ಲಿಯೇ ಆಗ ಅವನ ಅಂತ್ಯಕ್ರಿಯೆಯನ್ನು ಮಾಡಿದ. ವಸುದೇವನ ಪತ್ನಿಯರು ಅಗ್ನಿಯಲ್ಲಿ ದೇಹ ತೊರೆದು ಅವನನ್ನೇ ಹೊಂದಿದರು.

### ಸಮುದ್ರದಲ್ಲಿ ಮುಳುಗಿದ ದ್ವಾರಕೆ

**ಸ್ತ್ರಿಯೋ ಬಾಲಾಂಸ್ತಥಾಽಽದಾಯ ಧನಂ ಚೈವ ಧನಂಜಯಃ ।**
**ವಿನಿರ್ಯಯೌ ದ್ವಾರವತ್ಯಾಸ್ತಾಂ ಜಗ್ರಾಹ ಚ ಸಾಗರಃ ॥ ೪೧ ॥**

**ಸ್ತ್ರಿಯಃ ಬಾಲಾನ್ ತಥಾ ಆದಾಯ ಧನಂ ಚ ಏವ ಧನಂಜಯಃ । ವಿನಿರ್ಯಯೌ ದ್ವಾರವತ್ಯಾಃ ತಾಂ ಜಗ್ರಾಹ ಚ ಸಾಗರಃ ॥ ೪೧ ॥**

**ಅರ್ಥ** :– **ಧನಂಜಯಃ** = ಅರ್ಜುನನು **ಸ್ತ್ರಿಯಃ** = ಸ್ತ್ರೀಯರನ್ನು **ತಥಾ** = ಹಾಗೆಯೇ **ಬಾಲಾನ್** = ಮಕ್ಕಳನ್ನು **ಧನಂ ಚ ಏವ** = ಹಾಗೆಯೇ ಧನವನ್ನೂ ಸಹ **ಆದಾಯ** = ತೆಗೆದುಕೊಂಡು **ದ್ವಾರವತ್ಯಾಃ** = ದ್ವಾರಕೆಯಿಂದ **ವಿನಿರ್ಯಯೌ** = ಹೊರಟನು. **ತಾಂ** = ಆ ದ್ವಾರಕೆಯನ್ನು **ಸಾಗರಃ** = ಸಮುದ್ರವು **ಜಗ್ರಾಹ ಚ** = ಮುಳುಗಿಸಿತು ಸಹ.

**ತಾತ್ಪರ್ಯ** :- ಅರ್ಜುನನು ಹೆಂಗಸರನ್ನು, ಹಾಗೆಯೇ ಮಕ್ಕಳನ್ನು, ಧನವನ್ನು ತೆಗೆದುಕೊಂಡು ದ್ವಾರಾವತಿಯಿಂದ ಹೊರಟ. ದ್ವಾರಕೆಯನ್ನು ಸಮುದ್ರ ಮುಳುಗಿಸಿತು.

### ಅರ್ಜುನನ ಹೀನಾಯ ಸೋಲು

**ಸ್ತ್ರೀಬಾಲಸಹಿತೇ ಪಾರ್ಥೆ ಏಕಸ್ಮಿನ್ ಪಥಿ ಗಚ್ಛತಿ ।**
**ಶಾಪಾತ್ ಸುಪಾಪಾ ಆಭೀರಾಃ ಸ್ತ್ರೀಜನಾನ್ ಜಹುರುದ್ಧತಾಃ ॥ ೪೨ ॥**

**ಸ್ತ್ರೀಬಾಲಸಹಿತೇ ಪಾರ್ಥೇ ಏಕಸ್ಮಿನ್ ಪಥಿ ಗಚ್ಛತಿ । ಶಾಪಾತ್ ಸುಪಾಪಾಃ ಆಭೀರಾಃ ಸ್ತ್ರೀಜನಾನ್ ಜಹುಃ ಉದ್ಧತಾಃ ॥ ೪೨ ॥**

**ಅರ್ಥ** :– **ಸ್ತ್ರೀಬಾಲಸಹಿತೇ** = ಹೆಂಗಸರು ಮಕ್ಕಳ ಸಹಿತನಾದ **ಪಾರ್ಥೇ** = ಅರ್ಜುನನು **ಏಕಸ್ಮಿನ್** = ಒಂದು **ಪಥಿ** = ದಾರಿಯಲ್ಲಿ **ಗಚ್ಛತಿ (ಸತಿ)** = ಹೋಗುತ್ತಿರುವಾಗ **ಶಾಪಾತ್** = ಶಾಪದಿಂದ **ಸುಪಾಪಾಃ** = ಅತ್ಯಂತ ಪಾಪಿಗಳಾದ **ಉದ್ಧತಾಃ** = ಉನ್ಮತ್ತರಾದ **ಆಭೀರಾಃ** = ಆಭೀರರು **ಸ್ತ್ರೀಜನಾನ್** = ಸ್ತ್ರೀಜನರನ್ನು **ಜಹುಃ** = ಅಪಹರಿಸಿದರು.

**ತಾತ್ಪರ್ಯ** :- ಹೆಂಗಸರು ಮಕ್ಕಳೊಂದಿಗೆ ಅರ್ಜುನ ದಾರಿಯಲ್ಲಿ ಸಾಗುತ್ತಿದ್ದಾಗ ಶ್ರೀಕೃಷ್ಣನ ಶಾಪದಿಂದ ಮಹಾಪಾಪಿಗಳಾದ ಉನ್ಮತ್ತರಾದ ಆಭೀರರು ಸ್ತ್ರೀಜನರನ್ನು ಅಪಹರಿಸಿದರು :

### ಮ್ಲೇಚ್ಛರ ವಶರಾದ ಕೃಷ್ಣಪತ್ನಿಯರು

**ಯಾಸ್ತಾಃ ಷೋಡಶಸಾಹಸ್ರವನಿತಾಃ ಶತಸಂಯುತಾಃ ।**
**ಕೃಷ್ಣಶಾಪಾನ್ಮ್ಲೇಚ್ಛವಶಂ ಯಯುರ್ದರ್ಪನಿಮಿತ್ತತಃ ॥ ೪೩ ॥**

**ಯಾಃ ತಾಃ ಷೋಡಶಸಾಹಸ್ರವನಿತಾಃ ಶತಸಂಯುತಾಃ । ಕೃಷ್ಣಶಾಪಾತ್ ಮ್ಲೇಚ್ಛವಶಂ ಯಯುಃ ದರ್ಪನಿಮಿತ್ತತಃ ॥ ೪೩ ॥**

**ಅರ್ಥ** :- **ಯಾಃ** = ಯಾವ **ಶತಸಂಯುತಾಃ** = ನೂರು ಸಂಖ್ಯೆಯಿಂದ ಕೂಡಿದ **ಷೋಡಶಸಾಹಸ್ರವನಿತಾಃ** = ಹದಿನಾರುಸಾವಿರ ಪತ್ನಿಯರು **(ಆಸುಃ)** = ಇದ್ದರೋ **ತಾಃ** = ಅವರು **ದರ್ಪನಿಮಿತ್ತತಃ** = (ಕೃಷ್ಣನ ವಿಷಯದಲ್ಲಿ ಮಾಡಿದ) ಗರ್ವದ ಕಾರಣದಿಂದ **ಕೃಷ್ಣಶಾಪಾತ್** = ಕೃಷ್ಣಶಾಪದಿಂದ **ಮ್ಲೇಚ್ಛವಶಂ** = ಮ್ಲೇಚ್ಛರ ವಶವನ್ನು **ಯಯುಃ** = ಹೊಂದಿದರು.

**ತಾತ್ಪರ್ಯ** :- ಕೃಷ್ಣನ ಹದಿನಾರುಸಾವಿರದ ಒಂದು ನೂರು ಪತ್ನಿಯರು ಕೃಷ್ಣನ ಶಾಪದಿಂದ ಮ್ಲೇಚ್ಛವಶರಾದರು.

**ಹ್ರಿಯಮಾಣೇ ಧನೇ ಚೈವ ವನಿತಾಸು ಚ ವಾಸವಿಃ ।**
**ಯುಯುತ್ಸುರ್ಗಾಂಡಿವಂ ಸಜ್ಯಂ ಕೃಚ್ಛ್ರೇಣೈವ ಚಕಾರ ಹ ॥ ೪೪ ॥**

**ಹ್ರಿಯಮಾಣೇ ಧನೇ ಚ ಏವ ವನಿತಾಸು ಚ ವಾಸವಿಃ । ಯುಯುತ್ಸುಃ ಗಾಂಡಿವಂ ಸಜ್ಯಂ ಕೃಚ್ಛ್ರೇಣ ಏವ ಚಕಾರ ಹ ॥ ೪೪ ॥**

**ಅರ್ಥ** :- **ಧನೇ** = ಧನವು **ಹ್ರಿಯಮಾಣೇ (ಸತಿ)** = ಅಪಹರಿಸಲ್ಪಡುವಾಗ **ಚ ಏವ** = ಹಾಗೆಯೇ **ವನಿತಾಸು ಚ** = ಸ್ತ್ರೀಯರು ಸಹ **(ಹೃತಾಸು ಸತೀಷು)** = ಅಪಹೃತರಾದಾಗ **ಯುಯುತ್ಸುಃ** = ಯುದ್ಧ ಮಾಡಲು ಬಯಸಿದ **ವಾಸವಿಃ** = ಇಂದ್ರಪುತ್ರನಾದ ಅರ್ಜುನನು **ಗಾಂಡಿವಂ** = ಗಾಂಡಿವವನ್ನು **ಕೃಚ್ಛ್ರೇಣ ಏವ** = ಬಹು ಕಷ್ಟದಿಂದಲೇ **ಸಜ್ಯಂ ಚಕಾರ** = ಹೆದೆಯೇರಿಸಿದನು. **ಹ** = ಅಯ್ಯೋ!

**ತಾತ್ಪರ್ಯ** :- ಧನವು ಮತ್ತು ಸ್ತ್ರೀಯರು ಹಾಗೆ ಆಭೀರರಿಂದ ಅಪಹೃತರಾದಾಗ ಅರ್ಜುನ ಯುದ್ಧ ಮಾಡಲು ಬಯಸಿ ಗಾಂಡೀವವನ್ನು ತುಂಬಾ ಕಷ್ಟದಿಂದಲೇ ಹೆದೆಯೇರಿಸಿದ.

### ಅಸ್ತ್ರ ಮರೆತ ಅಸ್ತ್ರಜ್ಞಚೂಡಾಮಣಿ

**ಕ್ಷೀಣಾಸ್ತಸ್ಯ ಶರಾ ದೈವಾನ್ನಾಸ್ತ್ರಾಣಿ ಸ್ಮೃತಿಮಾಯಯುಃ ।**
**ಸ ತದ್ದೈವಕೃತಂ ಜ್ಞಾತ್ವಾ ಸಂಸ್ಮರನ್ ಪುರುಷೋತ್ತಮಮ್ ।**
**ನಿಘ್ನನ್ ಶತ್ರೂನ್ ಗಾಂಡಿವೇನ ಶೇಷಂ ರಕ್ಷನ್ ಕುರೂನಗಾತ್ ॥ ೪೫ ॥**

**ಕ್ಷೀಣಾಃ ತಸ್ಯ ಶರಾಃ ದೈವಾತ್ ನ ಅಸ್ತ್ರಾಣಿ ಸ್ಮೃತಿಂ ಆಯಯುಃ । ಸಃ ತತ್ ದೈವಕೃತಂ ಜ್ಞಾತ್ವಾ ಸಂಸ್ಮರನ್ ಪುರುಷೋತ್ತಮಮ್ । ನಿಘ್ನನ್ ಶತ್ರೂನ್ ಗಾಂಡಿವೇನ ಶೇಷಂ ರಕ್ಷನ್ ಕುರೂನ್ ಅಗಾತ್ ॥ ೪೫ ॥**

**ಅರ್ಥ** :- **ತಸ್ಯ** = ಆ ಅರ್ಜುನನ **ಶರಾಃ** = ಬಾಣಗಳು **ದೈವಾತ್** = ದೈವದಿಂದಾಗಿ **ಕ್ಷೀಣಾಃ (ಅಭವನ್)** = ಕ್ಷೀಣಿಸಿದವು. **ಅಸ್ತ್ರಾಣಿ** = ಅಸ್ತ್ರಗಳು (ಮಂತ್ರಗಳು) **ಸ್ಮೃತಿಂ** = ಸ್ಮರಣೆಗೆ **ನ ಆಯಯುಃ** = ಬರದೇಹೋದವು. **ಸಃ** = ಅವನು **ತತ್** = ಅದನ್ನು **ದೈವಕೃತಂ** = ದೇವರು ಮಾಡಿದ್ದು (ಇತಿ) = ಎಂದು **ಜ್ಞಾತ್ವಾ** = ತಿಳಿದು, **ಪುರುಷೋತ್ತಮಂ** = ಪುರುಷೋತ್ತಮನಾದ ಕೃಷ್ಣನನ್ನು **ಸಂಸ್ಮರನ್** = ಬಹಳವಾಗಿ ಸ್ಮರಿಸುವವನಾಗಿ **ಗಾಂಡಿವೇನ** = ಗಾಂಡಿವಧನುಸ್ಸಿನಿಂದ **ಶತ್ರೂನ್** = ಶತ್ರುಗಳನ್ನು **ನಿಘ್ನನ್** = ಸಂಹರಿಸುವವನಾಗಿ **ಶೇಷಂ** = ಉಳಿದವರನ್ನು **ರಕ್ಷನ್** = ರಕ್ಷಿಸುವವನಾಗಿ **ಕುರೂನ್** = ಕುರುಕ್ಷೇತ್ರವನ್ನು ಕುರಿತು **ಅಗಾತ್** = ತೆರಳಿದನು.

**ತಾತ್ಪರ್ಯ** :- ದೇವಮಾಯೆಯಿಂದ ಅವನ ಬಾಣಗಳು ಸಹ ಬರಿದಾದವು; ಅಸ್ತ್ರಗಳು ಸಹ ಮರೆಯತೊಡಗಿದವು. ಅವನು ಅದನ್ನು ದೈವಕೃತವೆಂದು ಬಗೆದು ಪುರುಷೋತ್ತಮನಾದ ಕೃಷ್ಣನನ್ನು ಬಹಳವಾಗಿ ಸ್ಮರಿಸುತ್ತಾ ಗಾಂಡೀವದಿಂದಲೇ ಶತ್ರುಗಳನ್ನು ಸಂಹರಿಸುತ್ತಾ ಉಳಿದವರನ್ನು ರಕ್ಷಿಸಿಕೊಂಡು ಕುರುಕ್ಷೇತ್ರಕ್ಕೆ ತೆರಳಿದ.

### ಕುರುಕ್ಷೇತ್ರದಲ್ಲಿ ಶ್ರೀವ್ಯಾಸಸಂದರ್ಶನ

**ತದಾ ಕುರುಕ್ಷೇತ್ರಗತಂ ಜಗದ್ಗುರುಂ**
**ಸುಪೂರ್ಣವಿಜ್ಞಾನಬಲಾಬ್ಧಿಸತ್ಸುಖಮ್ ।**
**ತಮೇವ ವಾಸಿಷ್ಠಕುಲೋದ್ವಹಂ ಹರಿಂ**
**ನಿರೀಕ್ಷ್ಯ ದುಃಖೇನ ಪಪಾತ ಪಾದಯೋಃ ॥ ೪೬ ॥**

ತದಾ ಕುರುಕ್ಷೇತ್ರಗತಂ ಜಗದ್ಗುರುಂ ಸುಪೂರ್ಣವಿಜ್ಞಾನಬಲಾಬ್ಧಿಸತ್ಸುಖಮ್ । ತಂ ಏವ ವಾಸಿಷ್ಠಕುಲೋದ್ವಹಂ ಹರಿಂ ನಿರೀಕ್ಷ್ಯ ದುಃಖೇನ ಪಪಾತ ಪಾದಯೋಃ ॥ ೪೬ ॥

**ಅರ್ಥ** :- **ತದಾ** = ಆಗ **ಕುರುಕ್ಷೇತ್ರಗತಂ** = ಕುರಿಕ್ಷೇತ್ರದಲ್ಲಿದ್ದ **ಜಗದ್ಗುರುಂ** = ಜಗದ್ಗುರುವಾದ **ಸುಪೂರ್ಣವಿಜ್ಞಾನಬಲಾಬ್ಧಿಸತ್ಸುಖಂ** = ಪರಿಪೂರ್ಣವಾದ ವಿಜ್ಞಾನ-ಬಲಗಳಿಂದ ಸಾಗರದಂತಿರುವ ಹಾದೂ ಉತ್ತಮಸುಖವುಳ್ಳ **ವಾಸಿಷ್ಠಕುಲೋದ್ವಹಂ** = ವಾಸಿಷ್ಠಕುಲದಲ್ಲಿ ಅವತರಿಸಿದ **ತಂ** = ಆ **ಹರಿಂ ಏವ** = ವೇದವ್ಯಾಸರೂಪದ ಹರಿಯನ್ನೇ **ನಿರೀಕ್ಷ್ಯ** = ನೋಡಿ **ದುಃಖೇನ** = ದುಃಖದಿಂದ **ಪಾದಯೋಃ** = ಎರಡು ಪಾದಗಳಲ್ಲಿ **ಪಪಾತ** = ಬಿದ್ದನು.

**ತಾತ್ಪರ್ಯ** :- ಆಗ ಕುರುಕ್ಷೇತ್ರದಲ್ಲಿದ್ದ ಪರಿಪೂರ್ಣವಾದ ಜ್ಞಾನ ಬಲಗಳ ಸಾಗರನೂ, ಉತ್ತಮ ಸುಖಪೂರ್ಣನೂ, ಜಗದ್ಗುರುವೂ ಆದ ವೇದವ್ಯಾಸರೂಪದ ಅದೇ ಶ್ರೀಹರಿಯನ್ನು ಕಂಡು ಅರ್ಜುನ ದುಃಖದಿಂದ ಅವರ ಪಾದಗಳಲ್ಲಿ ಬಿದ್ದನು.

### ವ್ಯಾಸರಿಂದ ಅರ್ಜುನನ ಸಾಂತ್ವನ

**ಸ ತೇನ ಪುಂಸಾಂ ಪ್ರವರೇಣ ಹೇತುಭಿಃ**
**ಸಂಬೋಧಿತೋऽಜ್ಞಾನತಮೋಂಶು ಮಾಲಿನಾ ।**
**ಸಂಸ್ಥಾಪ್ಯ ಚೇತಃ ಪುನರೇವ ತಸ್ಮಿನ್ ಜಹೌ**
**ಶುಚಃ ಪ್ರಾಯಶ ಏವ ಧೈರ್ಯಾತ್ ॥ ೪೭ ॥**

ಸಃ ತೇನ ಪುಂಸಾಂ ಪ್ರವರೇಣ ಹೇತುಭಿಃ ಸಂಬೋಧಿತಃ ಅಜ್ಞಾನತಮೋಂಶು ಮಾಲಿನಾ । ಸಂಸ್ಥಾಪ್ಯ ಚೇತಃ ಪುನಃ ಏವ ತಸ್ಮಿನ್ ಜಹೌ ಶುಚಃ ಪ್ರಾಯಶಃ ಏವ ಧೈರ್ಯಾತ್ ॥ ೪೭ ॥

**ಅರ್ಥ** :- **ಪುಂಸಾಂ ಪ್ರವರೇಣ** = ಪುರುಷೋತ್ತಮರಾದ **ಅಜ್ಞಾನತಮೋಂಶುಮಾಲಿನಾ** = ಅಜ್ಞಾನವೆಂಬ ಕತ್ತಲೆಗೆ ಸೂರ್ಯರಾದ **ತೇನ** = ಆ ವೇದವ್ಯಾಸರಿಂದ **ಹೇತುಭಿಃ** = ನಿಮಿತ್ತಗಳಿಂದ **ಸಂಬೋಧಿತಃ** = ಚೆನ್ನಾಗಿ ತಿಳಿಹೇಳಲ್ಪಟ್ಟ **ಸಃ** = ಆ ಅರ್ಜುನನು **ತಸ್ಮಿನ್ ಏವ** = ಆ ವೇದವ್ಯಾಸರಲ್ಲೇ **ಚೇತಃ** = ಮನಸ್ಸನ್ನು **ಪುನಃ** = ಮತ್ತೆ **ಸಂಸ್ಥಾಪ್ಯ** = ಚೆನ್ನಾಗಿ ನೆಲೆಗೊಳಿಸಿ **ಧೈರ್ಯಾತ್ ಏವ** = ಧೈರ್ಯದಿಂದಲೇ **ಪ್ರಾಯಶಃ** = ಬಹಳವಾದ **ಶುಚಃ** = ಶೋಕಗಳನ್ನು **ಜಹೌ** = ಕಳೆದುಕೊಂಡನು.

**ತಾತ್ಪರ್ಯ** :- ಅರ್ಜುನನು ಪುರುಷೋತ್ತಮನೂ, ಅಜ್ಞಾನವೆಂಬ ಕತ್ತಲೆಗೆ ಭಾಸ್ಕರನೂ ಆದ ಶ್ರೀವೇದವ್ಯಾಸರೂಪದ ಶ್ರೀಹರಿಯಿಂದ ಬಹುಬಗೆಯಿಂದ ಯುಕ್ತಿಯುಕ್ತ ಮಾತುಗಳಿಂದ ಬೋಧಿತನಾದ. ಅರ್ಜುನ ವೇದವ್ಯಾಸರಲ್ಲಿ ತನ್ನ ಮನಸ್ಸನ್ನು ಮತ್ತೆ ನೆಲೆಗೊಳಿಸಿ ಧೈರ್ಯದಿಂದ ತನ್ನ ಶೋಕವನ್ನು ಬಹಳವಾಗಿ ಪರಿಹರಿಸಿಕೊಂಡ.

### ಸದ್ಗತಿಗೆ ತೆರಳಿದ ಕೃಷ್ಣಪತ್ನಿಯರು

**ಸ್ತ್ರಿಯೋ ಮ್ಲೇಚ್ಛಹೃತಾಃ ಕೃಷ್ಣಪ್ರೇಷಿತಾದ್ ದಾಲ್ಭ್ಯತಃ ಪುನಃ ।**
**ಗೋವಿಂದ್ಯೈಕಾದಶೀಂ ಶ್ರುತ್ವಾ ಕೃತ್ವಾ ಸಾರಸ್ವತೇ ಜಲೇ ।**
**ನಿಮಜ್ಯ ವಾಯೋರ್ವಚನಾತ್ ತ್ಯಕ್ತದೇಹಾ ದಿವಂ ಯಯುಃ ॥ ೪೮ ॥**

**ಸ್ತ್ರಿಯಃ ಮ್ಲೇಚ್ಛಹೃತಾಃ ಕೃಷ್ಣಪ್ರೇಷಿತಾತ್ ದಾಲ್ಭ್ಯತಃ ಪುನಃ । ಗೋವಿಂದ್ಯೈಕಾದಶೀಂ ಶ್ರುತ್ವಾ ಕೃತ್ವಾ ಸಾರಸ್ವತೇ ಜಲೇ । ನಿಮಜ್ಯ ವಾಯೋಃ ವಚನಾತ್ ತ್ಯಕ್ತದೇಹಾಃ ದಿವಂ ಯಯುಃ ॥ ೪೮ ॥**

**ಅರ್ಥ** :- **ಮ್ಲೇಚ್ಛಹೃತಾಃ** = ಮ್ಲೇಚ್ಛರಿಂದ ಅಪಹೃತರಾದ **ಸ್ತ್ರಿಯಃ** = ಸ್ತ್ರೀಯರು **ಕೃಷ್ಣಪ್ರೇಷಿತಾತ್** = ಕೃಷ್ಣನಿಂದ ಕಳುಹಿಸಲ್ಪಟ್ಟ **ದಾಲ್ಭ್ಯತಃ** = ದಾಲ್ಭ್ಯರಿಂದ **ಪುನಃ** = ಮತ್ತೆ **ಗೋವಿಂದ್ಯೈಕಾದಶೀಂ** = ಗೋವಿಂದ್ಯೈಕಾದಶೀವ್ರತವನ್ನು **ಶ್ರುತ್ವಾ** = ಕೇಳಿ, **ಕೃತ್ವಾ** = ಆಚರಿಸಿ **ಸಾರಸ್ವತೇ** = ಸರಸ್ವತೀನದಿಗೆ ಸಂಬಂಧಿಸಿದ **ಜಲೇ** = ನೀರಿನಲ್ಲಿ **ನಿಮಜ್ಯ** = ಮಿಂದು **ವಾಯೋಃ** = ವಾಯುವಿನ **ವಚನಾತ್** = ಮಾತಿನಂತೆ **ತ್ಯಕ್ತದೇಹಾಃ** = ದೇಹವನ್ನು ಬಿಟ್ಟವರಾಗಿ **ದಿವಂ** = ಸ್ವರ್ಗವನ್ನು **ಯಯುಃ** = ಸೇರಿದರು.

**ತಾತ್ಪರ್ಯ** :- ಆಭೀರರಿಂದ ಅಪಹೃತರಾದ ಕೃಷ್ಣಪತ್ನಿಯರು ಕೃಷ್ಣ ಕಳುಹಿಸಿದ ದಾಲ್ಭ್ಯಮುನಿಯಿಂದ ಗೋವಿಂದ್ಯೈಕಾದಶೀವ್ರತವನ್ನು ಕೇಳಿ ಆಚರಿಸಿ, ಸರಸ್ವತೀನದಿಯ ಜಲದಲ್ಲಿ ಮಿಂದು, ವಾಯುವಿನ ವಚನದಂತೆ ದೇಹವನ್ನು ತೊರೆದು ಸ್ವರ್ಗಕ್ಕೆ ತೆರಳಿದರು.

ಅರ್ಜುನ ಮಾಡಿದ ರಾಜ್ಯವ್ಯವಸ್ಥೆ

**ಅರ್ಜುನಸ್ತು ಕುರುಕ್ಷೇತ್ರೇ ಹಾರ್ದಿಕ್ಯಯುಯುಧಾನಯೋಃ ।**
**ಸುತೌ ಸಾರಸ್ವತೇ ಚೈವ ದೇಶೇ ರಾಜ್ಯೇಽಭ್ಯಷೇಚಯತ್ ॥ ೪೯ ॥**

ಅರ್ಜುನಃ ತು ಕುರುಕ್ಷೇತ್ರೇ ಹಾರ್ದಿಕ್ಯಯುಯುಧಾನಯೋಃ । ಸುತೌ ಸಾರಸ್ವತೇ ಚ ಏವ ದೇಶೇ ರಾಜ್ಯೇ ಅಭ್ಯಷೇಚಯತ್ ॥ ೪೯ ॥

**ಅರ್ಥ** :- **ಅರ್ಜುನಃ ತು** = ಅರ್ಜುನನಾದರೋ **ಹಾರ್ದಿಕ್ಯ ಯುಯುಧಾನಯೋಃ** = ಹಾರ್ದಿಕ್ಯ-ಯುಯುಧಾನರ (ಕೃತವರ್ಮ-ಸಾತ್ಯಕಿಯರ) **ಸುತೌ** = ಪುತ್ರರನ್ನು **ಕುರುಕ್ಷೇತ್ರೇ** = ಕುರುಕ್ಷೇತ್ರದಲ್ಲಿ **ಚ ಏವ** = ಹಾಗೆಯೇ **ಸಾರಸ್ವತೇ** = ಸಾರಸ್ವತಕ್ಕೆ ಸಂಬಂಧಿಸಿದ **ದೇಶೇ** = ದೇಶದಲ್ಲಿ **ರಾಜ್ಯೇ** = ಸಾಮ್ರಾಜ್ಯದಲ್ಲಿ **ಅಭ್ಯಷೇಚಯತ್** = ಅಭಿಷೇಕಿಸಿದನು.

**ತಾತ್ಪರ್ಯ** :- ಅರ್ಜುನನು ಕೃತವರ್ಮ ಮತ್ತು ಸಾತ್ಯಕಿಯರ ಪುತ್ರರನ್ನು ಕುರುಕ್ಷೇತ್ರ ಮತ್ತು ಸಾರಸ್ವತದೇಶದ ರಾಜ್ಯದಲ್ಲಿ ಅಭಿಷೇಕಿಸಿದನು.

ಕೃಷ್ಣನ ಮರಿಮೊಮ್ಮಗನಿಗೆ ರಾಜ್ಯಾಭಿಷೇಕ

**ಅನಿರುದ್ಧಸುತಂ ವಜ್ರಂ ಪ್ರಿಯಂ ಕೃಷ್ಣಸ್ಯ ಸದ್ಗುಣಮ್ ।**
**ಸ ಶೂರಸೇನೇಂದ್ರಪ್ರಸ್ಥರಾಜಾನಮಕರೋದ್ವಶೀ ॥ ೫೦ ॥**

ಅನಿರುದ್ಧಸುತಂ ವಜ್ರಂ ಪ್ರಿಯಂ ಕೃಷ್ಣಸ್ಯ ಸದ್ಗುಣಮ್ । ಸಃ ಶೂರಸೇನೇಂದ್ರ ಪ್ರಸ್ಥರಾಜಾನಂ ಅಕರೋತ್ ವಶೀ ॥ ೫೦ ॥

**ಅರ್ಥ** :- **ವಶೀ** = ಜಿತೇಂದ್ರಿಯನಾದ **ಸಃ** = ಆ ಅರ್ಜುನನು **ಅನಿರುದ್ಧಸುತಂ** = ಅನಿರುದ್ಧಸುತನಾದ **ಸದ್ಗುಣಂ** = ಉತ್ತಮ ಗುಣವುಳ್ಳ **ಕೃಷ್ಣಸ್ಯ** = ಕೃಷ್ಣನಿಗೆ **ಪ್ರಿಯಂ** = ಪ್ರಿಯನಾದ **ವಜ್ರಂ** = ವಜ್ರನನ್ನು **ಶೂರಸೇನೇಂದ್ರಪ್ರಸ್ಥರಾಜಾನಂ** = ಶೂರಸೇನದೇಶ ಮತ್ತು ಇಂದ್ರಪ್ರಸ್ಥದೇಶದ ರಾಜನನ್ನಾಗಿ **ಅಕರೋತ್** = ಮಾಡಿದನು.

**ತಾತ್ಪರ್ಯ** :- ಕೃಷ್ಣನಿಗೆ ಪ್ರಿಯನೂ, ಉತ್ತಮ ಗುಣವಂತನೂ ಆದ ಅನಿರುದ್ಧನ ಪುತ್ರ ವಜ್ರನನ್ನು ಯೋಗಿಯಾದ ಅರ್ಜುನ ಶೂರಸೇನ ದೇಶ ಮತ್ತು ಇಂದ್ರಪ್ರಸ್ಥಗಳಿಗೆ ರಾಜನನ್ನಾಗಿ ಮಾಡಿದ.

**ಸ್ತ್ರೀಬಾಲಾಂಶ್ಚ ಧನಂ ಚೈವ ತಸ್ಮಿನ್ ಸಂಸ್ಥಾಪ್ಯ ಫಲ್ಗುನಃ ।**
**ಯಯೌ ಭ್ರಾತೄನಶೇಷಂ ಚ ವೃತ್ತಂ ತೇಷಾಮವರ್ಣಯತ್ ॥ ೫೧ ॥**

**ಸ್ತ್ರೀಬಾಲಾನ್ ಚ ಧನಂ ಚ ಏವ ತಸ್ಮಿನ್ ಸಂಸ್ಥಾಪ್ಯ ಫಲ್ಗುನಃ । ಯಯೌ ಭ್ರಾತೄನ್ ಅಶೇಷಂ ಚ ವೃತ್ತಂ ತೇಷಾಂ ಅವರ್ಣಯತ್ ॥ ೫೧ ॥**

**ಅರ್ಥ** :- **ಫಲ್ಗುನಃ** = ಅರ್ಜುನನು **ಸ್ತ್ರೀಬಾಲಾನ್ ಚ** = ಹೆಂಗಸರು ಮಕ್ಕಳನ್ನೂ **ಚ ಏವ** = ಹಾಗೆಯೇ **ಧನಂ** = ಧನವನ್ನು **ತಸ್ಮಿನ್** = ಆ ವಜ್ರನಲ್ಲಿ **ಸಂಸ್ಥಾಪ್ಯ** = ಒಪ್ಪಿಸಿ **ಭ್ರಾತೄನ್** = ಸಹೋದರರನ್ನು ಕುರಿತು **ಯಯೌ** = ಹೋದನು. **ಚ** = ಮತ್ತು **ತೇಷಾಂ** = ಅವರಿಗೆ **ವೃತ್ತಂ** = ನಡೆದ **ಅಶೇಷಂ** = ಎಲ್ಲವನ್ನೂ **ಅವರ್ಣಯತ್** = ವರ್ಣಿಸಿದನು.

**ತಾತ್ಪರ್ಯ** :- ಹೆಂಗಸರನ್ನು, ಮಕ್ಕಳನ್ನು, ಧನವನ್ನು ವಜ್ರನ ವಶಕ್ಕೆ ಒಪ್ಪಿಸಿ ಅರ್ಜುನ ಧರ್ಮರಾಜಾದಿ ಸೋದರರ ಬಳಿಗೆ ನಡೆದ. ಅವರಿಗೆ ಸಕಲ ವೃತ್ತಾಂತವನ್ನೂ ತಿಳಿಸಿದ.

### ಪರೀಕ್ಷಿದ್ರಾಜನಿಗೆ ಪಟ್ಟಾಭಿಷೇಕ

**ತೇ ಚಾವಿಯೋಗಸಮಯಂ ಸ್ಮರಂತೋ ಮುರವೈರಿಣಃ ।**
**ಅಭ್ಯಷಿಂಚನ್ ಭಾಗವತಂ ಮಹಾರಾಜ್ಯೇ ಪರೀಕ್ಷಿತಮ್ ॥ ೫೨ ॥**

**ತೇ ಚ ಅವಿಯೋಗಸಮಯಂ ಸ್ಮರಂತಃ ಮುರವೈರಿಣಃ । ಅಭ್ಯಷಿಂಚನ್ ಭಾಗವತಂ ಮಹಾರಾಜ್ಯೇ ಪರೀಕ್ಷಿತಮ್ ॥ ೫೨ ॥**

**ಅರ್ಥ** :- **ತೇ ಚ** = ಅವರೂ ಸಹ **ಮುರವೈರಿಣಃ** = ಮುರವೈರಿಯಾದ ಕೃಷ್ಣನ **ಅವಿಯೋಗಸಮಯಂ** = ವಿಯೋಗವಿಲ್ಲದಿರುವಾಗ ರಾಜ್ಯವನ್ನು ನಡೆಸೋಣ ಎಂಬ ನಿಯಮವನ್ನು **ಸ್ಮರಂತಃ** = ಸ್ಮರಿಸುವವರಾಗಿ **ಭಾಗವತಂ** = ಭಾಗವತನಾದ **ಪರೀಕ್ಷಿತಂ** = ಪರೀಕ್ಷಿತನನ್ನು **ಮಹಾರಾಜ್ಯೇ** = ಮಹಾರಾಜ್ಯದಲ್ಲಿ **ಅಭ್ಯಷಿಂಚನ್** = ಅಭಿಷೇಕಿಸಿದರು.

**ತಾತ್ಪರ್ಯ** :- ಪಾಂಡವರು ತಮಗೆ ಕೃಷ್ಣನ ವಿಯೋಗವಾಗದಂತೆ ಅವನೊಂದಿಗೆ ಮಾಡಿಕೊಂಡಿದ್ದ ನಿಯಮವನ್ನು ಸ್ಮರಿಸಿಕೊಂಡು ಭಗವದ್ಭಕ್ತನಾದ ಪರೀಕ್ಷಿತನನ್ನು ಮಹಾರಾಜಪದವಿಯಲ್ಲಿ ಅಭಿಷೇಕ ಮಾಡಿದರು.

ಮ್ಲೇಚ್ಛರ ಶಿಕ್ಷಣಕ್ಕೆ ಪರೀಕ್ಷಿದ್ರಾಜನಿಗೆ ಆದೇಶ

**ಸ್ತ್ರೀಹಾರಿಣಾಂ ಚ ಮ್ಲೇಚ್ಛಾನಾಂ ವಧಾಯೈನಮಯೋಜಯನ್ ।**
**ಕೃತಂ ಚ ತೇನ ತತ್ಕರ್ಮ ವೋಢ್ರಾ ಪೈತಾಮಹೀಂ ಧುರಮ್ ॥ ೫೩ ॥**

ಸ್ತ್ರೀಹಾರಿಣಾಂ ಚ ಮ್ಲೇಚ್ಛಾನಾಂ ವಧಾಯ ಏನಂ ಅಯೋಜಯನ್ । ಕೃತಂ ಚ ತೇನ ತತ್ ಕರ್ಮ ವೋಢ್ರಾ ಪೈತಾಮಹೀಂ ಧುರಮ್ ॥ ೫೩ ॥

**ಅರ್ಥ** :– **ಸ್ತ್ರೀಹಾರಿಣಾಂ** = ಸ್ತ್ರೀಯರನ್ನು ಅಪಹರಿಸಿದ **ಮ್ಲೇಚ್ಛಾನಾಂ ಚ** = ಮತ್ತು ಮ್ಲೇಚ್ಛರ **ವಧಾಯ** = ವಧೆಗಾಗಿ **ಏನಂ** = ಇವನನ್ನು (ಪರೀಕ್ಷಿದ್ರಾಜನನ್ನು) **ಅಯೋಜಯನ್** = ನಿಯೋಜಿಸಿದರು. **ಪೈತಾಮಹೀಂ** = ತಾತಂದಿರಾದ ಪಾಂಡವರ ಸಂಬಂಧಿಯಾದ **ಧುರಂ** = ಭಾರವನ್ನು **ವೋಢ್ರಾ** = ವಹಿಸಿದ **ತೇನ** = ಅವನಿಂದ **ತತ್** = ಆ **ಕರ್ಮ ಚ** = ಕರ್ಮವು ಸಹ **ಕೃತಂ** = ಮಾಡಲ್ಪಟ್ಟದ್ದಾಯಿತು.

**ತಾತ್ಪರ್ಯ** :- ಸ್ತ್ರೀಯರನ್ನು ಅಪಹರಿಸಿದ ಮ್ಲೇಚ್ಛರ ವಧೆಗೆ ಪರೀಕ್ಷಿತನನ್ನು ನಿಯಮಿಸಿದರು. ತಾತಂದಿರ ಭಾರವನ್ನು ಹೊತ್ತ ಪರೀಕ್ಷಿದ್ರಾಜ ಮುಂದೆ ಆ ಕಾರ್ಯವನ್ನು ಪೂರೈಸಿದ.

ಪಾಂಡವರ ಮಹಾಪ್ರಸ್ಥಾನಕ್ಕೆ ಕಾರಣ

**ಸಮಯಂ ಪರಿರಕ್ಷದ್ಭಿರ್ನ ಪಾರ್ಥೈರೇವ ತತ್ ಕೃತಮ್ ।**
**ವಾಸುದೇವಪದಾ ಸ್ಪೃಷ್ಟಭೂಕಂಟಕಸಮುದ್ಧೃತಿಃ ।**
**ಸಮಯಃ ಪಾಂಡವಾನಾಂ ಹಿ ತಸ್ಯೈವಾನುಗತಿಃ ಪರಮ್ ॥ ೫೪ ॥**

ಸಮಯಂ ಪರಿರಕ್ಷದ್ಭಿಃ ನ ಪಾರ್ಥೈಃ ಏವ ತತ್ ಕೃತಮ್ । ವಾಸುದೇವಪದಾ ಸ್ಪೃಷ್ಟಭೂಕಂಟಕಸಮುದ್ಧೃತಿಃ । ಸಮಯಃ ಪಾಂಡವಾನಾಂ ಹಿ ತಸ್ಯ ಏವ ಅನುಗತಿಃ ಪರಮ್ ॥ ೫೪ ॥

**ಅರ್ಥ** :– **ಸಮಯಂ** = ನಿಯಮವನ್ನು **ಪರಿರಕ್ಷದ್ಭಿಃ** = ಪರಿಪಾಲಿಸುವ **ಪಾರ್ಥೈಃ ಏವ** = ಪಾಂಡವರಿಂದಲೇ **ತತ್** = ಆ ಕೆಲಸವು **ನ ಕೃತಂ** = ಮಾಡಲ್ಪಡಲಿಲ್ಲ. **ವಾಸುದೇವಪದಾ** = ಕೃಷ್ಣನ ಪಾದದಿಂದ **ಸ್ಪೃಷ್ಟಭೂಕಂಟಕಸಮುದ್ಧೃತಿಃ** = ಸ್ಪರ್ಶಿಸಲ್ಪಟ್ಟ ಭೂಮಿಯ ಕಂಟಕದ ಉತ್ಪಾಟನೆಯು, **ಪರಂ** = ಆಮೇಲೆ (ಕೃಷ್ಣನು ಪರಂಧಾಮವನ್ನು ಸೇರಿದ ಮೇಲೆ) **ತಸ್ಯ ಏವ** = ಅವನ **ಅನುಗತಿಃ** = ಅನುಸರಿಸುವುದು **ಪಾಂಡವನಾಂ** = ಪಾಂಡವರ **ಸಮಯಃ ಹಿ** = ನಿಯಮವಷ್ಟೆ.

**ತಾತ್ಪರ್ಯ** :- ಕೃಷ್ಣನೊಂದಿಗೆ ಮಾಡಿಕೊಂಡಿದ್ದ ನಿಯಮವನ್ನು ಪರಿಪಾಲಿಸಲೆಂದು ಪಾಂಡವರು ತಾವೇ ಆ ಕಾರ್ಯವನ್ನು ಮಾಡಲಿಲ್ಲ. ಕೃಷ್ಣನ ಪಾದಸ್ಪರ್ಶ ಇರುವಷ್ಟು ಕಾಲ ಮಾತ್ರ ಭೂಮಿಗೊದಗುವ ಕಂಟಕವನ್ನು ಪರಿಹರಿಸುವುದು ಪಾಂಡವರ ನಿಯಮವಾಗಿತ್ತು ; ಬಳಿಕ ಕೃಷ್ಣನನ್ನೇ ಹಿಂಬಾಲಿಸಿ ತೆರಳಬೇಕು ಎಂಬುದೂ ಸಹ.

**ಅನುವ್ರಜದ್ಭಿರ್ವಿಶ್ವೇಶಂ ನಾಸ್ಮಾಭಿರ್ಭೂಸ್ತದುಜ್ಝಿತಾ ।**
**ಭೋಜ್ಯಾ ರಕ್ಷ್ಯಾಽಪಿ ವಾ ತೇಷಾಮಿತ್ಯೇವ ಸಮಯಃ ಪುರಾ ॥ ೫೫ ॥**

**ಅನುವ್ರಜದ್ಭಿಃ ವಿಶ್ವೇಶಂ ನ ಅಸ್ಮಾಭಿಃ ಭೂಃ ತದುಜ್ಝಿತಾ । ಭೋಜ್ಯಾ ರಕ್ಷ್ಯಾ ಅಪಿ ವಾ ತೇಷಾಂ ಇತಿ ಏವ ಸಮಯಃ ಪುರಾ ॥ ೫೫ ॥**

**ಅರ್ಥ** :– **ವಿಶ್ವೇಶಂ** = ಸರ್ವಸ್ವಾಮಿಯಾದ ಕೃಷ್ಣನನ್ನು **ಅನುವ್ರಜದ್ಭಿಃ** = ಅನುಸರಿಸಿ ನಡೆಯುವ **ಅಸ್ಮಾಭಿಃ** = ನಮ್ಮಿಂದ **ತದುಜ್ಝಿತಾ** = ಅವನಿಂದ ತ್ಯಕ್ತವಾದ **ಭೂಃ** = ಭೂಮಿಯು **ನ ಭೋಜ್ಯಾ** = ಭೋಗಿಸಲು ಯೋಗ್ಯವಲ್ಲ **ನ ವಾ ಅಪಿ ರಕ್ಷ್ಯಾ** = ರಕ್ಷಿಸಲೂ ಸಹ ಯೋಗ್ಯವಲ್ಲ. **ಇತಿ** = ಹೀಗೆ **ತೇಷಾಂ** = ಅವರ (ಪಾಂಡವರ) **ಪುರಾ ಏವ** = ಹಿಂದೆಯೇ **ಸಮಯಃ** = ಕಾಲನಿಯುಮವು **ಹಿ** = ಯಾವ ಕಾರಣದಿಂದಲೋ (**ತಸ್ಮಾತ್**) = ಆ ಕಾರಣದಿಂದ (**ತತ್ ನ ಕೃತಮ್**) = ಅದು (ದುಷ್ಟರ ವಧೆಯು) ಮಾಡಲ್ಪಡಲಿಲ್ಲ.

**ತಾತ್ಪರ್ಯ** :- ನಾವು ಕೃಷ್ಣನನ್ನು ಅನುಸರಿಸಿ ನಡೆಯಬೇಕು. ಅವನಿಲ್ಲದ ಭೂಮಿಯನ್ನು ಭೋಗಿಸುವುದಾಗಲೀ, ರಕ್ಷಿಸುವುದಾಗಲೀ ಮಾಡಕೂಡದು ಎಂಬುದು ಪಾಂಡವರು ಹಿಂದೆಯೇ ಕೈಗೊಂಡ ನಿಯಮವಾಗಿತ್ತು.

ದ್ರೌಪದಿಯಲ್ಲಿ ಐಕ್ಯಳಾದ ಕಾಳೀ

**ತತ್ರ ಕಾಲೀ ಭೀಮಭಾರ್ಯಾ ವೈಷ್ಣವಂ ಯೋಗಮಾಸ್ಥಿತಾ ।**
**ಕೃಷ್ಣಯೈಕತ್ವಮಾಪನ್ನಾ ತ್ಯಕ್ತ್ವಾ ದೇಹಂ ತು ಮಾನುಷಮ್ ॥ ೫೬ ॥**

ತತ್ರ ಕಾಲೀ ಭೀಮಭಾರ್ಯಾ ವೈಷ್ಣವಂ ಯೋಗಂ ಆಸ್ಥಿತಾ । ಕೃಷ್ಣಯಾ ಏಕತ್ವಂ ಆಪನ್ನಾ ತ್ಯಕ್ತ್ವಾ ದೇಹಂ ತು ಮಾನುಷಮ್ ॥ ೫೬ ॥

**ಅರ್ಥ** :– **ತತ್ರ** = ಆಗ **ಭೀಮಭಾರ್ಯಾ** = ಭೀಮನ ಪತ್ನಿಯಾದ **ಕಾಲೀ** = ಕಾಳಿಯು **ವೈಷ್ಣವಂ** = ವಿಷ್ಣುಸಂಬಂಧಿಯಾದ **ಯೋಗಂ** = ಯೋಗವನ್ನು ಕುರಿತು **ಆಸ್ಥಿತಾ** = ನೆಲೆಸಿದವಳಾಗಿ **ಮಾನುಷಂ** = ಮನುಷ್ಯಸಂಬಂಧಿಯಾದ **ದೇಹಂ** = ದೇಹವನ್ನು **ತ್ಯಕ್ತ್ವಾ** = ತ್ಯಜಿಸಿ **ಕೃಷ್ಣಯಾ** = ದ್ರೌಪದಿಯೊಂದಿಗೆ **ಏಕತ್ವಂ** = ಐಕ್ಯವನ್ನು **ಅಪನ್ನಾ** = ಹೊಂದಿದವಳು ಆದಳು.

**ತಾತ್ಪರ್ಯ** :- ಆಗ ಭೀಮಪತ್ನಿಯಾದ ಕಾಳಿಯು ವೈಷ್ಣವಯೋಗವನ್ನು ಸ್ವೀಕರಿಸಿ ತನ್ನ ಮಾನುಷ ದೇಹವನ್ನು ತೊರೆದು ದ್ರೌಪದಿಯೊಂದಿಗೆ ಐಕ್ಯಹೊಂದಿದಳು.

ಹಸ್ತಿನಾಪುರದಲ್ಲೇ ಉಳಿದ ಸುಭದ್ರೆ ಮೊದಲಾದವರು

**ಸುಭದ್ರಾದ್ಯಾಸ್ತು ಯಾ ಭಾರ್ಯಾಃ ಪಾರ್ಥಾನಾಂ ತು ತದಾಜ್ಞಯಾ ।**
**ಯುಯುತ್ಸುಶ್ಚಾತ್ರ ಶಿಕ್ಷಾರ್ಥಂ ಪೌತ್ರಸ್ಯೈವಾವಸನ್ ಪುರೇ ॥ ೫೭ ॥**

ಸುಭದ್ರಾದ್ಯಾಃ ತು ಯಾಃ ಭಾರ್ಯಾಃ ಪಾರ್ಥಾನಾಂ ತು ತದಾಜ್ಞಯಾ ।
ಯುಯುತ್ಸುಃ ಚ ಅತ್ರ ಶಿಕ್ಷಾರ್ಥಂ ಪೌತ್ರಸ್ಯ ಏವ ಅವಸನ್ ಪುರೇ ॥ ೫೭ ॥

**ಅರ್ಥ** :– **ಪಾರ್ಥಾನಾಂ** = ಪಾಂಡವರ **ಸುಭದ್ರಾದ್ಯಾಃ** = ಸುಭದ್ರಾ ಮೊದಲಾದ **ಯಾಃ** = ಯಾವ **ಭಾರ್ಯಾಃ ತು** = ಪತ್ನಿಯರಾದರೋ **ಚ** = ಮತ್ತು **ಯುಯುತ್ಸುಶ್ಚ** = ಯುಯುತ್ಸುವು **ತದಾಜ್ಞಯಾ ತು** = ಅವರ (ಪಾಂಡವರ) ಆಜ್ಞೆಯಿಂದ **ಪೌತ್ರಸ್ಯ** = ಮೊಮ್ಮಗನಾದ ಪರೀಕ್ಷಿತ್‌ನ **ಶಿಕ್ಷಾರ್ಥಂ** = (ರಾಜಧರ್ಮ)ಶಿಕ್ಷಣೆಗೋಸ್ಕರ **ಅತ್ರ** = ಅಲ್ಲಿ **ಪುರೇ ಏವ** = ಪುರದಲ್ಲೇ (ಹಸ್ತಿನಾಪುರದಲ್ಲೇ) **ಅವಸನ್** = ವಾಸಿಸಿದರು.

**ತಾತ್ಪರ್ಯ** :- ಸುಭದ್ರೆ ಮೊದಲಾದ ಇತರ ಪಾಂಡವಪತ್ನಿಯರು, ಹಾಗೂ ಯುಯುತ್ಸು, ಪಾಂಡವರ ಆದೇಶದಂತೆ ಮೊಮ್ಮಗನಾದ ಪರೀಕ್ಷಿದ್ರಾಜನಿಗೆ ಮಾರ್ಗದರ್ಶನ ಮಾಡಲೆಂದು ಹಸ್ತಿನಾಪುರದಲ್ಲೇ ಉಳಿದುಕೊಂಡರು.

### ಪಾಂಡವರ ಮಹಾಪ್ರಸ್ಥಾನ

**ಸಂತ್ಯಜ್ಯ ರಾಜಚಿಹ್ನಾನಿ ವೈಷ್ಣವಂ ಯೋಗಮಾಸ್ಥಿತಾಃ ।**
**ವೀರಾಧ್ವಾನಂ ಯಯುಃ ಸರ್ವೇ ಕೃಷ್ಣಯಾ ಸಹ ಪಾಂಡವಾಃ ॥ ೫೮ ॥**

ಸಂತ್ಯಜ್ಯ ರಾಜಚಿಹ್ನಾನಿ ವೈಷ್ಣವಂ ಯೋಗಂ ಆಸ್ಥಿತಾಃ । ವೀರಾಧ್ವಾನಂ ಯಯುಃ ಸರ್ವೇ ಕೃಷ್ಣಯಾ ಸಹ ಪಾಂಡವಾಃ ॥ ೫೮ ॥

**ಅರ್ಥ** :- **ರಾಜಚಿಹ್ನಾನಿ** = ರಾಜಚಿಹ್ನೆಗಳನ್ನು **ಸಂತ್ಯಜ್ಯ** = ಸಂಪೂರ್ಣವಾಗಿ ತೊರೆದು **ವೈಷ್ಣವಂ** = ವಿಷ್ಣುಸಂಬಂಧಿಯಾದ **ಯೋಗಂ** = ಯೋಗವನ್ನು ಕುರಿತು **ಆಸ್ಥಿತಾಃ** = ನೆಲೆಸಿದವರಾದ **ಸರ್ವೇ** = ಎಲ್ಲ **ಪಾಂಡವಾಃ** = ಪಾಂಡವರು **ಕೃಷ್ಣಯಾ ಸಹ** = ದ್ರೌಪದಿಯೊಂದಿಗೆ **ವೀರಾಧ್ವಾನಂ** = ವೀರರಿಗೆ ಮಾತ್ರ ಲಭ್ಯವಾಗುವ ಮಾರ್ಗವನ್ನು (ಮಹಾಪ್ರಸ್ಥಾನವನ್ನು) ಕುರಿತು **ಯಯುಃ** = ಹೊರಟರು.

**ತಾತ್ಪರ್ಯ** :- ಎಲ್ಲ ಪಾಂಡವರು ರಾಜಚಿಹ್ನೆಗಳನ್ನು ತೊರೆದು, ವೈಷ್ಣವಯೋಗದಲ್ಲಿ ತೊಡಗಿದವರಾಗಿ ದ್ರೌಪದಿಯೊಂದಿಗೆ ಮಹಾಪ್ರಸ್ಥಾನ ಕೈಗೊಂಡರು.

### ಸಮುದ್ರದಲ್ಲಿ ಗಾಂಡೀವ

**ಪ್ರಾಗುದೀಚೀಂ ದಿಶಂ ಪೂರ್ವಂ ಯಯುಸ್ತತ್ರಾರ್ಜುನೋ ಧನುಃ ।**
**ನಾತ್ಯಜಲ್ಲೋಭತಸ್ತಂ ತು ಸಮುದ್ರಮುಪ ಪಾವಕಃ ।**
**ದೃಷ್ಟ್ವಾ ಯಯಾಚೇ ರಾಜಾನಂ ತದುಕ್ತಃ ಪ್ರಾಸ್ಯದಂಬುಧೌ ॥ ೫೯ ॥**

ಪ್ರಾಕ್ ಉದೀಚೀಂ ದಿಶಂ ಪೂರ್ವಂ ಯಯುಃ ತತ್ರ ಅರ್ಜುನಃ ಧನುಃ । ನ ಅತ್ಯಜತ್ ಲೋಭತಃ ತಂ ತು ಸಮುದ್ರಂ ಉಪ ಪಾವಕಃ । ದೃಷ್ಟ್ವಾ ಯಯಾಚೇ ರಾಜಾನಂ ತದುಕ್ತಃ ಪ್ರಾಸ್ಯತ್ ಅಂಬುಧೌ ॥ ೫೯ ॥

**ಅರ್ಥ** :- **ಪೂರ್ವಂ** = ಮೊದಲಿಗೆ **ಪ್ರಾಗುದೀಚೀಂ** = ಪೂರ್ವ–ಉತ್ತರ ಸಂಬಂಧಿಯಾದ ಈಶಾನ್ಯ **ದಿಶಂ** = ದಿಕ್ಕನ್ನು ಕುರಿತು **ಯಯುಃ** = ಹೊರಟರು. **ತತ್ರ** = ಅವರಲ್ಲಿ (ಪಾಂಡವರಲ್ಲಿ) **ಅರ್ಜುನಃ** = ಅರ್ಜುನನು **ಲೋಭತಃ** = ಲೋಭದಿಂದಾಗಿ **ಧನುಃ** = ಬಿಲ್ಲನ್ನು ನ **ಅತ್ಯಜತ್** = ತೊರೆಯಲಿಲ್ಲ. **ಸಮುದ್ರಂ ಉಪ** = ಸಮುದ್ರದ ಬಳಿಯಲ್ಲಿ **ಪಾವಕಃ** = ಅಗ್ನಿಯು **ತಂ** = ಅವನನ್ನು (ಧನುಸ್ಸನ್ನು ತ್ಯಜಿಸದ ಅರ್ಜುನನನ್ನು) **ದೃಷ್ಟ್ವಾ ತು** = ನೋಡಿಯಾದರೋ **ರಾಜಾನಂ** = ಧರ್ಮರಾಜನನ್ನು ಕುರಿತು **ಯಯಾಚೇ** = ಬೇಡಿದನು. **ತದುಕ್ತಃ** = ಅವನಿಂದ ಹೇಳಲ್ಪಟ್ಟ ಅರ್ಜುನನು **ಅಂಬುಧೌ** = ಸಮುದ್ರದಲ್ಲಿ **ಪ್ರಾಸ್ಯತ್** = ಎಸೆದನು.

**ತಾತ್ಪರ್ಯ** :- ಅವರು ಮೊದಲಿಗೆ ಈಶಾನ್ಯದಿಕ್ಕಿಗೆ ತೆರಳಿದರು. ಅವರಲ್ಲಿ ಅರ್ಜುನ ಲೋಭದಿಂದಾಗಿ ಗಾಂಡೀವವನ್ನು ತೊರೆದಿರಲಿಲ್ಲ; ಸಮುದ್ರದ ಬಳಿಯಲ್ಲಿ ಅಗ್ನಿ ಅದನ್ನು ನೋಡಿ ಧರ್ಮರಾಜನನ್ನು ಕೋರಿದ; ಧರ್ಮರಾಜನ ಮಾತಿನಂತೆ ಅರ್ಜುನ ಅದನ್ನು ಸಮುದ್ರದಲ್ಲಿ ಹಾಕಿದ.

### ಗಂಧಮಾದನದಲ್ಲಿ ಪಾಂಡವರು

**ಪ್ರಾತಿಭಾವ್ಯಂ ತು ವರುಣೇ ನಿಸ್ತೀರ್ಯಾಗ್ನಿರದೃಶ್ಯತಾಮ್ ।**
**ಯಯೌ ತೇಽಪಿ ಯಯುಃ ಕ್ಷಿಪ್ರಂ ಪ್ಲವಂತಃ ಸಪ್ತವಾರಿಧೀನ್ ॥ ೬೦ ॥**

ಪ್ರಾತಿಭಾವ್ಯಂ ತು ವರುಣೇ ನಿಸ್ತೀರ್ಯ ಅಗ್ನಿಃ ಅದೃಶ್ಯತಾಮ್ । ಯಯೌ ತೇ ಅಪಿ ಯಯುಃ ಕ್ಷಿಪ್ರಂ ಪ್ಲವಂತಃ ಸಪ್ತವಾರಿಧೀನ್ ॥ ೬೦ ॥

**ಅರ್ಥ** :- **ಅಗ್ನಿಃ** = ಅಗ್ನಿಯು **ವರುಣೇ** = ವರುಣನ ವಿಷಯದಲ್ಲಿ **ಪ್ರಾತಿಭಾವ್ಯಂ ತು** = ಋಣವನ್ನಂತೂ **ನಿಸ್ತೀರ್ಯ** = ಪರಿಹರಿಸಿಕೊಂಡು **ಅದೃಶ್ಯತಾಂ ಯಯೌ** = ಅದೃಶ್ಯನಾಗಿ ಹೋದನು. **ಸಪ್ತವಾರಿಧೀನ್** = ಏಳು ಸಮುದ್ರಗಳನ್ನು **ಪ್ಲವಂತಃ** = ದಾಟುವವರಾಗಿ **ತೇ ಅಪಿ** = ಅವರೂ (ಪಾಂಡವರೂ) ಸಹ **ಕ್ಷಿಪ್ರಂ** = ಬೇಗನೆ **ಯಯುಃ** = ಹೊರಟರು.

**ಅಹೋಭಿಃ ಸಪ್ತಭಿರ್ಯೋಗಂ ಸಮಾರೂಢಾಃ ಪ್ರದಕ್ಷಿಣಮ್ ।**
**ಕೃತ್ವಾ ಕ್ವಚಿದಸಜ್ಜಂತಃ ಆಸೇದುರ್ಗಂಧಮಾದನಮ್ ॥ ೬೧ ॥**

**ಅಹೋಭಿಃ ಸಪ್ತಭಿಃ ಯೋಗಂ ಸಮಾರೂಢಾಃ ಪ್ರದಕ್ಷಿಣಮ್ । ಕೃತ್ವಾ ಕ್ವಚಿತ್ ಅಸಜ್ಜಂತಃ ಆಸೇದುಃ ಗಂಧಮಾದನಮ್ ॥ ೬೧ ॥**

**ಅರ್ಥ** :- **ಯೋಗಂ** = ಯೋಗವನ್ನು **ಸಮಾರೂಢಾಃ** = ಏರಿದವರಾಗಿ (ಹೊಂದಿದವರಾಗಿ) **ಕ್ವಚಿತ್** = ಎಲ್ಲೂ **ಅಸಜ್ಜಂತಃ** = ನಿಲ್ಲದೆ (ಶ್ರಮವನ್ನು ಹೊಂದದೆ) **ಸಪ್ತಭಿಃ** = ಏಳು **ಅಹೋಭಿಃ** = ದಿನಗಳಿಂದ (ದಿನಗಳಲ್ಲಿ) **ಪ್ರದಕ್ಷಿಣಂ** = (ಭೂ)ಪ್ರದಕ್ಷಿಣೆಯನ್ನು **ಕೃತ್ವಾ** = ಮಾಡಿ, **ಗಂಧಮಾದನಂ** = ಗಂಧಮಾದನವನ್ನು ಕುರಿತು **ಆಸೇದುಃ** = ಬಂದುಸೇರಿದರು.

**ತಾತ್ಪರ್ಯ** :- ಅಗ್ನಿಯು ವರುಣನ ಋಣವನ್ನು ಪರಿಹರಿಸಿಕೊಂಡು ಅದೃಶ್ಯನಾದ. ಅವರೂ ಸಹ ಬೇಗನೆ ಏಳು ದಿನಗಳಲ್ಲಿ ಸಪ್ತಸಮುದ್ರಗಳನ್ನು ಯೋಗಬಲದಿಂದ ದಾಟಿ ಸಾಗಿದರು. ಎಲ್ಲಿಯೂ ನಿಲ್ಲದೆ ಭೂಮಿಯನ್ನು ಪ್ರದಕ್ಷಿಣೆ ಮಾಡಿ ಗಂಧಮಾದನಪರ್ವತಕ್ಕೆ ಆಗಮಿಸಿದರು.

### ಭೀಮಾದಿಗಳ ದೇಹಪಾತ

**ಅತ್ರ ನಾರಾಯಣಕ್ಷೇತ್ರೇ ತೇಷಾಂ ತನ್ವೋಽಪತನ್ ಕ್ರಮಾತ್ ।**
**ದ್ರೌಪದೀಸಹದೇವಾದಿಪಂಚಾನಾಂ ತತ್ರ ಮಾರುತಿಃ ॥ ೬೨ ॥**

**ಅತ್ರ ನಾರಾಯಣಕ್ಷೇತ್ರೇ ತೇಷಾಂ ತನ್ವಃ ಅಪತನ್ ಕ್ರಮಾತ್ ।**
ದ್ರೌಪದೀಸಹದೇವಾದಿಪಂಚಾನಾಂ ತತ್ರ ಮಾರುತಿಃ ॥ ೬೨ ॥

**ಅರ್ಥ** :- **ತತ್ರ** = ಅಲ್ಲಿ (ಗಂಧಮಾದನದಲ್ಲಿ) (ವಿದ್ಯಮಾನೇ) = ಇರುವ **ನಾರಾಯಣಕ್ಷೇತ್ರೇ** = ಬದರೀಕ್ಷೇತ್ರದಲ್ಲಿ **ತೇಷಾಂ** = ಆ ದ್ರೌಪದೀಸಹದೇವಾದಿ **ಪಂಚಾನಾಂ** = ದ್ರೌಪದೀ ಸಹದೇವ ಮೊದಲಾದ **ಪಂಚಾನಾಂ** = ಐವರ **ತನ್ವಃ** = ದೇಹಗಳು **ಕ್ರಮಾತ್** = (ವಯಸ್ಸಿನ) ಕ್ರಮದಿಂದ **ಅಪತನ್** = ಬಿದ್ದವು.

**ಸದೇಹನಾಕಾನಿಚ್ಛುತ್ವಾದ್ದೇಹಪ್ರಪತನಂ ಹಿ ತತ್ ।**
**ತೇಷಾಮಿಹೇತಿ ಯಾಥಾರ್ಥ್ಯಂ ಜಾನನ್ ಪಪ್ರಚ್ಛ ಧರ್ಮಜಮ್ ।**
**ಕೇನ ಕೇನಾಪತದ್ದೇಹೋ ದೋಷೇಣ ನ ಇತಿ ಕ್ರಮಾತ್॥ ೬೩ ॥**

ಸದೇಹನಾಕಾನಿಚ್ಛುತ್ವಾತ್ ದೇಹಪ್ರಪತನಂ ಹಿ ತತ್ । ತೇಷಾಂ ಇಹ ಇತಿ ಯಾಥಾರ್ಥ್ಯಂ ಜಾನನ್ ಪಪ್ರಚ್ಛ ಧರ್ಮಜಮ್ । ಕೇನ ಕೇನ ಅಪತತ್ ದೇಹಃ ದೋಷೇಣ ನಃ ಇತಿ ಕ್ರಮಾತ್॥ ೬೩ ॥

**ಅರ್ಥ** :- **ತತ್ರ** = ಆಗ **ಮಾರುತಿಃ** = ವಾಯುಪುತ್ರನಾದ ಭೀಮನು **ತೇಷಾಂ** = ಅವರ (ದ್ರೌಪದೀ ಮೊದಲಾದವರ) **ಇಹ** = ಈ ಭೂಮಿಯಲ್ಲಿ **ತತ್** = ಆ **ದೇಹಪ್ರಪತನಂ** = ದೇಹವು ಬೀಳುವಿಕೆಯು **ಸದೇಹನಾಕಾನಿಚ್ಛುತ್ವಾತ್ ಹಿ** = ದೇಹಸಹಿತರಾಗಿ ಸ್ವರ್ಗವನ್ನು ಬಯಸದ್ದರಿಂದಲೇ **(ಅಭೂತ್)** = ಆಯಿತು **ಇತಿ** = ಎಂದು **ಯಾಥಾರ್ಥ್ಯಂ** = ಸತ್ಯವನ್ನು **ಜಾನನ್ (ಸನ್)** = ತಿಳಿದವನಾಗಿ **ಕೇನ ಕೇನ** = ಯಾವ ಯಾವ **ದೋಷೇಣ** = ದೋಷದಿಂದ **ನಃ** = ನಮ್ಮ **ದೇಹಃ** = ದೇಹವು **ಕ್ರಮಾತ್** = ಕ್ರಮವಾಗಿ **ಅಪತತ್** = ಬಿದ್ದಿತು **ಇತಿ** = ಎಂದು **ಧರ್ಮಜಂ** = ಧರ್ಮರಾಜನನ್ನು **ಪಪ್ರಚ್ಛ** = ಕೇಳಿದನು.

**ತಾತ್ಪರ್ಯ** :- ಗಂಧಮಾದನದಲ್ಲಿ ನಾರಾಯಣಕ್ಷೇತ್ರದಲ್ಲಿ ದ್ರೌಪದಿ ಸಹದೇವ ಮೊದಲಾದ ಐವರ ದೇಹಗಳು ಕ್ರಮವಾಗಿ ಬಿದ್ದವು. ಆಗ ಭೀಮಸೇನ ಅವರೆಲ್ಲ ಸದೇಹರಾಗಿ ಸ್ವರ್ಗವನ್ನು ಬಯಸದವರಾದ್ದರಿಂದ ಹಾಗೆ ದೇಹ ತೊರೆದರು ಎಂಬ ವಸ್ತುಸ್ಥಿತಿಯನ್ನು ಬಲ್ಲವನಾಗಿದ್ದರೂ ಧರ್ಮರಾಜ ನನ್ನು ಕೇಳಿದ - ''ಯಾವ ಯಾವ ದೋಷದಿಂದ ನಮ್ಮ ದೇಹಗಳು ಹಾಗೆ ಕ್ರಮವಾಗಿ ಬೀಳುತ್ತಿವೆ?'' ಎಂದು.

### ಯುಧಿಷ್ಠಿರ ಹೇಳಿದ ಅರ್ಜುನಾದಿಗಳ ದೋಷಗಳು

**ಮೃತಿಕಾಲೇ ಹಿ ಯೋ ಯಸ್ಯ ದೋಷಂ ವಕ್ತ್ಯೃಣಮೋಚನಮ್ ।**
**ತಸ್ಮಾತ್ ಸ್ಯಾದುಕ್ತದೋಷಸ್ಯೇತ್ಯಾಹ ಯಚ್ಛ್ರುತಿರೇವ ತತ್ ।**
**ಋಣಮೋಕ್ಷಾಯ ಸರ್ವೇಷಾಂ ಭೀಮೋ ದೋಷಾನವಾದಯತ್ ॥ ೬೪ ॥**

ಮೃತಿಕಾಲೇ ಹಿ ಯಃ ಯಸ್ಯ ದೋಷಂ ವಕ್ತಿ ಋಣಮೋಚನಮ್ । ತಸ್ಮಾತ್ ಸ್ಯಾತ್ ಉಕ್ತದೋಷಸ್ಯ ಇತಿ ಆಹ ಯಚ್ಛ್ರುತಿಃ ಏವ ತತ್ । ಋಣಮೋಕ್ಷಾಯ ಸರ್ವೇಷಾಂ ಭೀಮಃ ದೋಷಾನ್ ಅವಾದಯತ್ ॥ ೬೪ ॥

**ಅರ್ಥ** :– **ಮೃತಿಕಾಲೇ ಹಿ** = ಮರಣಕಾಲದಲ್ಲೇ **ಯಃ** = ಯಾವನು **ಯಸ್ಯ** = ಯಾರ **ದೋಷಂ** = ದೋಷವನ್ನು **ವಕ್ತಿ** = ಹೇಳುವನೋ **ತಸ್ಮಾತ್** = ಅವನಿಂದ (ದೋಷವನ್ನು ಹೇಳುವವನಿಂದ) **ಉಕ್ತದೋಷಸ್ಯ** = ದೋಷವು ಹೇಳಲ್ಪಟ್ಟವನ **ಋಣಮೋಚನಂ** = ಋಣಪರಿಹಾರವು **ಸ್ಯಾತ್ ಏವ** = ಆಗಿಯೇ ಆಗುವುದು **ಇತಿ** = ಎಂದು **ಯತ್** = ಯಾವ ಕಾರಣದಿಂದ **ಶ್ರುತಿಃ** = ವೇದವು **ಆಹ** = ಹೇಳಿದೆಯೋ **ತತ್** = ಆ ಕಾರಣದಿಂದ **ಸರ್ವೇಷಾಂ** = ಎಲ್ಲರ **ಋಣಮೋಕ್ಷಾಯ** = ಋಣಪರಿಹಾರಕ್ಕೆಂದು **ಭೀಮಃ** = ಭೀಮನು **ದೋಷಾನ್** = ದೋಷಗಳನ್ನು **ಅವಾದಯತ್** = ಹೇಳಿಸಿದನು.

**ತಾತ್ಪರ್ಯ** :- ಮರಣಕಾಲದಲ್ಲಿ ಯಾರು ಯಾರ ದೋಷವನ್ನು ತಿಳಿಸುವನೋ ಅವನಿಗೆ ಆ ದೋಷ ಹೇಳಿದವರ ಋಣದ ಮೋಚನ ವಾಗುವುದು ಎಂದು ಶ್ರುತಿಯು ತಿಳಿಸಿರುವುದರಿಂದ ಅವರೆಲ್ಲರ ಋಣ ಪರಿಹಾರಕ್ಕಾಗಿ ಭೀಮಸೇನ ಧರ್ಮರಾಜನಿಂದ ದೋಷಗಳನ್ನು ಹೇಳಿಸಿದ.

ಭೀಮಾದಿಗಳದ್ದು ಇಚ್ಛಾಮರಣ

**ಸೋऽಪೀಚ್ಛಾಪತಿತಾನ್ ದೇಹಾನಜಾನನ್ ಶುದ್ಧಕರ್ಮಣಾಮ್ ।**
**ಅಪಶ್ಯನ್ ಕಾರಣಂ ಪ್ರಾಹ ದೋಷಾನ್ ಸ್ಯಾದೇವಮಿತ್ಯಪಿ ।**
**ರಾಜಾ ಸಂಭಾವನಾಮಾತ್ರಂ ನಹಿ ಕಾರ್ಯಮಕಾರಣಮ್ ।। ೬೫ ।।**

**ಸಃ ಅಪಿ ಇಚ್ಛಾಪತಿತಾನ್ ದೇಹಾನ್ ಅಜಾನನ್ ಶುದ್ಧಕರ್ಮಣಾಮ್ । ಅಪಶ್ಯನ್ ಕಾರಣಂ ಪ್ರಾಹ ದೋಷಾನ್ ಸ್ಯಾತ್ ಏವಂ ಇತಿ ಅಪಿ । ರಾಜಾ ಸಂಭಾವನಾಮಾತ್ರಂ ನಹಿ ಕಾರ್ಯಂ ಅಕಾರಣಮ್ ।। ೬೫ ।।**

**ಅರ್ಥ** :– **ಸಃ** = ಆ **ರಾಜಾ ಅಪಿ** = ರಾಜನೂ ಸಹ **ಶುದ್ಧ ಕರ್ಮಣಾಂ** = ಶುದ್ಧಕರ್ಮವುಳ್ಳ (ದ್ರೌಪದೀ ಮೊದಲಾದವರದು) **ಇಚ್ಛಾಪತಿತಾನ್** = ತಮ್ಮ ಇಚ್ಛೆಗೆ ತಕ್ಕಂತೆ ಬಿದ್ದ **ದೇಹಾನ್** = ದೇಹಗಳನ್ನು **ಅಜಾನನ್ (ಸನ್)** = ತಿಳಿಯದವನಾಗಿ **ಕಾರಣಂ** = ದೇಹಪತನಕ್ಕೆ ಕಾರಣವನ್ನು **ಅಪಶ್ಯನ್ (ಸನ್)** = ಕಾಣದವನಾಗಿ **ಹಿ** = ಯಾವ ಕಾರಣದಿಂದ **ಅಕಾರಣಂ** = ಕಾರಣವಿಲ್ಲದ **ಕಾರ್ಯಂ** = ಕಾರ್ಯವು **ನ** = ಇಲ್ಲವೋ **(ತಸ್ಮಾತ್)** = ಆ ಕಾರಣದಿಂದ **ಏವಂ**

**ಅಪಿ** = ಹೀಗೂ ಸಹ **ಸ್ಯಾತ್** = ಇದ್ದೀತು **ಇತಿ** = ಎಂದು **ಸಂಭಾವನಾಮಾತ್ರಂ** = ಊಹೆಯಿಂದ **ದೋಷಾನ್** = ದೋಷಗಳನ್ನು **ಪ್ರಾಹ** = ಹೇಳಿದನು.

**ತಾತ್ಪರ್ಯ** :- ಧರ್ಮರಾಜ ಅವರೆಲ್ಲ ಸ್ವೇಚ್ಛೆಯಿಂದ ದೇಹ ತೊರೆದ ಪರಿಶುದ್ಧ ಕರ್ಮರತರು ಎಂದು ಅರಿಯದೇ ದೋಷವೇನೂ ಕಾಣದಿದ್ದರೂ ಯಾವುದೋ ಒಂದು ದೋಷದಿಂದಲೇ ಹಾಗಾಗಿರಬೇಕು, ಕಾರಣವಿಲ್ಲದೇ ಕಾರ್ಯವಾಗದಲ್ಲವೇ ಎಂದು ಕೇವಲ ಊಹೆಯಿಂದ ಹೇಳತೊಡಗಿದ.

**ಸ್ವಚ್ಛಂದಮೃತ್ಯವೋ ಯೋಗಾದ್ದೇಹಾನುತ್ಸೃಜ್ಯ ಪಾಂಡವಾಃ ।**
**ಕೃಷ್ಣಾ ಚಾಪುಃ ಪರಂ ಸ್ಥಾನಂ ಯನ್ನ ಯಾಂತ್ಯಪಿ ದೇವತಾಃ ।**
**ಇತಿ ಶ್ರುತೇರ್ನ ತೇ ಪಾಪಾದ್ದೇಹಾಂಸ್ತತ್ಯಜುರೂರ್ಜಿತಾಃ ॥ ೬೬ ॥**

**ಸ್ವಚ್ಛಂದಮೃತ್ಯವಃ ಯೋಗಾತ್ ದೇಹಾನ್ ಉತ್ಸೃಜ್ಯ ಪಾಂಡವಾಃ । ಕೃಷ್ಣಾ ಚ ಆಪುಃ ಪರಂ ಸ್ಥಾನಂ ಯತ್ ನ ಯಾಂತಿ ಅಪಿ ದೇವತಾಃ । ಇತಿ ಶ್ರುತೇಃ ನ ತೇ ಪಾಪಾತ್ ದೇಹಾನ್ ತತ್ಯಜುಃ ಊರ್ಜಿತಾಃ ॥ ೬೬ ॥**

**ಅರ್ಥ** :- **ಸ್ವಚ್ಛಂದಮೃತ್ಯವಃ** = ಸ್ವಚ್ಛಂದ ಮರಣವುಳ್ಳ **ಪಾಂಡವಾಃ** = ಪಾಂಡವರು **ಚ** = ಮತ್ತು **ಕೃಷ್ಣಾ** = ದ್ರೌಪದಿಯು **ಯೋಗಾತ್** = ಯೋಗದಿಂದ **ದೇಹಾನ್** = ದೇಹಗಳನ್ನು **ಉತ್ಸೃಜ್ಯ** = ತ್ಯಜಿಸಿ **ದೇವತಾಃ ಅಪಿ** = ದೇವತೆಗಳೂ **ಯತ್** = ಯಾವ **ಪರಂ** = ಶ್ರೇಷ್ಠವಾದ **ಸ್ಥಾನಂ** = ಸ್ಥಾನವನ್ನು **ನ ಯಾಂತಿ** = ಹೋಗಲಾರರೋ **(ತತ್)** = ಆ ಸ್ಥಾನವನ್ನು **ಆಪುಃ** = ಹೊಂದಿದರು **ಇತಿ** = ಎಂಬ **ಶ್ರುತೇಃ** = ಶ್ರುತಿಯಿಂದ **ಊರ್ಜಿತಾಃ** = ಉತ್ಕೃಷ್ಟರಾದ **ತೇ** = ಅವರು **ಪಾಪಾತ್** = ಪಾಪದಿಂದ **ದೇಹಾನ್** = ದೇಹಗಳನ್ನು **ನ ತತ್ಯಜುಃ** = ತ್ಯಜಿಸಲಿಲ್ಲ.

**ತಾತ್ಪರ್ಯ** :- ''ಪಾಂಡವರು ಹಾಗೂ ದ್ರೌಪದಿ ಸ್ವೇಚ್ಛಾಮರಣಿಗಳು, ಯೋಗದಿಂದ ಅವರೆಲ್ಲ ದೇಹವನ್ನು ತೊರೆದು ದೇವತೆಗಳೂ ಹೊಂದಲಾಗದಂತಹ ಉತ್ತಮ ಲೋಕಗಳನ್ನು ಪಡೆದರು'' ಎಂಬ ಶ್ರುತಿ ಇರುವುದರಿಂದ ಮಹಾಶಕ್ತಿಶಾಲಿಗಳಾದ ಅವರು ಸರ್ವಥಾ ಪಾಪದಿಂದ ದೇಹ ತೊರೆದವರಲ್ಲ.

**ಋಣಾನ್ಯುನ್ಮುಚ್ಯ ದೋಷೋಕ್ತ್ಯಾ ಸ್ವಾನಾಂ ಭೀಮಃ ಸ್ವಕಾಂ ತನುಮ್ ।**
**ತತ್ಯಾಜ ಪರಮಂ ಧ್ಯಾಯನ್ನಾಪ ಚ ಸ್ಥಾನಮುತ್ತಮಮ್ ।**
**ಇತಿ ಸ್ಕಂದಪುರಾಣೋಕ್ತಂ ವ್ಯಾಸವಾಕ್ಯಮೃಷೀನ್ ಪ್ರತಿ ॥ ೬೭ ॥**

**ಋಣಾನಿ ಉನ್ಮುಚ್ಯ ದೋಷೋಕ್ತ್ಯಾ ಸ್ವಾನಾಂ ಭೀಮಃ ಸ್ವಕಾಂ ತನುಮ್ । ತತ್ಯಾಜ ಪರಮಂ ಧ್ಯಾಯನ್ ಆಪ ಚ ಸ್ಥಾನಂ ಉತ್ತಮಮ್ । ಇತಿ ಸ್ಕಂದಪುರಾಣೋಕ್ತಂ ವ್ಯಾಸವಾಕ್ಯಂ ಋಷೀನ್ ಪ್ರತಿ ॥ ೬೭ ॥**

**ಅರ್ಥ** :- **ಭೀಮಃ** = ಭೀಮನು **ದೋಷೋಕ್ತ್ಯಾ** = ದೋಷವನ್ನು ಹೇಳಿಸುವುದರಿಂದ **ಸ್ವಾನಾಂ** = ತನ್ನವರ **ಋಣಾನಿ** = ಋಣಗಳನ್ನು **ಉನ್ಮುಚ್ಯ** = ಪರಿಹರಿಸಿ **ಪರಮಂ** = ಸರ್ವೋತ್ತಮನಾದ ಹರಿಯನ್ನು **ಧ್ಯಾಯನ್** = ಧ್ಯಾನಮಾಡುವವನಾಗಿ **ಸ್ವಕಾಂ** = ತನ್ನ **ತನುಂ** = ದೇಹವನ್ನು **ತತ್ಯಾಜ** = ತೊರೆದನು. **ಚ** = ಮತ್ತು **ಉತ್ತಮಂ** = ಉತ್ತಮವಾದ **ಸ್ಥಾನಂ** = ಸ್ಥಾನವನ್ನು **ಆಪ** = ಹೊಂದಿದನು. **ಇತಿ** = ಎಂದು **ಋಷೀನ್ ಪ್ರತಿ** = ಋಷಿಗಳನ್ನು ಕುರಿತು **ಸ್ಕಾಂದಪುರಾಣೋಕ್ತಂ** = ಸ್ಕಂದಪುರಾಣದಲ್ಲಿ ಹೇಳಲ್ಪಟ್ಟ **ವ್ಯಾಸವಾಕ್ಯಂ** = ವ್ಯಾಸವಾಕ್ಯವು **(ವರ್ತತೇ)** = ಇದೆ.

**ತಾತ್ಪರ್ಯ** :- ಭೀಮಸೇನ ಹಾಗೆ ದೋಷಗಳನ್ನು ಹೇಳಿಸುವ ಮೂಲಕ ತನ್ನವರಿಗೆ ಅವನ ಋಣವನ್ನು ಪರಿಹರಿಸಿ ಶ್ರೀಹರಿಯನ್ನು ಧ್ಯಾನಿಸುತ್ತಾ ತನ್ನ ದೇಹವನ್ನೂ ತೊರೆದ ಹಾಗೂ ಉತ್ತಮ ಸ್ಥಾನವನ್ನೂ ಪಡೆದ ಎಂಬುದಾಗಿ ಋಷಿಗಳನ್ನು ಕುರಿತು ಸ್ಕಂದಪುರಾಣದಲ್ಲಿ ಬಂದಿರುವ ವ್ಯಾಸವಚನವಿದೆ.

### ದ್ರೌಪದಿ ನಿರ್ದೋಷಳು

**ಭೀಮಾದೃತೇ ಹಿ ಚತುರ್ಷು ಪಕ್ಷಪಾತಸ್ತು ವಾಸವೌ ।**
**ಯೋಗ್ಯ ಏವೇತಿ ಕೃಷ್ಣಾಯಾ ನ ದೋಷಃ ಸ್ಯಾತ್ ಕಥಂಚನ ॥ ೬೮ ॥**

**ಭೀಮಾತ್ ಋತೇ ಹಿ ಚತುರ್ಷು ಪಕ್ಷಪಾತಃ ತು ವಾಸವೌ । ಯೋಗ್ಯಃ ಏವ ಇತಿ ಕೃಷ್ಣಾಯಾಃ ನ ದೋಷಃ ಸ್ಯಾತ್ ಕಥಂಚನ ॥ ೬೮ ॥**

**ಅರ್ಥ** :- **ಭೀಮಾತ್ ಋತೇ ಹಿ** = ಭೀಮನನ್ನು ಬಿಟ್ಟು **ಚತುರ್ಷು (ಸತ್ಸು)** = (ಯುಧಿಷ್ಠಿರಾದಿ) ನಾಲ್ವರಿರುವಲ್ಲಿ **ವಾಸವೌ ತು**

= ಅರ್ಜುನನಲ್ಲಾದರೋ **ಪಕ್ಷಪಾತಃ** = ಪಕ್ಷಪಾತವು **ಯೋಗ್ಯಃ ಏವ** = ಯುಕ್ತವೇ **ಇತಿ** = ಎಂಬ ಕಾರಣದಿಂದ **ಕೃಷ್ಣಾಯಾಃ** = ದ್ರೌಪದಿಗೆ **ದೋಷಃ** = ದೋಷವು **ಕಥಂಚನ** = ಸರ್ವಥಾ **ನ ಸ್ಯಾತ್** = ಆಗದು.

**ತಾತ್ಪರ್ಯ** :- ಭೀಮನ ಹೊರತು ಇತರ ನಾಲ್ವರಲ್ಲಿ ಅರ್ಜುನನ ಬಗ್ಗೆ ದ್ರೌಪದಿಗೆ ಪಕ್ಷಪಾತವಿದ್ದುದು ಯೋಗ್ಯವೇ ಆದ್ದರಿಂದ ಅದು ಸರ್ವಥಾ ದೋಷವೆನ್ನಿಸದು.

### ಭೀಮನೂ ನಿರ್ದೋಷ

**ನೀತಿರೂಪೇ ವೀರ್ಯಬಲೇ ಮಹಾಂತ್ಯೇಷಾಂ ಯತಃ ಕ್ರಮಾತ್ ।**
**ಪ್ರಾಣತ್ವಾದ್ಭೋಗಶಕ್ತಿಶ್ಚ ನ ಹಿ ದೋಷಾಯ ಮಾರುತೇಃ ॥ ೬೯ ॥**

**ನೀತಿರೂಪೇ ವೀರ್ಯಬಲೇ ಮಹಾಂತಿ ಏಷಾಂ ಯತಃ ಕ್ರಮಾತ್ । ಪ್ರಾಣತ್ವಾತ್ ಭೋಗಶಕ್ತಿಃ ಚ ನ ಹಿ ದೋಷಾಯ ಮಾರುತೇಃ ॥ ೬೯ ॥**

**ಅರ್ಥ** :- **ಮಹಾಂತಿ** = ಉತ್ತಮವಾದ **ನೀತಿರೂಪೇ** = ನೀತಿ ರೂಪಗಳು **ವೀರ್ಯಬಲೇ** = ವೀರ್ಯ ಬಲಗಳು **ಏಷಾಂ** = ಇವರಲ್ಲಿ (ಸಹದೇವಾದಿಗಳಲ್ಲಿ) **ಕ್ರಮಾತ್** = ಕ್ರಮವಾಗಿ **ಯತಃ** = ಯಾವ ಕಾರಣದಿಂದ **(ಸಂತಿ)** = ಇವೆಯೋ, **(ಅತಃ ನ ದೋಷಃ)** = ಆದ್ದರಿಂದ ದೋಷವಿಲ್ಲ. **ಪ್ರಾಣತ್ವಾತ್** = ಪ್ರಧಾನವಾಯುತ್ವದಿಂದಾಗಿ **ಭೋಗಶಕ್ತಿಃ ಚ** = ಬಹುವಾಗಿ ಅನ್ನವನ್ನು ಭೋಗಿಸುವ ಶಕ್ತಿಯು ಸಹ **ಮಾರುತೇಃ** = ಭೀಮಸೇನನ **ದೋಷಾಯ** = ದೋಷಕ್ಕಾಗಿ **ನ ಹಿ** = ಆಗದು.

**ತಾತ್ಪರ್ಯ** :- ನೀತಿ, ರೂಪ, ವೀರ್ಯ, ಬಲಗಳು ಪಾಂಡವರಲ್ಲಿ ಕ್ರಮವಾಗಿ ಹೆಚ್ಚು ಹೆಚ್ಚಾಗಿ ಇದ್ದವು. ಆದರಿಂದ ಅದು ದೋಷಕ್ಕೆ ಕಾರಣವಾಗದು. ಭೀಮಸೇನ ಮುಖ್ಯಪ್ರಾಣನಾದ್ದರಿಂದ ಅವನಿಗೆ ಭೋಗಶಕ್ತಿ ಸರ್ವಥಾ ದೋಷವಾಗದು.

### ಭೀಮನದು ಅಹಂಕಾರವಲ್ಲ

**ಯಥಾಸ್ವರೂಪವಿಜ್ಞಾನಮಾತ್ಮನ್ಯಪಿ ನ ದೋಷಕೃತ್ ।**
**ಇತಿ ವ್ಯಾಸಸ್ಮೃತೇರೇಷಾಮುಕ್ತದೋಷೋದ್ಭವಃ ಕಥಮ್ ॥ ೭೦ ॥**

**ಯಥಾಸ್ವರೂಪವಿಜ್ಞಾನಂ ಆತ್ಮನಿ ಅಪಿ ನ ದೋಷಕೃತ್ । ಇತಿ ವ್ಯಾಸಸ್ಮೃತೇಃ ಏಷಾಂ ಉಕ್ತದೋಷೋದ್ಭವಃ ಕಥಮ್ ॥ ೭೦ ॥**

**ಅರ್ಥ** :- **ಆತ್ಮನಿ ಅಪಿ** = ತನ್ನ ಬಗ್ಗೆಯೂ ಸಹ **ಯಥಾ ಸ್ವರೂಪವಿಜ್ಞಾನಂ** = ತನ್ನ ಸ್ವರೂಪವನ್ನು ಮೀರದೆ ಯಥಾವತ್ತಾಗಿ ತಿಳಿದುಕೊಳ್ಳುವುದು **ನನ್ ದೋಷಕೃತ್** = ದೋಷಕರವಲ್ಲ. **ಇತಿ** = ಎಂದು **ವ್ಯಾಸಸ್ಮೃತೇಃ** = ವ್ಯಾಸಸ್ಮೃತಿಯ ವಾಕ್ಯದಿಂದ **ಏಷಾಂ** = ಇವರ (ದ್ರೌಪದೀ ಮೊದಲಾದವರ) **ಉಕ್ತದೋಷೋದ್ಭವಃ** = ಧರ್ಮರಾಜ ನಿಂದ ಹೇಳಲ್ಪಟ್ಟ ದೋಷಗಳ ಸಂಭವವು **ಕಥಂ (ಸ್ಯಾತ್)** = ಹೇಗೆ ತಾನೆ ಇದ್ದೀತು?

**ತಾತ್ಪರ್ಯ** :- ತನ್ನ ಸ್ವರೂಪವನ್ನು ಯಥಾವತ್ತಾಗಿ ತಿಳಿದುಕೊಳ್ಳುವುದು ದೋಷಕ್ಕೆ ಕಾರಣವಲ್ಲ ಎಂದು ವ್ಯಾಸಸ್ಮೃತಿಯಲ್ಲಿರುವುದರಿಂದ ಧರ್ಮರಾಜ ಹೇಳಿರುವ ದೋಷಗಳು ಅವರಿಗೆ ಹೇಗೆ ತಾನೇ ಯುಕ್ತವಾದಾವು?

### ಇತರರ ದೋಷವು ದೇಹತ್ಯಾಗಕ್ಕೆ ಕಾರಣವಲ್ಲ

**ಕದಾಚಿದತಿಮಾನೋಽಪಿ ತ್ರಯಾಣಾಮೇಷು ಜಾಯತೇ ।**
**ತಥಾಽಪಿ ತತ್ಫಲಂ ನೈತತ್ ತಾರತಮ್ಯಂ ಹಿ ಮುಕ್ತಿಗಮ್ ॥ ೭೧ ॥**

**ಕದಾಚಿತ್ ಅತಿಮಾನಃ ಅಪಿ ತ್ರಯಾಣಾಂ ಏಷು ಜಾಯತೇ । ತಥಾ ಅಪಿ ತತ್ಫಲಂ ನ ಏತತ್ ತಾರತಮ್ಯಂ ಹಿ ಮುಕ್ತಿಗಮ್ ॥ ೭೧ ॥**

**ಅರ್ಥ** :- **ಕದಾಚಿತ್** = ಕೆಲವೊಮ್ಮೆ **ತ್ರಯಾಣಾಂ** = ಮೂವರಿಗೆ (ನಕುಲ-ಸಹದೇವ-ಅರ್ಜುನರಿಗೆ) **ಏಷು** = ಈ (ನೀತಿರೂಪ ಮೊದಲಾದ) ಗುಣಗಳಲ್ಲಿ **ಅತಿಮಾನಃ** = ಅತಿಯಾದ ಅಹಂಕಾರವು **ಜಾಯತೇ ಅಪಿ** = ಉಂಟಾಗುತ್ತಿದ್ದರೂ **ತಥಾ ಅಪಿ** = ಹಾಗೆ (ಅಭಿಮಾನ) ಇದ್ದರೂ **ತತ್ಫಲಂ** = ಅದರ ಫಲವು **ಏತತ್ ನ** = ಇದಲ್ಲ (ಈ ದೇಹತ್ಯಾಗವಲ್ಲ). **ಮುಕ್ತಿಗಂ** = ಮುಕ್ತಿಯಲ್ಲಿನ **ತಾರತಮ್ಯಂ ಹಿ** = ತಾರತಮ್ಯವೇ (ಆಗಿದೆ).

**ತಾತ್ಪರ್ಯ** :- ಕೆಲವೊಮ್ಮೆ ಅರ್ಜುನಾದಿ ಮೂವರಿಗೆ ತಮ್ಮ ಗುಣಗಳ ಬಗ್ಗೆ ಅತಿಯಾದ ಅಹಂಕಾರವು ಉಂಟಾಗುತ್ತಿತ್ತು. ಆದರೆ ಅವರು ದೇಹ ತೊರೆದದ್ದಕ್ಕೆ ಅದು ಕಾರಣವಲ್ಲ. ಅದು ಮುಕ್ತಿಯಲ್ಲಿನ ತಾರತಮ್ಯಕ್ಕೆ ಕಾರಣ.

**ಗುಣದೋಷಾಧಿಕಾಲ್ಪತ್ವಾದತ್ರಸ್ಥಮಪಿ ಹಿ ಶ್ರುತಮ್ ।**
**ಪ್ರಾರಬ್ಧಕರ್ಮನಾಶೇ ಹಿ ಪತೇದ್ದೇಹೋಽಪ್ಯಪಾಪಿನಃ ॥ ೭೨ ॥**

**ಗುಣದೋಷಾಧಿಕಾಲ್ಪತ್ವಾತ್ ಅತ್ರಸ್ಥಂ ಅಪಿ ಹಿ ಶ್ರುತಮ್ । ಪ್ರಾರಬ್ಧಕರ್ಮನಾಶೇ ಹಿ ಪತೇತ್ ದೇಹಃ ಅಪಿ ಅಪಾಪಿನಃ ॥ ೭೨ ॥**

**ಅರ್ಥ** :- **ಗುಣದೋಷಾಧಿಕಾಲ್ಪತ್ವಾತ್** = (ಅಪರೋಕ್ಷಜ್ಞಾನದ ನಂತರದಲ್ಲಿ) ಗುಣ–ದೋಷಗಳ ಅಧಿಕತ್ವದಿಂದ ಅಥವಾ ಅಲ್ಪತ್ವದಿಂದ **ಅತ್ರಸ್ಥಂ** = ಈ ಸಂಸಾರದಲ್ಲಿ ಇರುವ **ಏತತ್** = ಈ ದೇಹಬೀಳುವಿಕೆ ಮೊದಲಾದವು **ತತ್ಫಲಂ** = ಗುಣದೋಷಗಳ ಫಲವು **ನ** = ಅಲ್ಲ. **(ಕಿಂತು)** = ಮತ್ತೇನೆಂದರೆ **ಮುಕ್ತಿಗಂ** = ಮುಕ್ತಿಯಲ್ಲಿನ ತಾರತಮ್ಯಂ **ಹಿ** = ತಾರತಮ್ಯವೇ **ಶ್ರುತಂ** = (ಅದರ ಫಲವಾಗಿ) ಹೇಳಲ್ಪಟ್ಟಿದೆ. **ಅಪಾಪಿನಃ ಅಪಿ** = ಅಪಾಪಿಗಳಿಗೂ ಸಹ **ಪ್ರಾರಬ್ಧಕರ್ಮನಾಶೇ (ಸತಿ)** = ಪ್ರಾರಬ್ಧಕರ್ಮನಾಶವಾಗಲು **ದೇಹಃ** = ದೇಹವು **ಪತೇತ್ ಹಿ** = ಬಿದ್ದೇ ಬೀಳುವುದು.

**ತಾತ್ಪರ್ಯ** :- ಗುಣದೋಷಗಳು ಹೆಚ್ಚುಕಡಿಮೆ ಆಗುವುದು ಸಂಸಾರ ದಲ್ಲಿನ ದೇಹಪಾತಾದಿಗಳಿಗೆ ಕಾರಣವಲ್ಲ. ಪ್ರಾರಬ್ಧಕರ್ಮ ಕಳೆದಮೇಲೆ ಯಾವುದೇ ಪಾಪವಿಲ್ಲದವನ ದೇಹವೂ ಸಹ ಬಿದ್ದೇ ಬೀಳುವುದು.

### ಯುಧಿಷ್ಠಿರನಿಗೂ ದೇಹತ್ಯಾಗ ಅನಿವಾರ್ಯ

**ಯುಧಿಷ್ಠಿರೋಽಪಿ ಹಿ ಸ್ವರ್ಗಂ ಬುಭುಜೇ ನೈವ ತತ್ತನುಃ ।**
**ಅತಿಮಾನಾದಯೋ ದೋಷಾಃ ಕುತ ಏವ ಹಿ ಮಾರುತೇಃ ॥ ೭೩ ॥**

**ಯುಧಿಷ್ಠಿರಃ ಅಪಿ ಹಿ ಸ್ವರ್ಗಂ ಬುಭುಜೇ ನ ಏವ ತತ್ತನುಃ । ಅತಿಮಾನಾದಯಃ ದೋಷಾಃ ಕುತಃ ಏವ ಹಿ ಮಾರುತೇಃ ॥ ೭೩ ॥**

**ಅರ್ಥ** :- **ತತ್ತನುಃ ಏವ** = ಆ ದೇಹವನ್ನು ಬಿಡದವನಾಗಿಯೇ **ಯುಧಿಷ್ಠಿರಃ ಅಪಿ** = ಯುಧಿಷ್ಠಿರನೂ ಸಹ **ಸ್ವರ್ಗಂ** = ಸ್ವರ್ಗವನ್ನು ನ **ಬುಭುಜೇ ಹಿ** = ಭೋಗಿಸಲಿಲ್ಲವಷ್ಟೆ. **ಅತಿಮಾನಾದಯಃ** = ಅತಿಯಾದ ಅಹಂಕಾರ ಮೊದಲಾದ **ದೋಷಾಃ** = ದೋಷಗಳು **ಮಾರುತೇಃ** = ಭೀಮಸೇನನಿಗೆ **ಕುತಃ ಏವ ಹಿ** = ಎಲ್ಲಿಯವು?

**ತಾತ್ಪರ್ಯ** :- ಧರ್ಮರಾಜನೂ ಸಹ ಅದೇ ದೇಹದಿಂದಲೇ ಸ್ವರ್ಗ ವನ್ನು ಅನುಭವಿಸಲಿಲ್ಲವಷ್ಟೇ! ಅಂದಮೇಲೆ ಭೀಮಸೇನನಿಗೆ ಅತಿಯಾದ ಅಹಂಕಾರಾದಿ ದೋಷಗಳು ಹೇಗೆ ತಾನೇ ಒದಗುವವು.

**ಋಜುಗಳ ಹಿರಿಮೆ**

**ಅನಾದಿಕಾಲತಃ ಸರ್ವದೋಷಹೀನಾ ಗುಣಾಧಿಕಾಃ ।**
**ಸರ್ವಜೀವಗಣೇಭ್ಯೋ ಯೇ ತೇ ಹಿ ವಾಯುತ್ವಮಾಪ್ನುಯುಃ ।**
**ಋಜವೋ ನಾಮ ಯೇ ದೇವಾ ದೇವಾನಾಮಪಿ ದೇವತಾಃ ॥ ೭೪ ॥**

**ಅನಾದಿಕಾಲತಃ ಸರ್ವದೋಷಹೀನಾಃ ಗುಣಾಧಿಕಾಃ । ಸರ್ವಜೀವಗಣೇಭ್ಯಃ ಯೇ ತೇ ಹಿ ವಾಯುತ್ವಂ ಆಪ್ನುಯುಃ । ಋಜವಃ ನಾಮ ಯೇ ದೇವಾಃ ದೇವಾನಾಂ ಅಪಿ ದೇವತಾಃ ॥ ೭೪ ॥**

**ಅರ್ಥ** :- **ಅನಾದಿಕಾಲತಃ** = ಅನಾದಿಕಾಲದಿಂದ **ಸರ್ವಜೀವ ಗಣೇಭ್ಯಃ** = ಎಲ್ಲ ಜೀವರ ಗಣಗಳಿಗಿಂತ **ಗುಣಾಧಿಕಾಃ** = ಗುಣಗಳಿಂದ ಅಧಿಕರೂ **ಸರ್ವದೋಷಹೀನಾಃ** = ಎಲ್ಲ ದೋಷಗಳಿಂದ ವರ್ಜಿತರೂ **ದೇವಾನಾಂ ಅಪಿ** = ದೇವತೆಗಳಿಗೂ **ದೇವತಾಃ** = ದೇವತೆಗಳು **ಋಜವಃ** = ಋಜುಗಳು **ನಾಮ** = ಎಂಬ **ಯೇ** = ಯಾವ **ದೇವಾಃ** = ದೇವತೆಗಳು **(ಸಂತಿ)** = ಇರುವರೋ, **ತೇ ಹಿ** = ಅವರು ಮಾತ್ರವೇ **ವಾಯುತ್ವಂ** = ವಾಯುಪದವಿಯನ್ನು **ಆಪ್ನುಯುಃ** = ಹೊಂದುವರು.

**ತಾತ್ಪರ್ಯ** :- ಅನಾದಿಕಾಲದಿಂದ ಸಕಲದೋಷರಹಿತರೂ, ಸಕಲ ಜೀವರಲ್ಲೂ ಅಧಿಕಗುಣಗಳಿಂದ ಕೂಡಿದವರೂ ಆದವರೇ ವಾಯುಪದವಿ ಯನ್ನು ಹೊಂದುವರು. ಋಜುಗಳು ಎಂಬ ಆ ದೇವತೆಗಳು ದೇವತೆಗಳಿಗೂ ದೇವತೆಗಳು.

ಕೃಷ್ಣ ಮಾಡಿದ ಭೀಮ ಪ್ರಶಂಸೆ

**ಅಭಾವಂ ಹ್ಯತಿಮಾನಾದೇರ್ಭೀಮಸ್ಯಾಹ ಚ ಕೇಶವಃ ॥ ೭೫ ॥**

**ಅಭಾವಂ ಹಿ ಅತಿಮಾನಾದೇಃ ಭೀಮಸ್ಯ ಆಹ ಚ ಕೇಶವಃ ।**

**ಅರ್ಥ** :- **ಕೇಶವಃ ಚ** = ಕೃಷ್ಣನೇ **ಭೀಮಸ್ಯ** = ಭೀಮನಿಗೆ **ಅತಿಮಾನಾದೇಃ** = ಅತಿಯಾದ ಅಹಂಕಾರದ **ಅಭಾವಂ** = ಇಲ್ಲದಿರುವಿಕೆಯನ್ನು **ಆಹ** = ಹೇಳಿರುವನು. **ಹಿ** = ಇದು ಪ್ರಸಿದ್ಧವು.

**ತಾತ್ಪರ್ಯ** :- ಕೃಷ್ಣನು ಭೀಮನಿಗೆ ಅತಿಯಾದ ಅಹಂಕಾರಾದಿಗಳು ಸರ್ವಥಾ ಇಲ್ಲ ಎಂದು ತಿಳಿಸಿರುವನು.

**ಯತ್ಕಿಂಚಾತ್ಮನಿ ಕಲ್ಯಾಣಂ ಸಂಭಾವಯಸಿ ಪಾಂಡವ ।**
**ಸಹಸ್ರಗುಣಮಪ್ಯೇತತ್ ತ್ವಯಿ ಸಂಭಾವಯಾಮ್ಯಹಮ್ ॥ ೭೬ ॥**

**ಯತ್ಕಿಂಚ ಆತ್ಮನಿ ಕಲ್ಯಾಣಂ ಸಂಭಾವಯಸಿ ಪಾಂಡವ । ಸಹಸ್ರಗುಣಂ ಅಪಿ ಏತತ್ ತ್ವಯಿ ಸಂಭಾವಯಾಮಿ ಅಹಮ್ ॥ ೭೬ ॥**

**ಅರ್ಥ** :- **ಪಾಂಡವ** = ಪಾಂಡವನಾದ ಭೀಮನೇ! **ಯತ್ಕಿಂಚ** = ಯಾವ ಸ್ವಲ್ಪ **ಆತ್ಮನಿ** = ನಿನ್ನಲ್ಲಿ **ಕಲ್ಯಾಣಂ** = ಜ್ಞಾನಾನಂದಾದಿಗುಣವನ್ನು **ಸಂಭಾವಯಸಿ** = ಹೇಳುತ್ತಿರುವೆಯೋ **ಅಹಂ** = ನಾನು **ಏತತ್ ಅಪಿ** = ಅದಕ್ಕಿಂತಲೂ **ಸಹಸ್ರಗುಣಂ** = ಸಾವಿರಾರುಪಟ್ಟು **ತ್ವಯಿ** = ನಿನ್ನಲ್ಲಿ **ಸಂಭಾವಯಾಮ್ಯಹಂ** = ತಿಳಿದಿರುವೆನು. **ಇತಿ** = ಎಂದು **(ಆಹ)** = ಹೇಳಿರುವನು.

**ತಾತ್ಪರ್ಯ** :- ಭೀಮನೇ! ನೀನು ಹೇಳಿಕೊಳ್ಳುತ್ತಿರುವ ಜ್ಞಾನಾನಂದಾದಿ ಗುಣಗಳಿಗಿಂತ ಸಾವಿರಾರು ಪಟ್ಟು ಗುಣಗಳು ನಿನ್ನಲ್ಲಿವೆ ಎಂದು ನಾನು ಬಲ್ಲೆ.

**ಇತಿ ತಸ್ಮಾದ್ಯಥಾ ಯುದ್ಧೇ ಧರ್ಮಹಾನಿಮಮನ್ಯತ ।**
**ಏವಮತ್ರಾಪ್ಯಧರ್ಮೇಣ ದೇಹಪಾತಂ ನೃಪೋಽಬ್ರವೀತ್ ॥ ೭೭ ॥**

**ಇತಿ ತಸ್ಮಾತ್ ಯಥಾ ಯುದ್ಧೇ ಧರ್ಮಹಾನಿಂ ಅಮನ್ಯತ । ಏವಂ ಅತ್ರ ಅಪಿ ಅಧರ್ಮೇಣ ದೇಹಪಾತಂ ನೃಪಃ ಅಬ್ರವೀತ್ ॥ ೭೭ ॥**

**ಅರ್ಥ** :– **ತಸ್ಮಾತ್** = ಆದ್ದರಿಂದ **ನೃಪಃ** = ರಾಜನಾದ ಯುಧಿಷ್ಠಿರನು **ಯಥಾ** = ಹೇಗೆ **ಯುದ್ಧೇ** = ಯುದ್ಧದ ವಿಷಯದಲ್ಲಿ **ಧರ್ಮಹಾನಿಂ** = ಧರ್ಮದ ನಾಶವನ್ನು **ಅಮನ್ಯತ** = ತಿಳಿದನೋ, **ಏವಂ** = ಆ ಪ್ರಕಾರದಿಂದ **ಅತ್ರ ಅಪಿ** = ಇಲ್ಲೂ (ತಮ್ಮ ತಮ್ಮ ಸ್ವರೂಪವನ್ನು ಸೇರುವಾಗಲೂ) ಸಹ **ಅಧರ್ಮೇಣ** = ಅಧರ್ಮದಿಂದ **ದೇಹಪಾತಂ** = ದೇಹವು ಬಿದ್ದಿತೆಂದುಬುದನ್ನು **ಅಬ್ರವೀತ್** = ಹೇಳಿದನು.

**ತಾತ್ಪರ್ಯ** :- ಆದ್ದರಿಂದ ಧರ್ಮರಾಜ ಯುದ್ಧ ಮಾಡಿದಾಗ ಅಧರ್ಮವಾಯಿತೆಂದು ಹೇಗೆ ತಪ್ಪಾಗಿ ತಿಳಿದನೋ, ಅದರಂತೆ ಇಲ್ಲೂ ಸಹ ಅಧರ್ಮದ ಕಾರಣದಿಂದಾಗಿ ದೇಹಪಾತವಾಯಿತು ಎಂದು ಹೇಳಿದನು.

### ಪಾಂಡವರ ದೇಹಪಾತದ ಕ್ರಮ

**ಪೂಜ್ಯೇಭ್ಯಃ ಪೂರ್ವಮೇವೈಷಾಂ ದೇಹಪಾತಮಭೀಪ್ಸತಾಮ್ ।**
**ತತ್ಕ್ರಮಾತ್ ದೇಹಪಾತೋಽಭೂನ್ನ ಪಾಪಾನ್ಮುಮುಕ್ಷತಾಂ ಯಥಾ ॥ ೭೮ ॥**

**ಪೂಜ್ಯೇಭ್ಯಃ ಪೂರ್ವಂ ಏವ ಏಷಾಂ ದೇಹಪಾತಂ ಅಭೀಪ್ಸತಾಮ್ । ತತ್ಕ್ರಮಾತ್ ದೇಹಪಾತಃ ಅಭೂತ್ ನ ಪಾಪಾತ್ ಮುಚ್ಯತಾಂ ಯಥಾ ॥ ೭೮ ॥**

**ಅರ್ಥ** :– **ಪೂಜ್ಯೇಭ್ಯಃ** = ವಯಸ್ಸಿನಿಂದ ಹಿರಿಯರಾದವರಿಗಿಂತ **ಪೂರ್ವಂ ಏವ** = ಮೊದಲೇ **ದೇಹಪಾತಂ** = ದೇಹವು ಬೀಳುವಿಕೆಯನ್ನು **ಅಭೀಪ್ಸತಾಂ** = ಬಯಸಿದ **ಏಷಾಂ** = ಇವರಿಗೆ **ತತ್ಕ್ರಮಾತ್** = ಆ ಕ್ರಮದಿಂದಲೇ **ದೇಹಪಾತಃ** = ದೇಹದ ಪತನವು **ಅಭೂತ್** = ಆಯಿತು **ನ ಪಾಪಾತ್** = ಪಾಪದಿಂದಲ್ಲ. **ಮುಚ್ಯತಾಂ** = ಮೋಕ್ಷವನ್ನು ಹೊಂದುವವರಿಗೆ **ಯಥಾ** = ಹೇಗೋ (**ತಥಾ**) = ಹಾಗೆ.

**ತಾತ್ಪರ್ಯ** :- ತಮ್ಮ ಹಿರಿಯರಿಗಿಂತಲೂ ಮುಂಚಿತವಾಗಿಯೇ ದೇಹ ಬಿಡಲು ಬಯಸಿದ ಅವರಿಗೆ ಆ ಕ್ರಮದಲ್ಲಿಯೇ ದೇಹಪಾತವಾಯಿತು; ಪಾಪದ ಕಾರಣದಿಂದಾಗಿ ಅಲ್ಲ; ಮುಕ್ತಿಗೆ ತೆರಳುವವರಿಗೆ ಹೇಗೋ ಹಾಗೆ

**ನ ಹಿ ಪಾಪಫಲಾನ್ಮುಕ್ತೌ ದೇಹಪಾತಃ ಕಥಂಚನ ।**
**ಕಿಂ ತು ಕರ್ಮಕ್ಷಯಾದೇವ ತಥಾ ಸರ್ವತ್ರ ನಿಶ್ಚಿತಃ ॥ ೭೯ ॥**

ನ ಹಿ ಪಾಪಫಲಾತ್ ಮುಕ್ತೌ ದೇಹಪಾತಃ ಕಥಂಚನ । ಕಿಂ ತು ಕರ್ಮಕ್ಷಯಾತ್ ಏವ ತಥಾ ಸರ್ವತ್ರ ನಿಶ್ಚಿತಃ ॥ ೭೯ ॥

**ಅರ್ಥ** :- **ಮುಕ್ತೌ** = ಮುಕ್ತಿಪ್ರಾಪ್ತವಾಗುವ ಸಮಯದಲ್ಲಿ **ದೇಹಪಾತಃ** = ದೇಹದ ಪತನವು **ಕಥಂಚನ** = ಎಂದಿಗೂ **ಪಾಫಲಾತ್** = ಪಾಪದ ಫಲದಿಂದಾಗಿ **ನ ಹಿ** = ಅಲ್ಲವೇ ಅಲ್ಲ. **ಕಿಂತು** = ಆದರೆ **ಕರ್ಮಕ್ಷಯಾತ್ ಏವ** = ಕರ್ಮಕ್ಷಯದಿಂದಲೇ. **ತಥಾ** = ಹೀಗೆಯೇ **ಸರ್ವತ್ರ** = ಎಲ್ಲಕಡೆಯೂ (ವೇದಾದಿಗಳಲ್ಲಿ) **ನಿಶ್ಚಿತಃ** = ನಿರ್ಣೀತವಾಗಿದೆ.

### ಧರ್ಮಜನ ಮುಂದೆ ದೇವರಥ

**ತೇಷು ಸ್ವಲೋಕಾನ್ ಪ್ರಾಪ್ತೇಷು ಧರ್ಮಜಃ ಸ್ವಾತ್ಮನಾ ಸಹ ।**
**ಯಯೌ ಪುರೋ ದೇವರಥಸ್ತದಾಽಸ್ಯಾವತತಾರ ಹ ॥ ೮೦ ॥**

ತೇಷು ಸ್ವಲೋಕಾನ್ ಪ್ರಾಪ್ತೇಷು ಧರ್ಮಜಃ ಸ್ವಾತ್ಮನಾ ಸಹ । ಯಯೌ ಪುರಃ ದೇವರಥಃ ತದಾ ಅಸ್ಯ ಅವತತಾರ ಹ ॥ ೮೦ ॥

**ಅರ್ಥ** :- **ತೇಷು** = ಅವರು **ಸ್ವಲೋಕಾನ್** = ತಮ್ಮ ಲೋಕಗಳನ್ನು **ಪ್ರಾಪ್ತೇಷು** (ಸತ್ಸು) = ಸೇರಿರುವಾಗ **ಧರ್ಮಜಃ** = ಧರ್ಮಪುತ್ರನಾದ ಯುಧಿಷ್ಠಿರನು **ಶ್ವಾತ್ಮನಾ ಸಹ** = ನಾಯಿಯರೂಪದ ಯಮನೊಂದಿಗೆ (**ಸ್ವಾತ್ಮನಾ ಸಹ** = ತನ್ನ ದೇಹದಿಂದ) **ಯಯೌ** = ಸಾಗಿದನು. **ತದಾ** = ಆಗ **ದೇವರಥಃ** = ದೇವರಥವು **ಅಸ್ಯ** = ಅವನ **ಪುರಃ** = ಎದುರು **ಅವತತಾರ** = ಇಳಿಯಿತು. **ಹ** = ಆಶ್ಚರ್ಯ!

**ತಾತ್ಪರ್ಯ** :- ಭೀಮ ಮೊದಲಾದವರು ತಮ್ಮ ಲೋಕಗಳಿಗೆ ತೆರಳಿದ ಮೇಲೆ ಧರ್ಮರಾಜನು ನಾಯಿರೂಪದ ತನ್ನೊಂದಿಗೆ ಮುಂದೆ ಸಾಗಿದನು. ಆಗ ಅವನ ಮುಂದೆ ದೇವರಥ ಇಳಿದು ಬಂದಿತು.

### ನಾಯಿಯ ರೂಪದಲ್ಲಿ ಯಮಧರ್ಮ

**ರಥಮಾರುಹೇತಿ ಕಥಿತೋ ರಥಿನಾ ಪುರತಃ ಶುನಃ ।**
**ಆರೋಹಮಬ್ರವೀನ್ನೈತದ್ಯುಕ್ತಮಿತ್ಯಾಹ ಸೋಽಪಿ ತಮ್ ॥ ೮೧ ॥**

**ರಥಂ ಆರುಹ ಇತಿ ಕಥಿತಃ ರಥಿನಾ ಪುರತಃ ಶುನಃ । ಆರೋಹಂ ಅಬ್ರವೀತ್ ನ ಏತತ್ ಯುಕ್ತಂ ಇತಿ ಆಹ ಸಃ ಅಪಿ ತಮ್ ॥ ೮೧ ॥**

**ಅರ್ಥ :–** **ರಥಿನಾ** = ಸಾರಥಿಯಿಂದ **ರಥಂ** = ರಥವನ್ನು **ಆರುಹ** = ಏರು **ಇತಿ** = ಎಂದು **ಕಥಿತಃ** = ಹೇಳಲ್ಪಟ್ಟ ಧರ್ಮರಾಜನು **ಪುರತಃ** = ಮೊದಲಿಗೆ **ಶುನಃ** = ನಾಯಿಯ **ಆರೋಹಂ** = ಏರುವಿಕೆಯನ್ನು **ಅಬ್ರವೀತ್** = ಹೇಳಿದನು. **ಸಃ ಅಪಿ** = ಆ ರಥಿಕನೂ ಸಹ **ಏತತ್** = ಇದು **ನ ಯುಕ್ತಂ** = ಯುಕ್ತವಲ್ಲ **ಇತಿ** = ಎಂದು **ತಂ** = ಅವನನ್ನು ಕುರಿತು **ಆಹ** = ಹೇಳಿದನು.

**ತಾತ್ಪರ್ಯ :-** 'ರಥವನ್ನೇರು' - ಎಂದು ಸಾರಥಿ ನುಡಿದಾಗ 'ಮೊದಲು ನಾಯಿ ಏರಬೇಕು' ಎಂದು ಧರ್ಮರಾಜ ಹೇಳಿದ, ಸಾರಥಿ - 'ಅದು ಯುಕ್ತವಲ್ಲ' ಎಂದು ನುಡಿದ.

**ನಾರುಹೇಯಂ ವಿನಾ ಶ್ವಾನಮಿತಿ ತೇನ ಸ್ಥಿರೋದಿತೇ ।**
**ಸ್ವರೂಪಂ ದರ್ಶಯಾಮಾಸ ಧರ್ಮೋ ಹ್ಯಾಪ್ತಃ ಸ್ವ(ಶ್ವ)ರೂಪತಾಮ್ ॥ ೮೨ ॥**

**ನ ಆರುಹೇಯಂ ವಿನಾ ಶ್ವಾನಂ ಇತಿ ತೇನ ಸ್ಥಿರೋದಿತೇ । ಸ್ವರೂಪಂ ದರ್ಶಯಾಮಾಸ ಧರ್ಮಃ ಹಿ ಆಪ್ತಃ ಸ್ವ(ಶ್ವ)ರೂಪತಾಮ್ ॥ ೮೨ ॥**

**ಅರ್ಥ :–** **ಶ್ವಾನಂ** = ನಾಯಿಯನ್ನು **ವಿನಾ** = ಬಿಟ್ಟು **ನ ಆರುಹೇಯಂ** = ಏರಲಾರೆ **ಇತಿ** = ಎಂದು **ತೇನ** = ಅವನಿಂದ **ಸ್ಥಿರೋದಿತೇ (ಸತಿ)** = ನಿಶ್ಚಯವಾಗಿ ಹೇಳಲ್ಪಡುತ್ತಿರಲು **ಧರ್ಮಃ** = ಯಮಧರ್ಮನು **ಸ್ವರೂಪತಾಂ** = ತನ್ನ ಸ್ವರೂಪವನ್ನು **(ಶ್ವರೂಪತಾಂ)** = ನಾಯಿಯ ರೂಪವನ್ನು **ಆಪ್ತಃ (ಸನ್)** = ಹೊಂದಿದವನಾಗಿ **ಸ್ವರೂಪಂ** = ತನ್ನ ರೂಪವನ್ನು **ದರ್ಶಯಾಮಾಸ** = ತೋರಿಸಿದನು.

**ತಾತ್ಪರ್ಯ :-** 'ನಾನು ಆ ನಾಯಿಯನ್ನು ಬಿಟ್ಟು ರಥವೇರಲಾರೆ' ಎಂದು ಧರ್ಮರಾಜ ಖಚಿತವಾಗಿ ತಿಳಿಸಲು ಯಮಧರ್ಮ ತನ್ನ ಸ್ವರೂಪ ವನ್ನು ತೋರಿಸಿದ. ನಾಯಿಯ ರೂಪದಲ್ಲಿದ್ದವನು ಅವನೇ ಅಲ್ಲವೇ.

**ಆನೃಶಂಸ್ಯಪರತ್ವೇನ ಕೀರ್ತಿಮೇವಾತ್ಮನೋ ವೃಷಃ ।**
**ಖ್ಯಾಪಯಾಮಾಸ ಕೌಂತೇಯರೂಪಿಣೋ ಧರ್ಮಸೂಕ್ತಿಭಿಃ ॥ ೮೩ ॥**

**ಆನೃಶಂಸ್ಯಪರತ್ವೇನ ಕೀರ್ತಿಂ ಏವ ಆತ್ಮನಃ ವೃಷಃ । ಖ್ಯಾಪಯಾಮಾಸ ಕೌಂತೇಯರೂಪಿಣಃ ಧರ್ಮಸೂಕ್ತಿಭಿಃ ॥ ೮೩ ॥**

**ಅರ್ಥ** :- **ವೃಷಃ** = ಯಮನು **ಆನೃಶಂಸ್ಯಪರತ್ವೇನ** = ಕೃಪಾಪರತ್ವ ದಿಂದ **ಕೌಂತೇಯರೂಪಿಣಃ** = ಕುಂತೀಪುತ್ರರೂಪದ (ಯುಧಿಷ್ಠಿರ ರೂಪದ) **ಆತ್ಮನಃ** = ತನ್ನ **ಕೀರ್ತಿಂ ಏವ** = ಕೀರ್ತಿಯನ್ನೇ **ಧರ್ಮಸೂಕ್ತಿಭಿಃ** = ಧರ್ಮಯುಕ್ತವಾದ ಉತ್ತಮವಮಾತುಗಳಿಂದ **ಖ್ಯಾಪಯಾಮಾಸ** = ಪ್ರಸಿದ್ಧಿಪಡಿಸಿದನು.

**ತಾತ್ಪರ್ಯ** :- ಹೀಗೆ ಕೃಪಾಳು ಎನ್ನಿಸುವ ಮೂಲಕ ಯಮಧರ್ಮ ತನ್ನ ಯುಧಿಷ್ಠಿರರೂಪದ ಕೀರ್ತಿಯನ್ನು ಧರ್ಮಸೂಕ್ತಿಗಳ ಮೂಲಕ ಪ್ರಚುರಪಡಿಸಿದ.

### ಗಗನ ಮಾರ್ಗದಲ್ಲಿ ಯುಧಿಷ್ಠಿರ

**ತತಃ ಸ ರಥಮಾರುಹ್ಯ ಲೋಕಾನಾಮುತ್ತರೋತ್ತರಮ್ ।**
**ಅತಿಕ್ರಮ್ಯಾಖಿಲಾನ್ ರಾಜ್ಞೋ ಜಗಾಮ ಶ್ರೀಪತಿಪ್ರಿಯಃ ॥ ೮೪ ॥**

**ತತಃ ಸಃ ರಥಂ ಆರುಹ್ಯ ಲೋಕಾನಾಂ ಉತ್ತರೋತ್ತರಮ್ । ಅತಿಕ್ರಮ್ಯ ಅಖಿಲಾನ್ ರಾಜ್ಞಃ ಜಗಾಮ ಶ್ರೀಪತಿಪ್ರಿಯಃ ॥ ೮೪ ॥**

**ಅರ್ಥ** :- **ತತಃ** = ಬಳಿಕ **ಶ್ರೀಪತಿಪ್ರಿಯಃ** = ಲಕ್ಷ್ಮೀಪತಿಯಾದ ಹರಿಗೆ ಪ್ರಿಯನಾದ **ಸಃ** = ಅವನು **ರಥಂ** = ರಥವನ್ನು **ಆರುಹ್ಯ** = ಏರಿ **ಉತ್ತರೋತ್ತರಂ** = ಮೇಲೆ ಮೇಲೆ ಇರುವ **ಲೋಕಾನಾಂ** = ಲೋಕಗಳ **ಅಖಿಲಾನ್** = ಎಲ್ಲ **ರಾಜ್ಞಃ** = ರಾಜರನ್ನು **ಅತಿಕ್ರಮ್ಯ** = ಮೀರಿ **ಜಗಾಮ** = ಸಾಗಿದನು.

**ತಾತ್ಪರ್ಯ** :- ಬಳಿಕ ಶ್ರೀಹರಿಪ್ರಿಯನಾದ ಧರ್ಮರಾಜ ಆ ರಥವನ್ನೇರಿ ಮೇಲೆ ಮೇಲಿನ ಲೋಕಗಳ ಸಕಲರಾಜರನ್ನು ಮೀರಿ ಮುಂದೆ ನಡೆದ.

### ಇಂದ್ರಲೋಕದಲ್ಲಿ ದುರ್ಯೋಧನ

**ಸರ್ವೇಷಾಮುತ್ತರಂ ಲೋಕಮೈಂದ್ರಂ ಪ್ರಾಪ್ಯೇದಮೇವ ತೇ ।**
**ಸ್ಥಾನಮಿತ್ಯುದಿತೋ ದೇವೈರ್ದುರ್ಯೋಧನಮವೈಕ್ಷತ ॥ ೮೫ ॥**

**ಸರ್ವೇಷಾಂ ಉತ್ತರಂ ಲೋಕಂ ಐಂದ್ರಂ ಪ್ರಾಪ್ಯ ಇದಂ ಏವ ತೇ । ಸ್ಥಾನಂ ಇತಿ ಉದಿತಃ ದೇವೈಃ ದುರ್ಯೋಧನಂ ಅವೈಕ್ಷತ ॥ ೮೫ ॥**

**ಅರ್ಥ** :- **ಸರ್ವೇಷಾಂ** = ಎಲ್ಲಕ್ಕಿಂತ **ಉತ್ತರಂ** = ಶ್ರೇಷ್ಠವಾದ **ಐಂದ್ರಂ** = ಇಂದ್ರಸಂಬಂಧಿಯಾದ **ಲೋಕಂ** = ಲೋಕವನ್ನು **ಪ್ರಾಪ್ಯ** = ಸೇರಿ, **ದೇವೈಃ** = ದೇವತೆಗಳಿಂದ **ತೇ** = ನಿನ್ನ **ಸ್ಥಾನಂ** = ಸ್ಥಾನವು **ಇದಂ ಏವ** = ಇದೇ **ಇತಿ** = ಎಂದು **ಉದಿತಃ** = ಹೇಳಲ್ಪಟ್ಟ ಧರ್ಮರಾಜನು **ದುರ್ಯೋಧನಂ** = ದುರ್ಯೋಧನನನ್ನು **ಅವೈಕ್ಷತ** = ಕಂಡನು.

**ತಾತ್ಪರ್ಯ** :- ಎಲ್ಲಕ್ಕಿಂತ ಮೇಲಿನ ಲೋಕವಾದ ಇಂದ್ರಲೋಕವನ್ನು ಸೇರಿ, ದೇವತೆಗಳಿಂದ ''ಇದೇ ನಿನ್ನ ಸ್ಥಾನ'' ಎಂದು ತಿಳಿಸಲ್ಪಟ್ಟ ಧರ್ಮರಾಜ ಅಲ್ಲಿ ದುರ್ಯೋಧನನನ್ನು ಕಂಡ.

### ದುರ್ಯೋಧನನ ಬಗ್ಗೆ ಕಿಡಿ ಕಾರಿದ ಧರ್ಮರಾಜ

**ಸಭ್ರಾತೃಕಂ ಜ್ವಲಂತಂ ಚ ಸರ್ವೇಷಾಮುಪರಿ ಸ್ಥಿತಮ್ ।
ತಂ ದೃಷ್ಟ್ವಾ ಪರಮಕ್ರುದ್ಧೋ ನಿಮೀಲ್ಯ ನಯನೇ ಶುಭೇ ॥ ೮೬ ॥**

**ಸಭ್ರಾತೃಕಂ ಜ್ವಲಂತಂ ಚ ಸರ್ವೇಷಾಂ ಉಪರಿ ಸ್ಥಿತಮ್ । ತಂ ದೃಷ್ಟ್ವಾ ಪರಮಕ್ರುದ್ಧಃ ನಿಮೀಲ್ಯ ನಯನೇ ಶುಭೇ ॥ ೮೬ ॥**

**ಅರ್ಥ** :- **ಸಭ್ರಾತೃಕಂ** = ಸೋದರರ ಸಹಿತನಾಗಿ **ಜ್ವಲಂತಂ** = ಪ್ರಕಾಶಿಸುತ್ತಿದ್ದ **ಚ** = ಮತ್ತು **ಸರ್ವೇಷಾಂ** = ಎಲ್ಲರಿಗಿಂತ **ಉಪರಿ** = ಮೇಲೆ **ಸ್ಥಿತಂ** = ನೆಲೆಸಿದ್ದ **ತಂ** = ಅವನನ್ನು **ದೃಷ್ಟ್ವಾ** = ಕಂಡು **ಪರಮಕ್ರುದ್ಧಃ** = ಬಹಳ ಕ್ರುದ್ಧನಾದ ಧರ್ಮರಾಜನು **ಶುಭೇ** = ಮಂಗಳ ಕರವಾದ **ನಯನೇ** = ಎರಡು ಕಣ್ಣುಗಳನ್ನು **ನಿಮೀಲ್ಯ** = ಮುಚ್ಚಿಕೊಂಡು

**ತಾತ್ಪರ್ಯ** :- ಸೋದರರೊಂದಿಗೆ ಎಲ್ಲರಿಗಿಂತ ಮೇಲಿದ್ದು, ಮೆರೆಯುತ್ತಿದ್ದ ದುರ್ಯೋಧನನನ್ನು ಕಂಡು, ಬಹಳ ಕ್ರುದ್ಧನಾಗಿ ತನ್ನ ಮಂಗಳಕರವಾದ ಎರಡು ಕಣ್ಣುಗಳನ್ನೂ ಮುಚ್ಚಿಕೊಂಡ.

ಪಾಂಡವರು ಮೊದಲಾದವರು ಎಲ್ಲಿ

ಭ್ರಾತರೋ ಮೇ ಕ್ವ ಕೃಷ್ಣಾ ಚ ಸಕರ್ಣಾಃ ಕ್ವ ಚ ಬಾಂಧವಾಃ ।
ಧೃಷ್ಟದ್ಯುಮ್ನಾದಯಃ ಪುತ್ರಾ ಹೈಡಿಂಬಾದ್ಯಾಶ್ಚ ಸರ್ವಶಃ ॥ ೮೭ ॥

ಯಾದವಾಶ್ಚೇತಿ ಪಪ್ರಚ್ಛ ದೇವಾಂಸ್ತೇ ಚ ತಮಬ್ರುವನ್ ।
ಕಿಂ ತೇ ತೈಃ ಸ್ವಕೃತಂ ಕರ್ಮ ಭುಜ್ಯತೇಽತ್ರ ನ ಚಾಪರೈಃ ॥ ೮೮ ॥

ಭ್ರಾತರಃ ಮೇ ಕ್ವ ಕೃಷ್ಣಾ ಚ ಸಕರ್ಣಾಃ ಕ್ವ ಚ ಬಾಂಧವಾಃ । ಧೃಷ್ಟದ್ಯುಮ್ನಾದಯಃ ಪುತ್ರಾಃ ಹೈಡಿಂಬಾದ್ಯಾಃ ಚ ಸರ್ವಶಃ ॥ ೮೭ ॥

ಯಾದವಾಃ ಚ ಇತಿ ಪಪ್ರಚ್ಛ ದೇವಾನ್ ತೇ ಚ ತಂ ಅಬ್ರುವನ್ । ಕಿಂ ತೇ ತೈಃ ಸ್ವಕೃತಂ ಕರ್ಮ ಭುಜ್ಯತೇ ಅತ್ರ, ನ ಚ ಅಪರೈಃ ॥ ೮೮ ॥

**ಅರ್ಥ** :- **ಸಕರ್ಣಾಃ** = ಕರ್ಣನ ಸಹಿತರಾದ **ಮೇ** = ನನ್ನ **ಭ್ರಾತರಃ** = ಸೋದರರು **ಕ್ವ** = ಎಲ್ಲಿ? **ಚ** = ಮತ್ತು **ಕೃಷ್ಣಾ** = ದ್ರೌಪದಿಯು **ಕ್ವ** = ಎಲ್ಲಿ? **ಚ** = ಮತ್ತು **ಧೃಷ್ಟದ್ಯುಮ್ನಾದಯಃ** = ಧೃಷ್ಟದ್ಯುಮ್ನ ಮೊದಲಾದ **ಬಾಂಧವಾಃ** = ಬಾಂಧವರು **ಕ್ವ** = ಎಲ್ಲಿ? **ಚ** = ಮತ್ತು **ಹೈಡಿಂಬಾದ್ಯಾಃ** = ಘಟೋತ್ಕಚ ಮೊದಲಾದ **ಪುತ್ರಾಃ** = ಪುತ್ರರು **ಕ್ವ** = ಎಲ್ಲಿ? **ಚ** = ಮತ್ತು **ಸರ್ವಶಃ** = ಎಲ್ಲ **ಯಾದವಾಃ** = ಯಾದವರು **ಕ್ವ** = ಎಲ್ಲಿ? **ಇತಿ** = ಎಂದು **ದೇವಾನ್** = ದೇವತೆಗಳನ್ನು **ಪಪ್ರಚ್ಛ** = ಕೇಳಿದನು. **ತೇ ಚ** = ಅವರೂ ಸಹ **ತೇ** = ನಿನಗೆ **ತೈಃ** = ಅವರಿಂದ **ಕಿಂ** = ಏನು? **ಅತ್ರ** = ಈ ಸ್ವರ್ಗದಲ್ಲಿ **ಸ್ವಕೃತಂ** = ತಾವು ಮಾಡಿದ **ಕರ್ಮ** = ಕರ್ಮವು **ಭುಜ್ಯತೇ** = ಅನುಭವಿಸಲ್ಪಡುವುದು. **ನ ಚ ಅಪರೈಃ** = ಬೇರೆಯವರಿಂದ ಅಲ್ಲ.

**ತಾತ್ಪರ್ಯ** :- ''ನನ್ನ ಸೋದರರೆಲ್ಲಿ ? ದ್ರೌಪದಿಯೆಲ್ಲಿ ? ಕರ್ಣನೆಲ್ಲಿ ? ಇತರ ಬಾಂಧವರೆಲ್ಲಿ ? ಧೃಷ್ಟದ್ಯುಮ್ನಾದಿಗಳೆಲ್ಲಿ ? ಘಟೋತ್ಕಚ ಮೊದಲಾದ ಪುತ್ರರುಗಳು ಎಲ್ಲಿ ? ಯಾದವರೆಲ್ಲಿ ?'' ಎಂದು ಧರ್ಮರಾಜ ಕೇಳಿದ. ದೇವತೆಗಳು ಅವನಿಗೆ ಹೇಳಿದರು : ''ಅವರಿಂದ ನಿನಗೇನು ? ಇಲ್ಲಿ ತಾವು ಮಾಡಿದ ಕರ್ಮವನ್ನೇ ಅವರು ಅನುಭವಿಸುವರು; ಇತರರಲ್ಲ''.

### ಮಹಾಪಾಪಿ ದುರ್ಯೋಧನ

**ಇತ್ಯುಕ್ತ ಆಹ ಪಾಪೋಽಯಂ ಪೃಥಿವೀಕ್ಷಯಕಾರಕಃ ।**
**ಸರ್ವಾತಿಶಂಕೀ ಮಿತ್ರಧ್ರುಜ್‌ನಾರಾಯಣಪರಾಙ್ಮುಖಃ ॥ ೮೯ ॥**

**ಇತಿ ಉಕ್ತಃ ಆಹ ಪಾಪಃ ಅಯಂ ಪೃಥಿವೀಕ್ಷಯಕಾರಕಃ । ಸರ್ವಾತಿಶಂಕೀ ಮಿತ್ರಧ್ರುಕ್ ನಾರಾಯಣಪರಾಙ್ಮುಖಃ ॥ ೮೯ ॥**

**ನಾಸ್ತಿಕೋಽತಿಶಠಃ ಕ್ರೂರೋ ದ್ವೇಷ್ಟಾ ವಿಷ್ಣೋಶ್ಚ ತದ್ಭುವಾಮ್ ।**
**ಕಥಂ ದುರ್ಯೋಧನಃ ಸ್ಥಾನಂ ಸರ್ವೋತ್ತಮಮವಾಪ್ತವಾನ್ ॥ ೯೦ ॥**

**ನಾಸ್ತಿಕಃ ಅತಿಶಠಃ ಕ್ರೂರಃ ದ್ವೇಷ್ಟಾ ವಿಷ್ಣೋಃ ಚ ತದ್ಭುವಾಮ್ । ಕಥಂ ದುರ್ಯೋಧನಃ ಸ್ಥಾನಂ ಸರ್ವೋತ್ತಮಂ ಅವಾಪ್ತವಾನ್ ॥ ೯೦ ॥**

**ಅರ್ಥ** :- **ಇತಿ** = ಹೀಗೆ **ಉಕ್ತಃ** = ಹೇಳಲ್ಪಟ್ಟ ಧರ್ಮರಾಜನು **ಆಹ** = ಹೇಳಿದನು. **ಅಯಂ** = ಈ ದುರ್ಯೋಧನನು **ಪಾಪಃ** = ಪಾಪಿಯು **ಪೃಥಿವೀಕ್ಷಯಕಾರಕಃ** = ಭೂಮಿಯನ್ನೇ ನಾಶ ಮಾಡಿದವನು **ಸರ್ವಾತಿಶಂಕೀ** = ಎಲ್ಲವನ್ನೂ ಸಂದೇಹಿಸುವವನು **ಮಿತ್ರಧ್ರುಕ್** = ಮಿತ್ರದ್ರೋಹಿಯು **ನಾರಾಯಣಪರಾಙ್ಮುಖಃ** = ನಾರಾಯಣನಿಗೆ ವಿಮುಖನಾದವನು **ನಾಸ್ತಿಕಃ** = ನಾಸ್ತಿಕನು **ಅತಿಶಠಃ** = ಅತ್ಯಂತ ವಂಚಕನು **ಕ್ರೂರಃ** = ಕ್ರೂರನು **ವಿಷ್ಣೋಃ** = ವಿಷ್ಣುವಿನ **ಚ** = ಮತ್ತು **ತದ್ಭುವಾಂ** = ಅವನ ಭಕ್ತರ **ದ್ವೇಷ್ಟಾ** = ದ್ವೇಷಿಯು. **ಅಯಂ** = ಈ **ದುರ್ಯೋಧನಃ** = ದುರ್ಯೋಧನನು **ಕಥಂ** = ಹೇಗೆ **ಸರ್ವೋತ್ತಮಂ** = ಸರ್ವೋತ್ತಮವಾದ **ಸ್ಥಾನಂ** = ಸ್ಥಾನವನ್ನು **ಅವಾಪ್ತವಾನ್** = ಹೊಂದಿದನು?

**ತಾತ್ಪರ್ಯ** :- ದೇವತೆಗಳು ಹೀಗೆನ್ನಲು ಧರ್ಮರಾಜ ಕೇಳಿದ ''ದುರ್ಯೋಧನ ಈ ಭೂಮಿಯನ್ನೇ ನಾಶಮಾಡಿದ ಪಾಪಿ, ಎಲ್ಲವನ್ನೂ ಸಂದೇಹಿಸುವವನು, ಮಿತ್ರದ್ರೋಹಿ, ನಾರಾಯಣನಿಗೆ ವಿಮುಖನಾದವನು, ನಾಸ್ತಿಕ, ಮಹಾ ವಂಚಕ, ಕ್ರೂರಿ, ವಿಷ್ಣುವನ್ನು ಅವನ ಭಕ್ತರನ್ನು ದ್ವೇಷಿಸುವವನು, ಇಂಥವನು ಇಂತಹ ಸರ್ವೋನ್ನತವಾದ ಸ್ಥಾನವನ್ನು ಹೇಗೆ ಹೊಂದಿದ?

**ಕಥಂ ಚ ಸರ್ವಧರ್ಮಜ್ಞಾ ನಾರಾಯಣಪರಾಯಣಾಃ ।**
**ಸಂಸ್ಥಿತಾಃ ಪರಮೇ ಧರ್ಮೇ ದೃಶ್ಯಂತೇಽತ್ರ ನ ಮತ್ಪ್ರಿಯಾಃ ॥ ೯೧ ॥**

ಕಥಂ ಚ ಸರ್ವಧರ್ಮಜ್ಞಾಃ ನಾರಾಯಣಪರಾಯಣಾಃ । ಸಂಸ್ಥಿತಾಃ ಪರಮೇ ಧರ್ಮೇ ದೃಶ್ಯಂತೇ ಅತ್ರ ನ ಮತ್ಪ್ರಿಯಾಃ ॥ ೯೧ ॥

**ಅರ್ಥ** :- **ಸರ್ವಧರ್ಮಜ್ಞಾಃ** = ಎಲ್ಲ ಧರ್ಮವನ್ನು ಬಲ್ಲವರು **ನಾರಾಯಣಪರಾಯಣಾಃ** = ನಾರಾಯಣನ ಭಕ್ತರು **ಪರಮೇ** = ಶ್ರೇಷ್ಠವಾದ **ಧರ್ಮೇ** = ಧರ್ಮದಲ್ಲಿ **ಸಂಸ್ಥಿತಾಃ** = ದೃಢವಾಗಿ ನೆಲೆಸಿದವರು **ಮತ್ಪ್ರಿಯಾಃ** = ನನಗೆ ಪ್ರಿಯರಾದವರು **ಅತ್ರ** = ಇಲ್ಲಿ **ಕಥಂ ಚ** = ಹೇಗೆ ತಾನೆ **ನ ದೃಶ್ಯಂತೇ** = ಕಾಣಿಸುತ್ತಿಲ್ಲ?

**ತಾತ್ಪರ್ಯ** :- ಸಕಲ ಧರ್ಮಗಳನ್ನು ತಿಳಿದವರು, ನಾರಾಯಣನನ್ನೇ ಆಶ್ರಯಿಸಿದವರು, ಪರಮ ಧರ್ಮದಲ್ಲಿ ನಿಷ್ಠರಾದವರು ಆದ ನನ್ನ ಪ್ರೀತಿಪಾತ್ರರಾರೂ ಇಲ್ಲೇಕೆ ಕಾಣುತ್ತಿಲ್ಲ?

**ಯತ್ರ ಸಂತಸ್ತು ತೇ ಸಂತಿ ತತ್ರ ಸ್ಥಾತವ್ಯಮೇವ ಮೇ ।**
**ನಿರಯೇಽಪಿ ನ ಚಾತ್ರಾಪಿ ಹ್ಯನೇನ ಸಹ ಪಾಪಿನಾ ॥ ೯೨ ॥**

ಯತ್ರ ಸಂತಃ ತು ತೇ ಸಂತಿ ತತ್ರ ಸ್ಥಾತವ್ಯಂ ಏವ ಮೇ । ನಿರಯೇ ಅಪಿ ನ ಚ ಅತ್ರ ಅಪಿ ಹಿ ಅನೇನ ಸಹ ಪಾಪಿನಾ ॥ ೯೨ ॥

**ಅರ್ಥ** :- **ತೇ** = ಆ **ಸಂತಃ** = ಸಜ್ಜನರು **ಯತ್ರ ತು** = ಎಲ್ಲಿ ತಾನೆ **ಸಂತಿ** = ಇರುವರೋ **ಮೇ** = ನನ್ನಿಂದ **ತತ್ರ ಏವ** = ಅಲ್ಲಿಯೇ **ಸ್ಥಾತವ್ಯಂ** = ನೆಲೆಸಬೇಕಿದೆ. **ನಿರಯೇ ಅಪಿ** = ನರಕದಲ್ಲೇ ಆದರೂ **(ಸ್ಥಾತವ್ಯಂ)** = ನೆಲೆಸಬೇಕಿದೆ. **ಚ** = ಮತ್ತು **ಅತ್ರ ಅಪಿ** = ಇಲ್ಲಿಯೇ ಸ್ವರ್ಗದಲ್ಲೇ ಆದರೂ **ಅನೇನ** = ಈ **ಪಾಪಿನಾ** = ಪಾಪಿಯಿಂದ **ಸಹ** = ಕೂಡಿಕೊಂಡು **ನ ಹಿ (ಸ್ಥಾತವ್ಯಂ)** = ಇರುವುದು ಸರ್ವಥಾ ಬೇಕಿಲ್ಲ.

**ತಾತ್ಪರ್ಯ** :- ಸಜ್ಜನರಾದ ಅವರು ಎಲ್ಲಿರುವರೋ ಅಲ್ಲಿಯೇ ನಾನೂ ಇರಬೇಕು; ನರಕದಲ್ಲಾದರೂ ಸರಿಯೇ. ಈ ಪಾಪಿಯೊಂದಿಗೆ ಇಲ್ಲಿ ನಾನು ಸರ್ವಥಾ ಇರಲಾರೆ'.

ಮಹಾಪಾಪಿ ದುರ್ಯೋಧನ

**ಇತ್ಯುಕ್ತ ಆಹ ಪಾಪೋಽಯಂ ಪೃಥಿವೀಕ್ಷಯಕಾರಕಃ ।**
**ಸರ್ವಾತಿಶಂಕೀ ಮಿತ್ರಧ್ರುಙ್ನಾರಾಯಣಪರಾಙ್ಮುಖಃ ॥ ೮೯ ॥**

**ಇತಿ ಉಕ್ತಃ ಆಹ ಪಾಪಃ ಅಯಂ ಪೃಥಿವೀಕ್ಷಯಕಾರಕಃ । ಸರ್ವಾತಿಶಂಕೀ ಮಿತ್ರಧ್ರುಕ್ ನಾರಾಯಣಪರಾಙ್ಮುಖಃ ॥ ೮೯ ॥**

**ನಾಸ್ತಿಕೋಽತಿಶಠಃ ಕ್ರೂರೋ ದ್ವೇಷ್ಟಾ ವಿಷ್ಣೋಶ್ಚ ತದ್ಭುವಾಮ್ ।**
**ಕಥಂ ದುರ್ಯೋಧನಃ ಸ್ಥಾನಂ ಸರ್ವೋತ್ತಮಮವಾಪ್ತವಾನ್ ॥ ೯೦ ॥**

**ನಾಸ್ತಿಕಃ ಅತಿಶಠಃ ಕ್ರೂರಃ ದ್ವೇಷ್ಟಾ ವಿಷ್ಣೋಃ ಚ ತದ್ಭುವಾಮ್ । ಕಥಂ ದುರ್ಯೋಧನಃ ಸ್ಥಾನಂ ಸರ್ವೋತ್ತಮಂ ಅವಾಪ್ತವಾನ್ ॥ ೯೦ ॥**

**ಅರ್ಥ** :- **ಇತಿ** = ಹೀಗೆ **ಉಕ್ತಃ** = ಹೇಳಲ್ಪಟ್ಟ ಧರ್ಮರಾಜನು **ಆಹ** = ಹೇಳಿದನು. **ಅಯಂ** = ಈ ದುರ್ಯೋಧನನು **ಪಾಪಃ** = ಪಾಪಿಯು **ಪೃಥಿವೀಕ್ಷಯಕಾರಕಃ** = ಭೂಮಿಯನ್ನೇ ನಾಶ ಮಾಡಿದವನು **ಸರ್ವಾತಿಶಂಕೀ** = ಎಲ್ಲವನ್ನೂ ಸಂದೇಹಿಸುವವನು **ಮಿತ್ರಧ್ರುಕ್** = ಮಿತ್ರದ್ರೋಹಿಯು **ನಾರಾಯಣಪರಾಙ್ಮುಖಃ** = ನಾರಾಯಣನಿಗೆ ವಿಮುಖನಾದವನು **ನಾಸ್ತಿಕಃ** = ನಾಸ್ತಿಕನು **ಅತಿಶಠಃ** = ಅತ್ಯಂತ ವಂಚಕನು **ಕ್ರೂರಃ** = ಕ್ರೂರನು **ವಿಷ್ಣೋಃ** = ವಿಷ್ಣುವಿನ **ಚ** = ಮತ್ತು **ತದ್ಭುವಾಂ** = ಅವನ ಭಕ್ತರ **ದ್ವೇಷ್ಟಾ** = ದ್ವೇಷಿಯು. **ಅಯಂ** = ಈ **ದುರ್ಯೋಧನಃ** = ದುರ್ಯೋಧನನು **ಕಥಂ** = ಹೇಗೆ **ಸರ್ವೋತ್ತಮಂ** = ಸರ್ವೋತ್ತಮವಾದ **ಸ್ಥಾನಂ** = ಸ್ಥಾನವನ್ನು **ಅವಾಪ್ತವಾನ್** = ಹೊಂದಿದನು?

**ತಾತ್ಪರ್ಯ** :- ದೇವತೆಗಳು ಹೀಗೆನ್ನಲು ಧರ್ಮರಾಜ ಕೇಳಿದ ''ದುರ್ಯೋಧನ ಈ ಭೂಮಿಯನ್ನೇ ನಾಶಮಾಡಿದ ಪಾಪಿ, ಎಲ್ಲವನ್ನೂ ಸಂದೇಹಿಸುವವನು, ಮಿತ್ರದ್ರೋಹಿ, ನಾರಾಯಣನಿಗೆ ವಿಮುಖನಾದವನು, ನಾಸ್ತಿಕ, ಮಹಾ ವಂಚಕ, ಕ್ರೂರಿ, ವಿಷ್ಣುವನ್ನು ಅವನ ಭಕ್ತರನ್ನು ದ್ವೇಷಿಸುವವನು, ಇಂಥವನು ಇಂತಹ ಸರ್ವೋನ್ನತವಾದ ಸ್ಥಾನವನ್ನು ಹೇಗೆ ಹೊಂದಿದ?

**ಕಥಂ ಚ ಸರ್ವಧರ್ಮಜ್ಞಾ ನಾರಾಯಣಪರಾಯಣಾಃ ।**
**ಸಂಸ್ಥಿತಾಃ ಪರಮೇ ಧರ್ಮೇ ದೃಶ್ಯಂತೇಽತ್ರ ನ ಮತ್ಪ್ರಿಯಾಃ ॥ ೯೧ ॥**

**ಕಥಂ ಚ ಸರ್ವಧರ್ಮಜ್ಞಾಃ ನಾರಾಯಣಪರಾಯಣಾಃ । ಸಂಸ್ಥಿತಾಃ ಪರಮೇ ಧರ್ಮೇ ದೃಶ್ಯಂತೇ ಅತ್ರ ನ ಮತ್ಪ್ರಿಯಾಃ ॥ ೯೧ ॥**

**ಅರ್ಥ** :- **ಸರ್ವಧರ್ಮಜ್ಞಾಃ** = ಎಲ್ಲ ಧರ್ಮವನ್ನು ಬಲ್ಲವರು **ನಾರಾಯಣಪರಾಯಣಾಃ** = ನಾರಾಯಣನ ಭಕ್ತರು **ಪರಮೇ** = ಶ್ರೇಷ್ಠವಾದ **ಧರ್ಮೇ** = ಧರ್ಮದಲ್ಲಿ **ಸಂಸ್ಥಿತಾಃ** = ದೃಢವಾಗಿ ನೆಲೆಸಿದವರು **ಮತ್ಪ್ರಿಯಾಃ** = ನನಗೆ ಪ್ರಿಯರಾದವರು **ಅತ್ರ** = ಇಲ್ಲಿ **ಕಥಂ ಚ** = ಹೇಗೆ ತಾನೆ **ನ ದೃಶ್ಯಂತೇ** = ಕಾಣಿಸುತ್ತಿಲ್ಲ?

**ತಾತ್ಪರ್ಯ** :- ಸಕಲ ಧರ್ಮಗಳನ್ನು ತಿಳಿದವರು, ನಾರಾಯಣನನ್ನೇ ಆಶ್ರಯಿಸಿದವರು, ಪರಮ ಧರ್ಮದಲ್ಲಿ ನಿಷ್ಠರಾದವರು ಆದ ನನ್ನ ಪ್ರೀತಿಪಾತ್ರರಾರೂ ಇಲ್ಲೇಕೆ ಕಾಣುತ್ತಿಲ್ಲ?

**ಯತ್ರ ಸಂತಸ್ತು ತೇ ಸಂತಿ ತತ್ರ ಸ್ಥಾತವ್ಯಮೇವ ಮೇ ।**
**ನಿರಯೇಽಪಿ ನ ಚಾತ್ರಾಪಿ ಹ್ಯನೇನ ಸಹ ಪಾಪಿನಾ ॥ ೯೨ ॥**

**ಯತ್ರ ಸಂತಃ ತು ತೇ ಸಂತಿ ತತ್ರ ಸ್ಥಾತವ್ಯಂ ಏವ ಮೇ । ನಿರಯೇ ಅಪಿ ನ ಚ ಅತ್ರ ಅಪಿ ಹಿ ಅನೇನ ಸಹ ಪಾಪಿನಾ ॥ ೯೨ ॥**

**ಅರ್ಥ** :- **ತೇ** = ಆ **ಸಂತಃ** = ಸಜ್ಜನರು **ಯತ್ರ ತು** = ಎಲ್ಲಿ ತಾನೆ **ಸಂತಿ** = ಇರುವರೋ **ಮೇ** = ನನ್ನಿಂದ **ತತ್ರ ಏವ** = ಅಲ್ಲಿಯೇ **ಸ್ಥಾತವ್ಯಂ** = ನೆಲೆಸಬೇಕಿದೆ. **ನಿರಯೇ ಅಪಿ** = ನರಕದಲ್ಲೇ ಆದರೂ (**ಸ್ಥಾತವ್ಯಂ**) = ನೆಲೆಸಬೇಕಿದೆ. **ಚ** = ಮತ್ತು **ಅತ್ರ ಅಪಿ** = ಇಲ್ಲಿಯೇ ಸ್ವರ್ಗದಲ್ಲೇ ಆದರೂ **ಅನೇನ** = ಈ **ಪಾಪಿನಾ** = ಪಾಪಿಯಿಂದ **ಸಹ** = ಕೂಡಿಕೊಂಡು **ನ ಹಿ** (**ಸ್ಥಾತವ್ಯಂ**) = ಇರುವುದು ಸರ್ವಥಾ ಬೇಕಿಲ್ಲ.

**ತಾತ್ಪರ್ಯ** :- ಸಜ್ಜನರಾದ ಅವರು ಎಲ್ಲಿರುವರೋ ಅಲ್ಲಿಯೇ ನಾನೂ ಇರಬೇಕು; ನರಕದಲ್ಲಾದರೂ ಸರಿಯೇ. ಈ ಪಾಪಿಯೊಂದಿಗೆ ಇಲ್ಲಿ ನಾನು ಸರ್ವಥಾ ಇರಲಾರೆ'.

ಬಂಧುಗಳೆಡೆಗೆ ಧರ್ಮರಾಜ

**ಅಸ್ಯ ವೀರತಮಸ್ಯೇದಂ ಧಾರ್ತರಾಷ್ಟ್ರಸ್ಯ ಯುಜ್ಯತೇ ।**
**ಇತ್ಯುಕ್ತ್ವಾ ದೇವತಾ ದೂತಂ ಸ್ವಾನಾಂ ಸಂದರ್ಶನಾರ್ಥಿನಃ ॥ ೯೩ ॥**

**ರಾಜ್ಞಃ ಸಂಪ್ರೇಷಯಾಮಾಸುಸ್ತತ್ಸಂದರ್ಶಿತವರ್ತ್ಮನಾ ।**
**ದುರ್ಗಂಧೇನ ಸುಕೃಚ್ಛ್ರೇಣ ತಮಸಾ ಪ್ರಾವೃತೇನ ಚ ॥ ೯೪ ॥**

**ಅಸ್ಯ ವೀರತಮಸ್ಯ ಇದಂ ಧಾರ್ತರಾಷ್ಟ್ರಸ್ಯ ಯುಜ್ಯತೇ । ಇತಿ ಉಕ್ತ್ವಾ ದೇವತಾಃ ದೂತಂ ಸ್ವಾನಾಂ ಸಂದರ್ಶನಾರ್ಥಿನಃ ॥ ೯೩ ॥**

**ರಾಜ್ಞಃ ಸಂಪ್ರೇಷಯಾಮಾಸುಃ ತತ್ಸಂದರ್ಶಿತವರ್ತ್ಮನಾ । ದುರ್ಗಂಧೇನ ಸುಕೃಚ್ಛ್ರೇಣ ತಮಸಾ ಪ್ರಾವೃತೇನ ಚ ॥ ೯೪ ॥**

**ತಾತ್ಪರ್ಯ :-** 'ಮಹಾವೀರನಾದ ದುರ್ಯೋಧನನಿಗೆ ಇದು ದೊರಕಿದೆ' ಎಂದು ನುಡಿದು ದೇವತೆಗಳು ತಮ್ಮ ದೂತನನ್ನು ತನ್ನ ಬಂಧುಗಳನ್ನು ಕಾಣಬಯಸಿದ ಧರ್ಮರಾಜನೊಂದಿಗೆ ಕಳುಹಿಸಿಕೊಟ್ಟರು. ಧರ್ಮರಾಜ ಅವನು ತೋರಿದ ಹಾದಿಯಲ್ಲಿ ನಡೆದ. ಅದರಲ್ಲಿ ಸಹಿಸಲಾಗದ ದುರ್ಗಂಧ ತುಂಬಿತ್ತು ; ಕತ್ತಲೆ ಆವರಿಸಿತ್ತು.

ಧರ್ಮರಾಜನಿಗೆ ನರಕದರ್ಶನ

**ಗತ್ವೈವ ಕಿಯತೀಂ ಭೂಮಿಂ ತದ್ದುರ್ಗಂಧಾಸಹೋ ನೃಪಃ ।**
**ಇಚ್ಛನ್ನಿವರ್ತನಂ ತತ್ರ ಸ್ವಾನಾಂ ವಾಚ ಇವಾಶೃಣೋತ್ ॥ ೯೫ ॥**

**ಗತ್ವಾ ಏವ ಕಿಯತೀಂ ಭೂಮಿಂ ತದ್ದುರ್ಗಂಧಾಸಹಃ ನೃಪಃ । ಇಚ್ಛನ್ ನಿವರ್ತನಂ ತತ್ರ ಸ್ವಾನಾಂ ವಾಚಃ ಇವ ಅಶೃಣೋತ್ ॥ ೯೫ ॥**

**ಅರ್ಥ :- ಧಾರ್ತರಾಷ್ಟ್ರಸ್ಯ** = ಧೃತರಾಷ್ಟ್ರನ ಪುತ್ರನಾದ **ಅಸ್ಯ** = ಈ **ವೀರತಮಸ್ಯ** = ವೀರತಮನಿಗೆ **ಇದಂ** = ಇದು (ಈ ಸ್ಥಾನವು) **ಯುಜ್ಯತೇ** = ಯುಕ್ತವಾಗಿದೆ. **ಇತಿ** = ಎಂದು **ದೇವತಾಃ** = ದೇವತೆಗಳು **ಉಕ್ತ್ವಾ** = ಹೇಳಿ **ಸ್ವಾನಾಂ** = ತನ್ನವರನ್ನು **ಸಂದರ್ಶನಾರ್ಥಿನಃ** = ಕಾಣಬಯಸಿದ **ರಾಜ್ಞಃ** = ರಾಜನದ ಧರ್ಮರಾಜನಿಗಾಗಿ **ದೂತಂ** = ದೂತನನ್ನು **ಸಂಪ್ರೇಷಯಾಮಾಸುಃ** = ಕಳುಹಿಸಿಕೊಟ್ಟರು. **ನೃಪಃ** =

ರಾಜನಾದ ಯುಧಿಷ್ಠಿರನು **ದುರ್ಗಂಧೇನ** = ಕೆಟ್ಟವಾಸನೆಯ **ಸುಕೃಚ್ಛ್ರೇಣ** = ಅತ್ಯಂತ ಕಷ್ಟಕರವಾದ **ಚ** = ಮತ್ತು **ತಮಸಾ** = ಕತ್ತಲೆಯಿಂದ **ಪ್ರಾವೃತೇನ** = ವ್ಯಾಪ್ತವಾದ **ತತ್ಸಂದರ್ಶಿತವರ್ತ್ಮನಾ** = ಆ ದೂತನು ತೋರಿಸಿದ ಹಾದಿಯಿಂದ **ಕಿಯತೀಂ** = ಸ್ವಲ್ಪ **ಭೂಮಿಂ** = ಮಾರ್ಗವನ್ನು **ಗತ್ವಾ ಏವ** = ಹೋಗುತ್ತಲೇ **ತದ್ದುರ್ಗಂಧಾಸಹಃ (ಸನ್)** = ಆ ದುರ್ವಾಸನೆಯನ್ನು ಸಹಿಸಲಾರದವನಾಗಿ **ನಿವರ್ತನಂ** = ಹಿಂತಿರುಗುವಿಕೆಯನ್ನು **ಇಚ್ಛನ್ (ಸನ್)** = ಬಯಸಿದವನಾಗಿ **ತತ್ರ** = ಆ ಸ್ಥಳದಲ್ಲಿ **ಸ್ವಾನಾಂ** = ತನ್ನವರ **ವಾಚಃ ಇವ** = ಮಾತುಗಳನ್ನೆಂಬಂತೆ **ಅಶ್ರೃಣೋತ್** = ಕೇಳಿಸಿಕೊಂಡ.

**ತಾತ್ಪರ್ಯ** :- ಸ್ವಲ್ಪದೂರ ಹೋದಮೇಲೆ ಆ ದುರ್ಗಂಧವನ್ನು ಸಹಿಸಲಾಗದ ಧರ್ಮರಾಜ ಹಿಂದಿರುಗಲು ಬಯಸಿದ. ಆಗ ತನ್ನವರಂತಹವರ ಮಾತುಗಳನ್ನು ಕೇಳಿಸಿಕೊಂಡ.

**ಕ್ಷಣಂ ತಿಷ್ಠ ಮಹಾರಾಜ ಸನ್ನಿಧಾನಬಲಾತ್ ತವ ।**
**ವೇದನಾ ನೋ ನ ಮಹತೀತ್ಯೇತಚ್ಛ್ರುತ್ವಾ ಯುಧಿಷ್ಠಿರಃ ॥ ೯೬ ॥**

**ಕೇ ಯೂಯಮಿತಿ ಪಪ್ರಚ್ಛ ದೀನಧ್ವನಿವಿಶಂಕಿತಃ ।**
**ಭೀಮೋಽಹಮರ್ಜುನಃ ಕರ್ಣ ಇತ್ಯಾದ್ಯುಕ್ತಮಿವಾಶೃಣೋತ್ ॥ ೯೭ ॥**

ಕ್ಷಣಂ ತಿಷ್ಠ ಮಹಾರಾಜ ಸನ್ನಿಧಾನಬಲಾತ್ ತವ । ವೇದನಾ ನಃ ನ ಮಹತೀ ಇತಿ ಏತತ್ ಶ್ರುತ್ವಾ ಯುಧಿಷ್ಠಿರಃ ॥ ೯೬ ॥

ಕೇ ಯೂಯಂ ಇತಿ ಪಪ್ರಚ್ಛ ದೀನಧ್ವನಿವಿಶಂಕಿತಃ । ಭೀಮಃ ಅಹಂ ಅರ್ಜುನಃ ಕರ್ಣಃ ಇತ್ಯಾದಿ ಉಕ್ತಂ ಇವ ಅಶೃಣೋತ್ ॥ ೯೭ ॥

**ಅರ್ಥ** :- **ಮಹಾರಾಜ** = ಮಹಾರಾಜನೆ! **ಕ್ಷಣಂ** = ಕ್ಷಣಕಾಲ **ತಿಷ್ಠ** = ನಿಲ್ಲು. **ತವ** = ನಿನ್ನ **ಸನ್ನಿಧಾನಬಲಾತ್** = ಸನ್ನಿಧಾನದ ಬಲದಿಂದಾಗಿ **ನಃ** = ನಮ್ಮ **ವೇದನಾ** = ನರಕದ ವೇದನೆಯು **ನ ಮಹತೀ** = ಕಡಿಮೆಯಾಗಿದೆ. **ಇತಿ** = ಎಂದು. **ಏತತ್** = ಇದನ್ನು **ಶ್ರುತ್ವಾ** = ಕೇಳಿ **ದೀನಧ್ವನಿವಿಶಂಕಿತಃ** = ದೀನಧ್ವನಿಯನ್ನು ಶಂಕಿಸಿದ **ಯುಧಿಷ್ಠಿರಃ** = ಧರ್ಮರಾಜನು **ಯೂಯಂ** = ನೀವು **ಕೇ** = ಯಾರು **ಇತಿ** = ಎಂದು **ಪಪ್ರಚ್ಛ** = ಕೇಳಿದನು. **ಅಹಂ** = ನಾನು **ಭೀಮಃ** =

ಬಂಧುಗಳೆಡೆಗೆ ಧರ್ಮರಾಜ

**ಅಸ್ಯ ವೀರತಮಸ್ಯೇದಂ ಧಾರ್ತರಾಷ್ಟ್ರಸ್ಯ ಯುಜ್ಯತೇ ।**
**ಇತ್ಯುಕ್ತ್ವಾ ದೇವತಾ ದೂತಂ ಸ್ವಾನಾಂ ಸಂದರ್ಶನಾರ್ಥಿನಃ ॥ ೯೩ ॥**

**ರಾಜ್ಞಃ ಸಂಪ್ರೇಷಯಾಮಾಸುಸ್ತತ್ಸಂದರ್ಶಿತವರ್ತ್ಮನಾ ।**
**ದುರ್ಗಂಧೇನ ಸುಕೃಚ್ಛ್ರೇಣ ತಮಸಾ ಪ್ರಾವೃತೇನ ಚ ॥ ೯೪ ॥**

ಅಸ್ಯ ವೀರತಮಸ್ಯ ಇದಂ ಧಾರ್ತರಾಷ್ಟ್ರಸ್ಯ ಯುಜ್ಯತೇ । ಇತಿ ಉಕ್ತ್ವಾ ದೇವತಾಃ ದೂತಂ ಸ್ವಾನಾಂ ಸಂದರ್ಶನಾರ್ಥಿನಃ ॥ ೯೩ ॥

ರಾಜ್ಞಃ ಸಂಪ್ರೇಷಯಾಮಾಸುಃ ತತ್ಸಂದರ್ಶಿತವರ್ತ್ಮನಾ । ದುರ್ಗಂಧೇನ ಸುಕೃಚ್ಛ್ರೇಣ ತಮಸಾ ಪ್ರಾವೃತೇನ ಚ ॥ ೯೪ ॥

**ತಾತ್ಪರ್ಯ** :- 'ಮಹಾವೀರನಾದ ದುರ್ಯೋಧನನಿಗೆ ಇದು ದೊರಕಿದೆ' ಎಂದು ನುಡಿದು ದೇವತೆಗಳು ತಮ್ಮ ದೂತನನ್ನು ತನ್ನ ಬಂಧುಗಳನ್ನು ಕಾಣಬಯಸಿದ ಧರ್ಮರಾಜನೊಂದಿಗೆ ಕಳುಹಿಸಿಕೊಟ್ಟರು. ಧರ್ಮರಾಜ ಅವನು ತೋರಿದ ಹಾದಿಯಲ್ಲಿ ನಡೆದ. ಅದರಲ್ಲಿ ಸಹಿಸಲಾಗದ ದುರ್ಗಂಧ ತುಂಬಿತ್ತು ; ಕತ್ತಲೆ ಆವರಿಸಿತ್ತು.

ಧರ್ಮರಾಜನಿಗೆ ನರಕದರ್ಶನ

**ಗತ್ವೈವ ಕಿಯತೀಂ ಭೂಮಿಂ ತದ್ದುರ್ಗಂಧಾಸಹೋ ನೃಪಃ ।**
**ಇಚ್ಛನ್ನಿವರ್ತನಂ ತತ್ರ ಸ್ವಾನಾಂ ವಾಚ ಇವಾಶೃಣೋತ್ ॥ ೯೫ ॥**

ಗತ್ವಾ ಏವ ಕಿಯತೀಂ ಭೂಮಿಂ ತದ್ದುರ್ಗಂಧಾಸಹಃ ನೃಪಃ । ಇಚ್ಛನ್ ನಿವರ್ತನಂ ತತ್ರ ಸ್ವಾನಾಂ ವಾಚಃ ಇವ ಅಶೃಣೋತ್ ॥ ೯೫ ॥

**ಅರ್ಥ** :- **ಧಾರ್ತರಾಷ್ಟ್ರಸ್ಯ** = ಧೃತರಾಷ್ಟ್ರನ ಪುತ್ರನಾದ **ಅಸ್ಯ** = ಈ **ವೀರತಮಸ್ಯ** = ವೀರತಮನಿಗೆ **ಇದಂ** = ಇದು (ಈ ಸ್ಥಾನವು) **ಯುಜ್ಯತೇ** = ಯುಕ್ತವಾಗಿದೆ. **ಇತಿ** = ಎಂದು **ದೇವತಾಃ** = ದೇವತೆಗಳು **ಉಕ್ತ್ವಾ** = ಹೇಳಿ **ಸ್ವಾನಾಂ** = ತನ್ನವರನ್ನು **ಸಂದರ್ಶನಾರ್ಥಿನಃ** = ಕಾಣಬಯಸಿದ **ರಾಜ್ಞಃ** = ರಾಜನದ ಧರ್ಮರಾಜನಿಗಾಗಿ **ದೂತಂ** = ದೂತನನ್ನು **ಸಂಪ್ರೇಷಯಾಮಾಸುಃ** = ಕಳುಹಿಸಿಕೊಟ್ಟರು. **ನೃಪಃ** =

ರಾಜನಾದ ಯುಧಿಷ್ಠಿರನು **ದುರ್ಗಂಧೇನ** = ಕೆಟ್ಟವಾಸನೆಯ **ಸುಕೃಚ್ಛ್ರೇಣ** = ಅತ್ಯಂತ ಕಷ್ಟಕರವಾದ **ಚ** = ಮತ್ತು **ತಮಸಾ** = ಕತ್ತಲೆಯಿಂದ **ಪ್ರಾವೃತೇನ** = ವ್ಯಾಪ್ತವಾದ **ತತ್ಸಂದರ್ಶಿತವರ್ತ್ಮನಾ** = ಆ ದೂತನು ತೋರಿಸಿದ ಹಾದಿಯಿಂದ **ಕಿಯತೀಂ** = ಸ್ವಲ್ಪ **ಭೂಮಿಂ** = ಮಾರ್ಗವನ್ನು **ಗತ್ವಾ ಏವ** = ಹೋಗುತ್ತಲೇ **ತದ್ದುರ್ಗಂಧಾಸಹಃ (ಸನ್)** = ಆ ದುರ್ವಾಸನೆಯನ್ನು ಸಹಿಸಲಾರದವನಾಗಿ **ನಿವರ್ತನಂ** = ಹಿಂತಿರುಗುವಿಕೆಯನ್ನು **ಇಚ್ಛನ್ (ಸನ್)** = ಬಯಸಿದವನಾಗಿ **ತತ್ರ** = ಆ ಸ್ಥಳದಲ್ಲಿ **ಸ್ವಾನಾಂ** = ತನ್ನವರ **ವಾಚಃ ಇವ** = ಮಾತುಗಳನ್ನೆಂಬಂತೆ **ಅಶೃಣೋತ್** = ಕೇಳಿಸಿಕೊಂಡ.

**ತಾತ್ಪರ್ಯ** :- ಸ್ವಲ್ಪದೂರ ಹೋದಮೇಲೆ ಆ ದುರ್ಗಂಧವನ್ನು ಸಹಿಸಲಾಗದ ಧರ್ಮರಾಜ ಹಿಂದಿರುಗಲು ಬಯಸಿದ. ಆಗ ತನ್ನವರಂತಹವರ ಮಾತುಗಳನ್ನು ಕೇಳಿಸಿಕೊಂಡ.

**ಕ್ಷಣಂ ತಿಷ್ಠ ಮಹಾರಾಜ ಸನ್ನಿಧಾನಬಲಾತ್ ತವ ।**
**ವೇದನಾ ನೋ ನ ಮಹತೀತ್ಯೇತಚ್ಛ್ರುತ್ವಾ ಯುಧಿಷ್ಠಿರಃ ॥ ೯೬ ॥**

**ಕೇ ಯೂಯಮಿತಿ ಪಪ್ರಚ್ಛ ದೀನಧ್ವನಿವಿಶಂಕಿತಃ ।**
**ಭೀಮೋಽಹಮರ್ಜುನಃ ಕರ್ಣ ಇತ್ಯಾದ್ಯುಕ್ತಮಿವಾಶೃಣೋತ್ ॥ ೯೭ ॥**

ಕ್ಷಣಂ ತಿಷ್ಠ ಮಹಾರಾಜ ಸನ್ನಿಧಾನಬಲಾತ್ ತವ । ವೇದನಾ ನಃ ನ ಮಹತೀ ಇತಿ ಏತತ್ ಶ್ರುತ್ವಾ ಯುಧಿಷ್ಠಿರಃ ॥ ೯೬ ॥

ಕೇ ಯೂಯಂ ಇತಿ ಪಪ್ರಚ್ಛ ದೀನಧ್ವನಿವಿಶಂಕಿತಃ । ಭೀಮಃ ಅಹಂ ಅರ್ಜುನಃ ಕರ್ಣಃ ಇತ್ಯಾದಿ ಉಕ್ತಂ ಇವ ಅಶೃಣೋತ್ ॥ ೯೭ ॥

**ಅರ್ಥ** :- **ಮಹಾರಾಜ** = ಮಹಾರಾಜನೇ! **ಕ್ಷಣಂ** = ಕ್ಷಣಕಾಲ **ತಿಷ್ಠ** = ನಿಲ್ಲು. **ತವ** = ನಿನ್ನ **ಸನ್ನಿಧಾನಬಲಾತ್** = ಸನ್ನಿಧಾನದ ಬಲದಿಂದಾಗಿ **ನಃ** = ನಮ್ಮ **ವೇದನಾ** = ನರಕದ ವೇದನೆಯು **ನ ಮಹತೀ** = ಕಡಿಮೆಯಾಗಿದೆ. **ಇತಿ** = ಎಂದು. **ಏತತ್** = ಇದನ್ನು **ಶ್ರುತ್ವಾ** = ಕೇಳಿ **ದೀನಧ್ವನಿವಿಶಂಕಿತಃ** = ದೀನಧ್ವನಿಯನ್ನು ಶಂಕಿಸಿದ **ಯುಧಿಷ್ಠಿರಃ** = ಧರ್ಮರಾಜನು **ಯೂಯಂ** = ನೀವು **ಕೇ** = ಯಾರು **ಇತಿ** = ಎಂದು **ಪಪ್ರಚ್ಛ** = ಕೇಳಿದನು. **ಅಹಂ** = ನಾನು **ಭೀಮಃ** =

ಭೀಮನು **ಅಹಂ** = ನಾನು **ಅರ್ಜುನಃ** = ಅರ್ಜುನನು **ಅಹಂ** = ನಾನು **ಕರ್ಣಃ** = ಕರ್ಣನು **ಇತ್ಯಾದಿ** = ಇವೇ ಮೊದಲಾಗಿ **ಉಕ್ತಂ ಇವ** = ಹೇಳಲ್ಪಟ್ಟಂತೆ **ಅಶೃಣೋತ್** = ಕೇಳಿಸಿಕೊಂಡ.

**ತಾತ್ಪರ್ಯ :-** ''ಮಹಾರಾಜ ! ಒಂದು ಕ್ಷಣ ನಿಲ್ಲು, ನಿನ್ನ ಸನ್ನಿಧಾನದ ಬಲದಿಂದಾಗಿ ನಮಗೆ ನೋವು ಕಡಿಮೆಯೆನ್ನಿಸುತ್ತಿದೆ''. ಆ ಧ್ವನಿಯಲ್ಲಿನ ದೈನ್ಯವನ್ನು ಸಂದೇಹಿಸಿ ಧರ್ಮರಾಜನು 'ನೀವು ಯಾರು?' ಎಂದು ಕೇಳಿದ. 'ನಾನು ಭೀಮ', 'ನಾನು ಅರ್ಜುನ', 'ನಾನು ಕರ್ಣ' ಎಂದು ಮೊದಲಾಗಿ ಹೇಳಿದಂತಾಯಿತು. ಧರ್ಮರಾಜ ಅದನ್ನು ಕೇಳಿಸಿಕೊಂಡ.

### ಧರ್ಮರಾಜನ ಬಂಧುಪ್ರೇಮ

**ಶ್ರುತ್ವಾ ತತ್ಕೃಪಯಾಽಽವಿಷ್ಟಃ ಶೋಕಾಮರ್ಷಸಮನ್ವಿತಃ ।**
**ಆಹ ದೂತಂ ಯಥೇಷ್ಟಂ ತ್ವಂ ಗಚ್ಛ ನಾಹಮಿತೋ ವ್ರಜೇ ॥ ೯೮ ॥**

**ಶ್ರುತ್ವಾ ತತ್ಕೃಪಯಾ ಆವಿಷ್ಟಃ ಶೋಕಾಮರ್ಷಸಮನ್ವಿತಃ । ಆಹ ದೂತಂ ಯಥೇಷ್ಟಂ ತ್ವಂ ಗಚ್ಛ ನ ಅಹಂ ಇತಃ ವ್ರಜೇ ॥ ೯೮ ॥**

**ಅರ್ಥ :- ತತ್** = ಅದನ್ನು **ಶ್ರುತ್ವಾ** = ಕೇಳಿ **ಕೃಪಯಾ** = ಕೃಪೆಯಿಂದ **ಆವಿಷ್ಟಃ** = ಕೂಡಿದವನಾಗಿ **ಶೋಕಾಮರ್ಷಸಮನ್ವಿತಃ** = ಶೋಕ ಕೋಪಗಳಿಂದ ಕೂಡಿದ ಧರ್ಮರಾಜನು **ದೂತಂ** = ದೂತನನ್ನು ಕುರಿತು **ಆಹ** = ಹೇಳಿದನು. **ತ್ವಂ** = ನೀನು **ಯಥೇಷ್ಟಂ** = ಇಷ್ಟ ಬಂದಂತೆ **ಗಚ್ಛ** = ತೆರಳು **ಅಹಂ** = ನಾನು **ಇತಃ** = ಇಲ್ಲಿಂದ **ನ ವ್ರಜೇ** = ಹೋಗಲಾರೆ.

**ತಾತ್ಪರ್ಯ :-** ಆ ಧ್ವನಿಯನ್ನು ಕೇಳಿ ಧರ್ಮರಾಜ ಕರುಣೆಯಿಂದ ಕೂಡಿದವನಾಗಿ ಶೋಕ, ದುಃಖಗಳನ್ನು ಹೊಂದಿದವನಾಗಿ ಆ ದೂತನಿಗೆ ತಿಳಿಸಿದ 'ನೀನು ಇಷ್ಟ ಬಂದಲ್ಲಿಗೆ ತೆರಳು, ನಾನು ಇಲ್ಲಿಂದ ಬರಲಾರೆ.

### ಸ್ವರ್ಗ ಬೇಡವೆಂದ ಧರ್ಮರಾಜ

**ನ ಚ ಸ್ವರ್ಗೇಣ ಮೇ ಕಾರ್ಯಂ ತ್ಯಕ್ತ್ವಾ ಸ್ವಜನಮೀದೃಶಮ್ ।**
**ಇತ್ಯುಕ್ತಃ ಪ್ರಯಯೌ ದೂತಸ್ತಸ್ಥಾವೇವ ಯುಧಿಷ್ಠಿರಃ ॥ ೯೯ ॥**

ನ ಚ ಸ್ವರ್ಗೇಣ ಮೇ ಕಾರ್ಯಂ ತ್ಯಕ್ತ್ವಾ ಸ್ವಜನಂ ಈದೃಶಮ್ । ಇತಿ ಉಕ್ತಃ ಪ್ರಯಯೌ ದೂತಃ ತಸ್ಥೌ ಏವ ಯುಧಿಷ್ಠಿರಃ ॥ ೯೯ ॥

**ಅರ್ಥ** :- **ಈದೃಶಂ** = ಇಂತಹ **ಸ್ವಜನಂ** = ನನ್ನ ಜನರನ್ನು **ತ್ಯಕ್ತ್ವಾ** = ತೊರೆದು **ಮೇ** = ನನಗೆ **ಸ್ವರ್ಗೇಣ** = ಸ್ವರ್ಗದಿಂದ **ಕಾರ್ಯಂ ಚ ನ** = ಆಗಬೇಕಾದ್ದು ಏನೂ ಇಲ್ಲ. **ಇತಿ** = ಹೀಗೆ **ಉಕ್ತಃ** = ಹೇಳಲ್ಪಟ್ಟ **ದೂತಃ** = ದೂತನು **ಪ್ರಯಯೌ** = ಹೊರಟನು. **ಯುಧಿಷ್ಠಿರಃ ಏವ** = ಧರ್ಮರಾಜನು ಮಾತ್ರ **ತಸ್ಥೌ** = ನಿಂತನು.

**ತಾತ್ಪರ್ಯ** :- 'ಇಂತಹ ಬಂಧುಜನರನ್ನು ಬಿಟ್ಟು ನನಗೆ ಸ್ವರ್ಗದಿಂದ ಆಗಬೇಕಾದ್ದಿಲ್ಲ'. ಅವನು ಹೀಗೆನ್ನಲು ದೂತ ಅಲ್ಲಿಂದ ತೆರಳಿದ, ಧರ್ಮರಾಜ ಅಲ್ಲಿಯೇ ನಿಂತ.

### ಮಾಯವಾದ ನರಕ

**ತತೋಽತ್ರ ದೇವಾಃ ಪುರುಹೂತಪೂರ್ವಕಾಃ**
**ಸಮಾಯಯುಃ ಸ್ನೇಹವಶಾದ್ಯುಧಿಷ್ಠಿರೇ ।**
**ತೇಷ್ವಾಗತೇಷ್ವೇವ ನ ತತ್ರ ವಾಚೋ**
**ದೀನಾ ನ ದುರ್ಗಂಧತಮೋಽಪ್ಯಪಶ್ಯತ್ ॥ ೧೦೦ ॥**

ತತಃ ಅತ್ರ ದೇವಾಃ ಪುರುಹೂತಪೂರ್ವಕಾಃ ಸಮಾಯಯುಃ ಸ್ನೇಹವಶಾತ್ ಯುಧಿಷ್ಠಿರೇ । ತೇಷು ಆಗತೇಷು ಏವ ನ ತತ್ರ ವಾಚಃ ದೀನಾಃ ನ ದುರ್ಗಂಧತಮಃ ಅಪಿ ಅಪಶ್ಯತ್ ॥ ೧೦೦ ॥

**ಅರ್ಥ** :- **ತತಃ** = ಬಳಿಕ **ತತ್ರ** = ಅಲ್ಲಿ **ಪುರುಹೂತಪೂರ್ವಕಾಃ** = ಇಂದ್ರ ಮೊದಲಾದ **ದೇವಾಃ** = ದೇವತೆಗಳು **ಯುಧಿಷ್ಠಿರೇ** = ಧರ್ಮರಾಜನಲ್ಲಿ **ಸ್ನೇಹವಶಾತ್** = ಸ್ನೇಹದ ವಶದಿಂದಾಗಿ **ಸಮಾಯಯುಃ** = ಬಂದು ಸೇರಿದರು. **ತೇಷು** = ಅವರು **ಆಗತೇಷು ಏವ** = ಆಗಮಿಸಿದಾಗಲೇ **ತತ್ರ** = ಅಲ್ಲಿ **ದೀನಾಃ** = ದೀನವಾದ **ವಾಚಃ** = ಮಾತುಗಳು **ನ (ಅಶೃಣೋತ್)** = ಕೇಳಲಿಲ್ಲ. **ದುರ್ಗಂಧತಮಃ** = ದುರ್ಗಂಧದಿಂದ ಕೂಡಿದ ಕತ್ತಲೆಯು **ಸಹ ನ ಅಪಶ್ಯತ್** = ಕಾಣಲಿಲ್ಲ.

**ತಾತ್ಪರ್ಯ** :- ಆಗ ಅಲ್ಲಿಗೆ ಇಂದ್ರ ಮೊದಲಾದ ದೇವತೆಗಳು ಧರ್ಮರಾಜನ ಮೇಲಿನ ಸ್ನೇಹಕ್ಕೊಳಗಾಗಿ ಆಗಮಿಸಿದರು. ಅವರು ಹಾಗೆ ಆಗಮಿಸುತ್ತಲೇ ಅಲ್ಲಿ ದೀನವಚನಗಳಾಗಲೀ, ದುರ್ಗಂಧವಾಗಲೀ, ಕತ್ತಲೆಯಾಗಲೀ ಕಾಣದಾದವು.

ಸ್ವರ್ಗಕ್ಕೆ ಮಿಗಿಲಾದ ದಿವ್ಯಲೋಕ

**ಸ್ವರ್ಗೋತ್ತಮಂ ದೇಶಮಪಶ್ಯದೇತ-**
**ದಭ್ರಾಂತಚೇತಾಃ ಸ ಯುಧಿಷ್ಠಿರಸ್ತದಾ ।**
**ಆಹಾತ್ರ ಧರ್ಮಃ ಪುನರಾತ್ಮಸದ್ಯಶಃ**
**ಪ್ರಕಾಶಯನ್ ಪಾಂಡುಸುತಾಭಿಧಂ ಸ್ವಮ್ ॥ ೧೦೧ ॥**

**ಸ್ವರ್ಗೋತ್ತಮಂ ದೇಶಂ ಅಪಶ್ಯತ್ ಏತತ್ ಅಭ್ರಾಂತಚೇತಾಃ ಸಃ ಯುಧಿಷ್ಠಿರಃ ತದಾ । ಆಹ ಅತ್ರ ಧರ್ಮಃ ಪುನಃ ಆತ್ಮಸದ್ಯಶಃ ಪ್ರಕಾಶಯನ್ ಪಾಂಡುಸುತಾಭಿಧಂ ಸ್ವಮ್ ॥ ೧೦೧ ॥**

**ಅರ್ಥ** :- **ಅಭ್ರಾಂತಚೇತಾಃ** = ಭ್ರಾಂತಿಯಿಲ್ಲದ ಮನಸ್ಸಿನ **ಸಃ** = ಆ **ಯುಧಿಷ್ಠಿರಃ** = ಯುಧಿಷ್ಠಿರನು **ತದಾ** = ಆಗ **ಸ್ವರ್ಗೋತ್ತಮಂ** = ಸ್ವರ್ಗಕ್ಕಿಂತ ಉತ್ತಮವಾದ **ಏತತ್** = ಈ **ದೇಶಂ** = ಲೋಕವನ್ನು **ಅಪಶ್ಯತ್** = ಕಂಡನು. **ಅತ್ರ** = ಅಲ್ಲಿ **ಧರ್ಮಃ** = ಯಮಧರ್ಮನು **ಆತ್ಮಸದ್ಯಶಃ** = ತನ್ನ ಉತ್ತಮ ಕೀರ್ತಿಯನ್ನು **ಪುನಃ** = ಮತ್ತೆ **ಪ್ರಕಾಶಯನ್** = ತೋರಿಸುವವನಾಗಿ **ಪಾಂಡುಸುತಾಭಿಧಂ** = ಪಾಂಡುವಿನ ಮಗನಾದ **ಸ್ವಂ** = ತನ್ನನ್ನು ಕುರಿತು **ಆಹ** = ಹೇಳಿದನು.

**ತಾತ್ಪರ್ಯ** :- ಭ್ರಮೆ ಕಳೆದ ಬುದ್ಧಿಯ ಧರ್ಮರಾಜ ಆಗ ಅಲ್ಲಿ ಸ್ವರ್ಗಕ್ಕಿಂತ ಮಿಗಿಲಾದ ಪ್ರದೇಶವನ್ನು ಕಂಡ. ಯಮ ಮತ್ತೆ ತನ್ನ ಉತ್ತಮ ಕೀರ್ತಿಯನ್ನು ಪ್ರಸಿದ್ಧಿಗೊಳಿಸುತ್ತಾ ಯುಧಿಷ್ಠಿರರೂಪದ ತನಗೆ ತಿಳಿಸಿದ.

ಸತ್ತ್ವಪರೀಕ್ಷೆಯಲ್ಲಿ ಮತ್ತೊಮ್ಮೆ ಗೆದ್ದ ಧರ್ಮರಾಜ - ನರಕದರ್ಶನಕ್ಕೆ ಕಾರಣ

**ಧರ್ಮಾದ್ವಿಶಿಷ್ಟಾ ಹಿ ಸದಾನೃಶಂಸತಾ**
**ದೃಷ್ಟಾ ಚ ಸಾ ತ್ವಯ್ಯಧಿಕಾ ತ್ರಿಶೋ ಮಯಾ ।**

**ಶಕ್ರೋಽಪ್ಯುವಾಚೈನಮಿದಂ ಮೃಷಾ ತೇ**
**ಪ್ರದರ್ಶಿತಂ ದ್ರೋಣಕೃತೇ ಮೃಷಾ ಗಿರಃ ॥ ೧೦೨ ॥**

**ಧರ್ಮಾತ್ ವಿಶಿಷ್ಟಾ ಹಿ ಸದಾ ಅನೃಶಂಸತಾ ದೃಷ್ಟಾ ಚ ಸಾ ತ್ವಯಿ ಅಧಿಕಾ ತ್ರಿಶಃ ಮಯಾ । ಶಕ್ರಃ ಅಪಿ ಉವಾಚ ಏನಂ ಇದಂ ಮೃಷಾ ತೇ ಪ್ರದರ್ಶಿತಂ ದ್ರೋಣಕೃತೇ ಮೃಷಾ ಗಿರಃ ॥ ೧೦೨ ॥**

**ಅರ್ಥ** :- **ಧರ್ಮಾತ್** = ಧರ್ಮಕ್ಕಿಂತಲೂ **ಅನೃಶಂಸತಾ** = ದಯೆಯು **ಸದಾ** = ಯಾವಾಗಲೂ **ವಿಶಿಷ್ಟಾ ಹಿ** = ಉತ್ತಮವೇ ಆದುದು. **ಸಾ** = ಆ ದಯೆಯು **ಮಯಾ** = ನನ್ನಿಂದ **ತ್ವಯಿ** = ನಿನ್ನಲ್ಲಿ **ತ್ರಿಶಃ** = ಮೂರು ಬಾರಿ **ಅಧಿಕಾ** = ಹೆಚ್ಚಾಗಿ **ದೃಷ್ಟಾ ಚ** = ನೋಡಿದ್ದೂ ಆಗಿದೆ. **ಶಕ್ರಃ ಅಪಿ** = ಇಂದ್ರನೂ ಸಹ **ಏನಂ** = ಈ ಧರ್ಮರಾಜನನ್ನು ಕುರಿತು **ಉವಾಚ** = ಹೇಳಿದ **ದ್ರೋಣಕೃತೇ** = ದ್ರೋಣನಿಗೋಸ್ಕರ **ಮೃಷಾ** = ಸುಳ್ಳಾದ **ಗಿರಃ** = ಮಾತುಳ್ಳವನಾದ **ತೇ** = ನಿನಗೆ **ಮೃಷಾ** = ಸುಳ್ಳಾದ **ಇದಂ** = ಇದು (ದುರ್ಗಂಧದ ಲೋಕವು) **ಪ್ರದರ್ಶಿತಂ** = ತೋರಿಸಲ್ಪಟ್ಟದ್ದು (ಆಯಿತು).

**ಕೃಚ್ಛ್ರಾದಿದಂ ತೇ ಕಥಿತಂ ನ ಚಾತಿ-**
**ವಿಸ್ರಂಭ ಆಸೀತ್ ತವ ಕೃಷ್ಣವಾಕ್ಯೇ ।**
**ನ ಹ್ಯಾಜ್ಞಯಾ ವಾಸುದೇವಸ್ಯ ಕಿಂಚಿತ್**
**ಪಾಪಂ ಭವೇತ್ ಸರ್ವವಿಧರ್ಮಿಣೋಽಪಿ ॥ ೧೦೩ ॥**

**ಕೃಚ್ಛ್ರಾತ್ ಇದಂ ತೇ ಕಥಿತಂ ನ ಚ ಅತಿವಿಸ್ರಂಭಃ ಆಸೀತ್ ತವ ಕೃಷ್ಣವಾಕ್ಯೇ । ನ ಹಿ ಆಜ್ಞಯಾ ವಾಸುದೇವಸ್ಯ ಕಿಂಚಿತ್ ಪಾಪಂ ಭವೇತ್ ಸರ್ವವಿಧರ್ಮಿಣಃ ಅಪಿ ॥ ೧೦೩ ॥**

**ಅರ್ಥ** :- **ಇದಂ** = (ಕೃಷ್ಣನು ಹೇಳಿದ) ಈ ಮಾತು **ತೇ** = ನಿನ್ನಿಂದ **ಕೃಚ್ಛ್ರಾತ್** = ಕಷ್ಟದಿಂದ **ಕಥಿತಂ** = ಹೇಳಲ್ಪಟ್ಟಿತು. **ಚ** = ಮತ್ತು **ತವ** = ನಿನಗೆ **ಕೃಷ್ಣವಾಕ್ಯೇ** = ಕೃಷ್ಣನ ಮಾತಿನಲ್ಲಿ **ಅತಿವಿಸ್ರಂಭಃ** = ಅತ್ಯಂತವಿಶ್ವಾಸವು **ನ ಆಸೀತ್** = ಇರಲಿಲ್ಲ. **ವಾಸುದೇವಸ್ಯ** = ಕೃಷ್ಣನ **ಆಜ್ಞಯಾ** = ಅಪ್ಪಣೆಯಿಂದ **ಸರ್ವವಿಧರ್ಮಿಣಃ** = (ಅಪರೋಕ್ಷ ಜ್ಞಾನಾನಂತರದಲ್ಲಿ) ಎಲ್ಲ ವಿರುದ್ಧಾಚಾರಗಳನ್ನು ಮಾಡುವವರಿಗೂ **ಕಿಂಚಿತ್**

= ಸ್ವಲ್ಪ **ಪಾಪಂ** = ಪಾಪವೂ **ನ ಭವೇತ್** = ಎಂದಿಗೂ ಆಗದು. **ಹಿ** = ಇದು ಪ್ರಸಿದ್ಧವು.

**ತಾತ್ಪರ್ಯ** :- 'ಧರ್ಮಕ್ಕಿಂತ ದಯೆ ಸದಾ ತುಂಬಾ ಮಿಗಿಲಾದದ್ದು ; ಅದನ್ನು ನಿನ್ನಲ್ಲಿ ನಾನು ವಿಶೇಷವಾಗಿ ಮೂರು ಬಾರಿ ಕಂಡೆ'. ಇಂದ್ರ ಸಹ ಧರ್ಮರಾಜನಿಗೆ ತಿಳಿಸಿದ 'ದ್ರೋಣನಿಗೆ ಸುಳ್ಳು ಹೇಳಿದ್ದಕ್ಕಾಗಿ ನಿನಗೆ ಸುಳ್ಳುನರಕ ತೋರಿಸಲ್ಪಟ್ಟಿತು. ಏಕೆಂದರೆ ನೀನು ಕೃಷ್ಣ ಹೇಳಿದ ಆ ಮಾತನ್ನು ಕಷ್ಟದಿಂದ ನುಡಿದೆ. ನಿನಗೆ ಕೃಷ್ಣನ ಮಾತಿನಲ್ಲಿ ಪೂರ್ಣ ವಿಶ್ವಾಸ ಇರಲಿಲ್ಲ, ಕೃಷ್ಣನ ಆಜ್ಞೆಯಂತೆ ಅಪರೋಕ್ಷ ಜ್ಞಾನಾನಂತರ ಸಕಲ ನಿಷಿದ್ಧ ಕಾರ್ಯಗಳನ್ನು ಆಚರಿಸಿದರೂ ಸ್ವಲ್ಪ ಪಾಪವೂ ಸಹ ಬರಲಾರದು'.

**ಬ್ರಹ್ಮಾಪರೋಕ್ಷ್ಯೇಽಪಿ ವಿಕರ್ಮ ಸೂಚಕಂ**
**ಪ್ರಾರಬ್ಧಪಾಪಸ್ಯ ವಿಷಾಶನಂ ಯಥಾ ।**
**ಪಶ್ಯಾತ್ರ ಭೀಮಪ್ರಮುಖಾನ್ ಸುಖಸ್ಥಾನ್**
**ಸಂಪೂಜ್ಯಮಾನಾಂಸ್ತ್ರಿದಶೈಃ ಸುರೂಪಾನ್ ॥ ೧೦೪ ॥**

**ಬ್ರಹ್ಮಾಪರೋಕ್ಷ್ಯೇ ಅಪಿ ವಿಕರ್ಮ ಸೂಚಕಂ ಪ್ರಾರಬ್ಧಪಾಪಸ್ಯ ವಿಷಾಶನಂ ಯಥಾ । ಪಶ್ಯ ಅತ್ರ ಭೀಮಪ್ರಮುಖಾನ್ ಸುಖಸ್ಥಾನ್ ಸಂಪೂಜ್ಯಮಾನಾನ್ ತ್ರಿದಶೈಃ ಸುರೂಪಾನ್ ॥ ೧೦೪ ॥**

**ಅರ್ಥ** :– **ಬ್ರಹ್ಮಾಪರೋಕ್ಷ್ಯೇ ಅಪಿ** = ಪರಬ್ರಹ್ಮನ ಸಾಕ್ಷಾತ್ಕಾರವಾದಾಗಲೂ ಸಹ **ವಿಕರ್ಮ** = ವಿರುದ್ಧಕರ್ಮವು **ಪ್ರಾರಬ್ಧಪಾಪಸ್ಯ** = ಪ್ರಾರಬ್ಧಪಾಪಕ್ಕೆ (ಭೋಗಿಸಲು ಪ್ರಾರಂಭವಾದ ಪಾಪಕ್ಕೆ) **ವಿಷಾಶನಂ ಯಥಾ** = ವಿಷಾನ್ನದಂತೆ **ಸೂಚಕಂ** (ಏವ) = ಸೂಚಕವು ಮಾತ್ರ. (**ನ ತು ಅನುಭೂಯಮಾನದುಃಖಸಾಧನಂ**) = ಅನುಭವಿಸುವ ದುಃಖ ಸಾಧನವಲ್ಲ. **ಅತ್ರ** = ಈ ಸ್ವರ್ಗದಲ್ಲಿ **ತ್ರಿದಶೈಃ** = ದೇವತೆಗಳಿಂದ **ಸಂಪೂಜ್ಯಮಾನಾನ್** = ವಿಶೇಷವಾಗಿ ಪೂಜಿತರಾದ **ಸುಖಸ್ಥಾನ್** = ಸುಖವಾಗಿರುವ **ಸುರೂಪಾನ್** = ಸುರೂಪರಾಗಿರುವ **ಭೀಮಪ್ರಮುಖಾನ್** = ಭೀಮ ಮೊದಲಾದವರನ್ನು **ಪಶ್ಯ** = ನೋಡು.

**ತಾತ್ಪರ್ಯ** :- ಬ್ರಹ್ಮಾಪರೋಕ್ಷ ಉಂಟಾದ ಮೇಲೆ ಜ್ಞಾನಿ ಮಾಡುವ ಪಾಪಕರ್ಮ ಪ್ರಾರಬ್ಧಪಾಪಕ್ಕೆ ವಿಷಾನ್ನ ಭೋಜನದಂತೆ ಸೂಚಕ. ಈಗ ಇಲ್ಲಿ

ಆನಂದದಿಂದಿರುವ, ದೇವತೆಗಳಿಂದ ವಿಶೇಷವಾಗಿ ಆರಾಧಿತವಾದ ಸುರೂಪ ದಿಂದ ಕೂಡಿರುವ ಭೀಮ ಮೊದಲಾದವರನ್ನು ನೋಡು.

**ಕುತಃ ಪರಬ್ರಹ್ಮದೃಶಾಂ ಸುಶುದ್ಧ-**
**ಸತ್ಕರ್ಮಣಾಂ ವಿಷ್ಣುಪರಾಯಣಾನಾಮ್ ।**
**ಪರೇಣ ಯೋಗೇನ ವಿಸೃಷ್ಟತನ್ವಾಂ**
**ದುಃಖಂ ಭವೇದ್ದೇವವರಾಧಿಪಾನಾಮ್ ॥ ೧೦೫ ॥**

**ಕುತಃ ಪರಬ್ರಹ್ಮದೃಶಾಂ ಸುಶುದ್ಧಸತ್ಕರ್ಮಣಾಂ ವಿಷ್ಣುಪರಾಯಣಾನಾಮ್ । ಪರೇಣ ಯೋಗೇನ ವಿಸೃಷ್ಟತನ್ವಾಂ ದುಃಖಂ ಭವೇತ್ ದೇವವರಾಧಿಪಾನಾಮ್ ॥ ೧೦೫ ॥**

**ಅರ್ಥ** :- **ಪರಬ್ರಹ್ಮದೃಶಾಂ** = ಪರಬ್ರಹ್ಮನ ಅಪರೋಕ್ಷವುಳ್ಳ **ಸುಶುದ್ಧ ಸತ್ಕರ್ಮಣಾಂ** = ಅತ್ಯಂತಶುದ್ಧವಾದ ಉತ್ತಮಕರ್ಮವುಳ್ಳ **ವಿಷ್ಣು ಪರಾಯಣಾನಾಂ** = ವಿಷ್ಣುವಿನ ಭಕ್ತರಾದ **ಪರೇಣ** = ಶ್ರೇಷ್ಠವಾದ **ಯೋಗೇನ** = ಯೋಗದಿಂದ **ವಿಸೃಷ್ಟತನ್ವಾಂ** = ದೇಹವನ್ನು ತೊರೆದ **ದೇವವರಾಧಿಪಾನಾಂ** = ದೇವಶ್ರೇಷ್ಠರುಗಳಿಗೆ **ಕುತಃ** = ಎಲ್ಲಿಂದ **ದುಃಖಂ** = ದುಃಖವು **ಭವೇತ್** = ಆದೀತು?

**ತಾತ್ಪರ್ಯ** :- ಪರಬ್ರಹ್ಮಾಪರೋಕ್ಷವನ್ನು ಹೊಂದಿದ, ಅತ್ಯಂತ ಶುದ್ಧವಾದ ಸತ್ಕರ್ಮಗಳಲ್ಲಿ ತೊಡಗಿದ, ವಿಷ್ಣುವನ್ನು ನಂಬಿದ, ಉತ್ತಮವಾದ ಯೋಗದಿಂದ ದೇಹತೊರೆದ, ದೇವಶ್ರೇಷ್ಠರುಗಳಾದ ಅವರಿಗೆ ದುಃಖವೆಂತು ಒದಗೀತು?.

**ಏತೇ ಹಿ ದೇವಪ್ರವರಾಃ ಪೃಥಿವ್ಯಾಂ**
**ಜಾತಾ ಭುವೋ ಭಾರಜಿಹೀರ್ಷುಮೀಶಮ್ ।**
**ಪ್ರತೋಷ್ಯ ತದ್ಭಾವಿತಬುದ್ಧಿಕರ್ಮಭಿಃ**
**ಪುನಶ್ಚ ತೇನೈವ ಸಹಾಪಿರೇ ದಿವಮ್ ॥ ೧೦೬ ॥**

**ಏತೇ ಹಿ ದೇವಪ್ರವರಾಃ ಪೃಥಿವ್ಯಾಂ ಜಾತಾಃ ಭುವಃ ಭಾರಜಿಹೀರ್ಷುಂ ಈಶಮ್ । ಪ್ರತೋಷ್ಯ ತದ್ಭಾವಿತಬುದ್ಧಿಕರ್ಮಭಿಃ ಪುನಃ ಚ ತೇನ ಏವ ಸಹ ಆಪಿರೇ ದಿವಮ್ ॥ ೧೦೬ ॥**

**ಅರ್ಥ** :- **ಏತೇ** = ಇವರು **ದೇವಪ್ರವರಾಃ ಹಿ** = ದೇವಶ್ರೇಷ್ಠರುಗಳೇ **ಪೃಥಿವ್ಯಾಂ** = ಭೂಮಿಯಲ್ಲಿ **ಜಾತಾಃ** = ಅವತರಿಸಿರುವವರು, **ಭುವಃ** = ಭೂಮಿಯ **ಭಾರಜಿಹೀರ್ಷುಂ** = ಭಾರವನ್ನು ನಾಶಪಡಿಸಲು ಇಚ್ಛಿಸುವ **ಈಶಂ** = ಸ್ವಾಮಿಯಾದ ಶ್ರೀಹರಿಯನ್ನು **ತದ್ಭಾವಿತಕರ್ಮಬುದ್ಧಿಭಿಃ** = ಅವನಲ್ಲೇ ಅರ್ಪಿತವಾದ ಕರ್ಮ ಹಾಗೂ ಬುದ್ಧಿಗಳಿಂದ **ಪ್ರತೋಷ್ಯ** = ಸಂತೋಷಪಡಿಸಿ **ಪುನಃ ಚ** = ಮತ್ತೆ **ತೇನ ಏವ ಸಹ** = ಅವನೊಂದಿಗೇ ಕೂಡಿ **ದಿವಂ** = ಸ್ವರ್ಗವನ್ನು **ಆಪಿರೇ** = ಹೊಂದಿರುವರು.

**ತಾತ್ಪರ್ಯ** :- ಇವರೆಲ್ಲ ಧರೆಗಿಳಿದು ಬಂದ ದೇವಶ್ರೇಷ್ಠರುಗಳು. ಭೂಭಾರಹರಣವನ್ನು ಬಯಸಿದ ಶ್ರೀಹರಿಯನ್ನು ಸಂತೋಷಪಡಿಸಿ ಅವನಲ್ಲಿ ಬುದ್ಧಿಯನ್ನು ತೊಡಗಿಸಿ, ಕರ್ಮಗಳನ್ನು ಸಮರ್ಪಿಸಿ ಇವರೆಲ್ಲ ಅವನೊಂದಿಗೆ ಮರಳಿ ಸ್ವರ್ಗವನ್ನು ಪಡೆದಿರುವರು.

### ದೇಹ ತೊರೆಯಲು ಧರ್ಮರಾಜನಿಗೆ ಸಂದೇಶ

**ನ ತೇ ನೃಪಾದ್ಯಾಪಿ ಹಿ ಮಾನುಷೋ ಗತೋ**
**ಭಾವಸ್ತತೋ ದ್ವೇಷ್ಟಿ ಸುಯೋಧನಾದೀನ್ ।**
**ನಿಮಜ್ಜ್ಯ ತದ್ವಿಷ್ಣುಪದೋದಕೇಽತ್ರ**
**ವಿಸೃಜ್ಯ ದೇಹಂ ಭಜ ದೇವಭಾವಮ್ ॥ ೧೦೭ ॥**

ನ ತೇ ನೃಪ ಅದ್ಯ ಅಪಿ ಹಿ ಮಾನುಷಃ ಗತಃ ಭಾವಃ ತತಃ ದ್ವೇಷ್ಟಿ ಸುಯೋಧನಾದೀನ್ । ನಿಮಜ್ಜ್ಯ ತತ್ ವಿಷ್ಣುಪದೋದಕೇ ಅತ್ರ ವಿಸೃಜ್ಯ ದೇಹಂ ಭಜ ದೇವಭಾವಮ್ ॥ ೧೦೭ ॥

**ಅರ್ಥ** :- **ನೃಪ** = ರಾಜನೇ! **ಅದ್ಯ ಅಪಿ** = ಈಗಲೂ ಸಹ **ತೇ** = ನಿನ್ನ **ಮಾನುಷಃ** = ಮನುಷ್ಯಸಂಬಂಧಿಯಾದ **ಭಾವಃ** = ಸ್ವಭಾವವು **ನ ಹಿ ಗತಃ** = ಹೋಗಿಯೇ ಇಲ್ಲ. **ತತಃ** = ಆದ್ದರಿಂದ **ಸುಯೋಧನಾದೀನ್** = ದುರ್ಯೋಧನಾದಿಗಳನ್ನು **ದ್ವೇಷ್ಟಿ** = ದ್ವೇಷಿಸುತ್ತಿರುವೆ. **ತತ್** = ಆದ್ದರಿಂದ **ಅತ್ರ** = ಇಲ್ಲಿ **ವಿಷ್ಣುಪದೋದಕೇ** = ವಿಷ್ಣುವಿನ ಪಾದೋದಕವಾದ ಗಂಗೆಯಲ್ಲಿ **ನಿಮಜ್ಜ್ಯ** = ಸ್ನಾನಮಾಡಿ **ದೇಹಂ** = ದೇಹವನ್ನು **ವಿಸೃಜ್ಯ** = ವಿಸರ್ಜಿಸಿ **ದೇವಭಾವಂ** = ದೇವಸ್ವಭಾವವನ್ನು **ಭಜ** = ಹೊಂದು.

**ತಾತ್ಪರ್ಯ :-** ರಾಜನೇ, ನಿನಗಿನ್ನೂ ಮನುಷ್ಯಭಾವ ಹೋಗಿಲ್ಲ, ಆದರಿಂದಾಗಿ ದುರ್ಯೋಧನಾದಿಗಳನ್ನು ದ್ವೇಷಿಸುತ್ತಿರುವಿ. ಆದ್ದರಿಂದ ಇಲ್ಲಿಯ ವಿಷ್ಣುಪಾದೋದಕವಾದ ಗಂಗಾಜಲದಲ್ಲಿ ಮಿಂದು ದೇಹವನ್ನು ತೊರೆದು ದೇವಸ್ವಭಾವವನ್ನು ಹೊಂದು.

**ದುರ್ಯೋಧನಾದಿಗಳದು ಕೃತಕ ಸ್ವರ್ಗ**

**ಸುಯೋಧನಾದ್ಯಾ ಯದಿಮೇ ಸುಪಾಪಾ**
**ಆರಬ್ಧಧರ್ಮಕ್ಷಯಮಾಪ್ಯ ನಿತ್ಯೇ ।**
**ನಿಃಶೇಷಸೌಖ್ಯೋಜ್ಝಿತನಿತ್ಯದುಃಖೇಽ-**
**ವಶಾಃ ಪತಿಷ್ಯಂತ್ಯಪುನರ್ನಿವೃತ್ತಾಃ ॥ ೧೦೮ ॥**

**ಸುಯೋಧನಾದ್ಯಾಃ ಯತ್ ಇಮೇ ಸುಪಾಪಾಃ ಆರಬ್ಧಧರ್ಮಕ್ಷಯಂ ಆಪ್ಯ ನಿತ್ಯೇ । ನಿಃಶೇಷಸೌಖ್ಯೋಜ್ಝಿತನಿತ್ಯದುಃಖೇ ಅವಶಾಃ ಪತಿಷ್ಯಂತಿ ಅಪುನರ್ನಿವೃತ್ತಾಃ ॥ ೧೦೮ ॥**

**ಅರ್ಥ :- ಯತ್** = ಯಾವ ಕಾರಣದಿಂದ **ಇಮೇ** = ಈ **ಸುಯೋಧನಾದ್ಯಾಃ** = ದುರ್ಯೋಧನಾದಿಗಳು **ಸುಪಾಪಾಃ** = ಅತ್ಯಂತ ಪಾಪಿಗಳೋ, **(ತತ್)** = ಆದ್ದರಿಂದ **ಆರಬ್ಧಕರ್ಮಕ್ಷಯಂ** = ಪ್ರಾರಬ್ಧಪುಣ್ಯ ಕ್ಷಯವನ್ನು **ಆಪ್ಯ** = ಹೊಂದಿ **ನಿಃಶೇಷಸೌಖ್ಯೋಜ್ಝಿತನಿತ್ಯದುಃಖೇ** = ಪರಿಪೂರ್ಣವಾಗಿ ಸುಖವೇ ಇಲ್ಲದ ನಿತ್ಯ ದುಃಖವಾದ **ನಿತ್ಯೇ** = ನಿತ್ಯನರಕದಲ್ಲಿ **ಅಪುನರ್ನಿವೃತ್ತಾಃ** = ಪುನಃ ಮರಳಿ ಬಾರದವರಾಗಿ **ಅವಶಾಃ (ಸಂತಃ)** = ವಿಷ್ಣುವಿಗೆ ವಶರಾದವರಾಗಿ **ಪತಿಷ್ಯಂತಿ** = ಬೀಳುವರು.

**ತಾತ್ಪರ್ಯ :-** ಈ ಮಹಾಪಾಪಿಗಳಾದ ದುರ್ಯೋಧನ ಮೊದಲಾದವರು ಪ್ರಾರಬ್ಧ ಪುಣ್ಯಕ್ಷಯವನ್ನು ಹೊಂದಿದ ಬಳಿಕ ಸಂಪೂರ್ಣವಾಗಿ ಸುಖಲೇಶವೂ ಇರದ ನಿತ್ಯದುಃಖಮಯವಾದ ನಿತ್ಯನರಕದಲ್ಲಿ ವಿಷ್ಣುವಶರಾಗಿ ಬೀಳುವರು. ಮತ್ತೆಂದೂ ಹಿಂತಿರುಗಿ ಬರುವವರಲ್ಲ.

### ದೇವಾಂಶರಿಗೆ ಮುಕ್ತಿ ಖಚಿತ

**ದೇವಾಂಶಜಾ ಯೇ ತು ಸಮಸ್ತಶಸ್ತೇ**
**ಸ್ವಮೂಲರೂಪಂ ಸಮವಾಪ್ಯ ಕಾಲೇ ।**
**ಸ್ವತಾರತಮ್ಯಾನುಸೃತಾಂ ವಿಮುಕ್ತಿಂ**
**ಪ್ರಾಪ್ಸ್ಯಂತಿ ನಾತ್ರಾಪಿ ವಿಚಾರ್ಯಮಸ್ತಿ ॥ ೧೦೯ ॥**

ದೇವಾಂಶಜಾಃ ಯೇ ತು ಸಮಸ್ತಶಃ ತೇ ಸ್ವಮೂಲರೂಪಂ ಸಮವಾಪ್ಯ ಕಾಲೇ । ಸ್ವತಾರತಮ್ಯಾನುಸೃತಾಂ ವಿಮುಕ್ತಿಂ ಪ್ರಾಪ್ಸ್ಯಂತಿ ನ ಅತ್ರ ಅಪಿ ವಿಚಾರ್ಯಂ ಅಸ್ತಿ ॥ ೧೦೯ ॥

**ಅರ್ಥ** :- **ಯೇ** = ಯಾರು **ದೇವಾಂಶಜಾಃ ತು** = ದೇವಾಂಶದಿಂದ ಅವತರಿಸಿರುವರೋ **ತೇ** = ಆ **ಸಮಸ್ತಶಃ** = ಎಲ್ಲರೂ **ಕಾಲೇ** = ಬ್ರಹ್ಮಪ್ರಳಯಕಾಲದಲ್ಲಿ **ಸ್ವಮೂಲರೂಪಂ** = ತಮ್ಮ ಮೂಲರೂಪವನ್ನು **ಸಮವಾಪ್ಯ** = ಹೊಂದಿ **ಸ್ವತಾರತಮ್ಯಾನುಸೃತಾಂ** = ತಮ್ಮ ತಾರತಮ್ಯಕ್ಕೆ ಅನುಗುಣವಾದ **ವಿಮುಕ್ತಿಂ** = ಮೋಕ್ಷವನ್ನು **ಪ್ರಾಪ್ಸ್ಯಂತಿ** = ಪಡೆಯುವರು. **ಅತ್ರ ಅಪಿ** = ಈ ವಿಷಯದಲ್ಲೂ ಸಹ **ವಿಚಾರ್ಯಂ** = ವಿಚಾರ ಮಾಡಬೇಕಾದದ್ದು **ನ ಅಸ್ತಿ** = ಇಲ್ಲ.

**ತಾತ್ಪರ್ಯ** :- ದೇವಾಂಶದಿಂದ ಸಂಭೂತರಾದವರು ಯಾರಿರುವರೋ ಅವರೆಲ್ಲರೂ ತಮ್ಮ ಮೂಲ ರೂಪವನ್ನು ಹೊಂದಿ ಪ್ರಳಯ ಕಾಲದಲ್ಲಿ ತಮ್ಮ ಯೋಗ್ಯತಾ ತಾರತಮ್ಯಕ್ಕೆ ಅನುರೂಪವಾದ ಮುಕ್ತಿಯನ್ನು ಪಡೆಯುವರು. ಈ ಬಗ್ಗೆ ಸಂಶಯಕ್ಕೆ ಎಡೆಯಿಲ್ಲ.

### ಗಂಗೆಯಲ್ಲಿ ದೇಹ ತೊರೆದ ಯುಧಿಷ್ಠಿರ

**ಇತ್ಯುಕ್ತ ಆಶ್ವೇವ ನಿಮಜ್ಯ ಗಂಗಾಂ**
**ಧರ್ಮಾತ್ಮಜಸ್ತಂ ಪ್ರವಿಸೃಜ್ಯ ದೇಹಮ್ ।**
**ಸದ್ಯೋ ಬಭೌ ದೈವಮವಾಪ್ಯ ಕಾಯಂ**
**ವಿಸೃಷ್ಟರೋಷಾದಿಸಮಸ್ತದೋಷಃ ॥ ೧೧೦ ॥**

ಇತಿ ಉಕ್ತಃ ಆಶು ಏವ ನಿಮಜ್ಯ ಗಂಗಾಂ ಧರ್ಮಾತ್ಮಜಃ ತಂ ಪ್ರವಿಸೃಜ್ಯ ದೇಹಮ್ । ಸದ್ಯಃ ಬಭೌ ದೈವಂ ಅವಾಪ್ಯ ಕಾಯಂ ವಿಸೃಷ್ಟರೋಷಾದಿಸಮಸ್ತದೋಷಃ ॥ ೧೧೦ ॥

**ಅರ್ಥ** :- **ಇತಿ** = ಹೀಗೆ **ಉಕ್ತಃ** = ಹೇಳಲ್ಪಟ್ಟ **ಧರ್ಮಾತ್ಮಜಃ** = ಧರ್ಮಪುತ್ರನಾದ ಯುಧಿಷ್ಠಿರನು **ಆಶು ಏವ** = ಕೂಡಲೇ **ಗಂಗಾಂ** = ಗಂಗೆಯನ್ನು (ಕುರಿತು ಹೋಗಿ) **ನಿಮಜ್ಯ** = ಸ್ನಾನಮಾಡಿ **ತಂ** = ಆ **ದೇಹಂ** = ದೇಹವನ್ನು **ಪ್ರವಿಸೃಜ್ಯ** = ತೊರೆದು, **ಸದ್ಯಃ** = ಕೂಡಲೇ **ದೈವಂ** = ದಿವ್ಯವಾದ **ಕಾಯಂ** = ದೇಹವನ್ನು **ಅವಾಪ್ಯ** = ಹೊಂದಿ **ವಿಸೃಷ್ಟರೋಷಾದಿಸಮಸ್ತದೋಷಃ (ಸನ್)** = ರೋಷ ಮೊದಲಾದ ಎಲ್ಲ ದೋಷಗಳನ್ನು ಕಳೆದುಕೊಂಡವನಾಗಿ **ಬಭೌ** = ಶೋಭಿಸಿದನು.

**ತಾತ್ಪರ್ಯ** :- ದೇವತೆಗಳು ಹೀಗೆನ್ನಲು ಧರ್ಮರಾಜ ಕೂಡಲೇ ಅಲ್ಲಿ ಗಂಗೆಯಲ್ಲಿ ಮಿಂದು ತನ್ನ ಆ ದೇಹವನ್ನು ತೊರೆದ. ಆ ಕ್ಷಣದಲ್ಲೇ ದಿವ್ಯದೇಹವನ್ನು ಹೊಂದಿ ಕೋಪ ಮೊದಲಾದ ಸಕಲ ದೋಷಗಳನ್ನು ಕಳೆದುಕೊಂಡು ಶೋಭಿಸಿದ.

### ಧರ್ಮರಾಜ ಕಂಡ ಬಂಧುಜನರು

**ಸ ತು ಪ್ರಪಶ್ಯನ್ ಸ್ವಜನಂ ಸಮಸ್ತಂ**
**ಸ್ವಮೂಲರೂಪಾತಿಸಮೀಪಸಂಸ್ಥಮ್ ।**
**ದದರ್ಶ ಭೀಮಂ ಚ ಮರುತ್ಸಮೀಪೇ**
**ಮಧ್ಯೇ ಜ್ವಲಂತಂ ಮರುತಾಂ ಗಣಸ್ಯ ॥ ೧೧೧ ॥**

**ಸಃ ತು ಪ್ರಪಶ್ಯನ್ ಸ್ವಜನಂ ಸಮಸ್ತಂ ಸ್ವಮೂಲರೂಪಾತಿಸಮೀಪಸಂಸ್ಥಮ್ । ದದರ್ಶ ಭೀಮಂ ಚ ಮರುತ್ಸಮೀಪೇ ಮಧ್ಯೇ ಜ್ವಲಂತಂ ಮರುತಾಂ ಗಣಸ್ಯ ॥ ೧೧೧ ॥**

**ಅರ್ಥ** :- **ಸಃ ತು** = ಅವನಾದರೋ **ಸ್ವಮೂಲರೂಪಾತಿಸಮೀಪಸಂಸ್ಥಂ** = ತಮ್ಮ ಮೂಲರೂಪದ ಸಮೀಪದಲ್ಲಿ ಮಂಡಿಸಿದ **ಸಮಸ್ತಂ** = ಎಲ್ಲ **ಸ್ವಜನಂ** = ತನ್ನ ಜನರನ್ನು **ಪ್ರಪಶ್ಯನ್** = ನೋಡಿದವನಾಗಿ **ಚ** = ಮತ್ತು **ಮರುತ್ಸಮೀಪೇ** = ವಾಯುವಿನ ಸಮೀಪದಲ್ಲಿ **ಮರುತಾಂ** = ಮರುತ್ತುಗಳ **ಗಣಸ್ಯ** = ಗುಂಪಿನ **ಮಧ್ಯೇ** = ಮಧ್ಯದಲ್ಲಿ **ಜ್ವಲಂತಂ** = ಕಂಗೊಳಿಸುತ್ತಿದ್ದ **ಭೀಮಂ** = ಭೀಮನನ್ನು **ದದರ್ಶ** = ಕಂಡನು.

**ತಾತ್ಪರ್ಯ** :- ಧರ್ಮರಾಜ ತನ್ನ ಸಕಲ ಬಂಧುಜನರೂ ಅವರ ಮೂಲರೂಪದ ಅತ್ಯಂತ ಸಮೀಪದಲ್ಲಿ ಇರುವುದನ್ನು ಕಂಡ ; ಮರುದ್ಗಣದ ಮಧ್ಯದಲ್ಲಿ ವಾಯುವಿನ ಬಳಿಯಲ್ಲಿ ಕಂಗೊಳಿಸುತ್ತಿದ್ದ ಭೀಮನನ್ನು ಕಂಡ.

### ಭೀಮನ ಪಕ್ಕದಲ್ಲಿ ದ್ರೌಪದಿ

**ದದರ್ಶ ಕೃಷ್ಣಾಮಪಿ ತತ್ಸಮೀಪೇ**
**ಶ್ರಿಯಾ ಜ್ವಲಂತೀಂ ಸಮತೀತ್ಯ ಚಾನ್ಯಾಃ ।**
**ಸ್ಪ್ರಷ್ಟುಂ ಚ ಸಂಸ್ಕಾರವಶಾದಿಯೇಷ**
**ನಿಷಿಧ್ಯ ತಂ ಪ್ರಾಹ ಸುರಾಧಿರಾಜಃ ॥ ೧೧೨ ॥**

ದದರ್ಶ ಕೃಷ್ಣಾಂ ಅಪಿ ತತ್ಸಮೀಪೇ ಶ್ರಿಯಾ ಜ್ವಲಂತೀಂ ಸಮತೀತ್ಯ ಚ ಅನ್ಯಾಃ । ಸ್ಪ್ರಷ್ಟುಂ ಚ ಸಂಸ್ಕಾರವಶಾತ್ ಇಯೇಷ ನಿಷಿಧ್ಯ ತಂ ಪ್ರಾಹ ಸುರಾಧಿರಾಜಃ ॥ ೧೧೨ ॥

**ಅರ್ಥ :-** **ತತ್ಸಮೀಪೇ** = ಆ ಭೀಮನ ಸಮೀಪದಲ್ಲಿ **ಅನ್ಯಾಃ ಚ** = ಇತರದೇವತಾಸ್ತ್ರೀಯರನ್ನು ಸಹ **ಸಮತೀತ್ಯ** = ಮೀರಿಸಿ **ಶ್ರಿಯಾ** = ಕಾಂತಿಯಿಂದ **ಜ್ವಲಂತೀಂ** = ಕಂಗೊಳಿಸುತ್ತಿದ್ದ **ಕೃಷ್ಣಾಂ ಅಪಿ** = ದ್ರೌಪದಿಯನ್ನೂ ಸಹ **ದದರ್ಶ** = ಕಂಡನು. **ಸಂಸ್ಕಾರವಶಾತ್** = ಸಂಸ್ಕಾರದ ವಶದಿಂದಾಗಿ **ಸ್ಪ್ರಷ್ಟುಂ ಚ** = ಸ್ಪರ್ಶಿಸಲು ಸಹ **ಇಯೇಷ** = ಬಯಸಿದನು. **ತಂ** = ಅವನನ್ನು **ನಿಷಿಧ್ಯ** = ನಿಷೇಧಿಸಿ **ಸುರಾಧಿರಾಜಃ** = ದೇವತೆಗಳ ರಾಜನಾದ ಇಂದ್ರನು **ಪ್ರಾಹ** = ನುಡಿದನು.

**ತಾತ್ಪರ್ಯ :-** ಆ ಭೀಮನ ಬಳಿಯಲ್ಲಿ ಧರ್ಮರಾಜ ಇತರರೆಲ್ಲರನ್ನೂ ಮೀರಿಸಿ ಕಾಂತಿಯಿಂದ ಬೆಳಗುತ್ತಿದ್ದ ದ್ರೌಪದಿಯನ್ನು ಕಂಡ. ಸಂಸ್ಕಾರ ವಶದಿಂದಾಗಿ ಧರ್ಮರಾಜ ಅವಳನ್ನು ಸ್ಪರ್ಶಿಸಲು ಇಚ್ಛಿಸಿದ. ದೇವೇಂದ್ರ ಅವನನ್ನು ತಡೆದು ನುಡಿದ.

### ದ್ರೌಪದಿ ಯಾರು?

**ಏಷಾ ಹಿ ಸಾಕ್ಷಾಜ್ಜಗತಾಂ ಪ್ರಿಯಸ್ಯ**
**ಪ್ರಾಣಾತ್ಮನೋ ಜೀವವರೇಶ್ವರಸ್ಯ ।**
**ಪ್ರಾಣಪ್ರಿಯಾ ಶ್ರೀರಿತಿ ನಾಮ ಯಸ್ಯಾಃ**
**ಶಮಾತ್ಮಕೇಽಸ್ಮಿನ್ ರಮತೇ ಸದೇಷಾ ॥ ೧೧೩ ॥**

ಏಷಾ ಹಿ ಸಾಕ್ಷಾತ್ ಜಗತಾಂ ಪ್ರಿಯಸ್ಯ ಪ್ರಾಣಾತ್ಮನಃ ಜೀವವರೇಶ್ವರಸ್ಯ । ಪ್ರಾಣಪ್ರಿಯಾ ಶ್ರೀಃ ಇತಿ ನಾಮ ಯಸ್ಯಾಃ ಶಮಾತ್ಮಕೇ ಅಸ್ಮಿನ್ ರಮತೇ ಸದಾ ಏಷಾ ॥ ೧೧೩ ॥

**ಅರ್ಥ** :- **ಏಷಾ** = ಇವಳು **ಜಗತಾಂ** = ಜಗತ್ತುಗಳಿಗೆ **ಪ್ರಿಯಸ್ಯ** = ಪ್ರಿಯನಾದ **ಪ್ರಾಣಾತ್ಮನಃ** = ಪ್ರಾಣಸ್ವರೂಪನಾದ **ಜೀವವರೇಶ್ವರಸ್ಯ** = ಜೀವೋತ್ತಮನಾದ ವಾಯುವಿನ **ಸಾಕ್ಷಾತ್** = ನಿಯತಳಾದ **ಪ್ರಾಣಪ್ರಿಯಾ** = ಪ್ರಾಣಪ್ರಿಯಳು. **ಯಸ್ಯಾಃ** = ಯಾವ ವಾಯುಪ್ರಿಯಳ **ನಾಮ** = ಹೆಸರು **ಶ್ರೀಃ** = ಶ್ರೀ **ಇತಿ** = ಎಂದೋ, **(ಸಾ) ಏಷಾ** = ಆ ಇವಳು **ಅಸ್ಮಿನ್** = ಈ **ಶಮಾತ್ಮಕೇ** = ಸುಖರೂಪನಾದ ವಾಯುವಿನಲ್ಲಿ **ಸದಾ** = ಯಾವಾಗಲೂ **ರಮತೇ** = ರಮಿಸುವಳು.

**ತಾತ್ಪರ್ಯ** :- 'ಈ ಭಾರತಿಯು ಜಗತ್ತುಗಳಿಗೆ ಪ್ರಿಯನೂ, ಮುಖ್ಯ ಪ್ರಾಣಸ್ವರೂಪನೂ, ಜೀವೋತ್ತಮನೂ ಆದ ವಾಯುವಿನ ಪ್ರಾಣಪ್ರಿಯೆ, ಸುಖರೂಪನಾದ ಪ್ರಾಣನಲ್ಲಿ ಸದಾ ರಮಿಸುವುದರಿಂದ ಇವರಿಗೆ ಶ್ರೀ ಎಂದು ಹೆಸರು'

**ಯುಷ್ಮಚ್ಚತುರ್ದೇಹಗತಸ್ಯ ವಾಯೋ-**
**ರ್ವಾಯುಪ್ರಿಯಾ ಭೀಮತನೋಸ್ತಥೈವ ।**
**ಭೋಗಾಯ ಸೃಷ್ಟಾ ಪುರುಷೋತ್ತಮೇನ**
**ಯುಷ್ಮತ್ಪ್ರಿಯಾರ್ಥಂ ಭವತಾಂ ಚ ದಾರೈಃ ॥ ೧೧೪ ॥**

ಯುಷ್ಮಚ್ಚತುರ್ದೇಹಗತಸ್ಯ ವಾಯೋಃ ವಾಯುಪ್ರಿಯಾ ಭೀಮತನೋಃ ತಥಾ ಏವ । ಭೋಗಾಯ ಸೃಷ್ಟಾ ಪುರುಷೋತ್ತಮೇನ ಯುಷ್ಮತ್ಪ್ರಿಯಾರ್ಥಂ ಭವತಾಂ ಚ ದಾರೈಃ ॥ ೧೧೪ ॥

**ಅರ್ಥ** :- **ಯುಷ್ಮಚ್ಚತುರ್ದೇಹಗತಸ್ಯ** = ನಿಮ್ಮ ನಾಲ್ವರ ದೇಹದಲ್ಲಿ ನೆಲೆಸಿದ್ದ **ತಥಾ ಏವ** = ಹಾಗೆಯೇ **ಭೀಮಾತ್ಮನೋಃ** = ಭೀಮರೂಪದ **ವಾಯೋಃ** = ವಾಯುದೇವರ **ಭೋಗಾಯ** = ಭೋಗಕ್ಕೋಸ್ಕರ **ಯುಷ್ಮತ್ಪ್ರಿಯಾರ್ಥಂ** = ನಿಮ್ಮೆಲ್ಲರ ಪ್ರೀತಿಗೋಸ್ಕರ **ಭವತಾಂ** = ನಿಮ್ಮ **ದಾರೈಃ (ಸಹ) ಚ** = ಪತ್ನಿಯರೊಂದಿಗೂ **ವಾಯುಪ್ರಿಯಾ** = ವಾಯು ಪತ್ನಿಯಾದ ಭಾರತಿಯು **ಪುರುಷೋತ್ತಮೇನ** = ಪುರುಷೋತ್ತಮನಾದ ಶ್ರೀಹರಿಯಿಂದ **ಸೃಷ್ಟಾ** = ಸೃಷ್ಟಳಾದವಳು.

**ತಾತ್ಪರ್ಯ** :- ನಿಮ್ಮ ನಾಲ್ವರ ದೇಹದಲ್ಲಿ ಪ್ರವೇಶಿಸಿದ್ದ ವಾಯುವಿಗೂ, ಆದರಂತೆ ಭೀಮರೂಪದ ವಾಯುವಿನ ಭೋಗಕ್ಕೋಸ್ಕರವಾಗಿ, ನಿಮ್ಮೆಲ್ಲರ

ಪ್ರೀತಿಗೋಸ್ಕರ ನಿಮ್ಮ ಪತ್ನಿಯರೊಂದಿಗೂ ಕೂಡಿದವಳಾಗಿ ವಾಯುಪತ್ನಿಯಾದ ಇವಳು ಪುರುಷೋತ್ತಮನಾದ ಶ್ರೀಹರಿಯಿಂದ ಸೃಷ್ಟಳಾಗಿದ್ದಳು.

**ಪ್ರೀತಿಸ್ತತೋ ಹ್ಯಭ್ಯಧಿಕಾ ಬಭೂವ**
**ಭೀಮಸ್ಯ ಚಾಸ್ಯಾಸ್ತದನು ಸ್ಮ ಪಾರ್ಥೇ ।**
**ತತೋ ಭವತ್ಸ್ವೇವ ಯಥಾಕ್ರಮೇಣ**
**ಗುಣಾನುಸಾರೇಣ ಸಮೀರಣಸ್ಯ ॥ ೧೧೫ ॥**

**ಪ್ರೀತಿಃ ತತಃ ಹಿ ಅಭ್ಯಧಿಕಾ ಬಭೂವ ಭೀಮಸ್ಯ ಚ ಅಸ್ಯಾಃ ತದನು ಸ್ಮ ಪಾರ್ಥೇ । ತತಃ ಭವತ್ಸು ಏವ ಯಥಾಕ್ರಮೇಣ ಗುಣಾನುಸಾರೇಣ ಸಮೀರಣಸ್ಯ ॥ ೧೧೫ ॥**

**ಅರ್ಥ** :- **ತತಃ** = ಆದ್ದರಿಂದ **ಅಸ್ಯಾಃ** = ಈ ದ್ರೌಪದಿಗೆ **ಭೀಮಸ್ಯ** = ಭೀಮನ ವಿಷಯದಲ್ಲಿ **ಪ್ರೀತಿಃ** = ಪ್ರೀತಿಯು **ಅಭ್ಯಧಿಕಾ ಹಿ** = ಅತ್ಯಂತ ಅಧಿಕವೇ **ಬಭೂವ** = ಆಯಿತು. **ಚ** = ಮತ್ತು **ತದನು** = ಭೀಮನ ನಂತರ **ಪಾರ್ಥೇ** = ಅರ್ಜುನನಲ್ಲಿ **ತತಃ** = ಬಳಿಕ **ಭವತ್ಸು** = ನಿಮ್ಮಲ್ಲಿ (ಯುಧಿಷ್ಠಿರ ನಕುಲ ಸಹದೇವರಲ್ಲಿ) **ಸಮೀರಣಸ್ಯ** = ಸರ್ವಪ್ರೇರಕನಾದ ವಾಯುವಿನ **ಯಥಾಕ್ರಮೇಣ** = ಕ್ರಮವಾದ **ಗುಣಾನುಸಾರೇಣ ಏವ** = ವಿಶೇಷಾವೇಶಗುಣಕ್ಕೆ ತಕ್ಕಂತೆಯೇ **ಅಸ್ಯಾಃ** = ಇವಳ **ಪ್ರೀತಿಃ** = ಪ್ರೀತಿಯು **ಬಭೂವ** = ಆಯಿತು.

**ತಾತ್ಪರ್ಯ** :- ಆದರಿಂದಾಗಿ ಇವಳು ಭೀಮನಿಗೆ ಅತ್ಯಂತ ಪ್ರೀತಿಪಾತ್ರಳಾಗಿದ್ದಳು. ಅನಂತರ ಅರ್ಜುನನಲ್ಲೂ ಅನಂತರ ನಿಮ್ಮಲ್ಲೂ ವಾಯುದೇವರ ಆವೇಶಕ್ಕನುಗುಣವಾಗಿ ಕ್ರಮವಾಗಿ ಪ್ರೀತಿ ಹೊಂದಿದ್ದಳು.

**ಏಷಾ ಹಿ ಸಾ ಶುದ್ಧತನುಃ ಪ್ರಜಾತಾ**
**ಶಚ್ಯಾದಿಯೋಗಾಪಗತಾಽಗ್ರ್ಯದೇಹಾ ।**
**ಯೂಯಂ ಚ ಸರ್ವೇ ಮರುತೋ ವಿಶೇಷ-**
**ಸಂಯೋಗಹೀನಾಃ ಸ್ವಶರೀರಸಂಸ್ಥಾಃ ॥ ೧೧೬ ॥**

ಏಷಾ ಹಿ ಸಾ ಶುದ್ಧತನುಃ ಪ್ರಜಾತಾ ಶಚ್ಯಾದಿಯೋಗಾಪಗತಾ ಅಗ್ರ್ಯದೇಹಾ । ಯೂಯಂ ಚ ಸರ್ವೇ ಮರುತಃ ವಿಶೇಷಸಂಯೋಗಹೀನಾಃ ಸ್ವಶರೀರ ಸಂಸ್ಥಾಃ ॥ ೧೧೬ ॥

**ಅರ್ಥ** :- **ಸಾ** = (ನಿಮ್ಮ ಪತ್ನಿಯರೊಂದಿಗೆ ಸೃಷ್ಟಳಾದ) ಆ **ಏಷಾ** = ಈ ದ್ರೌಪದಿಯು (**ಇದಾನೀಂ**) = ಈಗ **ಶುದ್ಧತನುಃ** = (ಅನ್ಯಸಂಬಂಧವಿಲ್ಲದ) ಶುದ್ಧದೇಹದವಳಾಗಿ **ಪ್ರಜಾತಾ** = ಆಗಿರುವಳು. **ಹಿ** = ಯಾವ ಕಾರಣದಿಂದ **ಶಚ್ಯಾದಿಯೋಗಾಪಗತಾ** = ಶಚಿ ಮೊದಲಾದವರ ಸಂಪರ್ಕದಿಂದ ರಹಿತಳಾಗಿವಳೋ (**ಅತಃ ಏವ**) = ಆದ್ದರಿಂದಲೇ **ಅಗ್ರ್ಯದೇಹಾ** = ಶ್ರೇಷ್ಠದೇಹದವಳಾಗಿರುವಳು. **ಯೂಯಂ** = ನೀವು **ಸರ್ವೇ ಚ** = ಎಲ್ಲರೂ ಸಹ **ಮರುತಃ** = ವಾಯುವಿನ **ವಿಶೇಷಸಂಯೋಗಹೀನಾಃ** = ವಿಶೇಷವಾದ ಆವೇಶರಹಿತರಾದವರು **ಸ್ವಶರೀರಸಂಸ್ಥಾಃ** = ನಿಮ್ಮ ನಿಮ್ಮ ದೇಹಗಳಲ್ಲಿ ನೆಲೆಸಿರುವವರು.

**ತಾತ್ಪರ್ಯ** :- ಈಗ ಈ ದ್ರೌಪದಿಯು ಶಚಿ ಮೊದಲಾದವರ ಆವೇಶವಿಲ್ಲದಿರುವ ಉತ್ತಮ ದೇಹವನ್ನು ಹೊಂದಿರುವ ಶುದ್ಧ ಭಾರತೀ ರೂಪಳಾಗಿರುವಳು. ಆದರಂತೆ ನೀವೆಲ್ಲರೂ ವಾಯುದೇವರ ವಿಶೇಷಾವೇಶ ರಹಿತರಾಗಿ ನಿಮ್ಮ ನಿಮ್ಮ ದೇಹಗಳಲ್ಲಿ ಇರುವಿರಿ.

**ಸ್ಪರ್ಶೇಽಪಿ ನಾಸ್ಯಾಃ ಪವಮಾನಪತ್ನ್ಯಾಃ**
**ಸುಪೂತತಾಽಲಂ ಭವತಾಮಿದಾನೀಮ್ ।**
**ನ ಚೋತ್ತರತ್ರಾಪಿ ಭವೇತ್ ಕಥಂಚಿ-**
**ದ್ದಿವೌಕಸಾಂ ಮಾನುಷದೇಹಿನೋ ಯಥಾ ॥ ೧೧೭ ॥**

ಸ್ಪರ್ಶೇ ಅಪಿ ನ ಅಸ್ಯಾಃ ಪವಮಾನಪತ್ನ್ಯಾಃ ಸುಪೂತತಾ ಅಲಂ ಭವತಾಂ ಇದಾನೀಮ್ । ನ ಚ ಉತ್ತರತ್ರ ಅಪಿ ಭವೇತ್ ಕಥಂಚಿತ್ ದಿವೌಕಸಾಂ ಮಾನುಷದೇಹಿನಃ ಯಥಾ ॥ ೧೧೭ ॥

**ಅರ್ಥ** :- (**ತಸ್ಮಾತ್**) = ಆದ್ದರಿಂದ **ಅಸ್ಯಾಃ** = ಈ **ಪವಮಾನಪತ್ನ್ಯಾಃ** = ಪವಮಾನನ ಪತ್ನಿಯ **ಸ್ಪರ್ಶೇ ಅಪಿ** = ಸ್ಪರ್ಶದಲ್ಲೂ ಸಹ **ಇದಾನೀಂ** = ಈಗ **ಭವತಾಂ** = ನಿಮ್ಮ **ಸುಪೂತತಾ** = ಅತ್ಯಂತ ಪವಿತ್ರತೆಯು **ನ ಅಲಂ** = ಸಾಕಾಗದು. **ಚ** = ಮತ್ತು **ಉತ್ತರತ್ರ ಅಪಿ** = ಮುಂದೆಯೂ ಸಹ **ಕಥಂಚಿತ್** = ಹೇಗೂ **ನ ಭವೇತ್** = ಆಗದು. **ಯಥಾ** = ಹೇಗೆ **ದಿವೌಕಸಾಂ** = ದೇವಲೋಕದವರಿಗೆ **ಮಾನುಷದೇಹಿನಃ** = ಮನುಷ್ಯದೇಹದವರ **ಸ್ಪರ್ಶೇ** = ಸ್ಪರ್ಶದಲ್ಲಿ **ನ ಅಲಂ** = ಯೋಗ್ಯತೆ ಇಲ್ಲವೋ, (**ತಥಾ**) = ಹಾಗೆ.

**ತಾತ್ಪರ್ಯ** :- ಆದ್ದರಿಂದ ವಾಯುಪತ್ನಿಯಾದ ಇವಳನ್ನು ಸ್ಪರ್ಶ ಮಾಡುವುದಕ್ಕೋಸ್ಕರ ಯೋಗ್ಯವಾದ ಶುದ್ಧಿ ನಿಮಗೆ ಇಲ್ಲ. ಮುಂದೆಯೂ ಅದು ನಿಮಗೆ ಸರ್ವಥಾ ಒದಗುವುದಿಲ್ಲ. ದೇವತೆಗಳ ಸ್ಪರ್ಶ ಯೋಗ್ಯತೆ ಮನುಷ್ಯದೇಹಿಗಳಿಗೆ ಹೇಗೆ ಇರದೋ ಹಾಗೆ.

### ಧರ್ಮರಾಜನಿಗೆ ಮೂಲರೂಪಪ್ರಾಪ್ತಿ

**ಇತೀರಿತಂ ತಂ ಪ್ರತಿಸನ್ನಿವೃತ್ತಂ**
**ವಿನಾಶಯನ್ ಮಾನುಷವಾಸನಾಂ ಸ್ವಯಮ್ ।**
**ಸಮಾಶ್ಲಿಷಚ್ಛುದ್ಧತನುಃ ಸ್ತನೋತ್ಥೋ**
**ಧರ್ಮೋ ಹರೇಃ ಸೋಽಭವದಾಶು ತತ್ಸಮಃ ॥ ೧೧೮ ॥**

**ಇತಿ ಈರಿತಂ ತಂ ಪ್ರತಿಸನ್ನಿವೃತ್ತಂ ವಿನಾಶಯನ್ ಮಾನುಷವಾಸನಾಂ ಸ್ವಯಮ್ । ಸಮಾಶ್ಲಿಷತ್ ಶುದ್ಧತನುಃ ಸ್ತನೋತ್ಥಃ ಧರ್ಮಃ ಹರೇಃ ಸಃ ಅಭವತ್ ಆಶು ತತ್ಸಮಃ ॥ ೧೧೮ ॥**

**ಅರ್ಥ** :- **ಹರೇಃ** = ಹರಿಯ **ಸ್ತನೋತ್ಥಃ** = (ಬಲ)ಸ್ತನದಿಂದ ಹುಟ್ಟಿದ **ಸ್ವಯಂ** = ಸಾಕ್ಷಾತ್ **ಧರ್ಮಃ** = ಯಮಧರ್ಮನು (ಇಂದ್ರೇಣ) = ಇಂದ್ರನಿಂದ **ಇತಿ** = ಹೀಗೆ **ಈರಿತಂ** = ಹೇಳಲ್ಪಟ್ಟವನಾಗಿ **ಪ್ರತಿಸನ್ನಿವೃತ್ತಂ** = ಹಿಂದೆ ಸರಿದ **ತಂ** = ಆ ಯುಧಿಷ್ಠಿರನನ್ನು **ಮಾನುಷ ವಾಸನಾಂ** = ಮನುಷ್ಯಸಂಸ್ಕಾರವನ್ನು **ವಿನಾಶಯನ್ (ಸನ್)** = ವಿನಾಶಪಡಿಸುವವನಾಗಿ **ಸಮಾಶ್ಲಿಷತ್** = ಗಾಢವಾಗಿ ಆಲಿಂಗಿಸಿದನು. **ಸಃ** = ಆ ಧರ್ಮರಾಜನು **ಆಶು** = ಕೂಡಲೇ **ಶುದ್ಧತನುಃ (ಸನ್)** = ಶುದ್ಧದೇಹದವನಾಗಿ **ತತ್ಸಮಃ** = ಆ ಯಮನಿಗೆ ಸಮಾನನಾಗಿ **ಅಭವತ್** = ಆದನು.

**ತಾತ್ಪರ್ಯ** :- ಇಂದ್ರ ಹೀಗೆ ತಿಳಿಸಲು ಧರ್ಮರಾಜ ಹಿಂದೆ ಸರಿದ. ಅವನಲ್ಲಿದ್ದ ಮಾನುಷ ವಾಸನೆಯನ್ನು ಕಳೆಯಲೆಂದು ಶ್ರೀಹರಿಯ ಬಲಸ್ತನದಿಂದ ಉದ್ಭವಿಸಿದ ಶುದ್ಧ ದೇಹನಾದ ಯಮಧರ್ಮ ಸ್ವತಃ ಅವನನ್ನು ಗಾಢವಾಗಿ ಆಲಿಂಗಿಸಿದ. ಕೂಡಲೇ ಧರ್ಮರಾಜ ಯಮಧರ್ಮನಿಗೆ ಸಮಾನನಾದ.

ದೇವಾಂಶರ ಮೂಲರೂಪಪ್ರಾಪ್ತಿ

**ತತಸ್ತು ಪಾರ್ಥಾ ಅಖಿಲಾಃ ಸ್ವಮೂಲ-**
**ರೂಪೈಃ ಸಹೈವಾವಿವಿಶುರ್ಮುದಾऽನ್ವಿತಾಃ ।**
**ಸ್ವೀಯಾನಿ ಧಾಮಾನಿ ತತೋऽಪ್ಯನೂನ-**
**ಭೋಗಾಃ ಸದಾರಾ ನ್ಯವಸಂಶ್ಚ ತತ್ರ ॥ ೧೧೯ ॥**

ತತಃ ತು ಪಾರ್ಥಾಃ ಅಖಿಲಾಃ ಸ್ವಮೂಲರೂಪೈಃ ಸಹ ಏವ ಆವಿವಿಶುಃ ಮುದಾ ಅನ್ವಿತಾಃ । ಸ್ವೀಯಾನಿ ಧಾಮಾನಿ ತತಃ ಅಪಿ ಅನೂನಭೋಗಾಃ ಸದಾರಾಃ ನ್ಯವಸಂನ್ ಚ ತತ್ರ ॥ ೧೧೯ ॥

**ಅರ್ಥ** :- **ತತಃ** = ಬಳಿಕ **ಅಖಿಲಾಃ** = ಎಲ್ಲ **ಪಾರ್ಥಾಃ ತು** = ಪಾಂಡವರಾದರೋ **ಸ್ವಮೂಲರೂಪೈಃ** = ತಮ್ಮ ಮೂಲರೂಪಗಳಿಂದ **ಸಹ ಏವ** = ಜೊತೆಗೂಡಿಯೇ **ಮುದಾ** = ಆನಂದದಿಂದ **ಅನ್ವಿತಾಃ** = ಕೂಡಿದವರಾಗಿ **ಸ್ವೀಯಾನಿ** = ತಮ್ಮ **ಧಾಮಾನಿ** = ಸ್ಥಾನಗಳನ್ನು **ಆವಿವಿಶುಃ** = ಪ್ರವೇಶಿಸಿದರು. **ತತಃ ಅಪಿ** = ಆ ಮೂಲರೂಪದಿಂದಲೂ ಸಹ **ಅನೂನಭೋಗಾಃ** = ಭೋಗಗಳ ಕೊರತೆಯಿಲ್ಲದವರಾಗಿ **ಸದಾರಾಃ** = ಪತ್ನೀಸಮೇತರಾಗಿ **ತತ್ರ ಚ** = ಅಲ್ಲಿಯೂ ಸಹ **ನ್ಯವಸನ್** = ವಾಸಿಸಿದರು.

**ತಾತ್ಪರ್ಯ** :- ಬಳಿಕ ಸಕಲ ಪಾಂಡವರು ಸಂತಸದಿಂದ ಕೂಡಿದವರಾಗಿ ಮೂಲರೂಪಗಳೊಂದಿಗೆ ತಮ್ಮ ಲೋಕಗಳನ್ನು ಪ್ರವೇಶಿಸಿದರು. ಅಲ್ಲಿ ಕೊರತೆ ಎನ್ನಿಸದ ಭೋಗದಿಂದ ಕೂಡಿದವರಾಗಿ ಸಪತ್ನೀಕರಾಗಿ ನೆಲೆಸಿದರು.

ಪಾಂಡವರಿಗೆ ಮತ್ತೆ ಕೃಷ್ಣ ಸಮಾಗಮ

**ತತ್ರಾಪಿ ಕೃಷ್ಣೇನ ಸಮಾಗಮೋऽಭೂತ್**
**ಪುರೇವ ತೇಷಾಮಪಿ ತತ್ಪರಾಣಾಮ್ ।**
**ಚಿಕ್ರೀಡ ಏಭಿಃ ಸಹಿತಸ್ತಥೈವ**
**ಕೃಷ್ಣೋऽಪಿ ತದ್ವತ್ ಸರಥೋऽರ್ಜುನೇನ ॥ ೧೨೦ ॥**

**ತತ್ರ ಅಪಿ ಕೃಷ್ಣೇನ ಸಮಾಗಮಃ ಅಭೂತ್ ಪುರಾ ಇವ ತೇಷಾಂ ಅಪಿ ತತ್ಪರಾಣಾಮ್ । ಚಿಕ್ರೀಡೇ ಏಭಿಃ ಸಹಿತಃ ತಥಾ ಏವ ಕೃಷ್ಣಃ ಅಪಿ ತದ್ವತ್ ಸರಥಃ ಅರ್ಜುನೇನ ॥೧೨೦॥**

**ಅರ್ಥ** :- **ತತ್ರ ಅಪಿ** = ಅಲ್ಲಿಯೂ ಸಹ **ತತ್ಪರಾಣಾಂ** = ಆ ಕೃಷ್ಣನ ಭಕ್ತರಾದ **ತೇಷಾಂ ಅಪಿ** = ಅವರಿಗೂ ಸಹ **ಪುರಾ ಇವ** = ಹಿಂದಿನಂತೆ **ಕೃಷ್ಣೇನ** = ಕೃಷ್ಣನೊಂದಿಗೆ **ಸಮಾಗಮಃ** = ಸಮಾಗಮವು **ಅಭೂತ್** = ಆಯಿತು. **ಕೃಷ್ಣಃ ಅಪಿ** = ಕೃಷ್ಣನೂ ಸಹ **ತಥಾ ಏವ** = ಹಾಗೆಯೇ **ಏಭಿಃ** = ಅವರೊಂದಿಗೆ **ಸಹಿತಃ** = ಕೂಡಿದವನಾಗಿ **ಚಿಕ್ರೀಡೇ** = ಕ್ರೀಡಿಸಿದನು. **ಸರಥಃ** = ರಥದೊಂದಿಗೆ ಕೂಡಿದ ಕೃಷ್ಣನು **ತದ್ವತ್** = ಹಿಂದಿನಂತೆ **ಅರ್ಜುನೇನ** = ಅರ್ಜುನನೊಂದಿಗೆ **ಚಿಕ್ರೀಡೇ** = ಕ್ರೀಡಿಸಿದನು.

**ತಾತ್ಪರ್ಯ** :- ಕೃಷ್ಣಭಕ್ತರಾದ ಪಾಂಡವರಿಗೆ ಹಿಂದಿನಂತೆ ಅಲ್ಲಿಯೂ ಶ್ರೀಕೃಷ್ಣನೊಡನೆ ಸಮಾಗಮವಾಯಿತು. ಕೃಷ್ಣನೂ ಹಾಗೆಯೇ ಹಿಂದಿನಂತೆ ಆರ್ಜುನನೊಂದಿಗೆ ರಥದೊಂದಿಗೆ ವಿಹರಿಸಿದ.

### ಅಸುರರಿಗೆ ಪುಣ್ಯಕ್ಷಯ

**ಅನ್ಯೇ ಚ ದೇವಾಂಶಭವಾಃ ಸಮಸ್ತಾಃ**
**ಸ್ವಮೂಲರೂಪೈಕ್ಯಮವಾಪುರಾಶು ।**
**ಕರ್ಮಕ್ಷಯಾದೇವ ಸುರೇತರಾಸ್ತು**
**ಪುಣ್ಯಕ್ಷಯಂ ಪ್ರಾಪ್ಯ ಭುವಿ ಪ್ರಜಾತಾಃ ॥ ೧೨೧ ॥**

**ಅನ್ಯೇ ಚ ದೇವಾಂಶಭವಾಃ ಸಮಸ್ತಾಃ ಸ್ವಮೂಲರೂಪೈಕ್ಯಂ ಅವಾಪುಃ ಆಶು । ಕರ್ಮಕ್ಷಯಾತ್ ಏವ ಸುರೇತರಾಃ ತು ಪುಣ್ಯಕ್ಷಯಂ ಪ್ರಾಪ್ಯ ಭುವಿ ಪ್ರಜಾತಾಃ ॥ ೧೨೧ ॥**

**ಅರ್ಥ** :- **ದೇವಾಂಶಭವಾಃ** = ದೇವಾಂಶದಿಂದ ಹುಟ್ಟಿದ **ಅನ್ಯೇ** = ಇತರ **ಸಮಸ್ತಾಃ ಚ** = ಎಲ್ಲರೂ ಸಹ **ಕರ್ಮಕ್ಷಯಾತ್ ಏವ** = ಕರ್ಮಕ್ಷಯದಿಂದಲೇ **ಆಶು** = ಕೂಡಲೇ **ಸ್ವಮೂಲರೂಪೈಕ್ಯಂ** = ತಮ್ಮ ಮೂಲರೂಪದೊಂದಿಗೆ ಐಕ್ಯವನ್ನು **ಅವಾಪುಃ** = ಹೊಂದಿದರು. **ಸುರೇತರಾಃ ತು** = ಅಸುರರಾದರೋ **ಪುಣ್ಯಕ್ಷಯಂ** = ಪುಣ್ಯಕ್ಷಯವನ್ನು **ಪ್ರಾಪ್ಯ** = ಹೊಂದಿ **ಭುವಿ** = ಭೂಮಿಯಲ್ಲಿ **ಪ್ರಜಾತಾಃ** = ಹುಟ್ಟಿದವರಾದರು.

**ತಾತ್ಪರ್ಯ** :- ದೇವಾಂಶಸಂಭೂತರಾದ ಇತರರು ಸಹ ಕರ್ಮಕ್ಷಯ ವಾದೊಡನೆಯೇ ತಮ್ಮ ಮೂಲರೂಪದೊಂದಿಗೆ ಐಕ್ಯ ಹೊಂದಿದರು. ಅಸುರರು ಪುಣ್ಯಕ್ಷಯವನ್ನು ಹೊಂದಿ ಭೂಮಿಯಲ್ಲಿ ಜನಿಸಿದರು.

ಭೂಲೋಕದಲ್ಲಿ ಅಸುರರ ಹುಟ್ಟು

**ಚತುಃಸಹಸ್ರಂ ತ್ರಿಶತೋತ್ತರಂ ತೇ**
**ಸಂವತ್ಸರಾಣಾಮನುಭೂಯ ದಿವ್ಯಾನ್ ।**
**ಭೋಗಾನ್ ನರತ್ವೇಽಪಿ ಸದೇಶ್ವರೋಽಹ-**
**ಮಸಜ್ಜಗಚ್ಚೇತಿ ಧಿಯಾಽಽಪ್ನುವಂಸ್ತಮಃ ॥ ೧೨೨ ॥**

**ಚತುಃಸಹಸ್ರಂ ತ್ರಿಶತೋತ್ತರಂ ತೇ ಸಂವತ್ಸರಾಣಾಂ ಅನುಭೂಯ ದಿವ್ಯಾನ್ । ಭೋಗಾನ್ ನರತ್ವೇ ಅಪಿ ಸದಾ ಈಶ್ವರಃ ಅಹಂ ಅಸತ್ ಜಗತ್ ಚ ಇತಿ ಧಿಯಾ ಆಪ್ನುವನ್ ತಮಃ ॥ ೧೨೨ ॥**

**ಅರ್ಥ** :- **ತೇ** = ಅವರು **ಸಂವತ್ಸರಾಣಾಂ** = ಸಂವತ್ಸರಗಳ **ತ್ರಿಶತೋತ್ತರಂ** = ಮೂರುನೂರು ಅಧಿಕವಾದ **ಚತುಃಸಹಸ್ರಂ** = ನಾಲ್ಕುಸಾವಿರ ಪರ್ಯಂತ **ದಿವ್ಯಾನ್** = ದಿವ್ಯವಾದ **ಭೋಗಾನ್** = ಭೋಗಗಳನ್ನು **ಅನುಭೂಯ** = ಅನುಭವಿಸಿ **ನರತ್ವೇ ಅಪಿ** = ಮನುಷ್ಯರೂಪದಲ್ಲೂ ಸಹ **ಸದಾ** = ಯಾವಾಗಲೂ **ಅಹಂ** = ನಾನು **ಈಶ್ವರಃ** = ಈಶ್ವರನು **ಚ** = ಮತ್ತು **ಜಗತ್** = ಜಗತ್ತು **ಅಸತ್** = ಅಸತ್ಯವು **ಇತಿ** = ಎಂಬ **ಧಿಯಾ** = ಬುದ್ಧಿಯಿಂದ **ತಮಃ** = ತಮಸ್ಸನ್ನು **ಆಪ್ನುವನ್** = ಹೊಂದಿದರು.

**ತಾತ್ಪರ್ಯ** :- ನಾಲ್ಕು ಸಾವಿರದ ಮುನ್ನೂರು ವರ್ಷಗಳ ಪರ್ಯಂತ ಸ್ವರ್ಗದಲ್ಲಿ ದಿವ್ಯಭೋಗಗಳನ್ನು ಅನುಭವಿಸಿ ಆಗಲೂ ಸದಾ ನಾನೇ ಈಶ್ವರ, ಜಗತ್ತು ಸುಳ್ಳು ಎಂಬ ಬುದ್ಧಿಯನ್ನು ಹೊಂದಿ ತಮಸ್ಸನ್ನು ಹೊಂದಿದರು.

ಅಸುರರ ದುಃಖತಾರತಮ್ಯ

**ದುಃಖೇಽಪಿ ತೇಷಾಮಿಹ ತಾರತಮ್ಯಂ**
**ಕಲೇಃ ಪರಂ ದುಃಖಮಿಹಾಖಿಲಾಚ್ಚ ।**

**ಯಥಾ ವಿರಿಂಚಸ್ಯ ಸುಖಂ ಪರಂ ಸ್ಯಾ-**
**ನ್ಮುಕ್ತೌ ಹರಿದ್ವೇಷಕೃತೋ ವಿಶೇಷಃ ॥ ೧೨೩ ॥**

**ದುಃಖೇ ಅಪಿ ತೇಷಾಂ ಇಹ ತಾರತಮ್ಯಂ ಕಲೇಃ ಪರಂ ದುಃಖಂ ಇಹ ಅಖಿಲಾತ್ ಚ । ಯಥಾ ವಿರಿಂಚಸ್ಯ ಸುಖಂ ಪರಂ ಸ್ಯಾತ್ ಮುಕ್ತೌ ಹರಿದ್ವೇಷಕೃತಃ ವಿಶೇಷಃ ॥ ೧೨೩ ॥**

**ಅರ್ಥ :-** **ಇಹ** = ಈ ತಮಸ್ಸಿನಲ್ಲಿ **ತೇಷಾಂ** = ಆ ಅಸುರರ **ದುಃಖೇ ಅಪಿ** = ದುಃಖದಲ್ಲೂ **ತಾರತಮ್ಯಂ** = ತಾರತಮ್ಯವು (**ಅಸ್ತಿ**) = ಇದೆ. **ಇಹ** = ಈ ತಮಸ್ಸಿನಲ್ಲಿ **ಅಖಿಲಾತ್** = ಎಲ್ಲ **ದೈತ್ಯಸಂಘಾತ್ ಚ** = ದೈತ್ಯಸಮೂಹಕ್ಕಿಂತಲೂ **ಕಲೇಃ** = ಕಲಿಗೆ **ಪರಂ** = ಹೆಚ್ಚಿನ **ದುಃಖಂ** = ದುಃಖವು. **ಯಥಾ** = ಹೇಗೆ **ಮುಕ್ತೌ** = ಮುಕ್ತಿಯಲ್ಲಿ **ವಿರಿಂಚಸ್ಯ** = ಬ್ರಹ್ಮದೇವರ **ಸುಖಂ** = ಸುಖವು **ಪರಂ** = ಶ್ರೇಷ್ಠವಾಗಿ **ಸ್ಯಾತ್** = ಇರುವುದೋ, (**ತಥಾ**) = ಅದರಂತೆ **ಹರಿದ್ವೇಷಕೃತಃ** = ಹರಿದ್ವೇಷಮಾಡುವವನ **ವಿಶೇಷಃ** = ದುಃಖವಿಶೇಷವು.

**ತಾತ್ಪರ್ಯ :-** ದುಃಖದಲ್ಲೂ ಅವರಲ್ಲಿ ತಾರತಮ್ಯವುಂಟು. ಕಲಿಗೆ ಇತರ ಎಲ್ಲರಿಗಿಂತಲೂ ಅತ್ಯಂತ ಹೆಚ್ಚಿನ ದುಃಖ ; ಮುಕ್ತಿಯಲ್ಲಿ ಬ್ರಹ್ಮದೇವರಿಗೆ ಹೇಗೆ ಅತ್ಯಂತ ಹೆಚ್ಚಿನ ಸುಖವೋ ಅದರಂತೆ. ಅಸುರರಲ್ಲಿ ಹರಿದ್ವೇಷದ ಕಾರಣ ದಿಂದಾಗಿ ಇಂತಹ ವಿಶೇಷ. ಯೋಗ್ಯರಲ್ಲಿ ಸುಖತಾರತಮ್ಯವಿರುವಂತೆ, ಅಯೋಗ್ಯರಲ್ಲಿ ದುಃಖತಾರತಮ್ಯವಿರುವುದು ಎಂದರ್ಥ. ಯೋಗ್ಯರಲ್ಲಿ ಬ್ರಹ್ಮ ಹೆಚ್ಚು ಸುಖಿಯಾದರೆ, ಅಯೋಗ್ಯರಲ್ಲಿ ಕಲಿ ಹೆಚ್ಚು ದುಃಖಿ ಎಂದು ಭಾವ. ಹರಿಭಕ್ತಿಯು ಸುಖಕ್ಕೆ ಸಾಧನವಾದರೆ, ಹರಿದ್ವೇಷವು ದುಃಖಕ್ಕೆ ಸಾಧನ.

**ಕೇಚಿತ್ ಪಿಶಾಚಾಸುರರಾಕ್ಷಸತ್ವ-**
**ಮವಾಪ್ಯ ವಿಷ್ಣೋರಪಿ ತತ್ಪರಾಣಾಮ್ ।**
**ದ್ವೇಷಾತ್ ತಮೋಽಂಧಂ ತ್ವರಯಾ ಸಮಾಪ್ನುಯು-**
**ರ್ದೇವಾಃ ಸ್ವಕಾಲೇ ನಿಜಯೋಗ್ಯಮುಕ್ತಿಮ್॥ ೧೨೪ ॥**

**ಕೇಚಿತ್ ಪಿಶಾಚಾಸುರರಾಕ್ಷಸತ್ವಂ ಅವಾಪ್ಯ ವಿಷ್ಣೋಃ ಅಪಿ ತತ್ಪರಾಣಾಮ್ । ದ್ವೇಷಾತ್ ತಮಃ ಅಂಧಂ ತ್ವರಯಾ ಸಮಾಪ್ನುಯುಃ ದೇವಾಃ ಸ್ವಕಾಲೇ ನಿಜಯೋಗ್ಯಮುಕ್ತಿಮ್ ॥ ೧೨೪ ॥**

**ಅರ್ಥ** :- **ಕೇಚಿತ್** = ಕೆಲವರು **ಪಿಶಾಚಾಸುರರಾಕ್ಷಸತ್ವಂ** = ಪಿಶಾಚತ್ವ ಅಸುರತ್ವ ರಾಕ್ಷಸತ್ವವನ್ನು **ಅವಾಪ್ಯ** = ಹೊಂದಿ **ವಿಷ್ಣೋಃ** = ವಿಷ್ಣುವಿನ **ತತ್ಪರಾಣಾಂ** = ಅವನ ಭಕ್ತರ **ದ್ವೇಷಾತ್ ಅಪಿ** = ದ್ವೇಷದಿಂದಲೂ **ಅಂಧಂ ತಮಃ** = ಅಂಧಂತಮಸ್ಸನ್ನು **ತ್ವರಯಾ** = ಬೇಗನೆ **ಸಮಾಪ್ನುಯುಃ** = ಹೊಂದಿದರು. **ದೇವಾಃ** = ದೇವತೆಗಳು **ಸ್ವಕಾಲೇ** = ತಮ್ಮ ಸಾಧನೆಯ ಪೂರ್ತಿಕಾಲದಲ್ಲಿ **ನಿಜಯೋಗ್ಯಮುಕ್ತಿಂ** = ತಮಗೆ ಯೋಗ್ಯವಾದ ಮುಕ್ತಿಯನ್ನು **ಸಮಾಪ್ನುಯುಃ** = ಹೊಂದಿದರು.

**ತಾತ್ಪರ್ಯ** :- ಕೆಲವರು ಪಿಶಾಚಿಗಳಾಗಿಯೂ, ಅಸುರರಾಗಿಯೂ, ರಾಕ್ಷಸರಾಗಿಯೂ ಜನಿಸಿ ವಿಷ್ಣುವಿನಲ್ಲೂ ಅವನ ಭಕ್ತರಲ್ಲೂ ದ್ವೇಷ ಮಾಡಿ ಅಂಧಂತಮಸ್ಸನ್ನು ಬೇಗನೆ ಹೊಂದಿದರು. ದೇವತೆಗಳು ತಮಗೆ ವಿಹಿತವಾದ ಕಾಲದಲ್ಲಿ ತಮಗೆ ಯೋಗ್ಯವಾದ ಮುಕ್ತಿಯನ್ನು ಪಡೆದರು.

### ಕಲಿಯುಗದಲ್ಲಿ ಭೀಮಾವತಾರ

**ಚತುಃಸಹಸ್ರೇ ತ್ರಿಶತೋತ್ತರೇ ಗತೇ**
**ಸಂವತ್ಸರಾಣಾಂ ತು ಕಲೌ ಪೃಥಿವ್ಯಾಮ್ ।**
**ಜಾತಃ ಪುನರ್ವಿಪ್ರತನುಃ ಸ ಭೀಮೋ**
**ದೈತ್ಯೈರ್ನಿಗೂಢಂ ಹರಿತತ್ತ್ವಮಾಹ ॥ ೧೨೫ ॥**

**ಚತುಃಸಹಸ್ರೇ ತ್ರಿಶತೋತ್ತರೇ ಗತೇ ಸಂವತ್ಸರಾಣಾಂ ತು ಕಲೌ ಪೃಥಿವ್ಯಾಮ್ । ಜಾತಃ ಪುನಃ ವಿಪ್ರತನುಃ ಸಃ ಭೀಮಃ ದೈತ್ಯೈಃ ನಿಗೂಢಂ ಹರಿತತ್ತ್ವಂ ಆಹ ॥ ೧೨೫ ॥**

**ಅರ್ಥ** :- **ಸಂವತ್ಸರಾಣಾಂ** = ಸಂವತ್ಸರಗಳ **ತ್ರಿಶತೋತ್ತರೇ** = ಮೂರುನೂರರ ನಂತರ **ಚತುಃಸಹಸ್ರೇ** = ನಾಲ್ಕುಸಾವಿರಗಳು **ಗತೇ** (**ಸತಿ**) = ಕಳೆಯುತ್ತಿರಲು **ಕಲೌ ತು** = ಕಲಿಯುಗದಲ್ಲಾದರೋ **ಪೃಥಿವ್ಯಾಂ** = ಭೂಮಿಯಲ್ಲಿ **ಪುನಃ** = ಮತ್ತೆ **ಸಃ** = ಆ **ವಿಪ್ರತನುಃ** = ಬ್ರಾಹ್ಮಣರೂಪದ **ಭೀಮಃ** = ಭೀಮನು **ಜಾತಃ** (**ಸನ್**) = ಜನಿಸಿದವನಾಗಿ **ದೈತ್ಯೈಃ** = ದೈತ್ಯರಿಂದ **ನಿಗೂಢಂ** = ಮರೆಮಾಡಲ್ಪಟ್ಟ **ಹರಿತತ್ತ್ವಂ** = ಹರಿತತ್ತ್ವವನ್ನು **ಆಹ** = ಹೇಳಿದನು.

**ತಾತ್ಪರ್ಯ** :- ಕಲಿಯುಗದಲ್ಲಿ ನಾಲ್ಕು ಸಾವಿರದ ಮುನ್ನೂರು ವರ್ಷಗಳು ಕಳೆದ ಮೇಲೆ ಆ ಭೀಮನೇ ಮತ್ತೆ ವಿಪ್ರರೂಪದಿಂದ ಭೂಮಿಯಲ್ಲಿ ಜನಿಸಿ, ದೈತ್ಯರಿಂದ ಮರೆಯಾಗಿದ್ದ ಹರಿತತ್ತ್ವವನ್ನು ಉಪದೇಶಿಸಿದ.

**ದ್ರೌಪದಿಯ ಮತ್ತೊಂದು ರೂಪ**

**ತದೈವ ಕೃಷ್ಣಾಽಪಿ ಭುವಿ ಪ್ರಜಾತಾ**
**ಪ್ರೀತ್ಯೈ ಹರೇರಂಧತಮಸ್ಯಪಾತಯತ್ ।**
**ಮಹಾಸುರಾನ್ ವಿಷ್ಣುಪರಾರ್ಜುನಾದ್ಯಾಃ**
**ಕೃತೇ ಪ್ರಜಾತಾ ಹರಿತೋಷಣಾಯ ॥ ೧೨೬ ॥**

**ತದಾ ಏವ ಕೃಷ್ಣಾ ಅಪಿ ಭುವಿ ಪ್ರಜಾತಾ ಪ್ರೀತ್ಯೈ ಹರೇಃ ಅಂಧತಮಸಿ ಅಪಾತಯತ್ । ಮಹಾಸುರಾನ್ ವಿಷ್ಣುಪರಾರ್ಜುನಾದ್ಯಾಃ ಕೃತೇ ಪ್ರಜಾತಾ ಹರಿತೋಷಣಾಯ ॥ ೧೨೬ ॥**

**ಅರ್ಥ** :- **ತದಾ ಏವ** = ಆಗಲೇ **ಕೃಷ್ಣಾ ಅಪಿ** = ದ್ರೌಪದಿಯೂ ಸಹ **ಭುವಿ** = ಭೂಮಿಯಲ್ಲಿ **ಪ್ರಜಾತಾ (ಸತೀ)** = ಅವತರಿಸಿದವಳಾಗಿ **ಹರೇಃ** = ಶ್ರೀಹರಿಯ **ಪ್ರೀತ್ಯೈ** = ಪ್ರೀತಿಗಾಗಿ **ಮಹಾಸುರಾನ್** = ಮಹಾ ಅಸುರರನ್ನು **ಅಂಧತಮಸಿ** = ಅಂಧಂತಮಸ್ಸಿನಲ್ಲಿ **ಅಪಾತಯತ್** = ಬೀಳಿಸಿದಳು. **ವಿಷ್ಣುಪರಾರ್ಜುನಾದ್ಯಾಃ** = ವಿಷ್ಣುಪರರಾದ ಅರ್ಜುನಾದಿಗಳು **ಹರಿತೋಷಣಾಯ ಕೃತೇ** = ಹರಿಪ್ರೀತಿಗಾಗಿ **ಪ್ರಜಾತಾಃ** = ಜನಿಸಿದವರಾದರು.

**ತಾತ್ಪರ್ಯ** :- ಆಗಲೇ ದ್ರೌಪದಿಯು ಸಹ ಭೂಮಿಯಲ್ಲಿ ಅವತರಿಸಿ ಹರಿಪ್ರೀತಿಗಾಗಿ ಮಹಾದೈತ್ಯರನ್ನು ಅಂಧಂತಮಸ್ಸಿನಲ್ಲಿ ಬೀಳಿಸಿದಳು. ವಿಷ್ಣು ಭಕ್ತರಾದ ಅರ್ಜುನ ಮೊದಲಾದವರು ಹರಿಪ್ರೀತಿಗಾಗಿ ಆಗಲೇ ಜನಿಸಿದರು.

ಬ್ರಹ್ಮನಾಗಿ ಭೀಮ - ಸರಸ್ವತಿಯಾಗಿ ಭಾರತಿ

**ಪುನಶ್ಚ ತೇ ಸ್ಥಾನಮವಾಪ್ಯ ಸರ್ವೇ**
**ಸ್ವೀಯಂ ಪರಾಂತೇ ತು ವಿಮುಕ್ತಿಮಾಪ್ನುಯುಃ ।**
**ವಾಯುತ್ವಮಾಪ್ತಃ ಸ ಹನೂಮದಂಶೋ**
**ಬ್ರಾಹ್ಮಂ ಪದಂ ಪ್ರಾಪ್ಯ ವೃಕೋದರಶ್ಚ ।**

**ವಾಗೀಶ್ವರೀತ್ವಂ ಗತಯೈವ ಕೃಷ್ಣಯಾ**
**ಸಹೈವ ಮುಕ್ತಿಂ ಗಮಿತಾಽಖಿಲೋತ್ತಮಾಮ್ ॥ ೧೨೭ ॥**

ಪುನಃ ಚ ತೇ ಸ್ಥಾನಂ ಅವಾಪ್ಯ ಸರ್ವೇ ಸ್ವೀಯಂ ಪರಾಂತೇ ತು ವಿಮುಕ್ತಿಂ ಆಪ್ನುಯುಃ । ವಾಯುತ್ವಂ ಆಪ್ತಃ ಸ ಹನೂಮದಂಶಃ ಬ್ರಾಹ್ಮಂ ಪದಂ ಪ್ರಾಪ್ಯ ವೃಕೋದರಃ ಚ । ವಾಗೀಶ್ವರೀತ್ವಂ ಗತಯಾ ಏವ ಕೃಷ್ಣಯಾ ಸಹ ಏವ ಮುಕ್ತಿಂ ಗಮಿತಾ ಅಖಿಲೋತ್ತಮಾಮ್ ॥ ೧೨೭ ॥

**ಅರ್ಥ** :- **ತೇ ಸರ್ವೇ** = ಅವರೆಲ್ಲ **ಪುನಃ ಚ** = ಮತ್ತೆ **ಸ್ಥಾನಂ** = ಸ್ಥಾನವನ್ನು (ಲೋಕವನ್ನು) **ಅವಾಪ್ಯ** = ಹೊಂದಿ **ಪರಾಂತೇ ತು** = ಪರಕಾಲದ ಕೊನೆಯಲ್ಲಾದರೋ **ಸ್ವೀಯಂ** = ತಮಗೆ ಯೋಗ್ಯವಾದ **ವಿಮುಕ್ತಿಂ** = ಮೋಕ್ಷವನ್ನು **ಆಪ್ನುಯುಃ** = ಹೊಂದುವರು. **ಹನೂಮದಂಶಃ** = ಹನುಮಂತನ ಅಂಶನಾದ **ಸಃ** = ಆ **ವೃಕೋದರಃ ಚ** = ಭೀಮಸೇನನೂ ಸಹ **ವಾಯುತ್ವಂ** = ವಾಯುತ್ವವನ್ನು **ಆಪ್ತಃ (ಸನ್)** = ಹೊಂದಿದವನಾಗಿ **ಬ್ರಾಹ್ಮಂ** = ಬ್ರಹ್ಮಸಂಬಂಧಿಯಾದ **ಪದಂ** = ಪದವಿಯನ್ನು **ಪ್ರಾಪ್ಯ** = ಪಡೆದು, **ವಾಗೀಶ್ವರೀತ್ವಂ** = ಸರಸ್ವತೀತ್ವವನ್ನು **ಗತಯಾ** = ಹೊಂದಿದ **ಕೃಷ್ಣಯಾ** = ಭಾರತಿಯೊಂದಿಗೆ **ಸಹ** = ಕೂಡಿ **ಅಖಿಲೋತ್ತಮಾಂ** = ಎಲ್ಲರಿಗಿಂತ ಉತ್ತಮವಾದ **ಮುಕ್ತಿಂ** = ಮುಕ್ತಿಯನ್ನು ಕುರಿತು **ಗಮಿತಾ** = ಹೋಗಲಿರುವನು.

**ತಾತ್ಪರ್ಯ** :- ಅವರು ಮತ್ತೆ ತಮ್ಮ ಸ್ಥಾನವನ್ನು ಹೊಂದಿ ಪರಕಾಲದ ಕೊನೆಯಲ್ಲಿ ಸಮುಚಿತವಾದ ಮುಕ್ತಿಯನ್ನು ಹೊಂದುವರು. ಹನುಮಂತನ ಅವತಾರನಾದ ಭೀಮಸೇನ ವಾಯುರೂಪದೊಂದಿಗೆ ಐಕ್ಯಹೊಂದಿ ಬ್ರಹ್ಮಪದವಿಯನ್ನು ಪಡೆಯುವನು. ದ್ರೌಪದಿಯು ಸರಸ್ವತೀಪದವಿಯನ್ನು ಹೊಂದುವಳು ; ಬಳಿಕ ಅವರಿಬ್ಬರೂ ಉತ್ತಮವಾದ ಮುಕ್ತಿಯನ್ನು ಹೊಂದುವರು.

### ವಾಯುಭಾರತಿಯರ ವಿಶೇಷ ಹರಿಸೇವೆ

**ಭುವಿ ದ್ಯುಲೋಕೇ ಚ ವಿರಿಂಚತಾಯಾಂ**
**ಮುಕ್ತೌ ಚ ತಾಭ್ಯಾಮಧಿಕಂ ಸಮಸ್ತಾತ್ ।**

**ಸಂತೋಷ್ಯತೇ ಪೂರ್ಣಗುಣೋ ರಮೇಶಃ**
**ಸದೈವ ನಿತ್ಯೋರ್ಜಿತಸದ್ರತಿಭ್ಯಾಮ್ ॥ ೧೨೮ ॥**

**ಭುವಿ ದ್ಯುಲೋಕೇ ಚ ವಿರಿಂಚತಾಯಾಂ ಮುಕ್ತೌ ಚ ತಾಭ್ಯಾಂ ಅಧಿಕಂ ಸಮಸ್ತಾತ್ । ಸಂತೋಷ್ಯತೇ ಪೂರ್ಣಗುಣಃ ರಮೇಶಃ ಸದಾ ಏವ ನಿತ್ಯೋರ್ಜಿತಸದ್ರತಿಭ್ಯಾಮ್ ॥ ೧೨೮ ॥**

**ಅರ್ಥ** :- **ಭುವಿ** = ಭೂಮಿಯಲ್ಲಿ **ಚ** = ಮತ್ತು **ದ್ಯುಲೋಕೇ** = ದೇವಲೋಕದಲ್ಲಿ **ಚ** = ಮತ್ತು **ವಿರಿಂಚತಾಯಾಂ** = ಬ್ರಹ್ಮಪದವಿಯಲ್ಲೂ **ಚ** = ಮತ್ತು **ಮುಕ್ತೌ** = ಮುಕ್ತಿಯಲ್ಲಿ **ನಿತ್ಯೋರ್ಜಿತತದ್ರತಿಭ್ಯಾಂ** = ಆ ಹರಿಯಲ್ಲಿ ನಿತ್ಯವೂ ಉತ್ಕೃಷ್ಟವೂ ಆದ ಭಕ್ತಿಯನ್ನುಳ್ಳ **ತಾಭ್ಯಾಂ** = ಅವರಿಬ್ಬರಿಂದ (ವಾಯು-ಭಾರತಿಯರಿಂದ) **ಪೂರ್ಣಗುಣಃ** = ಪೂರ್ಣಗುಣನಾದ **ರಮೇಶಃ** = ರಮೆಯರಸನಾದ ಹರಿಯು **ಸಮಸ್ತಾತ್** = ಇಡೀ **ಜೀವಸಂಘಾತ್** = ಜೀವಸಮೂಹದಿಂದಲೂ **ಅಧಿಕಂ** = ಅಧಿಕವಾಗಿ **ಸದಾ ಏವ** = ಯಾವಾಗಲೂ **ಸಂತೋಷ್ಯತೇ** = ಸಂತೋಷಿಸಲ್ಪಡುವನು.

**ತಾತ್ಪರ್ಯ** :- ಭೂಲೋಕದಲ್ಲೂ, ದೇವಲೋಕದಲ್ಲೂ, ಬ್ರಹ್ಮ ಪದವಿಯಲ್ಲೂ, ಮುಕ್ತಿಯಲ್ಲೂ ವಾಯು ಭಾರತಿಯರು ಎಲ್ಲರಿಗಿಂತ ಮಿಗಿಲಾಗಿ ಗುಣಪೂರ್ಣನಾದ ಲಕ್ಷ್ಮೀಪತಿ ಶ್ರೀಹರಿಯನ್ನು ಸದಾ ಪರಿಪೂರ್ಣವಾದ ಭಕ್ತಿಯಿಂದ ವಿಶೇಷವಾಗಿ ಸಂತೋಷಪಡಿಸುವರು.

ಉಕ್ತ ವಿಷಯಕ್ಕೆ ಪ್ರಮಾಣಗಳು

**'ಭೂಷನ್ನಯೋಧಿ ಬಭ್ರುಷು ನಮ್ನತೇ'**
**'ಬಳಿತ್ಥಾ ತದ್ವಪುಷೇ ಧಾಯಿ ದರ್ಶತಮ್' ।**
**'ತಾಂ ಸು ತೇ ಕೀರ್ತಿಂ ಮಘವನ್ಮಹಿತ್ವೇ'-**
**ತ್ಯಾದಿಸೂಕ್ತಾನಿ ಚ ತತ್ಪ್ರಮಾಣಮ್ ॥ ೧೨೯ ॥**

**'ಭೂಷನ್ನಯೋಧಿ ಬಭ್ರುಷು ನಮ್ನತೇ' 'ಬಳಿತ್ಥಾ ತದ್ವಪುಷೇ ಧಾಯಿ ದರ್ಶತಮ್' । 'ತಾಂ ಸು ತೇ ಕೀರ್ತಿಂ ಮಘವನ್ಮಹಿತ್ವಾ' ಇತ್ಯಾದಿಸೂಕ್ತಾನಿ ಚ ತತ್ಪ್ರಮಾಣಮ್ ॥ ೧೨೯ ॥**

**ಅರ್ಥ** :– 'ಭೂಷನ್ನ ಯೋಧಿ ಬಭ್ರುಷು ನಮ್ನತೇ', 'ಬಳಿತ್ಥಾ ತದ್ವಪುಷೇ ಧಾಯಿ ದರ್ಶತಮ್', 'ತಾಂ ಸು ತೇ ಕೀರ್ತಿಂ ಮಘವನ್ ಮಹಿತ್ವಾ' **ಇತ್ಯಾದಿ** = 'ಭೂಷನ್ನ ಯೋಧಿ ಬಭ್ರುಷು ನಮ್ನತೇ' ಇವೇ ಮೊದಲಾದ **ಸೂಕ್ತಾನಿ ಚ** = ಸೂಕ್ತಗಳು ಸಹ **ತತ್ಪ್ರಮಾಣಮ್** = (ಹೇಳಲ್ಪಟ್ಟ) ಈ ವಿಷಯದಲ್ಲಿ ಪ್ರಮಾಣವು.

**ತಾತ್ಪರ್ಯ** :- 'ಭೂಷನ್ನಯೋಧಿ ಬಭ್ರುಷು ನಮ್ನತೇ' 'ಬಳಿತ್ಥಾ ತದ್ವಪುಷೇ ಧಾಯಿ ದರ್ಶತಮ್' 'ತಾಂ ಸು ತೇ ಕೀರ್ತಿಂ ಮಘವನ್ಮಹಿತ್ವಾ' - ಇವೇ ಮೊದಲಾದ ಸೂಕ್ತಗಳು ಇದಕ್ಕೆ ಪ್ರಮಾಣವಾಗಿವೆ.

### ಭೀಷ್ಮರು ತಿಳಿಸಿದ ಭೀಮಾವತಾರ

**ಅನ್ಯಾನಿ ವಾಕ್ಯಾನಿ ಚ ವೈದಿಕಾನಿ**
**ಸಪಂಚರಾತ್ರೋಕ್ತಪುರಾಣಕಾನಿ ।**
**ಪೃಷ್ಟಶ್ಚ ಭೀಷ್ಮೋऽತ್ರ ಯುಧಿಷ್ಠಿರೇಣ**
**ತನ್ಮೋಕ್ಷಧರ್ಮೇಷ್ವಪಿ ಕಿಂಚಿದಾಹ ॥ ೧೩೦ ॥**

**ಅನ್ಯಾನಿ ವಾಕ್ಯಾನಿ ಚ ವೈದಿಕಾನಿ ಸಪಂಚರಾತ್ರೋಕ್ತಪುರಾಣಕಾನಿ । ಪೃಷ್ಟಃ ಚ ಭೀಷ್ಮಃ ಅತ್ರ ಯುಧಿಷ್ಠಿರೇಣ ತತ್ ಮೋಕ್ಷಧರ್ಮೇಷು ಅಪಿ ಕಿಂಚಿತ್ ಆಹ ॥ ೧೩೦ ॥**

**ಅರ್ಥ** :– **ಸಪಂಚರಾತ್ರೋಕ್ತಪುರಾಣಕಾನಿ** = ಪಂಚರಾತ್ರದ ವಚನಗಳಿಂದ ಕೂಡಿದ ಪುರಾಣವಾಕ್ಯಗಳು **ಚ** = ಮತ್ತು **ಅನ್ಯಾನಿ** = ಇತರ **ವೈದಿಕಾನಿ** = ವೇದಸಂಬಂಧಿಯಾದ **ವಾಕ್ಯಾನಿ** = ವಾಕ್ಯಗಳು (**ಉಕ್ತಾರ್ಥೇ**) = ಹೇಳಿದ ವಿಷಯದಲ್ಲಿ (**ಪ್ರಮಾಣಾನಿ**) = ಪ್ರಮಾಣಗಳು. **ಅತ್ರ ಚ** = ಈ ವಿಷಯದಲ್ಲೂ **ಯುಧಿಷ್ಠಿರೇಣ** = ಯುಧಿಷ್ಠಿರನಿಂದ **ಪೃಷ್ಟಃ** = ಕೇಳಲ್ಪಟ್ಟ **ಭೀಷ್ಮಃ** = ಭೀಷ್ಮರು **ತತ್** = (ಯುಧಿಷ್ಠಿರನಿಂದ ಕೇಳಲ್ಪಟ್ಟ) ಈ ಪ್ರಮೇಯವನ್ನು **ಮೋಕ್ಷಧರ್ಮೇಷು ಅಪಿ** = ಮೋಕ್ಷಧರ್ಮಪರ್ವದಲ್ಲೂ ಸಹ **ಕಿಂಚಿತ್** = ಸ್ವಲ್ಪ **ಆಹ** = ಹೇಳಿರುವರು.

**ತಾತ್ಪರ್ಯ** :- ಇತರ ವೇದವಚನಗಳು, ಪಂಚರಾತ್ರದ ಮಾತುಗಳು, ಪುರಾಣದ ಮಾತುಗಳು ಈ ವಿಷಯದಲ್ಲಿ ಪ್ರಮಾಣವಾಗಿವೆ ; ಯುಧಿಷ್ಠಿರ ಕೇಳಿದಾಗ ಭೀಷ್ಮರು ಮೋಕ್ಷಧರ್ಮಗಳಲ್ಲೂ ಇದರ ಬಗ್ಗೆ ಸ್ವಲ್ಪ ತಿಳಿಸಿರುವರು.

### ಪಾಂಡವ ಸಂತತಿಯ ರಾಜ್ಯಭಾರ

**ಏವಂ ಪ್ರಯಾತೇಷು ಸಕೇಶವೇಷು**
**ಸ್ವಾನೇವ ಲೋಕಾನ್ ಯದುಪಾಂಡವೇಷು ।**
**ಪರೀಕ್ಷಿದಾದ್ಯಾಸ್ತು ತದನ್ವಯೋತ್ಥಾ**
**ವ್ಯಾಸಾನುಶಿಷ್ಟಾಃ ಪೃಥಿವೀಮರಕ್ಷನ್ ॥ ೧೩೧ ॥**

**ಏವಂ ಪ್ರಯಾತೇಷು ಸಕೇಶವೇಷು ಸ್ವಾನ್ ಏವ ಲೋಕಾನ್ ಯದುಪಾಂಡವೇಷು । ಪರೀಕ್ಷಿದಾದ್ಯಾಃ ತು ತದನ್ವಯೋತ್ಥಾಃ ವ್ಯಾಸಾನುಶಿಷ್ಟಾಃ ಪೃಥಿವೀಂ ಅರಕ್ಷನ್ ॥೧೩೧॥**

**ಅರ್ಥ** :- ಏವಂ = ಹೀಗೆ **ಸಕೇಶವೇಷು** = ಕೃಷ್ಣನ ಸಹಿತರಾದ **ಯದುಪಾಂಡವೇಷು** = ಯದು–ಪಾಂಡವರು **ಸ್ವಾನ್** = ತಮ್ಮ **ಲೋಕಾನ್** ಏವ = ಲೋಕಗಳನ್ನು ಕುರಿತೇ **ಪ್ರಯಾತೇಷು** **(ಸತ್ಸು)** = ತೆರಳಿರಲು **ತದನ್ವಯೋತ್ಥಾಃ** = ಆ ಯದು–ಪಾಂಡವರ ವಂಶದಲ್ಲಿ ಬಂದ **ಪರೀಕ್ಷಿದಾದ್ಯಾಃ ತು** = ಪರೀಕ್ಷಿತ್ ಮೊದಲಾದವರಾದರೋ **ವ್ಯಾಸಾನುಶಿಷ್ಟಾಃ** **(ಸಂತಃ)** = ವೇದವ್ಯಾಸರಿಂದ ಶಿಕ್ಷಿತರಾದವರಾಗಿ **ಪೃಥಿವೀಂ** = ಭೂಮಿಯನ್ನು **ಅರಕ್ಷನ್** = ರಕ್ಷಿಸಿದರು.

**ತಾತ್ಪರ್ಯ** :- ಹೀಗೆ ಕೃಷ್ಣ, ಯಾದವರು, ಪಾಂಡವರು ತಮ್ಮ ಲೋಕಗಳಿಗೆ ತೆರಳಿದ ಮೇಲೆ ಅವರ ವಂಶದಲ್ಲಿ ಜನಿಸಿದ ಪರೀಕ್ಷಿತ್ ಮೊದಲಾದವರು ಶ್ರೀವೇದವ್ಯಾಸರಿಂದ ಶಿಕ್ಷಿತರಾಗಿ ಭೂಮಿಯನ್ನು ಪಾಲಿಸಿದರು.

### ಕಲಿಯುಗದಲ್ಲೂ ಉಳಿದುಕೊಂಡ ಧರ್ಮ

**ತೈಃ ಕ್ಷೇಮಕಾಂತ್ಯೈರಿಹ ಭಾರತಾದಿ-**
**ಶಾಸ್ತ್ರಾಣಿ ಶೃಣ್ವದ್ಭಿರಶೇಷವಿದ್ಭಿಃ ।**
**ವ್ಯಾಸಪ್ರಸಾದಾಚ್ಚ ಕಲೌ ಚ ಧರ್ಮೋ**
**ಜ್ಞಾನಂ ಚ ಸುತ್ರಾತಮಗಾನ್ನ ನಾಶಮ್ ॥ ೧೩೨ ॥**

**ತೈಃ ಕ್ಷೇಮಕಾಂತ್ಯೈಃ ಇಹ ಭಾರತಾದಿಶಾಸ್ತ್ರಾಣಿ ಶೃಣ್ವದ್ಭಿಃ ಅಶೇಷವಿದ್ಭಿಃ । ವ್ಯಾಸಪ್ರಸಾದಾತ್ ಚ ಕಲೌ ಚ ಧರ್ಮಃ ಜ್ಞಾನಂ ಚ ಸುತ್ರಾತಂ ಅಗಾತ್ ನ ನಾಶಮ್ ॥ ೧೩೨ ॥**

**ಅರ್ಥ** :- **ವ್ಯಾಸಪ್ರಸಾದಾತ್** = ವೇದವ್ಯಾಸರ ಅನುಗ್ರಹದಿಂದ **ಭಾರತಾದಿಶಾಸ್ತ್ರಾಣಿ** = ಭಾರತಾದಿ ಶಾಸ್ತ್ರಗಳನ್ನು **ಶೃಣ್ವದ್ಭಿಃ** = ಶ್ರವಣ ಮಾಡುವ **ಅಶೇಷವಿದ್ಭಿಃ** = ಎಲ್ಲವನ್ನೂ ಬಲ್ಲ **ತೈಃ** = ಆ ಪರೀಕ್ಷಿದಾದಿ ಗಳಿಂದ **ಕ್ಷೇಮಕಾಂತೈಃ** = ಕ್ಷೇಮಕನವರೆಗೆ **ಇಹ** = ಈ ಭೂಮಿಯಲ್ಲಿ **ಕಲೌ ಚ** = ಕಲಿಯುಗದಲ್ಲೂ **ಧರ್ಮಃ** = ಧರ್ಮವು **ಚ** = ಮತ್ತು **ಜ್ಞಾನಂ** = ಜ್ಞಾನವು **ಸುತ್ರಾತಂ** = ಚೆನ್ನಾಗಿ ರಕ್ಷಿಸಲ್ಪಟ್ಟದ್ದಾಯಿತು. **ನಾಶಂ** = ನಾಶವನ್ನು **ನ ಅಗಾತ್** = ಹೊಂದಲಿಲ್ಲ.

**ತಾತ್ಪರ್ಯ** :- ಕ್ಷೇಮಕನ ವರೆಗಿನ ಆ ರಾಜರು ಭಾರತಾದಿ ಶಾಸ್ತ್ರಗಳನ್ನು ಕೇಳುತ್ತ ಎಲ್ಲವನ್ನೂ ಬಲ್ಲವರಾಗಿದ್ದರು. ಅವರು ಚೆನ್ನಾಗಿ ರಕ್ಷಣೆ ಮಾಡಿದ್ದ ರಿಂದಾಗಿಯೂ, ಶ್ರೀವೇದವ್ಯಾಸರ ಪ್ರಭಾವದಿಂದಾಗಿಯೂ ಕಲಿಯುಗದಲ್ಲಿ ಧರ್ಮ ಮತ್ತು ಜ್ಞಾನಗಳು ನಾಶಹೊಂದಲಿಲ್ಲ.

### ಧರ್ಮವಿಪ್ಲವಕ್ಕೆ ತ್ರಿಪುರಾಸುರರ ಅವತಾರ

**ಸಂವತ್ಸರಾಣಾಂ ತು ಸಹಸ್ರಕೇ ಗತೇ**
**ಪ್ರಾಪ್ತೇಷು ವಿದ್ಯಾಮಖಿಲೇಷು ಸತ್ಸು ।**
**ದಗ್ಧಾಃ ಪುರಾ ಯೇ ತ್ರಿಪುರಂ ಘ್ನತೈವ**
**ರುದ್ರೇಣ ಜಾತಾಃ ಪೃಥಿವೀತಲೇ ತೇ ॥ ೧೩೩ ॥**

ಸಂವತ್ಸರಾಣಾಂ ತು ಸಹಸ್ರಕೇ ಗತೇ ಪ್ರಾಪ್ತೇಷು ವಿದ್ಯಾಂ ಅಖಿಲೇಷು ಸತ್ಸು। ದಗ್ಧಾಃ ಪುರಾ ಯೇ ತ್ರಿಪುರಂ ಘ್ನತಾ ಏವ ರುದ್ರೇಣ ಜಾತಾಃ ಪೃಥಿವೀತಲೇ ತೇ ॥ ೧೩೩ ॥

**ಅರ್ಥ** :- **ಸಂವತ್ಸರಾಣಾಂ** = ಸಂವತ್ಸರಗಳ **ಸಹಸ್ರಕೇ ತು** = ಸಾವಿರವಾದರೋ **ಗತೇ (ಸತಿ)** = ಕಳೆಯುತ್ತಿರುವಲ್ಲಿ **ಅಖಿಲೇಷು** = ಎಲ್ಲ **ಸತ್ಸು** = ಸಜ್ಜನರು **ವಿದ್ಯಾಂ** = ವಿದ್ಯೆಯನ್ನು **ಪ್ರಾಪ್ತೇಷು (ಸತ್ಸು)** = ಪಡೆದಿರುವಲ್ಲಿ **ಪುರಾ** = ಹಿಂದೆ **ತ್ರಿಪುರಂ** = ತ್ರಿಪುರರನ್ನು **ಘ್ನತಾ** = ಕೊಂದ **ರುದ್ರೇಣ ಏವ** = ರುದ್ರದೇವರಿಂದಲೇ **ಯೇ** = ಯಾವ ತ್ರಿಪುರಾಸುರರು **ದಗ್ಧಾಃ** = ಬೂದಿಯಾಗಿದ್ದರೋ **ತೇ** = ಅವರು **ಪೃಥಿವೀತಲೇ** = ಭೂತಲದಲ್ಲಿ **ಜಾತಾಃ** = ಹುಟ್ಟಿದವರಾದರು.

**ತಾತ್ಪರ್ಯ** :- ಕಲಿಯುಗದಲ್ಲಿ ಒಂದು ಸಾವಿರ ವರ್ಷಗಳು ಕಳೆದು ಎಲ್ಲ ಸಜ್ಜನರು ತತ್ತ್ವಜ್ಞಾನವನ್ನು ಪಡೆದುಕೊಂಡರು. ತ್ರಿಪುರರನ್ನು ನಾಶ ಮಾಡಿದ್ದ ರುದ್ರದೇವರಿಂದ ಬೂದಿಯಾಗಿದ್ದ ತ್ರಿಪುರಾಸುರರು ಭೂಮಿಯಲ್ಲಿ ಜನಿಸಿದರು.

### ಅಸುರರಿಗೂ ತಲುಪಿದ ತತ್ತ್ವವಿದ್ಯೆ

**ಅದರ್ಶನಂ ಸರ್ವಮುನೀಂದ್ರವೃಂದೈಃ**
**ಸಹೈವ ಸಜ್ಜ್ಞಾನಮಹಾನಿಧಾನೇ ।**
**ವ್ಯಾಸೇ ಪ್ರಯಾತೇಽಪಿ ಸುತತ್ತ್ವವಿದ್ಯಾ**
**ತತ್ಸಂಪ್ರದಾಯಾದಪಿ ತೈರವಾಪ್ತಾ ॥ ೧೩೪ ॥**

**ಅದರ್ಶನಂ ಸರ್ವಮುನೀಂದ್ರವೃಂದೈಃ ಸಹ ಏವ ಸಜ್ಜ್ಞಾನಮಹಾನಿಧಾನೇ । ವ್ಯಾಸೇ ಪ್ರಯಾತೇ ಅಪಿ ಸುತತ್ತ್ವವಿದ್ಯಾ ತತ್ಸಂಪ್ರದಾಯಾತ್ ಅಪಿ ತೈಃ ಅವಾಪ್ತಾ ॥ ೧೩೪ ॥**

**ಅರ್ಥ** :– **ಸರ್ವಮುನೀಂದ್ರವೃಂದೈಃ** = ಎಲ್ಲ ಮುನಿಶ್ರೇಷ್ಠರ ಸಮೂಹ ಗಳಿಂದ **ಸಹ ಏವ** = ಕೂಡಿಕೊಂಡೇ **ಸಜ್ಜ್ಞಾನಮಹಾನಿಧಾನೇ** = ಸಮೀಚೀನಜ್ಞಾನದ ಮುಖ್ಯಾಶ್ರಯರಾದ **ವ್ಯಾಸೇ** = ವೇದವ್ಯಾಸರು **ಅದರ್ಶನಂ** = ಕಾಣದೇ **ಪ್ರಯಾತೇ** (ಸತಿ) **ಅಪಿ** = ಹೋಗಿರುವಾಗಲೂ ಸಹ **ತತ್ಸಂಪ್ರದಾಯಾತ್** = ಆ ವ್ಯಾಸರ ಸಂಪ್ರದಾಯದಿಂದ **ಸುತತ್ತ್ವವಿದ್ಯಾ** = ಉತ್ತಮವಾದ ತತ್ತ್ವವಿದ್ಯೆಯು **ತೈಃ ಅಪಿ** = ಅವರಿಂದಲೂ **ಅವಾಪ್ತಾ** = ಪಡೆಯಲ್ಪಟ್ಟದ್ದಾಯಿತು.

**ತಾತ್ಪರ್ಯ** :- ಸಕಲ ಮುನಿಶ್ರೇಷ್ಠರ ಸಮೂಹಗಳೊಂದಿಗೆ, ಸಕಲಜ್ಞಾನದ ಮಹಾನಿಧಿಯಾದ ಶ್ರೀವೇದವ್ಯಾಸರು ಕಣ್ಣಿಗೆ ಕಾಣದಾಗಿದ್ದರಿಂದಲೂ ಸಹ ಆ ಅಸುರರೂ ಸಹ ಅವರ ಸಂಪ್ರದಾಯದ ಬಲದಿಂದಾಗಿ ತತ್ತ್ವವಿದ್ಯೆಯನ್ನು ಪಡೆದುಕೊಂಡರು.

### ಅಸುರರು ಜ್ಞಾನ ಪಡೆಯಲು ಕಾರಣ

**ಉತ್ಸಾದಿತತ್ವಾತ್ ತು ದುರಾಗಮಾನಾಂ**
**ತತ್ಸಂಪ್ರದಾಯಸ್ಯ ಚ ನಾಶಿತತ್ವಾತ್ ।**

**ಪ್ರಸಾರಿತತ್ವಾಚ್ಚ ಸದಾಗಮಾನಾಂ**
**ಪಾಪಾ ಅಪಿ ಜ್ಞಾನಮವಾಪುರೇತತ್ ॥ ೧೩೫ ॥**

ಉತ್ಸಾದಿತತ್ವಾತ್ ತು ದುರಾಗಮಾನಾಂ ತತ್ಸಂಪ್ರದಾಯಸ್ಯ ಚ ನಾಶಿತತ್ವಾತ್ । ಪ್ರಸಾರಿತತ್ವಾತ್ ಚ ಸದಾಗಮಾನಾಂ ಪಾಪಾಃ ಅಪಿ ಜ್ಞಾನಂ ಅವಾಪುಃ ಏತತ್ ॥ ೧೩೫ ॥

**ಅರ್ಥ** :- **ದುರಾಗಮಾನಾಂ** = ದುರಾಗಮಗಳ **ಉತ್ಸಾದಿತತ್ವಾತ್ ತು** = ನಾಶತ್ವದಿಂದಲಾದರೋ **ಚ** = ಮತ್ತು **ತತ್ಸಂಪ್ರದಾಯಸ್ಯ** = ಆ ದುರಾಗಮಗಳ ಸಂಪ್ರದಾಯದ **ನಾಶಿತತ್ವಾತ್** = ನಾಶವಾಗಿದ್ದರಿಂದ **ಚ** = ಮತ್ತು **ಸದಾಗಮಾನಾಂ** = ಸದಾಗಮಗಳ **ಪ್ರಸಾರಿತತ್ವಾತ್** = ಪ್ರಸಾರವಾಗಿದ್ದರಿಂದ **ಪಾಪಾಃ ಅಪಿ** = ಪಾಪಿಗಳೂ ಸಹ **ಏತತ್** = ಈ **ಜ್ಞಾನಂ** = ತತ್ತ್ವಜ್ಞಾನವನ್ನು **ಅವಾಪುಃ** = ಪಡೆದರು.

**ತಾತ್ಪರ್ಯ** :- ದುರಾಗಮಗಳೆಲ್ಲ ನಾಶವಾಗಿದ್ದರಿಂದಲೂ, ಅವುಗಳ ಸಂಪ್ರದಾಯವೂ ಮರೆಯಾಗಿದ್ದರಿಂದಲೂ, ಸದಾಗಮಗಳು ಪ್ರಸಾರಗೊಂಡಿದ್ದರಿಂದಲೂ ಪಾಪಿಗಳೂ ಸಹ ತತ್ತ್ವಜ್ಞಾನವನ್ನು ಪಡೆದುಕೊಂಡರು.

**ಶುನಾ ಪುರೋಡಾಶಮಿವಾವಲೀಢಂ**
**ವೇದಶ್ರುತಿಂ ವಾಽಂತ್ಯಜನೈರವಾಪ್ತಾಮ್ ।**
**ಅನಂತದುಃಖಾಪ್ತಿಸುಯೋಗ್ಯದೈತ್ಯೈ-**
**ರ್ವಿದ್ಯಾಮವಾಪ್ತಾಂ ತು ನ ಸೇಹಿರೇ ಸುರಾಃ ॥ ೧೩೬ ॥**

ಶುನಾ ಪುರೋಡಾಶಂ ಇವ ಅವಲೀಢಂ ವೇದಶ್ರುತಿಂ ವಾ ಅಂತ್ಯಜನೈಃ ಅವಾಪ್ತಾಮ್ । ಅನಂತದುಃಖಾಪ್ತಿಸುಯೋಗ್ಯದೈತ್ಯೈಃ ವಿದ್ಯಾಂ ಅವಾಪ್ತಾಂ ತು ನ ಸೇಹಿರೇ ಸುರಾಃ ॥ ೧೩೬ ॥

**ಅರ್ಥ** :- **ಶುನಾ** = ನಾಯಿಯಿಂದ **ಅವಲೀಢಂ** = ಆಸ್ವಾದಿತವಾದ **ಪುರೋಡಾಶಂ ಇವ** = ಪುರೋಡಾಶದಂತೆ **ಅಂತ್ಯಜನೈಃ ವಾ** = ಅಂತ್ಯಜರಿಂದಲಾದರೋ **ಅವಾಪ್ತಾಂ** = ಪಡೆಯಲ್ಪಟ್ಟ **ವೇದಶ್ರುತಿಂ ಇವ**

= ವೇದಶ್ರವಣವನ್ನೆಂಬಂತೆ **ಅನಂತದುಃಖಾಪ್ತಿಸುಯೋಗದೈತ್ಯೈಃ** = ಕೊನೆಯಿರದ ದುಃಖಪ್ರಾಪ್ತಿಗೆ ಅತ್ಯಂತ ಯೋಗ್ಯರಾದ ದೈತ್ಯರಿಂದ **ಅವಾಪ್ತಾಂ** = ಪಡೆದ **ವಿದ್ಯಾಂ** = ವಿದ್ಯೆಯನ್ನು **ಸುರಾಃ** = ದೇವತೆಗಳು **ನ ಸೇಹಿರೇ** = ಸಹಿಸಲಿಲ್ಲ.

**ತಾತ್ಪರ್ಯ** :- ನಾಯಿ ಪುರೋಡಾಶಕ್ಕೆ ಬಾಯಿ ಹಾಕುವಂತೆ, ಅಂತ್ಯಜರು ವೇದಶ್ರವಣ ಪಡೆಯುವಂತೆ, ಕೊನೆಯಿರದ ದುಃಖಕ್ಕೆ ಅತ್ಯಂತ ಯೋಗ್ಯರಾದ ದೈತ್ಯರು ತತ್ತ್ವವಿದ್ಯೆಯನ್ನು ಪಡೆದುದನ್ನು ದೇವತೆಗಳು ಸಹಿಸದಾದರು.

### ಜ್ಞಾನವಿರುವವರಿಗೆ ತಮಸ್ಸು ಆಗದು

**ನಾವಾಗ್ಗತಿಃ ಕ್ವಾಪಿ ಸುವೇದಿನಾಂ ಭವೇತ್**
**ಪ್ರಾಪ್ಯಂ ಸುಖಂ ನಿತ್ಯಮವಶ್ಯಮೇಭಿಃ ।**
**ಪ್ರಾಪ್ಯಂ ತಮೋಽಂಧಂ ತ್ವಸುರೈರ್ನ ಮುಕ್ತಿಃ**
**ಕದಾಚಿದಾಪ್ಯೇತದಚಿಂತಯನ್ ಸುರಾಃ ॥ ೧೩೭ ॥**

**ನ ಅವಾಗ್ಗತಿಃ ಕ್ವ ಅಪಿ ಸುವೇದಿನಾಂ ಭವೇತ್ ಪ್ರಾಪ್ಯಂ ಸುಖಂ ನಿತ್ಯಂ ಅವಶ್ಯಂ ಏಭಿಃ । ಪ್ರಾಪ್ಯಂ ತಮಃ ಅಂಧಂ ತು ಅಸುರೈಃ ನ ಮುಕ್ತಿಃ ಕದಾಚಿತ್ ಆಪ್ಯಾ ಏತತ್ ಅಚಿಂತಯನ್ ಸುರಾಃ ॥ ೧೩೭ ॥**

**ಅರ್ಥ** :- **ಸುರಾಃ** = ದೇವತೆಗಳು **ಏತತ್** = ಇದನ್ನು **ಅಚಿಂತಯನ್** = ಚಿಂತಿಸಿದರು. **ಸುವೇದಿನಾಂ** = ತತ್ತ್ವವನ್ನು ಚೆನ್ನಾಗಿ ತಿಳಿದವರ **ಅವಾಗ್ಗತಿಃ** = ಅಧೋಗತಿಯು **ಕ್ವಾಪಿ** = ಎಲ್ಲೂ **ನ ಭವೇತ್** = ಆಗಬಾರದು. **ಏಭಿಃ** = ಇವರಿಂದ **ನಿತ್ಯಂ** = ನಿತ್ಯವಾದ **ಸುಖಂ** = ಸುಖವು **ಅವಶ್ಯಂ** = ನಿಶ್ಚಯವಾಗಿಯೂ **ಪ್ರಾಪ್ಯಂ** = ಪಡೆಯಲು ಯೋಗ್ಯವಾದದ್ದು. **ಅಸುರೈಃ ತು** = ಅಸುರರಿಂದಾದರೋ **ಅಂಧಂತಮಃ** = ಅಂಧಂತಮಸ್ಸು **ಪ್ರಾಪ್ಯಂ** = ಪಡೆಯಲು ಯೋಗ್ಯವಾದದ್ದು **ಕದಾಚಿತ್**

**ಅಪಿ** = ಎಂದಿಗೂ **ಮುಕ್ತಿಃ** = ಮುಕ್ತಿಯು **ನ ಆಪ್ಯಾ** = ಪಡೆಯಲು ಯೋಗ್ಯವಲ್ಲ.

**ತಾತ್ಪರ್ಯ** :- ತತ್ತ್ವ ತಿಳಿದವರಿಗೆ ಅಧೋಗತಿ ಎಂದೂ ಎಲ್ಲೂ ಆಗುವಂತಿಲ್ಲ. ಅವರು ನಿತ್ಯಸುಖವನ್ನು ಅವಶ್ಯ ಪಡೆಯಲೇಬೇಕಾಗುವುದು. ಆದರೆ ಅಸುರರಿಗೆ ಲಭಿಸಬೇಕಾದದ್ದು ಅಂಧಂತಮಸ್ಸೇ ಹೊರತು ಮುಕ್ತಿಯಲ್ಲ. ಆದ್ದರಿಂದ ದೇವತೆಗಳು ಆಲೋಚಿಸಿದರು.

### ದೇವತೆಗಳ ವಿಶಿಷ್ಟ ಕಾರ್ಯವೈಖರಿ

**ಜ್ಞಾನಪ್ರದಾನಾಯ ಸತಾಂ ತದನ್ಯ-**
**ಜ್ಞಾನಪ್ರಣಾಶಾಯ ಚ ವಿಷ್ಣುನೈತೇ ।**
**ಕ್ಲೃಪ್ತಾಸ್ತತಸ್ತೇ ಸವಿರಿಂಚಶರ್ವಾ**
**ವಿಜ್ಞಾಪಯಾಮಾಸುರುಪೇತ್ಯ ವಿಷ್ಣುಮ್ ॥ ೧೩೮ ॥**

ಜ್ಞಾನಪ್ರದಾನಾಯ ಸತಾಂ ತದನ್ಯಜ್ಞಾನಪ್ರಣಾಶಾಯ ಚ ವಿಷ್ಣುನಾ ಏತೇ । ಕ್ಲೃಪ್ತಾಃ ತತಃ ತೇ ಸವಿರಿಂಚಶರ್ವಾಃ ವಿಜ್ಞಾಪಯಾಮಾಸುಃ ಉಪೇತ್ಯ ವಿಷ್ಣುಮ್ ॥ ೧೩೮ ॥

**ಅರ್ಥ** :- **ವಿಷ್ಣುನಾ** = ವಿಷ್ಣುವಿನಿಂದ **ಸತಾಂ** = ಸಜ್ಜನರಿಗೆ **ಜ್ಞಾನಪ್ರದಾನಾಯ** = ಜ್ಞಾನವನ್ನು ಕೊಡುವುದಕ್ಕೆ **ಚ** = ಮತ್ತು **ತದನ್ಯಜ್ಞಾನಪ್ರಣಾಶಾಯ** = ಸಜ್ಜನರಿಗಿಂತ ಬೇರೆಯಾದವರ ಜ್ಞಾನವನ್ನು ಚೆನ್ನಾಗಿ ನಾಶಮಾಡುವುದಕ್ಕೆ **ಏತೇ** = ಈ ದೇವತೆಗಳು **ಕ್ಲೃಪ್ತಾಃ** = ನಿಯಮಿತರಾಗಿರುವರು. **ತತಃ** = ಆದ್ದರಿಂದ **ಸವಿರಿಂಚಿಶರ್ವಾಃ** = ಬ್ರಹ್ಮ-ರುದ್ರಸಹಿತರಾದ **ತೇ** = ಅವರು **ವಿಷ್ಣುಂ** = ವಿಷ್ಣುವನ್ನು **ಉಪೇತ್ಯ** = ಸಮೀಪಿಸಿ **ವಿಜ್ಞಾಪಯಾಮಾಸುಃ** = ವಿಜ್ಞಾಪಿಸಿಕೊಂಡರು.

**ತಾತ್ಪರ್ಯ** :- ಸಜ್ಜನರಿಗೆ ಜ್ಞಾನ ನೀಡಲು, ಇತರರಿಗೆ ಜ್ಞಾನ ಕಳೆಯಲು ಶ್ರೀಹರಿಯಿಂದ ದೇವತೆಗಳು ನಿಯಮಿತರಾಗಿರುವರು. ಆದ್ದರಿಂದ ಬ್ರಹ್ಮ ರುದ್ರಾದಿ ದೇವತೆಗಳು ವಿಷ್ಣುವಿನ ಬಳಿಗೆ ತೆರಳಿ ವಿಜ್ಞಾಪಿಸಿಕೊಂಡರು.

ಬ್ರಹ್ಮಾದಿಗಳು ಮಾಡಿದ ಶ್ರೀಹರಿಯ ಪ್ರಾರ್ಥನೆ

**ಕ್ಷೀರೋದಧೇರುತ್ತರತೀರನಿಷ್ಠಿತೈ-**
**ರಭಿಷ್ಟುತಃ ಸುಷ್ಟುತಿಭಿಃ ಪುರುಷ್ಟುತಃ ।**
**ಪ್ರದಾಯ ತೇಷಾಮಭಯಂ ರಮಾಪತಿಃ**
**ಕ್ಷಣಾದಭೂಚ್ಚಾರುತಮಾಕೃತಿಃ ಶಿಶುಃ ॥ ೧೩೯ ॥**

**ಕ್ಷೀರೋದಧೇಃ ಉತ್ತರತೀರನಿಷ್ಠಿತೈಃ ಅಭಿಷ್ಟುತಃ ಸುಷ್ಟುತಿಭಿಃ ಪುರುಷ್ಟುತಃ । ಪ್ರದಾಯ ತೇಷಾಂ ಅಭಯಂ ರಮಾಪತಿಃ ಕ್ಷಣಾತ್ ಅಭೂತ್ ಚಾರುತಮಾಕೃತಿಃ ಶಿಶುಃ ॥ ೧೩೯ ॥**

**ಅರ್ಥ** :- **ಕ್ಷೀರೋದಧೇಃ** = ಕ್ಷೀರಸಾಗರದ **ಉತ್ತರತೀರನಿಷ್ಠಿತೈಃ** = ಉತ್ತರದಿಕ್ಕಿನ ತೀರದಲ್ಲಿ ಸೇರಿದ (**ಸುರೈಃ**) = ದೇವತೆಗಳಿಂದ **ಸುಷ್ಟುತುಭಿಃ** = ಉತ್ತಮಸ್ತೋತ್ರಗಳಿಂದ **ಅಭಿಷ್ಟುತಃ** = ಸ್ತುತಿಸಲ್ಪಟ್ಟ **ಪುರುಷ್ಟುತಃ** = ಶ್ರೇಷ್ಠರಾದ ಬ್ರಹ್ಮಾದಿಗಳಿಂದ ಸ್ತುತನಾದ **ರಮಾಪತಿಃ** = ಲಕ್ಷ್ಮೀಪತಿಯಾದ ಶ್ರೀಹರಿಯು **ತೇಷಾಂ** = ಅವರಿಗೆ **ಅಭಯಂ** = ಅಭಯವನ್ನು **ಪ್ರದಾಯ** = ನೀಡಿ **ಕ್ಷಣಾತ್** = ಕ್ಷಣದಲ್ಲೇ **ಚಾರುತಮಾಕೃತಿಃ** = ಅತ್ಯಂತ ಸುಂದರವಾದ ಆಕೃತಿಯ **ಶಿಶುಃ** = ಮಗುವು **ಅಭೂತ್** = ಆದನು.

**ತಾತ್ಪರ್ಯ** :- ಕ್ಷೀರಸಮುದ್ರದ ಉತ್ತರ ತೀರದಲ್ಲಿ ಸೇರಿದ ಅವರು ಉತ್ತಮ ಸ್ತುತಿಗಳಿಂದ ಸ್ತುತಿಸಿದಾಗ ಶ್ರೀಹರಿ ಅವರಿಗೆ ಅಭಯ ನೀಡಿದ. ಕ್ಷಣದಲ್ಲೇ ಅತ್ಯಂತ ಸುಂದರವಾದ ಆಕೃತಿಯ ಮಗುವಿನ ರೂಪವನ್ನು ಧರಿಸಿದ.

ಶುದ್ಧೋಧನನಾಗಿ ತ್ರಿಪುರಾಸುರ - ಗಯೆಯಲ್ಲಿ ಬುದ್ಧಾವತಾರ

**ಯಸ್ತ್ರೈಪುರಾಣಾಂ ಪ್ರಥಮೋಽತ್ರ ಜಾತಃ**
**ಶುದ್ಧೋಧನೇತ್ಯೇವ ಜಿನೇತಿ ಚೋಕ್ತಃ ।**
**ಕ್ಷೇತ್ರೇ ಗಯಾಖ್ಯೇಽಸ್ಯ ಶಿಶುಂ ಪ್ರಜಾತಂ**
**ಸಂಪ್ರಾಪ್ಯ ದೂರೇಽತ್ರ ಬಭೂವ ವಿಷ್ಣುಃ ॥ ೧೪೦ ॥**

ಯಃ ತ್ರೈಪುರಾಣಾಂ ಪ್ರಥಮಃ ಅತ್ರ ಜಾತಃ ಶುದ್ಧೋದನೇತಿ ಏವ ಜಿನೇತಿ ಚ ಉಕ್ತಃ । ಕ್ಷೇತ್ರೇ ಗಯಾಖ್ಯೇ ಅಸ್ಯ ಶಿಶುಂ ಪ್ರಜಾತಂ ಸಂಪ್ರಾಸ್ಯ ದೂರೇ ಅತ್ರ ಬಭೂವ ವಿಷ್ಣುಃ ॥ ೧೪೦ ॥

**ಅರ್ಥ** :- **ತ್ರೈಪುರಾಣಾಂ** = ತ್ರಿಪುರಕ್ಕೆ ಸಂಬಂಧಿಸಿದ ಅಸುರರಲ್ಲಿ **ಯಃ** = ಯಾವನು **ಪ್ರಥಮಃ** = ಮೊದಲಿನವನೋ (**ಸಃ**) = ಅವನು **ಅತ್ರ** = ಈ ಭೂಮಿಯಲ್ಲಿ **ಜಾತಃ** (**ಸನ್**) = ಜನಿಸಿದವನಾಗಿ **ಶುದ್ಧೋದನೇತಿ** **ಏವ** = ಶುದ್ಧೋದನ ಎಂದೇ **ಚ** = ಮತ್ತು **ಜಿನೇತಿ** = ಜಿನ ಎಂದೂ **ಉಕ್ತಃ** = ಕರೆಯಲ್ಪಟ್ಟವನು. **ಗಯಾಖ್ಯೇ** = ಗಯಾ ಎಂಬ **ಕ್ಷೇತ್ರೇ** = ಕ್ಷೇತ್ರದಲ್ಲಿ **ಪ್ರಜಾತಂ** = ಜನಿಸಿದ **ಶಿಶುಂ** = ಶಿಶುವನ್ನು **ವಿಷ್ಣುಃ** = ವಿಷ್ಣುವು **ದೂರೇ** = ದೂರದಲ್ಲಿ **ಸಂಪ್ರಾಸ್ಯ** = ಎಸೆದು **ಅತ್ರ** = ಅಲ್ಲಿ **ಬಭೂವ** = ಬಂದನು.

**ತಾತ್ಪರ್ಯ** :- ತ್ರಿಪುರಾಸುರರಲ್ಲಿ ಮೊದಲನೆಯವನು ಭೂಮಿಯಲ್ಲಿ ಜನಿಸಿ ಶುದ್ಧೋದನನೆಂದು, ಜಿನನೆಂದು ಕರೆಯಲ್ಪಡುತ್ತಿದ್ದ. ಗಯಾಕ್ಷೇತ್ರದಲ್ಲಿ ಅವನಿಗೆ ಆಗ ತಾನೇ ಜನಿಸಿದ ಮಗುವನ್ನು ದೂರಕ್ಕೆಸೆದು ಶಿಶುರೂಪದ ಶ್ರೀಹರಿ ತಾನು ಅಲ್ಲಿ ಮಲಗಿದ.

### ಬುದ್ಧರೂಪದ ವೈಭವ

**ಅಜಾನಮಾನಾಃ ಸ್ವಶಿಶುಂ ಗತಂ ತಂ**
**ಶಿಶುಂ ಹರಿಂ ವೀಕ್ಷ್ಯ ನಿಜಂ ಸ್ಮ ಮೇನಿರೇ ।**
**ತೇಷಾಂ ತದಾ ವೈದಿಕಕರ್ಮ ವೀಕ್ಷ್ಯ**
**ಸಂಪ್ರಾಹಸತ್ ತದ್ವಪುಷೈವ ಕೇಶವಃ ॥ ೧೪೧ ॥**

ಅಜಾನಮಾನಾಃ ಸ್ವಶಿಶುಂ ಗತಂ ತಂ ಶಿಶುಂ ಹರಿಂ ವೀಕ್ಷ್ಯ ನಿಜಂ ಸ್ಮ ಮೇನಿರೇ । ತೇಷಾಂ ತದಾ ವೈದಿಕಕರ್ಮ ವೀಕ್ಷ್ಯ ಸಂಪ್ರಾಹಸತ್ ತದ್ವಪುಷಾ ಏವ ಕೇಶವಃ ॥ ೧೪೧ ॥

**ಅರ್ಥ** :- **ಗತಂ** = ಎಸೆಯಲ್ಪಟ್ಟ **ತಂ** = ಆ **ಸ್ವಶಿಶುಂ** = ತಮ್ಮ ಮಗುವನ್ನು **ಅಜಾನಮಾನಾಃ** = ತಿಳಿಯದವರಾಗಿ **ಶಿಶುಂ** = ಶಿಶುವಾದ **ಹರಿಂ** = ಹರಿಯನ್ನು **ವೀಕ್ಷ್ಯ** = ನೋಡಿ **ನಿಜಂ** = ತಮ್ಮದೆಂದು **ಮೇನಿರೇ ಸ್ಮ** = ತಿಳಿದರು. **ತದಾ** = ಆಗ **ತೇಷಾಂ** = ಅವರ **ವೈದಿಕಕರ್ಮ** = ವೈದಿಕಕರ್ಮವನ್ನು **ವೀಕ್ಷ್ಯ** = ನೋಡಿ, **ಕೇಶವಃ** = ಕೇಶವನು **ತದ್ವಪುಷಾ ಏವ** = ಆ ರೂಪದಿಂದಲೇ **ಸಂಪ್ರಾಹಸತ್** = ಜೋರಾಗಿ ನಕ್ಕನು.

**ತಾತ್ಪರ್ಯ** :- ತಮ್ಮ ಮಗು ದೂರ ಬಿಸಾಡಲ್ಪಟ್ಟದ್ದನ್ನು ಅರಿಯದ ಅವರೆಲ್ಲ ಆ ಶಿಶುರೂಪದ ಹರಿಯನ್ನೇ ತಮ್ಮ ಮಗುವೆಂದು ಭ್ರಮಿಸಿದರು. ಆಗ ಅವರ ವೈದಿಕಕ್ರಮವನ್ನು ಕಂಡು ಶ್ರೀಹರಿಯು ಆ ರೂಪದಿಂದಲೇ ಜೋರಾಗಿ ನಕ್ಕ.

### ಶಿಶುವಾಗಿ ದೇವವೃಂದವನ್ನು ಗೆದ್ದ ಬುದ್ಧ

**ತಂ ಜಾತಮಾತ್ರಂ ಪ್ರಹಸಂತಮೀಕ್ಷ್ಯ**
**ಸುವಿಸ್ಮಿತೈಃ ಪೃಷ್ಟ ಉವಾಚ ವಿಷ್ಣುಃ ।**
**ಬುದ್ಧೋಽಹಮಿತ್ಯೇವ ಸುನಿತ್ಯಬೋಧಾ-**
**ಜ್ಜಗಾದ ಚೈಷಾಮಥ ಬುದ್ಧದರ್ಶನಮ್ ॥ ೧೪೨ ॥**

ತಂ ಜಾತಮಾತ್ರಂ ಪ್ರಹಸಂತಂ ಈಕ್ಷ್ಯ ಸುವಿಸ್ಮಿತೈಃ ಪೃಷ್ಟಃ ಉವಾಚ ವಿಷ್ಣುಃ । ಬುದ್ಧಃ ಅಹಂ ಇತಿ ಏವ ಸುನಿತ್ಯಬೋಧಾತ್ ಜಗಾದ ಚ ಏಷಾಂ ಅಥ ಬುದ್ಧದರ್ಶನಮ್ ॥ ೧೪೨ ॥

**ಅರ್ಥ** :- **ಜಾತಮಾತ್ರಂ** = ಆಗಷ್ಟೆ ಹುಟ್ಟಿಬಂದ **ಪ್ರಹಸಂತಂ** = ಗಹಗಹಿಸಿ ನಗುತ್ತಿದ್ದ **ತಂ** = ಅವನನ್ನು **ಈಕ್ಷ್ಯ** = ನೋಡಿ **ಸುವಿಸ್ಮಿತೈಃ** = ಅತ್ಯಂತ ಆಶ್ಚರ್ಯಪಟ್ಟ ಅವರಿಂದ **ಪೃಷ್ಟಃ** = ಕೇಳಲ್ಪಟ್ಟ **ವಿಷ್ಣುಃ** = ವಿಷ್ಣುವು **ಸುನಿತ್ಯಬೋಧಾತ್** = ಉತ್ತಮವಾದ ನಿತ್ಯಜ್ಞಾನದಿಂದಾಗಿ **ಅಹಂ** = ನಾನು **ಬುದ್ಧಃ ಏವ** = ಬುದ್ಧನೇ **ಇತಿ** =

ಎಂದು **ಉವಾಚ** = ಹೇಳಿದನು **ಚ** = ಮತ್ತು **ಅಥ** = ಬಳಿಕ **ಏಷಾಂ** = ಅವರಿಗೆ (ಜಿನಾದಿಗಳಿಗೆ) **ಬುದ್ಧದರ್ಶನಂ** = ಬುದ್ಧಶಾಸ್ತ್ರವನ್ನು **ಜಗಾದ** = ತಿಳಿಸಿದನು.

**ತಾತ್ಪರ್ಯ** :- ಜನಿಸಿದೊಡನೆಯೇ ಹಾಗೆ ಮಗು ಗಹಗಹಿಸುತ್ತಿದ್ದುದನ್ನು ಕಂಡು ಬಹಳವಾಗಿ ಅಚ್ಚರಿಪಟ್ಟ ಅವರು ಕೇಳಿದಾಗ ಶ್ರೀಹರಿ ತಿಳಿಸಿದ : 'ನಾನು ಬುದ್ಧ'. ಪರಿಪೂರ್ಣವಾದ ನಿತ್ಯಜ್ಞಾನಸ್ವರೂಪನಾದ ಅವನು ಹಾಗೆ ಹೇಳಿ ಅವರಿಗೆ ಬುದ್ಧದರ್ಶನವನ್ನು ತಿಳಿಸಿದ.

### ಸಕಲ ದೇವತೆಗಳ ಪರಾಭವ

**ತಥಾಽಪ್ಯವಿಶ್ವಾಸಮವೇಕ್ಷ್ಯ ತೇಷಾಂ**
**ಸಸ್ಮಾರ ದೇವಾನಖಿಲಾನ್ ಜನಾರ್ದನಃ ।**
**ವಿಜ್ಞಾಯ ತೇ ತಸ್ಯ ಮನೋಗತಂ ನಿಜಾನ್**
**ಪ್ರಚಿಕ್ಷಿಪುರ್ಹೇತಿಗಣಾನಮುಷ್ಮಿನ್ ॥ ೧೪೩ ॥**

**ತಥಾ ಅಪಿ ಅವಿಶ್ವಾಸಂ ಅವೇಕ್ಷ್ಯ ತೇಷಾಂ ಸಸ್ಮಾರ ದೇವಾನ್ ಅಖಿಲಾನ್ ಜನಾರ್ದನಃ । ವಿಜ್ಞಾಯ ತೇ ತಸ್ಯ ಮನೋಗತಂ ನಿಜಾನ್ ಪ್ರಚಿಕ್ಷಿಪುಃ ಹೇತಿಗಣಾನ್ ಅಮುಷ್ಮಿನ್ ॥ ೧೪೩ ॥**

**ಅರ್ಥ** :- **ತಥಾ ಅಪಿ** = ಆದರೂ ಸಹ **ತೇಷಾಂ** = ಅವರ **ಅವಿಶ್ವಾಸಂ** = ವಿಶ್ವಾಸವಿಲ್ಲದಿರುವುದನ್ನು **ಅವೇಕ್ಷ್ಯ** = ಕಂಡು **ಜನಾರ್ದನಃ** = ದುಷ್ಟಜನರನ್ನು ತುಳಿಯುವ ಆ ಬುದ್ಧರೂಪದ ಶ್ರೀಹರಿಯು **ಅಖಿಲಾನ್** = ಎಲ್ಲ **ದೇವಾನ್** = ದೇವತೆಗಳನ್ನು **ಸಸ್ಮಾರ** = ಸ್ಮರಿಸಿದನು. **ತೇ** = ಆ ದೇವತೆಗಳು **ತಸ್ಯ** = ಅವನ **ಮನೋಗತಂ** = ಮನೋಭೀಷ್ಟವನ್ನು **ವಿಜ್ಞಾಯ** = ತಿಳಿದು **ನಿಜಾನ್** = ತಮ್ಮ **ಹೇತಿಗಣಾನ್** = ಆಯುಧಸಮೂಹಗಳನ್ನು **ಅಮುಷ್ಮಿನ್** = ಅವನ ಮೇಲೆ **ಪ್ರಚಿಕ್ಷಿಪುಃ** = ಎಸೆದರು.

**ತಾತ್ಪರ್ಯ** :- ಆದರೂ ಅವರಿಗೆ ತನ್ನಲ್ಲಿ ವಿಶ್ವಾಸ ಮೂಡದಿದ್ದುದನ್ನು ಕಂಡು ಬುದ್ಧರೂಪದ ಶ್ರೀಹರಿ ಸಕಲ ದೇವತೆಗಳನ್ನು ಯುದ್ಧ ಮಾಡಲು

ಬರುವಂತೆ ಸ್ಮರಿಸಿದ ; ಅವರು ಅವನ ಭಾವವನ್ನು ಅರಿತು ತಮ್ಮ ಆಯುಧಗಳ ಸಮೂಹವನ್ನು ಅವನ ಮೇಲೆ ಎಸೆದರು.

### ಶಿವಾದಿಗಳೂ ಪರಾಭವಗೊಂಡರು

**ಸ ಜಾತಮಾತ್ರಃ ಶಿವಪೂರ್ವಕಾಣಾಂ**
**ಶೂಲಾದಿಹೇತೀರಖಿಲಾ ನಿಗೀರ್ಯ ।**
**ದೈತ್ಯಾತಿಮೋಹಾಯ ನಿಜಂ ಚ ಚಕ್ರಂ**
**ಸ್ವಮುಕ್ತಮಾಶ್ವೇವ ವಶೀ ಸಮಗ್ರಹೀತ್ ॥ ೧೪೪ ॥**

**ಸಃ ಜಾತಮಾತ್ರಃ ಶಿವಪೂರ್ವಕಾಣಾಂ ಶೂಲಾದಿಹೇತೀಃ ಅಖಿಲಾಃ ನಿಗೀರ್ಯ । ದೈತ್ಯಾತಿಮೋಹಾಯ ನಿಜಂ ಚ ಚಕ್ರಂ ಸ್ವಮುಕ್ತಂ ಆಶು ಏವ ವಶೀ ಸಮಗ್ರಹೀತ್ ॥ ೧೪೪ ॥**

**ಅರ್ಥ :–** **ಜಾತಮಾತ್ರಃ** = ಆಗತಾನೆ ಹುಟ್ಟಿದ **ವಶೀ** = ವಶಿಯಾದ **ಸಃ** = ಅವನು (ಆ ಶಿಶುವು) **ಶಿವಪೂರ್ವಕಾಣಾಂ** = ಶಿವ ಮೊದಲಾದವರ **ಅಖಿಲಾಃ** = ಎಲ್ಲ **ಶೂಲಾದಿಹೇತೀಃ** = ಶೂಲ ಮೊದಲಾದ ಆಯುಧಗಳನ್ನು **ನಿಗೀರ್ಯ** = ನುಂಗಿಹಾಕಿ **ದೈತ್ಯಾತಿ ಮೋಹಾಯ** = ದೈತ್ಯರನ್ನು ಅತಿಯಾಗಿ ಮೋಹಗೊಳಿಸಲೆಂದು **ಸ್ವಮುಕ್ತಂ** = ತನ್ನ ವಿಷ್ಣುರೂಪದಿಂದಲೇ ಬಿಡಲ್ಪಟ್ಟ **ನಿಜಂ** = ತನ್ನ **ಚಕ್ರಂ ಚ** = ಸುದರ್ಶನಚಕ್ರವನ್ನೂ ಸಹ **ಆಶು ಏವ** = ಕೂಡಲೇ **ಸಮಗ್ರಹೀತ್** = ಹಿಡಿದುಕೊಂಡ.

**ತಾತ್ಪರ್ಯ :-** ಆಗ ತಾನೇ ಹುಟ್ಟಿದ್ದ ಶಿಶುರೂಪದ ಶ್ರೀಹರಿ ಶಿವ ಮೊದಲಾದವರ ತ್ರಿಶೂಲ ಮೊದಲಾದ ಆಯುಧಗಳನ್ನೆಲ್ಲ ನುಂಗಿಹಾಕಿದ. ಅಸುರರನ್ನು ಬಹಳವಾಗಿ ಮರುಳುಗೊಳಿಸಲೆಂದು ತಾನು ವಿಷ್ಣುರೂಪದಿಂದ ಪ್ರಯೋಗಿಸಿದ ಚಕ್ರವನ್ನು ಸಹ ಕೂಡಲೇ ಕೈಯಲ್ಲಿ ಹಿಡಿದುಕೊಂಡ.

### ಚಕ್ರಾಸನನಾಗಿ ಬುದ್ಧ

**ತದಾಸನತ್ವೇನ ವಿಧಾಯ ತಸ್ಮಿನ್**
**ಸಮಾಸ್ಥಿತಂ ದೇವಗಣಾಃ ಪ್ರಣಮ್ಯ ।**

ಜಗ್ಮುಃ ಸ್ವಧಾಮಾನಿ ವಚಾಂಸಿ ಚಾಸ್ಯ
ಸ್ವೀಚಕ್ರುರಾಶ್ವೇವ ಜಿನಾದಿದೈತ್ಯಾಃ ॥ ೧೪೫ ॥

ತತ್ ಆಸನತ್ವೇನ ವಿಧಾಯ ತಸ್ಮಿನ್ ಸಮಾಸ್ಥಿತಂ ದೇವಗಣಾಃ ಪ್ರಣಮ್ಯ । ಜಗ್ಮುಃ ಸ್ವಧಾಮಾನಿ ವಚಾಂಸಿ ಚ ಅಸ್ಯ ಸ್ವೀಚಕ್ರುಃ ಆಶು ಏವ ಜಿನಾದಿದೈತ್ಯಾಃ ॥ ೧೪೫ ॥

**ಅರ್ಥ** :- **ತತ್** = ಅದನ್ನು **ಆಸನತ್ವೇನ** = ಆಸನವನ್ನಾಗಿ **ವಿಧಾಯ** = ಮಾಡಿಕೊಂಡು **ತಸ್ಮಿನ್** = ಅದರಲ್ಲಿ **ಸಮಾಸ್ಥಿತಂ** = ಕುಳಿತ ಅವನನ್ನು **ದೇವಗಣಾಃ** = ದೇವತೆಗಳ ಸಮೂಹಗಳು **ಪ್ರಣಮ್ಯ** = ನಮಸ್ಕರಿಸಿ **ಸ್ವಧಾಮಾನಿ** = ತಮ್ಮ ಲೋಕಗಳನ್ನು ಕುರಿತು **ಜಗ್ಮುಃ** = ಹೋದವು. **ಚ** = ಮತ್ತು **ಅಸ್ಯ** = ಅವನ **ವಚಾಂಸಿ** = ಮಾತುಗಳನ್ನು **ಜಿನಾದಿದೈತ್ಯಾಃ** = ಜಿನ ಮೊದಲಾದ ದೈತ್ಯರು **ಆಶು ಏವ** = ಕೂಡಲೇ **ಸ್ವೀಚಕ್ರುಃ** = ಸ್ವೀಕರಿಸಿದರು.

**ತಾತ್ಪರ್ಯ** :- ಬುದ್ಧರೂಪದ ಶ್ರೀಹರಿ ಆ ಚಕ್ರವನ್ನು ತನಗೆ ಆಸನವನ್ನಾಗಿ ಮಾಡಿಕೊಂಡು ಅದರ ಮೇಲೆ ಕುಳಿತ. ಅವನಿಗೆ ದೇವತೆಗಳ ಗುಂಪುಗಳು ನಮಸ್ಕರಿಸಿ ತಮ್ಮ ಲೋಕಗಳಿಗೆ ತೆರಳಿದವು. ಜಿನ ಮೊದಲಾದ ದೈತ್ಯರು ಕೂಡಲೆ ಅವನ ಮಾತುಗಳನ್ನು ಸ್ವೀಕರಿಸಿದರು.

### ಬುದ್ಧನ ಉಪದೇಶ

ತೇ ಜ್ಞಾನಧರ್ಮಾವಪಹಾಯ ಪಾಪಾ
ವಿಮೋಹಿತಾ ದೇವವರೇಣ ಸರ್ವೇ ।
ಜಗ್ಮುಸ್ತಮೋಽಂಧಂ ಕ್ಷಣಿಕಂ ಸಮಸ್ತಂ
ಜ್ಞಾನಂ ನ ಸಚ್ಚೇತಿ ದೃಢಂ ಸ್ಮರಂತಃ ॥ ೧೪೬ ॥

ತೇ ಜ್ಞಾನಧರ್ಮೌ ಅಪಹಾಯ ಪಾಪಾಃ ವಿಮೋಹಿತಾಃ ದೇವವರೇಣ ಸರ್ವೇ । ಜಗ್ಮುಃ ತಮಃ ಅಂಧಂ ಕ್ಷಣಿಕಂ ಸಮಸ್ತಂ ಜ್ಞಾನಂ ನ ಸತ್ ಚ ಇತಿ ದೃಢಂ ಸ್ಮರಂತಃ ॥ ೧೪೬ ॥

**ಅರ್ಥ** :- **ದೇವವರೇಣ** = ದೇವಶ್ರೇಷ್ಠನಾದ ಶ್ರೀಹರಿಯಿಂದ **ವಿಮೋಹಿತಾಃ** = ಬಹಳವಾಗಿ ಮೋಹಿತರಾದ **ಪಾಪಾಃ** = ಪಾಪಿಗಳಾದ

**ತೇ ಸರ್ವೇ** = ಅವರೆಲ್ಲರೂ **ಜ್ಞಾನಧರ್ಮೌ** = ಜ್ಞಾನ–ಧರ್ಮಗಳನ್ನು **ಅಪಹಾಯ** = ತೊರೆದು **ಸಮಸ್ತಂ** = ಇಡೀ ಜಗತ್ತು **ಕ್ಷಣಿಕಂ** = ಕ್ಷಣಿಕ **ಚ** = ಮತ್ತು **ಜ್ಞಾನಂ** = ಜ್ಞಾನವು **ನ ಸತ್** = ಸತ್ಯವಲ್ಲ **ಇತಿ** = ಎಂದು **ದೃಢಂ** = ದೃಢವಾಗಿ **ಸ್ಮರಂತಃ (ಸಂತಃ)** = ಧ್ಯಾನಿಸುವವರಾಗಿ **ಅಂಧಂ ತಮಃ** = ಅಂಧಂತಮಸ್ಸನ್ನು ಕುರಿತು **ಜಗ್ಮುಃ** = ತೆರಳಿದರು.

**ತಾತ್ಪರ್ಯ** :- ಆ ಪಾಪಿಗಳೆಲ್ಲರು ದೇವೋತ್ತಮನಾದ ಶ್ರೀಹರಿಯಿಂದ ಬಹಳವಾಗಿ ಮೋಹಿತರಾಗಿ ಜ್ಞಾನ, ಧರ್ಮಗಳನ್ನು ತೊರೆದು ಸಕಲವನ್ನೂ ಕ್ಷಣಿಕ, ಸತ್ಯವಲ್ಲ ಎಂದು ದೃಢವಾಗಿ ತಿಳಿದು ಅಂಧಂತಮಸ್ಸಿಗೆ ತೆರಳಿದರು.

### ಸುರವೃಂದಕ್ಕೆ ತಾರಕವಾದ ಬುದ್ಧದರ್ಶನ

**ನಾರಾಯಣಃ ಪ್ರಾಪ್ಯ ಸುರೇಂದ್ರವೃಂದಂ**
**ವೃತ್ತಂ ಚ ತೇಷಾಮಖಿಲಂ ನಿಗದ್ಯ ।**
**ಪೃಷ್ಟಶ್ಚ ತೈರಾಹ ನಿಜಂ ಹೃದಿಸ್ಥಂ**
**ಬೌದ್ಧಾಗಮಾರ್ಥಂ ಸೃತಿಬಂಧಮೋಚನಮ್ ॥ ೧೪೭ ॥**

ನಾರಾಯಣಃ ಪ್ರಾಪ್ಯ ಸುರೇಂದ್ರವೃಂದಂ ವೃತ್ತಂ ಚ ತೇಷಾಂ ಅಖಿಲಂ ನಿಗದ್ಯ । ಪೃಷ್ಟಃ ಚ ತೈಃ ಆಹ ನಿಜಂ ಹೃದಿಸ್ಥಂ ಬೌದ್ಧಾಗಮಾರ್ಥಂ ಸೃತಿಬಂಧ ಮೋಚನಮ್ ॥ ೧೪೭ ॥

**ಅರ್ಥ** :– **ನಾರಾಯಣಃ** = ನಾರಾಯಣನು **ಸುರೇಂದ್ರವೃಂದಂ** = ದೇವಶ್ರೇಷ್ಠರ ಸಮೂಹವನ್ನು ಕುರಿತು **ಪ್ರಾಪ್ಯ** = ಸೇರಿ **ಚ** = ಮತ್ತು **ತೇಷಾಂ** = ಅವರಿಗೆ **ವೃತ್ತಂ** = ನಡೆದ **ಅಖಿಲಂ** = ಎಲ್ಲವನ್ನೂ **ನಿಗದ್ಯ** = ಹೇಳಿ **ಚ** = ಮತ್ತು **ತೈಃ** = ಅವರಿಂದ **ಪೃಷ್ಟಃ (ಸನ್)** = ಕೇಳಲ್ಪಟ್ಟವನಾಗಿ **ಸೃತಿಬಂಧಮೋಚನಂ** = ಸಂಸಾರಬಂಧನದಿಂದ ಬಿಡುಗಡೆಗೊಳಿಸುವ **ನಿಜಂ** = ತನ್ನ **ಹೃದಿಸ್ಥಂ** = ಮನಸ್ಸಿನಲ್ಲಿದ್ದ **ಬೌದ್ಧಾಗಮಾರ್ಥಂ** = ಬೌದ್ಧಶಾಸ್ತ್ರದ ಅರ್ಥವನ್ನು **ಆಹ** = ಹೇಳಿದನು.

**ತಾತ್ಪರ್ಯ** :- ಬುದ್ಧರೂಪದ ನಾರಾಯಣ ದೇವಸಮೂಹದ ಬಳಿಗೆ ತೆರಳಿ ಅವರಿಗೆ ನಡೆದ ವಿಷಯವನ್ನೆಲ್ಲ ತಿಳಿಸಿದ. ಅವರು ಕೇಳಿಕೊಂಡಾಗ ತನ್ನ

ಮನಸ್ಸಿನಲ್ಲಿದ್ದ ಸಂಸಾರಬಂಧನದ ಬಿಡುಗಡೆಗೆ ಕಾರಣವಾಗುವ ಬೌದ್ಧಶಾಸ್ತ್ರದ ಅರ್ಥವನ್ನು ತಿಳಿಸಿದ.

ಬೌದ್ಧದರ್ಶನದ ಅಂತರಾರ್ಥ

**ಕ್ಷಣಾದಯಃ ಕ್ಷಣಿಕಾಸ್ತದ್ವಿಶೇಷಾ**
**ಯತಃ ಪ್ರಯಾಂತ್ಯೇವ ನಿಸರ್ಗತೋಽಖಿಲಾಃ ।**
**ತತಃ ಸ್ಥಿರತ್ವೇಽಪಿ ವಿಶೇಷಸಂಶ್ರಯಾ-**
**ದುಕ್ತಂ ಕ್ಷಣಸ್ಥಾಯಿ ಮಯಾ ಸಮಸ್ತಮ್ ॥ ೧೪೮ ॥**

ಕ್ಷಣಾದಯಃ ಕ್ಷಣಿಕಾಃ ತದ್ವಿಶೇಷಾಃ ಯತಃ ಪ್ರಯಾಂತಿ ಏವ ನಿಸರ್ಗತಃ ಅಖಿಲಾಃ । ತತಃ ಸ್ಥಿರತ್ವೇ ಅಪಿ ವಿಶೇಷಸಂಶ್ರಯಾತ್ ಉಕ್ತಂ ಕ್ಷಣಸ್ಥಾಯಿ ಮಯಾ ಸಮಸ್ತಮ್ ॥ ೧೪೮ ॥

**ಅರ್ಥ** :- **ಕ್ಷಣಾದಯಃ** = ಕ್ಷಣ ಮೊದಲಾದವು **ತದ್ವಿಶೇಷಾಃ** = ಕಾಲದ ವಿಶೇಷಗಳು **ಅಖಿಲಾಃ** = ಎಲ್ಲವೂ **ಯತಃ** = ಯಾವ ಕಾರಣದಿಂದ **ನಿಸರ್ಗತಃ ಏವ** = ಸ್ವಾಭಾವಿಕವಾಗಿಯೇ **ಪ್ರಯಾಂತಿ** = ನಾಶವಾಗುವವೋ **ತತಃ** = ಆ ಕಾರಣದಿಂದ **ಸ್ಥಿರತ್ವೇ ಅಪಿ** = ಸ್ಥಿರತ್ವದಲ್ಲಿದ್ದರೂ **ಕ್ಷಣಿಕಾಃ** = ಕ್ಷಣಿಕಗಳು. (ಇತಿ) = ಹೀಗೆ **ವಿಶೇಷಸಂಶ್ರಯಾತ್** = ವಿಶೇಷದ ಆಧಾರದಿಂದ **ಮಯಾ** = ನನ್ನಿಂದ **ಸಮಸ್ತಂ** = ಸಕಲವು **ಕ್ಷಣಸ್ಥಾಯಿ** = ಕ್ಷಣದಲ್ಲಿ ನೆಲೆಸಿರುವುದು (ಇತಿ) = ಎಂದು **ಉಕ್ತಂ** = ಹೇಳಲ್ಪಟ್ಟಿತು.

**ತಾತ್ಪರ್ಯ** :- ಕ್ಷಣಾದಿಗಳು, ಅವುಗಳ ವಿಶೇಷಗಳು ಎಲ್ಲವೂ ನೈಸರ್ಗಿಕವಾಗಿ ಸ್ವಲ್ಪ ಕಾಲದಲ್ಲೇ ನಾಶ ಹೊಂದುವುದರಿಂದ ಮೂಲತಃ ಅವು ಸ್ಥಿರವಾಗಿದ್ದರೂ ಕ್ಷಣಿಕವೆನ್ನಿಸುವವು. ಹೀಗೆ ವಿಶೇಷವನ್ನು ಗಮನದಲ್ಲಿಟ್ಟು ಕೊಂಡು ನಾನು ಸಕಲವೂ ಕ್ಷಣಿಕ ಎಂದು ತಿಳಿಸಿದೆ.

**ತದ್ವಾನ್ ವಿಶೇಷಶ್ಚ ಯತೋ ನ ಭಿನ್ನೌ**
**ಸದಾ ಸ್ವನಿರ್ವಾಹಕಶಕ್ತಿಯುಕ್ತೌ ।**

**ತೇ ಸರ್ವೇ** = ಅವರೆಲ್ಲರೂ **ಜ್ಞಾನಧರ್ಮೌ** = ಜ್ಞಾನ-ಧರ್ಮಗಳನ್ನು **ಅಪಹಾಯ** = ತೊರೆದು **ಸಮಸ್ತಂ** = ಇಡೀ ಜಗತ್ತು **ಕ್ಷಣಿಕಂ** = ಕ್ಷಣಿಕ **ಚ** = ಮತ್ತು **ಜ್ಞಾನಂ** = ಜ್ಞಾನವು **ನ ಸತ್** = ಸತ್ಯವಲ್ಲ **ಇತಿ** = ಎಂದು **ದೃಢಂ** = ದೃಢವಾಗಿ **ಸ್ಮರಂತಃ (ಸಂತಃ)** = ಧ್ಯಾನಿಸುವವರಾಗಿ **ಅಂಧಂ ತಮಃ** = ಅಂಧಂತಮಸ್ಸನ್ನು ಕುರಿತು **ಜಗ್ಮುಃ** = ತೆರಳಿದರು.

**ತಾತ್ಪರ್ಯ :-** ಆ ಪಾಪಿಗಳೆಲ್ಲರು ದೇವೋತ್ತಮನಾದ ಶ್ರೀಹರಿಯಿಂದ ಬಹಳವಾಗಿ ಮೋಹಿತರಾಗಿ ಜ್ಞಾನ, ಧರ್ಮಗಳನ್ನು ತೊರೆದು ಸಕಲವನ್ನೂ ಕ್ಷಣಿಕ, ಸತ್ಯವಲ್ಲ ಎಂದು ದೃಢವಾಗಿ ತಿಳಿದು ಅಂಧಂತಮಸ್ಸಿಗೆ ತೆರಳಿದರು.

### ಸುರವೃಂದಕ್ಕೆ ತಾರಕವಾದ ಬುದ್ಧದರ್ಶನ

**ನಾರಾಯಣಃ ಪ್ರಾಪ್ಯ ಸುರೇಂದ್ರವೃಂದಂ**
**ವೃತ್ತಂ ಚ ತೇಷಾಮಖಿಲಂ ನಿಗದ್ಯ ।**
**ಪೃಷ್ಟಶ್ಚ ತೈರಾಹ ನಿಜಂ ಹೃದಿಸ್ಥಂ**
**ಬೌದ್ಧಾಗಮಾರ್ಥಂ ಸೃತಿಬಂಧಮೋಚನಮ್ ॥ ೧೪೭ ॥**

ನಾರಾಯಣಃ ಪ್ರಾಪ್ಯ ಸುರೇಂದ್ರವೃಂದಂ ವೃತ್ತಂ ಚ ತೇಷಾಂ ಅಖಿಲಂ ನಿಗದ್ಯ । ಪೃಷ್ಟಃ ಚ ತೈಃ ಆಹ ನಿಜಂ ಹೃದಿಸ್ಥಂ ಬೌದ್ಧಾಗಮಾರ್ಥಂ ಸೃತಿಬಂಧ ಮೋಚನಮ್ ॥ ೧೪೭ ॥

**ಅರ್ಥ :- ನಾರಾಯಣಃ** = ನಾರಾಯಣನು **ಸುರೇಂದ್ರವೃಂದಂ** = ದೇವಶ್ರೇಷ್ಠರ ಸಮೂಹವನ್ನು ಕುರಿತು **ಪ್ರಾಪ್ಯ** = ಸೇರಿ **ಚ** = ಮತ್ತು **ತೇಷಾಂ** = ಅವರಿಗೆ **ವೃತ್ತಂ** = ನಡೆದ **ಅಖಿಲಂ** = ಎಲ್ಲವನ್ನೂ **ನಿಗದ್ಯ** = ಹೇಳಿ **ಚ** = ಮತ್ತು **ತೈಃ** = ಅವರಿಂದ **ಪೃಷ್ಟಃ (ಸನ್)** = ಕೇಳಲ್ಪಟ್ಟವನಾಗಿ **ಸೃತಿಬಂಧಮೋಚನಂ** = ಸಂಸಾರಬಂಧನದಿಂದ ಬಿಡುಗಡೆಗೊಳಿಸುವ **ನಿಜಂ** = ತನ್ನ **ಹೃದಿಸ್ಥಂ** = ಮನಸ್ಸಿನಲ್ಲಿದ್ದ **ಬೌದ್ಧಾಗಮಾರ್ಥಂ** = ಬೌದ್ಧಶಾಸ್ತ್ರದ ಅರ್ಥವನ್ನು **ಆಹ** = ಹೇಳಿದನು.

**ತಾತ್ಪರ್ಯ :-** ಬುದ್ಧರೂಪದ ನಾರಾಯಣ ದೇವಸಮೂಹದ ಬಳಿಗೆ ತೆರಳಿ ಅವರಿಗೆ ನಡೆದ ವಿಷಯವನ್ನೆಲ್ಲ ತಿಳಿಸಿದ. ಅವರು ಕೇಳಿಕೊಂಡಾಗ ತನ್ನ

ಮನಸ್ಸಿನಲ್ಲಿದ್ದ ಸಂಸಾರಬಂಧನದ ಬಿಡುಗಡೆಗೆ ಕಾರಣವಾಗುವ ಬೌದ್ಧಶಾಸ್ತ್ರದ ಅರ್ಥವನ್ನು ತಿಳಿಸಿದ.

### ಬೌದ್ಧದರ್ಶನದ ಅಂತರಾರ್ಥ

**ಕ್ಷಣಾದಯಃ ಕ್ಷಣಿಕಾಸ್ತದ್ವಿಶೇಷಾ**
**ಯತಃ ಪ್ರಯಾಂತ್ಯೇವ ನಿಸರ್ಗತೋಽಖಿಲಾಃ ।**
**ತತಃ ಸ್ಥಿರತ್ವೇಽಪಿ ವಿಶೇಷಸಂಶ್ರಯಾ-**
**ದುಕ್ತಂ ಕ್ಷಣಸ್ಥಾಯಿ ಮಯಾ ಸಮಸ್ತಮ್ ॥ ೧೪೮ ॥**

**ಕ್ಷಣಾದಯಃ ಕ್ಷಣಿಕಾಃ ತದ್ವಿಶೇಷಾಃ ಯತಃ ಪ್ರಯಾಂತಿ ಏವ ನಿಸರ್ಗತಃ ಅಖಿಲಾಃ । ತತಃ ಸ್ಥಿರತ್ವೇ ಅಪಿ ವಿಶೇಷಸಂಶ್ರಯಾತ್ ಉಕ್ತಂ ಕ್ಷಣಸ್ಥಾಯಿ ಮಯಾ ಸಮಸ್ತಮ್ ॥ ೧೪೮ ॥**

**ಅರ್ಥ** :- **ಕ್ಷಣಾದಯಃ** = ಕ್ಷಣ ಮೊದಲಾದವು **ತದ್ವಿಶೇಷಾಃ** = ಕಾಲದ ವಿಶೇಷಗಳು **ಅಖಿಲಾಃ** = ಎಲ್ಲವೂ **ಯತಃ** = ಯಾವ ಕಾರಣದಿಂದ **ನಿಸರ್ಗತಃ ಏವ** = ಸ್ವಾಭಾವಿಕವಾಗಿಯೇ **ಪ್ರಯಾಂತಿ** = ನಾಶವಾಗುವವೋ **ತತಃ** = ಆ ಕಾರಣದಿಂದ **ಸ್ಥಿರತ್ವೇ ಅಪಿ** = ಸ್ಥಿರತ್ವದಲ್ಲಿದ್ದರೂ **ಕ್ಷಣಿಕಾಃ** = ಕ್ಷಣಿಕಗಳು. (ಇತಿ) = ಹೀಗೆ **ವಿಶೇಷಸಂಶ್ರಯಾತ್** = ವಿಶೇಷದ ಆಧಾರದಿಂದ **ಮಯಾ** = ನನ್ನಿಂದ **ಸಮಸ್ತಂ** = ಸಕಲವು **ಕ್ಷಣಸ್ಥಾಯಿ** = ಕ್ಷಣದಲ್ಲಿ ನೆಲೆಸಿರುವುದು (ಇತಿ) = ಎಂದು **ಉಕ್ತಂ** = ಹೇಳಲ್ಪಟ್ಟಿತು.

**ತಾತ್ಪರ್ಯ** :- ಕ್ಷಣಾದಿಗಳು, ಅವುಗಳ ವಿಶೇಷಗಳು ಎಲ್ಲವೂ ನೈಸರ್ಗಿಕವಾಗಿ ಸ್ವಲ್ಪ ಕಾಲದಲ್ಲೇ ನಾಶ ಹೊಂದುವುದರಿಂದ ಮೂಲತಃ ಅವು ಸ್ಥಿರವಾಗಿದ್ದರೂ ಕ್ಷಣಿಕವೆನ್ನಿಸುವವು. ಹೀಗೆ ವಿಶೇಷವನ್ನು ಗಮನದಲ್ಲಿಟ್ಟು ಕೊಂಡು ನಾನು ಸಕಲವೂ ಕ್ಷಣಿಕ ಎಂದು ತಿಳಿಸಿದೆ.

**ತದ್ವಾನ್ ವಿಶೇಷಶ್ಚ ಯತೋ ನ ಭಿನ್ನೌ**
**ಸದಾ ಸ್ವನಿರ್ವಾಹಕಶಕ್ತಿಯುಕ್ತೌ ।**

**ಅತಃ ಕ್ಷಣಸ್ಥಾಯಿ ಸಮಸ್ತಮೇತತ್**
**ಸ್ಥಿರಾತ್ಮಕಂ ಚೇತಿ ಹಿ ನಾಸ್ತಿ ಭೇದಃ ॥ ೧೪೯ ॥**

**ತದ್ವಾನ್ ವಿಶೇಷಃ ಚ ಯತಃ ನ ಭಿನ್ನೌ ಸದಾ ಸ್ವನಿರ್ವಾಹಕಶಕ್ತಿಯುಕ್ತೌ । ಅತಃ ಕ್ಷಣಸ್ಥಾಯಿ ಸಮಸ್ತಂ ಏತತ್ ಸ್ಥಿರಾತ್ಮಕಂ ಚ ಇತಿ ಹಿ ನ ಅಸ್ತಿ ಭೇದಃ ॥ ೧೪೯ ॥**

**ಅರ್ಥ** :- **ತದ್ವಾನ್** = ವಿಶೇಷಸಂಬಂಧವುಳ್ಳದ್ದು **ಚ** = ಮತ್ತು **ವಿಶೇಷಃ** = ವಿಶೇಷವು **ಯತಃ** = ಯಾವ ಕಾರಣದಿಂದ **ನ ಭಿನ್ನೌ** = ಬೇರೆಯಲ್ಲವೋ (**ಅತಃ**) = ಆದ್ದರಿಂದ **ಸದಾ** = ಸರ್ವಕಾಲದಲ್ಲೂ **ಸ್ವನಿರ್ವಾಹಕಶಕ್ತಿಯುಕ್ತೌ** = ಅಭೇದದಲ್ಲೂ ಭೇದವ್ಯವಹಾರ ನಿರ್ವಾಹಕ ಶಕ್ತಿಯನ್ನುಳ್ಳವು. **ಅತಃ** = ಆದ್ದರಿಂದ **ಏತತ್ ಸಮಸ್ತಂ** = ಈ ಎಲ್ಲವೂ **ಕ್ಷಣಸ್ಥಾಯಿ** = ಕ್ಷಣದಲ್ಲಿ ನೆಲೆಸಿರುವುದು **ಚ** = ಮತ್ತು **ಸ್ಥಿರಾತ್ಮಕಂ** = ಸ್ಥಿರವಾದುದು **ಇತಿ** = ಎಂದು (**ಅನಯೋಃ**) = ಅವೆರಡಕ್ಕೆ **ಭೇದಃ** = ವಿರೋಧವು **ನ ಅಸ್ತಿ ಹಿ** = ನಿಶ್ಚಯವಾಗಿಯೂ ಇಲ್ಲ.

**ತಾತ್ಪರ್ಯ** :- ವಿಶೇಷವನ್ನು ಹೊಂದಿರುವ ಪದಾರ್ಥ ಮತ್ತು ಆ ವಿಶೇಷವು ಬೇರೆಯಲ್ಲವಾದ್ದರಿಂದ ಅವು ಸ್ವನಿರ್ವಾಹಕ ಶಕ್ತಿಯನ್ನು ಹೊಂದಿರುವವು. ಆದ್ದರಿಂದ ಈ ಸಮಸ್ತಪ್ರಪಂಚ ಕ್ಷಣಸ್ಥಾಯಿ ಹಾಗೂ ಸ್ಥಿರ ಎಂದು ಹೇಳಿದಾಗ ವಿರೋಧವಿರದು.

**ಜ್ಞೋಽಹಂ ಸದೈಕಃ ಪರಮೋ ಮಯೈತತ್**
**ಸದಾಽನನೀಯಂ ಹಿ ಯತೋಽಸ್ವತಂತ್ರಮ್ ।**
**ಜ್ಞಾನಾತ್ಮಕಂ ವಿಶ್ವಮತೋ ಮಯೋಕ್ತಂ**
**ಜಡಸ್ವರೂಪಂ ಚ ಕಿಮು ಸ್ಮ ಚೇತನಮ್ ॥ ೧೫೦ ॥**

**ಜ್ಞಃ ಅಹಂ ಸದಾ ಏಕಃ ಪರಮಃ ಮಯಾ ಏತತ್ ಸದಾ ಅನನೀಯಂ ಹಿ ಯತಃ ಅಸ್ವತಂತ್ರಮ್ । ಜ್ಞಾನಾತ್ಮಕಂ ವಿಶ್ವಂ ಅತಃ ಮಯಾ ಉಕ್ತಂ ಜಡಸ್ವರೂಪಂ ಚ ಕಿಮು ಸ್ಮ ಚೇತನಮ್ ॥ ೧೫೦ ॥**

**ಅರ್ಥ** :- **ಅಹಂ** = ನಾನು **ಸದಾ** = ಯಾವಾಗಲೂ **ಜ್ಞಃ** = ತಿಳಿದವನು **ಏಕಃ** = ಸ್ವತಂತ್ರನು **ಪರಮಃ** = ಸರ್ವೋತ್ತಮನು **ಅಸ್ವತಂತ್ರಂ** = ಅಸ್ವತಂತ್ರವಾದ **ಏತತ್** = ಈ **ವಿಶ್ವಂ** = ಜಗತ್ತು **ಸದಾ** = ಯಾವಾಗಲೂ **ಯತಃ** = ಯಾವ ಕಾರಣದಿಂದ **ಮಯಾ** = 'ಜ್ಞ' ಎನ್ನಿಸಿದ ನನ್ನಿಂದ **ಅನನೀಯಂ** = ಅನನೀಯವಾಗಿದೆಯೋ (ಪ್ರವೃತ್ತಿವುಳ್ಳದ್ದಾಗಿದೆಯೋ) **ಅತಃ** = ಆದ್ದರಿಂದ **ಜಡಸ್ವರೂಪಂ** = ಜಡಸ್ವರೂಪವಾದ **ವಿಶ್ವಂ** = ವಿಶ್ವವು **ಜ್ಞಾನಾತ್ಮಕಂ** = ಜ್ಞಾನಾತ್ಮಕವು ('ಜ್ಞ' 'ಅನ' ಆತ್ಮಕ) (ಇತಿ) = ಎಂದು **ಮಯಾ** = ನನ್ನಿಂದ **ಉಕ್ತಂ ಚ** = ಹೇಳಲ್ಪಟ್ಟಿತು ಸಹ. **ಚೇತನಂ** = ಚೇತನವು **ಕಿಮು ಸ್ಮ** = ಜ್ಞಾನಾತ್ಮಕವೆಂದು ಹೇಳುವುದೇನಿದೆ?

**ತಾತ್ಪರ್ಯ** :- ಸ್ವತಂತ್ರನಾದ ನಾನು ಸರ್ವೋತ್ತಮನಾಗಿದ್ದು 'ಜ್ಞ' ಎನಿಸಿರುವೆನು. ನನ್ನಿಂದ ಸದಾ ಈ ವಿಶ್ವ ಅನನೀಯವಾಗಿದೆ (ಪ್ರವೃತ್ತಿ ಹೊಂದುತ್ತಿದೆ) ; ಅದು ಅಸ್ವತಂತ್ರವಾಗಿರುವುದೇ ಅದಕ್ಕೆ ಕಾರಣ. ಆದ್ದರಿಂದ ಜಡರೂಪವಾದ ವಿಶ್ವ ಜ್ಞಾನಾತ್ಮಕವಾದುದು ಎಂದು ನಾನು ಹೇಳಿದೆ, ಇನ್ನು ಚೇತನವು ಜ್ಞಾನಾತ್ಮಕವೆಂಬುದು ಕೈಮುತ್ಯ ಸಿದ್ಧ.

**ಶಂಶೀಲಕೋಽಹಂ ಯತ ಏವ ಚೋಚ್ಚಃ**
**ಶೂನಾಮಕಸ್ತದ್ಧಿ ಮಯಾ ನಿಧೇಯಮ್ ।**
**ಶೂನ್ಯಾಭಿಧಂ ದೋಷವಿರುದ್ಧರೂಪೋ**
**ದೋಷೋಜ್ಝಿತೋಽನ್ಯಸ್ತ್ವಖಿಲಾದನಾಮಾ ।। ೧೫೧ ।।**

**ಶಂಶೀಲಕಃ ಅಹಂ ಯತಃ ಏವ ಚ ಉಚ್ಚಃ ಶೂನಾಮಕಃ ತತ್ ಹಿ ಮಯಾ ನಿಧೇಯಮ್ । ಶೂನ್ಯಾಭಿಧಂ ದೋಷವಿರುದ್ಧರೂಪಃ ದೋಷೋಜ್ಝಿತಃ ಅನ್ಯಃ ತು ಅಖಿಲಾತ್ ಅನಾಮಾ ।। ೧೫೧ ।।**

**ಅರ್ಥ** :- **ಯತಃ** = ಯಾವ ಕಾರಣದಿಂದ **ಅಹಂ** = ನಾನು **ಶಂಶೀಲಕಃ** = ಸುಖಸ್ವರೂಪನೋ **ಚ** = ಮತ್ತು **ಉಚ್ಚಃ** = ಉತ್ತಮನೋ

**(ಅತಃ) ಏವ** = ಆದ್ದರಿಂದಲೇ **ಶೂನಮಕಃ** = 'ಶೂ' ಎಂಬ ಹೆಸರಿನವನು. **ಹಿ** = ಯಾವ ಕಾರಣದಿಂದ **ತತ್** = ಈ ವಿಶ್ವವು **ಮಯಾ** = ನನ್ನಿಂದ **ನಿಧೇಯಂ** = ಸ್ಥಾಪಿತವಾದುದು. **(ತಸ್ಮಾತ್)** = ಆದ್ದರಿಂದ **ಶೂನ್ಯಾಭಿಧಂ** = ಶೂನ್ಯ ಎಂಬ ಹೆರುಳ್ಳದ್ದು. **(ಅಹಂ)** = ನಾನು **ದೋಷವಿರುದ್ಧರೂಪಃ** = ದೋಷವಿರುದ್ಧವಾದ ಸದ್ಗುಣರೂಪನು **ದೋಷೋಜ್ಝಿತಃ** = ದೋಷರಹಿತನು **ಅಖಿಲಾತ್ ತು** = ಎಲ್ಲದರಿಂದಲೂ **ಅನ್ಯಃ** = ಬೇರೆಯವನು **(ಅತಃ)** = ಆದ್ದರಿಂದ **ಅನಾಮಾ** = 'ಅ' ಎಂದು ಹೆಸರು.

**ತಾತ್ಪರ್ಯ** :- ನಾನು ಅತ್ಯಂತಸುಖಸ್ವರೂಪನಾದವನು, ಆದ್ದರಿಂದಲೇ ಉತ್ತಮನಾಗಿರುವೆನು. ಆದ್ದರಿಂದ ನನಗೆ 'ಶೂ' ಎಂದು ಹೆಸರು. 'ಶೂ' ನಾಮಕನಾದ ನನ್ನಿಂದ ಈ ವಿಶ್ವ ಪ್ರತಿ ಹಂತದಲ್ಲೂ ನಿಯಮಿಸಲ್ಪಡುವುದು; ಅದರಿಂದ ಇದಕ್ಕೆ ಶೂನ್ಯ ಎಂದು ಹೆಸರು. ದೋಷ ವಿರುದ್ಧ ಸ್ವರೂಪನೂ, ದೋಷರಹಿತನೂ, ಸರ್ವವಿಲಕ್ಷಣನೂ ಆದ್ದರಿಂದ ನನಗೆ 'ಅ' ಎಂದು ಹೆಸರು.

**ಏನೈವ ಸಾಧ್ಯಂ ತ್ವಸದೇವ ನಾಮತ-**
**ಸ್ತ್ವಭಾವ ಏನೈವ ಭವೇದ್ಯತಸ್ತತ್ ।**
**ಇತ್ಯಾದಿ ಬೋದ್ಧವ್ಯಮಿದಂ ಸಮಸ್ತಂ**
**ಮಯೋದಿತಂ ಕ್ವಾಪಿ ನ ಹೇಯಮಸ್ತಿ ॥ ೧೫೨ ॥**

**ಏನಾ ಏವ ಸಾಧ್ಯಂ ತು ಅಸತ್ ಏವ ನಾಮತಃ ತು ಅಭಾವಃ ಏನಾ ಏವ ಭವೇತ್ ಯತಃ ತತ್ । ಇತ್ಯಾದಿ ಬೋದ್ಧವ್ಯಂ ಇದಂ ಸಮಸ್ತಂ ಮಯಾ ಉದಿತಂ ಕ್ವ ಅಪಿ ನ ಹೇಯಂ ಅಸ್ತಿ ॥ ೧೫೨ ॥**

**ಅರ್ಥ** :- **ಯತಃ** = ಯಾವ ಕಾರಣದಿಂದ **ಏನಾ** = 'ಅ'ನಾಮದ ನನ್ನಿಂದಲೇ **(ಏತತ್) ತು** = ಈ ವಿಶ್ವವಾದರೋ **ಸಾಧ್ಯಂ ಏವ** = ಸಂಹಾರ್ಯವೇ ಆಗಿದೆಯೋ **ಅತಃ** = ಅದರಿಂದಾಗಿ **ಅಸತ್** = 'ಅ'ಸತ್ ಆದುದು. **ಯತಃ** = ಯಾವ ಕಾರಣದಿಂದ **ಏನಾ ಏವ** =

'ಅ'ನಾಮಕನಾದ ನನ್ನಿಂದಲೇ **ಭವೇತ್** = ಹುಟ್ಟುವುದೋ **ಅತಃ** = ಅದರಿಂದಾಗಿ **ತತ್** = ಆ ವಿಶ್ವವು **ಅಭಾವಃ** = 'ಅ'ಭಾವವು. **ಇದಂ** = ಈ **ಸಮಸ್ತಂ** = (ಜಡಚೇತನಾತ್ಮಕವಾದ) ಸಮಸ್ತವಿಶ್ವವು **ಇತ್ಯಾದಿ** = (ಕ್ಷಣಿಕ, ಶೂನ್ಯ, ಅಸತ್, ಅಭಾವ) ಇದೇ ಮೊದಲಾಗಿ **ಮಯಾ** = ನನ್ನಿಂದ **ಉದಿತಂ** = ಹೇಳಲ್ಪಟ್ಟಿದೆ. **ಕ್ವ ಅಪಿ** = ಎಲ್ಲಿಯೂ **ಹೇಯಂ** = ಅಗ್ರಾಹ್ಯವಾದದ್ದು **ನ ಅಸ್ತಿ** = ಇಲ್ಲ.

**ತಾತ್ಪರ್ಯ** :- 'ಅ' ನಾಮಕನಾದ ನನ್ನಿಂದ ಜನಿಸುವುದರಿಂದ ಇದಕ್ಕೆ ಅಭಾವ ಎಂದು, ನಾಶಹೊಂದುವುದರಿಂದ ಅಸತ್ ಎಂದು ಹೆಸರು. ಇವೇ ಮೊದಲಾಗಿ ನಾನು ಹೇಳಿದ ಎಲ್ಲವನ್ನೂ ತಿಳಿಯಬೇಕು. ಇದರಲ್ಲಿ ಅಗ್ರಾಹ್ಯವಾದದ್ದು ಯಾವುದೂ ಇಲ್ಲ.

### ದೇವಲೋಕದಲ್ಲಿ ಬುದ್ಧರೂಪ

**ಇತ್ಯಾದಿ ದೇವಾನ್ ಪ್ರತಿಬೋಧಯಂಶ್ಚ**
**ದೇವೈಃ ಸಹೋವಾಸ ಸ ಬುದ್ಧದೇವಃ ।**
**ಗತ್ವಾ ಸ್ವಧಾಮಾಪ್ಯಪರೇಣ ರೂಪೇ-**
**ಣಾಸ್ತೇ ಪೃಥಕ್ ಚೈಕತನುರ್ಯಥೇಷ್ಟಮ್ ॥ ೧೫೩ ॥**

**ಇತ್ಯಾದಿ ದೇವಾನ್ ಪ್ರತಿಬೋಧಯನ್ ಚ ದೇವೈಃ ಸಹ ಉವಾಸ ಸಃ ಬುದ್ಧದೇವಃ । ಗತ್ವಾ ಸ್ವಧಾಮ ಅಪಿ ಅಪರೇಣ ರೂಪೇಣ ಆಸ್ತೇ ಪೃಥಕ್ ಚ ಏಕತನುಃ ಯಥೇಷ್ಟಮ್ ॥ ೧೫೩ ॥**

**ಅರ್ಥ** :- **ಸಃ** = ಆ **ಬುದ್ಧದೇವಃ** = ಬುದ್ಧದೇವನು **ಇತ್ಯಾದಿ** = ಇವೇ ಮೊದಲಾಗಿ **ದೇವಾನ್** = ದೇವತೆಗಳನ್ನು ಕುರಿತು **ಪ್ರತಿಬೋಧಯನ್ ಚ** = ಉಪದೇಶಿಸುತ್ತಲೂ **ದೇವೈಃ ಸಹ** = ದೇವತೆಗಳೊಂದಿಗೆ **ಉವಾಸ** = ನೆಲೆಸಿದನು. **ಅಪರೇಣ** = ಮತ್ತೊಂದು **ರೂಪೇಣ ಅಪಿ** = ರೂಪದಿಂದಲೂ **ಸಹ ಸ್ವಧಾಮ** = ತನ್ನ ಲೋಕವನ್ನು

ಕುರಿತು **ಗತ್ವಾ** = ಹೋಗಿ **ಪೃಥಕ್** = ಪ್ರತ್ಯೇಕವಾಗಿ (ಪ್ರತ್ಯೇಕ ಬುದ್ಧ ರೂಪನಾಗಿಯೂ) **ಏಕತನುಃ ಚ** = ಏಕರೂಪನಾಗಿಯೂ (ಮೂಲ ರೂಪದಲ್ಲಿ ಒಂದಾದವನಾಗಿಯೂ) **ಯಥೇಷ್ಟಂ** = ಇಚ್ಛೆಯಂತೆ **ಆಸ್ತೇ** = ಇರುವನು.

**ತಾತ್ಪರ್ಯ :-** ಬುದ್ಧದೇವನಾದ ಶ್ರೀಹರಿ ಇದೇ ಮೊದಲಾದುದನ್ನು ದೇವತೆಗಳಿಗೆ ವಿಶೇಷವಾಗಿ ಉಪದೇಶಿಸಿ ಅವರೊಂದಿಗೆ ನೆಲೆಸಿದ. ಮತ್ತೊಂದು ರೂಪದಿಂದ ತನ್ನ ಲೋಕಕ್ಕೆ ತೆರಳಿ ಅಲ್ಲಿ ನೆಲೆಸಿದ. ಹೀಗೆ ಒಂದಾಗಿಯೂ, ಬೇರೆಯಾಗಿಯೂ ಒಬ್ಬನೇ ಆದ ಅವನು ಸ್ವೇಚ್ಛೆಯಿಂದ ಇರುವನು.

### ಜೈನಮತದ ಉಗಮ

**ತತಸ್ತು ಬುದ್ಧೋದಿತಪಕ್ಷಸಂಸ್ಥೋ**
**ಜಿನೋಽಪಿ ಚಕ್ರೇ ಮತಮನ್ಯದೇವ ।**
**ಬೌದ್ಧೇನ ಜೈನೇನ ಮತೇನ ಚೈವ**
**ದೈತ್ಯಾಂಶಕಾಃ ಪ್ರೀತಿಮಗುಃ ಸಮಸ್ತಾಃ ॥ ೧೫೪ ॥**

**ತತಃ ತು ಬುದ್ಧೋದಿತಪಕ್ಷಸಂಸ್ಥಃ ಜಿನಃ ಅಪಿ ಚಕ್ರೇ ಮತಂ ಅನ್ಯತ್ ಏವ । ಬೌದ್ಧೇನ ಜೈನೇನ ಮತೇನ ಚ ಏವ ದೈತ್ಯಾಂಶಕಾಃ ಪ್ರೀತಿಂ ಅಗುಃ ಸಮಸ್ತಾಃ ॥ ೧೫೪ ॥**

**ಅರ್ಥ :- ತತಃ ತು** = ಆ ಬಳಿಕವಾದರೋ **ಬುದ್ಧೋದಿತಪಕ್ಷಸಂಸ್ಥಃ** = ಬುದ್ಧನು ಹೇಳಿದ ಪಕ್ಷದಲ್ಲಿ ನಿಷ್ಠನಾದ **ಜಿನಃ ಅಪಿ** = ಜಿನನೂ ಸಹ **ಅನ್ಯತ್** = ಬೇರೊಂದು **ಮತಂ ಏವ** = ಮತವನ್ನೇ **ಚಕ್ರೇ** = ಮಾಡಿದನು. **ಬೌದ್ಧೇನ ಮತೇನ** = ಬೌದ್ಧಮತದಿಂದ **ಚ ಏವ** = ಹಾಗೆಯೇ **ಜೈನೇನ ಮತೇನ** = ಜೈನಮತದಿಂದ **ಸಮಸ್ತಾಃ** = ಎಲ್ಲಾ **ದೈತ್ಯಾಂಶಕಾಃ** = ದೈತ್ಯಸ್ವರೂಪದವರು **ಪ್ರೀತಿಂ** = ಪ್ರೀತಿಯನ್ನು **ಅಗುಃ** = ಹೊಂದಿದರು.

**ತಾತ್ಪರ್ಯ** :- ಬಳಿಕ ಬುದ್ಧ ಹೇಳಿದ ಪಕ್ಷವನ್ನು ಅವಲಂಬಿಸಿ ಜಿನ ಬೇರೊಂದು ಮತವನ್ನೇ ಸ್ಥಾಪಿಸಿದ. ಬೌದ್ಧಮತದಿಂದಲೂ ಹಾಗೆಯೇ ಜೈನಮತದಿಂದಲೂ ಅಸುರ ಸ್ವರೂಪದವರಾದ ಸಕಲರೂ ಸುಪ್ರೀತರಾದರು.

### ಪ್ರಶಾಂತ ವಿದ್ಯೆ

**ಪ್ರಶಾಂತವಿದ್ಯೇತ್ಯಭಿಧಂ ತಥಾऽನ್ಯ-**
**ದ್ಬುದ್ಧೋಕ್ತಶಾಸ್ತ್ರಂ ತ್ರಿದಶಾ ಅವಾಪ್ಯ ।**
**ತೋಷಂ ಯಯುರ್ವೇದಸಮಸ್ತಸಾರಂ**
**ಯಾಮಾಶ್ರಿತಾನಾಮಚಿರೇಣ ಮುಕ್ತಿಃ ॥ ೧೫೫ ॥**

**ಪ್ರಶಾಂತವಿದ್ಯಾ ಇತಿ ಅಭಿಧಂ ತಥಾ ಅನ್ಯತ್ ಬುದ್ಧೋಕ್ತಶಾಸ್ತ್ರಂ ತ್ರಿದಶಾಃ ಅವಾಪ್ಯ । ತೋಷಂ ಯಯುಃ ವೇದಸಮಸ್ತಸಾರಂ ಯಾಂ ಆಶ್ರಿತಾನಾಂ ಅಚಿರೇಣ ಮುಕ್ತಿಃ ॥ ೧೫೫ ॥**

**ಅರ್ಥ** :- **ತಥಾ** = ಹಾಗೂ **ಪ್ರಶಾಂತವಿದ್ಯಾ** = ಪ್ರಶಾಂತವಿದ್ಯೆ **ಇತಿ** = ಎಂದು **ಅಭಿಧಂ** = ಹೆಸರಿನ **ಅನ್ಯತ್** = ಬೇರೆಯದಾದ **ಬುದ್ಧೋಕ್ತಶಾಸ್ತ್ರಂ** = ಬುದ್ಧರೂಪದ ಶ್ರೀಹರಿಯಿಂದ ಹೇಳಲ್ಪಟ್ಟ ಶಾಸ್ತ್ರವನ್ನು **ತ್ರಿದಶಾಃ** = ದೇವತೆಗಳು **ಅವಾಪ್ಯ** = ಪಡೆದು, **ತೋಷಂ** = ಸಂತೋಷವನ್ನು **ಯಯುಃ** = ಹೊಂದಿದರು. **ಸಮಸ್ತವೇದಸಾರಂ** = ಎಲ್ಲ ವೇದಗಳ ಸಾರವಾದ **ಯಾಂ** = ಯಾವ ಪ್ರಶಾಂತವಿದ್ಯೆಯನ್ನು **ಆಶ್ರಿತಾನಾಂ** = ಆಶ್ರಯಿಸಿದವರ **ಮುಕ್ತಿಃ** = ಮುಕ್ತಿಯು **ಅಚಿರೇಣ** = ಬೇಗನೆ (**ಭವೇತ್**) = ಆಗುವುದು.

**ತಾತ್ಪರ್ಯ** :- ಬುದ್ಧ ಹೇಳಿದ ಪ್ರಶಾಂತ ವಿದ್ಯೆಯೆಂಬ ಬೇರೊಂದು ಹೆಸರಿನ ಶಾಸ್ತ್ರವನ್ನು ದೇವತೆಗಳು ಪಡೆದು ಸಂತೋಷ ಹೊಂದಿದರು. ಅದು ಸಕಲವೇದಗಳ ಸಾರಸರ್ವಸ್ವವಾದುದು. ಅದನ್ನು ಅವಲಂಬಿಸಿದವರಿಗೆ ಬೇಗನೆ ಮುಕ್ತಿ ಲಭಿಸುವುದು.

### ಕ್ರೋಧವಶರ ಅವತಾರ

**ಅನ್ಯೇ ಮನುಷ್ಯಾ ಅಪಿ ಭಾರತಾದ್ಯಂ**
**ಸತ್ಸಂಪ್ರದಾಯಂ ಪರಿಗೃಹ್ಯ ವಿಷ್ಣುಮ್ ।**
**ಯಜಂತ ಆಪುಃ ಪರಮಾಂ ಗತಿಂ ತ-**
**ನ್ನ ಸೇಹಿರೇ ಕ್ರೋಧವಶಾದಿದೈತ್ಯಾಃ ॥ ೧೫೬ ॥**

ಅನ್ಯೇ ಮನುಷ್ಯಾಃ ಅಪಿ ಭಾರತಾದ್ಯಂ ಸತ್ಸಂಪ್ರದಾಯಂ ಪರಿಗೃಹ್ಯ ವಿಷ್ಣುಮ್ । ಯಜಂತಃ ಆಪುಃ ಪರಮಾಂ ಗತಿಂ ತತ್ ನ ಸೇಹಿರೇ ಕ್ರೋಧವಶಾದಿದೈತ್ಯಾಃ ॥ ೧೫೬ ॥

**ಅರ್ಥ** :- **ಅನ್ಯೇ** = ಇತರ **ಮನುಷ್ಯಾಃ ಅಪಿ** = (ಮುಕ್ತಿ ಯೋಗ್ಯರಾದ) ಮನುಷ್ಯರೂ ಸಹ **ಸತ್ಸಂಪ್ರದಾಯಂ** = ಸತ್ಸಂಪ್ರದಾಯದಿಂದ ಕೂಡಿದ **ಭಾರತಾದ್ಯಂ** = ಭಾರತ ಮೊದಲಾದ ಶಾಸ್ತ್ರವನ್ನು **ಪರಿಗೃಹ್ಯ** = ಸ್ವೀಕರಿಸಿ **ವಿಷ್ಣುಂ** = ವಿಷ್ಣುವನ್ನು **ಯಜಂತಃ (ಸಂತಃ)** = ಆರಾಧಿಸುವವರಾಗಿ **ಪರಮಾಂ** = ಶ್ರೇಷ್ಠವಾದ **ಗತಿಂ** = ಗತಿಯನ್ನು **ಆಪುಃ** = ಹೊಂದಿದರು. **ಕ್ರೋಧವಶಾದಿದೈತ್ಯಾಃ** = ಕ್ರೋಧವಶ ಮೊದಲಾದ ದೈತ್ಯರು **ತತ್** = ಅದನ್ನು **ನ ಸೇಹಿರೇ** = ಸಹಿಸಲಿಲ್ಲ.

**ತಾತ್ಪರ್ಯ** :- ಇತರ ಮನುಷ್ಯರಾದರೋ ಸತ್ಸಂಪ್ರದಾಯದಿಂದ ಕೂಡಿದ ಭಾರತ ಮೊದಲಾದ ಶಾಸ್ತ್ರಗಳನ್ನು ಸ್ವೀಕರಿಸಿ ವಿಷ್ಣುವನ್ನು ಆರಾಧಿಸುತ್ತಾ ಪರಮಗತಿಯನ್ನು ಪಡೆದುಕೊಂಡರು. ಅದನ್ನು ಕ್ರೋಧವಶರು ಮೊದಲಾದ ದೈತ್ಯರು ಸಹಿಸದಾದರು.

### ಕ್ರೋಧವಶರು ಮಾಡಿದ ಶೈವತಪಸ್ಸು

**ಶೈವಂ ತಪಸ್ತೇ ವಿಪುಲಂ ವಿಧಾಯ**
**ಜಗದ್ವಿಮೋಹೋರ್ಜಿತಶಕ್ತಿಮಸ್ಮಾತ್ ।**

**ಪ್ರಾಪ್ಯ ಪ್ರಜಾತಾ ಭುವಿ ಮೋಹನಂ ಚ**
**ಚಕ್ರುಃ ಕುತರ್ಕೈರಭಿದಾಂ ವದಂತಃ ॥ ೧೫೭ ॥**

**ಶೈವಂ ತಪಃ ತೇ ವಿಪುಲಂ ವಿಧಾಯ ಜಗದ್ವಿಮೋಹೋರ್ಜಿತಶಕ್ತಿಂ ಅಸ್ಮಾತ್ । ಪ್ರಾಪ್ಯ ಪ್ರಜಾತಾಃ ಭುವಿ ಮೋಹನಂ ಚ ಚಕ್ರುಃ ಕುತರ್ಕೈಃ ಅಭಿದಾಂ ವದಂತಃ ॥ ೧೫೭ ॥**

**ಅರ್ಥ** :- **ತೇ** = ಅವರು **ಶೈವಂ** = ಶಿವನನ್ನು ಕುರಿತ **ತಪಃ** = ತಪಸ್ಸನ್ನು **ವಿಪುಲಂ** = ಬಹಳವಾಗಿ **ವಿಧಾಯ** = ಮಾಡಿ **ಅಸ್ಮಾತ್** = ಅವನಿಂದ (ಶಿವನಿಂದ) **ಜಗದ್ವಿಮೋಹೋರ್ಜಿತಶಕ್ತಿಂ** = ಜಗತ್ತನ್ನು ವಿಶೇಷವಾಗಿ ಮೋಹಗೊಳಿಸಲು ಉತ್ಕೃಷ್ಟವಾದ ಶಕ್ತಿಯನ್ನು **ಪ್ರಾಪ್ಯ** = ಪಡೆದು **ಭುವಿ** = ಭೂಮಿಯಲ್ಲಿ **ಪ್ರಜಾತಾಃ (ಸಂತಃ)** = ಹುಟ್ಟಿದವರಾಗಿ **ಕುತರ್ಕೈಃ** = ಕೆಟ್ಟ ತರ್ಕಗಳಿಂದ **ಅಭಿದಾಂ** = (ಜೀವ-ಪರಮಾತ್ಮರ) ಅಭೇದವನ್ನು **ವದಂತಃ (ಸಂತಃ)** = ಹೇಳುವವರಾಗಿ **ಮೋಹನಂ ಚ** = ಮೋಹನವನ್ನೂ **ಚಕ್ರುಃ** = ಮಾಡಿದರು.

**ತಾತ್ಪರ್ಯ** :- ಆ ಕ್ರೋಧವಶರು ಬಹಳವಾಗಿ ಶಿವನನ್ನು ಕುರಿತು ತಪಸ್ಸು ಮಾಡಿ ಲೋಕವನ್ನು ಮರುಳುಗೊಳಿಸುವ ಮಹಾಶಕ್ತಿಯನ್ನು ಅವನಿಂದ ಪಡೆದುಕೊಂಡು ಭೂಮಿಯಲ್ಲಿ ಜನಿಸಿದರು. ಮತ್ತು ಕುತರ್ಕಗಳಿಂದ ಜೀವ ಪರಮಾತ್ಮರ ಅಭೇದವನ್ನು ಹೇಳುತ್ತಾ ಮೋಹ ಉಂಟುಮಾಡಿದರು.

### ಭೀಮಾವತಾರ - ದುರ್ಗಾವತಾರ

**ತೇಷಾಂ ಪ್ರಪಾತಾಯ ಸತಾಂ ಚ ಮುಕ್ತ್ಯೈ**
**ಜನ್ಮಾಸ ಭೀಮಸ್ಯ ಯದುಕ್ತಮತ್ರ ।**
**ದುರ್ಗಾ ಪುನರ್ವಿಪ್ರಕುಲೇಽವತೀರ್ಣಾ**
**ಹನಿಷ್ಯತಿ ವ್ರಾತಮಥಾಸುರಾಣಾಮ್ ॥ ೧೫೮ ॥**

**ತೇಷಾಂ ಪ್ರಪಾತಾಯ ಸತಾಂ ಚ ಮುಕ್ತ್ಯೈ ಜನ್ಮ ಆಸ ಭೀಮಸ್ಯ ಯತ್ ಉಕ್ತಂ ಅತ್ರ । ದುರ್ಗಾ ಪುನಃ ವಿಪ್ರಕುಲೇ ಅವತೀರ್ಣಾ ಹನಿಷ್ಯತಿ ವ್ರಾತಂ ಅಥ ಅಸುರಾಣಾಮ್ ॥ ೧೫೮ ॥**

**ಅರ್ಥ** :- **ತೇಷಾಂ** = ಅವರ **ಪ್ರಪಾತಾಯ** = (ಅಂಧಂತಮಸ್ಸಿನಲ್ಲಿ) ಬೀಳುವುದಕ್ಕಾಗಿ **ಚ** = ಮತ್ತು **ಸತಾಂ** = ಸಜ್ಜನರ **ಮುಕ್ತ್ಯೈ** = ಮುಕ್ತಿಗಾಗಿ **ಅತ್ರ** = ಇಲ್ಲಿ **ಭೀಮಸ್ಯ** = ಭೀಮನ **ಯತ್** = ಯಾವ **ಜನ್ಮ** = ಜನ್ಮವು **ಉಕ್ತಂ** = (ಹಿಂದೆ) ಹೇಳಲ್ಪಟ್ಟಿತೋ (**ತತ್**) = ಆ **ಜನ್ಮ** = ಜನ್ಮವು **ಆಸ** = ಆಯಿತು. **ಅಥ** = ಬಳಿಕ **ವಿಪ್ರಕುಲೇ** = ಬ್ರಾಹ್ಮಣಕುಲದಲ್ಲಿ **ಅವತೀರ್ಣಾ** = ಅವತರಿಸಿದ **ದುರ್ಗಾ** = ದುರ್ಗಾದೇವಿಯು **ಪುನಃ** = ಮತ್ತೆ **ಅಸುರಾಣಾಂ** = ಅಸುರರ **ವ್ರಾತಂ** = ಗುಂಪನ್ನು **ಹನಿಷ್ಯತಿ** = ಸಂಹರಿಸುವಳು.

**ತಾತ್ಪರ್ಯ** :- ಅವರ ಅಧಃಪತನಕ್ಕಾಗಿಯೂ, ಸಜ್ಜನರ ಮುಕ್ತಿಗಾಗಿಯೂ ಇಲ್ಲಿ ಹಿಂದೆ ಹೇಳಿದಂತೆ ಭೀಮನ ಅವತಾರವಾಯಿತು. ದುರ್ಗೆಯು ಮರಳಿ ಬ್ರಾಹ್ಮಣಕುಲದಲ್ಲಿ ಅವತರಿಸಿ ಅಸುರರ ಸಮುದಾಯವನ್ನು ಸಂಹರಿಸುವಳು.

### ಕಲಿಯುಗದ ಕೊನೆಯಲ್ಲಿ ದೇವತೆಗಳ ಪ್ರಾರ್ಥನೆಯಂತೆ ಕಲ್ಕ್ಯವತಾರ

**ತತಃ ಕಲೇರಂತಮವಾಪ್ಯ ಧರ್ಮ-**
**ಜ್ಞಾನಾದಿಕಲ್ಯಾಣಗುಣಪ್ರಹೀಣೇ ।**
**ಲೋಕೇ ವಿರಿಂಚತ್ರಿಪುರಘ್ನಶಕ್ರ-**
**ಪೂರ್ವಾಃ ಪಯೋಬ್ಧಿಂ ತ್ರಿದಶಾಃ ಪ್ರಜಗ್ಮುಃ ॥ ೧೫೯ ॥**

ತತಃ ಕಲೇಃ ಅಂತಂ ಅವಾಪ್ಯ ಧರ್ಮಜ್ಞಾನಾದಿಕಲ್ಯಾಣಗುಣಪ್ರಹೀಣೇ । ಲೋಕೇ ವಿರಿಂಚತ್ರಿಪುರಘ್ನಶಕ್ರಪೂರ್ವಾಃ ಪಯೋಬ್ಧಿಂ ತ್ರಿದಶಾಃ ಪ್ರಜಗ್ಮುಃ ॥ ೧೫೯ ॥

**ಅರ್ಥ** :- **ತತಃ** = ಬಳಿಕ **ಕಲೇಃ** = ಕಲಿಯುಗದ **ಅಂತಂ** = ಕೊನೆಯನ್ನು **ಅವಾಪ್ಯ** = ಹೊಂದಿ **ಲೋಕೇ** = ಲೋಕದಲ್ಲಿ **ಧರ್ಮಜ್ಞಾನಾದಿಕಲ್ಯಾಣಗುಣಪ್ರಹೀಣೇ** (**ಸತಿ**) = ಧರ್ಮ ಜ್ಞಾನ ಮೊದಲಾದ ಮಂಗಳಕರ ಗುಣಗಳು ಪೂರ್ಣವಾಗಿ ನಾಶವಾಗಲು **ವಿರಿಂಚ**

**ತ್ರಿಪುರಘ್ನಶಕ್ರಪೂರ್ವಾಃ** = ಬ್ರಹ್ಮ, ತ್ರಿಪುರಸಂಹಾರಿಯಾದ ರುದ್ರ, ಇಂದ್ರ ಮೊದಲಾದ **ತ್ರಿದಶಾಃ** = ದೇವತೆಗಳು **ಪಯೋಬ್ಧಿಂ** = ಕ್ಷೀರಸಾಗರವನ್ನು ಕುರಿತು **ಪ್ರಜಗ್ಮುಃ** = ತೆರಳಿದರು.

**ತಾತ್ಪರ್ಯ** :- ದುರ್ಗಾವತಾರದ ಬಳಿಕ ಕಲಿಯುಗದ ಕೊನೆಯಲ್ಲಿ ಲೋಕದಲ್ಲಿ ಧರ್ಮ ಜ್ಞಾನ ಮೊದಲಾದ ಸದ್ಗುಣಗಳು ಪೂರ್ಣ ಮರೆಯಾದಾಗ ಬ್ರಹ್ಮ, ರುದ್ರ, ಇಂದ್ರ ಮೊದಲಾದ ದೇವತೆಗಳು ಕ್ಷೀರಸಾಗರಕ್ಕೆ ತೆರಳಿದರು.

### ಶಂಫಲದಲ್ಲಿ ಕಲ್ಕಿಯ ಅವತಾರ

**ನಾರಾಯಣಸ್ತೈಃ ಸ್ತುತಿಪೂರ್ವಮರ್ಥಿತೋ**
**ಭವಾಯ ಲೋಕಸ್ಯ ಸ ಶಂಫಲಾಖ್ಯೇ ।**
**ಗ್ರಾಮೇ ಮುನೇರ್ವಿಷ್ಣುಯಶೋಭಿಧಸ್ಯ**
**ಗೃಹೇ ಬಭೂವಾವಿರಚಿಂತ್ಯಶಕ್ತಿಃ ॥ ೧೬೦ ॥**

ನಾರಾಯಣಃ ತೈಃ ಸ್ತುತಿಪೂರ್ವಂ ಅರ್ಥಿತಃ ಭವಾಯ ಲೋಕಸ್ಯ ಸಃ ಶಂಫಲಾಖ್ಯೇ । ಗ್ರಾಮೇ ಮುನೇಃ ವಿಷ್ಣುಯಶೋಭಿಧಸ್ಯ ಗೃಹೇ ಬಭೂವ ಆವಿಃ ಅಚಿಂತ್ಯ ಶಕ್ತಿಃ ॥ ೧೬೦ ॥

**ಅರ್ಥ** :- **ತೈಃ** = ಅವರಿಂದ **ಸ್ತುತಿಪೂರ್ವಂ** = ಸ್ತುತಿ ಮೊದಲ್ಗೊಂಡು **ಅರ್ಥಿತಃ** = ಪ್ರಾರ್ಥಿತನಾದ **ಅಚಿಂತ್ಯ ಶಕ್ತಿಃ** = ಚಿಂತನೆಗೆ ನಿಲುಕದ ಶಕ್ತಿಯುಳ್ಳ **ಸಃ** = ಆ **ನಾರಾಯಣಃ** = ನಾರಾಯಣನು **ಲೋಕಸ್ಯ** = ಲೋಕದ **ಭವಾಯ** = ಮಂಗಳಕ್ಕಾಗಿ **ವಿಷ್ಣುಯಶೋಭಿಧಸ್ಯ** = ವಿಷ್ಣುಯಶಸ್ ಎಂಬ ಹೆಸರಿನ **ಮುನೇಃ** = ಮುನಿಯ **ಗೃಹೇ** = ಧರ್ಮಪತ್ನಿಯಲ್ಲಿ **ಆವಿಃ ಬಭೂವ** = ಪ್ರಕಟನಾಗುವನು.

**ತಾತ್ಪರ್ಯ** :- ಲೋಕಕಲ್ಯಾಣಕ್ಕಾಗಿ ಸ್ತುತಿಪೂರ್ವಕವಾಗಿ ಅವರಿಂದ ಪ್ರಾರ್ಥಿತನಾದ ನಾರಾಯಣನು ಶಂಫಲ ಎಂಬ ಹೆಸರಿನ ಗ್ರಾಮದಲ್ಲಿ ವಿಷ್ಣುಯಶಸ್ ಎಂಬ ಹೆಸರಿನ ಮುನಿಯ ಪತ್ನಿಯಲ್ಲಿ ಪ್ರಾದುರ್ಭೂತನಾಗುವನು.

### ಕಲ್ಕಿ ಶಬ್ದಾರ್ಥ - ಕಲಿಮಲ ಪರಿಹರಿಸಿದ ಕಲ್ಕಿ

**ಕಲೇಸ್ತು ಕಾತ್ಕಾರತ ಏವ ಕಲ್ಕೀ**
**ಜ್ಞಾನಂ ಕಲಂ ಕಂ ಸುಖಮೇವ ತದ್ವಾನ್ ।**
**ಕಲ್ಕೀತಿ ವಾ ತೇನ ಸಮಸ್ತದಸ್ಯು-**
**ವಿನಾಶನಂ ತೇನ ದಿನಾದ್ವ್ಯಧಾಯಿ ॥ ೧೬೧ ॥**

**ಕಲೇಃ ತು ಕಾತ್ಕಾರತಃ ಏವ ಕಲ್ಕೀ ಜ್ಞಾನಂ ಕಲಂ ಕಂ ಸುಖಂ ಏವ ತದ್ವಾನ್ । ಕಲ್ಕೀ ಇತಿ ವಾ ತೇನ ಸಮಸ್ತದಸ್ಯುವಿನಾಶನಂ ತೇನ ದಿನಾತ್ ವ್ಯಧಾಯಿ ॥ ೧೬೧ ॥**

**ಅರ್ಥ** :– **ಕಲೇಃ ತು** = ಕಲಿಯ **ಕಾತ್ಕಾರತಃ ಏವ** = ನಿರಾಕರಣೆ ಮಾಡುವುದರಿಂದಲೇ **ಕಲ್ಕೀ** = (ಶ್ರೀಹರಿಯು) ಕಲ್ಕಿಯು. **ಕಲಂ ಏವ** = 'ಕಲ'ವೇ (ಕಲ ಎಂದರೆ) **ಜ್ಞಾನಂ** = ಜ್ಞಾನವು. **ಕಂ ಏವ** = 'ಕಂ' ಎಂಬುದೇ **ಸುಖಂ** = ಸುಖವು. **ತದ್ವಾನ್** = ಆ ಜ್ಞಾನ–ಸುಖಗಳನ್ನು ಹೊಂದಿದವನು **ತೇನ** = ಈ ಕಾರಣದಿಂದ **ಕಲ್ಕೀ** = ಕಲ್ಕೀ **ಇತಿ ವಾ** = ಎಂಬ ನಾಮವುಳ್ಳವನು. **ತೇನ** = ಆ ಕಲ್ಕಿಯಿಂದ **ದಿನಾತ್** = ದಿನಮಾತ್ರದಿಂದ **ಸಮಸ್ತದಸ್ಯುವಿನಾಶನಂ** = ಎಲ್ಲ ದುಷ್ಟರ ವಿನಾಶನವು **ವ್ಯಧಾಯಿ** = ಮಾಡಲ್ಪಟ್ಟಿತು (ಮಾಡಲ್ಪಡುವುದು).

**ತಾತ್ಪರ್ಯ** :- ಕಲಿಯನ್ನು ಹೀಗೆ ನಾಶಮಾಡುವುದರಿಂದ ಶ್ರೀಹರಿ ಕಲ್ಕಿ ಎನ್ನಿಸುವನು. ಕಲ ಎಂದರೆ ಜ್ಞಾನ, ಕ ಎಂದರೆ ಸುಖ, ಜ್ಞಾನಸುಖಗಳನ್ನು ಹೊಂದಿರುವುದರಿಂದಲೂ ಅವನಿಗೆ ಕಲ್ಕಿ ಎಂದು ಹೆಸರು. ಅವನು ಒಂದೇ ದಿನದಲ್ಲಿ ಸಮಸ್ತ ಅಸುರರನ್ನೂ ನಾಶಪಡಿಸುವನು.

### ಕಲ್ಕಿರೂಪದಿಂದ ಧರ್ಮಸ್ಥಾಪನೆ

**ಅಧರ್ಮವೃತ್ತಂ ವಿಮುಖಂ ಹರೇಶ್ಚ**
**ನಿಹತ್ಯ ನಿಃಶೇಷಜನಂ ತುರಂಗೀ ।**
**ಸಂಸ್ಥಾಪಯಾಮಾಸ ಸುಧರ್ಮಸೇತುಂ**
**ಜ್ಞಾನಂ ಸ್ವಭಕ್ತಿಂ ಚ ನಿಜಪ್ರಜಾಸು ॥ ೧೬೨ ॥**

ಅಧರ್ಮವೃತ್ತಂ ವಿಮುಖಂ ಹರೇಃ ಚ ನಿಹತ್ಯ ನಿಃಶೇಷಜನಂ ತುರಂಗೀ ।
ಸಂಸ್ಥಾಪಯಾಮಾಸ ಸುಧರ್ಮಸೇತುಂ ಜ್ಞಾನಂ ಸ್ವಭಕ್ತಿಂ ಚ ನಿಜಪ್ರಜಾಸು ॥ ೧೬೨ ॥

**ಅರ್ಥ** :- **ತುರಂಗೀ** = ಕುದುರೆಯನ್ನೇರಿದ ಈ ಕಲ್ಕಿಯು **ಅಧರ್ಮವೃತ್ತಂ** = ಅಧರ್ಮಪ್ರವೃತ್ತಿಯ **ಚ** = ಮತ್ತು **ಹರೇಃ** = ಹರಿಗೆ **ವಿಮುಖಂ** = ವಿಮುಖರಾದ **ನಿಃಶೇಷಜನಂ** = ಸಕಲಜನರನ್ನೂ **ನಿಹತ್ಯ** = ಸಂಹರಿಸಿ **ಸುಧರ್ಮಸೇತುಂ** = ಉತ್ತಮವಾದ ಧರ್ಮ ಸೇತುವನ್ನು, **ನಿಜಪ್ರಜಾಸು** = ತನ್ನ ಜನರಲ್ಲಿ **ಜ್ಞಾನಂ** = ಜ್ಞಾನವನ್ನು **ಚ** = ಮತ್ತು **ಸ್ವಭಕ್ತಿಂ** = ತನ್ನಲ್ಲಿ ಭಕ್ತಿಯನ್ನು **ಸಂಸ್ಥಾಪಯಾಮಾಸ** = ಚೆನ್ನಾಗಿ ಸ್ಥಾಪಿಸಿದನು (ಸ್ಥಾಪಿಸುವನು).

**ತಾತ್ಪರ್ಯ** :- ಹರಿಗೆ ವಿಮುಖರಾದ ಅಧರ್ಮಪ್ರವೃತ್ತಿಯ ಸಕಲ ಜನರನ್ನೂ ನಿಃಶೇಷವಾಗಿ ಸಂಹರಿಸಿ, ಧರ್ಮಸೇತುವನ್ನು, ಜ್ಞಾನ, ಹರಿಭಕ್ತಿಗಳನ್ನು ತನ್ನ ಜನರಲ್ಲಿ ತುರಗಾರೂಢನಾದ ಕಲ್ಕಿರೂಪದ ಶ್ರೀಹರಿ ನೆಲೆಗೊಳಿಸುವನು.

### ಗ್ರಂಥೋಪಸಂಹಾರ

**ಇತ್ಯಾದ್ಯನಂತಾನಿ ಹರೇರುದಾರ-**
**ಕರ್ಮಾಣಿ ರೂಪಾಣಿ ಚ ಸದ್ಗುಣಾಶ್ಚ ।**
**ನಿತ್ಯವ್ಯಪೇತಾಖಿಲದೋಷಕಸ್ಯ**
**ಬ್ರಹ್ಮೇತ್ಯನಂತೇತಿ ಚ ನಾಮ ಯೇನ ॥ ೧೬೩ ॥**

ಇತ್ಯಾದಿ ಅನಂತಾನಿ ಹರೇಃ ಉದಾರಕರ್ಮಾಣಿ ರೂಪಾಣಿ ಚ ಸದ್ಗುಣಾಃ ಚ ।
ನಿತ್ಯವ್ಯಪೇತಾಖಿಲದೋಷಕಸ್ಯ ಬ್ರಹ್ಮ ಇತಿ ಅನಂತ ಇತಿ ಚ ನಾಮ ಯೇನ ॥ ೧೬೩ ॥

**ಅರ್ಥ** :- **ಯೇನ** = ಯಾವ ಕಾರಣದಿಂದ **ನಿತ್ಯವ್ಯಪೇತಾಖಿಲ ದೋಷಕಸ್ಯ** = ನಿತ್ಯವೂ ಸಕಲದೋಷಗಳಿಂದ ದೂರನಾದ **ಹರೇಃ** = ಶ್ರೀಹರಿಯ **ಇತ್ಯಾದಿ** = ಇವೇ ಮೊದಲಾದ **ಅನಂತಾನಿ** = ಕೊನೆಯಿರದ **ಉದಾರಕರ್ಮಾಣಿ** = ಉತ್ತಮಕಾರ್ಯಗಳು **ಚ** = ಮತ್ತು **ರೂಪಾಣಿ** = ರೂಪಗಳು **ಚ** = ಮತ್ತು **ಸದ್ಗುಣಾಃ** = ಉತ್ತಮಗುಣಗಳು **(ವರ್ತತೇ)** = ಇವೆಯೋ, **(ತೇನ)** = ಆ ಕಾರಣದಿಂದ **ಹರೇಃ** = ಶ್ರೀಹರಿಗೆ **ಬ್ರಹ್ಮ** **ಇತಿ** = ಬ್ರಹ್ಮ ಎಂದು **ಅನಂತ** **ಇತಿ** = ಅನಂತ ಎಂದು **ನಾಮ** = ಹೆಸರು.

**ತಾತ್ಪರ್ಯ** :- ಇದೇ ಮೊದಲಾದವುಗಳು ಕೊನೆಯಿಲ್ಲದ ಶ್ರೀಹರಿಯ ಉತ್ತಮ ಕಾರ್ಯಗಳು, ರೂಪಗಳು ಹಾಗೂ ಸದ್ಗುಣಗಳು. ಸದಾ ಸಕಲ ದೋಷದೂರನಾದ ಅವನಿಗೆ ಇದರಿಂದಾಗಿಯೇ ಬ್ರಹ್ಮ ಎಂದೂ, ಅನಂತ ಎಂದೂ ಹೆಸರು.

### ಗ್ರಂಥಕರ್ತೃಗಳ ಪರಿಚಯ

**ಆನಂದತೀರ್ಥಾಖ್ಯಮುನಿಃ ಸುಪೂರ್ಣ-**
**ಪ್ರಜ್ಞಾಭಿಧೋ ಗ್ರಂಥಮಿಮಂ ಚಕಾರ ।**
**ನಾರಾಯಣೇನಾಭಿಹಿತೋ ಬದರ್ಯಾಂ**
**ತಸ್ಯೈವ ಶಿಷ್ಯೋ ಜಗದೇಕಭರ್ತುಃ ॥ ೧೬೪ ॥**

ಆನಂದತೀರ್ಥಾಖ್ಯಮುನಿಃ ಸುಪೂರ್ಣಪ್ರಜ್ಞಾಭಿಧಃ ಗ್ರಂಥಂ ಇಮಂ ಚಕಾರ ।
ನಾರಾಯಣೇನ ಅಭಿಹಿತಃ ಬದರ್ಯಾಂ ತಸ್ಯ ಏವ ಶಿಷ್ಯಃ ಜಗದೇಕಭರ್ತುಃ ॥೧೬೪॥

**ಅರ್ಥ** :- **ನಾರಾಯಣೇನ** = ನಾರಾಯಣನಿಂದ **ಬದರ್ಯಾಂ** = ಬದರಿಯಲ್ಲಿ **ಅಭಿಹಿತಃ** = ಆಜ್ಞಾಪಿತರಾದ **ಜಗದೇಕಭರ್ತುಃ** = ಜಗತ್ತಿಗೆ

ಮುಖ್ಯಸ್ವಾಮಿಯಾದ **ತಸ್ಯ ಏವ** = ಅವನ **ಶಿಷ್ಯಃ** = ಶಿಷ್ಯರಾದ **ಸುಪೂರ್ಣಪ್ರಜ್ಞಾಭಿಧಃ** = ಉತ್ತಮವಾದ ಪೂರ್ಣಪ್ರಜ್ಞ ಎಂಬ ಹೆಸರಿನ **ಆನಂದತೀರ್ಥಮುನಿಃ** = ಆನಂದತೀರ್ಥ ಎಂಬ ಮುನಿಯು **ಇಮಂ** = ಈ **ಗ್ರಂಥಂ** = ಗ್ರಂಥವನ್ನು **ಚಕಾರ** = ಮಾಡಿದರು.

**ತಾತ್ಪರ್ಯ :-** ಉತ್ತಮವಾದ ಪೂರ್ಣಪ್ರಜ್ಞ ಎಂಬ ಹೆಸರಿನ 'ಆನಂದ ತೀರ್ಥ' ಎಂಬ ಮುನಿ ಬದರಿಯಲ್ಲಿ ನಾರಾಯಣನಿಂದ ಆದೇಶಿಸಲ್ಪಟ್ಟವರಾಗಿ ಈ ಗ್ರಂಥವನ್ನು ರಚಿಸಿದರು. ಅವರು ಜಗತ್ತಿನ ಮುಖ್ಯ ಸ್ವಾಮಿಯಾದ ಆ ವೇದವ್ಯಾಸರ ಶಿಷ್ಯರೇ ಆದವರು.

### ಮಧ್ವರೂಪದ ಹಿರಿಮೆ

**ಯಸ್ತತ್ಪ್ರಸಾದಾದಖಿಲಾಂಶ್ಚ ವೇದಾನ್**
**ಸಪಂಚರಾತ್ರಾನ್ ಸರಹಸ್ಯಸಂಗ್ರಹಾನ್ ।**
**ವೇದೇತಿಹಾಸಾಂಶ್ಚ ಪುರಾಣಯುಕ್ತಾನ್**
**ಯಥಾವದನ್ಯಾ ಅಪಿ ಸರ್ವವಿದ್ಯಾಃ ॥ ೧೬೫ ॥**

**ಯಃ ತತ್ಪ್ರಸಾದಾತ್ ಅಖಿಲಾನ್ ಚ ವೇದಾನ್ ಸಪಂಚರಾತ್ರಾನ್ ಸರಹಸ್ಯ ಸಂಗ್ರಹಾನ್ । ವೇದ ಇತಿಹಾಸಾನ್ ಚ ಪುರಾಣಯುಕ್ತಾನ್ ಯಥಾವತ್ ಅನ್ಯಾಃ ಅಪಿ ಸರ್ವವಿದ್ಯಾಃ ॥ ೧೬೫ ॥**

**ಅರ್ಥ :- ಯಃ ಚ** = ಮತ್ತೆ ಯಾರು **ತತ್ಪ್ರಸಾದಾತ್** = ಆ ವೇದವ್ಯಾಸರ ಅನುಗ್ರಹದಿಂದ **ಸಪಂಚರಾತ್ರಾನ್** = ಪಂಚರಾತ್ರಸಹಿತವಾದ **ಸರಹಸ್ಯಸಂಗ್ರಹಾನ್** = ರಹಸ್ಯವಾದ ಉಪನಿಷತ್ತುಗಳ ಸಂಗ್ರಹವಾದ ಸೂತ್ರಗಳಿಂದ ಕೂಡಿದ **ಪುರಾಣಯುಕ್ತಾನ್** = ಪುರಾಣದಿಂದ ಕೂಡಿದ **ಅಖಿಲಾನ್** = ಎಲ್ಲ **ವೇದಾನ್** = ವೇದಗಳನ್ನು **ಇತಿಹಾಸಾನ್ ಚ** = ಇತಿಹಾಸಗಳನ್ನೂ **ಅನ್ಯಾಃ** = ಇತರ **ಸರ್ವವಿದ್ಯಾಃ ಅಪಿ** = ಎಲ್ಲ ವಿದ್ಯೆಗಳನ್ನೂ **ಯಥಾವತ್** = ಯಥಾರ್ಥವಾಗಿ **ವೇದ** = ಬಲ್ಲರೋ

**(ಸಃ ಏವ)** = ಆ ಆನಂದತೀರ್ಥರೇ **(ಗ್ರಂಥಮಿಮಂ ಚಕಾರ)** = ಈ ಗ್ರಂಥವನ್ನು ರಚಿಸಿದರು.

**ತಾತ್ಪರ್ಯ** :- ಆನಂದತೀರ್ಥರಾದ ಅವರು ಶ್ರೀಹರಿಯ ಅನುಗ್ರಹ ದಿಂದ ಸಕಲವೇದಗಳನ್ನೂ, ಪಂಚರಾತ್ರಗಳನ್ನೂ, ಉಪನಿಷತ್ತುಗಳನ್ನೂ, ಇತಿಹಾಸಗಳನ್ನೂ, ಪುರಾಣಗಳನ್ನೂ, ಇತರ ಸಕಲಶಾಸ್ತ್ರಗಳನ್ನೂ ಪರಿಪೂರ್ಣ ವಾಗಿ ಬಲ್ಲವರು.

### ಗ್ರಂಥ ಪ್ರಶಸ್ತಿ

**ಸಮಸ್ತಶಾಸ್ತ್ರಾರ್ಥವಿನಿರ್ಣಯೋಽಯಂ**
**ವಿಶೇಷತೋ ಭಾರತವರ್ತ್ಮಚಾರೀ ।**
**ಗ್ರಂಥಃ ಕೃತೋಽಯಂ ಜಗತಾಂ ಜನಿತ್ರಂ**
**ಹರಿಂ ಗುರುಂ ಪ್ರೀಣಯತಾಽಮುನೈವ ॥ ೧೬೬ ॥**

ಸಮಸ್ತಶಾಸ್ತ್ರಾರ್ಥವಿನಿರ್ಣಯಃ ಅಯಂ ವಿಶೇಷತಃ ಭಾರತವರ್ತ್ಮಚಾರೀ । ಗ್ರಂಥಃ ಕೃತಃ ಅಯಂ ಜಗತಾಂ ಜನಿತ್ರಂ ಹರಿಂ ಗುರುಂ ಪ್ರೀಣಯತಾ ಅಮುನಾ ಏವ ॥ ೧೬೬ ॥

**ಅರ್ಥ** :- **ಅಯಂ** = ಈ ಗ್ರಂಥವು **ಸಮಸ್ತಶಾಸ್ತ್ರಾರ್ಥವಿನಿರ್ಣಯಃ** = ಎಲ್ಲ ಶಾಸ್ತ್ರಾರ್ಥಗಳ ಸರಿಯಾದ ನಿರ್ಣಯವು. **ವಿಶೇಷತಃ** = ವಿಶೇಷವಾಗಿ **ಭಾರತವರ್ತ್ಮಚಾರೀ** = ಮಹಾಭಾರತದ ಮಾರ್ಗವರ್ತಿಯು (ಭಾರತನಿರ್ಣಯಾತ್ಮಕವಾದುದು). **ಜಗತಾಂ** = ಜಗತ್ತುಗಳ **ಜನಿತ್ರಂ** = ತಂದೆಯಾದ **ಗುರುಂ** = ಗುರುವಾದ **ಹರಿಂ** = ಶ್ರೀಹರಿಯನ್ನು **ಪ್ರೀಣಯತಾ** = ಪ್ರೀತಿಪಡಿಸುವ **ಅಮುನಾ ಏವ** = ಇವನಿಂದಲೇ (ಈ ಆನಂದತೀರ್ಥರಿಂದಲೇ) **ಅಯಂ** = ಈ **ಗ್ರಂಥಃ** = ಗ್ರಂಥವು **ಕೃತಃ** = ರಚಿಸಲ್ಪಟ್ಟದಾಗಿದೆ.

**ತಾತ್ಪರ್ಯ** :- ಈ ಗ್ರಂಥ ಸಕಲಶಾಸ್ತ್ರಾರ್ಥಗಳಿಗೆ ನಿರ್ಣಾಯಕ ವಾದುದು. ವಿಶೇಷವಾಗಿ ಭಾರತವನ್ನು ನಿರ್ಣಯಿಸುವಂತಹುದು. ಜಗತ್ತಿನ

ಜನಕನೂ, ಗುರುವೂ ಆದ ಶ್ರೀಹರಿಯನ್ನು ಸಂತೋಷಪಡಿಸಲೆಂದು ಅವರು ಈ ಗ್ರಂಥವನ್ನು ರಚಿಸಿದರು.

**ವಿನಿರ್ಣಯೋ ನಾಸ್ತ್ಯಮುನಾ ವಿನಾ ಯ-**
**ದ್ವಿಪ್ರಸ್ಥಿತಾನಾಮಿಹ ಸರ್ವವಾಚಾಮ್ ।**
**ತದ್ಬ್ರಹ್ಮಸೂತ್ರಾಣಿ ಚಕಾರ ಕೃಷ್ಣೋ**
**ವ್ಯಾಖ್ಯಾಽಥ ತೇಷಾಮಯಥಾಕೃತಾಽನ್ಯೈಃ ॥ ೧೬೭ ॥**

**ವಿನಿರ್ಣಯಃ ನ ಅಸ್ತಿ ಅಮುನಾ ವಿನಾ ಯತ್ ವಿಪ್ರಸ್ಥಿತಾನಾಂ ಇಹ ಸರ್ವವಾಚಾಮ್ । ತತ್ ಬ್ರಹ್ಮಸೂತ್ರಾಣಿ ಚಕಾರ ಕೃಷ್ಣಃ ವ್ಯಾಖ್ಯಾ ಅಥ ತೇಷಾಂ ಅಯಥಾಕೃತಾ ಅನ್ಯೈಃ ॥ ೧೬೭ ॥**

**ಅರ್ಥ** :- **ಯತ್** = ಯಾವ ಕಾರಣದಿಂದ **ಇಹ** = ಈ ಶಾಸ್ತ್ರಗಳಲ್ಲಿ **ವಿಪ್ರಸ್ಥಿತಾನಾಂ** = ವಿರುದ್ಧವಾಗಿ ತೋರುವ **ಸರ್ವವಾಚಾಂ** = ಸಕಲ(ಶಾಸ್ತ್ರ)ವಚನಗಳಿಗೆ **ಅಮುನಾ** = ಇದರಿಂದ (ಮಹಾಭಾರತ ತಾತ್ಪರ್ಯನಿರ್ಣಯಗ್ರಂಥದಿಂದ) **ವಿನಾ** = ಹೊರತು **ವಿನಿರ್ಣಯಃ** = ಸರಿಯಾದ ನಿರ್ಣಯವು **ನ ಅಸ್ತಿ** = ಇಲ್ಲವೋ **ತತ್** = ಆದ್ದರಿಂದ **(ಅಯಂ ಗ್ರಂಥಃ ಕೃತಃ)** = ಈ ಗ್ರಂಥವು ರಚಿಸಲ್ಪಟ್ಟಿದೆ. **ಕೃಷ್ಣಃ** = ವಾಸಿಷ್ಠಕೃಷ್ಣರಾದ ವೇದವ್ಯಾಸರು **ಬ್ರಹ್ಮಸೂತ್ರಾಣಿ** = ಬ್ರಹ್ಮಸೂತ್ರಗಳನ್ನು **ಚಕಾರ** = ರಚಿಸಿದರು. **ಅಥ** = ಬಳಿಕ **ಅನ್ಯೈಃ** = ಬೇರೆಯವರಿಂದ **ತೇಷಾಂ** = ಆ ಬ್ರಹ್ಮಸೂತ್ರಗಳ **ವ್ಯಾಖ್ಯಾ** = ವ್ಯಾಖ್ಯಾನವು **ಅಯಥಾಕೃತಾ** = ತಪ್ಪಾಗಿ ರಚಿತವಾದುದಾಯಿತು.

**ತಾತ್ಪರ್ಯ** :- ಮೇಲ್ನೋಟಕ್ಕೆ ಪರಸ್ಪರ ವಿರುದ್ಧವೆಂಬಂತೆ ಕಾಣುವ ಸಕಲಶಾಸ್ತ್ರವಚನಗಳಿಗೂ ಇದಕ್ಕಿಂತ ಬೇರೆಯಾದ ಮತ್ತೊಂದು ನಿರ್ಣಯ ಇಲ್ಲ. ಅದಕ್ಕೆಂದೇ ಶ್ರೀವೇದವ್ಯಾಸರು ಬ್ರಹ್ಮಸೂತ್ರಗಳನ್ನು ರಚಿಸಿದರು. ಆದರೆ ಅವುಗಳಿಗೆ ಬೇರೆಯವರಿಂದ ತಪ್ಪಾದ ವ್ಯಾಖ್ಯೆಗಳು ರಚಿತವಾದವು.

ಭಾಷ್ಯದಿಂದ ತತ್ತ್ವದ ಆವಿಷ್ಕಾರ

**ನಿಗೂಹಿತಂ ಯತ್ಪುರುಷೋತ್ತಮತ್ವಂ**
**ಸೂತ್ರೋಕ್ತಮಪ್ಯತ್ರ ಮಹಾಸುರೇಂದ್ರೈಃ ।**
**ಜೀವೈಶ್ವರೈಕ್ಯಂ ಪ್ರವದದ್ಭಿರುಗ್ರೈ-**
**ರ್ವ್ಯಾಖ್ಯಾಯ ಸೂತ್ರಾಣಿ ಚಕಾರ ಚಾವಿಃ ॥ ೧೬೮ ॥**

**ನಿಗೂಹಿತಂ ಯತ್ ಪುರುಷೋತ್ತಮತ್ವಂ ಸೂತ್ರೋಕ್ತಂ ಅಪಿ ಅತ್ರ ಮಹಾಸುರೇಂದ್ರೈಃ । ಜೀವೈಶ್ವರೈಕ್ಯಂ ಪ್ರವದದ್ಭಿಃ ಉಗ್ರೈಃ ವ್ಯಾಖ್ಯಾಯ ಸೂತ್ರಾಣಿ ಚಕಾರ ಚ ಆವಿಃ ॥ ೧೬೮ ॥**

**ಅರ್ಥ** :– **ಜೀವೇಶ್ವರೈಕ್ಯಂ** = ಜೀವ–ಈಶರರಲ್ಲಿ ಐಕ್ಯವನ್ನು **ಪ್ರವದದ್ಭಿಃ** = ಹೇಳುವ **ಉಗ್ರೈಃ** = ಉಗ್ರರಾದ **ಮಹಾಸುರೇಂದ್ರೈಃ** = ಅಸುರಮುಖ್ಯರಿಂದ **ಸೂತ್ರೋಕ್ತಂ ಅಪಿ** = ಸೂತ್ರದಲ್ಲಿ ಹೇಳಲ್ಪಟ್ಟದ್ದಗಿದ್ದರೂ **ಪುರುಷೋತ್ತಮತ್ವಂ** = ಶ್ರೀಹರಿಯ ಪುರುಷೋತ್ತಮತ್ವವು **ಯತ್** = ಯಾವ ಕಾರಣದಿಂದ **ಅತ್ರ** = ಈ ಭೂಮಿಯಲ್ಲಿ **ನಿಗೂಹಿತಂ** = ಮರೆಮಾಚಲ್ಪಟ್ಟಿತೋ, (**ತತ್**) = ಆದ್ದರಿಂದ **ಸೂತ್ರಾಣಿ ಚ** = ಸೂತ್ರಗಳನ್ನು ಸಹ **ವ್ಯಾಖ್ಯಾಯ** = ವ್ಯಾಖ್ಯಾನಿಸಿ **ಆವಿಃ ಚಕಾರ** = (ಪುರುಷೋತ್ತಮತ್ವ ವನ್ನು) ಆವಿಷ್ಕರಿಸಿದರು.

**ತಾತ್ಪರ್ಯ** :- ಬ್ರಹ್ಮಸೂತ್ರಗಳಲ್ಲಿ ಪ್ರತಿಪಾದಿತವಾಗಿದ್ದ ಶ್ರೀಹರಿಯ ಪುರುಷೋತ್ತಮತ್ವವು ಜೀವೇಶ್ವರೈಕ್ಯವನ್ನು ಹೇಳತೊಡಗಿದ ಮಹಾ ಅಸುರಮುಖ್ಯರುಗಳಿಂದ ಮರೆಮಾಚಲಟ್ಟಿತು. ಅದಕ್ಕಾಗಿ ಆನಂದತೀರ್ಥರಾದ ಇವರು ಅವುಗಳಿಗೆ ಭಾಷ್ಯ ರಚಿಸಿ ಅರ್ಥವನ್ನು ತಿಳಿಸಿದರು.

ಬ್ರಹ್ಮಸೂತ್ರಭಾಷ್ಯಾದಿಗಳ ರಚನೆ

**ವ್ಯಾಸಾಜ್ಞಯಾ ಭಾಷ್ಯವರಂ ವಿಧಾಯ**
**ಪೃಥಕ್ ಪೃಥಕ್ ಚೋಪನಿಷತ್ಸುಭಾಷ್ಯಮ್ ।**

**ಕೃತ್ವಾಽಖಿಲಾನ್ಯಂ ಪುರುಷೋತ್ತಮಂ ಚ**
**ಹರಿಂ ವದಂತೀತಿ ಸಮರ್ಥಯಿತ್ವಾ ॥ ೧೬೯ ॥**

**ವ್ಯಾಸಾಜ್ಞಯಾ ಭಾಷ್ಯವರಂ ವಿಧಾಯ ಪೃಥಕ್ ಪೃಥಕ್ ಚ ಉಪನಿಷತ್ಸು ಭಾಷ್ಯಮ್ । ಕೃತ್ವಾ ಅಖಿಲಾನ್ಯಂ ಪುರುಷೋತ್ತಮಂ ಚ ಹರಿಂ ವದಂತಿ ಇತಿ ಸಮರ್ಥಯಿತ್ವಾ ॥ ೧೬೯ ॥**

**ಅರ್ಥ** :- **ವ್ಯಾಸಾಜ್ಞಯಾ** = ವ್ಯಾಸರ ಆಜ್ಞೆಯಿಂದ **ಭಾಷ್ಯವರಂ** = ಶ್ರೇಷ್ಠಭಾಷ್ಯವನ್ನು **ವಿಧಾಯ** = ರಚಿಸಿ **ಪೃಥಕ್ ಪೃಥಕ್ ಚ** = ಪ್ರತ್ಯೇಕ ಪ್ರತ್ಯೇಕವಾಗಿಯೇ **ಉಪನಿಷತ್ಸುಭಾಷ್ಯಂ** = ಉಪನಿಷತ್ತುಗಳ ಮಂಗಳಕರವಾದ ಭಾಷ್ಯವನ್ನು **ಕೃತ್ವಾ** = ರಚಿಸಿ **ಹರಿಂ** = ಹರಿಯನ್ನು **ಅಖಿಲಾನ್ಯಂ** = ಎಲ್ಲರಿಗಿಂತಲೂ ಬೇರೆಯವನಾದ (ವಿಲಕ್ಷಣನೆಂದು) **ಚ** = ಮತ್ತು **ಪುರುಷೋತ್ತಮಂ** = ಕ್ಷರಾಕ್ಷರ ಪುರುಷೋತ್ತಮನೆಂದು **ವದಂತಿ** = ಹೇಳುವವು **ಇತಿ** = ಎಂದು **ಸಮರ್ಥಯಿತ್ವಾ** = ಸಮರ್ಥಿಸಿ

**ತಾತ್ಪರ್ಯ** :- ಶ್ರೀವೇದವ್ಯಾಸರ ಆಜ್ಞೆಯಿಂದ ಶ್ರೇಷ್ಠವಾದ ಭಾಷ್ಯವನ್ನು ಬ್ರಹ್ಮಸೂತ್ರಗಳಿಗೆ ರಚಿಸಿ ಉಪನಿಷತ್ತುಗಳಿಗೂ ಪ್ರತ್ಯೇಕ ಪ್ರತ್ಯೇಕವಾಗಿ ಉತ್ತಮ ಭಾಷ್ಯಗಳನ್ನು ರಚಿಸಿದರು. ಅವೆಲ್ಲವೂ ಶ್ರೀಹರಿಯನ್ನು ಸರ್ವೋತ್ತಮನೆಂದು, ಸರ್ವವಿಲಕ್ಷಣನೆಂದು ಪ್ರತಿಪಾದಿಸುವವು ಎಂದು ಸಮರ್ಥಿಸಿದರು.

### ತೃತೀಯ ರೂಪದ ಅದ್ವಿತೀಯಕಾರ್ಯ

**ತನುಸ್ತೃತೀಯಾ ಪವನಸ್ಯ ಸೇಯಂ**
**ಸದ್ಭಾರತಾರ್ಥಪ್ರತಿಪಾದನಾಯ ।**
**ಗ್ರಂಥಂ ಚಕಾರೇಮಮುದೀರ್ಣವಿದ್ಯಾ**
**ಯಸ್ಮಿನ್ ರಮಂತೇ ಹರಿಪಾದಭಕ್ತಾಃ ॥ ೧೭೦ ॥**

**ತನುಃ ತೃತೀಯಾ ಪವನಸ್ಯ ಸಾ ಇಯಂ ಸದ್ಭಾರತಾರ್ಥಪ್ರತಿದೀಪನಾಯ । ಗ್ರಂಥಂ ಚಕಾರ ಇಮಂ ಉದೀರ್ಣವಿದ್ಯಾಃ ಯಸ್ಮಿನ್ ರಮಂತೇ ಹರಿಪಾದಭಕ್ತಾಃ ॥ ೧೭೦ ॥**

**ಅರ್ಥ** :- **ಪವನಸ್ಯ** = ವಾಯುವಿನ **ಸಾ** = ಆ **ತೃತೀಯಾ** = ಮೂರನೆಯ **ಇಯಂ ತನುಃ** = ಈ ರೂಪವು **ಸದ್ಭಾರತಾರ್ಥ ಪ್ರತಿಪಾದನಾಯ** = ಶೋಭನವಾದ ಮಹಾಭಾರತದ ಅರ್ಥವನ್ನು ಪ್ರತಿಪಾದಿಸಲೆಂದು **ಇಮಂ** = ಈ **ಗ್ರಂಥಂ** = ಗ್ರಂಥವನ್ನು **ಚಕಾರ** = ರಚಿಸಿದನು. **ಉದೀರ್ಣವಿದ್ಯಾಃ** = ಉತ್ಕೃಷ್ಟವಾದ ವಿದ್ಯೆಯುಳ್ಳ **ಹರಿಪಾದಭಕ್ತಾಃ** = ಹರಿಪಾದಭಕ್ತರು **ಯಸ್ಮಿನ್** = ಯಾವ ಈ ಗ್ರಂಥದಲ್ಲಿ **ರಮಂತೇ** = ರಮಿಸುವರು.

**ತಾತ್ಪರ್ಯ** :- ಶ್ರೀವಾಯುದೇವರ ಈ ಮೂರನೆಯ ರೂಪವಾದ ಶ್ರೀಮದಾನಂದತೀರ್ಥರು ಉತ್ತಮವಾದ ಮಹಾಭಾರತದ ಅರ್ಥವನ್ನು ಪ್ರತಿಪಾದಿಸಲೆಂದು ಈ ಗ್ರಂಥವನ್ನು ರಚಿಸಿದರು. ಇದನ್ನು ಉತ್ತಮ ಜ್ಞಾನಿಗಳಾದ ಹರಿಪಾದ ಭಕ್ತರು ಅಧ್ಯಯನ ಮಾಡಿ ಸಂತೋಷಿಸುವರು.

### ಮಧ್ವರ ವಾಯ್ವವತಾರಕ್ಕೆ ಪ್ರಮಾಣಗಳು

**ತೃತೀಯಮಸ್ಯ ವೃಷಭಸ್ಯ ದೋಹಸೇ**
**ದಶಪ್ರಮತಿಂ ಜನಯಂತ ಯೋಷಣಃ ।**
**ನಿರ್ಯದೀಂ ಬುಧ್ನಾನ್ಮಹಿಷಸ್ಯ ವರ್ಪಸ**
**ಈಶಾನಾಸಃ ಶವಸಾ ಕ್ರಂತ ಸೂರಯಃ ।**
**ಯದೀಮನು ಪ್ರದಿವೋ ಮಧ್ವ ಆಧವೇ**
**ಗುಹಾಸಂತಂ ಮಾತರಿಶ್ವಾ ಮಥಾಯತಿ ॥ ೧೭೧ ॥**

**ತೃತೀಯಂ ಅಸ್ಯ ವೃಷಭಸ್ಯ ದೋಹಸೇ ದಶಪ್ರಮತಿಂ ಜನಯಂತ ಯೋಷಣಃ । ನಿಃ ಯತ್ ಈಂ ಬುಧ್ನಾತ್ ಮಹಿಷಸ್ಯ ವರ್ಪಸಃ ಈಶಾನಾಸಃ ಶವಸಾ ಕ್ರಂತ ಸೂರಯಃ । ಯತ್ ಈಂ ಅನು ಪ್ರದಿವಃ ಮಧ್ವಃ ಆಧವೇ ಗುಹಾಸಂತಂ ಮಾತರಿಶ್ವಾ ಮಥಾಯತಿ ॥ ೧೭೧ ॥**

**ಅರ್ಥ** :- **ವೃಷಭಸ್ಯ** = ದೇವಶ್ರೇಷ್ಠನಾದ **ಅಸ್ಯ** = ಈ ವಾಯುವಿನ **ತೃತೀಯಂ** = ಮೂರನೆಯ **ದಶಪ್ರಮತಿಂ** = ಪೂರ್ಣಪ್ರಜ್ಞನಾಮಕ ರೂಪವನ್ನು **ಯೋಷಣಃ** = ಶ್ರೀಭೂದುರ್ಗಾ ರೂಪದ ದೇವಿಯರು

**ದೋಹಸ್ಯ** = ಜ್ಞಾನಕರೆದುಕೊಡಲು **ಜನಯಂತ** = ಹುಟ್ಟಿಸಿದರು. **ಈಶಾನಾಸಃ** = ಈಶಾನ (ರುದ್ರ) ಮೊದಲಾದ **ಸೂರಯಃ** = ಜ್ಞಾನಿಗಳು **ಮಹಿಷಸ್ಯ** = ಪೂರ್ಣನಾದ ಶ್ರೀಹರಿಯ **ವರ್ಪಸಃ** = ಬಲಜ್ಞಾನಾದಿ ಗುಣಗಳನ್ನು **ಯತ್ ಈಂ** = ಯಾವ **ಬುಧ್ನಾತ್ ಈಂ** = ಜ್ಞಾನರೂಪ ರಾದ ಪೂರ್ಣಪ್ರಜ್ಞರಿಂದಲೇ **ಶವಸಾ** = ಸುಖವಾಗಿ **ನಿಃ** = ನಿತರಾಂ (ಚೆನ್ನಾಗಿ) **ಕ್ರಂತ** = ತಿಳಿದವರಾದರೋ **ಪ್ರದಿವಃ** = ಪ್ರಕೃಷ್ಟವಾದ ಕಾಂತಿಯುಕ್ತರಾದ **ಮಾತರಿಶ್ವಾ** = ಪ್ರಮಾಣಭೂತವಾದ ಋಗಾದಿ ಶಾಸ್ತ್ರಗಳಲ್ಲಿ ಶ್ವ-ವಿಹರಿಸುವ ಮಾತರಿಶ್ವಾ ಎನಿಸಿರುವ ವಾಯುದೇವರ ಅವತಾರರಾದ **ಮಧ್ವಃ** = ಮಧ್ವಾಚಾರ್ಯರು **ಗುಹಾಸಂತಂ** = (ದುಷ್ಟರಿಂದ) ಮರೆಮಾಡಲ್ಪಟ್ಟ ಪರಮಾತ್ಮನನ್ನು **ಆಧವೇ** = ಸರ್ವ ಸ್ವಾಮಿಯೆಂದು ತಿಳಿಸಿಕೊಡಲು **ಅನು ಮಥಾಯತಿ** = (ವೇದಾದಿ ಶಾಸ್ತ್ರಗಳನ್ನು) ಚೆನ್ನಾಗಿ ವ್ಯಾಖ್ಯಾನಿಸಿದರು.

ಗ್ರಂಥೋಕ್ತ ಸಕಲ ವಿಷಯಗಳು ಪ್ರಾಮಾಣಿಕ

**ಇತ್ಯಾದಿವಾಕ್ಯೋಕ್ತಮಿದಂ ಸಮಸ್ತಂ**
**ತಥಾ ಪುರಾಣೇಷು ಚ ಪಂಚರಾತ್ರೇ ।**
**ಅತ್ರೋದಿತಾ ಯಾಶ್ಚ ಕಥಾಃ ಸಮಸ್ತಾ**
**ವೇದೇತಿಹಾಸಾದಿವಿನಿರ್ಣಯೋಕ್ತಾಃ ॥ ೧೭೨ ॥**

**ಇತ್ಯಾದಿವಾಕ್ಯೋಕ್ತಂ ಇದಂ ಸಮಸ್ತಂ ತಥಾ ಪುರಾಣೇಷು ಚ ಪಂಚರಾತ್ರೇ । ಅತ್ರ, ಉದಿತಾಃ ಯಾಃ ಚ ಕಥಾಃ ಸಮಸ್ತಾಃ ವೇದೇತಿಹಾಸಾದಿವಿನಿರ್ಣಯೋಕ್ತಾಃ ॥ ೧೭೨ ॥**

**ಅರ್ಥ** :- **ಇತ್ಯಾದಿ** = ಇವೇ ಮೊದಲಾದ **ವಾಕ್ಯೋಕ್ತಂ** = ವಾಕ್ಯ ಗಳಿಂದ ಹೇಳಲ್ಪಟ್ಟ **ಇದಂ** = ಈ **ಸಮಸ್ತಂ** = ಎಲ್ಲವು (ಪ್ರಮೇಯವು) **ತಥಾ** = ಹಾಗೆ ಶ್ರುತಿಯು ಹೇಳಿದಂತೆ **ಪುರಾಣೇಷು** = ಪುರಾಣಗಳಲ್ಲಿ **ಚ** = ಮತ್ತು **ಪಂಚರಾತ್ರೇ** = ಪಂಚರಾತ್ರದಲ್ಲಿ **ಉಕ್ತಂ** = ಹೇಳಲ್ಪಟ್ಟಿದೆ. **ಅತ್ರ** = ಈ ಗ್ರಂಥದಲ್ಲಿ **ಯಾಃ** = ಯಾವ **ಕಥಾಃ** = ಕಥೆಗಳು

**ಉದಿತಾಃ** = ಹೇಳಲ್ಪಟ್ಟಿವೆಯೋ **ತಾಃ** = ಆ **ಸಮಸ್ತಾಃ** = ಎಲ್ಲವೂ **ವೇದೇತಿಹಾಸಾದಿವಿನಿರ್ಣಯೋಕ್ತಾಃ** = ವೇದ-ಇತಿಹಾಸಾದಿಗಳನ್ನು ಚೆನ್ನಾಗಿ ನಿರ್ಣಯಿಸಿ ಹೇಳಲ್ಪಟ್ಟವು.

**ತಾತ್ಪರ್ಯ** :- ಇವೇ ಮೊದಲಾದ ವಚನಗಳಿಂದ ಇದೆಲ್ಲವೂ ನಿರೂಪಿತವಾಗಿದೆ. ಪುರಾಣಗಳಲ್ಲೂ, ಪಂಚರಾತ್ರಗಳಲ್ಲೂ ಬಂದಿದೆ. ಇಲ್ಲಿ ಹೇಳಲ್ಪಟ್ಟಿರುವ ಸಕಲ ಕಥೆಗಳು ವೇದ, ಇತಿಹಾಸ ಮೊದಲಾದವುಗಳ ಅರ್ಥ ನಿರ್ಣಯವನ್ನು ಒಳಗೊಂಡಿವೆ.

ಫಲಶ್ರುತಿ

**ತಸ್ಮಾದಯಂ ಗ್ರಂಥವರೋಽಖಿಲೋರು-**
**ಧರ್ಮಾದಿಮೋಕ್ಷಾಂತಪುಮರ್ಥಹೇತುಃ ।**
**ಕಿಂವೋದಿತೈರಸ್ಯ ಗುಣೈಸ್ತತೋಽನ್ಯೈ-**
**ರ್ನಾರಾಯಣಃ ಪ್ರೀತಿಮುಪೈತ್ಯತೋಽಲಮ್ ॥ ೧೭೩ ॥**

**ತಸ್ಮಾತ್ ಅಯಂ ಗ್ರಂಥವರಃ ಅಖಿಲೋರುಧರ್ಮಾದಿಮೋಕ್ಷಾಂತಪುಮರ್ಥಹೇತುಃ, ಕಿಂ ವಾ ಉದಿತೈಃ ಅಸ್ಯ ಗುಣೈಃ ತತಃ ಅನ್ಯೈಃ ನಾರಾಯಣಃ ಪ್ರೀತಿಂ ಉಪೈತಿ ಅತಃ ಅಲಮ್ ॥ ೧೭೩ ॥**

**ಅರ್ಥ** :- **ತಸ್ಮಾತ್** = ಆದ್ದರಿಂದ **ಅಯಂ** = ಈ **ಗ್ರಂಥವರಃ** = ಶ್ರೇಷ್ಠಕೃತಿಯು; **ಅಖಿಲೋರುಧರ್ಮಾದಿಮೋಕ್ಷಾಂತಪುಮರ್ಥಹೇತುಃ** = ಸಮಗ್ರವಾದ ಧರ್ಮದಿಂದ ಮೊದಲಾದ ಮೋಕ್ಷದ ವರೆಗಿನ ಪುರುಷಾರ್ಥ ಗಳಿಗೂ ಸಾಧನವಾಗಿದೆ; **ತತಃ** = ಆದ್ದರಿಂದ; **ಅಸ್ಯ** = ಇದರ; **ಉದಿತೈಃ** = ಉಂಟಾಗುವ; **ಅನ್ಯೈಃ** = ಇತರ; **ಗುಣೈಃ** = ಗುಣಗಳನ್ನು; **ಕಿಂ ವಾ** = ಏನೆಂದು ಹೇಳುವುದು; **ಅತಃ** = ಇದರಿಂದ; **ನಾರಾಯಣಃ** = ನಾರಾಯಣನು; **ಪ್ರೀತಿಂ** = ಪ್ರೀತಿಯನ್ನು; **ಅಲಮ್ ಉಪೈತಿ** = ಸಂಪೂರ್ಣ ವಾಗಿ ಹೊಂದುವನು.

**ತಾತ್ಪರ್ಯ** :- ಆದ್ದರಿಂದ ಇದು ಗ್ರಂಥರಾಜ ; ಸಕಲಶ್ರೇಷ್ಠವಾದ ಧರ್ಮ ಮೊದಲಾದ ಮೋಕ್ಷದವರೆಗಿನ ಸಕಲ ಪುರುಷಾರ್ಥಗಳಿಗೂ ಸಾಧನ.

ಇದರ ಬೇರೆ ಮಹಿಮೆಗಳನ್ನು ಹೇಳಿ ಏನು! ಇದರಿಂದ ನಾರಾಯಣನು ಬಹಳವಾಗಿ ಪ್ರೀತನಾಗುವನು ಎಂದರಾಯಿತು.

ವಾಯುದೇವರ ಅವತಾರತ್ರಯ

**ಯಸ್ಯ ತ್ರೀಣ್ಯುದಿತಾನಿ ವೇದವಚನೇ ರೂಪಾಣಿ ದಿವ್ಯಾನ್ಯಲಂ**
**ಬಟ್ ತದ್ದರ್ಶತಮಿತ್ಥಮೇವ ನಿಹಿತಂ ದೇವಸ್ಯ ಭರ್ಗೋ ಮಹತ್ ।**
**ವಾಯೋ ರಾಮವಚೋನಯಂ ಪ್ರಥಮಕಂ ಪೃಕ್ಷೋ ದ್ವಿತೀಯಂ ವಪು-**
**ರ್ಮಧ್ವೋ ಯತ್ ತು ತೃತೀಯಮೇತದಮುನಾ ಗ್ರಂಥಃ ಕೃತಃ ಕೇಶವೇ ॥೧೭೪॥**

**ಯಸ್ಯ ತ್ರೀಣಿ ಉದಿತಾನಿ ವೇದವಚನೇ ರೂಪಾಣಿ ದಿವ್ಯಾನಿ ಅಲಂ ಬಟ್ ತದ್ದರ್ಶತಂ ಇತ್ಥಂ ಏವ ನಿಹಿತಂ ದೇವಸ್ಯ ಭರ್ಗಃ ಮಹತ್ । ವಾಯೋಃ ರಾಮವಚೋನಯಂ ಪ್ರಥಮಕಂ ಪೃಕ್ಷಃ ದ್ವಿತೀಯಂ ವಪುಃ ಮಧ್ವಃ ಯತ್ ತು ತೃತೀಯಂ ಏತತ್ ಅಮುನಾ ಗ್ರಂಥಃ ಕೃತಃ ಕೇಶವೇ ॥ ೧೭೪ ॥**

**ಅರ್ಥ :- ಯಸ್ಯ** = ಯಾರ; **ತ್ರೀಣಿ** = ಮೂರು; **ದಿವ್ಯಾನಿ** = ದಿವ್ಯವಾದ; **ರೂಪಾಣಿ** = ರೂಪಗಳು; **ವೇದವಚನೇ** = ವೇದದ ವಾಕ್ಯಗಳಲ್ಲಿ; **ಉದಿತಾನಿ** = ಉಕ್ತವಾಗಿವೆಯೋ; **ತತ್** = ಆ; **ವಾಯೋಃ ದೇವಸ್ಯ** = ವಾಯುದೇವರ ಮೂಲರೂಪವು; **ಅಲಂ** = ಸಂಪೂರ್ಣವಾಗಿ; **ಬಟ್** = ಬಲದಿಂದ ಬಲಾತ್ಮಕವಾದುದು; **ದರ್ಶತಂ** = ಜ್ಞಾನಾತ್ಮಕವಾದುದು; **ಮಹತ್** = ಮಹತ್ತರವಾದುದು; **ಭರ್ಗಃ** = ಲೋಕದ ಭರಣ, ಗಮನಗಳನ್ನು ಮಾಡುವಂತಹುದು; **ಇತ್ಥಂ ಏವ** = ಮೂಲರೂಪದಂತೆಯೇ; **ನಿಹಿತಂ** = ಅವತರಿಸಿಬಂದಂತಹುದು; **ಪ್ರಥಮಕಂ** = ಮೊದಲನೆಯ; **ವಪುಃ** = ರೂಪವು; **ರಾಮವಚೋನಯಂ** = ರಾಮದೇವರ ಮಾತನ್ನು ಸೀತಾಕೃತಿಗೆ ತಲುಪಿಸಿತು; **ದ್ವಿತೀಯಂ** = ಎರಡನೆಯದು; **ಪೃಕ್ಷಃ** = ಅಪಾರ ಸೇನೆಯನ್ನು ನಾಸಪಡಿಸಿತು; **ಮಧ್ವಃ** = ಮಧ್ವಚಾರ್ಯರು ಎಂಬ; **ಯತ್ ಏತತ್ ತು** = ಇದಾದರೋ; **ತೃತೀಯಂ** = ಮೂರನೆಯದು; **ಅಮುನಾ** = ಇದರಿಂದ; **ಕೇಶವೇ** = ಕೇಶವನಾದ ಶ್ರೀಹರಿಯ ಪ್ರೀತಿಗಾಗಿ; **ಗ್ರಂಥಃ** = ಗ್ರಂಥವು; **ಕೃತಃ** = ರಚಿತವಾಯಿತು;

ಕೃಷ್ಣಾರ್ಪಣ

**ಯಃ ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।**
**ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥ ೧೭೫ ॥**

**ಯಃ ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ । ಪ್ರೀಯತಾಂ ಪ್ರೀತಃ ಏವ ಅಲಂ ವಿಷ್ಣುಃ ಮೇ ಪರಮಃ ಸುಹೃತ್ ॥ ೧೭೫ ॥**

**ಅರ್ಥ** :- **ಯಃ** = ಯಾವನು; **ಸರ್ವಗುಣಸಂಪೂರ್ಣಃ** = ಸರ್ವ ಗುಣಗಳಿಂದ ಪರಿಪೂರ್ಣನಾಗಿರುವನೋ; **ಸರ್ವದೋಷವಿವರ್ಜಿತಃ** = ಸಕಲ ದೋಷಗಳಿಂದ ರಹಿತನಾಗಿರುವನೋ ಅಂತಹ; **ಪರಮಃ** = ಸರ್ವೋತ್ತಮ ನಾದ; **ಮೇ** = ನನಗೆ; **ಸುಹೃತ್** = ಅನಿಮಿತ್ತೋಪಕಾರಿಯಾಗಿರುವ; **ಅಲಂ** = ಸಂಪೂರ್ಣವಾಗಿ; **ಪ್ರೀತಃ ಏವ** = ಪ್ರೀತಿನೇ ಆಗಿರುವ; **ವಿಷ್ಣುಃ** = ವಿಷ್ಣುವು; **ಪ್ರೀಯತಾಂ** = ಪ್ರೀತನಾಗಲಿ.

**ತಾತ್ಪರ್ಯ** :- ಸಕಲ ಗುಣಗಳಿಂದ ಪರಿಪೂರ್ಣನೂ, ಸಕಲ ದೋಷ ಗಳಿಂದ ರಹಿತನೂ ಆದ ಮಹಾವಿಷ್ಣು ನನಗೆ ಪರಮ ಸ್ನೇಹಿತ. ನನಗೆ ಸದಾ ಪ್ರಸನ್ನನಾಗಿರುವ ಅವನು ಇನ್ನೂ ಹೆಚ್ಚಾಗಿ ಪ್ರಸನ್ನನಾಗಲಿ.

॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತ

**ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ ॥**

॥ ಶ್ರೀಕೃಷ್ಣಾರ್ಪಣಮಸ್ತು ॥

ಸಮರ್ಪಿತಂ ಮಯಾ ಭವೇತ್ ಸುಮಧ್ವನುತ್ತವಾಣಿನಾ ।
ರಮಾರಮೇಶಪಾದಯೋಃ ಪ್ರಭಂಜನಾಭಿಧಾಯುಜಾ ॥

